# ಶಿವಾನುಭವ.



ಸಂಪುಟ. ೧೦. ]     ಜೂನ.     [ ಸಂಚಿಕೆ. ೧.

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ)ನೇ ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೧೦] ಜೂನ ೧೯೩೫ [ಸಂಚಿಕೆ ೧

## ಮಹಾದೇವಿಯಕ್ಕ.

(ಪ್ರೊ|| ಕೆ. ಜಿ. ಕುಂದಣಗಾರ ಎಮ್. ಎ. ಕನ್ನಡ ಪ್ರೊಫೇಸರ
ರಾಜಾರಾಮ ಕಾಲೇಜ ಕೊಲ್ಹಾಪುರ.)

ಮಹಾದೇವಿಯಕ್ಕನ ಚರಿತ್ರವು ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅಡಕವಾಗಿದೆ. ಅದನ್ನೇ ಅನುಸರಿಸಿ ರಾವಸಾಹೇಬ ಹಳಕಟ್ಟಿಯವರು ತಮ್ಮ ಮಹಾದೇವಿಯಕ್ಕನ ವಚನಗಳೆಂಬ ಚಿಕ್ಕ ಪುಸ್ತಕದ ಪ್ರಸ್ತಾವನೆಯಲ್ಲಿ ಅಕ್ಕನವರ ಚರಿತ್ರವನ್ನು ಬರೆದಿದ್ದಾರೆ. ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರವರೂ ಇದೇ ಆಧಾರದ ಮೇಲಿಂದ ಅವರ ಚರಿತ್ರವನ್ನು ಬರೆದಿರುವಂತೆ ತೋರುತ್ತದೆ. ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣವು ಪ್ರಕಟವಾಗಿಲ್ಲ. ಹರಿಹರಾಚಾರ್ಯನ ಮಹಾದೇವಿಯಕ್ಕನ ರಗಳೆಯು ಪ್ರಕಟವಾಗಿಲ್ಲ. ಆದುದರಿಂದ ಅಕ್ಕನವರ ಚರಿತ್ರವು ಅಪೂರ್ಣವಾಗಿ ಈ ವರೆಗೆ ಉಳಿಯಬೇಕಾಯಿತು. ಇದು ಬಾಹ್ಯ ಪ್ರಮಾಣಗಳ ಮೇಲಿಂದ ಆಗಬೇಕಾದ ಸಂಶೋಧನೆ. ಅಂತರ ಪ್ರಮಾಣಗಳು ಎರಡು ಮಾತ್ರ ದೊರೆಯುತ್ತವೆ. "ಅರಿಸಿನವನೆ ಮಿಂದು" ಎಂದು ಅವರು ಹೇಳಿರುವಾಗ ಅವರು ಮೈಸೂರು ಪ್ರಾಂತದವರಾಗಿರಬೇಕೆಂದು ತೋರುತ್ತದೆ. ಯಾಕಂದರೆ ಮೈಸೂರು ಪ್ರಾಂತದಲ್ಲಿ ಅರಿಸಿನ ಮೀಯುವ ಪದ್ಧತಿ (ಅರಸಿನ ಲೇಪನ ಪದ್ಧತಿ) ಯಿದೆ. ಮತ್ತೊಂದು ಆಧಾರವೆಂದರೆ ಅವರು ಉದಹರಿಸಿದ ಆಗಮವಾಕ್ಯಗಳು, ಮತ್ತು ಕನ್ನಡ ವಾಙ್ಮಯದಲ್ಲಿನ ಪದ್ಯಗಳಿಗೆ ಸರಿಹೋಗುವ ವಿಚಾರಗಳು. ಇವುಗಳ ಮೇಲಿಂದ ಅವರು ವಿದ್ಯಾಭ್ಯಾಸ ಮಾಡಿದವರಾಗಿ ಪಂಡಿತೆಯರಾಗಿದ್ದರೆಂದು ಹೇಳಬೇಕಾಗುತ್ತದೆ. ಇಷ್ಟರ ಮೇಲಿಂದ ಅವರ ಚರಿತ್ರೆಯನ್ನು

ಹೆಚ್ಚು ತಿಳಿದುಕೊಳ್ಳಬೇಕೆಂಬ ಲವಲವಿಕೆಯುಳ್ಳ ಜನರ ಸಮಾಧಾನವಾಗುವದಿಲ್ಲ. ಆದುದರಿಂದ ಉಡುತಡಿಯಲ್ಲಿ ಆಳುತ್ತಿರುವ ಅರಸು ಕೌಸಿಕನು ಯಾರು? ಯಾವ ವಂಶಕ್ಕೆ ಸೇರಿದವನು? ಎಂದು ಆಳಿದನು? ಅಕ್ಕನವರು ಹುಟ್ಟಿದುದು ಎಂದು? ಅವರ ವಿದ್ಯಾಭ್ಯಾಸವೆಲ್ಲಿಯಾಯಿತು? ಕಲ್ಯಾಣಕ್ಕೆ ಎಂದು ಬಂದರು? ಬಸವಣ್ಣನವರ ಗುರುತು ಹೇಗಾಯಿತು? ಶಿವಶರಣರು ಅಕ್ಕನವರನ್ನು ಹೇಗೆ ಪರೀಕ್ಷಿಸಿದರು? ಇವೇ ಮುಂತಾದ ಸಂಗತಿಗಳು ತಿಳಿಯಬೇಕಾಗಿವೆ. ಈ ವಿಷಯದಲ್ಲಿ ಸಂಶೋಧನವು ಸಂಪೂರ್ಣವಾಗಿ ನಡೆಯಬೇಕು. ಕನ್ನಡ ಸಾಹಿತ್ಯದಲ್ಲಿ ಅಕ್ಕನವರಂತಹ ಉಜ್ವಲ ಸಾಹಿತಿಗಳನ್ನು ಕಡೆಗಾಣಿಸಿ ಮುಂದೆ ಹೋಗುವಂತಿಲ್ಲ. ನಮ್ಮ ಕಾರ್ಯವನ್ನು ಅಕ್ಕನವರ ಭಾಷೆಯಿಂದಲೇ ಹೇಳಬೇಕಾಗಿದೆ.

"ಅವ್ವಾ ಸಂಶೋಧನಗಳು ಸಾಗಿದರೆ ಸಾಗುಗೆ, ಸಾಗದಿರ್ದೊಡೆ ಮಾಣುಗೆ. ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನವ್ವಾ. ಅವ್ವಾ ನೀ ಬುದ್ಧಿಯನ್ನು ಕೊಟ್ಟರೆ ಕೊಡು, ಕೊಡದಿದ್ದರೆ ಮಾಣು. ನಾ ನಿನ್ನ ವಚನಗಳನ್ನೋದಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನವ್ವಾ. ಅವ್ವಾ ನಾ ನಿನ್ನ ನುತಿಸಿ ಹರುಷದೊಳೋಲಾಡುವೆನವ್ವಾ."

ಇನ್ನು ಮೇಲೆ ಅಕ್ಕನವರ ವಚನಗಳ ಕಡೆಗೆ ತೆರಳುವ.

ಸಾಹಿತ್ಯದ ಏಳ್ಗೆಗೆ ಜನಜೀವನವು ಆಧಾರವಾಗಿದ್ದಂತೆ ರಾಷ್ಟ್ರದ ಏಳ್ಗೆಗೆ ಸಾಹಿತ್ಯವೂ ಆಧಾರವಾಗಿರುತ್ತದೆಂಬ ಸಂಗತಿಯನ್ನು ಮರೆಯಲಾಗದು. ಇದು ಸರ್ವಸಾಮಾನ್ಯವಾದ ತತ್ವವು. ಎಲ್ಲ ರಾಷ್ಟ್ರಗಳಿಗೆ ಸರಿಯಾಗಿ ಅನ್ವಯಿಸುವುದು. ಮಾತ್ರ ಏಳ್ಗೆಯ ವಿಚಾರವು ಎಲ್ಲ ರಾಷ್ಟ್ರಗಳಲ್ಲಿ ಒಂದೇ ಎಂದು ಹೇಳಲಾಗುವುದಿಲ್ಲ. ಕೆಲವು ರಾಷ್ಟ್ರಗಳಲ್ಲಿ ಭೌತಿಕಜ್ಞಾನಕ್ಕೆ ಹೆಚ್ಚು ಮಹತ್ವವು ದೊರೆತು ಜನರೆಲ್ಲರು ಸಂಸಾರ ಸುಖಕ್ಕೆ ಮೆಚ್ಚಿ ಭವಿಗಳಾಗಿರಬಹುದು. ಮತ್ತೊಂದು ರಾಷ್ಟ್ರದಲ್ಲಿ ಒಂದು ಬದಿಯಲ್ಲಿ ಭೌತಿಕಜ್ಞಾನಕ್ಕೆ ಕೆಲಮಟ್ಟಿಗೆ ಗಮನಕೊಟ್ಟು ಪಾರಮಾರ್ಥಿಕ ಸುಖ ಅಥವಾ ಮೋಕ್ಷಸುಖಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿರಬಹುದು. ಹಿಂದುಸ್ತಾನವು ಇವುಗಳಲ್ಲಿ ಎರಡನೆಯ ಮಾರ್ಗವನ್ನು ಅನ್ವಯಿಸುತ್ತದೆ. ಹಿಂದುಸ್ತಾನದೊಳಗಿನ ಯಾವುದೇ ಭಾಷೆಯ ಸಾಹಿತ್ಯವನ್ನು ತೆಗೆದುಕೊಂಡರೆ ಅದರ ತಳಹದಿಯು ಧರ್ಮವೆಂದು ಕಂಡುಬರುತ್ತದೆ. ಅದರ

ಲ್ಲಿಯೂ ಕರ್ನಾಟಕದಲ್ಲಿ ಧರ್ಮಸ್ಥಾಪಕರೂ ಧರ್ಮಸುಧಾರಕರೂ ಬಹಳ ಜನರಾಗಿ ಹೋಗಿರುವುದರಿಂದ ಕನ್ನಡ ಸಾಹಿತ್ಯವು ಬೇರೆ ಬೇರೆ ಧರ್ಮಗಳನ್ನು ಸುತ್ತಿಕೊಂಡಿದೆ. ಈ ಕಾರಣದಿಂದಲೇ ಕನ್ನಡ ಸಾಹಿತ್ಯದಲ್ಲಿ ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗ ಮುಂತಾಗಿ ಆ ಸಾಹಿತ್ಯವನ್ನು ವಿಂಗಡಿಸುವುದುಂಟು.

ಗೌತಮಬುದ್ಧಪ್ರಣೀತವಾದ ಧರ್ಮದಲ್ಲಿ ಕಟ್ಟು ಶಿಥಿಲವಾಗಿದ್ದುದರಿಂದ ಹಿಂದುಸ್ತಾನದಲ್ಲಿ ಅದರ ಅಸ್ತಿತ್ವವೇ ಉಳಿಯಲಿಲ್ಲ. ಜೈನಧರ್ಮದಲ್ಲಿ ವರ್ಣಾಶ್ರಮಗಳುಂಟಾದುದರಿಂದ ಭಿನ್ನ ಭಿನ್ನ ವಿಚಾರಗಳುಂಟಾದುದರಿಂದ ಅದರಲ್ಲಿನ ಕಟ್ಟು ಸಡಿಲಿತು. ಶಂಕರಾಚಾರ್ಯರ ಅದ್ವೈತ ಮತದಲ್ಲಿ ಭಕ್ತಿಗೆ ಸಾಕಷ್ಟು ಸ್ಥಲ ದೊರೆಯದಿದ್ದುದರಿಂದ ಮತ್ತು ವರ್ಣಾಶ್ರಮ ಧರ್ಮಗಳಿಗೆ ಪ್ರಾಧಾನ್ಯವಿದ್ದುದರಿಂದ ಜನರಲ್ಲಿ ಒಡಕು ಹುಟ್ಟಹತ್ತಿತು. ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತದಲ್ಲಿ ದೇವವೈಶಿಷ್ಟ್ಯವು ಕಂಡುಬಂದುದರಿಂದ ಜನರಿಗೆ ಅದು ರುಚಿಸಲಿಲ್ಲ. ಆದರೆ ಬಸವಣ್ಣನವರು ಜೀರ್ಣೋದ್ಧಾರಗೊಳಿಸಿದ ವೀರಶೈವ ಮತದಲ್ಲಿ ಆ ಕಟ್ಟು ಎರಡು ರೀತಿಯಿಂದ ಬಿಗಿಯಾಗುವಂತಿತ್ತು. ಒಂದು ರೀತಿಯಲ್ಲಿ ಭಕ್ತಿಯು ಮುಖ್ಯವಾಗಿತ್ತು. ಮತ್ತೊಂದು ರೀತಿಯಲ್ಲಿ ಒಂದೇ ಒಂದು ಜಾತಿಯೆಂಬ ತತ್ವವು ಜನೈಕ್ಯಕ್ಕೆ ಸಹಾಯವಾಗುತ್ತಿತ್ತು. ವೀರಶೈವ ಷಟ್‌ಸ್ಥಲಶಾಸ್ತ್ರದ ಮೊದಲಿನ ಮೂರು ಸ್ಥಲಗಳಲ್ಲಿ ಸೇವ್ಯಸೇವಕ ಭೇದ ಅಥವಾ ದ್ವೈತಭಾವವಿರುವುದರಿಂದ ಭಕ್ತಿಗೆ ಸ್ವಾಭಾವಿಕವಾಗಿ ಸ್ಥಾನವು ದೊರೆಯಿತು ಕಡೆಯ ಮೂರು ಸ್ಥಲಗಳಲ್ಲಿ ಸಾಮರಸ್ಯವು ಮುಖ್ಯವಾಗಿದ್ದುದರಿಂದ ಅದ್ವೈತಮತಕ್ಕೆ ಪ್ರಾಧಾನ್ಯವಿದ್ದಿತು. ಸಾಂಖ್ಯ ಮತ್ತು ಯೋಗಮಾರ್ಗಗಳು ಇದರಲ್ಲಿ ತಾವಾಗಿಯೇ ಬಂದುಹೋಗುತ್ತವೆ. ಇದು ವೀರಶೈವ ಧರ್ಮದ ಆಧ್ಯಾತ್ಮಿಕ ಭಾಗವು. ವ್ಯವಹಾರಿಕ ಅಥವಾ ಭೌತಿಕ ಭಾಗದಲ್ಲಿ ಬಸವಣ್ಣನವರು ಆ ಧರ್ಮವನ್ನು ಜೀರ್ಣೋದ್ಧಾರಗೊಳಿಸುವಾಗ ವರ್ಣಾಶ್ರಮಗಳನ್ನು ಅಥವಾ ಹದಿನೆಂಟು ಜಾತಿಗಳನ್ನಿಟ್ಟುಕೊಳ್ಳದೆ ಒಂದೇ ಒಂದು ಜಾತಿಯನ್ನು ಇಟ್ಟುಕೊಂಡುದಕ್ಕೆ ಮತ್ತೊಂದು ಕಾರಣವಿದೆಯೆಂದು ಕಂಡುಬಂದಿದೆ. ಒಂದೇ ಒಂದು ಜಾತಿಯಿರುವುದರಿಂದ ರಾಷ್ಟ್ರದ ಏಳ್ಗೆಗೆ ಸಹಾಯವಾಗುತ್ತದೆಯೆಂದು ಅವರ ಕಲ್ಪನೆ. ಅವರ ಗುರಿಯು ಮಾತ್ರ ಸಾಧ್ಯವಾಗಲಿಲ್ಲ. ಇರಲಿ. ಬಸವ

ಣ್ಣನವರ ವೀರಶೈವ ಧರ್ಮವು ಉಪನಿಷತ್ತುಗಳನ್ನು ಸರಿಗಟ್ಟುವ ವಚನಗ್ರಂಥಗಳನ್ನು ಕನ್ನಡಿಗರಿಗೆ ಒದಗಿಸಿಕೊಟ್ಟಿತೆಂಬ ಮಾತು ನಿರ್ವಿವಾದವಾಗಿದೆ. ಈ ವಚನವಾಙ್ಮಯದಲ್ಲಿ ಮಹಾದೇವಿಯಕ್ಕನವರ ವಚನಗಳು ಅತ್ಯುಚ್ಚಪದವಿಯನ್ನು ಪಡೆದುಕೊಂಡಿವೆ. ಅದನ್ನೇ ಈಗ ಪರಿಶೀಲಿಸಬೇಕಾಗಿದೆ.

ಅಕ್ಕನವರ ವಚನಗಳು ಗದ್ಯರೂಪವಾಗಿದ್ದರೂ ಪದ್ಯಗಳಿಗಿಂತ ಮೇಲಾಗಿವೆ. ಪದ್ಯಗಳಲ್ಲಿ ಅಡಕವಾಗಿರಬಹುದಾದ ಭಾವೋದ್ದೀಪನವೂ ಆವೇಶವೂ ಸ್ವಯಂಸ್ಫೂರ್ತಿಯಿಂದ ಇವುಗಳಲ್ಲಿ ಬಂದುಬಿಟ್ಟಿವೆ. ಊಹೆಗೆ ಅವಕಾಶವಿಲ್ಲದೆ ಅಂತಃಕರಣದಲ್ಲಿ ಒಡಮೂಡಿ ಒತ್ತಿಬರುವ ಬಿಡಿನುಡಿಗಳು ತಡೆಯಿಲ್ಲದ ವಾತಾವರಣದಲ್ಲಿ ಪಕ್ಷಿಗಳು ಆಕಾಶದವರೆಗೆ ಹಾರುತ್ತಿರುವಂತೆ ವೇಗವಾಗಿ ಸಾಗುತ್ತ ಹೋಗಿ ವಚನರೂಪಗಳನ್ನು ಧರಿಸುತ್ತವೆ. ಅಕ್ಕನವರ ವಚನಗಳಲ್ಲಿ ಮತ್ತು ಸುಕವಿಗಳ ಪದ್ಯಗಳಲ್ಲಿ ಅಂತರವಿಷ್ಟೇ. ವಿಷಯವು ಎಂತಹದಿದ್ದರೂ ಕವಿಯು ಅದರಲ್ಲಿ ತಲ್ಲೀನನಾಗುತ್ತಾನೆ. ಅಕ್ಕನವರ ವಿಷಯವು ಸಾಮರಸ್ಯವು. ಅದನ್ನು ಪಡೆಯಬೇಕೆಂಬ, ಪಡೆದು ಆನಂದಿಸಬೇಕೆಂಬ ಉತ್ಕಟವಾದ ಬಯಕೆ; ಮತ್ತು ಸಾಮರಸ್ಯದಿಂದ ಪಡೆದಿರುವ ಸಚ್ಚಿದಾನಂದ ಆ ಬಯಕೆಯನ್ನು ಹೊರಪಡಿಸಲು, ಮತ್ತು ಆ ಆನಂದವನ್ನು ನಿವೇದಿಸಲು ಉತ್ಸುಕವಾದ ಮನವು ಶಬ್ದಸಾಮಗ್ರಿಗಳನ್ನು ಹುಡುಕಬೇಕಾಗಿಲ್ಲ.

"ನಚ್ಚುಗೆ ಮನ ನಿಮ್ಮಲ್ಲಿ. ಮೆಚ್ಚುಗೆ ಮನ ನಿಮ್ಮಲ್ಲಿ. ಸಲುಗುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ. ಬಳಲುಗೆ ಮನ ನಿಮ್ಮಲ್ಲಿ. ಕರಗುಗೆ ಮನ ನಿಮ್ಮಲ್ಲಿ. ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಗಳು ಕಬ್ಬಿನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ."

"ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರುತ್ತಿರ್ಪೆನಯ್ಯ. ಹಸೆ ಹಂದರವನಿಕ್ಕಿ. ನಿಮ್ಮಡಿಗಳಿಗೆಡೆಮಾಡಿಕೊಂಡಿಪ್ಪೆನ್ನಯಾ! ಚೆನ್ನಮಲ್ಲಿಕಾರ್ಜುನಾ. ನೀನಾವಾಗಬರ್ಪೆಯೆಂದು."

"ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈ

ವುದೇ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ? ಎನ್ನ ದೇವ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವುದೇ ಎನ್ನ ಮನ ಕೇಳಿರೆ ಕೆಳದಿಯರಿರಾ?

ಮಹಾದೇವಿಯಕ್ಕನವರು ಯೋಗಿಣಿಯರಾದರೂ ಮೋಕ್ಷಸಂಸಾರಿಗಳಾದ ಕವಯಿತ್ರಿ. ಶರಣಸತಿ ಲಿಂಗಪತಿಯೆಂದು ಹೇಳುವಾಗ ಪ್ರಪಂಚದ ಉಪಮೆಯನ್ನಿಟ್ಟುಕೊಂಡು ಉದ್ದಾಮಕವಿಗೆ ವರ್ಣಿಸಲಸಾಧ್ಯವಾದ ಪರಮಾನಂದವನ್ನು ಕಾವ್ಯರೂಪದಿಂದ ಅವರು ವರ್ಣಿಸಿದ್ದಾರೆ. ಸತಿಪತಿ ಭಾವವು ವಚನಶಾಸ್ತ್ರದಲ್ಲಿ ಶಿವಶರಣರಿಗೆ ಅಸಹ್ಯವಲ್ಲ. ಎಲ್ಲ ವಚನಕಾರರು ಈ ಭಾವವನ್ನು ವರ್ಣಿಸಿದ್ದಾರೆ. ಶರಣನು ಗಂಡುರೂಪಿಯಾಗಿದ್ದರೂ ಲಿಂಗದೃಷ್ಟಿಯಿಂದ ಸತಿಯಾಗಲು ಆತುರನು.

"ಎಲೆ ಗಂಡುಸೇ, ನೀ ಕೇಳಾ. ನಿನಿಗೊಬ್ಬಗೆಂದುಟ್ಟೆ ಗಂಡುಡಿಗೆಯನು. ಮತ್ತೊಮ್ಮೆ ಆನು ಗಂಡಪ್ಪೆನಯ್ಯ. ಮತ್ತೊಮ್ಮೆ ಆನು ಹೆಣ್ಣಪ್ಪೆನಯ್ಯ. ಕೂಡಲಸಂಗಮದೇವ, ನಿನಗೆ ವೀರನಪ್ಪೆ ನಿಮ್ಮ ಶರಣರಿಗೆ ವಧುವಪ್ಪೆ."

ಎಂದು ಬಸವಣ್ಣನವರು ತಮ್ಮ ವಚನಗಳಲ್ಲಿ (ವಚನ ೧೩. ಪುಟ ೧೦೭) ಹೇಳಿದ್ದಾರೆ.

ಸತಿಯ ಅಧಿಕಾರವು ತಮಗೆ ಪ್ರಾಪ್ತವಾಗಬೇಕಾದರೆ ಗುರುವು ತಮಗೆ ದೀಕ್ಷೆ ಕೊಟ್ಟುದರಿಂದ ಜನ್ಮನೆತ್ತಿ, ಶಿವಶರಣರು ಹಾಲು ಬೆಣ್ಣೆಯಿಕ್ಕಿದುದರಿಂದ ಸಂರಕ್ಷಿತರಾಗಿ, ಬೆಳೆದು ವಯಸ್ಕರಾದ ಮೇಲೆ ಮಲ್ಲಿಕಾರ್ಜುನನಿಗೆ ತಮ್ಮನ್ನು ಕೊಟ್ಟು ಮದುವೆ ಮಾಡಿದರು; ಮತ್ತು ತಾವು ಪಾತಿವ್ರತ್ಯದಿಂದ ಬಾಳ್ವೆ ಮಾಡುವೆವೆಂದು ಪ್ರಾಕೃತ ವಧುವು ತನ್ನ ತಂದೆ ತಾಯಿ ಆಪ್ತೇಷ್ಟರುಗಳು ಆನಂದಪಡುವಂತೆ ತನ್ನ ಗಂಡನ ಮನೆಗೆ ಹೋಗುವಾಗ ಹೇಳುವ ಹಾಗೆ ಅಕ್ಕನವರು ಹೇಳುವುದು ಬಹಳ ಸ್ವಾಭಾವಿಕವಾಗಿದೆ. ಕಾವ್ಯವು ಜೀವನವಿಮರ್ಶೆಯೆಂದು ವಿಮರ್ಶಕಾರರು ಹೇಳುವುದು ಈ ಕಾರಣದಿಂದಲೇ ಅಲ್ಲವೇ?

"ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಪ್ಪ ತ್ರಿವಿಧಾಮೃತವ

ದಣಿಯಲಿರಿದು ಸಲಹಿದರೆನ್ನ ವಿವಾಹಮಾಡಿದಿರಿ. ಸ್ವಯವಪ್ಪಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ. ಆ ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು. ಅವಧರಿಸಿ ನಿಮ್ಮಡಿಗಳಿಗೆಲ್ಲರು. ಮರಳಿ ಬಿಜಯಂಗೈವುದು ಶರಣಾರ್ಥಿ."

ಮದುವೆಯೆಂದರೆ ಹೆಣ್ಣುಮಕ್ಕಳಿಗೆ ಅಚ್ಚುಮೆಚ್ಚು. ತಾಯಂದಿರಿಗೆ ತಮ್ಮ ಮಕ್ಕಳ ಮದುವೆಯನ್ನು ಕಣ್ಣುತುಂಬಾ ನೋಡಬೇಕೆಂಬ ಉತ್ಕಟವಾದ ಬಯಕೆ. ಯುವತಿಯರಿಗೆ ಮದುಮಕ್ಕಳನ್ನು ಆಡಿಸಿ ನೋಡುವ ಪ್ರೀತಿ. ಅಕ್ಕನ ಮದುವೆಯಲ್ಲಿ ಭಾವನನ್ನು ವಿನೋದದಿಂದ ಪೀಡಿಸುವ ಪ್ರೀತಿ ತಂಗಿಗೆ. ಈ ಪ್ರೀತಿಯು ಮಹಾದೇವಿಯಕ್ಕನ ಶರಣಾವಸ್ಥೆಯಲ್ಲಿ ಸಹ ಹಾಗೇ ಉಳಿದಿದೆ. ಅಕ್ಕನವರು ಲಿಂಗದ ಸತಿಯಾಗುವ ಪೂರ್ವದಲ್ಲಿ ಮತ್ತು ತಮ್ಮ ಲಗ್ನವಾಗುವಾಗ ಆ ಮದುವೆಯ ವರ್ಣನೆಯನ್ನು ಮಾಡುವುದು ಸ್ತ್ರೀಭಾವಕ್ಕೆ ಒಪ್ಪುವಂತಿದೆ.

೧ "ಹರನೇ, ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು. ಚೆನ್ನಮಲ್ಲಿಕಾರ್ಜುನಯ್ಯ, ನನಗೆ ನೀನಾಗಬೇಕೆಂದು."

೨ "ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವನಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ, ಮದುವೆಯ ಮಾಡಿದರು. ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರಸೆಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು."

೩ "ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ, ಆನು ಮದುವಳಿಗೆಯಾದೆನು. ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ."

೪ ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳುಗುಂದದರಿಸಿನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದ ರೇಣುವೆ ಅನು

ಲೇಪವೆನಗೆ, ರುದ್ರಾಕ್ಷಿಯೇ ವೈದೊಡಿಗೆಯೆನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಂಗವೆನಗೆ, ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ?"

(ಎರಡನೆಯ ನಂಬರಿನ ವಚನವನ್ನು ಅನುಕರಿಸುವ ಚನ್ನಬಸವ ಪುರಾಣ ೧ ನೆಯ ಕಾಂಡ ೫ ನೆಯ ಸಂಧಿ ಪದ್ಯ ೩ನ್ನು ನೋಡಿರಿ.

ಪಚ್ಚೆಗಳ ಕಂಬಂಗಳಿಂ ಪವಳವಲಗೆಗಳ
ಮುಚ್ಚಳ್ಗಳಿಂ ನೀಲಮಣಿಯ ತೋವೆಗಳಿಂ ವಿ
ಯಚ್ಚರಾಂಗಣಕಡರ್ದ ವಜ್ರವೈಡೂರ್ಯ ಮಾಣಿಕ್ಯದೊಳ್ ನೆಲೆನೆಲೆಗಳ॥
ಅಚ್ಚಮುತ್ತಿನ ಗುದಿಗಳಿಂ ಝಲ್ಲಿ ಪೆಟ್ಟಿಗಳ
ಕುಚ್ಚುಗಳ ಸಂದಣಿಗಳಿಂ ಕೇರಿಕೇರಿಯೊಳ್
ಪೆಚ್ಚಿದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳೇನೆಂಬೆನು॥)

ಮೇಲಿನ ೨ ನೆಯ ೩ ನೆಯ ಮತ್ತು ನಾಲ್ಕನೆಯ ವಚನಗಳಲ್ಲಿ ಅಕ್ಕನವರ ಪತಿವಿಷಯುಕವಾದ ಅಕ್ಕರತೆ, ಅಭಿಮಾನ ಮತ್ತು ಆತನ ಕೂಡ ಮದುವೆಯಾದುದರಿಂದ ತಾವು ಪಡುತ್ತಿರುವ ಆನಂದವು ಹೃದಯದಲ್ಲಿ ಉಕ್ಕೇರಿ ಯಾವಾಗ ಗೆಳತಿಯರಿಗೆ ಹೇಳಿ ಸಮಾಧಾನಗೊಳ್ಳುವೆನೆಂಬ ಆತುರತೆ ಮುಂತಾದ ಪ್ರಾಕೃತ ಸ್ತ್ರೀಯರಲ್ಲಿ ಕಂಡುಬರುವ ಭಾವಗಳು ಅವರಲ್ಲಿಯೂ ಒಡೆದು ಕಂಡು ಹೃದಯಂಗಮವಾಗಿವೆ. ಮತ್ತು ೧ ನೆಯ ವಚನದಲ್ಲಿ ಇಂಥವನೇ ಗಂಡನಾಗಬೇಕೆಂದು ತಪಿಸಿ ಆತನನ್ನು ಪಡೆದ ಪತಿವ್ರತೆಯರ ಸ್ವಾಭಾವಿಕವಾದ ಅಭಿಮಾನವನ್ನು ಸ್ತ್ರೀಯಾಗಿರುವುದರಿಂದ ಅಕ್ಕನವರು ಸುಕವಿಗಳಿಗಿಂತ ಮೇಲಾಗಿ ವರ್ಣಿಸಿರುವರು. ಮಾನಿನಿಯರಿಗೆ ಇದು ಅಸಾಧ್ಯವಲ್ಲ.

"ಅಕ್ಕಯ್ಯ, ನಾನೊಂದು ಕನಸು ಕಂಡೆ.........ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚನ್ನಮಲ್ಲಿಕಾರ್ಜುನನ ಕಂಡು ಕಣ್ಣು ತೆರೆದೆನು."

ಈ ವಚನವು ಕನಸನ್ನು ಹೇಳದೆ ಪಾರ್ವತಿಗೆ ದರ್ಶನ ಕೊಡಲು ಬ್ರಹ್ಮಚಾರಿಯ ರೂಪದಿಂದ ಬಂದ ಶಿವನ ಕತೆಯನ್ನು ಸೂಚಿಸುವಂತಿದೆ.

ಪರಮಾತ್ಮನಲ್ಲಿನ (ಗಂಡನ ಮೇಲಿನ) ಅವರ ಅಭಿಮಾನ, ಸಾಮರಸ್ಯದ ಬಗ್ಗೆ ಅವರ ಆತ್ಮವಿಶ್ವಾಸ, ಮತ್ತು ಸಾಮರಸ್ಯದಿಂದುಂಟಾಗುವ ಪರಮಾನಂದಗಳು ಕೆಳಗಣ ವಚನಗಳಲ್ಲಿ ನಿರೂಪಿತವಾಗಿವೆ.

"ಕಾಮಬಲ್ಲಿದನೆಂದರೆ ಉರುಹಿ ಭಸ್ಮವ ಮಾಡಿದ. ಬ್ರಹ್ಮ ಬಲ್ಲಿದವನೆಂದರೆ ಶಿರವ ಚಿವುಟಿಯಾಡಿದ.........ವಿಷ್ಣು ಬಲ್ಲಿದನೆಂದರೆ ಆಕಳ ಕಾಯ್ದಿರಿಸಿದ.........ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಜನನಮರಣಕ್ಕೊಳಗಾಗದ ಬಲುಹನೇನ ಬಣ್ಣಿಪೆನವ್ವಾ?"

"ಎನ್ನ ತನುವ ಮಾರುಗೊಂಡನವ್ವಾ! ಎನ್ನ ತನುವ ಸೂರೆಗೊಂಡನವ್ವಾ! ಎನ್ನ ಸುಖವನೊಪ್ಪುಗೊಂಡನವ್ವಾ! ಎನ್ನಿರವನಿಂಬುಗೊಂಡನವ್ವಾ! ಚನ್ನಮಲ್ಲಿಕಾರ್ಜುನನ ಒಲುಮೆಯುವಳಾದೆನು."

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವಂಗಾನೊಲಿದೆನವ್ವ. ಎಡೆಇಲ್ಲದ ಕಡೆಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದ, ಎಲೆ ಅವ್ವಾ ನೀನು ಕೇಳಾ, ತಾಯೆ......ಕುಲ, ಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು"

ಅಕ್ಕನವರ ಇಂತಹ ಶೃಂಗಾರರಸವು ತಡೆಯಿಲ್ಲದೆ ಹಾಗೆಯೇ ಹರಿದದು ವಿರಹದಲ್ಲಿ ಮಡುವಾಗಿ ನಿಂತುದು ಪ್ರಾಕೃತ ಸ್ತ್ರೀವಿರಹದಂತೆ ಇವರಲ್ಲಿಯೂ ಅನುಭವಕ್ಕೆ ಬರುತ್ತದೆ. ಇವರ ಸಂದರ್ಭದಲ್ಲಿ ಅದು ಪತಿಯಾದ ಲಿಂಗದ ವಿರಹ.

"ಹೊಳೆವ ಜಡೆಯ ಮೇಲೆ ಎಳೆವೆಳದಿಂಗಳು
ಫಣಿಮಣಿ, ಕರ್ಣಕುಂಡಲವ ನೋಡವ್ವ! ರುಂಡಮಾಲೆಯ
ಕೊರಳವನ ಕಂಡರೆ ಒಮ್ಮೆ ಬರ ಹೇಳವ್ವಾ!

ಎಂದು ಹೇಳುವಾಗ ಅವಳು ಹೇಳುವ ವಿರಹವು ಸಹಿಸಲಸಾಧ್ಯವಾಗಿ ಹೀಗೆ ಪರಿಣಮಿಸುತ್ತಿದೆ.

"ಕಳವಳದ ಮನವು ತಲೆ ಕೆಳಗಾದುದವ್ವಾ! ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ! ಬೆಳದಿಂಗಳು ಬಿಸಿಲಾಯಿತ್ತು, ಕೆಳದಿ. ಹೊಳಲು ಸುಂಕಿಗನಂತೆ ತೊಳಲುತ್ತಿದ್ದೆನವ್ವಾ! ತಿಳುಹಾ ಬುದ್ಧಿಯ.

ಹೇಳಿ ಕರತಾರೆಲೆಗನ್ವಾ ತೊಳಲುತ್ತಿದೆನವ್ವಾ! ಚನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ."

ಈ ವಚನವು "ಚಂದ್ರಶ್ಚಂಡಕರಾಯತೆ ಮೃದುಗತಿರ್ವಾತೋಪಿ ವಜ್ರಾಯತೆ" ಎಂಬ ಋತುಸಂಹಾರದೊಳಗಣ ಕಾಲಿದಾಸನ ಪದ್ಯ ವನ್ನು ನೆನಪಿಗೆ ತಂದುಕೊಡುತ್ತಿದೆ. ಅಕ್ಕನವರ ವಿರಹವು ಇಲ್ಲಿಗೆ ತೀರಿ ತೆಂದು ತಿಳಿಯಲಾಗದು. ಅವರು ವಾಸಕಸಜ್ಜಿಕೆಯಂತೆ ನಟಿಸಿದ ಸಂಗತಿ ಯನ್ನೂ ಹೇಳಿದ್ದಾರೆ.

"ಅರಿಸಿನವನೆ ಮಿಂದು, ಹೊಂದುಡಿಗೆಯನೆ ತೊಟ್ಟು, ದೇವಾಂಗವ ನುಟ್ಟು, ಪುರುಷ ಬಾರಾ! ನಿನ್ನ ಬರವೆನ್ನಸುವಿನ ಬರವು ಬಾರಯ್ಯ! ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾ ರುತ್ತಿಹೆನು."

ಆ ತರುವಾಯ ರಾಮಚಂದ್ರನು ಸೀತೆಯನ್ನು ವನದಲ್ಲಿ ಹುಡು ಕುತ್ತ ಅಲೆಯುತ್ತಿರವ ಹಾಗೆ ಅಕ್ಕನವರು ಚನ್ನಮಲ್ಲಿಕಾರ್ಜುನನನ್ನು ಅರ ಸುತ್ತ ವನದಲ್ಲಿ ಹೋದುದನ್ನು ಹೇಳುವರು.

"ಅಳಿಸಂಕುಳವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ, ನಿಮ್ಮನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾ ರ್ಜುನದೇವರ ಕಂಡಿರೆ? ಕರೆದು ತೋರಿರೆ."

"ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ. ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ......ಚನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ."

ಈ ಸಂದರ್ಭದಲ್ಲಿ ರಾಮಚಂದ್ರಚರಿತ ಪುರಾಣದೊಳಗಿನ

ಕಳಹಂಸಾಳದಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ।
ತಳಿರೆ, ತಾವರೆಯೇ, ಮದಾಳಿಕುಳಮೇ, ಕೆನ್ನೆಯ್ದಿಲೇ ಮತ್ತ ಕೋ॥
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ।
ತಳೆಯಂ ಕೈರವನೇತ್ರೆಯಂ ಪಿಕರವ-ಪ್ರಖ್ಯಾತೆಯಂ ಸೀತೆಯಂ॥

ಎಂಬ ಪದ್ಯವನ್ನು ಹೋಲಿಸಿ ನೋಡಬಹುದಾಗಿದೆ.

"ಒಮ್ಮೆ ಕಾಮನ ಕಾಲ ಹಿಡಿವೆ. ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ. ಸುಡಲೀ ವಿರಹವ. ನಾನಾರಿಗೆ ಧೃತಿಗೆಡುವೆ? ಚನ್ನಮಲ್ಲಿಕಾರ್ಜುನದೇವನೆನ್ನನೊಲ್ಲದ ಕಾರಣ ಎಲ್ಲರಿಗೆ ಹಂಗಿತಿಯಾದೆನವ್ವಾ."

ಎಂಬ ವಚನದಲ್ಲಿ ಸಾಮರಸ್ಯ ನಿರಾಶೆಯೂ ಅದಕ್ಕೆ ಸರಿಯಾಗಿ ಪ್ರಾಕೃತ ಸ್ತ್ರೀಯ ರಣರಣಕಾವಸ್ಥೆಯೂ ಏಕಕಾಲದಲ್ಲಿ ಮನಸ್ಸನ್ನು ಆವರಿಸುವುವು. ಹೀಗೆ ಆತ್ಯವಸ್ಥೆಯಾದ ನವ ತರುಣಿಯು ಮುಂದೆ ಒಮ್ಮೆಲೆ ಗಂಡನು ಬಂದು ನಿಂತರೆ ಅವಳು ಮೊದಲು ಭ್ರಮೆಗೊಂಡು ಆ ಮೇಲೆ ಆನಂದದಿಂದ ಉಬ್ಬಿ ಹೊರಸೂಸುತ್ತಿರುವ ಆ ಆನಂದ ಭಾವವು ತನ್ನಲ್ಲಿ ಹಿಡಿಸದೆ ತನ್ನ ಗೆಳತಿಯರಿಗೆ ಹೇಳಿ ಅವರನ್ನು ಪಾಲುಗಾರರನ್ನು ಮಾಡಿಕೊಂಡು ಸಮಾಧಾನಗೊಳ್ಳುವಂತೆ ಮುಂದಿನ ವಚನವನ್ನು ಅಕ್ಕನವರು ಹೇಳುತ್ತಾರೆ.

"ಇಂದೆನ್ನ ಮನೆಗೆ ಗಂಡ ಬಂದನವ್ವಾ ನಿಮುನಿಮುಗೆಲ್ಲಾ ಶೃಂಗಾರವ ಮಾಡಿಕೊಳ್ಳಿ. ಚನ್ನಮಲ್ಲಿಕಾರ್ಜುನನೀಗಳೆ ಬಂದಿಹನು. ಇದಿರುಗೊಳ್ಳ ಬನ್ನಿರೆ, ಅವ್ವಗಳಿರಾ."

ಸ್ತ್ರೀಯರಿಗೆ ಸ್ವಾಭಾವಿಕವಾಗಿ ಮಾತಾಡುವದು ಬಹಳ ಬೇಕು. ಗಂಡಂದಿರನ್ನು ಅವರು ಮಾತುಗಳಿಂದ ಬೇಜಾರುಗೊಳಿಸುವದುಂಟು. ಈ ಸಂದರ್ಭದಲ್ಲಿ ಅಕ್ಕನವರೇನು ಕಡಿಮೆಯವರಲ್ಲ. ಅವರು ತಮ್ಮನ್ನು ತಾವು ಈ ರೀತಿಯಾಗಿ ಹೇಳಿಕೊಂಡಿದ್ದಾರೆ.

"ನೀನು ದಂಡಮಂಡಲಕ್ಕೆ ಹೋದೆನೆಂದೊಡೆ ನಾನು ಸುಮ್ಮನಿಹೆನು. ನೀನು ಎನ್ನ ಕೈಯೊಳಗಿರ್ದು ಎನ್ನ ಮನದೊಳಗಿರ್ದು ನುಡಿಯದಿರ್ದೊಡಾನು ಎಂತು ಸೈರಿಸುವೆನಯ್ಯ! ನೇಹವೆಂಬ ಕುಂಟಣಿ ಚನ್ನಮಲ್ಲಿಕಾರ್ಜುನನೊಲಿಸದಿದ್ದರೆ ಇನ್ನೇವೆ ಸಖಿಯೆ ?"

ಸಾಮರಸ್ಯದ ಬಗ್ಗೆ ತನ್ನ ಆತುರತೆಯನ್ನು ಅಕ್ಕನವರು ಹೀಗೆ ತೋರಿಸಿದ್ದಾರೆ.

"ಇಂದ್ರನೀಲಗಿರಿಗಳನೇರಿಕೊಂಡು, ಚಂದ್ರಶಿಲೆಗಳಮೆಟ್ಟಿಕೊಂಡು, ಕೊಂಬ ಬಾರಿಸುತ, ಹರನೇ ಎನ್ನ ಕುಂಭಕುಚದ ಮೇಲೆ ನಿಮ್ಮನೈದಪ್ಪಿಕೊಂಬೆನಯ್ಯ! ಅಂಗಭಂಗ ಮನಭಂಗವಳಿದು ನಿಮ್ಮನೆಂದಿಗೊಮ್ಮೆ ನೆರೆವೆನೋ ಚನ್ನಮಲ್ಲಿಕಾರ್ಜುನಾ."

"ಸತಿಯು ತನ್ನ ಪತಿಯನ್ನು ಸೇರಿದ ಮೇಲೆ ಪತಿಯ ಹೊರತು ತನಗೆ ಬೇರೆ ಅಸ್ತಿತ್ವವಿಲ್ಲ ಇಬ್ಬರೂ ಒಂದೇ ಎಂದು ಭಾವಿಸುವಂತೆ ಸಾಮರಸ್ಯ ಹೊಂದಿದ ಮೇಲೆ ಅಕ್ಕನವರು ತಾವೂ ಲಿಂಗವೂ ಬೇರೆಯಲ್ಲವೆಂದು ಹೇಳುವ ಅವರ ಭಾವನೆಯು ಅಸದೃಶವಾಗಿದೆ.

"ನಾನು ನಿನಗೊಲಿದೆ ನೀನು ಎನಗೊಲಿದೆ. ನೀನೆನ್ನನಗಲದಿಪ್ಪೆ ನಾನಿನ್ನನಗಲದಿಪ್ಪೆನಯ್ಯ. ನಿನಗೆ ನನಗೆ ಬೇರೊಂದು ಠಾವುಂಟೆ? ನೀನು ಕರುಣಿ ಎಂಬುದ ನಾನು ಬಲ್ಲೆನು. ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯ. ನೀನೇ ಬಲ್ಲೆ ಚನ್ನಮಲ್ಲಿಕಾರ್ಜುನಾ."

ಈರೀತಿಯಾಗಿ ಪ್ರಪಂಚದಲ್ಲಿ ನಾನಾ ಅವಸ್ಥೆಯಲ್ಲಿ ಅನುಭವಿಸುವ ಭಿನ್ನ ಭಿನ್ನ ಭಾವಗಳನ್ನು ಹೊರದೂಡುವಾಗ ಅವರು ಸ್ವಾಭಾವಿಕವಾಗಿ ಉಪಯೋಗಿಸಿದ ರೂಢಿಯ ಉಪಮೆಗಳು ಕಾಲಿದಾಸನನ್ನು ಮರೆಯಿಸುವಂತಿವೆ. ಜನರು ಮಾತಾಡುವಾಗ ಉಪಮೆಗಳನ್ನು ಉಪಯೋಗಿಸುವುದುಂಟು; ಆದರೆ ಉಪಮೆಗಳನ್ನು ಉಪಯೋಗಿಸುತ್ತೇವೆಂಬ ಕಲ್ಪನೆಯು ಅವರ ಕನಸು ಮನಸಿನಲ್ಲಿರುವುದಿಲ್ಲ. ಅದರಂತೆ ಅಕ್ಕನವರಾದರೂ ಆ ಕಲ್ಪನೆಯಿಲ್ಲದೆ ಸ್ವಾಭಾವಿಕವಾಗಿ ಅವುಗಳನ್ನು ಉಪಯೋಗಿಸಿರುವುದರಿಂದ ವಚನಗಳ ಸೌಂದರ್ಯವು ಹೆಚ್ಚಾಗಿದೆ. ಕೆಳಗಿನ ವಚನಗಳು ಇದಕ್ಕೆ ಸಾಕ್ಷಿ.

"ನೆಲದ ಮರೆಯ ನಿಧಾನದಂತೆ, ಸಿಲೆಯ ಮರೆಯ ಕನಕದಂತೆ, ತಿಲದ ಮರೆಯ ತೈಲದಂತೆ, ಮರದ ಮರೆಯ ತೇಜದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನರಿಯಬಾರದು."

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ! ಸಮುದ್ರದ ತಡೆಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ!"

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ, ಕಾರಣಂಗಳ ಚೇಷ್ಟೆಗೆ ಮನವೇ ಬೀಜ.

"ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ! ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವನೆನೆವಂತೆ ನೆನೆವೆನಯ್ಯ!"

"ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ? ಪರಿಮಳವಿಲ್ಲದೆ ಪುಷ್ಪಕ್ಕೆಳಸುವದೇ ಭ್ರಮರ?

"ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ, ಕಡಿದೊರೆದೊಡೆ ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ?

"ಎನ್ನ ನಾನರಿಯದಂದು ಮುನ್ನ ನೀನೆಲ್ಲಿರ್ದೆ ಹೇಳಯ್ಯ! ಚಿನ್ನದೊಳಗಣ ಬಣ್ಣದಂತೆ ಎನ್ನೊಳಗಿರ್ದೆಯಯ್ಯ!

"ಬಂಜೆ ಬೇನೆಯನರಿಯಳು. ಬಲದಾಯಿ ಮುದ್ದಬಲ್ಲಳೆ? ನೊಂದ ನೋವ ನೋಯದವರೆತ್ತ ಬಲ್ಲರು?

"ಕೆಂಡದ ಶವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ, ಜಲವರತ ತಟಾಕದಂತೆ, ಬೆಂದ ನುಲಿಯಂತೆ ಮತ್ತೆ ಹಿಂದಣ ಹಂಗುಂಟೆ?

"ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು?......... ಮಣ್ಣು ಬಿಟ್ಟ ಬಳಿಕ ಆ ಕೆಯ್ಯಯನಾರುತ್ತರೇನು? ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ ನಾಯಿ ತಿಂದರೇನು?"

ಅಕ್ಕನವರು ಹೀಗೆ ಮಾಲಾಕಾರವಾಗಿ ಉಪಮೆಗಳನ್ನು ಹೇಳುವಾಗ ಉಪಮಾ ಕಾಲಿದಾಸಸ್ಯ ಎಂದು ಹೇಳುವುದನ್ನು ಬಿಟ್ಟು ಉಪಮಾ ಮಹಾದೇವಿಯಕ್ಕಾಯಾಃ ಎಂದು ಹೇಳಬೇಕಾಗುತ್ತಿದೆ. ಈ ಉಪಮೆಗಳಲ್ಲಿ, ಮಾತುಗಾರಿಕೆಯಲ್ಲಿ, ಭಾವಗಳಲ್ಲಿ, ಸಾಮಾಜಿಕ ಸಂಗತಿಗಳಲ್ಲಿ ಅಕ್ಕನವರು ತಮ್ಮ ಸ್ತ್ರೀತ್ವ ವೈಶಿಷ್ಟ್ಯವನ್ನು ಓದುಗರು ಮರೆಯದಂತೆ ಕಾದಿಟ್ಟಿದ್ದಾರೆ.

"ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು ಭಾವಿಸಲು ಗಂಡು ರೂಪು." ಎಂದು ಹೇಳುವಾಗಲೂ ತಾವು ಸ್ತ್ರೀಯೆಂಬ ಭಾವನೆಯು ಮರೆತು ಹೋಗಿಲ್ಲ. "ಗಂಡಗಂಡರೆಲ್ಲ ಹೆಂಡಹೆಂಡರಾಗಿ" ಅಂಗಲಿಂಗ ಸಾಮರಸ್ಯವನ್ನು ಅನುಭವಿಸುವಾಗ, ಬಸವಣ್ಣನವರು, "ಎಲೆ ಗಂಡುಸೇ, ನೀ ಕೇಳಾ. ನಿನಗೊಬ್ಬ ಗಂಡುಟ್ಟಿ ಗಂಡುಡಿಗೆಯನು. ಮುತ್ತೊಮ್ಮೆ ಅನು ಗಂಡಪ್ಪೆನಯ್ಯಾ. ಮತ್ತೊಮ್ಮೆ ಅನು ಹೆಣ್ಣಪ್ಪೆ

ನಯ್ಯಾ. ಕೂಡಲಸಂಗಮದೇವ ನಿನಗೆ ವೀರನಪ್ಪೆ. ನಿಮ್ಮ ಶರಣರ ವಧುವಪ್ಪೆ." (ಬಸವೇಶ್ವರನ ವಚನಗಳು ವ. ೧೩ ಪುಟ ೧೦೭.) ಹೀಗೆ ಹೇಳುತ್ತಿರವಾಗ ಅಕ್ಕನವರಿಗೆ ಸ್ವಾಭಾವಿಕವಾದ ಸ್ತ್ರೀತ್ವವಿರಲು ಗಂಡುಸಾಗುವ ಹುಚ್ಚು ಎಲ್ಲಿಂದ ಬಂದಿತೆಂದು ಮೇಲೆ ಮೇಲೆ ನೋಡುವವರಿಗೆ ತೋರಬಹುದು. ತುಸು ವಿಚಾರ ಮಾಡಿದರೆ ಗೂಢಾರ್ಥವು ಹೊಳೆಯುವದು.

ಸ್ತ್ರೀಯರಿಗೆ ಮಾತಾಡುವುದು ಬಹಳ ಬೇಕೆಂದು ಮೇಲೆ ಹೇಳಲಾಗಿದೆ. ಅಕ್ಕನವರಾದರೂ ಈ ಉಕ್ತಿಗೆ ವಿಕಲ್ಪವನ್ನು ತರುವಂತಿಲ್ಲ. ಅವರಿಗೂ ಮಾತು ಬಹಳ ಬೇಕು. ವಾಕ್ಪ್ರೋವಿದನಂತೆ ತಡೆಯಿಲ್ಲದೆ ಗಂಭೀರವಾಗಿ ಮಾತಾಡುತ್ತಾರೆ.

"ಆಡುವದು, ಪಾಡುವುದು, ಕೇಳುವುದು, ಹೇಳುವುದು, ನಡೆವುದು, ನುಡಿವುದು, ಸರಸ ಸಮ್ಮೇಳವಾಗಿಪ್ಪುದಯ್ಯ ಶರಣರೊಡನೆ. ಚೆನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನಕ್ಕರ ಲಿಂಗಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು."

"ನಚ್ಚುಗೆ ಮನ ನಿಮ್ಮಲ್ಲಿ. ಮಚ್ಚುಗೆ ಮನ ನಿಮ್ಮಲ್ಲಿ. ಸಲುಗುಗೆ ಮನ ನಿಮ್ಮಲ್ಲಿ. ಸೋಲುಗೆ ಮನ ನಿಮ್ಮಲ್ಲಿ. ಅಳಲುಗೆ ಮನ ನಿಮ್ಮಲ್ಲಿ. ಕರಗುಗೆ ಮನ ನಿಮ್ಮಲ್ಲಿ. ಕೊರಗುಗೆ ಮನ ನಿಮ್ಮಲ್ಲಿ. ಎನ್ನ ಪಂಚೇಂದ್ರಿಯಗಳು ಕಬ್ಬಿನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ.

"ಹಿತವಿದೆ. ಸಕಲ ಲೋಕದ ಜನಕ್ಕೆ ಮತವಿದೆ. ಶ್ರುತಿಪುರಾಣದ ಗತಿ ಇದೆ. ಭಕುತಿಯ ಬೆಳಗಿನುನ್ನತಿ ಇದೆ. ಶ್ರೀವಿಭೂತಿಯ ನೊಲಿದು ಧರಿಸಿದರೆ, ಭವವನು ಪರಿವುದು. ದುರಿತಸಂಕುಳವನೊರಿಸುವುದು. ಹರನ ಸಾಲೋಕ್ಯ ಸಾಮೀಪ್ಯದಲ್ಲಿರಿಸುವುದು. ನಿರುತವಿದನೇ ನಂಬು, ಮನುಜಾ, ಜವನಭೀತಿ, ಮರಣಭಯದಿಂದ ಈ ವಿಭೂತಿಯ ಅಗಸ್ತ್ಯ, ಕಶ್ಯಪ, ಜಮದಗ್ನಿಗಳು ಧರಿಸುವರು ನೋಡಾ! ಶ್ರೀಶೈಲ ಮಲ್ಲಿಕಾರ್ಜುನನೊಲಿಸುವ ಶ್ರೀವಿಭೂತಿ."

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವಂಗಾನೊಲಿದೆನವ್ವ. ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ನೀನು ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ

ಚಲುವಂಗೊಲಿದೆ ನಾನು. ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಅಕ್ಕನವರು ಉದಹರಿಸಿದ ಆಗಮಗಳಲ್ಲಿನ ಆಧಾರಗಳೂ, ಪೂರ್ವ ಕವಿಗಳ ಪದ್ಯಗಳಿಗೆ ಸಮಾನವಾದ ಅವರ ಉಕ್ತಿಗಳೂ, ಮುಂದಿನ ಕವಿಗಳು ಅನುಸರಿಸಿದ ಅವರ ವಿಚಾರಗಳೂ ಅವರ ಪಾಂಡಿತ್ಯಕ್ಕೂ ಕಾವ್ಯ ಶಕ್ತಿಗೂ ಉದಾಹರಣೆಗಳಾಗಿವೆ.

"ಪಚ್ಚೆಯ ನೆಲಗಟ್ಟು ಕನಕದ ತೋರಣ" ಎಂಬ ವಚನಕ್ಕೆ ಸರಿಯಾದ ಪದ್ಯವು ಚೆನ್ನಬಸವಪುರಾಣದಲ್ಲಿ ("ನೀಲರತ್ನಂಗಳಾ ನೆಲಗಟ್ಟು" ಎಂಬ) ಇದೆಯೆಂದು ಹಿಂದೆಯೇ ತೋರಿಸಿದುದಾಯಿತು.

"ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ! ಎಂಬ ವಚನಭಾಗವನ್ನು ಹೋಲುವ "ರಾಮನಾಮ ಪಾಯಸ ಕೃಷ್ಣನಾಮ ಸಕ್ಕರೆ ವಿಠ್ಠಲನಾಮ ತುಪ್ಪ ಕಾಸಿ ಸುರಿದುಣ್ಣು ಬಾಯಿ ಚಪ್ಪರಿಸಿ" ಎಂಬ ಪದವು ಪುರಂದರದಾಸರ ಕೀರ್ತನೆಗಳಲ್ಲಿದೆ.

"ಕಡೆಗೆ ಮಾಡದ ಭಕ್ತಿ ದೃಢವಿಲ್ಲದಾಳುತನ ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯ? ಮಾಡಲಾಗದು, ಅಳಿಮನವ ಮಾಡಿದೊಡೆ ಮನದೊಡೆಯ ಬಲ್ಲನೈಸೆ" ಎಂಬ ಅಕ್ಕನವರ ವಚನಕ್ಕೆ ಸರಿಯಾದ

"ಬಿಡು ಬಾಹ್ಯದೊಳು ಡಂಭವ। ಮಾನಸದೊಳಗೆಡವೆಡದಿರು ಶಂಭವ ॥ಪಲ್ಲ॥

ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ। ಪಡೆದರೆ ಶಿವ ನಿನಗೊಲಿವನೆ ಮರುಳೆ ॥ಅನು॥

ಜನಮೆಚ್ಚಿ ನಡಕೊಂಡರೇನುಂಟು ಲೋಕದಿ।
ಮನಮೆಚ್ಚಿ ನಡಕೊಂಬುವುದೆ ಚಂದವು।
ಜನರೇನು ಬಲ್ಲರು ಒಳಗಾಗೋ ಕೃತ್ಯವ।
ಮನವರಿಯದ ಕಳ್ಳತನವಿಲ್ಲವಲ್ಲಾ ॥೧॥
ಜನರು ಮೆಚ್ಚಲು ನಿನ್ನ ಕೈಲಾಸಕೊಯ್ವರೆ।
ಜನಮೆಚ್ಚದಿರೆ ಶಿವ ಬಿಡುತಿಹನೆ।
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ।

ಚಿನುಮಯ ಶಿವನೇನೆಲ್ಲರಿಯನೆ ಮರುಳೆ ॥೨॥
ಮನದೊಳು ಶಿವತಾನೆ ಮನೆ ಮಾಡಿಕೊಂಡಿಹ।
ಮನಮೆಚ್ಚಿ ನಡೆದರೆ ಶಿವ ಮೆಚ್ಚುವ।
ಮನಕಂಜಿ ನಡೆಯದೆ ಜನಕಂಜಿ ನಡೆದರೆ।
ಮನದಾಣ್ಮ ಗುರುಸಿದ್ಧ ಮರೆಯಾಗೊನಲ್ಲ ॥೩॥

ಎಂಬ ಪದವು ಸರ್ಪಭೂಷಣ ಕವಿಗಳ ಕಲ್ಪವಲ್ಲರಿಯಲ್ಲಿದೆ. ಪೂರ್ವ ಕವಿಗಳ ಪದ್ಯಗಳನ್ನು ಹೋಲುವ ಕೆಲವು ವಚನಗಳನ್ನು ಹಿಂದೆಯೇ ತೋರಿಸಿದ್ದೇವೆ. ಸಾರಾಂಶವೇನೆಂದರೆ ಮಹಾಕವಿಗಳಲ್ಲಿ ಕಂಡುಬರುವ ಗುಣಗಳು ಮಹಾದೇವಿಯಕ್ಕನವರಲ್ಲಿ ಕಂಡುಬರುತ್ತಿರುವುವಾದರೂ ಅವುಗಳನ್ನೆಲ್ಲ ಇಲ್ಲಿ ತೋರಿಸಲಾಗುವುದಿಲ್ಲ.

ಅಕ್ಕನವರು ತಮ್ಮ ವಚನಗಳಲ್ಲಿ ಕೆಲವು ಸಾಮಾಜಿಕ ಸಂಗತಿಗಳನ್ನು ಹೇಳಿದ್ದಾರೆ. ಅವೆಲ್ಲ ಧರ್ಮನೀತಿಗಳನ್ನು ಅನುಸರಿಸಿವೆ. ಮತ್ತೆ ಕೆಲವು ಜನಸಾಮಾನ್ಯದ ಅಂಧಪರಂಪರೆಯನ್ನು ತಿಳಿಸುತ್ತವೆ. ವಿವಾಹದ ವಿಷಯವಂತೂ ಈ ಮೊದಲೇ ಬಂದುಬಿಟ್ಟಿತು. ಆ ವಿಷಯವನ್ನು ಮತ್ತೊಮ್ಮೆ ಇಲ್ಲಿ ಎತ್ತಿದರೆ ಚರ್ವಿತ ಚರ್ವಣವಾಗುತ್ತದೆ.

"ಅರಿಸಿನವನೆ ಮಿಂದು" ಎಂದು ಹೇಳುವ ವಚನದಲ್ಲಿ ಸ್ತ್ರೀಯರ ಅನುಲೇಪನವು ಉಕ್ತವಾಗಿದೆ. ಉತ್ತರಕರ್ನಾಟಕದಲ್ಲಿ ಈಗ ಸ್ತ್ರೀಯರು ನಿತ್ಯವೂ ವೀಳ್ಯ ಮೆಲ್ಲುವುದಿಲ್ಲ. ಇದರಿಂದ ವೀಳ್ಯವು ಅವರಿಗೆ ಸೇರುವದಿಲ್ಲವೆಂದಲ್ಲ. ಸ್ತ್ರೀಯರಿಗೆ ವೀಳ್ಯವು ಬಹಳ ಸೇರುತ್ತದೆ. ಆದರೆ ಕೊಂಕಣ ಮೈಸೂರ ಮದ್ರಾಸ ಪ್ರಾಂತಗಳಲ್ಲಿ ಸಾಮಾನ್ಯವಾಗಿ ಎಲ್ಲ ಸ್ತ್ರೀಯರು ನಿತ್ಯ ವೀಳ್ಯ ಮೆಲ್ಲುತ್ತಾರೆ. ಈ ಸಂಗತಿಯು ಕೆಳಗಿನ ವಚನ ಭಾಗದಲ್ಲಿ ಬಂದಿದೆ.

"ನಾನು ವೀಳೆಯವ ಮಾಡುವುದಕ್ಕೆ ಮುನ್ನವೆ, ಜಂಗಮಕ್ಕೆ ತಾಂಬೂಲವ ಕೊಡುವೆ."

ಈ ವಚನದಲ್ಲಿ ವೀಳ್ಯದ ವಿಷಯವೊಂದೇ ಅಲ್ಲದೆ ಅನೇಕ ಸಾಮಾಜಿಕ ಸಂಗತಿಗಳು ಬಂದಿವೆ. ಓದುಗರು ಅವುಗಳನ್ನು ಕಂಡುಕೊಳ್ಳಬೇಕು.

ವರ್ಣಾಶ್ರಮ ಧರ್ಮದ ಹುಚ್ಚು ೧೨ ನೆಯ ಶತಮಾನದಲ್ಲಿ ಜನಸಾಮಾನ್ಯದಲ್ಲಿ ಬಹಳವಾಗಿದ್ದಿತೆಂದು ತೋರುತ್ತದೆ. ಅದನ್ನು ಬಸವಣ್ಣನವರು

“ಹೊಲೆಯೊಳಗೆ ಹುಟ್ಟಿ ಕುಲವನರಿಸುವೆ. ಎಲವೋ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣ ಹೊಲೆಯ? ಹೋತ ತಂದು ನೀವು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ ವೇದವೆಂಬುದು ನಿಮಗೆ ತಿಳಿಯದು. ನಮ್ಮ ಕೂಡಲಸಂಗಮದೇವನ ಶರಣರು ಕರ್ಮವಿರಹಿತರು, ಶರಣಸನ್ನಿಹಿತರು, ಅನುಪಮಚರಿತ್ರರು ಅವರಿಗೆ ತೋರಲು ಪ್ರತಿ ಇಲ್ಲವೋ.
(ಬಸವೇಶ್ವರನ ವಚನಗಳು ವ. ೪೯ ಪುಟ ೮೬.)

ಎಂಬ ತಮ್ಮ ವಚನದಲ್ಲಿ ನಿರಾಕರಿಸಿದ್ದಾರೆ. ಇದನ್ನೇ ಅಕ್ಕನವರು “ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ,” “ಗಂಡು ಹೆಣ್ಣೆಂಬ ಜಾತಿ” ಎಂಬ ಉಕ್ತಿಗಳಲ್ಲಿ ಸೂಕ್ಷ್ಮವಾಗಿ ಹೇಳಿದ್ದಾರೆ.

ರೂಢವಾದ ತೀರ್ಥಯಾತ್ರೆಗಳನ್ನು ಅವರು ಹಳಿದಿದ್ದಾರೆ.

‘‘ಹಾಲ ಹಿಡಿದು ಬೆಣ್ಣೆಯನರಸಲುಂಟೆ? ಲಿಂಗವ ಹಿಡಿದು ಪುಣ್ಯ ತೀರ್ಥಕ್ಕೆ ಹೋಗಲುಂಟೇ?.........ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಂಗಳು, ಎಲ್ಲ ಕ್ಷೇತ್ರಂಗಳು ಇಹವೆಂದು ಭಾವಿಸಿ ಮುಕ್ತರಪ್ಪುದಯ್ಯಾ!

ತೀರ್ಥಯಾತ್ರೆಗಳ ಉದ್ದೇಶವು ಆಯಾ ದೇಶಗಳಲ್ಲಿನ ನಡೆನುಡಿ, ಸಂಸ್ಕಾರ, ಬೆಳವಣಿಗೆ ಮುಂತಾದ ಸಂಗತಿಗಳನ್ನು ಕಂಡುಕೊಳ್ಳುವಲ್ಲಿದ್ದಿತು. ಅದನ್ನು ಮರೆಮಾಡಿ ಧಾರ್ಮಿಕ ಭಾವವು ಅದರಲ್ಲಿ ಬಂದಿದ್ದಿತಾದುದರಿಂದ ಅಕ್ಕನವರ ನಿರಾಕರಣೆ.

೧೨ ನೆಯ ಶತಮಾನದಲ್ಲಿ ದುರುಳ ವೇದಾಂತಿಗಳು ಜನರನ್ನು ಈಗಿನಂತೆ ಬಹಳವಾಗಿ ಆಕರ್ಷಿಸುತ್ತಿದ್ದಂತೆ ಈ ವಚನದಿಂದ ಕಂಡು ಬರುತ್ತಿದೆ.

“ಅಯ್ಯಾ, ಆದಿ ಅನಾದಿಯಿಂದತತ್ತ ಮೀರಿ ತೋರುವ ನಿತ್ಯನಿರಂಜನ ಗುರುಲಿಂಗಜಂಗಮರ ಶಿವಶರಣರ ಸತ್ಯ ಸನ್ಮಾರ್ಗದ ಗೊತ್ತಿನ ಮರಿಯಾದೆಯನರಿಯದೆ ಮರ್ತ್ಯದ ಜಡಜೀವಿ ಭವಿ ಪ್ರಾಣಿಗಳ ಹಾ ಗುಹ್ಯಲಂಪಟಕಿಚ್ಚಿಸಿ, ದಾಸಿವೇಶಿಯರ ಕೂಡಿಕೊಂಡು ಭುಂಜಿಸಿ ಷಟ್ಸ್ಥಲ ಬ್ರಹ್ಮಾನುಭಾವವ ಕೇಳಿ ಹೇಳುವ ಮೂಳ ಚುಕ್ಕೆಯರ ಕಂಡು ಎನ್ನ ಮನ ನಾಚಿತ್ತು ಕಾಣಾ, ಅವ್ವ ನೀಲಮ್ಮನ ಮೋಹದ ಮಗಳೆ, ಅಪ್ಪ ಬಸವಣ್ಣನ ಚಿತ್ತದ ಪುತ್ಥಳಿ, ನಿಃಕಳಂಕ ಸದ್ಗುರು ಪ್ರಭುದೇವರ

ಸತ್ಯದ ಸೊಸೆಯೋ, ಚನ್ನಮಲ್ಲಿಕಾರ್ಜುನನರ್ಧಾಂಗಿನಿಯೆ, ಚಿಕ್ಕಯ್ಯಪ್ರಿಯ ಸಿದ್ಧಲಿಂಗನೊಡಹುಟ್ಟಿದಳೆ, ಕೇಳವ್ವ ಇದು ಮರ್ತ್ಯದ ಜಡಜೀವಿ ಭ್ರಷ್ಟರ ಬಾಳುವೆ ಎಂದೆ."

ಹಿಂದುಗಳಲ್ಲಿ ಧಾರ್ಮಿಕಭಾವವು ದೃಢವಾಗಿ ಬೇರೂರಿ ನಿಂತಿದೆ. ಆ ಕಾರಣದಿಂದ ಅನುಭವವಿಲ್ಲದೆ ವೇದಾಂತ ಹೇಳುವ ಜನರ ಸುತ್ತಲು ಅನೇಕರು ಈಗಲೂ ಉತ್ಸುಕತೆಯಿಂದ ನೆರೆಯುತ್ತಾರೆ. ೧೨ ನೆಯ ಶತಮಾನದಲ್ಲಿ ಹೀಗಾಗುತ್ತಿದ್ದುದು ಆಶ್ಚರ್ಯದ ಸಂಗತಿಯಲ್ಲ. ಈ ದುರುಳ ವೇದಾಂತಿಗಳು ಅನೀತಿವಂತರೂ ಸ್ತ್ರೈಣರೂ ಕಪಟಿಗಳು ಆಗಿ ಈಗ ಕಂಡುಬರುತ್ತಿರುವಂತೆ ಪೂರ್ವದಲ್ಲಿಯೂ ಇದ್ದಿರಬಹುದು. ಆದುದರಿಂದಲೇ ಅಕ್ಕನವರು ಸತ್ಯವನ್ನು ಮರೆಮಾಡದೆ ಹೀಗೆ ಹೇಳಿದುದು.

"ಈ ಸಾವ ಕೊಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಹೇಳುವ ಅವರ ಉಕ್ತಿಯು ಎಷ್ಟು ಅರ್ಥಗರ್ಭಿತವಾಗಿದೆ? ಅದರಲ್ಲಿಯೂ "ಕೊಡುವ" ಎಂಬ ಶಬ್ದವಂತೂ ಗೂಢತರವಾಗಿದೆ. ಪತಿವ್ರತಾ ಸ್ತ್ರೀಯರಿಗೆ ಅದು ಹೃದಯಶಲ್ಯವಾಗಿದೆ. ಅದು ರೋಗಗಳಿಗೆ ತವರುಮನೆಯಾದಂತಿದೆ; ಅನೀತಿ-ಅನಾಚಾರ-ಅತ್ಯಾಚಾರಗಳಿಗೆ ಆಸರವಾಗಿದೆ.

"ದೃಢವಿಲ್ಲದ ಆಳುತನ" ಎಂಬ ಅವರ ಉಕ್ತಿಯು ಹೊಯ್ಸಳಯಾದವರ ಕಾಲದಲ್ಲಿ ಅರಸನು ಮಡಿಯಲು ರಾಜಭಕ್ತಿಯಿಂದ ಅನೇಕರು ಆತ್ಮಹತ್ಯಮಾಡಿಕೊಂಡ ಐತಿಹಾಸಿಕ ಸಂಗತಿಯನ್ನು ನಮ್ಮೆದುರಿಗೆ ನಿಲ್ಲಿಸುತ್ತದೆ.

"ಸದ್ಭಕ್ತಿ ಭಿಕ್ಷ", ಭಿಕ್ಷಾನ್ನಂಗಳುಂಟು," ಮನೆಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ" ಎಂಬ ಉಕ್ತಿಗಳು ಆ ಕಾಲದ ಭಿಕ್ಷಾಟನೆಗೆ ಕುರುಹುಗಳಾಗಿವೆ. ಶರಣರ ಭಿಕ್ಷೆ ಬೇರೆ; ಶಠರ ಭಿಕ್ಷೆ ಬೇರೆ. ಧರ್ಮದ ಹೆಸರಿನಿಂದ ಭಿಕ್ಷೆಬೇಡುವದೊಂದು ಈಗ ವ್ಯಾಪಾರವಾಗಿದೆ. ಅದು ಅವರ ಪರಂಪರೆಯಿಂದ ಬಂದ ಉದ್ಯೋಗ ಅಥವಾ ಧಾರ್ಮಿಕ ಅಧಿಕಾರವೆಂದು ಹೇಳಿಕೊಳ್ಳುತ್ತಾರೆ.

ಅಕ್ಕನವರ ವಚನಗಳಲ್ಲಿ ಇನ್ನೂ ಎಷ್ಟೋ ಸಾಮಾಜಿಕ ಸಂಗತಿಗಳು ಅಧಿಕವಾಗಿರಬಹುದು. ಅವುಗಳನ್ನೆಲ್ಲ ಇಲ್ಲಿ ತೋರಿಸಿಕೊಡಲು ಅವಕಾಶವಿಲ್ಲ. ಮತ್ತೆ ಅವರ ವಚನಗಳೆಲ್ಲ ಒಂದೇ ಕಡೆಗೆ ಸಿಕ್ಕುತ್ತಿಲ್ಲ.

ಆದುದರಿಂದ ಒಮ್ಮೆಲೇ ದೊರೆಯಬಹುದಾದ ಸಂಗತಿಗಳು ದೊರೆಯು ವದು ಕಷ್ಟಸಾಧ್ಯವಾಗಿದೆ.

ಸಮಾಜಕ್ಕೆ ನೀತಿಯೇ ತಳಹದಿ. ಅದು ಹೇಗೆ ಶುದ್ಧವಾಗಿರಬೇಕೆಂಬುದನ್ನು ಅವರು ಇಲ್ಲಿ ತೋರಿಸಿಕೊಟ್ಟಿದ್ದಾರೆ.

೧. ಸ್ತ್ರೀಯರಿಗೆ ಪಾತಿವ್ರತ್ಯವು ಭೂಷಣ—

"ನಿಮ್ಮ ಮಂಡೆಗೆ ಹೂವ ತಾಹೆನಲ್ಲದೆ ಹುಲ್ಲತಾರೆನು."

೧. ಸಾಮಾನ್ಯ ನೀತಿ ಮಾರ್ಗವು—

"ಅಯ್ಯಾ, ಸದಾಚಾರ, ಸದ್ಭಕ್ತಿ, ಸತ್ಕ್ರಿಯೆ, ಸಮ್ಯಜ್ಞಾನ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಭಕ್ತಭೇದ, ಸತ್ಪಾತ್ರ ದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ,......... ..ತಾ ಮಾಡುವ ಸತ್ಯಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷ, ತಾ ಕೊಟ್ಟುಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ಇಂತೀ ಮೂವತ್ತೆರಡು ಕಲೆಗಳ ಸದ್ಗುರು ಮುಖದಿಂದರಿದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳೆಲ್ಲ ನಿರಾಭಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ.

ಇದು ಉಳಿದ ಆವ ಧರ್ಮದಲ್ಲಿ ಹೇಳಿದ ನೀತಿಮಾರ್ಗಕ್ಕೂ ಕಡಿಮೆಯುದಾಗಿಲ್ಲ.

೩. ನೀತಿಮಾರ್ಗದಲ್ಲಿ ಆತ್ಮಶುದ್ಧಿಗೆ ಮಹತ್ವದ ಸ್ಥಾನವು ದೊರೆತಿದೆ.

"ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು. ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು. ಹದುಳಿಗರಿಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು. ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು. ಭಾವಶುದ್ಧವಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು.........ತ್ರಿಕರಣಶುದ್ಧವಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು. ಹೃದಯಕಮಲ ಶುದ್ಧವಲ್ಲದವರಲ್ಲಿ ಇರಲೊಲ್ಲೆಯಯ್ಯ ನೀನು."

ಎಂಬ ವಚನವು ಮನೋಹರವಾಗಿ ಹೃದಯಸ್ಪರ್ಶಿಯಾಗಿರುವದರಿಂದ ಕಾಂತಾಸಮ್ಮಿತ ಉಕ್ತಿಯಾಗಿದೆ. ಎಲ್ಲ ಹಿಂದೂ ಧರ್ಮಗಳಿಗೆ ದಯೆ ಅಹಿಂಸೆಗಳು ಬೀಜವಾಗಿವೆ. ಅದನ್ನೇ ಅಕ್ಕನವರು ಹೀಗೆ ಹೇಳಿದ್ದಾರೆ.

"ಜಾಲಗಾರನೊಬ್ಬ ಜಲವ ಹೊಕ್ಕು, ಶೋಧಿಸಿ, ಹಲವು ಪ್ರಾಣಿಯ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ ಮರಗುವಂತೆ ಅವಕೇಕೆ ಮರುಗನು?......... ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ. ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?"

೪. ಜ್ಞಾನಿಗಳೂ ನೀತಿಪರರಾಗಿರಬೇಕು.

"ಅರಿವು ಸಾಧ್ಯವಾಯಿತ್ತೆಂದು ಗುರುಲಿಂಗಜಂಗಮವ ಬಿಡಬಹುದೆ? ಸಂದು ಸಂಶಯವಳಿದು ಅಖಂಡಜ್ಞಾನವಾಯಿತ್ತೆಂದು ಪರಧನ ಪರಸ್ತ್ರೀಗಳುಪಬಹುದೆ? "ಯತ್ರ ಜೀವಸ್ತತ್ರ ಶಿವಃ" ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕಸೂಕರ ಕುಕ್ಕುಟ ಮಾರ್ಜಾಲಗಳ ಕೂಡಿ ಭುಂಜಿಸಬಹುದೆ? ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು. ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವುದು. ಹೀಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ಮೀರಿ ನುಡಿದು ನಡೆದನಾದೊಡೆ ಶ್ವಾನನಗರ್ಭದಲ್ಲಿ ಹುಟ್ಟಿಸದೆ ಬಿಡುವನೇ ಚನ್ನಮಲ್ಲಿಕಾರ್ಜುನಯ್ಯನು?"

ಜ್ಞಾನಿಗಳು ಅನೀತಿಪರರಾದರೆ ಉಳಿದವರ ಪಾಡೇನು? ಮತ್ತು ಸ್ವಚ್ಛವಾದ ಬಿಳಿಯ ವಸ್ತ್ರದ ಮೇಲೆ ಸಣ್ಣ ಕಲೆಯು ಸಹ ಎದ್ದು ಕಾಣುವದು. ಜ್ಞಾನಿಗಳು ಜನಸಾಮಾನ್ಯಕ್ಕೆ ಮಾರ್ಗದರ್ಶಕರು. ಸಮಾಜದ ಕಟ್ಟುಗಳ ಸಂರಕ್ಷಕರು ಉದ್ಯಾನದ ಬೇಲಿಯಂತಹರು. ಅವರು ಈ ನೀತಿಗೆ ತಪ್ಪಿದರೆ ಬೇಲಿಯೇ ಹೊಲವನ್ನು ಮೇಯಹತ್ತಿದಂತಾಗುತ್ತದೆ.

ಶಿವಯೋಗದ ವಿಷಯಕವಾದ ಅಕ್ಕನವರ ಆದರ, ಅಭಿಮಾನ, ವಿಶ್ವಾಸಗಳು ವರ್ಣಿಸಲಸಾಧ್ಯವಾಗಿವೆ. ಇವು ಅವರ ವಚನಗಳಲ್ಲಿ ಆರಂಭದಿಂದ ಅಂತ್ಯದ ವರೆಗೆ ತುಂಬಿಕೊಂಡಿವೆ. ಅವರ ಶಿವಾನುಭವವೂ ಪರಮಾನಂದವೂ ವರ್ಣನಾತೀತವಾಗಿವೆ. ಆ ಆನಂದವನ್ನು ವರ್ಣಿಸಲಾಗದೆಂದು ತಾವೇ ಹೇಳುತ್ತಾರೆ.

"ಅಯ್ಯಾ, ನಿಮ್ಮ ಮಹಂತರ ಕೂಡಿದ ಸುಖವನು ಉಪಮೆಗೆ ತರಬಾರದಯ್ಯಾ."

"ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಮರಸವೆನ್ನೆ, ಆಯಿತೆನ್ನೆ, ಆಗದೆನ್ನೆ. ನೀನೆನ್ನೆ, ನಾನೆನ್ನೆ. ಚೆನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ."

"ಕನಸಿನಲ್ಲಿ ಮನಸಂಗವಾಗಿ, ಮನಸಿನಲ್ಲಿ ವೈಮರೆದು, ಸಂಗವಾಗಿರ್ದೆ, ಚೆನ್ನಮಲ್ಲಿಕಾರ್ಜುನನ ಕೂಡಿ ಕಣ್ದೆರೆದೆನು."

"ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ, ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು."

ಬಸವ, ಚೆನ್ನಬಸವ, ಪ್ರಭುದೇವ ಮುಂತಾದ ಶಿವಶರಣರು ಪುರಾತನರಲ್ಲಿ ಗಣನೆಗೊಂಡಿದ್ದಾರೆ. ಪುರಾತನರು ಅವತಾರಿಗಳೆಂದು ಪರಂಪರೆಯಿಂದ ನಂಬುತ್ತಬಂದಿನ್ನಂತೆ ಬಸವಾದಿ ಪ್ರಮಥರು ಅವತಾರಿಗಳೆಂದು ಅಕ್ಕನವರ ನಂಬುಗೆ. ಹರಿಹರಾಚಾರ್ಯರ ಅಭಿಪ್ರಾಯವೂ ಹಾಗೆಯೇ ಇದೆ. ಅವರು ಲಿಂಗದಿಂದುದಿಸಿ ಲಿಂಗದಲ್ಲಿಯೇ ಐಕ್ಯವಾಗುವರು.

"ಲಿಂಗದಿಂದುದಿಸಿ ಅಂಗವಿಡಿದಿಪ್ಪ ಪುರಾತನರ ಇಂಗಿತವನೇನೆಂದು ಬೆಸಗೊಂಬಿರಯ್ಯಾ? ಅವರ ನಡೆಯೇ ಆಗಮ, ಅವರ ನುಡಿಯೇ ವೇದ, ಅವರು ಲೋಕದ ಮಾನವರೆಂದೆನ್ನಬಹುದೇ?......ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು. ಮರಳಿ ಆ ಪುರಾತನರು ಲಿಂಗದೊಳಗೆ ಬೆರಸುವರು ನೋಡಿರಯ್ಯಾ. ಇಂತಪ್ಪ ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯಾ ಚನ್ನಮಲ್ಲಿಕಾರ್ಜುನಾ."

ಸತ್ಪುರುಷರು ಅವತಾರಿಗಳೆಂದು ಬಗೆಯುವ ರೂಢಿಯು ಹಿಂದುಗಳಲ್ಲಿ ಈಗಲೂ ಕಂಡುಬರುತ್ತಿದೆ. ಅವರ ಇಂತಹ ಭ್ರಮೆಯಿಂದ ಧೂರ್ತರರು ಅವರನ್ನು ಮೋಸಗೊಳಿಸುತ್ತ ಬಂದಿದ್ದಾರೆ, ಮತ್ತು ಮೋಸಗೊಳಿಸುತ್ತಾರೆ.

ಶರಣರಿಗೆ ಶರಣೆಂದು ತಾವು ಮುಕ್ತಿ ಪಡೆದುದನ್ನು ಅಕ್ಕನವರು ಮೇಲಿನ ವಚನದ ಅಂತ್ಯದಲ್ಲಿ ಹೇಳಿದ್ದಾರೆ. ಅದೇ ಸಂಗತಿಯು ಮತ್ತೆ ಕೆಲವು ವಚನಗಳಲ್ಲಿ ಕಂಡುಬರುತ್ತಿದೆ.

"ಬಸವಣ್ಣಾ, ನಿಮ್ಮಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು. ಅಯ್ಯ ಬಸವಣ್ಣಾ, ನಿಮ್ಮ ಮನದ ಸುಜ್ಞಾನವ ಕಂಡು ಎನಗೆ

ಜಂಗಮ ಸಂಬಂಧವಾಯಿತ್ತು. ಅಯ್ಯ ಬಸವಣ್ಣ, ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು.

"ಕಾಮನ ಗೆಲಿದೆನು, ಬಸವಾ, ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು, ಬಸವಾ, ನಿಮ್ಮ ಕೃಪೆಯಿಂದ......ಬಸವಾ, ನಿಮ್ಮ ದಯದಿಂದ ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡಕನಿಕ್ಕಿ ಎರಡುವರಿಯದೆ ಕೂಡಿದೆನು, ಬಸವಾ, ನಿಮ್ಮ ಕೃಪೆಯಿಂದ.

"ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರ ಕರಣ ಪ್ರಸಾದವೆನಗಾಯಿತ್ತು. ಚೆನ್ನಮಲ್ಲಿಕಾರ್ಜುನಯ್ಯ."

"ಮಾಟಕೂಟ ಬಸವಣ್ಣಗಾಯಿತ್ತು. ನೋಟಕೂಟ ಪ್ರಭುದೇವರಿಗಾಯಿತ್ತು. ಭಾವಕೂಟ ಅಜಗಣ್ಣಂಗಾಯಿತ್ತು. ಸ್ನೇಹಕೂಟ ಬಾಚಿರಾಜಂಗಾಯಿತ್ತು. ಇವರೆಲ್ಲರ ಕೂಟ ಚೆನ್ನಬಸವಣ್ಣಂಗಾಯಿತ್ತು. ಎನಗಿನ್ನಾವ ಕೂಟವಿಲ್ಲಯ್ಯ ಚೆನ್ನಮಲ್ಲಿಕಾರ್ಜುನಯ್ಯ.

"ಮಾಟಕೂಟದಲ್ಲಿ ಬಸವಣ್ಣನಿಲ್ಲ. ನೋಟಕೂಟದಲ್ಲಿ ಪ್ರಭುದೇವರಿಲ್ಲ. ಭಾವಕೂಟದಲ್ಲಿ ಅಜಗಣ್ಣನಿಲ್ಲ. ಸ್ನೇಹಕೂಟದಲ್ಲಿ ಬಾಚಿರಾಜನಿಲ್ಲ. ಇವರೆಲ್ಲರ ಕೂಟದಲ್ಲಿ ಚೆನ್ನಬಸವಣ್ಣನಿಲ್ಲ. ಎನಗಿನ್ನಿದೇನಯ್ಯ ಚೆನ್ನಮಲ್ಲಿಕಾರ್ಜುನಯ್ಯ ?

ಶಿವಭಕ್ತರೂ ಶಿವಶರಣರೂ ತಮ್ಮ ಬಂಧುಬಳಗದವರೆಂದು ಅಭಿಮಾನದಿಂದ ಹೇಳುವ ವಚನವಿದು.

"ಎನ್ನಂತೆ ಪುಣ್ಯಗೈದವರುಂಟೇ? ಎನ್ನಂತೆ ಭಾಗ್ಯಗೆಯ್ದವರುಂಟೇ? ಕಿನ್ನರರಂತಪ್ಪ ಸಹೋದರರೆನಗೆ. ಏಳೇಳು ಜನ್ಮದಲಿ ಶಿವಭಕ್ತರೇ ಬಂಧುಗಳೆನಗೆ." ಇವರೆಲ್ಲರಲ್ಲಿ ಚೆನ್ನಬಸವಣ್ಣನಿಗೆ ಅಗ್ರಸ್ಥಾನವನ್ನು ಕೊಟ್ಟಿರುವದರಿಂದ "ಇವರೆಲ್ಲರ ಕೂಟ ಚೆನ್ನಬಸವಣ್ಣಂಗಾಯ್ತು;" ಇವರೆಲ್ಲರ ಕೂಟದಲ್ಲಿ ಚೆನ್ನಬಸವಣ್ಣನಿಲ್ಲ;"

ಮತ್ತು ಚೆನ್ನಬಸವಣ್ಣನವರು ಎಲ್ಲ ಶರಣರ ವಚನಗಳನ್ನು ತೂಗಿ ಅವುಗಳಿಗೆ ಯೋಗ್ಯಸ್ಥಾನವನ್ನು ಕೊಡುವ ಸಂದರ್ಭದಲ್ಲಿ

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಳ ಒಂದು ವಚನ ಕಾಣಾ ಸಿದ್ಧರಾಮಯ್ಯ."

ಎಂದಿರುವಾಗ ಒಮ್ಮೆಲೆ ಯಾರೂ "ಅಹೋ ರೂಪಂ ಅಹೋ ಧ್ವನಿಃ" ಎಂದು ನಿಷ್ಕರ್ಷೆ ಮಾಡಬಾರದು. ನಿಜವಾಗಿಯೂ ಪ್ರತಿಯೊಂದು ವಚನದಲ್ಲಿ ಅನುಭವವಿಲ್ಲದೆ ಅಕ್ಕನವರು ಮಾತಾಡುವದಿಲ್ಲ. ಅನುಭವದ ಸಂಗತಿಗಳನ್ನು ಹೇಳುತ್ತಾರೆಯೇ ಹೊರ್ತು ವ್ಯವಹಾರವನ್ನಲ್ಲ. ಆದುದರಿಂದ ಅವರ ಉಕ್ತಿಗಳು ಬಹಳ ಗೂಢವಾಗಿವೆ; ಗಾಢವಾಗಿವೆ. ಇದೊಂದೇ ಒಂದು ಸಂಗತಿಯಿಂದ ಅತ್ಯುಚ್ಚ ಸ್ಥಾನವು ದೊರೆತುದು. ಅದಾದರೂ ಚೆನ್ನಬಸವಣ್ಣನವರಂತಹ ಜ್ಞಾನಿಗಳಿಂದ ಅದನ್ನು ಯಾರಿಗೂ ನಿರಾಕರಿಸಲು ಬರುವಂತಿಲ್ಲ.

ಅಕ್ಕನವರಿಗೆ ಶಿವಶರಣರ ಸಹಾಯವಾದುದನ್ನು ಅವರು ತಾವೇ ಹೇಳಿಕೊಂಡು ವ್ಯವಹಾರದೃಷ್ಟಿಯಿಂದ ತಮ್ಮ ಕೃತಜ್ಞತೆಯನ್ನು ತೋರಿಸಿದಂತೆ (ಶರಣರಿಗೆ ಕೃತಜ್ಞತೆಯ ಬಯಕೆಯಿಲ್ಲ, ವ್ಯವಹಾರವಿಲ್ಲ.) ಅಕ್ಕನವರು ಅನ್ಯರಿಗೆ ಸಹಾಯವಾದುದನ್ನು ಅವರು ಹೇಳಿಕೊಂಡಿಲ್ಲ. ಅಥವಾ ಉಳಿದ ವಚನಕಾರರಾರೂ ಇದನ್ನು ತೋರಿಸಿಕೊಟ್ಟಿಲ್ಲ. ಆದುದರಿಂದ ವ್ಯವಹಾರ ದೃಷ್ಟಿಯಿಂದ ಅಕ್ಕನವರ ಮೇಲೆ ಸ್ವಾರ್ಥಿಗಳೆಂದೊಂದು ಆರೋಪವನ್ನು ಹೊರಿಸಲು ಬರುವಂತಿದೆ. ಅವರಲ್ಲಿ ಅದನ್ನು ತಪ್ಪಿಸಬೇಕಾದರೆ ಸಂಶೋಧಕರು ಮುಂದೆ ಸರಿದು ಟೊಂಕಕಟ್ಟಿ ಸಂಶೋಧನ ಕಾರ್ಯಕ್ಕೆ ಸಿದ್ಧರಾಗಿ, ಆ ಆರೋಪದಿಂದ ಅಕ್ಕನವರನ್ನು ಮುಕ್ತಗೊಳಿಸಬೇಕು. ಅಕ್ಕನವರ ಅಗಾಧಜ್ಞಾನ, ದೃಢಭಕ್ತಿ, ಅನುಭವ ಮುಂತಾದ ಪಾರಲೌಕಿಕ ಸಾಧನಸಾಮುಗ್ರಿಗಳ ಸಹಾಯವು ಇತರರಿಗೆ ಆಗಿರದೆ ಹೋಗದು. ಇಂತಿ. ಶ.

ಟೀಪು:— ಮೇಲ್ಕಂಡ ಲೇಖವು "ದಿ ರಾಜಾರಾಮಿಯನ್" ಈ ಪತ್ರಿಕೆಯಲ್ಲಿ ಪ್ರಸಿದ್ಧವಾಗಿದ್ದು ಅದನ್ನು ಲೇಖಕರ ಒಪ್ಪಿಗೆಯಿಂದ ಇದರಲ್ಲಿ ಪ್ರಸಿದ್ಧಮಾಡಿದೆ.

# ಶೂನ್ಯಸಂಪಾದನೆಯು ರಹಸ್ಯ.

(ಲೇ— ಕಲ್ಯಾಣಪ್ಪ ಬ್ಯಾಳಿ, ಬಿ. ಏ. ವಿಜಾಪುರ.)

## ೧೦. ಸಿದ್ಧರಾಮಯ್ಯನ ಗುರುಕರುಣೆ.

ಶಿವಯೋಗಿ ಸಿದ್ಧರಾಮಗೆ
ಅವಿರಳ ಶಿವಲಿಂಗದೀಕ್ಷೆಯುಂ ಸಂತಸದಿಂ ।
ಭುವಿಯರಿಯೆ ಚೆನ್ನಬಸವಂ
ತವೆಗೆಯ್ದುದ ಪೇಳ್ವೆ ಶರಣಜನಮುದವೊಂದಲ್ ॥

ಈ ಸಂಪಾದನೆಯಲ್ಲಿ ಶ್ರೀ ಸಿದ್ಧರಾಮಯ್ಯದೇವರಿಗೆ ಗುರುವಾದ ಚೆನ್ನಬಸವಣ್ಣನವರು ಶಿವಲಿಂಗ ದೀಕ್ಷೆಯನ್ನು ಮಾಡಿದ್ದರಿಂದ ಅದಕ್ಕೆ ಮೇಲಿನ ಹೆಸರು ಕೊಡಲ್ಪಟ್ಟಿದೆ. ಹಿಂದೆ ಪ್ರಭುದೇವರು "ಕರಸ್ಥಲದ ಲಿಂಗದ ನಿಜವನ್ನು ಬಸವರಾಜ ದೇವರಿಂದ ಹೇಳಿಸಿಹೆನೆಂದು" ಸಿದ್ಧರಾಮೇಶ್ವರನನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದುದು ಇನೆಯ ಸಂಪಾದನೆಯಲ್ಲಿ ವರ್ಣಿತವಾಗಿರುವದಷ್ಟೇ. ಈಗ ಸಿದ್ಧರಾಮಯ್ಯ ದೇವರು ಪ್ರಭುದೇವರಿಗೆ ಹಿಂದಿನ ಪ್ರಸ್ತಾಪವನ್ನು ನೆನಪು ಮಾಡಿಕೊಟ್ಟರು. ಆ ವಿಷಯವನ್ನು ಪ್ರಭುದೇವರು ಬಸವಾದಿ ಪ್ರಮಥರ ಮುಂದಿಟ್ಟರು. ಸಿದ್ಧರಾಮಯ್ಯ ದೇವರಿಗೆ ಇಷ್ಟಲಿಂಗವಿಲ್ಲದ್ದನ್ನು ಕಂಡು ಬಸವಣ್ಣನವರು "ಅಂಗ ಲಿಂಗ ಸಂಬಂಧವಿಲ್ಲದಿದ್ದರೆ ಎನ್ನ ಮನ ಸೊಗಸದಯ್ಯಾ" ಎಂದು ಅಪ್ಪಣೆ ಕೊಡಿಸಿದರು. ಅಲ್ಲಿ ನೆರೆದ ಏಳುನೂರೆಪ್ಪತ್ತು ಗಣಂಗಳೆಲ್ಲ ಬಸವೇಶ್ವರನ ಮಾತನ್ನೇ ಎತ್ತಿ ಹಿಡಿದು ಮಾತನಾಡಿದರು. ಸಿದ್ಧರಾಮೇಶ್ವರನೇನೂ ಸಾಮಾನ್ಯ ಮನುಷ್ಯನಿದ್ದಿಲ್ಲ. ಆತನು ಮೊದಲು ಶುದ್ಧ ಶೈವನಾಗಿದ್ದನು. ಯೋಗಸಾಧನೆಯ ಕೊನೆಯ ತುದಿಯನ್ನು ಮುಟ್ಟಿದ್ದನು. ಯೋಗಸಮಾಧಿಯಿಂದ ಚಿದಾನಂದವನ್ನು ಹೊಂದಿ ಸುಖಿಸಿದ್ದನು. ಇಂಥ ಸಿದ್ಧರಾಮ ಶಿವಯೋಗಿಯು ಈಗ ಯೋಗಿಗೂ ಜ್ಞಾನಿಗೂ ಇಷ್ಟಲಿಂಗ ಸಂಬಂಧವೇ ಬೇಡವೆಂದು ಅನೇಕ ವಚನಗಳಿಂದ ಸುಸಂಗತವಾಗಿ ವಿಶದ ಪಡಿಸಿದನು. ಆದರೆ ಷಟಸ್ಥಲ ಜ್ಞಾನಿಯಾದ ಚೆನ್ನಬಸವಣ್ಣನೆದುರಿಗೆ ಆತನ ಆಟ ನಡೆಯಲಿಲ್ಲ. ಕಡೆಗೆ ವಾದದಲ್ಲಿ ಸೋತು ಬಸವಾದಿ ಪ್ರಮಥರ ಭಕ್ತಿ ಮಾರ್ಗಕ್ಕೆ ಆತನು

“ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಳ ಒಂದು ವಚನ ಕಾಣಾ ಸಿದ್ಧರಾಮಯ್ಯ.”

ಎಂದಿರುವಾಗ ಒಮ್ಮೆಲೆ ಯಾರೂ “ಅಹೋ ರೂಪಂ ಅಹೋ ಧ್ವನಿಃ” ಎಂದು ನಿಷ್ಕರ್ಷೆ ಮಾಡಬಾರದು. ನಿಜವಾಗಿಯೂ ಪ್ರತಿಯೊಂದು ವಚನದಲ್ಲಿ ಅನುಭವವಿಲ್ಲದೆ ಅಕ್ಕನವರು ಮಾತಾಡುವದಿಲ್ಲ. ಅನುಭವದ ಸಂಗತಿಗಳನ್ನು ಹೇಳುತ್ತಾರೆಯೇ ಹೊರ್ತು ವ್ಯವಹಾರವನ್ನಲ್ಲ. ಆದುದರಿಂದ ಅವರ ಉಕ್ತಿಗಳು ಬಹಳ ಗೂಢವಾಗಿವೆ; ಗಾಢವಾಗಿವೆ. ಇದೊಂದೇ ಒಂದು ಸಂಗತಿಯಿಂದ ಅತ್ಯುಚ್ಚ ಸ್ಥಾನವು ದೊರೆತುದು. ಅದಾದರೂ ಚೆನ್ನಬಸವಣ್ಣನವರಂತಹ ಜ್ಞಾನಿಗಳಿಂದ ಅದನ್ನು ಯಾರಿಗೂ ನಿರಾಕರಿಸಲು ಬರುವಂತಿಲ್ಲ.

ಅಕ್ಕನವರಿಗೆ ಶಿವಶರಣರ ಸಹಾಯವಾದುದನ್ನು ಅವರು ತಾವೇ ಹೇಳಿಕೊಂಡು ವ್ಯವಹಾರದೃಷ್ಟಿಯಿಂದ ತಮ್ಮ ಕೃತಜ್ಞತೆಯನ್ನು ತೋರಿಸಿದಂತೆ (ಶರಣರಿಗೆ ಕೃತಜ್ಞತೆಯ ಬಯಕೆಯಿಲ್ಲ, ವ್ಯವಹಾರವಿಲ್ಲ.) ಅಕ್ಕನವರು ಅನ್ಯರಿಗೆ ಸಹಾಯವಾದುದನ್ನು ಅವರು ಹೇಳಿಕೊಂಡಿಲ್ಲ. ಅಥವಾ ಉಳಿದ ವಚನಕಾರರಾರೂ ಇದನ್ನು ತೋರಿಸಿಕೊಟ್ಟಿಲ್ಲ. ಆದುದರಿಂದ ವ್ಯವಹಾರ ದೃಷ್ಟಿಯಿಂದ ಅಕ್ಕನವರ ಮೇಲೆ ಸ್ವಾರ್ಥಿಗಳೆಂದೊಂದು ಆರೋಪವನ್ನು ಹೊರಿಸಲು ಬರುವಂತಿದೆ. ಅವರಲ್ಲಿ ಆದನ್ನು ತಪ್ಪಿಸಬೇಕಾದರೆ ಸಂಶೋಧಕರು ಮುಂದೆ ಸರಿದು ಟೊಂಕಕಟ್ಟಿ ಸಂಶೋಧನ ಕಾರ್ಯಕ್ಕೆ ಸಿದ್ಧರಾಗಿ, ಆ ಆರೋಪದಿಂದ ಅಕ್ಕನವರನ್ನು ಮುಕ್ತಗೊಳಿಸಬೇಕು. ಅಕ್ಕನವರ ಅಗಾಧಜ್ಞಾನ, ದೃಢಭಕ್ತಿ, ಅನುಭವ ಮುಂತಾದ ಪಾರಲೌಕಿಕ ಸಾಧನಸಾಮುಗ್ರಿಗಳ ಸಹಾಯವು ಇತರರಿಗೆ ಆಗಿರದೆ ಹೋಗದು. ಇಂತಿ. ಶ.

ಟೀಪುಃ— ಮೇಲ್ಕಂಡ ಲೇಖವು “ದಿ ರಾಜಾರಾಮಿಯನ್” ಈ ಪತ್ರಿಕೆಯಲ್ಲಿ ಪ್ರಸಿದ್ಧವಾಗಿದ್ದು ಅದನ್ನು ಲೇಖಕರ ಒಪ್ಪಿಗೆಯಿಂದ ಇದರಲ್ಲಿ ಪ್ರಸಿದ್ಧಮಾಡಿದೆ.

# ಶೂನ್ಯಸಂಪಾದನೆಯ ರಹಸ್ಯ.

(ಲೇ— ಕಲ್ಯಾಣಪ್ಪ ಬ್ಯಾಳಿ, ಬಿ. ಏ. ವಿಜಾಪುರ.)

## ೧೧. ಸಿದ್ಧರಾಮಯ್ಯನ ಗುರುಕರುಣೆ.

ಶಿವಯೋಗಿ ಸಿದ್ಧರಾಮಗೆ
ಅವಿರಳ ಶಿವಲಿಂಗದೀಕ್ಷೆಯಂ ಸಂತಸದಿಂ।
ಭುವಿಯರಿಯೆ ಚೆನ್ನಬಸವಂ
ತವೆಗೆಯ್ದುದ ಪೇಳ್ವೆ ಶರಣಜನಮುದವೊಂದಲ್ ॥

ಈ ಸಂಪಾದನೆಯಲ್ಲಿ ಶ್ರೀ ಸಿದ್ಧರಾಮಯ್ಯದೇವರಿಗೆ ಗುರುವಾದ ಚೆನ್ನಬಸವಣ್ಣನವರು ಶಿವಲಿಂಗ ದೀಕ್ಷೆಯನ್ನು ಮಾಡಿದ್ದರಿಂದ ಅದಕ್ಕೆ ಮೇಲಿನ ಹೆಸರು ಕೊಡಲ್ಪಟ್ಟಿದೆ. ಹಿಂದೆ ಪ್ರಭುದೇವರು "ಕರಸ್ಥಲದ ಲಿಂಗದ ನಿಜವನ್ನು ಬಸವರಾಜ ದೇವರಿಂದ ಹೇಳಿಸಿಹೆನೆಂದು" ಸಿದ್ಧ ರಾಮೇಶ್ವರನನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದುದು ಹಿನೆಯ ಸಂಪಾದನೆಯಲ್ಲಿ ವರ್ಣಿತವಾಗಿರುವದಷ್ಟೇ. ಈಗ ಸಿದ್ಧರಾಮಯ್ಯ ದೇವರು ಪ್ರಭುದೇವರಿಗೆ ಹಿಂದಿನ ಪ್ರಸ್ತಾಪವನ್ನು ನೆನಪು ಮಾಡಿಕೊಟ್ಟರು. ಆ ವಿಷಯವನ್ನು ಪ್ರಭುದೇವರು ಬಸವಾದಿ ಪ್ರಮಥರ ಮುಂದಿಟ್ಟರು. ಸಿದ್ಧರಾಮಯ್ಯ ದೇವರಿಗೆ ಇಷ್ಟಲಿಂಗವಿಲ್ಲದ್ದನ್ನು ಕಂಡು ಬಸವಣ್ಣನವರು "ಅಂಗ ಲಿಂಗ ಸಂಬಂಧವಿಲ್ಲದಿದ್ದರೆ ಎನ್ನ ಮನ ಸೊಗಸದಯ್ಯಾ" ಎಂದು ಅಪ್ಪಣೆ ಕೊಡಿಸಿದರು. ಅಲ್ಲಿ ನೆರೆದ ಏಳುನೂರೆಪ್ಪತ್ತು ಗಣಂಗಳೆಲ್ಲ ಬಸವೇಶ್ವರನ ಮಾತನ್ನೇ ಎತ್ತಿ ಹಿಡಿದು ಮಾತನಾಡಿದರು. ಸಿದ್ಧರಾಮೇಶ್ವರನೇನೂ ಸಾಮಾನ್ಯ ಮನುಷ್ಯನಿದ್ದಿಲ್ಲ. ಆತನು ಮೊದಲು ಶುದ್ಧ ಶೈವನಾಗಿದ್ದನು. ಯೋಗಸಾಧನೆಯ ಕೊನೆಯ ತುದಿಯನ್ನು ಮುಟ್ಟಿದ್ದನು. ಯೋಗಸಮಾಧಿಯಿಂದ ಚಿದಾನಂದವನ್ನು ಹೊಂದಿ ಸುಖಿಸಿದ್ದನು. ಇಂಥ ಸಿದ್ಧರಾಮ ಶಿವಯೋಗಿಯು ಈಗ ಯೋಗಿಗೂ ಜ್ಞಾನಿಗೂ ಇಷ್ಟಲಿಂಗ ಸಂಬಂಧವೇ ಬೇಡವೆಂದು ಅನೇಕ ವಚನಗಳಿಂದ ಸುಸಂಗತವಾಗಿ ವಿಶದ ಪಡಿಸಿದನು. ಆದರೆ ಷಟ್‌ಸ್ಥಲ ಜ್ಞಾನಿಯಾದ ಚೆನ್ನಬಸವಣ್ಣನೆದುರಿಗೆ ಆತನ ಆಟ ನಡೆಯಲಿಲ್ಲ. ಕಡೆಗೆ ವಾದದಲ್ಲಿ ಸೋತು ಬಸವಾದಿ ಪ್ರಮಥರ ಭಕ್ತಿ ಮಾರ್ಗಕ್ಕೆ ಆತನು

ತಲೆಬಾಗಲೇ ಬೇಕಾಯಿತು. ಆಗ ಪ್ರಭುವಿನ ಅಪ್ಪಣೆಯ ಮೇರೆಗೆ ಚನ್ನಬಸವೇಶ್ವರನು ಸಿದ್ಧರಾಮ ಶಿವಯೋಗಿಗೆ ೨೧ ದೀಕ್ಷೆಗಳಿಂದ ಇಷ್ಟ ಲಿಂಗಧಾರಣ ಮಾಡಿ ಆತನನ್ನು ವೀರಶೈವನನ್ನಾಗಿ ಮಾಡಿದನು. ಈಗಿನ ಸೊಲ್ಲಾಪುರದ ಸಿದ್ಧರಾಮೇಶ್ವರನ ದೇವಾಲಯವು ಆ ಮಹಿಮನ ಘನ ತೆಯನ್ನೂ ಪೂಜ್ಯತೆಯನ್ನೂ ತೋರಿಸುವ ಕುರುಹಾಗಿದೆ.

ಎಲ್ಲ ಸಂಪಾದನೆಗಳಲ್ಲಿ ಈ ಸಂಪಾದನೆಯು ಅತ್ಯಂತ ಮಹತ್ವ ದ್ದಾಗಿದೆ. ಇದರಲ್ಲಿ ವೀರಶೈವ ಧರ್ಮದ ರಹಸ್ಯವೇ ಅಡಕವಾಗಿದೆ. ನಮ್ಮ ಶಿವಶರಣರು ಯೋಗ ಸಾಂಖ್ಯ ಮಾರ್ಗಗಳನ್ನು ನಿರಾಕರಿಸಿ ಭಕ್ತಿ ಮಾರ್ಗಕ್ಕೇನೇ ಹೆಚ್ಚು ಮಹತ್ವಕೊಟ್ಟದ್ದು ಈ ಸಂಪಾದನೆಯಲ್ಲಿ ಸ್ಪಷ್ಟ ವ್ಯಕ್ತವಾಗುತ್ತದೆ. ವೀರಶೈವರಿಗೆ ಭಕ್ತಿಯೇ ಪ್ರಾಮುಖ್ಯ. ಯೋಗ ಜ್ಞಾನಗಳು ಗೌಣವಾದವುಗಳು. ಭಕ್ತಿಯಲ್ಲಿಯೇ ನಮ್ಮವರು ಯೋಗ ಜ್ಞಾನಗಳನ್ನು ಅಡಗಿಸಿಬಿಟ್ಟಿದ್ದಾರೆ. ಭಕ್ತಿಯ ಕುರುಹೇ ಕಾಯದ ಕರ ಸ್ಥಲದಲ್ಲಿದ್ದ ಇಷ್ಟಲಿಂಗವು. ಸಾಕಾರದಲ್ಲಿ ಭಕ್ತಿಯನ್ನಿರಿಸದೆ ನಿರಾಕಾರ ವಾದ ಜ್ಞಾನವು ಲಭಿಸದು. ಭಕ್ತಿಯಿಲ್ಲದೆ ಯಮನಿಯಮಾದಿ ಅಷ್ಟಾಂಗ ಯೋಗಗಳ ಬಲದಿಂದ ರಸಭರಿತವಾದ ಆನಂದವು ದೊರಕೊಳ್ಳದು. ನಮ್ಮಲ್ಲಿ ಭಕ್ತಿಯೇ ಯೋಗಜ್ಞಾನಗಳ ತಳಹದಿಯು. ನಮ್ಮವರ ಯೋಗವು ಯೋಗಾಭ್ಯಾಸದಿಂದುಂಟಾದುದಲ್ಲ; ಇಷ್ಟಲಿಂಗದಲ್ಲಿರಿಸಿದ ಭಕ್ತಿಯಿಂ ದುಂಟಾದ ಸಮರಸಭಾವವು. ಇದಕ್ಕೇ ಶಿವಯೋಗವೆಂದೆನ್ನುವರು. ಶಿವಯೋಗವೆಂದರೆ ಲಿಂಗದಲ್ಲಿ ತಲ್ಲೀನತೆ, ತಾದಾತ್ಮ್ಯಭಾವ, ಅಥವಾ ಪರವಶತೆಯನ್ನು ಹೊಂದುವಿಕೆಯು. ನಮ್ಮವರ ಜ್ಞಾನವು ಬುದ್ಧಿಯ ಒರೆಗಲ್ಲಿಗೆ ಹಚ್ಚಿ ಪ್ರಮಾಣಗಳಿಂದ ಸಿದ್ಧವಾದುದಲ್ಲ. ಅಂಥ ಜ್ಞಾನವು ಅದ್ವೈತ ಮತಕ್ಕೆ ಸಂಬಂಧಿಸಿದ್ದಾಗಿದೆ. ನಮ್ಮವರ ಜ್ಞಾನವು ವರಕವಿಗೆ ಸ್ಫುರಣವಾದ ಪ್ರತಿಭೆಯಂತೆ. ಭಕ್ತಿಯ ಅತಿರೇಕದಿಂದ ಸ್ವಯಂಸ್ಫೂರ್ತಿ ಹೊಂದಿದ ದಿವ್ಯಶಕ್ತಿಯಾಗಿರುತ್ತದೆ. ನಮ್ಮ ಇಷ್ಟ ಪ್ರಾಣ ಭಾವಲಿಂಗ ಗಳು ಕ್ರಮವಾಗಿ ಭಕ್ತಿಯೋಗ ಜ್ಞಾನಗಳ ಕುರುಹುಗಳಾಗಿವೆ. ಸಾಕಾ ರವಾದ ಇಷ್ಟಲಿಂಗವಿಡಿದೇ ಮನೋಲಯವಾಗುವದು. ಪ್ರಾಣಲಿಂಗಾ ನುಸಂಧಾನವು. ಇದೇ ಯೋಗವು. ಆ ಪ್ರಾಣಲಿಂಗಾನುಸಂಧಾನದಿಂದ ನಮ್ಮ ಮನಸ್ಸಿಗೆ ಹೊಳೆದ ದಿವ್ಯ ಜ್ಯೋತಿಯೇ ಜ್ಞಾನವು. ಇದೇ ಭಾವಲಿಗಂವು.

ಸಿದ್ಧರಾಮಶಿವಯೋಗಿಯು ಮೊದಲು ಯೋಗಮಾರ್ಗದವನು. ಅದರಂತೆ ಪ್ರಭುವು ಶುದ್ಧ ಸಾಂಖ್ಯಮಾರ್ಗದವನು. ಇಬ್ಬರೂ ಭಕ್ತಿ ಮಾರ್ಗದವರಾಗಿದ್ದಿಲ್ಲ. ಅನಿಮಿಷದೇವರಿಂದ ಪ್ರಭುವಿಗೆ ಇಷ್ಟಲಿಂಗಧಾರಣೆಯಾಗಿದ್ದರೂ ಭಕ್ತಿಯ ಗುಟ್ಟು ಅವರಲ್ಲಿ ಚನ್ನಾಗಿ ಅಳವಟ್ಟಿದ್ದಿಲ್ಲ. ಅಂತೆಯೇ ಅವರು ಸಿದ್ಧರಾಮಯ್ಯನೊಂದಿಗೆ ಭಕ್ತಿಯ ಭಿಕ್ಷೆಯನ್ನು ಹೊಂದುವದಕ್ಕಾಗಿ ಶ್ರೀ ಬಸವೇಶ್ವರನ ಬಳಿಗೆ ಕಲ್ಯಾಣಕ್ಕೆ ಬಿಜಯಂಗೈದರು. ಹಿಂದಕ್ಕೆ ಸಿದ್ಧರಾಮಯ್ಯನಿಗೂ ಪ್ರಭುವಿಗೂ ವಾದ ನಡೆದಾಗ ಪ್ರಭುವು ಯೋಗಮಾರ್ಗವನ್ನು ಧಿಕ್ಕರಿಸಿ ಜ್ಞಾನಮಾರ್ಗದ ರಹಸ್ಯವನ್ನು ಸಿದ್ಧರಾಮಯ್ಯ ದೇವರಿಗೆ ತೋರಿಸಿಕೊಟ್ಟನು. ಜ್ಞಾನಮಾರ್ಗದಲ್ಲಿ ಬಲ್ಲಿದನಾದ ಪ್ರಭುವು ಯೋಗಮಾರ್ಗಾವಲಂಬಿಯಾದ ಸಿದ್ದರಾಮಯ್ಯದೇವರನ್ನು ವಾದದಲ್ಲಿ ಸೋಲಿಸಿದನೇನೋ ನಿಜ. ಆದರೆ ಅದೇ ಸಿದ್ಧರಾಮಯ್ಯದೇವರು ಪ್ರಭುವಿಗೆ "ನಿಮ್ಮ ಕಾಯವಿಡಿದಿಪ್ಪ ಕರಸ್ಥಲದ ಕಾರಣವ ಹೇಳಾ ಪ್ರಭುವೇ, ಕಪಿಲಸಿದ್ಧ ಮಲ್ಲಿಕಾರ್ಜುನಾ" ಎಂದು ಪ್ರಶ್ನೆಮಾಡಲು ಪ್ರಭುವು ಅದನ್ನು ಹೇಳಲಸಮರ್ಥನಾಗಿ "ಈ ಕಾಯದ ಕರಸ್ಥಲದ ಅನುವನು ಗುಹೇಶ್ವರನ ಶರಣ ಸಂಗನಬಸವಣ್ಣ ಬಲ್ಲ. ಬೆಸಗೊಂಬ ಬಾರಾ ಸಿದ್ಧರಾಮಯ್ಯ" ಎಂದು ಆತನನ್ನು ಕಲ್ಯಾಣಕ್ಕೆ ಕರೆದೊಯ್ದನು. ನಮ್ಮಲ್ಲಿ ಸಿದ್ಧರಾಮೇಶ್ವರ ಹಾಗೂ ಅಕ್ಕಮಹಾದೇವಿಯು ಯೋಗಮಾರ್ಗದವರು. ಪ್ರಭುದೇವ ಚನ್ನಬಸವಣ್ಣನವರು ಜ್ಞಾನಮಾರ್ಗದವರು. ಬಸವೇಶನೂ ಆತನ ಅನುಯಾಯಿಗಳಾದ ಅಸಂಖ್ಯಾತ ಪ್ರಮಥರೂ ಭಕ್ತಿಮಾರ್ಗದವರು. ಬಸವೇಶ್ವರನಿಂದ ಭಕ್ತಿಯ ಭಿಕ್ಷೆಯನ್ನು ಹೊಂದಿದ ಬಳಿಕ ಅವರೆಲ್ಲ ತಮ್ಮ ಯೋಗ ಹಾಗೂ ಜ್ಞಾನದ ದಿಶೆಯನ್ನು ಭಕ್ತಿಯ ಕಡೆಗೆ ಹೊರಳಿಸಿ ಭಕ್ತಿಯೆಂಬ ಬೆಂಕಿಯಲ್ಲಿ ತಮ್ಮ ಯೋಗ ಜ್ಞಾನಗಳನ್ನು ಪುಟಹಾಕಿದರು.

ನಮ್ಮ ಅಸಂಖ್ಯಾತ ಪ್ರಮಥರೆಲ್ಲ ಯಮ, ನಿಯಮ, ಆಸನ, ಪ್ರಾಣಾಯಾಮಾದಿಗಳಿಂದ ಸಾಧಿಸುವ ಯೋಗಮಾರ್ಗವನ್ನು ನಿರಸನಗೊಳಿಸಿದರು. 'ಶ್ರುತಿ ಚಕಿತಮಭಿದತ್ತೇ' ಎಂದು ಹೇಳಿ ಸಾಂಖ್ಯಮಾರ್ಗವವನ್ನು ಅರ್ಥಾತ್ ಶುದ್ಧಾದ್ವೈತದ ಜ್ಞಾನಮಾರ್ಗವನ್ನು ನಿರಾಕರಿಸಿದರು. ಆದರೆ ಭಕ್ತಿಯ ಉಪಾಸನೆಗೆ ಸಾಧನವಾದ ಇಷ್ಟಲಿಂಗದ ಮಹತ್ವವನ್ನು ಅನೇಕ ತರಹದ ಉಪಮೆಗಳಿಂದಲೂ, ವಚನ ಪ್ರಾಚುರ್ಯದಿಂದಲೂ ಸಮರ್ಥನಗೊಳಿಸಿದರು. ಇಷ್ಟಲಿಂಗವನ್ನು ಯಾಕೆ

ಧರಿಸಬೇಕು, ಅದರ ಮಹತ್ವವೇನು, ಎಂದು ಅಡ್ಡತಿಡ್ಡ ಪ್ರಶ್ನೆಮಾಡು ವವರು ಈ ಸಂಪಾದನೆಯನ್ನು ಅವಶ್ಯವಾಗಿ ಓದಬೇಕು. ಅಂದರೆ ಅವರ ಶಂಕೆಗಳನ್ನೆಲ್ಲಾ ಬಹು ಸುಲಭವಾಗಿ ಬಿಡಿಸುವವು. ಈ ಸಂಪಾ ದನೆಯ ಸಾರವನ್ನು ಇದರಡಿಯಲ್ಲಿ ಸಂಕ್ಷಿಪ್ತವಾಗಿ ಕೊಡಲೆಳಿಸುತ್ತೇವೆ.

ಸಿದ್ಧರಾಮಯ್ಯ ದೇವರು ಪ್ರಭುದೇವರನ್ನು ಕುರಿತು "ಪ್ರಭುವೇ, ಕರಸ್ಥಲದ ಲಿಂಗದ ನಿಜವನ್ನು ಬಸವರಾಜದೇವರಿಂದ ಹೇಳಿಸಿಹೆನೆಂದು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿರಿ. ಅಯ್ಯಾ, ಕಾಯ ಲಿಂಗವೋ? ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೋ? ಪ್ರಾಣ ಲಿಂಗವೋ? ಪ್ರಾಣ ದಲ್ಲಿ ಸಾರಿಪ್ಪ ಲಿಂಗ ಲಿಂಗವೋ? ಜ್ಞಾನ ಲಿಂಗವೋ? ಜ್ಞಾನದ ಮೊನೆಯಲ್ಲಿ ಬೆಳಗುವ ಲಿಂಗ ಲಿಂಗವೋ? ಲಿಂಗ ಪ್ರಾಣ ಪ್ರಾಣ ಲಿಂಗವೆಂತೆಂಬುದನರಿಯೆನು. ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪದೇಶಿಸಿ ಕೃಪೆಯ ಮಾಡಾ ಕಪಿ ಲಸಿದ್ಧಮಲ್ಲಿಕಾರ್ಜುನಾ" ಎಂದು ಬೆಸಗೊಂಡರು.

ಈ ಮಾತಿಗೆ ಪ್ರಭುದೇವರು ಬಸವರಾಜದೇವರ ಕಡೆಗೆ ತಿರುಗಿ ಸಿದ್ಧರಾಮಯ್ಯನಿಗೆ ಉಪದೇಶ ಮಾಡಬೇಕೆಂದು ಬೇಡಿಕೊಳ್ಳಲು ಬಸ ವೇಶ್ವರರು "ಅಯ್ಯಾ ಪ್ರಭುವೇ, ಸಿದ್ಧರಾಮಯ್ಯದೇವರ ಅಂಗಲಿಂಗ ಸಂಬಂಧವಿಲ್ಲದಿದ್ದರೆ ಎನ್ನ ಮನ ಒಪ್ಪದು ನೋಡಾ. ಸಮಯ ವಿರು ದ್ಧಕ್ಕಂಜಿ ವಿನಯವ ನುಡಿಯೆ. ಕೊಂದರೆ ಕೊಲ್ಲು. ಕಾಯ್ದರೆ ಕಾಯಿ. ಸಿದ್ಧ ರಾಮಯ್ಯದೇವರು ಇಷ್ಟಲಿಂಗವಿಲ್ಲದೆ ಎನ್ನವರೆಂದರೆ ಎನ್ನ ಮನ ಸೊಗ ಸದು ನೋಡಾ ಕೂಡಲ ಸಂಗಮದೇವಾ" ಎಂದು ಅಪ್ಪಣೆ ಕೊಡಿಸಿದರು.

ಚನ್ನಬಸವದೇವರು ಅದೇ ಸಮಯಕ್ಕೆ ಅಂಗದ ಮೇಲೆ ಲಿಂಗ ವಿಲ್ಲದಿದ್ದರೆ ಪ್ರಾಣಲಿಂಗ ಸಂಬಂಧವಾಗದೆಂಬ ಮಾತನ್ನು ಈ ಪರಿಯಾಗಿ ಹೇಳಿದರು. "ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣಲಿಂಗದಲ್ಲಿ ಪರಿಣಾಮವನೆಯ್ದುವ ಪರಿಎಂತಯ್ಯಾ? ಅಂಗತ್ರಯವುಳ್ಳವರು ಲಿಂಗ ತ್ರಯ ಸಂಪನ್ನರಾಗಬೇಕು. ಒಂದಂಗ ವಿರಹಿತವಾದವರುಂಟೆ ಸಿದ್ಧ ರಾಮಯ್ಯ," ಎಂದುಸುರಿದರು.

ಅದಕ್ಕೆ ಸಿದ್ಧರಾಮಯ್ಯ ದೇವರು "ತನು ಮನ ಭಾವಗಳೆಂಬ ಅಂಗತ್ರಯಗಳು ಭಿನ್ನವೆಂದು ತಿಳಿದವರು ಲಿಂಗತ್ರಯ ಸಂಪನ್ನರಾಗ ಬೇಕೇನೋ ನಿಜ. ಆದರೆ ನನಗೆ ತನುಮನ ಭಾವಗಳು ಏಕಾರ್ಥ

ವಾಗಿರಲು ಯಾವ ತನುವಿನ ಮೇಲೆ ಇಷ್ಟಲಿಂಗವ ಧರಿಸಲಿ, ಎನ್ನ ಕಾಯವೇ ಬಸವಣ್ಣ, ಎನ್ನ ಪ್ರಾಣವೇ ಪ್ರಭುದೇವರು. ತನುವಿದ್ದು ತನುವಿಲ್ಲ. ಮನವಿದ್ದು ಮನವಿಲ್ಲ. ಭಾವವಿದ್ದು ಭಾವವಿಲ್ಲ. ನಾನು ಲಿಂಗನಿರ್ಲೇಪನೆಂದು ನಿಮ್ಮೆದುರಿಗೆ ನುಡಿದು ಹೇಳಬಾರದು ನೋಡಾ. ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಹೊರಗು ಒಳಗು ಎಂಬುದಿಲ್ಲ ಕಾಣಾ ಚೆನ್ನಬಸವಣ್ಣಾ ಎಂದು ಹೇಳಿದರು.

ಶ್ರೀಪ್ರಭುದೇವರು ಬುದ್ಧಿಪೂರ್ವಕವಾಗಿ ಸಿದ್ಧರಾಮಯ್ಯನ ಮಾತನ್ನೇ ಎತ್ತಿಹಿಡಿದು ನುಡಿದುದೇನೆಂದರೆ— "ಪರಬೊಮ್ಮವನರಿದ ಶರಣಂಗೆ ಶಿವ ಪೂಜೆಯ ಮಾಡುವ ದಂದುಗವೇಕೋ? ಒಲುಮೆಯ ಕೂಟಕ್ಕೆ ಹಾಸಿ ಗೆಯ ಹಂಗೇಕೋ? ಬೇಟದ ಮರುಳಿಂಗೆ ಲಜ್ಜೆಯಿನ್ನೇಕೋ? ಮಿಸು ನಿಯ ಚಿನ್ನಕ್ಕೆ ಒರೆಗಲ್ಲಿನ ಹಂಗೇಕೋ? ಗುಹೇಶ್ವರ ಲಿಂಗವು ಪ್ರಾಣ ವಾಗಿಪ್ಪ ಸಿದ್ಧರಾಮಯ್ಯ ದೇವರಿಗೆ ಕುರುಹು ಮತ್ತೇಕೋ? ಆಕಾ ಶವನಡರುವಂಗೆ ಅಟ್ಟಗೋಲ ಹಂಗೇಕೋ? ಸಮುದ್ರವ ಹಾರು ವಂಗೆ ಹರಗೋಲ ಹಂಗೇಕೋ? ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೋ, ಗುಹೇಶ್ವರ ಲಿಂಗದಲ್ಲಿ ನಿಸ್ಸೀಮನಾದ ಸಿದ್ಧ ರಾಮಯ್ಯಂಗೆ ಲಿಂಗದ ಹಂಗೇಕೆ ಹೇಳಾ ಚನ್ನಬಸವಣ್ಣಾ?"

ಚನ್ನಬಸವಣ್ಣನು ಈ ಪ್ರಶ್ನೆಗೆ ಸರಿಯಾಗಿ ಈ ಪ್ರಕಾರ ಉತ್ತರ ಕೊಟ್ಟನು. "ಆಕಾಶದಲ್ಲಾಡುವ ಪಟಕ್ಕಾದರೂ ಸೂತ್ರವಿರಬೇಕು. ಕಲಿ ಯಾದರೂ ಕೈದುವಿಲ್ಲದಾಗದು. ಭೂಮಿಯಿಲ್ಲದೆ ಬಂಡಿ ನಡೆಯುವ ದುಂಟೆ? ಅಂಗಕ್ಕೆ ಲಿಂಗ ಸಂಬಂಧವಿಲ್ಲದೆ ನಿಸ್ಸಂಗವಾಗಬಾರದು. ಕೂಡಲ ಚನ್ನಸಂಗಮದೇವರಲ್ಲಿ ಸಂಗವಿಲ್ಲದೆ ನಿಸ್ಸಂಗಿಯೆಂದು ನುಡಿಯ ಬಹುದೇ ಪ್ರಭುವೇ? ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ ಆ ವ್ಯೋ ಮದಲ್ಲಿ ನಿಲುವದಕ್ಕೆ ಎಡೆಯುಂಟೆ? ಮಣ್ಣುಮರವನುಳಿದು ತೋರುವ ಹಣ್ಣು ರುಚಿಯುಂಟೆ? ಪ್ರತ್ಯಕ್ಷ ನಮ್ಮ ಕೂಡಲಚನ್ನಸಂಗನ ಶರಣರೊ ಳಗಿರ್ದು ಸೀಮೆಯ ಮೀರಿದ ನಿಸ್ಸೀಮನೆಂಬ ಮಾತು ಒತ್ತಟ್ಟಗಿರಲಯ್ಯಾ ಪ್ರಭುವೇ?

ಅದಕ್ಕೆ ಪುನಃ ಪ್ರಭುವು ಸಿದ್ಧರಾಮಯ್ಯನ ಪಕ್ಷದಿಂದ "ಕಾಯವೇ ಸಕಲ. ಪ್ರಾಣವೇ ಸಕಲ ನಿಃಕಲ. ಭಾವವೇ ನಿಃಕಲ ಲಿಂಗವಾಗಿರು

ವಾಗ ಮತ್ತೆ ಬೇರೆ ಆಯತ, ಸ್ವಾಯತ, ಸನ್ನಿಹಿತವೆಂಬುದಿಲ್ಲ ನೋಡಾ. ಶಿವಶಕ್ತಿ ಸಂಬಂಧವೇ ದೇಹದೇಹಿಗಳಾಗಿರ್ದ ಬಳಿಕ ಗುಹೇಶ್ವರ ಲಿಂಗ ದಲ್ಲಿ ಬೇರೊಂದು ಕುರುಹ ಹಿಡಿದು ಅರಿಯಲೇಕಯ್ಯ ಚನ್ನಬಸವಣ್ಣಾ?" ಎಂದುಸುರಿದನು.

ಚನ್ನಬಸವೇಶ್ವರನು ಆ ಮಾತಿಗೆ "ಪ್ರಭುವೇ, ಬರೀ ಕಾಯವಷ್ಟೇ ಸಕಲ ಲಿಂಗವಲ್ಲ. ಆದರೆ ಆಚಾರವು ಅಂಗದ ಮೇಲೆ ಆಯತವಾ ದುದೇ ಇಷ್ಟಲಿಂಗ. ಆ ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗಸ್ವಾಯತ. ಪ್ರಾಣಲಿಂಗ ಉದಯಿಸಿದಲ್ಲದೆ ಭಾವಲಿಂಗವ ಕಾಣಬಾರದು. ತಿಳಿದುಪ್ಪಕ್ಕೆ ಗಟ್ಟಿದುಪ್ಪಕ್ಕೆ ಭೇದವುಂಟೆ? ದೀಪಕ್ಕೆ ದೀಪ್ತಿಗೆ ಭಿನ್ನವುಂಟೇ? ಆತ್ಮಕ್ಕೂ ದೇಹಕ್ಕೂ ಭೇದವಿರುವದೇ? ಕ್ಷೀರಕ್ಕೂ ಸ್ವಾದಕ್ಕೂ ಭಿನ್ನವಿಹುದೇ? ಅದು ಕಾರಣ ಸಾಕಾರವೇ ನಿರಾಕಾರವೆಂದರಿತು ಅಂಗಲಿಂಗಸಂಬಂಧ ವಿಲ್ಲದವರ ಸಂಗ ಭಂಗವೆಂದು ಕೂಡಲಸಂಗನ ಶರಣರು ಮೆಚ್ಚರಯ್ಯಾ ಪ್ರಭುವೇ" ಎಂದು ಅಪ್ಪಣೆಕೊಡಿಸಿದರು.

ಇದಲ್ಲದೆ ಅಲ್ಲಿ ನೆರೆದ ಸಮಸ್ತ ಗಣಂಗಳ ಕಡೆಗೆ ನೋಡಿ ಚನ್ನ ಬಸವಣ್ಣನವರು ಶ್ರುತಪಡಿಸಿದ್ದೇನಂದರೆ "ಸತಿಯ ಸಂಗವತಿಸುಖವೆಂದ ರಿದೊಡೇನು ಗಣಸಾಕ್ಷಿಯಾಗಿ ವಿವಾಹವಾಗದನ್ನಕ್ಕರ? ಕಣ್ಣು ಕಾಂಬು ದೆಂದೊಡೆ, ಕತ್ತಲೆಯಲ್ಲಿ ಕಾಂಬುದೆ ದೀಪವಿಲ್ಲದನ್ನಕ್ಕರ? ಅಂಗವ ಬಿಟ್ಟು ಆತ್ಮವುಂಟೆ? ಶಕ್ತಿಯ ಬಿಟ್ಟು ಶಿವನುಂಟೆ? ಇದು ಕಾರಣ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವಿರಲು ಇಷ್ಟ ಪ್ರಾಣ ಭಾವಗಳೆಂಬ ತ್ರಿವಿಧ ಲಿಂಗಸಂಬಂಧ ಬೇಡವೆಂದರೆ ಅಸಂಖ್ಯಾತ ಪ್ರಮಥಗಣಂಗಳೊ ಪ್ಪುವರೇ? ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಇಷ್ಟಲಿಂಗ ಸಂಬಂ ಧವಿಲ್ಲದವರ ಮುಖವ ನೋಡಲಾಗದಯ್ಯಾ ಪ್ರಭುವೇ"

ಇಷ್ಟಾದ ಮೇಲೆ ಅಲ್ಲಿ ಕೂಡಿದ ಪ್ರಮಥಗಣಂಗಳು ಒಬ್ಬೊಬ್ಬರೇ ಮುಂದೆ ಬಂದು ಈ ರೀತಿಯಾಗಿ ಇಷ್ಟಲಿಂಗದ ಮಹತ್ವವನ್ನು ಕುರಿತು ಮಾತನಾಡಿದರು.

೧ ಮೋಳಿಗೆಯ ಮಾರಯ್ಯ:— "ಗರಳವಿಲ್ಲದುರಗಂಗೆ ಹಲಬರಂ ಜಿದವರುಂಟೆ? ಕೈದುವಿಲ್ಲದ ಬಂಟ ಗರ್ಜಿಸಿದರೆ ಅಂಜಿದವರುಂಟೆ? ಇಷ್ಟ ಲಿಂಗವಿಲ್ಲದೆ ಪರವಸ್ತುವ ನೋಡಿಹೆನೆಂದರೆ ಪ್ರಾಣಲಿಂಗಿಯಪ್ಪನೆ? ತಿಲದ ಮರೆಯ ತೈಲವನರಿದು ಕಾಂಬುವಂತೆ, ಫಲದ ಮರೆಯ ರಸವ ಹಿಳಿದು

ರುಚಿಸುವಂತೆ, ಇಷ್ಟದ ಮರೆಯಲ್ಲಿರ್ದ ಪರವಸ್ತುವ ನಿಶ್ಚಯಿಸಿದಲ್ಲಿ ಪ್ರಾಣಲಿಂಗಿ ಸಂಬಂಧಿ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ."

೨ ದೇವರದಾಸಿಮಯ್ಯಗಳುಃ— "ಕರಸ್ಥಲದ ಜ್ಯೋತಿಯದು. ಕುರುಹಿಟ್ಟ ಎರಕವದು. ಅದರ ನೆಲೆ ತಿಳಿದರೆ ನಿಜಾನಂದವು ಕಾಣಾ ರಾಮನಾಥಾ."

೩ ಮೆರೆಮಿಂಡದೇವರುಃ— ಅಲಗು ಇರಿವಡೆ ಕರದಲ್ಲಿ ಪಿಡಿದಲ್ಲಾಗದು. ಮನವರಿವಡೆ ಕುರುಹಿನ ನೆರುಗೆಯಲ್ಲಿ ಸಲೆಸಂದು ನಿಂದಲ್ಲದಾಗದು. ಕ್ರಿಯಾನುಭಾವ ಶುದ್ಧವಾದಲ್ಲದೆ ರಾಮೇಶ್ವರ ಲಿಂಗವ ಕೂಡಬಾರದು.

೪ ಉರಿಲಿಂಗ ಪೆದ್ದಿಗಳುಃ— "ಸಾಕಾರವಿಡಿದು ಅರ್ಚನೆ ಪೂಜೆಯ ಮಾಡಬೇಕಲ್ಲದೆ ನಿರಾಕಾರವ ನಂಬಲಾಗದು. ಶ್ರೀಗುರುವು ಪ್ರಾಣ ಲಿಂಗವನು ಕರಸ್ಥಲಕೆ ಬಿಜಂಗೈಸಿ ಕೊಟ್ಟ ಬಳಿಕ ಬಯಲಲ್ಲಿ ಬೊಮ್ಮ ನರಸಲುಂಟೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ".

೫ ರಾಯಸದ ಮಂಚಣ್ಣಃ— "ಅರಿಕೆಯನರಿಯೆಂದು ಕುರುಹ ಕೊಟ್ಟರೆ ಆ ಕುರುಹ ಮರೆದು ಅರಿದೆನೆಂಬ ಕುರುಬನ ನೋಡಾ ಜಾಂಬೇಶ್ವರಾ".

೬ ಅಮುಗಿ ದೇವಯ್ಯಗಳುಃ—"ಜ್ಞಾನದಲ್ಲಿ ಅರಿದರೇನಯ್ಯಾ ಸತ್ಕ್ರಿಯಾಚಾರಿಯಾಗದನ್ನಕ್ಕರ? ನೆನೆದ ಮಾತ್ರದಲ್ಲಿ ಕಾಂಬುದೆ ಕಾಯದಲ್ಲಿಲ್ಲದೆ? ಕುರುಡ ಕಾಣ ಪಥವ. ಹೆಳವ ನಡಿಯಲರಿಯ. ಒಂದಿಲ್ಲದಿದ್ದರೆ ಒಂದಾಗದು. ಜ್ಞಾನವಿಲ್ಲದ ಕ್ರಿ ಜಡವು. ಕ್ರಿ ಇಲ್ಲದ ಜ್ಞಾನ ಭ್ರಾಂತಿ. ಇದುಕಾರಣ ಸಿದ್ಧಸೋಮನಾಥನಲ್ಲಿ ಎರಡೂ ಬೇಕು".

೭ ತೆಲಗು ಜೊಮ್ಮಯ್ಯಃ— "ಗುರು ಕಾರುಣ್ಯವ ಪಡೆದುವಕ್ಕೆ ಚಿಹ್ನವಾವುದೆಂದರೆ ಅಂಗದ ಮೇಲೆ ಲಿಂಗ ಸ್ವಾಯತವಾಗಿರಬೇಕು. ಅಂಗದ ಮೇಲೆ ಲಿಂಗಸ್ವಾಯತವಿಲ್ಲದೆ ಬರಿದೆ ಗುರುಕಾರುಣ್ಯವಾಯಿತ್ತೆಂದೊಡೆ ಅದೆಂತೊ? ಲಿಂಗಹೀನವಾಗಿ ಗುರುಕಾರುಣ್ಯವುಂಟೆ? ಇದು ಕಾರಣ ಲಿಂಗಧಾರಣವುಳ್ಳುದೇ ಸದಾಚಾರ. ಇಲ್ಲದಿದ್ದರೆ ಅನಾಚಾರವೆಂಬೆನಯ್ಯಾ ತೆಲುಗೇಶ್ವರಾ".

ಆ ಬಳಿಕ ಚನ್ನಬಸವಣ್ಣನವರು ಲಿಂಗವಿಲ್ಲದ ಭವಿಯಾದ ಸಿದ್ಧ ರಾಮಯ್ಯನೊಡಗೂಡಿ ಬರಬಹುದೇ ಎಂದು ಪ್ರಭುದೇವರಿಗೆ ಸಿಟ್ಟಿನಿಂದ ಹೀಗೆ ನುಡಿದರು. "ಸಿದ್ಧರಾಮಯ್ಯನು ನೊಸಲಲ್ಲೊಂದು ಕಣ್ಣುಳ್ಳವ ನಾದರೂ ಅವನಂಗದ ಮೇಲೆ ಲಿಂಗಸ್ವಾಯತವಿಲ್ಲದಿದ್ದರೆ ಅವನ ಮನೆ ಯಲ್ಲಿ ಮಾಡಿದ ಪಾಕ ಶ್ವಾನನ ಮಾಂಸ ತಪ್ಪದಾಗಿ ಬಲ್ಲವರೊಲ್ಲರು. ಶಿವಭಕ್ತರಾದವರ ಮನೆಯಲ್ಲಿ ಉಂಡರೆ ಜನ್ಮಜನ್ಮಾಂತರದಲ್ಲಿ ಶ್ವಾನನ ಯೋನಿಯಲ್ಲಿ ಬಪ್ಪುದು ತಪ್ಪದು. ಎಲೆ ಶಿವನೆ, ನೀವಿಲ್ಲದವರ ಮನೆ ಯಲ್ಲಿ ತಿಂಬುವರ ಕಂಡರೆ ಎನ್ನ ಮನ ಸೊಗಸದಯ್ಯಾ ಕೂಡಲ ಚನ್ನಸಂಗಮದೇವಾ."

ಬಸವರಾಜದೇವರೂ ಸಿದ್ಧರಾಮಯ್ಯದೇವರ ಯೋಗಸಾಮರ್ಥ್ಯ ವನ್ನು ಧಿಕ್ಕರಿಸಿ ಇಷ್ಟಲಿಂಗದ ಮಹತ್ವವನ್ನೇ ಎತ್ತಿ ಹಿಡಿದರು. ಅದು ಹೇಗೆಂದರೆ—" ಗುರು ತೋರಿದ ಲಿಂಗವು ಮನ ಸಾಹಿತ್ಯವಾಗಿರಲು ಪವನ ಭೇದದಿಂದ ಅರಿದಿಹೆನೆಂದರೆ ಕೂಡಲಸಂಗಮದೇವರು ಮೂಗ ಕೊಯ್ಯದೆ ಬಿಡುವನೇ ? ಅದರಂತೆಯೇ ಚನ್ನಬಸವಣ್ಣನವರು ಅಪ್ಪಣೆ ಕೊಡಿಸಿ ದ್ದೇನಂದರೆ—" ಕಾಯಾನುಭಾವಿಗಳು ಕಾಯದಲ್ಲಿ ಮುಕ್ತರು. ಪವನಾ ನುಭಾವಿಗಳು ಪವನದಲ್ಲಿ ಮುಕ್ತರು. ಜೀವಾನುಭಾವಿಗಳು ಜೀವದಲ್ಲಿ ಮುಕ್ತರು. ಲಿಂಗಾನುಭಾವಿಗಳಿಗೆಂತು ಸರಿಯೆಂಬೆ ? ನಿರವಯ ಸ್ವಯಂ ಜ್ಯೋತಿ ಪ್ರಕಾಶವಾಗಿಪ್ಪರು ಲಿಂಗದಲ್ಲಿ ಕೂಡಲಚನ್ನಸಂಗಮದೇವಾ ನಿಮ್ಮ ಶರಣರು ".

ಕೊನೆಗೆ ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಇಷ್ಟಲಿಂಗಸಂಬ ಧವಿಲ್ಲದೆ ಪ್ರಾಣಲಿಂಗಸಂಬಂಧಿಯಾಗದೆಂದು ಶ್ರುತಪಡಿಸಲು ಅವರು ತಮ್ಮ ಅಷ್ಟಾಂಗಯೋಗಗಳನ್ನು ತಾವೇ ನಿಂದಿಸಿಕೊಂಡು ಪ್ರಭುದೇವರ ಮೊರೆ ಹೊಕ್ಕು ಇಷ್ಟಲಿಂಗವ ಕರುಣಿಸಿಕೊಟ್ಟು ಶರಣರ ಕೃಪೆಗೆ ತಮ್ಮನ್ನು ಪಾತ್ರಮಾಡಬೇಕೆಂದು ಪ್ರಭುದೇವರಿಗೆ ಈ ರೀತಿಯಾಗಿ ಪ್ರಾರ್ಥಿಸಿದರು. " ಅಯ್ಯಾ, ಪುಣ್ಯಪಾಪಂಗಳನರಿಯದ ಮುನ್ನ ಅನೇಕ ಭವಂಗಳಲ್ಲಿ ಬಂದು ನಿಮ್ಮ ನಿಲವನರಿಯದೆ ಕೆಟ್ಟೆನಯ್ಯ. ಇನ್ನು ನಿಮ್ಮ ಶರಣು ವೊಕ್ಕೆನಾಗಿ ನಾ ನಿಮ್ಮನೆಂದೂ ಅಗಲದಂತಿರಿಸಯ್ಯಾ ನಿಮ್ಮ ಧರ್ಮ, ನಿಮ್ಮ ಧರ್ಮ. ಎಂದಿಪ್ಪೆನಯ್ಯಾ ನಿಮ್ಮ ಶರಣರ ಕಿಂಕರರ ಕಿಂಕರ ನಾಗಿ ? ಎಂದಿಪ್ಪೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಿಯೆಂದೆನಿಸಿ ?

ಎಂದಿಪ್ಪೆನಯ್ಯಾ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾಗಿ? ಎಂದಿಪ್ಪೆನಯ್ಯಾ ಲಿಂಗತ್ರಯದಲ್ಲಿ ಸಂಪನ್ನನಾಗಿ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ"?

ಹೀಗೆಂದು ಸಿದ್ಧರಾಮಯ್ಯದೇವರು ಬೆಸಸಲು ಅದಕ್ಕೆ ಪ್ರಭುದೇವರು "ಸಿದ್ಧರಾಮಯ್ಯಾ, ಅಂತರ್ಲಕ್ಷ್ಯಾನುಸಂಧಾನ ಧ್ಯಾನಯೋಗದಿಂದ ಆ ಪರವಸ್ತುವ ಕಂಡಿಹೆನೆಂದರೆ ಸಾಧ್ಯವಾಗದು. ಕರಸ್ಥಲದಲ್ಲಿ ಲಿಂಗವ ಧರಿಸಿ ಭಕ್ತಿಸಂಪನ್ನನಾಗಿ ಬದುಕಾ. ಶ್ರುತಿಯ ನಂಬದಿರೋ. ''ಶ್ರುತಿ ಚಕಿತಮಭಿದತ್ತೇ" ಎಂಬಂತೆ ಶ್ರುತಿಗಳು ಶಿವನ ಪಾದವ ಕಾಣದೆ ತೊಳಲಿ ಬಳಲುತ್ತೈದಾವೆ. ವಸ್ತು ಹೃದಯದಲುಂಟೆಂದು ನೆನೆಯದಿರೋ. ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ. ವಸ್ತು ಬ್ರಹ್ಮರಂಧ್ರದಲ್ಲುಂಟೆಂದು ಹೊಲಬುಗೆಡದಿರೋ. ಆ ಪರವಸ್ತುವಿನ ನಿಶ್ಚಯವ ಕಾಂಬಡೆ ಎನ್ನ ಗುರು ಅನಿಮಿಷದೇವರಂತೆ ಕರಸ್ಥಲದಲ್ಲಿ ಲಿಂಗವ ಧರಿಸಿ ನಿಬ್ಬೆರಗಾಗೋ." ಎಂದು ಆಜ್ಞಾಪಿಸಿದರು.

ಯೋಗಮಾರ್ಗ ಸಾಂಖ್ಯಮಾರ್ಗಗಳಿಂದ ಪರಮಾತ್ಮನ ಸಾಕ್ಷಾತ್ಕಾರವಾಗದೆ ಭಕ್ತಿಮಾರ್ಗದಿಂದಲೇ ಅದು ಸಿದ್ಧಿಸುವದೆಂಬ ಮಾತನ್ನು ಅದೇ ಸಮಯದಲ್ಲಿ ಅಮುಗಿದೇವಯ್ಯಗಳು ಒಳ್ಳೆ ಸುಗಮವಾಗಿ ವಿವೇಚಿಸಿದರು. ಅದು ಹ್ಯಾಗೆಂದರೆ "ಕ್ಷುತ್ ಪಿಪಾಸೆ ಹಿಂಗಿದೊಡೇನು? ಸ್ವೇಚ್ಛಾಗಮನಿಯಾದೊಡೇನು? ಅಷ್ಟಮಹಾಸಿದ್ಧಿಯ ಪಡೆದರೇನು? ಹಲವು ಮಹತ್ವವ ತೋರಿ ಮೆರೆದೊಡೇನು? ಭಕ್ತನಪ್ಪನೆ? ಅಲ್ಲಲ್ಲ. ಭಕ್ತಿಯ ಪರಿಯೆಂತೆಂದೊಡೆ ಅಂಗತ್ರಯದಲ್ಲಿ ಲಿಂಗತ್ರಯ ಸಂಪನ್ನರಾಗಿ ಗುರುಲಿಂಗಜಂಗಮವನಾರಾಧಿಸಬಲ್ಲಡೆ ಭಕ್ತನಪ್ಪನೆಂದು ಸಿದ್ಧಸೋಮನಾಥನ ಶರಣರು ನುಡಿವರಯ್ಯಾ ಪ್ರಭುವೇ. ಗುರುಕಾರುಣ್ಯವ ಪಡೆದು, ಇಷ್ಟಲಿಂಗಸಂಬಂಧಿಯಾಗದೆ, ಇಷ್ಟಪ್ರಾಣಭಾವಗಳ ರಹಸ್ಯವನ್ನರಿಯದೆ ಬರೇ ಜ್ಞಾನಯೋಗವೆಂಬ ಶೂನ್ಯದನುಭಾವಿಗೆ ಗುರುಭಕ್ತಿಯಿಲ್ಲ; ಲಿಂಗಭಕ್ತಿಯಿಲ್ಲ; ಜಂಗಮಭಕ್ತಿಯಿಲ್ಲ. ಇದು ಕಾರಣ ಸಿದ್ಧಸೋಮನಾಥನಲ್ಲಿ ಗುರುಕರಜಾತರಾದ ಲಿಂಗಾಂಗಿಗಳು ಅಪೂರ್ವರಯ್ಯಾ. ಪ್ರಭುವೇ."

ಇದನ್ನು ಕೇಳಿ ಸಿದ್ಧರಾಮಯ್ಯದೇವರು ಬಸವಾದಿ ಪ್ರಮಥರೆದುರಿಗೆ ಕೈಮುಗಿದು ಚನ್ನಬಸವದೇವರ ಕೈಯಿಂದ ಅನುಗ್ರಹವ ಕರುಣಿಸಿಕೊಡಬೇಕೆಂದು ಪ್ರಭುದೇವರಿಗೆ ಭಕ್ತಿಜ್ಞಾನಾತುರದಿಂದ ಬಿನ್ನೈಸಿಕೊಂಡರು.

ಅದೆಂತೆಂದೊಡೆ "ಇನಮಂಡಲದೊಳಗೆ ಕಿರಣವಡಗಿಪ್ಪಂತೆ, ಫಲವಹಬೀಜದಲ್ಲಿ ವೃಕ್ಷವಡಗಿಪ್ಪಂತೆ, ಇಂದುಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ, ಸಂದಕ್ಷೀರದಲ್ಲಿ ದಧಿ, ತಕ್ರ, ನವನೀತ ಘೃತವಿಪ್ಪಂತೆ, ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ ತನ್ನೊಳಗೆ ಆ ಲಿಂಗವ ಕಂಡು, ಲಿಂಗದೊಳಗೆ ತನ್ನ ಕಂಡು, ತನ್ನೊಳಗೆ ಸಮಸ್ತವಿಸ್ತಾರವೆಲ್ಲವ ಕಂಡು, ಜಂಗಮ ಮುಖಲಿಂಗವೆಂಬ ಭೇದವನು, ಲಿಂಗಕ್ಕೆ ಜಂಗಮವೇ ಪ್ರಾಣವಾಗಿಪ್ಪ ಭೇದವನು, ಅಂಗದೊಳಗೆ ಲಿಂಗವೇ ಆಚಾರವಾಗಿ ಅಳವಟ್ಟ ವಿವರವನು, ಲಿಂಗಾಂಗ ಸಂಬಂಧ ಸ್ಥಳಕುಳಂಗಳು ಪಿರಳವಾಗಿದ್ದವೆಂಬುದನು, ಕಂಗಳ ನೋಟಕ್ಕೆ ಗುರಿಯಾದ ಲಿಂಗವೇ ಅಂಗವನೊಳಕೊಂಬ ಭೇದವನು, ಚನ್ನಬಸವಣ್ಣನಿಂದೆ ಕೃಪೆಮಾಡಿಸಿ ಎನ್ನನುಳುಹಾ ಪ್ರಭುವೇ, ಕಪಿಲಸಿದ್ಧ ಮಲ್ಲಿಕಾರ್ಜುನಾ."

ಅದಕ್ಕೆ ಪ್ರಭುದೇವರು ಅಪ್ಪಣೆಕೊಡಿಸಿದುದೇನಂದರೆ "ರತ್ನ ದೀಪ್ತಿಯಾದೊಡೇನು? ಬಂಧಿಸಿದ ಕುಂದಣದಲ್ಲಿ ಸಂದಿರಬೇಕು. ಸ್ವಾದುರಸಮೀವ ಫಲವೆಂದಡೇನು? ವೃಕ್ಷವಿಲ್ಲದನ್ನಕ್ಕ? ಅದು ಕಾರಣ ಕಾಯದ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವಿಲ್ಲದಿದ್ದರೆ ನಿರವಯವಾದ ಜ್ಞಾನಯೋಗದ ಕೂಟ ಸಾಧ್ಯವಾಗದು. ಇಷ್ಟಲಿಂಗ ಸಂಬಂಧವೇ ಭಕ್ತಂಗೆ ಮತವು. ಅದೇ ಮಹಾಸೌಖ್ಯವು. ನಮ್ಮ ಗುಹೇಶ್ವರನ ಶರಣನ ಮನ ಒಪ್ಪುವಂತೆ ಸಿದ್ಧರಾಮಯ್ಯರಿಗೆ ಲಿಂಗ ಸಾಹಿತ್ಯವ ಮಾಡಾ ಚನ್ನಬಸವಣ್ಣಾ.

ಆ ಬಳಿಕ ಚನ್ನಬಸವಣ್ಣನವರು ೨೧ ದೀಕ್ಷೆಗಳನ್ನು ವಿವರಿಸಿ ಸಿದ್ಧರಾಮಯ್ಯದೇವರಿಗೆ ಇಷ್ಟಲಿಂಗಧಾರಣೆಯನ್ನು ಮಾಡಿದರು. ಅದು ಹ್ಯಾಗಂದರೆ "ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳನಳಿದು, ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯುತ, ಲಿಂಗಸ್ವಾಯುತ, ಈ ಏಳನು ಕಾಯಕ್ಕೆ ಉಪದೇಶಮಾಡುವದು. ಸಮಯ, ನಿಸ್ಸಂಸಾರ, ನಿರ್ವಾಣ ತತ್ವದೀಕ್ಷೆ, ಆಧ್ಯಾತ್ಮ, ಅನುಗ್ರಹ, ಸತ್ಯಶುದ್ಧ ಈ ಏಳನು ಪ್ರಾಣಕ್ಕೆ ಉಪದೇಶ ಮಾಡುವದು. ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಮನೋರ್ಲಯ, ಲಿಂಗನಿಜ, ಸದ್ಯೋನ್ಮುಕ್ತಿ, ಈ ಏಳನು ಮನಕ್ಕೆ ಉಪದೇಶ ಮಾಡುವದು. ಈ ಕ್ರಮವನರಿದು ಮಾಡುವದು ಕೂಡಲ ಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯ."

ಶಿವದೀಕ್ಷೆ ಹೊಂದಿದ ಬಳಿಕ ಸಿದ್ಧರಾಮಯ್ಯದೇವರು ಭಯಭಕ್ತಿಯುತರಾಗಿ ನುಡಿದುದೇನಂದರೆ "ಶ್ರೀಗುರು ಚನ್ನಬಸವೇಶನು ಎನ್ನ ಕರಸ್ಥಲಕ್ಕೆ ಇಷ್ಟಲಿಂಗವ ಕರುಣಿಸಿಕೊಟ್ಟ ಬಳಿಕ ಬೇರೆ ಯೋಗವುಂಟೆ? ತನ್ನ ಹಸ್ತವನೆನ್ನ ಮಸ್ತಕದ ಮೇಲಿಟ್ಟು ವಾಯುಪ್ರಾಣಿಯಾಗಿದ್ದುದ ನಾಶ ಮಾಡಿ ಲಿಂಗಪ್ರಾಣಿಯು ಮಾಡಿದ ಬಳಿಕ ಮರಳಿ ಯೋಗವುಂಟೆ? ಆನು ಚನ್ನಬಸವಣ್ಣನ ಕರುಣದಿಂದ ಅಭ್ಯಾಸ ಯೋಗವನತಿಗಳೆದು ಶಿವಯೋಗದಲ್ಲಿ ನಿತ್ಯನಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಷಟ್‌ಸ್ಥಲಕ್ಕಧಿಕಾರಿಯಾದೆ. ನಿಮ್ಮ ಶರಣರ ಸಲಿಗೆಗೆ ಸಂದೆ. ನನ್ನ ಭವಿತನವ ನೀಗಿ ಶಿವಯೋಗಿಯನ್ನಾಗಿ ಮಾಡಿದ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಆ ಬಳಿಕ ಸಿದ್ಧರಾಮಯ್ಯದೇವರು ಬಸವೇಶನ ಮಹಿಮೆಯನ್ನು ಕಲ್ಯಾಣದ ಪುಣ್ಯಪ್ರಭೆಯನ್ನು ಮನವಾರೆ ಕೊಂಡಾಡಿ ತಣಿದರು.

---

## "ಸರ್ವಜ್ಞ ಮೂರ್ತಿಗೆ ಕಾಣಿಕೆ."

(ಬರೆದವ:—ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆ ಮಠ ತುಮಕೂರು)

ಸರ್ವಜ್ಞ ವಚನಗಳನುರ್ವರೆಯೊಳೋದುತ್ತಿ ।
ಗರ್ವ ಮಾತ್ಸರ್ಯ ದುರ್ಗುಣಂಗಳ ತೊರೆದು
ಸರ್ವರುಂ ಬಾಳ್ಗೆ ಸರ್ವಜ್ಞ ॥ ೧ ॥
ವೇದಶಾಸ್ತ್ರಂಗಳನು ಸಾಧಿಸುವ ಶ್ರಮವೇಕೆ ।
ಸಾಧು ಸರ್ವಜ್ಞ ಮೂರುತಿಯ ವಚನಗಳ ।
ನಾದರಿಸಿ ಕೇಳ ಸರ್ವಜ್ಞ ॥ ೨ ॥
ಕನ್ನಡಿಗರೆಲ್ಲರೂ ಚೆನ್ನಾಗಿ ಕೇಳಿರೈ ।
ಕನ್ನಡರ ಜಾಣ ಸರ್ವಜ್ಞನೊರೆದ ಈ ।
ಚನ್ನೆನಿಪ ನುಡಿಯ ಸರ್ವಜ್ಞ ॥ ೩ ॥
ಆವ ಭಾಷೆಯೊಳುಂಟು ಈ ವಿಧದ ವಚನಗಳು
ಕೋವಿದರೆ ಪೇಳಿ ಭಾಗ್ಯವಲ್ಲವೆ ನಮ್ಮ
ಭೂವಿನುತ ನುಡಿಯು ಸರ್ವಜ್ಞ ॥ ೪ ॥

(ಪ್ರಬೋಧೆ)

ಕನ್ನಡತಿಯೆಂಬುವಳು ಮನ್ನಣೆಯು ಇಲ್ಲದಲೆ ।
ತನ್ನ ಗೆಳತಿಯರ ಸರಿದೊರೆಗೆ ಬಾರದೆ ।
ಕಣ್ಣೀರೊಳಿಹಳು ಸರ್ವಜ್ಞ ॥ ೫ ॥

ಜಾತಿ ಜಾತಿಗಳಲ್ಲಿ ಜಾತಿ ದ್ವೇಷವೆ ಉಂಟು ।
ಮಾತಿನೊಳಗುಂಟು ವೈರಾಗ್ಯ ಬಹು ಜನಕೆ ।
ನೀ ತಿಳಿದು ನೋಡು ಸರ್ವಜ್ಞ ॥ ೬ ॥

ನಿನ್ನ ಕಾಲದ ಚೆಲುವು ಇನ್ನಿರುವುದೆಂಬೆಯಾ ।
ಕುನ್ನಿ ಮಾನಿಸರು ತುಂಬಿಹರು ನಾಡಿನೊಳು ।
ಅನ್ನೆಯುವೆ ಹಿರಿದು ಸರ್ವಜ್ಞ ॥ ೭ ॥

ಲಿಂಗವಂತರ ಮತವು ಭಂಗಕೊಳಗಾಗಿಹುದು ।
ಮಂಗ ಮಾನವರು ಅರಿವರೇ ಲೋಕದೊಳು ।
ಲಿಂಗಾಂಗದಿರವ ಸರ್ವಜ್ಞ ॥ ೮ ॥

ವೀರಶೈವರ ಮತವು ಘೋರ ದುಗುಡದೊಳಿಹುದು ।
ಆರಿದಕೆ ದಾರಿ ತೋರುವರು ಲೋಕದೊಳು ।
ಧೀರ ನೀ ಬಾರೋ ಸರ್ವಜ್ಞ ॥ ೯ ॥

ಭಾರತೀಯರಿಗೆಲ್ಲ ಭೂರಿ ಬಡತನ ಬಂತು ।
ಸಾರತರವಾದ ಬಂಗಾರವೆಲ್ಲವೂ ।
ಸೂರೆ ಪೋಗಿಹುದು ಸರ್ವಜ್ಞ ॥ ೧೦ ॥

ಗುಡಿಗಳನು ಕಟ್ಟುವರು ಮಾಡಗುವರು ಗೊಂಬೆಗಳ
ಬಡವರನು ಮರೆತು ಶಿಲೆಯ ಪೂಜಿಸುವರಿಗೆ ।
ಪೃಡನು ಮೆಚ್ಚುವನೆ ಸರ್ವಜ್ಞ ॥ ೧೧ ॥

ಬಸವಾದಿ ಪ್ರಮಥರನು ರಸೆಯೊಳಗೆ ನಿಂದಿಪರು ।
ಅಸಮಾಕ್ಷನಡಿಯ ಮರೆತಿಹರು ಖೋಡಿಗಳು ।
ಮಸಿವಣ್ಣವಕ್ಕು ಸರ್ವಜ್ಞ ॥ ೧೨ ॥

ಗುರುಗಳೊಳಗೆ ನೀ ಬಾರೋ ಬರಿಯ ಡಂಭದೊಳಿಹರು ।
ಹರಿಗೋಲು ತೂತು ಬಿದ್ದಂತೆ ಅವರಿರವು ।
ಧರೆಗೆ ಕೇಡಕ್ಕು ಸರ್ವಜ್ಞ ॥ ೧೩ ॥

( ಹೃದ್ಗತ )

ಕನ್ನಡದ ಸೌಭಾಗ್ಯವಿನ್ನೊಮ್ಮೆ ಮೆರೆಯಲ್ಕೆ ।
ಕನ್ನೈದಲೆಗೆ ಚಂದ್ರನುದಯಮಂ ಕಂಡಂತೆ ।
ಇನ್ನೊಮ್ಮೆ ಬಾರ ಸರ್ವಜ್ಞ ॥ ೧೪ ॥

ಶಿವಮೂರ್ತಿಯೆಂಬುವನು ಕವಿಕುಲದ ಕಿಂಕರನು ।
ಭುವಿಯೊಳಗೆ ನಿನ್ನ ಕೃಪೆಯ ಬೇಡುತ್ತಿಹನು ।
ಶಿವರೂಪಿ ಕೇಳು ಸರ್ವಜ್ಞ ॥ ೧೫ ॥

# ಶಿವಯೋಗ.

(ಓರ್ವ ವೀರಶೈವ)



[ಕೆಳಗೆ ಕಾಣಿಸಿದ ಲೇಖಗಳು 'ನವಕರ್ನಾಟಕ' ಪತ್ರಿಕೆಯು ಎಪ್ರೆಲ್ ಮತ್ತು ಮೇ ಸಂಚಿಕೆಗಳಲ್ಲಿ ಪ್ರಸಿದ್ಧವಾಗಿದ್ದು ಅವುಗಳಲ್ಲಿ ಶಿವಯೋಗದ ಸ್ವರೂಪವು ಟೀಕಾತ್ಮಕ ರೀತಿಯಿಂದ ವಿವೇಚಿಸಲ್ಪಟ್ಟದೆ. ಶಿವಾನುಭವ ಪತ್ರಿಕೆಯ ವಾಚಕರ ವಿಚಾರಕ್ಕೋಸ್ಕರ ನಾವು ಅವುಗಳನ್ನು ಕೆಳಗೆ ಕ್ರಮವಾಗಿ ಅಚ್ಚುಹಾಕಿದ್ದೇವೆಃ— [ಸಂಪಾದಕ.]

೧

## ಯೋಗಾಭ್ಯಾಸ.

ತಾ. ೨೮-೩-೩೫ ನೆಯ 'ನವಕರ್ನಾಟಕ' ಪತ್ರಿಕೆಯಲ್ಲಿ ಬೆಳಗಾವಿಯ "ಸಾಧಕ" ಎಂಬ ಹೆಸರನ್ನಿಟ್ಟುಕೊಂಡ ಲೇಖಕರೊಬ್ಬರು ವೀರಶೈವರು ಯೋಗಶಾಸ್ತ್ರದ ಸಂಬಂಧವಾಗಿ ತಪ್ಪು ತಿಳುವಳಿಕೆಯುಳ್ಳವರಾಗಿರುವರೆಂದೂ ಆ ಶಾಸ್ತ್ರವನ್ನು ಆಧಾರಪ್ರಮಾಣ ಸಹಿತವಾಗಿ ಖಂಡಿಸಿ ತಮ್ಮ ಮತಗಳನ್ನು ಸ್ಥಾಪಿಸಬೇಕೆಂದೂ ಸೂಚಿಸಿದ್ದಾರೆ. ಈ ವಿಷಯದ ಬಗ್ಗೆ ವಾಚಕರು ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಬಹುದೆಂದೂ ಪತ್ರಿಕಾ ಸಂಪಾದಕರೂ ಸೂಚನೆ ಕೊಟ್ಟಿದ್ದಾರೆ. ಅದಕ್ಕನುಸಾರವಾಗಿ ನನಗೆ ಹೊಳೆದ ಪ್ರಾಮಾಣಿಕವಾದ ಸ್ಪಷ್ಟಾಭಿಪ್ರಾಯಗಳನ್ನು ಇದರಡಿಯಲ್ಲಿ ಮಂಡಿಸಲು ಪ್ರಯತ್ನಿಸುತ್ತೇನೆ. ಈ ಮೊದಲು ನಮ್ಮ ಲೇಖಕರ ಆಕ್ಷೇಪಗಳಾವವೆಂಬುದನ್ನಷ್ಟು ವಿವೇಚಿಸೋಣ. ಅವರು ಹೇಳುವದೇನಂದರೆ "ವೀರಶೈವರು ಅರ್ಥಾತ್ ವಚನಕಾರರು ಯೋಗಾಭ್ಯಾಸ ಸಂಬಂಧವಾಗಿ ತಪ್ಪು ತಿಳುವಳಿಕೆಯುಳ್ಳವರಾಗಿದ್ದಾರೆ. ಯೋಗಾಭ್ಯಾಸದ ಬಗ್ಗೆ ನಿಷ್ಕಾರಣವಾಗಿ ಆರೋಪ ಮಾಡುವದು ಅನುಚಿತವೆಂದೇ ನಮ್ಮ ಅಭಿಪ್ರಾಯವು. ವೀರಶೈವರ ಉದ್ದೇಶವು ವೈದಿಕ ಸಂಸ್ಕೃತಿಯ ತಪ್ಪುಗಳನ್ನು ಬೈಲಿಗೆಳೆಯುವದಾಗಿರುವಂತೆ ಕಂಡುಬರುತ್ತದೆ. ಇತ್ಯಾದಿ."

ವೀರಶೈವ ವಚನಕಾರರು ಯೋಗಾಭ್ಯಾಸವನ್ನು ಅಲ್ಲಗಳೆದಿದ್ದೇನೋ ನಿಜ. ಆದರೆ ವೈದಿಕ ಧರ್ಮದ ಮೇಲಿನ ಅಸೂಯೆಯಿಂದೇನೂ ಅವರು ಹಾಗೆ ಮಾಡಿರುವದಿಲ್ಲ. ಯೋಗಮಾರ್ಗಕ್ಕಿಂತಲೂ ಅಧಿಕವಾದ ಭಕ್ತಿ

ಮಾರ್ಗವನ್ನು ಪ್ರಸ್ಥಾಪಿಸುವದಕ್ಕಾಗಿಯೂ ಪಂಡಿತಪಾಮರರಲ್ಲಿ ಸುಲಭವಾದ ಭಕ್ತಿಮಾರ್ಗವನ್ನು ನೆಲೆಗೊಳಿಸುವದಕ್ಕಾಗಿಯೂ ದುಸ್ತರವಾದ ಯೋಗಮಾರ್ಗವನ್ನು ಅಲ್ಲಗಳೆದಿರುವರು. ಸುಲಭ ಮಾರ್ಗವು ಕೈಸಾರಿರುವಾಗ ದುಸ್ತರ ಮಾರ್ಗವನ್ನು ಹುಡುಕುವದೇನೂ ಜಾಣತನದ ಲಕ್ಷಣವಲ್ಲ. ಆದರೆ ಯೋಗಾಭ್ಯಾಸಕ್ಕೆ ಸ್ವಲ್ಪೂ ಯೋಗ್ಯತೆಯೇ ಇಲ್ಲವೆಂತಲ್ಲ. ಯೋಗದಿಂದಲೇನೂ ಸಾಧಿಸುವದಿಲ್ಲವೆಂತಲೂ ಅಲ್ಲ. ಆದರೆ ಭಕ್ತಿಮಾರ್ಗವು ಯೋಗಮಾರ್ಗಕ್ಕಿಂತ ಹೆಚ್ಚು ಯೋಗ್ಯತೆಯುಳ್ಳದ್ದೂ ಸುಲಭವಾದದ್ದೂ ಇದ್ದು ಅದನ್ನು ಬಿಟ್ಟು ಬಿರುಸಾದ ಯೋಗಮಾರ್ಗವನ್ನೇಕೆ ಅವಲಂಬಿಸಬೇಕೆಂಬುದೇ ಅವರ ಉದ್ದೇಶವು. ಇದಲ್ಲದೆ ಭಕ್ತಿಯಿಲ್ಲದ ಯೋಗವು ಬಹು ವಿರಸವಾದುದೆಂದು ಅವರು ಪ್ರಸ್ತಾಪಿಸಿರುವರು. ಯೋಗದಿಂದ ಮನುಷ್ಯನು ಚಿರಾಯುಳ್ಳವನೂ ಬಲಶಾಲಿಯೂ ಸಮಾಧಿಸ್ಥನೂ ಆಗಬಹುದು. ಎಷ್ಟೋ ಸಿದ್ಧಿಗಳನ್ನು ಪಡೆಬಹುದು. ಆದರೆ ಪರವಸ್ತುವಿನ ನೆಲೆಯು ಭಕ್ತಿಮಾರ್ಗಕ್ಕಲ್ಲದೆ ಯೋಗಮಾರ್ಗಕ್ಕೆಂದಿಗೂ ಸಾಧ್ಯವಲ್ಲವೆಂಬದನ್ನು ನಮ್ಮ ಶಿವಶರಣರು ವಿಶದಪಡಿಸಿದ್ದಾರೆ.

ವಚನಕಾರರು ಯೋಗಮಾರ್ಗವನ್ನು ನಿರಾಕರಿಸಿ ಭಕ್ತಿಮಾರ್ಗವನ್ನು ಎತ್ತಿಹಿಡಿದ ಪ್ರಸ್ತಾಪವು ಶೂನ್ಯಸಂಪಾದನೆಯಲ್ಲಿ ಬಂದಿದೆ. ನಮ್ಮಲ್ಲಿ ಸಿದ್ಧರಾಮಯ್ಯನೆಂಬ ಶಿವಯೋಗಿಯು ಯೋಗಾಭ್ಯಾಸದಲ್ಲಿ ಬಹು ಬಲ್ಲಿದನಾಗಿದ್ದನು. ಶ್ರೀ ಅಕ್ಕಮಹಾದೇವಿಯೂ ಸಹ ಯೋಗಮಾರ್ಗದಲ್ಲಿ ಮುಂದುವರಿದಿದ್ದಳು. ಮುಂದೆ ಅವರೀರ್ವರು ಬಸವೇಶ್ವರನಿಂದ ಭಕ್ತಿಯ ಭಿಕ್ಷೆಯನ್ನು ಹೊಂದಿ ಭಕ್ತ್ಯವಲಂಬಿಗಳಾಗಿ ತಮ್ಮ ಯೋಗಸಾಧನೆಯನ್ನು ಭಕ್ತಿಯ ತಳಹದಿಯ ಮೇಲೆ ಕಟ್ಟಲಾರಂಭಿಸಿದರು. ಶೂನ್ಯಸಂಪಾದನೆಯ ೭ ನೆಯ ಸಂಪಾದನೆಯಲ್ಲಿ ಶ್ರೀ ಪ್ರಭುದೇವರು ಸಿದ್ಧರಾಮ ಶಿವಯೋಗಿಗಳ ಯೋಗಮಾರ್ಗವನ್ನು ಖಂಡಿಸಿ ಜ್ಞಾನಮಾರ್ಗವನ್ನುಪದೇಶಿಸಿದ್ದಾರೆ. ಆದರೆ ೧೦ ನೆಯ ಸಂಪಾದನೆಯಲ್ಲಿ ಬಸವಣ್ಣ ಚನ್ನಬಸವಣ್ಣನವರು ಯೋಗಜ್ಞಾನಗಳಿಗಿಂತಲೂ ಅಧಿಕವಾದ ಭಕ್ತಿಮಾರ್ಗವನ್ನು ಅರ್ಥಾತ್ ಇಷ್ಟಲಿಂಗದ ಮಹತ್ವವನ್ನು ಸಿದ್ಧರಾಮೇಶ್ವರರಿಗೆ ಅರುಹಿ ಅವರಿಗೆ ಲಿಂಗಧಾರಣವನ್ನು ಮಾಡಿದ್ದಾರೆ. ವಾಚಕರು ಆ ಸಂಗತಿಗಳನ್ನು ಓದಿ ತಿಳಿದುಕೊಳ್ಳಬಹುದು. ಉದಾಹರಣೆಗಾಗಿ ಇಲ್ಲಿ ಕೆಲವು ವಚನಗಳನ್ನು ಕೊಡಲಾಗಿದೆ.

'ನವನಾಳದ ಸುಳುಹ ತಿಳಿದೆನೆಂಬುದು ಯೋಗವಲ್ಲ. ಐವತ್ತೆರಡಕ್ಷರದ ಶಾಸನವ ತಿಳಿದು ನೋಡಿ ಹೃದಯ ಕಮಲದ ಕರ್ಣಿಕೆಯಲ್ಲಿ ಸಿಕ್ಕಿದೆನೆಂಬುದು ಯೋಗವಲ್ಲ. ಬಹಿರಂಗವೆಂಬರೆ ಕ್ರಿಯಾರಹಿತ, ಅಂತರಂಗವೆಂಬರೆ ವಾಙ್ಮನಾತೀತ. ಗುಹೇಶ್ವರನೆಂಬ ಲಿಂಗವು ಷಡುಚಕ್ರದ ಮೇಲಿಲ್ಲ ಕಾಣಾ ಸಿದ್ಧರಾಮಯ್ಯ" (ಶೂನ್ಯಸಂಪಾದನೆಯ ಪುಟ ೬೩)

ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ನೆಟ್ಟೆಲುವ ಮುರಿದು ನಿಷ್ಠೆಯಿಂದ ಹಿಂದಣ ಬಟ್ಟೆಯ ತೆಗೆದು ಅಮೃತವನುಂಡಿಹೆನೆಂಬವರ ಕೇಡಿಂಗೆ ಕಡೆಯಿಲ್ಲ. ಅತ್ಯತಿಷ್ಠದ್ದಶಾಂಗುಲವೆಂಬ ಶ್ರುತಿಯ ನೋಡಲು ಮುಟ್ಟಿ ನೆಲೆಗೊಳಿಸುವ ಠಾವುಂಟೇ? ಸ್ಥಾನಮಾನವೆಂಬ ಮಾತಿಂಗೆ ದೂರವಾದ ಘನವ ಬ್ರಹ್ಮರಂಧ್ರದಲ್ಲಿ ಕಂಡೆನೆಂದರೆ ಕಾಣಬಹುದೇ? ನಮ್ಮ ಗುಹೇಶ್ವರ ಲಿಂಗವು ಕಲ್ಪಿತಕ್ಕೆ ದೂರಕೇಳಾ ಸಿದ್ಧರಾಮಯ್ಯ" (ಶೂನ್ಯಸಂಪಾದನೆಯ ಪುಟ ೬೩).

"ಗುರು ತೋರಿದ ಲಿಂಗವು ಮನಸಾಹಿತ್ಯವಾಗಿರಲು, ಪವನಭೇದದಿಂದ ಅರಿದೆನೆಂದರೆ ಆದೇ ದ್ರೋಹ. ಈಡಾ, ಪಿಂಗಳ, ಸುಷುಮ್ನಾನಾಳದಿಂದ ಅರಿದಿಹೆನೆಂದರೆ ಕೂಡಲಸಂಗಮದೇವರು ಮೂಗ ಕೊಯ್ಯದೆ ಬಿಡುವನೇ?" (ಶೂನ್ಯಸಂಪಾದನೆ ಪುಟ ೧೪೯)

"ಕಾಯಾನುಭಾವಿಗಳು ಕಾಯದಲ್ಲಿ ಮುಕ್ತರು. ಜೀವಾನುಭಾವಿಗಳು ಜೀವದಲ್ಲಿ ಮುಕ್ತರು. ಪ್ರಾಣಾನುಭಾವಿಗಳು ಪ್ರಾಣದಲ್ಲಿ ಮುಕ್ತರು. ಪವನಾನುಭಾವಿಗಳು ಪವನದಲ್ಲಿ ಮುಕ್ತರು. ಲಿಂಗಾನುಭಾವಿಗಳಿಗೆಂತು ಸರಿಯೆಂಬೆ? ನಿರವಯ ಸ್ವಯಂಜ್ಯೋತಿಯಾಗಿಪ್ಪರು ಲಿಂಗದಲ್ಲಿ ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣರು." (ಶೂನ್ಯಸಂಪಾದನೆ ಪುಟ ೧೪೯)

ಈ ವಚನಗಳಿಂದ ಯೋಗಕ್ಕಿಂತಲೂ ಭಕ್ತಿಮಾರ್ಗವು ಅಥವಾ ಇಷ್ಟಲಿಂಗದ ಮಹತ್ವವು ಹೆಚ್ಚಾಗಿರುತ್ತದೆಂಬೂ ಪರವಸ್ತುವು ಭಕ್ತಿಮಾರ್ಗಕ್ಕಷ್ಟೇ ಸಾಧ್ಯವಲ್ಲದೆ ಯೋಗಮಾರ್ಗಕ್ಕೆ ಸಾಧ್ಯವಲ್ಲವೆಂದೂ ಹೇಳಿಕೊಟ್ಟಂತಾಯಿತು. ಭಗವದ್ಗೀತೆಯಲ್ಲಾದರೂ ಭಕ್ತಿಮಾರ್ಗವು ಸರ್ವೋತ್ಕೃಷ್ಟವಾದುದೆಂದೇ ಪರಿಗಣಿಸಲ್ಪಟ್ಟಿರುವದಲ್ಲವೇ? ಆಸನ ಪ್ರಾಣಾಯಾಮಾದಿಗಳಿಂದ ದೇಹಬಲ ಆಯುರಾರೋಗ್ಯಗಳು ವರ್ಧಿಸುವದೇನೋ ನಿಜ. ಆದರೆ ಪರವಸ್ತುವಿನ ನೆಲೆಯು ಭಕ್ತಿಮಾರ್ಗಕ್ಕಲ್ಲದೆ ಯೋಗಮಾರ್ಗಕ್ಕೆಂ

ದಿಗೂ ಸಾಧ್ಯವಲ್ಲವೆಂಬುದೇ ನಮ್ಮ ಶಿವಶರಣರ ಶಿವಾನುಭವ ಸಿದ್ಧಾಂತವು. ಈ ವಿಷಯವಾಗಿ ಹೆಚ್ಚಿಗೆ ತಿಳಿದುಕೊಳ್ಳಬೇಕೆಂದಪೇಕ್ಷಿಸುವವರು ಶೂನ್ಯಸಂಪಾದನೆಯ ೧೦ ನೆಯ 'ಶ್ರೀ ಸಿದ್ಧರಾಮೇಶ್ವರ ಗುರುಕರುಣೆ' ಎಂಬ ಭಾಗವನ್ನು ಅವಶ್ಯವಾಗಿ ಓದಬೇಕು.

ಶರೀರವು ಯಂತ್ರವಿದ್ದು ಕೆಲವು ನಿಯಮುಗಳಿಗೆ ಬದ್ಧವಾಗಿರುವದರಿಂದ ಯೋಗಶಾಸ್ತ್ರವು ಇಂದ್ರಿಯ ವ್ಯಾಪಾರಗಳನ್ನು ನಿಯಂತ್ರಿಸುತ್ತದೆಂದು ನಮ್ಮ ಲೇಖಕರು ಹೇಳಿದ್ದಾರೆ. ಶರೀರವು ಯಂತ್ರವಾಗಿದ್ದರೂ ಶರೀರಿಯು ಯಂತ್ರವಲ್ಲ. ಆತನಲ್ಲಿ ಜೀವಕಳೆಯಿದೆ, ಮನಸ್ಸಿದೆ, ಆತ್ಮವಿದೆ. ಯಂತ್ರದಂತೆ ಶರೀರದ ಇಂದ್ರಿಯಗಳನ್ನು ದುಡಿಸುವದಷ್ಟೆ ಅವನ ಅಂತಿಮಧ್ಯೇಯವಲ್ಲ. ಯಂತ್ರದ ದುಡಿತದಿಂದುಂಟಾದ ಯಾಂತ್ರಿಕಾನಂದದಲ್ಲಿ ಸೊಬಗು ಸೌಂದರ್ಯವಿಲ್ಲ. ಆ ಆನಂದವು ರಸಭರಿತವಾದುದಲ್ಲ. ಆಸನ ಪ್ರಾಣಾಯಾಮುಗಳಿಂದ ಸಮಾಧಿಸ್ಥಿತಿಗೇರಿ ಆನಂದ ಪಡೆದರೆ ಅದು ಬರೇ ಕಷ್ಟಕರವಾದ ಆನಂದವು. ಸುಖಕರವಾದ ಆನಂದವಲ್ಲ. ಯಂತ್ರಕ್ಕಿಂತಲೂ ಎಷ್ಟೋ ಪಟ್ಟು ಮಿಗಿಲಾದ ಜೀವನಸೌಂದರ್ಯ, ಭಕ್ತಿ, ಆಧ್ಯಾತ್ಮಜ್ಞಾನ ಮುಂತಾದವುಗಳಲ್ಲಿ ಆನಂದವು ಪರಿಪೂರ್ಣವಾಗಿರುವದು; ರಸಭರಿತವಾಗಿರುವದು.

ವ್ಯಾಯಾಮ ಮಾಡಿದ ಮನುಷ್ಯನ ಅವಯವಗಳು ಕೋಣನಂತೆ ಕೊಬ್ಬಿ ಆತನು ತನ್ನ ತುಂಬಿದ ಮೈ ಕೈಗಳನ್ನು ನೋಡಿ ಆನಂದಿಸಬಹುದು. ಆದರೆ ಈ ಆನಂದವು ತಾಮಸೀ ಆನಂದವಲ್ಲದೆ ಸಾತ್ವಿಕಾನಂದವಲ್ಲ. ಅದೇ ಮೇರೆಗೆ ಹಠಯೋಗಸಾಧನೆಯಿಂದ ಕಷ್ಟತರವಾದ ಸುಖವು ಲಭಿಸಿದರೂ ಅದು ಕಷ್ಟವೇ ಹೊರತು ನಿಜಸುಖವಲ್ಲ. ಇಂದ್ರಿಯಗಳನ್ನು ಬಲಾತ್ಕಾರದಿಂದ ನಿಗ್ರಹಿಸಿ ಪ್ರಾಣಾಯಾಮವನ್ನು ಅಭ್ಯಾಸಿಸಿ ಆಯುಷ್ಯವನ್ನು ಬೆಳೆಯಿಸಿಕೊಳ್ಳಬಹುದು, ರೋಗವನ್ನು ಕಳೆದುಕೊಳ್ಳಬಹುದು, ದಿವ್ಯ ತೇಜವನ್ನು ಪಡೆಯಬಹುದು. ಮನುಷ್ಯನ ಜೀವನಗುರಿಯು ಇಷ್ಟೇ ಅಲ್ಲ. ಚಿದಾನಂದವನ್ನು ಹೊಂದುವದೇ ಅಂತಿಮುಧ್ಯೇಯವು.

ಕಟುತರವಾದ ಔಷಧದಿಂದ ಒಬ್ಬನ ರೋಗವು ಗುಣವಾಗುತ್ತದೆಂದು ತಿಳಿಯಿರಿ. ಅದೇ ರೋಗವು ಅಮೃತದಂಥ ಮಧುರವಾದ ಬೇರೊಂದು ಔಷಧದಿಂದ ಗುಣವಾಗುತ್ತಿದ್ದ ಪಕ್ಷದಲ್ಲಿ ಜಾಣರಾದವರು

ಕಟುತರವಾದ ಔಷಧವನ್ನು ಬಿಟ್ಟು ಮಧುರವಾದ ಔಷಧವನ್ನಾಶಿಸು ವದು ಸ್ವಾಭಾವಿಕವಾಗಿದೆ. ಅದರಂತೆ ಕಹಿಯಾದ ಔಷಧವನ್ನು ಅಲ್ಲಗಳೆಯುವದೂ ಸಹಜವು. ಅದೇ ಮೇರೆಗೆ ಯೋಗಾಭ್ಯಾಸದಿಂದ ಕೊನೆಗೆ ಆನಂದ ದೊರೆಯುತ್ತಿದ್ದರೆ ಅದು ಕಹಿ ಔಷಧದಿಂದ ದೊರೆತ ಹಾಗೆ. ಭಕ್ತಿಯಿಂದ ಆನಂದವು ಲಭಿಸುತ್ತಿದ್ದರೆ ಅದು ಸಿಹಿ ಔಷಧದಿಂದುಂಟಾದ ಸುಖದ ಹಾಗೆ. ವೀರಶೈವರು ಭಕ್ತಿಮಾರ್ಗದವರಾದುದರಿಂದ ಆರಂಭದಲ್ಲಿಯೂ ಪರ್ಯವಸಾನದಲ್ಲಿಯೂ ಸರಸವಾಗಿರುವ ಭಕ್ತಿಗೇನೇ ಹೆಚ್ಚು ಪ್ರಾಶಸ್ತ್ಯಿಯನ್ನು ಕೊಟ್ಟು ಆರಂಭದಲ್ಲಿ ಕಷ್ಟಕರವಾಗಿ ಅಂತ್ಯದಲ್ಲಿ ಸುಖಕರವಾಗಿರುವ ಯೋಗಮಾರ್ಗಕ್ಕೆ ಅಷ್ಟೇನೂ ಮಹತ್ವ ಕೊಡದಿದ್ದುದು ಆಶ್ಚರ್ಯವಲ್ಲ. ಇದರಿಂದ ವೈದಿಕ ಮತದ ಬಗ್ಗೆ ವೀರಶೈವ ವಚನಕಾರರು ತಪ್ಪು ತಿಳುವಳಿಕೆಯುಳ್ಳವರಾಗಿದ್ದರೆಂದು ಸಿದ್ಧವಾಗುವದಿಲ್ಲ. ಅವರು ತಮ್ಮ ಸದಸದ್ವಿವೇಕಕ್ಕೆ ಸತ್ಯವೆನಿಸಿದ ತತ್ವಗಳನ್ನು ಅನುಭವಿಸಿ ನುಡಿದಿದ್ದಾರೆ. ಅವರ ಮೇಲೆ ನಿಷ್ಕಾರಣವಾಗಿ ಆರೋಪ ಮಾಡುವದು ಅನುಚಿತವೆಂದೇ ನಮ್ಮ ಅಭಿಪ್ರಾಯವು.

ಯೋಗಕ್ಕಿಂತಲೂ ಭಕ್ತಿಯು ಸುಲಭವಾದ ಮಾರ್ಗವಾದುದರಿಂದ ಅವರು ಅದರ ಕಡೆಗೆ ಪಂಡಿತ-ಪಾಮರರ ದೃಷ್ಟಿಯನ್ನು ತಿರುಗಿಸಿದರು. ಯೋಗಜ್ಞಾನ ಮಾರ್ಗಗಳಿಗಿಂತಲೂ ಭಕ್ತಿಮಾರ್ಗವೇ ಅಧಿಕವಾಗಿರುವದೆಂಬ ಬಗ್ಗೆ ಶೂನ್ಯಸಂಪಾದನೆಯಲ್ಲಿ "ಶ್ರೀ ಸಿದ್ಧರಾಮಯ್ಯನ ಗುರುಕರುಣೆ" ಎಂಬ ಭಾಗದಲ್ಲಿ ಬಹು ಸುಯುಕ್ತಿಕವಾಗಿ ವಿವೇಚಿಸಿದ್ದಾರೆ. ವಾಚಕರು ಬೇಕಾದರೆ ಅದನ್ನು ನೋಡಬಹುದು. ಯೋಗಮಾರ್ಗವು ಅಲ್ಪಸಂಖ್ಯಾಕ ಜನರಿಗೆ ಬಹು ಪ್ರಯಾಸದಿಂದ ಸಾಧ್ಯವಾಗುವಂತಹದು. ಯೋಗಮಾರ್ಗವು ಜಗತ್ತಿನಲ್ಲಿಯೇ ದುಸ್ತರವಾದ ಮಾರ್ಗವಾಗಿರುವದೆಂದು ನಮ್ಮ ಲೇಖಕರೇ ಒಪ್ಪಿಗೆಯನ್ನು ಕೊಟ್ಟಿರುವರು. ಆದರೆ ಭಕ್ತಿಮಾರ್ಗವು ಬಹು ಜನರಿಗೆ ಸುಲಭಸಾಧ್ಯವಾದಂತಹದು. ಯೋಗವೃಕ್ಷದ ಫಲಗಳಿಗಿಂತಲೂ ಭಕ್ತಿವೃಕ್ಷದ ಫಲಗಳು ಹೆಚ್ಚು ಮಧುರತರವಾಗಿವೆ.

ವೀರಶೈವರು ಭಕ್ತಿಯ ತಳಹದಿಯ ಮೇಲೆ ಶಿವಯೋಗ ಸಾಮ್ರಾಜ್ಯವನ್ನು ಸ್ಥಾಪಿಸಿರುವರು. ಭಕ್ತಿಯ ಮಂಥನದಿಂದಲೇ ಜ್ಞಾನವೆಂಬ ನವನೀತವನ್ನು ತೆಗೆದಿರುವರು. ಇಷ್ಟಲಿಂಗವೆಂಬುವದೇ ಭಕ್ತಿಯ ಕುರುಹು. ಪ್ರಾಣಲಿಂಗವೇ ಯೋಗದ ಚಿಹ್ನ. ಭಾವಲಿಂಗವೇ ಜ್ಞಾನದ ತಿರುಳು.

ಭಕ್ತಿಯಿಲ್ಲದ ಯೋಗ ಯಂತ್ರದ ದುಡಿತದಂತೆ ನೀರಸವಾದುದು. ಅದರಂತೆ ಭಕ್ತಿಯಿಲ್ಲದ ಜ್ಞಾನವು ಮಾತಿನ ಬ್ರಹ್ಮವು; ಸುಮ್ಮನೆ ತಲೆಯನ್ನು ಕೆರಕೊಂಡು ಚಟಪಟಿಸುವ ಬುದ್ಧಿವಂತಿಕೆಯು. ಆದರೆ ಭಕ್ತಿಯುಕ್ತವಾದ ಜ್ಞಾನದಲ್ಲಿ ಒಂದು ತರಹದ ಕಳೆಯಿದೆ; ಜೀವಾಳವಿದೆ, ಸ್ವಾರಸ್ಯವಿದೆ. ವೀರಶೈವರ ಯೋಗವು ಶಿವಯೋಗವು. ಅರ್ಥಾತ್ ಇಷ್ಟಲಿಂಗದಲ್ಲಿ ಸಮರಸ ಭಾವವನ್ನು ಹೊಂದುವಿಕೆಯು. ಆದರೆ ಅಷ್ಟಾಂಗ ಯೋಗಗಳ ಅಭ್ಯಾಸವಲ್ಲ. ಆದುದರಿಂದ ವಚನಕಾರರು ಶಿವಯೋಗವನ್ನು ಹೊಗಳಿ ಅಷ್ಟಾಂಗಯೋಗವನ್ನು ತೆಗಳಿದ್ದಾರೆ.

೨

## ಹಠಯೋಗವೋ ಶಿವಯೋಗವೊ ?

ಮೇಲಿನ ವಿಚಾರಗಳಿಗೆ ಕೆಲವರು ಹೀಗೆ ಪ್ರಶ್ನಮಾಡಬಹುದು? "ವೀರಶೈವರು" ಹಠಯೋಗ ಸಾಧನವನ್ನೇಕೆ ಮಾಡಬಾರದು? ಹಠಯೋಗಕ್ಕೂ ಶಿವಯೋಗಕ್ಕೂ ಏನು ಭೇದವಿದೆ? ಶಿವಯೋಗವೆಂದರೆ ಹಠಯೋಗದ ಒಂದು ಪರ್ಯಾಯದ ಶಬ್ದವಲ್ಲವೇ? ಪ್ರಾಣಲಿಂಗಾನುಸಂಧಾನವೆಂದರೆ ಯೋಗಾಭ್ಯಾಸವಲ್ಲದೆ ಮತ್ತೇನು? ಪ್ರಾಣಲಿಂಗಿ ಸ್ಥಳದಲ್ಲಿ ಯೋಗವು ಸಮಾವೇಶವಾಗುವದಿಲ್ಲವೇ ಹೇಗೆ? " ಈ ಪ್ರಶ್ನೆಗಳಿಗೆ ಸರಿಯಾದ ಉತ್ತರವು ಮೇಲೆ ಧ್ವನಿತವಾಗುತ್ತಿದ್ದರೂ ಅದನ್ನು ಇನ್ನಿಷ್ಟು ವಿಸ್ತಾರವಾಗಿ ಸ್ಪಷ್ಟೀಕರಿಸುವದು ಯುಕ್ತವಾಗಿ ತೋರಿದ್ದರಿಂದ ಹಾಗೆ ಮಾಡಲು ಪ್ರಯತ್ನಿಸುತ್ತೇನೆ.

ವೀರಶೈವರು ಹಠಯೋಗಿಗಳಲ್ಲ, ಶಿವಯೋಗಿಗಳು. ಹಠಯೋಗ ಮಾಡೇತೀರುತ್ತೇವೆಂದು ಹಠ ಸಾಧಿಸುವವರಿಗೆ ಬೇಡವೆಂದು ಯಾರೂ ಆಗ್ರಹ ಮಾಡುವದಿಲ್ಲ. ಹಠಯೋಗವು ವೀರಶೈವರಿಗೆ ಗ್ರಾಹ್ಯವೇ, ಅಗ್ರಾಹ್ಯವೇ? ಎಂಬದಿಷ್ಟೇ ಪ್ರಶ್ನೆ. ಅಗ್ರಾಹ್ಯವೆಂಬುದೇ ಅದಕ್ಕೆ ಉತ್ತರ. ಅದು ಹ್ಯಾಗಂದರೆ:- ಹಠಯೋಗವು ಈಗಿನ ಹೊಸ ಪದ್ಧತಿಯ ಡ್ರಿಲ್ಲಿನ ಮಾದರಿಯದಾಗಿರುತ್ತದೆ. ಬೆನ್ನು ಹುರಿಯು ಮಣಿಯೋಣ (*Curvature of the spine)* ಎದೆಯು ಮುದುಡೋಣ *(Contraction of the Chest)* ತೋಳುಗಳು ವಕ್ರವಾಗೋಣ (*Ronndess of the arms*) ಮುಂತಾದವುಗಳು ಸಂಭವಿಸಬಾರದೆಂದು ಡ್ರಿಲ್ ಶಿಕ್ಷಕರು ವಿದ್ಯಾರ್ಥಿಗಳಿಗೆ ಸೆಟಸಿ ನಿಲ್ಲುವದಕ್ಕೂ ಕೂಡ್ರುವದಕ್ಕೂ ಕಲಿಸುವದುಂಟು. ಈ ಮಾದರಿಯ

ವ್ಯಾಯಾಮ ಪಾಠಗಳನ್ನು ಹಠಯೋಗದ ಆಸನಗಳಿಗೆ ಹೋಲಿಸಬಹುದು. ಉಸುರಾಡಿಸುವ ವ್ಯಾಯಾಮ (*Brathing Exercise*) ವನ್ನು ಪ್ರಾಣಾಯಾಮಕ್ಕೆ ಹೋಲಿಸಬಹುದು. ಬಾಲಕರು ಕಣ್ಣುಗಳನ್ನು ಅರಳಿಸಿ ಮೇಲೆ ಕೆಳಗೆ ಎಡಬಲಕ್ಕೆ ನೋಡಿ ದೃಷ್ಟಿಯನ್ನು ತೀಕ್ಷ್ಣಗೊಳಿಸುವಂತೆ ಹಠಯೋಗದಲ್ಲಿ ನಾಸಿಕಾಗ್ರದಲ್ಲಿ ದೃಷ್ಟಿಯನ್ನಿರಿಸಿ ಏಕಾಗ್ರತೆಯನ್ನು ಪಡೆಯಬಹುದು. ಒಟ್ಟಿನ ಮೇಲೆ ಹಠಯೋಗವು ಡ್ರಿಲ್ಲಿನಂತೆ ಇಂದ್ರಿಯಗಳನ್ನು ಒಂದು ವ್ಯವಸ್ಥಿತ ಸ್ವರೂಪದಲ್ಲಿಟ್ಟುಕೊಳ್ಳುವ ಸಾಧನವು. ಆದರಿಂದ ಶರೀರ ಇಂದ್ರಿಯಗಳಲ್ಲಿ ಒಂದು ಪ್ರಕಾರದ ಶಿಸ್ತು (*Discipline*) ಕ್ರಮಬದ್ಧತೆಯೂ ಉಂಟಾಗಬಹುದು. ಆದರೆ ವೀರಶೈವರಿಗೆ ಈ ಪ್ರಕಾರದ ಸಾಧನವೇನೂ ಮುಖ್ಯವಲ್ಲ. ಗೌಣವು. ಗೌಣವಾದದ್ದನ್ನು ಬಿಟ್ಟರೂ ನಡೆಯುತ್ತದೆ. ಆದರೆ ಮುಖ್ಯವಾದದ್ದನ್ನು ಬಿಟ್ಟರೆಂದಿಗೂ ನಡೆಯಲಾರದು. ಹಾಗಾದರೆ ಆ ಮುಖ್ಯವಾದ ಸಾಧನವಾವುದು ?

ವೀರಶೈವರು ಇಷ್ಟಲಿಂಗ ಪೂಜೆ ಮಾಡುವಾಗ ಆಸನ ಹಾಕಿಕೊಂಡು ನೆಟ್ಟಗೆ ಕುಳಿತು ಶ್ವಾಸ ಬಿಗಿ ಹಿಡಿದು ಏಕಾಗ್ರತೆಯಿಂದ ಲಿಂಗ ನಿರೀಕ್ಷಣೆ ಮಾಡುತ್ತಿರುವದರಿಂದ ಅದು ಯೋಗವಲ್ಲವೇ? ಎಂದು ಕೆಲವರು ಕೇಳಬಹುದು. ಅದು ಯೋಗದ ಛಾಯೆಯೇನೋ ನಿಜ. ಆದರೆ ಬರೇ ಹಾಗೆ ಕೂಡ್ರುವದಷ್ಟೇ ವೀರಶೈವ ಧರ್ಮದ ಲಕ್ಷಣವಲ್ಲ. ನಮ್ಮಲ್ಲಿ ಕಣ್ಣು ಅರಳುವದು ಮುಖ್ಯವಲ್ಲ. ಹೃದಯವರಳಬೇಕು. ಅಂತಃಕರಣ ಕರಗಬೇಕು. ಆನಂದಾಶ್ರುಗಳುದುರಬೇಕು. ಪರಮಾತ್ಮನಲ್ಲಿ ತಾದಾತ್ಮ್ಯ, ತಲ್ಲೀನತೆ ಪರವಶತೆ ಅಥವಾ ಸಮರಸ ಭಾವವನ್ನು ಹೊಂದಿ ಸುಖಿಸಬೇಕು. ಇದೇ ಶಿವಯೋಗವು. ಇದೇ ಮುಖ್ಯ. ಇದು ನಮಗೆ ಸಾಧಿಸಿದರೆ ಸಾಕು. ನಾವು ಹೇಗೆ ಕುಳಿತರೂ ಸರಿಯೇ. ಹೇಗೆ ನೋಡಿದರೂ ಸರಿಯೇ. ಆಸನ ಏಕಾಗ್ರ ದೃಷ್ಟಿಗಳು ಲಿಂಗದಲ್ಲಿ ಈ ತರಹದ ಭಾವನೆಯನ್ನು ಹುಟ್ಟಿಸಲು ಸಹಾಯಕಾರಿಗಳಾಗುತ್ತಿದ್ದರೆ ಅವು ನಮಗೆ ಬೇಕು. ಲಿಂಗಕ್ಕೆ ಪತ್ರಿ ಪುಷ್ಪಗಳನ್ನೇರಿಸುವದಷ್ಟೇ ನಮ್ಮ ಅರ್ಚನೆಯಲ್ಲ. ಆ ಪತ್ರಿಪುಷ್ಪಗಳಿಂದ ಲಿಂಗವನ್ನು ಅಂದಚಂದ ಮಾಡುವದಷ್ಟೇ ಅಲ್ಲ; ಅದರಲ್ಲಿ ಎದೆಯು ಅರಳಿ ನಲಿದಾಡುವದೇ ಮುಖ್ಯ ಅರ್ಚನೆಯು. ಆದರೆ ಬರೇ ಲಿಂಗವನ್ನು ನೋಡಿ ನಾವು ಆನಂದಪರವಶರಾಗುತ್ತಿದ್ದರೆ ನಮಗೆ ಪತ್ರಿಪುಷ್ಪಗಳ ಹಂಗು ಬೇಡ. ಅದರಂತೆ ಆಸನ ಏಕಾಗ್ರ ದೃಷ್ಟಿಗಳಿಲ್ಲದೆ ನಮ್ಮ ಮನಸ್ಸು ಇಷ್ಟಲಿಂಗದಲ್ಲಿ ಸಮರಸ ಹೊಂದುತ್ತಿದ್ದರೆ

ನಮಗೆ ಆಸನ ದೃಷ್ಟಿಗಳ ಹಂಗು ಬೇಡ. ಇದೇ ಶಿವಯೋಗದ ರಹಸ್ಯವು. ಶಿವಯೋಗಕ್ಕೆ ಆಸನ ಪ್ರಾಣಾಯಾಮಾದಿಗಳು ಗೌಣವಾದವುಗಳೇ ಹೊರತು ಮುಖ್ಯವಲ್ಲ. ಆದರೆ ಹಠಯೋಗಕ್ಕೆ ಅವು ಮುಖ್ಯವಾದವುಗಳು. ಇದೇ ಹಠಯೋಗ ಶಿವಯೋಗಗಳಲ್ಲಿರುವ ವ್ಯತ್ಯಾಸವು.

ಹಠಯೋಗವು ಬಾಹ್ಯ ಇಂದ್ರಿಯಗಳ ಸಹಾಯದಿಂದ ಸಿದ್ಧಿಯನ್ನು ಪಡೆಯುವ ಸಶಾಸ್ತ್ರೀಯ ಕ್ರಮವು. ಆದರೆ ಶಿವಯೋಗವು ಅಂತರಂಗವನ್ನುಕ್ಕಿಸುವ ಕಲೆಯು. ಸಶಾಸ್ತ್ರೀಯವಾಗಿ ಮಾಡುವದೆಲ್ಲವೂ ಯಂತ್ರದ ಕೆಲಸದಂತೆ ವಿರಸವಾಗಿರುತ್ತದೆ. ಆದರೆ ಕಲಾಯುಕ್ತವಾಗಿ ಮಾಡುವ ಕಾರ್ಯದಲ್ಲಿ ಸೌಂದರ್ಯಸ್ವಾರಸ್ಯಗಳು ತುಂಬಿತುಳುಕುತ್ತವೆ. ಆದುದರಿಂದ ಶಿವಯೋಗವು ಹಠಯೋಗದ ಪರ್ಯಾಯ ಶಬ್ದವೆಂದು ಯಾರೂ ಭಾವಿಸಲಾಗದು.

ಪ್ರಾಣಲಿಂಗಾನು ಸಂಧಾನವು ಯೋಗಾಭ್ಯಾಸವಲ್ಲ. ಹಠಯೋಗವು ಮನುಷ್ಯನ ನಾಭಿಯ ಕೆಳಗೆ ಮೂಲಾಧಾರ ಚಕ್ರದಲ್ಲಿ ಸರ್ಪದಂತೆ ಸುತ್ತಿಕೊಂಡು ಕುಳಿತಿರುವ ಕುಂಡಲಿನಿ ಶಕ್ತಿಯನ್ನು ಆಸನ ಪ್ರಾಣಾಯಾಮಾದಿಗಳಿಂದ ಹೊಡೆದೆಬ್ಬಿಸಿ ಅದನ್ನು ಷಟ್ಚಕ್ರಗಳೊಳಗಿಂದ ಹಾಯಿಸಿ ಶಿರಸ್ಸಿನಲ್ಲಿರುವ ಸಹಸ್ರದಲ ಕಮಲಕ್ಕೆ ಅಡರಿಸಿ ಸಮಾಧಿಸ್ಥಿತಿಯನ್ನು ಪಡೆಯಬೇಕೆಂಬ ಹಟವುಳ್ಳದ್ದಾಗಿದೆ. ಪ್ರಾಣಲಿಂಗಾನುಸಂಧಾನವು ಇಂಥ ಕಷ್ಟಕರವಾದ ಹಟವನ್ನೇನೂ ಸಾಧಿಸಲಿಕ್ಕೆ ಹೋಗುವದಿಲ್ಲ. ಆದರೆ ಇಷ್ಟಲಿಂಗದ ಮೂಲಕ ಮಾಟ ನೋಟ ಕೂಟ ಭಕ್ತಿಯಿಂದ ಮನವೆಲ್ಲ ಲಿಂಗದಲ್ಲಿ ತಲ್ಲೀನವಾಗಿರುವುದೇ ಪ್ರಾಣಲಿಂಗಾನುಸಂಧಾನವು. ರಸಭರಿತವಾದ ಕಾವ್ಯವನ್ನೋದುವ ಸಹೃದಯನೊಬ್ಬನು ಆ ರಸವು ತನ್ನಂತರಂಗಕ್ಕೆ ಮುಟ್ಟಲು ತನ್ನನ್ನು ತಾನು ಮರೆತು ತದೇಕಧ್ಯಾನಾಸಕ್ತನಾಗುವಂತೆ ಸಾಕಾರವಾದ ಇಷ್ಟಲಿಂಗದಲ್ಲಿ ಭಕ್ತಿಯನ್ನಳವಡಿಸಿ ವೀರಶೈವನು ನಿರಾಕಾರವಾದ ಆನಂದಲಹರಿಯಲ್ಲಿ ತೇಲಾಡುವನು. ಇದೇ ಪ್ರಾಣಲಿಂಗಾನು ಸಂಧಾನವು. ಹಠಯೋಗದಂತೆ ಪ್ರಾಣಲಿಂಗಾನು ಸಂಧಾನವು ಶಾಸ್ತ್ರ ಸಿದ್ಧಾಂತವಲ್ಲ. ಅನುಭಾವಿಗಳುಂಡ ಸೊಗಸಿನ ಸವಿಯೂಟವದು.

ಷಟ್ ಸ್ಥಲಗಳಲ್ಲಿ ಪ್ರಾಣಲಿಂಗಿಸ್ಥಳವಿರುವದೇನೋ ನಿಜ. ಆದರೆ ಈ ಸ್ಥಳವು ಯೋಗಮಾರ್ಗಕ್ಕೇನೂ ಸಂಬಂಧಪಟ್ಟಿರುವದಿಲ್ಲ. “ಸಾವ

ಧ್ಯಾನದೊಳಗಣ ಸ್ವಾನುಭವದಿಂ ಪ್ರಾಣಲಿಂಗಿಯಾಗಿ" ಎಂದು ಪ್ರಭು ದೇವರು ಪ್ರಾಣಲಿಂಗಿಸ್ಥಳದ ಲಕ್ಷಣವನ್ನು ಹೇಳಿದ್ದಾರೆ. ಸ್ವಾನುಭವವು ಷಡ್ವಿಧಭಕ್ತಿಗಳಲ್ಲೊಂದಾಗಿದೆ. ಈ ಭಕ್ತಿಯ ಸಹಾಯದಿಂದ ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ಅನುಭಾವ ಉಂಟಾಗುವದೇ ಪ್ರಾಣ ಲಿಂಗಿ ಸ್ಥಳದ ಮುಖ್ಯ ಲಕ್ಷಣವು. ಈ ಪ್ರಾಣಲಿಂಗಿ ಸ್ಥಿತಿಯು ರೇಚಕ, ಪೂರಕ, ಕುಂಭಕ ಇತ್ಯಾದಿಗಳಿಂದುಂಟಾಗಿರುವದಿಲ್ಲ. ಆದರೆ ಅನುಕ್ರಮವಾಗಿ ಭಕ್ತಿಗೆ ಸಂಬಂಧಪಟ್ಟ ವಿಶ್ವಾಸ, ನಿಷ್ಠೆ, ಸಾವಧಾನಗಳಿಂದು ದ್ಭವಿಸಿರುತ್ತದೆ. ಆದುದರಿಂದ ಪ್ರಾಣಲಿಂಗಿ ಸ್ಥಳವು ಯೋಗಾಭ್ಯಾಸಕ್ಕೆ ಸಂಬಂಧಿಸಿದ್ದೆಂದು ತಿಳಿಯುವದು ಶುದ್ಧ ತಪ್ಪು.

ಇಷ್ಟಲಿಂಗವಿಲ್ಲದೆ ಬರೇ ಯೋಗಾಭ್ಯಾಸದ ಬಲದಿಂದ ಪ್ರಾಣ ಲಿಂಗದರಿವು ನನಗಾಯಿತೆಂದು ಸಿದ್ಧರಾಮಯ್ಯದೇವರು ನುಡಿದ ಕಾಲಕ್ಕೆ ಪ್ರಭುದೇವರು ಆ ಮಾತಿಗೆ ಉತ್ತರ ಕೊಟ್ಟಿದ್ದೇನಂದರೆ "ಶೂನ್ಯಕ್ಕೆ ತಲೆ ವಾರನಿಕ್ಕದಿರೋ. ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ. ವಸ್ತು ಬ್ರಹ್ಮರಂಧ್ರದಲ್ಲುಂಟೆಂದು ಹಲಬುಗೆಡದಿರೋ. ವಸ್ತುವಿನ ನಿಜವ ಕಾಂಬಡೆ ಎನ್ನ ಸದ್ಗುರು ಅನಿಮಿಷ ದೇವರಂತೆ ನಿನ್ನ ಕರಸ್ಥಲದಲ್ಲಿ ಲಿಂಗವ ನಿಶ್ಚಯಿಸಿಕೊಂಡು ನಮ್ಮ ಗುಹೇಶ್ವರಲಿಂಗದಲ್ಲಿ ನಿಬ್ಬೆರಗಾಗೋ ಸಿದ್ಧರಾಮಯ್ಯ. ನಿನಗೆ ಅಂತರ್ಲಕ್ಷ್ಯಾನು ಸಂಧಾನ ಧ್ಯಾನದಿಂದ ವಸ್ತುವ ಕಂಡಿಹೆನೆಂದರೆ ಸಾಧ್ಯವಾಗದು ನೋಡಾ" ಆದುದರಿಂದ ಪ್ರಾಣಲಿಂಗಿಗೆ ಭಕ್ತಿಯೇ ಮುಖ್ಯವಲ್ಲದೆ ಹಠಯೋಗವೇನೂ ಕಾರಣವಲ್ಲ. ವೀರಶೈವರ ಯೋಗವು ಶಿವಯೋಗವು ಅಷ್ಟಾಂಗಯುಕ್ತವಾದ ಹಠಯೋಗವಲ್ಲ.

೩

## ಶಿವಯೋಗವು ಚಿತ್ತವೃತ್ತಿ ನಿರೋಧವೇ?

"ಯೋಗಶ್ಚಿತ್ತವೃತ್ತಿನಿರೋಧಃ" ಎಂದು ಅಷ್ಟಾಂಗಯೋಗವನ್ನು ಪರಾಮರ್ಶಿಸುವವರು ಹೇಳಿದ್ದಾರೆ. ಆದರೆ ವೀರಶೈವರ ಶಿವಯೋಗವು ಚಿತ್ತವೃತ್ತಿನಿರೋಧವಲ್ಲ; ಇಂದ್ರಿಯನಿಗ್ರಹವಲ್ಲ; ಆದರೆ ಅದು ಮನಸ್ಸಿನ ಪ್ರವೃತ್ತಿಗಳನ್ನು ಸದ್ವಿಷಯಗಳ ಕಡೆಗೆ ಹೊರಳಿಸುವದು ಇದೆ. ಮಾನಸ ಶಾಸ್ತ್ರದಲ್ಲಿ *Subli mation* (ಸ್ವಭಾವವನ್ನು ಉದಾತ್ತಗೊಳಿಸೋಣ) ವೆಂದು ಯಾವುದಕ್ಕೆ ಕರೆಯುತ್ತಾರೆಯೋ ಅದೇ ಶಿವಯೋಗವೆಂದು ನಾವು

ಹೇಳಬಹುದು. ಅದರಂತೆಯೇ *Repression* ಅಥವಾ *Suppression* (ಮನಪ್ರವೃತ್ತಿಯನ್ನು ಕುಗ್ಗಿಸೋಣ) ವೆಂದು ಯಾವುದಕ್ಕೆ ಹೇಳುವರೋ ಅದೇ ಅಷ್ಟಾಂಗಯೋಗವೆಂದು ಹೇಳಬಹುದು. ಮನಸ್ಸಿನ ಪ್ರವೃತ್ತಿಯನ್ನು ಬಲಾತ್ಕಾರದಿಂದ ಕುಗ್ಗಿಸಿ ಅಟಕಿನಲ್ಲಿಟ್ಟರೆ ಅದು ನಮ್ಮ ಮೇಲೆ ಸಿಟ್ಟಿಗೆದ್ದು ಒಂದಿಲ್ಲೊಂದು ದಿನ ಸೇಡುತೀರಿಸಿಕೊಳ್ಳದೆ ಬಿಡುವದಿಲ್ಲ. ಅಡವಿಯಲ್ಲಿರುವ ಒಂದು ಹುಲಿಯನ್ನು ಹಿಡಿದು ತಂದು ಅದಕ್ಕೆ ಹೊಡೆದು ಬಡೆದು ಬೆದರಿಕೆ ಹಾಕಿ ಅದು ನಮಗೆ ಕಡಿಯದಂತೆ ಹತೋಟಿಯಲ್ಲಿಟ್ಟುಕೊಳ್ಳಬಹುದು. ಆದರೆ ಆ ಹುಲಿಯು ಬೆದರಿಕೆಯಿಂದ ಮಾತ್ರ ನಮ್ಮ ಸ್ವಾಧೀನವಾಗಿರುವದೇ ಹೊರತು ತಪೋವನದ ಹುಲಿಯಂತೆ ಅಂತರಂಗದ ಪ್ರೇಮದಿಂದಲ್ಲ. ಒಂದಾನೊಂದು ದಿನ ನಾವು ಮೈಮರೆತು ನಿಂತಾಗ ಆ ಹುಲಿಯು ನಮ್ಮನ್ನು ಹಿಚುಕಿ ಹಾಕಬಹುದು. ಕಾಮವಾಸನೆಗೆಳಸುವ ಮನಸ್ಸನ್ನು ಬಗ್ಗುಬಡಿಯಬೇಕೆಂದು ಅಡವಿಗೆ ಓಡಿಹೋದರೇನು? ಸ್ತ್ರೀಯರ ಮುಖಾವಲೋಕನ ಮಾಡದಿದ್ದರೇನು? ಆಸನ ಪ್ರಾಣಾಯಾಮಾದಿಗಳ ಸಹಾಯದಿಂದ ಹರಿದಾಡುವ ಮನವನ್ನು ತಡೆದರೇನು? ನದಿಗೆ ಒಡ್ಡುಹಾಕಿ ಗಟ್ಟಿ ಮಾಡಿದರೂ ಅದು ಒಂದಿಲ್ಲೊಂದು ದಿನ ತನ್ನ ಬಲವಾದ ಪ್ರವಾಹದ ಸೆಳವಿನಿಂದ ಒಡ್ಡನ್ನು ಹಾರಿ ಹೊಡೆದು ಪುನಃ ಮುಂದಕ್ಕೆ ಸಾಗುವದೇ ಅದರ ಧರ್ಮವು ಹೇಗೋ ಹಾಗೆಯೇ ತಪಸ್ಸು, ಆತ್ಮಸಂಯಮನ ಸ್ತ್ರೀಪುರುಷರ ಸಮಾಜದಿಂದ ದೂರಾಗಿರೋಣ ಮುಂತಾದ ನಾನಾ ತರದ ಕಷ್ಟಕರವಾದ ವ್ರತಗಳನ್ನಾಚರಿಸಿ ಮನಸ್ಸಿನ ಓಘವನ್ನು ತಡೆದರೂ ಒಂದಿಲ್ಲೊಂದು ದಿನ ಅದು ತನ್ನ ಸ್ವಭಾವದಂತೆ ವಿಷಯಾದಿಗಳ ಕಡೆಗೆ ಹರಿದುಹೋಗಲೇಬೇಕು. ಇದಕ್ಕೆ ಉದಾಹರಣೆಗಳೇನೂ ಕಡಿಮೆಯಿಲ್ಲ. ಗಡ್ಡ ಜಟಿಗಳನ್ನು ಬಿಟ್ಟು ಮಹಾ ಉಗ್ರತಪವನ್ನಾಚರಿಸಿದ ಯೋಗಿಯ ಮನವೆಲ್ಲ ಯಾತರ ಮೇಲೆ ಇದೆ ಎಂಬದನ್ನು ಸರ್ವಜ್ಞ ಹೇಳಿದ ಮಾತು ಸುಳ್ಳಲ್ಲ. ಅಭ್ಯಾಸದಿಂದ ಇಂದ್ರಿಯನಿಗ್ರಹ ಮಾಡಿ ಮನಸ್ಸಿನಿಂದ ಪವಿತ್ರರಾಗಿರುವೆವೆಂದು ಹೇಳುವ ಡಂಭಕರಿಗೆ ಅವರು ಮನಸಾ ಎಷ್ಟು ಪವಿತ್ರರಾಗಿರುವರೆಂಬದಕ್ಕೆ ಕೊನೆಗೆ ಅವರ ಮನವೇ ಸಾಕ್ಷಿ. 'ಜನರೇನು ಬಲ್ಲರು ಒಳಗಾಗೋ ಕೃತ್ಯವ ಮನವರಿಯದ ಕಳ್ಳತನವಿಲ್ಲವಲ್ಲ' ಎಂಬ ಸರ್ಪಭೂಷಣ ಶಿವಯೋಗಿಗಳ ಪದವು ಅವರ ಸ್ಮೃತಿಪಥಕ್ಕೆ ಬರಲಿ.

ಇಂದ್ರಿಯ ಪ್ರವೃತ್ತಿಯನ್ನು ತಡೆಯುವದರಿಂದ ನಮಗೆ ನಿಜ ಸುಖ ದೊರೆಯಲಾರದು. ಅದರಂತೆಯೇ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಯಥೇಚ್ಛವಾಗಿ ಹರಿಬಿಟ್ಟರೂ ಪರಸುಖವು ದೊರೆಯದು. ಅಂದಮೇಲೆ ನಾವು ನಿಜಸುಖವನ್ನು ಸಾಧಿಸಬೇಕಾದರೆ ಹೇಗೆ ಮಾಡಬೇಕು? ಇಂದ್ರಿಯ ಪ್ರವೃತ್ತಿಯನ್ನು ಅಲ್ಲದ ವಿಷಯಗಳ ಕಡೆಗೆ ಎಳಿಸದಂತೆ ಸದ್ವಿಷಯಗಳ ಕಡೆಗೆ ಹರಿಯಗೊಡಬೇಕು. ಹಾಗೆ ಮಾಡಿದರೆ ಇಂದ್ರಿಯ ನಿಗ್ರಹ ಮಾಡಿದಂತಾಗಲಿಲ್ಲ. ಮನಸ್ಸನ್ನು ಕುಗ್ಗಿಸಿದಂತಾಗಲಿಲ್ಲ. ಹರಿದಾಡುವ ಪ್ರವಾಹಕ್ಕೆ ಮಲದಿಂದ ಕೂಡಿದ ಕೆಡಕು ಸ್ಥಳದ ಕಡೆಗೆ ದಾರಿಯನ್ನು ಕೊಡದೆ ಶುಚಿರ್ಭೂತವಾದ ಭೂಮಿಯ ಕಡೆಗೆ ಅದರ ದಿಶೆಯನ್ನು ತಿರುಗಿಸಿದಂತೆ ಪರಧನ, ಪರಸ್ತ್ರೀ, ಅಭ್ಯಕ್ಷ್ಯಭಕ್ಷಣ, ಅಪಾನಪೇಯ ಮುಂತಾದವುಗಳ ಕಡೆಗೆ ಹರಿದು ಹೋಗುವ ಮನವನ್ನು ಸದ್ವಿಷಯಗಳ ಕಡೆಗೆ ಹೊರಳಿಸುವದೇ ಶಿವಯೋಗವು. ಹಾಗೆ ಮಾಡುವವರೇ ಶಿವಯೋಗಿಗಳು. ಅನ್ನ ಧನಗಳ ಕಡೆಗೆ ಮನಸ್ಸಾಗುವದೇನೋ ದೇಹದ ಸಹಜ ಸ್ವಭಾವವು. ಆದರೆ ಆ ಆಶೆಗಳನ್ನು ತಡೆಯಬೇಕೆಂದು ನಾವು ಉಪವಾಸ, ವೈರಾಗ್ಯ ವ್ರತಗಳನ್ನಾಚರಿಸಬಾರದು. ಪರಾನ್ನ ಪರದ್ರವ್ಯಗಳಿಗೆ ತಿರುಕರಂತೆ ಆಶೆಮಾಡಬಾರದು. ನಾಗರಿಕ ಸಮಾಜದಲ್ಲಿ ಹಾಗೆ ಮಾಡುವದು ಹ್ಯೇಯವು. ಆದುದರಿಂದ ಅನ್ನ ದ್ರವ್ಯಗಳನ್ನು ನಾವು ಸತ್ಕ್ರಿಯಕದಿಂದ ಗಳಿಸಿ ಸುಖಿಸಬೇಕು. ಕಾಯಕವೇ ಕೈಲಾಸ. ನಮ್ಮ ಶಿವಶರಣರು ತಿರುಕರಂತೆ ಒಬ್ಬರ ಮನೆಯ ಅನ್ನಕ್ಕಾಗಲಿ ದುಡ್ಡಿಗಾಗಲಿ ಆಶೆ ಮಾಡಲಿಲ್ಲ. ಸ್ವಂತ ಪರಿಶ್ರಮದಿಂದ ದುಡಿದು ದುಡ್ಡು ಗಳಿಸಿ ಉಂಡುಟ್ಟು ಸುಖಿಸುತ್ತಿದ್ದರು. ಸತ್ಕಾರ್ಯಕ್ಕೆ ದಾನಧರ್ಮಗಳನ್ನು ಮಾಡುತ್ತಿದ್ದರು. ಇದೇ ಶಿವಯೋಗವು. ಸ್ತ್ರೀಯರ ಕೂಟಕ್ಕೆ ಮನಸ್ಸಾಗುವದೇನೋ ಮಾನವ ಸ್ವಭಾವವು ತರುಗ ಬ್ರಹ್ಮಚಾರಿಗಳಂತೆ 'ಇಲ್ಲದಕೆ ಒಲ್ಲ ಸರ್ವಜ್ಞ' ಎಂಬಂತೆ ಇಂದ್ರಿಯ ನಿಗ್ರಹಿಯಾದರು ಒಳಗೊಳಗೆ ಕೊರಗುತ್ತ ಬಹಿರಂಗದಲ್ಲಿ ಮಹಾವಿರತಿಯುಳ್ಳಾತನೆಂದು ಹೇಳುವದೇನೂ ತಕ್ಕುದಲ್ಲ. ತನಗೆ ಯೋಗ್ಯಳಾದ ಪತ್ನಿಯನ್ನು ಲಗ್ನಮಾಡಿಕೊಂಡು ಸುಖಿಸಬೇಕು. ಇಲ್ಲವೆ ಸ್ತ್ರೀಕೂಟವನ್ನು ತ್ಯಜಿಸಿ ಇಷ್ಟಲಿಂಗದಲ್ಲಿ ಮನಃಕೂಟವುಳ್ಳವನಾಗಬೇಕು. ಲಿಂಗಧ್ಯಾನವುಳ್ಳವನಾಗಿ ಅದರಲ್ಲಿಯೇ ತನ್ನ ಪ್ರೇಮವನ್ನಳವಡಿಸಿ ತಾನೇ ಸತಿಯಾಗಿ ಲಿಂಗವೇ ಪತಿಯೆಂದು ಸಮರತಿಸುಖವನ್ನು ಪಡೆಯಬೇಕು. ಕಾಮವಾಸನೆಯನ್ನಳಿಯಲಿಕ್ಕೆ 'ಶರಣಸತಿ

ಲಿಂಗಪತಿ' ಭಾವವು ಸರ್ವೋತ್ಕೃಷ್ಟವಾದದು. ಇಷ್ಟಲಿಂಗ ಪೂಜೆಯು ಅದಕ್ಕಾಗಿಯೇ ಏರ್ಪಟ್ಟಿದೆ ನಮ್ಮ ಶಿವಶರಣರು ಕುಟುಂಬಿಗಳಾಗಿದ್ದರೂ "ಶರಣಸತಿ ಲಿಂಗಪತಿ" ಯೆಂಬ ಪವಿತ್ರ ಭಾವನೆಯಿಂದಲೇ ಸುಖವನ್ನು ಹೊಂದಿದರು. ಇದೇ ಅಲ್ಲವೇ ನಿಜವಾದ ಶಿವಯೋಗವು? ಅಥವಾ ಅನ್ಯರ ಹೆಣ್ಣುಮಕ್ಕಳನ್ನು ಕಾಮಭಾವದಿಂದ ನೋಡದೆ ಪೂಜಾಭಾವನೆಯಿಂದ ಕಾಣಬೇಕು. ಕೆಲವರು ಹೆಣ್ಣು ಮಾಯೆಯೆಂದೂ ರಕ್ಕಸಿಯೆಂದೂ ಕರೆದಿರುವರು. ಹೆಣ್ಣಿಗೆ ಅಂಜಿ ಕಾನನವನ್ನು ಸೇರಿರುವರು. ಆದರೆ ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನನೆಂದು ನಮ್ಮ ಶಿವಶರಣರು ಭಾವಿಸಿರುವರು. ನಾಗರಿಕರಾಗಿದ್ದುಕೊಂಡು ಇಂಥ ಶಿವಯೋಗವನ್ನು ಅನುಭವಿಸುವದನ್ನು ಬಿಟ್ಟು ಅಂಜಿ ಅರಣ್ಯಕ್ಕೇಕೆ ಓಡಿಹೋಗಬೇಕು?

ಅಭಕ್ಷ್ಯಭಕ್ಷಣ ಅಪಾನಪೇಯಗಳ ಕಡೆಗೆ ನಮ್ಮ ಮನಸ್ಸು ಹರಿಯುತ್ತಿದ್ದರೆ ಆ ಮನಸ್ಸನ್ನು ಪ್ರಸಾದ ಪಾದೋದಕಗಳೆಂಬ ಪವಿತ್ರ ವಿಷಯಗಳ ಕಡೆಗೆ ತಿರುಗಿಸಬೇಕು. ಅವುಗಳನ್ನು ಮಾಡುವದಿಲ್ಲೆಂದು ಶಪಥಗಳನ್ನೇಕೆ ಮಾಡಬೇಕು? ಮಾಡಿದ್ದರೆ ಮಾಡಿದ್ದು ತಪ್ಪಾಯಿತೆಂದು ಪ್ರಾಯಶ್ಚಿತ್ತಗಳನ್ನೇಕೆ ತೆಗೆದುಕೊಳ್ಳಬೇಕು? ನಮ್ಮ ಶಿವಶರಣರು ಶುದ್ಧ ಶಾಕಾಹಾರಿಗಳಾದುದರಿಂದಲೇ ಅನ್ಯ ಸಂಸರ್ಗದಿಂದ ಮಾಂಸಾಹಾರ, ಮಾದಕವಸ್ತುಗಳ ಸೇವನೆ, ಮುಂತಾದವುಗಳಿಂದ ದೂರಾಗಿ ಪ್ರಸಾದ ಪಾದೋದಕಗಳ ಕಡೆಗೇ ತಮ್ಮ ಮನಸ್ಸನ್ನು ತಿರುಗಿಸಿದರು ಇದೇ ಶಿವಯೋಗವು.

ಶಿವಯೋಗವು ನಿಷೇಧ ನಿವೃತ್ತಿಗಳಿಂದ ಕೂಡಿದುದಲ್ಲ. ವಿಧಿ ಪ್ರವೃತ್ತಿಮಾರ್ಗಗಳೇ ಅದಕ್ಕೆ ಮೂಲಾಧಾರಗಳು ವೀರಶೈವ ಧರ್ಮವು ಭಕ್ತಿಯ ತಳಹದಿಯ ಮೇಲೆ ಕಟ್ಟಲ್ಪಟ್ಟಿದೆ. ಭಕ್ತಿಯು ಪ್ರವೃತ್ತಿಯ ದ್ಯೋತಕವು. ಭಕ್ತಿಗೆ ಬೇಕೆಂಬ ದುರಾಶೆಯಿಲ್ಲ. ಬೇಡೆಂಬ ಹಟವಿಲ್ಲ. ಪರಿಶುದ್ಧ ಹಾಗು ನಿಷ್ಕಾಮ ಭಕ್ತಿಯದು. ನಿಷ್ಕಾಮ ಭಕ್ತಿಯಿಂದ ಜಗತ್ತಿನ ಸದ್ವ್ಯವಹಾರಗಳನ್ನೆಲ್ಲ ನಮ್ಮ ಶಿವಶರಣರು ಜರಗಿಸಿದರೂ ಅವರ ಅಂತರಾತ್ಮವು ಯಾವಾಗಲೂ ಪರಶಿವನ ಪರಂಧಾಮದಲ್ಲಿ ನೆಲಿಸಿರುತ್ತದೆ. ನಮ್ಮ ಶಿವಯೋಗಿಗಳು "ಲೋಕದೊಳಗಿದ್ದೂ ಇಲ್ಲದ ಮಹಿಮರು." ನಮ್ಮವರು ಉದಾಸೀನ (*Passive*) ಸ್ವಭಾವದವರಲ್ಲ. ಆದರೆ ಚಟುವಟಿಕೆಯುಳ್ಳವರೂ (*Active*) ಉತ್ಪಾದಕ ಶಕ್ತಿಯುಳ್ಳವರೂ (*Creative*) ಆಗಿರುವರು ಶಿವಯೋಗವು ಚಿತ್ತವೃತ್ತಿ ನಿರೋಧವಲ್ಲ; ಚಿತ್ತವೃತ್ತಿ ಪವಿತ್ರೀಕರಣವು.

೪

## ಶಿವಯೋಗವು ಮನುಷ್ಯತ್ವವೋ ದೇವತ್ವವೋ?

ಶಿವಯೋಗಿಗಳು ನಿಜವಾಗಿ ಮನುಷ್ಯರೇ ಅಹುದು. ಆದರೂ ಅವರು ತಮ್ಮ ಅಲೌಕಿಕವಾದ ಗುಣಧರ್ಮಗಳಿಂದ ದೇವರಂತೆ ಮನ್ನಿಸಲ್ಪಡುತ್ತಾರೆ. ಅದ್ವಿತೀಯರಾದ ವಿಭೂತಿಗಳನ್ನು ದೇವರೆಂದು ಭಾವಿಸುವದು ನಮ್ಮ ದೇಶದ ಸಾಂಪ್ರದಾಯವಾಗಿದೆ. ಆದರೆ ಅಸಂಬದ್ಧವಾದ ಗುಣಾರೋಪಣ ಮಾಡಿ ಅವರನ್ನು ದೇವರೆಂದು ತಿಳಿಯುವದು ಮಾತ್ರ ಶುದ್ಧ ತಪ್ಪು. ಶಿವಯೋಗಿಗಳೆಂಬವರು ಮುಗಿಲಮೇಲಿಂದಿಳಿದು ಬಂದಿಲ್ಲ. ಕಲ್ಲು ಮಣ್ಣು, ಕಿವಿ, ಮೂಗು, ತೊಡೆಗಳಲ್ಲಿ ಹುಟ್ಟಿಬಂದಿಲ್ಲ. ಅದರಂತೆಯೇ ಶಿಲೆಯಲ್ಲಿ ಐಕ್ಯತೆ ಹೊಂದಿಲ್ಲ. ಪರಶಿವನೇ ಶಿವಯೋಗಿಗಳಾಗಿ ಭೂಮಿಗವತರಿಸಿಲ್ಲ. ಅವರ ಜನನ ಜೀವನ ಮರಣಗಳೇನೂ ಪ್ರಕೃತಿವಿರುದ್ಧವಾಗಿರುವದಿಲ್ಲ. ಶಿವಯೋಗಿಗಳು ನಮ್ಮಂತೆ ಮನುಷ್ಯರೇ ಅಹುದು. ನಮ್ಮಂತೆ ಅವರಿಗೆ ಹಸಿವೆ ನೀರಡಿಕೆಗಳಾಗುವದುಂಟು. ಕಾಮಕ್ರೋಧಾದಿ ವಿಕಾರಗಳೂ ಉಂಟು. ಸಾಮಾನ್ಯ ಮನುಷ್ಯರು ಆಚರಿಸುವ ನಿತ್ಯ ವ್ಯವಹಾರಗಳನ್ನು ಅವರೂ ಆಚರಿಸುವರು. ಮನುಷ್ಯರಾಗಿ ಹುಟ್ಟಿದ ಬಳಿಕ ಮನುಷ್ಯತ್ವದ ಸಾಮಾನ್ಯ ಧರ್ಮಗಳು ಅವರಲ್ಲಿ ಉಂಟೇಉಂಟು. ಅವು ಅವರಲ್ಲಿಲ್ಲವೆನ್ನುವದು ಮೂರ್ಖತನವು. ಅವು ಇಲ್ಲದಿದ್ದರೆ ಅವರು ಮನುಷ್ಯರಾಗಿಯೇ ಹುಟ್ಟುತ್ತಿರಲಿಲ್ಲ. ಅವರೇನೂ ಪಿಶಾಚಿಗಳಂತೆ ಒಮ್ಮೆ ಕಣ್ಣಿಗೆ ತೋರಿ ಮತ್ತೊಮ್ಮೆ ಕಣ್ಮರೆಯಾಗಿ ಹೋಗುವವರಲ್ಲ. ಆದುದರಿಂದ ಶಿವಯೋಗಿಗಳು ಭೂತಗಳಲ್ಲ, ಭೂತೇಶರೂ ಅಲ್ಲ. ಆದರೆ ಮನುಷ್ಯರೆಂಬ ಮಾತನ್ನು ಎಲ್ಲರೂ ಒಪ್ಪಬೇಕಾದ ಸಂಗತಿಯು.

ಶಿವಯೋಗಿಗಳು ಜನ್ಮತಃ ಮನುಷ್ಯರಾದರೂ ತಮ್ಮಲ್ಲಿರುವ ಲೋಕೋತ್ತರ ಗುಣಗಳ ಮೂಲಕ ಜನರಿಂದ ದೇವರಂತೆ ತಿಳಿಯಲ್ಪಡುತ್ತಾರೆ. ಆದರೆ ಅವರು ತಮಗೆ ಜನರು ಶಿವಯೋಗಿಗಳೆನ್ನಬೇಕೆಂದು ನಿಶಾನೆಯನ್ನೇರಿಸಿಕೊಂಡು ಹೊರಟಿಲ್ಲ. ಜನರು ಅವರ ಗುಣಧರ್ಮಗಳಿಗೆ ಅಚ್ಚರಿಗೊಂಡು ಅವರ ಬಗ್ಗೆ ಭಕ್ತಿಯು ಹೆಚ್ಚಾಗಿ "ಶಿವಯೋಗಿಗಳು ದೇವರಂತೆ ಇದ್ದಾರೆ. ಪರಶಿವನಂತೆ ಇದ್ದಾರೆ" ಎಂಬ ಉಪಮೆಯ ವಾಕ್ಯಗಳನ್ನು ಮೊದಲು ನುಡಿಯಹತ್ತಿದರು. ಬರಬರುತ್ತ ಈ ಉಪಮೆಯು ಸೀಮೆಯನ್ನು ಮೀರಿ ರೂಪಕವಾಗಿ "ಶಿವಯೋಗಿಗಳು ಸಾಕ್ಷಾತ್

ಪರಶಿವನೇ" ಆಗಿದ್ದಾರೆ. ಅದರಂತೆಯೇ ಅವರು ಮಾಡಿದ ಲೋಕೋತ್ತರ ಕಾರ್ಯಗಳು ಮೊದಲು ಉತ್ಪ್ರೇಕ್ಷೆಯಾಗಿದ್ದು ಕೊನೆಗೆ ಅತಿಶಯೋಕ್ತಿಗಳಾದವು ಈ ಅತಿಶಯೋಕ್ತಿಗಳಿಗೇ ಜನರು ಪವಾಡಗಳೆಂದು ಹೆಸರಿಟ್ಟಿದ್ದಾರೆ. ಉದಾಹರಣಾರ್ಥ "ಶಿವಯೋಗಿಗಳು" ಆ ದುಷ್ಟ ಮನುಷ್ಯನನ್ನು ನೋಡಿದಾಕ್ಷಣವೇ ಆತನು ಸುಟ್ಟು ಬೂದಿಯಾದನು." ಈ ವಾಕ್ಯವು ಮೊದಲು "ಶಿವಯೋಗಿಗಳು ಆ ದುಷ್ಟ ಮನುಷ್ಯನನ್ನು ನೋಡಿದ ಕೂಡಲೆ ಆತನು ಸುಟ್ಟು ಭಸ್ಮವಾದನೋ ಏನೋ ಎಂಬಂತೆ ಕಾಂತಿಹೀನನಾದನು." ಎಂಬರ್ಥದ ಉತ್ಪ್ರೇಕ್ಷೆಯಿದ್ದು ಬರಬರುತ್ತ ಮೇಲೆ ಕಾಣಿಸಿದ ಅತಿಶಯೋಕ್ತಿಯಾಗಿದೆ. ಇದು ನಿಜವೆಂದೇ ತಿಳಿದು ಜನರು "ಅಹಾ! ಶಿವಯೋಗಿಗಳು ಎಂಥ ಮಹಿಮರಪ್ಪಾ! ಆ ದುಷ್ಟನನ್ನು ದೃಷ್ಟಿಮಾತ್ರದಿಂದ ಸುಟ್ಟು ಬೂದಿ ಮಾಡಿದರಂತೆ! ನಿಜವಾಗಿಯೂ ಅವರು ಪವಾಡ ಪುರುಷರು" ಎಂದು ನುಡಿಯಲಾರಂಭಿಸಿದರು. ಈ ಮೇರೆಗೆ ಅತಿಶಯೋಕ್ತಿಯು ಪವಾಡವಾಗಿದೆ.

ದೇವರು ಎಂಥವನು? ಎಲ್ಲಿರುವನು? ಎಂಬುದೇ ತಿಳಿಯುದಂಥ ಪಾಮರರಾದ ನಾವು ಮೊದಮೊದಲು ನಿಸರ್ಗರೂಪಗಳನ್ನು ಅನಂತರ ಕಲ್ಲುಧಾತುಗಳ ಮೂರ್ತಿಗಳನ್ನು ಬರಬರುತ್ತ ಮನುಷ್ಯವರ್ಗದ ಗುಣಧರ್ಮಗಳನ್ನು ಮೀರಿದ ಮಹಾಪುರುಷರನ್ನು ದೇವರೆಂದು ಭಾವಿಸಿ ಪೂಜಿಸಹತ್ತಿದ್ದೇವೆ. ಹೀಗಾಗಿ ಶಿವಯೋಗಿಗಳು ನಮಗೆ ಮನುಷ್ಯರಾಗಿ ಕಾಣದೆ ದೇವರಾಗಿ ಕಾಣಹತ್ತಿದ್ದಾರೆ. ಶಿವಯೋಗವು ಮನುಷ್ಯತ್ವವಾಗದೆ ದೇವತ್ವವಾಗಿದೆ

ಶಿವಯೋಗಿಗಳನ್ನು ನಾವು ಹೆಚ್ಚಿನವರೆಂದು ಕರೆದರೂ ಅವರೇನೂ ಸ್ವತಃ ಹೆಚ್ಚಿನವರೆಂದು ತಮ್ಮಷ್ಟಕ್ಕೆ ತಾವೇ ಹೊಗಳಿಕೊಂಡಿಲ್ಲ. ಹಾಗೆ ಹೊಗಳಿಕೊಂಡಿದ್ದರೆ ಅವರು ನಮ್ಮ ಪಾಲಿಗೆ ದೇವರಾಗುತ್ತಿದ್ದಿಲ್ಲ. ಮನುಷ್ಯರೇ ಆಗುತ್ತಿದ್ದರು. ಬಸವಣ್ಣನವರು "ಎನಗಿಂತ ಕಿರಿಯರಾರಿಲ್ಲ, ಶಿವಭಕ್ತರಿಗಿಂತ ಹಿರಿಯರಾರಿಲ್ಲ." ಎಂದು ವಿನಯೋಕ್ತಿಗಳನ್ನಾಡಿ ಆಚರಿಸಿ ತೋರಿಸಿದ್ದರಿಂದಲೇ ಅವರು ನಮಗೆ ದೇವರಾಗಿದ್ದಾರೆ. ದೇವರೆಂದರೆ ವಿಶ್ವವನ್ನು ನಿರ್ಮಾಣ ಮಾಡಿ ಅದನ್ನು ಆಳುವ ದಿವ್ಯಶಕ್ತಿ ಎಂಬರ್ಥದಿಂದ ನಾವು ಶಿವಯೋಗಿಗಳನ್ನಾಗಲಿ, ಬಸವಾದಿ ಪ್ರಮಥರನ್ನಾಗಲಿ ಕರೆಯುವದಿಲ್ಲ. ದೇವರೆಂದರೆ ಮಹಾವಿಭೂತಿಗಳು. ಸಾಮಾನ್ಯ ಮನುಷ್ಯವರ್ಗಕ್ಕೆ ಮೀರಿದವರು ಇಷ್ಟೇ ಅರ್ಥ.

ಈಗ ನಮ್ಮ ಸಮಾಜದಲ್ಲಿ ಯಾವ ಯೋಗ್ಯತೆಯು ಇಲ್ಲದ ಅನೇಕ ವ್ಯಕ್ತಿಗಳು ತಮ್ಮಿಷ್ಟಕ್ಕೆ ತಾವೇ ಹೆಚ್ಚಿನವರೆಂದು ತಮ್ಮ ಬೆನ್ನು ಚಪ್ಪರಿಸಿಕೊಳ್ಳುವದು ವಿಷಾದದ ಸಂಗತಿಯಾಗಿದೆ. ಅವರು ತಮ್ಮ ಸ್ವರೂಪ ಹಾನಿಯನ್ನು ಮಾಡಿಕೊಳ್ಳುವದಲ್ಲದೆ ಶಿವಯೋಗಿ ಶಿವಶರಣರೆಂಬ ಹೆಸರುಗಳಿಗೆ ಕಲಂಕ ಹಚ್ಚುವರು. ಇಂಥವರು ಮನುಷ್ಯವರ್ಗದ ಸಾದಾ ಪ್ರಾಣಿಗಳೇ ಹೊರತು ದೇವಾಂಶ ಸಂಭೂತರಲ್ಲ. ನಾ ಹೆಚ್ಚು ನೀ ಹೆಚ್ಚೆಂದು ಹೊಗಳಿಸಿಕೊಳ್ಳುವಂಥ ಅತಿರಥ ಮಹಾರಥರು ಶಿವಯೋಗಿಗಳೇ? ಜಗದ್ಗುರು ಜಗದಾಚಾರ್ಯರೆಂದು ಜಯಭೇರಿಯನ್ನು ಹೊಯ್ಸುವವರು ಶಿವಯೋಗಿಗಳೇ? ಸ್ವಾರ್ಥಕ್ಕಾಗಿ ಮಠಪೀಠಾಧಿಕಾರಗಳಿಗೆ ಹಂಬಲಿಸುವವರು ಶಿವಯೋಗಿಗಳೇ, ಛೀ ಅಲ್ಲ. ಆದರೆ "ಸರ್ವಲೋಕೋಪಕಾರಾಯಯೋ ದೇವಃ ಪರಮೇಶ್ವರಃ। ಚರತ್ಯತಿಥಿ ರೂಪೇಣ ನಮಸ್ತೇ ಶಿವಯೋಗಿನೇ"॥ ಎಂಬಂತೆ ಯಾವಾತನು ಸರ್ವಲೋಕದ ಉಪಕಾರಾರ್ಥನಾಗಿ ಜಗತ್ತಿನಲ್ಲಿ ಅತಿಥಿಯಾಗಿ ಸಂಚರಿಸುವನೋ ಆತನೇ ಶಿವಯೋಗಿಯು. ಆತನು ವಿಶ್ವಕುಟುಂಬಿಯು. ಆತನಿಗೆ ಯಾವ ಮಠಾಧಿಕಾರದ ಹಂಗೂ ಇರುವದಿಲ್ಲ.

ಮಠಪೀಠಾದಿಗಳು ಮುನಸಿಪಾಲ್ಟಿ ಲೋಕಲ್‌ಬೋರ್ಡುಗಳಂತೆ ಸಂಸ್ಥೆಗಳು ಹಿಂದಕ್ಕೆ ಈ ಮಠಪೀಠಗಳ ಅಧೀನದಲ್ಲಿ ಶಿಕ್ಷಣ, ಧರ್ಮವಿಧಾನ, ನ್ಯಾಯತೀರಿಸೋಣ, ಸಮಾಜದಲ್ಲಿ ಸ್ವಚ್ಛತೆ ಆರೋಗ್ಯಗಳನ್ನಿಡೋಣ, ಅನಾಥಾಲಯ ಉಚಿತ ಶಿಕ್ಷಣಗಳ ಏರ್ಪಾಟು ಮುಂತಾದ ಉಪಯುಕ್ತ ಕಾರ್ಯಗಳಿದ್ದವು. ಆದರೆ ಈ ಕಾರ್ಯಗಳನ್ನೆಲ್ಲ ಈಗ ಬೇರೆ ಬೇರೆ ಸಂಸ್ಥೆಗಳು ಆಕ್ರಮಿಸಿಬಿಟ್ಟಿರುತ್ತವೆ. ಉದಾಹರಣಾರ್ಥ ಶಿಕ್ಷಣವನ್ನು ಶಾಲಾ ಸಂಸ್ಥೆಗಳೂ ಬೋರ್ಡುಗಳೂ ಆಕ್ರಮಿಸಿರುತ್ತವೆ. ಸ್ವಚ್ಛತೆ ಆರೋಗ್ಯಗಳನ್ನು ಮುನಸಿಪಾಲ್ಟಿಗಳು ನೋಡಿಕೊಳ್ಳುತ್ತವೆ. ನ್ಯಾಯತೀರಿಸುವ ಕೆಲಸವು ಸರಕಾರದ ಅಧೀನವಾಗಿದೆ. ಸಮಾಜಸುಧಾರಣೆಯ ಆಲೋಚನಾ ಕಾರ್ಯಗಳನ್ನು ಮಹಾಸಭೆಯು ಮಾಡುತ್ತದೆ. ಅನಾಥಾಲಯ ಉಚಿತ ಶಿಕ್ಷಣಗಳ ವ್ಯವಸ್ಥೆಯನ್ನು ತರುಣಸಂಘ, ಫ್ರೀಬೋರ್ಡಿಂಗ ಮೊದಲಾದ ಸಂಸ್ಥೆಗಳು ಕೈಕೊಂಡಿವೆ. ಈಗ ಸದ್ಯಕ್ಕೆ ಮಠಪೀಠಗಳ ಸ್ವಾಧೀನದಲ್ಲಿ ಉಳಿದದ್ದೆಂದರೆ ಧಾರ್ಮಿಕ ವಿಧಾನವೊಂದೇ ಉದಾಹರಣಾರ್ಥ ದೀಕ್ಷೆ, ಲಿಂಗಧಾರಣ, ಶುದ್ಧೀಕರಣ, ಜನನ, ಮರಣ,

ವಿವಾಹಾದಿ ಸಂಸ್ಕಾರ, ಇವೇ ಮೊದಲಾದ ಧಾರ್ಮಿಕ ಕಾರ್ಯಗಳೆಷ್ಟೋ ಅವುಗಳ ವಶದಲ್ಲಿರುವವು. ಆದರೆ ಈಗಿನ ಶಾಸ್ತ್ರೀಯ ಯುಗದಲ್ಲಿ ಅವುಗಳಿಗೆ ಅಷ್ಟು ಪ್ರಾಶಸ್ತ್ಯವಿಲ್ಲ. ಸುಶಿಕ್ಷಿತರು ಅವುಗಳಿಗೆ ಹಾಸ್ಯ ಮಾಡುತ್ತಾರೆ. ಅಶಿಕ್ಷಿತರು ಮಾತ್ರ ಅವುಗಳಿಗೆ ದಾಸರಾಗಿರುತ್ತಾರೆ. ಅಶಿಕ್ಷಿತರು ಸುಶಿಕ್ಷಿತರಾದರೆ ಮತ್ತು ಈ ಧಾರ್ಮಿಕ ವಿಧಾನಗಳು ಸಮಾಜಕ್ಕೆ ಅವಶ್ಯವೆಂದೆನಿಸಿದರೆ ಬೇರೆ ಸಂಸ್ಥೆಗಳು ಹುಟ್ಟಿ ಈ ವಿಧಾನಗಳನ್ನು ತಮ್ಮ ವಶಪಡಿಸಿಕೊಳ್ಳಬಹುದು. ಅವು ಅವಶ್ಯ ಕಾಣದಿದ್ದರೆ ಕ್ರಮೇಣ ಅವು ಲೋಪವನ್ನು ಹೊಂದಬಹುದು. ಇಲ್ಲವೆ ಯಂತ್ರದಂತೆ ನಡೆಯಬಹುದು. ಆದರೆ ಪರಸ್ಪರ ಹೋರಾಡಿ ಸಮಾಜದಲ್ಲಿ ದೊಡ್ಡದೊಂದು ಕಲಹಾಗ್ನಿಯನ್ನು ಹೊತ್ತಿಸಿದ ಮಠಪೀಠಾಧಿಕಾರಿಗಳ ವಶದಲ್ಲಿ ಮಾತ್ರ ಅವು ಉಳಿಯಲಿಕ್ಕಿಲ್ಲ.

ಮಠಪೀಠಗಳು ಲೌಕಿಕ ಸಂಸ್ಥೆಯಾಗಿರುವಂತೆ ಮಠಪೀಠಾಧಿಕಾರಿಗಳು ಇಹಲೋಕದ ಕಾರ್ಯ ಮಾಡುವವರಾದ್ದರಿಂದ ಅವರಾದರೂ ಲೌಕಿಕರೇ. ಶಿವಯೋಗಿ ಶಿವಶರಣರಂತೆ ಅವರು ಶಿವಲೋಕದವರಲ್ಲ. ಶಿವಯೋಗಿಗಳು ನಿರಂಜನ ಮೂರ್ತಿಗಳು ಅವರು ಸ್ವಾನುಭಾವಿಗಳೂ ಲಿಂಗಾನುಸಂಧಾನಿಗಳೂ, ಷಟ್‌ಸ್ಥಲಜ್ಞಾನಿಗಳೂ, ಲೋಕಸಂಗ್ರಹತತ್ಪರರೂ ಆಗಿದ್ದಾರೆ. ನುಡಿದಂತೆ ನಡೆಯುವ ಇಂಥ ಮಹಾ ವಿಭೂತಿಗಳು ಕಾಲಕಾಲಕ್ಕೆ ಭಕ್ತರಲ್ಲಿಯೂ, ಗುರುಗಳಲ್ಲಿಯೂ, ವಿರಕ್ತರಲ್ಲಿಯೂ ಹುಟ್ಟಿದ್ದಾರೆ. ಅವರನ್ನು ಎಲ್ಲ ಮನುಷ್ಯರು ಜಾತಿಮತಭೇದವಿಲ್ಲದೆ ಮಹಾ ವಿಭೂತಿಗಳೆಂದು ಮನ್ನಿಸುತ್ತಿದ್ದಾರೆ. ಅವರೇ ಜಗದ್ಗುರುಗಳು ಅವರೇ ಜಗದಾಚಾರ್ಯರು; ಅವರೇ ಶಿವಶರಣ ಶಿವಯೋಗಿಗಳು, ಆದರೆ ಈಗಿನ ಕೆಲವು ನಾಮಧಾರಿ ಜಗದ್ಗುರು, ಜಗದಾಚಾರ್ಯ, ಶಿವಶರಣ ಶಿವಯೋಗಿಗಳು ಸ್ವಾರ್ಥಪರಾಯಣತೆ, ಅಧಿಕಾರದ ಹೆಮ್ಮೆಗಳಿಂದ ನಿಜವಾದ ಶಿವಯೋಗಿಗಳಂತೆ ಸಮಾಜದಲ್ಲಿ ಸೋಗುಹಾಕಿಕೊಂಡು ನಡೆಯುತ್ತಿದ್ದಾರೆ. ತಾವೇ ಮೂರ್ತಿಮಂತಪರ ಶಿವನೆಂದು ಹೊಗಳಿಕೊಳ್ಳುತ್ತಿದ್ದಾರೆ. ತಮ್ಮ ಬಿರುದಾವಳಿಗಳನ್ನು ಕಾಡು ಜನರಂತೆ ಸಾರಿಕೊಳ್ಳುತ್ತಿದ್ದಾರೆ. ಇದನ್ನು ನೋಡಿ ನಮಗೆ ಫಕ್ಕನೆ ಸೂಅರ್ಟ ಮನೆತನದ ಜೇಮ್ಸನೆಂಬ ಇಂಗ್ಲಿಷ್ ರಾಜನ ನೆನಪಾಗುತ್ತದೆ. ಆತನು ಹೇಳುತ್ತಿದ್ದುದೇನಂದರೆ "ಅರಸನು ದೇವಾಂಶ ಸಂಭೂತನು ದೇವರೇ ಅರಸನನ್ನು ಭೂಲೋ

ಕವನ್ನಾಳಲು ಕಳಿಸುತ್ತಾನೆ. ಮನುಷ್ಯರು ಅರಸನನ್ನು ಮಾಡುವದಿಲ್ಲ. ಅರಸನ ಮಾತೇ ಕಾಯಿದೆಯು. ಬೇರೆ ಕಾಯಿದೆಯೆಂಬುದಿಲ್ಲ." ಈ ಮೇರೆಗೆ 'ನಾ ವಿಷ್ಣುಃ ಪೃಥ್ವಿಪತಿಃ" ಎಂಬ ತತ್ವವನ್ನು ಸಾರಿದ ಆ ರಾಜನನ್ನು ಕೊನೆಗೆ ಪ್ರಜೆಗಳು ಕಿತ್ತೊಗೆದು ಬೇರೆ ರಾಜನನ್ನು ಗಾದೆಯ ಮೇಲೆ ಕೂಡ್ರಿಸಿ ಮನುಷ್ಯರೇ ಅರಸನನ್ನು ಮಾಡುತ್ತಾರೆಂಬ ಮಾತನ್ನು ನಿದರ್ಶನ ಮಾಡಿಕೊಟ್ಟರು. ಅದರಂತೆಯೇ ಮಠಪೀಠಾಧಿಕಾರಿಗಳನ್ನು ದೈವದವರೇ ಮಾಡುತ್ತಾರೆಂಬ ಮಾತು ನಮ್ಮ ಮಠಪೀಠಾಧಿಕಾರಿಗಳಿಗೆ ಹೊಳೆದರೆ ಸಾಕು. ಅವರು ಪರಶಿವನ ಅವತಾರಿಗಳೆಂಬ ಮಾತು ಅಲ್ಲಿಗೇ ನಿಂತು ಹೋಗುತ್ತದೆ. ಮಹಾಮಹಿಮರಾದ ಶಿವಯೋಗಿ ಶಿವಶರಣರಿಗೆ ನಾವು ಪರಶಿವನ ಸ್ವರೂಪಿಗಳೆಂದು ಕರೆಯುತ್ತಿರುವೆವೆಂದು ತಿಳಿದು ಈ ಮಠಪೀಠಾಧಿಕಾರಿಗಳಿಗೂ ಸುಮ್ಮ ಸುಮ್ಮನೆ ಹಾಗೆ ಕರೆಯಲೇಬೇಕೆಂಬ ನಿಯಮವೇನೂ ಇಲ್ಲ. ಮಠಪೀಠಾಧಿಕಾರಿಗಳನ್ನು ಸಮಾಜದವರು ಮಾಡುತ್ತಾರೆ. ಆದುದರಿಂದ ಅವರು ಮನುಷ್ಯರು. ಶಿವಯೋಗಿಗಳು ತಮ್ಮ ತಮ್ಮ ಬಲದಿಂದ ಆಗುತ್ತಾರೆ. ಆದುದರಿಂದ ಅವರು ದೇವರು. ಮಠಪೀಠಾಧಿಕಾರಿತ್ವವು ಲೌಕಿಕತ್ವವು. ಶಿವಯೋಗವು ದೇವತ್ವವು.

---

# ಪಾಶ್ಚಾತ್ಯರ ತತ್ವಶಾಸ್ತ್ರ.

ಲೇಖಕ:— ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ.

(ಮುಂದೆ ಸಾಗಿದ್ದು.)

ಪ್ಲೇಟೋ:— ಈತನು ಕ್ರಿ. ಪೂ. ೪೨೭ ರಿಂದ ೩೪೭ ರ ವರೆಗೆ ಇದ್ದನು. ಇವನು ಇಪ್ಪತ್ತು ವರ್ಷದವನಿರುವಾಗ ಸಾಕ್ರೆಟಿಸನ ಪರಿಚಯುವಾಯಿತು. ಇವನು ೪೦ ವರ್ಷಗಳ ಕಾಲ ತನ್ನ ಪ್ರಖ್ಯಾತವಾದ ಪ್ರವಚನಗಳನ್ನು ಬರೆಯುವದರಲ್ಲಿ ನಿರತನಾಗಿದ್ದನು. ಇವನು ತನ್ನ ಪೂರ್ವಾರ್ಧದ ನಾಲ್ವತ್ತು ವರ್ಷಗಳನ್ನು ಸಿಸಿಲಿ, ಮೆಗಾರಾ, ಸೈರೀನ್, ಮತ್ತು ಇಜಿಪ್ತ ದೇಶಗಳ ಸಂಚಾರ ಮಾಡಿದನು. ಇವನ ಕಾಲದಲ್ಲಿ ಗುಲಾಮರನ್ನು ಮಾರುವ ಪದ್ಧತಿ ಇದ್ದದರಿಂದ ಇವನು ಇಟಲಿಯಲ್ಲಿ ಸಂಚರಿಸುವಾಗ ಡಾಯುನೀಸಿಯುಸ್ ಎಂಬವನು ಇವನನ್ನು ಗುಲಾಮನಂತೆ ವಿಕ್ರಿಗೆ ಕೊಟ್ಟನು. ಇವನ ಸ್ನೇಹಿತನು ಇವನನ್ನು ಮುಕ್ತ ಮಾಡಿದ್ದರಿಂದ ಇವನು ಅಥೆನ್ಸ ಪಟ್ಟಣಕ್ಕೆ ಕ್ರಿ. ಪೂ. ೩೮೭ ರಲ್ಲಿ ತಿರುಗಿ ಬಂದನು. ಇವನು ಅಥೆನ್ಸದ ಉಪನಗರದ ಒಂದು ತೋಟದಲ್ಲಿ ತತ್ವಜ್ಞಾನದ ಒಂದು ಸಂಸ್ಥೆಯನ್ನು (*Academy.*) ಸ್ಥಾಪಿಸಿದನು. ಈ ಸ್ಥಳವು ಸಾರ್ವಜನಿಕ ವ್ಯಾಯಾಮಕ್ಕಾಗಿ ಒಬ್ಬ ಗೃಹಸ್ಥನಿಂದ ಕೊಡಲ್ಪಟ್ಟಿತ್ತು. ಇದರ ಸಮೀಪದಲ್ಲಿಯೇ ಪ್ಲೇಟೋನ ಪೂರ್ವಾರ್ಜಿತ ಆಸ್ತಿಯಿದ್ದದರಿಂದ ಅಲ್ಲಿಯೇ ಸಂಸ್ಥೆಯನ್ನು ಏರ್ಪಡಿಸಿದನು. ಈ ಆಸ್ತಿಯನ್ನು ಪ್ಲೇಟೋನು ಈ ಸಂಸ್ಥೆಗೆ ಅರ್ಪಿಸಿದನು. ಡೆಮಾಕ್ರಿಟಸ್, ಪ್ಲೇಟೋ, ಅರಿಸ್ಟಾಟಲ ಇವರು ತತ್ವಬೋಧೆ ಪಾರಂಭಿಸಿದಾಗ ನಾಲ್ವತ್ತು ವಯಸ್ಸಿನವರಿದ್ದರು. ಆದರೆ ಭರತಖಂಡದ ತತ್ವವೇತ್ತರಾದ ಶಂಕರ, ಬಸವ ಮೊದಲಾದವರು ತಮ್ಮ ಇಪ್ಪತ್ತು ವಯಸ್ಸಿನ ಪೂರ್ವದಲ್ಲಿಯೇ ಪ್ರಾರಂಭಿಸಿದರು. ಭರತಖಂಡವು ತತ್ವಜ್ಞಾನದ ಸ್ವಾಭಾವಿಕವಾದ ಆಗರವಾಗಿದೆ.

ಪ್ಲೇಟೋನ ತತ್ವಸಂಸ್ಥೆಯು ಬಸವನು ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಿದ ಅನುಭವ ಮಂಟಪನ್ನು ಹೋಲುತ್ತದೆ. ಬಸವನು ಅನೇಕ ಶರಣರ ಸಮೂಹದಲ್ಲಿದ್ದು ಅಮೋಘವಾದ ವಚನಗಳನ್ನು ಪ್ಲೇಟೋ

ನಂತೆಯೇ ರಚಿಸಿದನು. ಬಸವನು ಅಲ್ಲಮನನ್ನು ಗುರುವಾಗಿ ತಿಳಿದಿದ್ದಂತೆ ಪ್ಲೇಟೋನು ಸಾಕ್ರೆಟಿಸನನ್ನು ಗುರುವಾಗಿ ತಿಳಿದಿದ್ದನು. ಪ್ಲೇಟೋನ ತತ್ವಜ್ಞಾನವು ಬಹಳ ಗಡುಚಾಗಿರುವದು; ಆದರೆ ಬಸವನ ತತ್ವವು ಸರಳವಾದದ್ದೂ ತಿಳಿಯಾದದ್ದೂ ನೈಜಸ್ಥಿತಿಗನುಗುಣವಾದದ್ದೂ ಇದೆ. ಪ್ಲೇಟೋನು ಜಗತ್ತು ಅಸತ್ಯವಾದದ್ದೆಂದು ಹೇಳಿದನು. ಬಸವನು ಜಗತ್ತು ನಿಜವಾದದ್ದೆಂದು ಹೇಳಿದನು. ಪ್ಲೇಟೋನ ತತ್ವವು ಶುದ್ಧಾದ್ವೈತವು ಬಸವನ ತತ್ವವು ಶಕ್ತಿವಿಶಿಷ್ಟಾದ್ವೈತ (ಶಿವಾದ್ವೈತ *energy-qualified monism*) ಅಥವಾ ವೀರಶೈವ ಸಿದ್ಧಾಂತವು. ಈಶ್ವರ, ಜೀವ, ಜಗತ್ತುಗಳು ಕೇವಲ ಒಂದೇ ಆಗಿದ್ದು ಶಕ್ತಿವಿಶೇಷದಿಂದ ರೂಪಾಂತರವಾಗಿ ಕಾಣುವವು. ಈಶ್ವರನ ಶಕ್ತಿಯು ಕ್ರಿಯೆಯಿಂದ ಅನೇಕ ವಿಧವಾದ ಸೃಷ್ಟಿಯುತ್ಪನ್ನವಾಗುವದು. ಪ್ರತಿಯೊಂದು ವಸ್ತುವೂ ಈಶ್ವರಮಯವಾಗಿದೆ. ಈ ಸಿದ್ಧಾಂತದಿಂದ ವೀರಶೈವ ತತ್ವವನ್ನು (*Seepra-pantheism*) ವಿಶಿಷ್ಟ ಜಗದೀಶ್ವರವಾದ ಅಥವಾ ವಿಶೇಷಾದ್ವೈತವೆಂದು ಕರೆಯುಬಹುದು.

ಇದು ಶಕ್ತಿವಿಶಿಷ್ಟರಾದ ಶಿವಜೀವರ ಏಕತ್ವವನ್ನು ಬೋಧಿಸುವದರಿಂದ ಶಕ್ತಿವಿಶಿಷ್ಟಾದ್ವೈತವೆಂತಲೂ, ಲಿಂಗ-ಅಂಗ (ಜೀವ) ಗಳ ಸಮರಸ ಭಾವವನ್ನು ಪ್ರತಿಪಾದಿಸುವದರಿಂದ ಶಿವಾದ್ವೈತವೆಂತಲೂ ಕರೆಯಲ್ಪಡುತ್ತದೆ. ಈ ಸಿದ್ಧಾಂತವು ಜೀವ ಶಿವರಲ್ಲಿ ಭೇದವನ್ನಾಗಲಿ ಅಭೇದಗಳನ್ನಾಗಲಿ ಹೇಳದೆ ಬಂಗಾರ, ಆಭರಣಗಳಲ್ಲಿರುವ ರೂಪಭೇದದಂತೆ ಶಿವಜೀವರಲ್ಲಿ ಭೇದಾಭೇದಗಳೆರಡೂ ಇರುವದಾಗಿ ಮನ್ನಿಸುವದು. ಹೀಗೆ ವೀರಶೈವ ಸಿದ್ಧಾಂತವು ದ್ವೈತಾದ್ವೈತಗಳ ಸಮನ್ವಯ ಮಾಡುವದರಿಂದ ಇದಕ್ಕೆ ದ್ವೈತಾದ್ವೈತವೆಂತಲೂ ಹೆಸರಿಡಬಹುದು. ಬೀಜದಲ್ಲಿ ವೃಕ್ಷವಾಗುವ ಶಕ್ತಿಯು ಅಡಗಿರುವಂತೆ ಜೀವನಲ್ಲಿ ಶಿವನಾಗುವ ಶಕ್ತಿಯು ಅಡಗಿರುವದು. ಬೀಜವು ವೃಕ್ಷವಾಗಿ ಪರಿಣಮಿಸುವದಕ್ಕೆ ಸ್ಥಲ, ಜಲ, ಕಾಲಗಳ ಸಾಧನ ಬೇಕಾದಂತೆ ಜೀವವು ಶಿವನಾಗುವದಕ್ಕೆ ವೀರಶೈವ ದೀಕ್ಷೆಯು ಸಾಧನವು. ಜೀವನ ಸಂಕೋಚಭಾವವು ಬಂಧವು, ವಿಕಾಸವು ಮೋಕ್ಷವು. ವೀರಶೈವವು ಪುನರ್ಜನವನ್ನು ಒಪ್ಪುವದಿಲ್ಲ. ಪ್ಲೇಟೋ, ಶಂಕರ, ರಾಮಾನುಜ ಮೊದಲಾದವರು ಪುನರ್ಜನ್ಮದಲ್ಲಿ ನಂಬಿಗೆಯುಳ್ಳವರಾಗಿರುವರು. ಶಂಕರ, ಮಾಧ್ವ, ರಾಮಾನುಜರು ಪ್ರಾಕೃತ ಸೃಷ್ಟಿಯಲ್ಲಿ ನಂಬಿಗೆಯುಳ್ಳವರು. ಪ್ರಕೃತಿ

ಯಿಂದ ಮಹತ್ತೂ, ಮಹತ್ತಿನಿಂದ ಅಹಂಕಾರವು, ಅಹಂಕಾರದಿಂದ ಮನಸ್ಸು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ತನ್ಮಾತ್ರಗಳು, ಪಂಚಭೂತಗಳು ಉತ್ಪನ್ನವಾಗುವವು. ಅಹಂಕಾರದಿಂದ ಆತ್ಮವು ಸುಖ ದುಃಖಕ್ಕೊಳಗಾಗಿ ಬದ್ಧನಾಗುವನು. ಇದರಿಂದ ವಿಮೋಚನೆ ಹೊಂದಲು ಚತುರಾಶ್ರಮಿಗಳು ಆಶ್ರಮ ಧರ್ಮವನ್ನು ಪಾಲಿಸುತ್ತ ಚಿತ್ತಶುದ್ಧಿಯನ್ನು ಹೊಂದಲು ಪುನರ್ಜನ್ಮವನ್ನು ಧರಿಸಬೇಕಾಗುವದು. ವೀರಶೈವನು ಪೂರ್ವ ಪುಣ್ಯದ ಬಲದಿಂದ ವೀರಶೈವನಾಗಿ ಜನಿಸಿ ಶಿವದೀಕ್ಷೆಯ ಬಲ ದಿಂದ ಪುನರ್ಜನ್ಮ ರಹಿತನಾಗುವನು. ಇವನಿಗೆ ಆಶ್ರಮ ಧರ್ಮವು ಸಂಬಂಧವಿಲ್ಲ. ಆದ್ದರಿಂದ ವೀರಶೈವನಿಗೆ ಅತ್ಯಾಶ್ರಮಿಯೆಂದು ಹೇಳ ಲ್ಪಡುತ್ತದೆ ಇವನು ನಾಲ್ಕು ವರ್ಣಗಳ ಕ್ರಮಕ್ಕೆ ಬದ್ಧನಿಲ್ಲದಿರುವದರಿಂದ ಇವನಿಗೆ ವರ್ಣಾತೀತನೆಂತಲೂ ಹೆಸರು. ಶಿವದೀಕ್ಷೆಯನ್ನು ಹೊಂದುವದ ರಿಂದ ಇವನಿಗೆ ಸೂತಕ ದೋಷಗಳಿಲ್ಲ. ಯಾವಾಗಲೂ ಲಿಂಗದೇಹಿಯಾಗಿ ಸದಾಶುಚಿಯಾಗಿರುವದರಿಂದ ಅಪ್ರಾಕೃತನೆಂದು ಹೇಳಿಸಿಕೊಳ್ಳುತ್ತಾನೆ. ವೀರಶೈವ ಧರ್ಮವು ಪೂರ್ವಜನ್ಮವನ್ನು ಒಪ್ಪುತ್ತದೆ. ಆದರೆ ಪುನರ್ಜನ್ಮ ವನ್ನು ಒಪ್ಪುವದಿಲ್ಲ. ಶಿವಾಗಮಗಳಲ್ಲಿ ಹೇಳಿದ ತತ್ವವೇ ವೀರಶೈವ ಸಿದ್ಧಾಂತವು. ಪತಿ, ಪಶು, ಪಾಶ ಎಂದು ಮೂರು ತತ್ವಗಳು ಮುಖ್ಯ ವಾದವು. ಈ ಮೂರರಿಂದ ಪೃಥಿವಿ ಮೊದಲಾಗಿ ಶಿವತತ್ವಾಂತವಾಗಿ ೩೬ ತತ್ವಗಳುಂಟು. ಆದರೆ ವೀರಶೈವವು ಅಧಃಸೃಷ್ಟಿ ಊರ್ಧ್ವಸೃಷ್ಟಿ ಎಂಬ ಎರಡು ಸೃಷ್ಟಿಗಳ ವಿಭಾಗ ಮಾಡುವದು.

ಪ್ರಕೃತಿಯಿಂದಾದ ಸೃಷ್ಟಿ ಅಂದರೆ ಆಶ್ರಮಧರ್ಮ, ಯಜ್ಞಕರ್ಮ, ಸ್ಥಾವರಲಿಂಗಪೂಜೆ ಮೊದಲಾದದ್ದು. ಅಧಃಸೃಷ್ಟಿ ಅಥವಾ ಪ್ರಾಕೃತ ಸೃಷ್ಟಿ ಅಥವಾ ಬ್ರಹ್ಮ ಸೃಷ್ಟಿಯು. ಅಹಂಕಾರದಿಂದ ಆತ್ಮನು ಸುಖ ದುಃಖಗಳಿಗೊಳಗಾಗಿ ಬದ್ಧನಾಗುವನು. ಶಿವನು ಬದ್ಧ ಜೀವಿಗಳ ಮೋಕ್ಷಕ್ಕಾಗಿ ಊರ್ಧ್ವಸೃಷ್ಟಿಯನ್ನುಂಟು ಮಾಡಿದನು. ಊರ್ಧ್ವಸೃಷ್ಟಿ ಯೊಳಗಿನ ಜೀವರು ಪೂರ್ವ ಪುಣ್ಯದಿಂದ ಲಭಿಸಿದ ಶಿವಭಕ್ತಿಯಿಂದ ಶಿವದೀಕ್ಷೆಯನ್ನು ಹೊಂದಿ ಶಿವ ಸಾಯುಜ್ಯವನ್ನು ಹೊಂದುವರು. ಶಿವನು ತನ್ನಲ್ಲಿ ಅವಿನಾಭಾವ ಸಂಬಂಧದಿಂದಿರುವ ವಿಮರ್ಶ ಶಕ್ತಿಯಿಂದ ವಿವಿಧ ರೂಪವನ್ನು ಹೊಂದಿದನು. ಶಿವನ ಶ್ರೇಷ್ಠವಾದ ಶಕ್ತಿಯು ಲಿಂಗ ವಾಗಿಯೂ ಆಕುಂಚಿತವಾದ ಶಕ್ತಿಯು ಅಂಗ (ಜೀವ) ವಾಗಿಯೂ ಪರಿ

ಣಮಿಸಿತು. ಅಂಗದ ಇಂದ್ರಿಯಾದಿ ಪದಾರ್ಥಗಳು ಶಿವನ ಚಿಚ್ಛಕ್ತಿಯಿಂದಾಗಿವೆ. ಜೀವನು ಗುರುವಿನಿಂದ ಮಂತ್ರ, ಕ್ರಿಯಾ, ವೇಧಾ ದೀಕ್ಷೆಗಳನ್ನು ಹೊಂದಿ ಆಣವಮಲ, ಮಾಯಾಮಲ, ಕಾರ್ಮಿಕಮಲಗಳಿಂದ ಮುಕ್ತನಾಗಿ ಶುದ್ಧಜೀವಿಯೆನಿಸುವನು. ದೀಕ್ಷಾ ಕಾಲಕ್ಕೆ ಗುರುವು ಶಿಷ್ಯನ ದೃಷ್ಟಿಯಲ್ಲಿ ದೃಷ್ಟಿಯನ್ನು, ಮನಸ್ಸಿನಲ್ಲಿ ಮನಸ್ಸನ್ನು, ಭಾವದಲ್ಲಿ ಭಾವವನ್ನು ಇರಿಸಿ ಶಿಷ್ಯನ ಶಿಖಾಚಕ್ರದಲ್ಲಿರುವ ಶಿವಕಳೆಯನ್ನು ಹೊರಗೆ ತೆಗೆದು ಶಿಷ್ಯನ ಕರದಲ್ಲಿರುವ ಇಷ್ಟಲಿಂಗದಲ್ಲಿ (*personal God*) ಸ್ಥಾಪಿಸುವನು. ಗುರುವು ಶಿಷ್ಯನ ದೇಹದಲ್ಲಿ ಇಷ್ಟಲಿಂಗವನ್ನೂ ಮನಸ್ಸಿನಲ್ಲಿ ಪ್ರಾಣಲಿಂಗವನ್ನೂ ಭಾವದಲ್ಲಿ ಭಾವಲಿಂಗವನ್ನೂ ಸ್ಥಾಪಿಸುವನು. ಶಿಷ್ಯನು ಭಸ್ಮ, ರುದ್ರಾಕ್ಷಿ, ಮಂತ್ರ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳೆಂಬ ಅಷ್ಟಾವರಣಗಳಿಂದ ಯುಕ್ತನಾಗಿ, ಲಿಂಗಾಚಾರ ಮೊದಲಾದ ಪಂಚಾಚಾರ ಸಕ್ತನಾಗಿ, ಭಕ್ತಸ್ಥಲ ಮೊದಲಾದ ಷಟ್ ಸ್ಥಲಗಳಲ್ಲಿ ಉನ್ನತಿ ಹೊಂದಿ ತಾನು ಶಿವನೆಂದು ಅರಿತುಕೊಂಡು ಕೇವಲ ಶಿವನೇ ಆಗುವನು.

ಷಟ್‌ಸ್ಥಲವು ಜಗತ್ತಿನಲ್ಲಿರುವ ಯಾವ ಧರ್ಮಗಳಲ್ಲಿಯೂ ಕಂಡು ಬರದಿರುವ ಒಂದು ವಿಶಿಷ್ಟ ತತ್ವವಾಗಿದೆ. (೧) ಭಕ್ತಸ್ಥಲದಲ್ಲಿ ದೀಕ್ಷೆ ಹೊಂದಿದ ಜೀವನು ಶ್ರದ್ಧಾಭಕ್ತಿಯಿಂದ ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವನ್ನು ಪೂಜಿಸಿ ಸದ್ಭಕ್ತಿ ಫಲವನ್ನು ಹೊಂದುತ್ತಾನೆ. (೨) ಮಹೇಶ್ವರಃ— ಜೀವನು ನಿಷ್ಠಾಭಕ್ತಿಯಿಂದ ಜ್ಞಾನಶಕ್ತಿಯುಕ್ತವಾದ ಗುರುಲಿಂಗವನ್ನು ಪೂಜಿಸಿ ಕರ್ಮಕ್ಷಯವನ್ನು ಹೊಂದುವನು. (೩) ಪ್ರಸಾದಿಃ— ಅವಧಾನಭಕ್ತಿಯಿಂದ ಇಚ್ಛಾಶಕ್ತಿಯುಕ್ತವಾದ ಶಿವಲಿಂಗವನ್ನು ಪೂಜಿಸಿ ನಿರ್ಮಲಜ್ಞಾನಿಯಾಗುವನು. (೪) ಪ್ರಾಣಲಿಂಗಿಃ— ಅನುಭವ ಭಕ್ತಿಯಿಂದ ಆದಿಶಕ್ತಿಯುಕ್ತವಾದ ಜಂಗಮ ಲಿಂಗವನ್ನು ಪೂಜಿಸಿ ಸುಜ್ಞಾನಿಯಾಗುವನು. (೫) ಶರಣಃ— ಆನಂದಭಕ್ತಿಯಿಂದ ಪರಾಶಕ್ತಿಯುಕ್ತವಾದ ಪ್ರಸಾದಲಿಂಗವನ್ನು ಪೂಜಿಸಿ ದರ್ಪನಾಶಮಾಡಿಕೊಳ್ಳುವನು. (೬) ಐಕ್ಯಃ— ಸಮರಸಭಕ್ತಿಯಿಂದ ಚಿಚ್ಛಕ್ತಿಯುಕ್ತವಾದ ಮಹಾಲಿಂಗವನ್ನು ಪೂಜಿಸಿ ಸಮ್ಯಜ್ಞಾನಹೊಂದಿ ಅವಿರಳ ಶಿವೈಕ್ಯನಾಗುವನು. ಇದೇ ಲಿಂಗಾಂಗ ಸಾಮರಸ್ಯವು. ಷಟ್‌ಸ್ಥಲಗಳು ಈ ಸಾಮರಸ್ಯಕ್ಕೆ ಒಯ್ಯುವ ಸೋಪಾನಗಳು ಜಗತ್ತು ಮತ್ತು ಭೋಗ್ಯ ವಸ್ತುಗಳು ಮಿಥ್ಯವಾಗಿರದೆ ಸತ್ಯವಾಗಿದ್ದು

ಅವನ್ನು ಲಿಂಗಕ್ಕೆ ಅರ್ಪಿಸಿ ತಾನು ಪ್ರಸಾದ ರೂಪವಾಗಿ ಭೋಗಿಸುವನು. ಅವನ ದೇಹವು ಲಿಂಗರೂಪವಾಗುವದು. ಮೊದಲು ತಾನು ಎಲ್ಲ ಕ್ರಿಯೆಗಳನ್ನು ಭಕ್ತಿಯಿಂದ ಅಂದರೆ ದಾಸೋಹಂ ಭಾವದಿಂದ ಮಾಡುವನು. ನಂತರ ತಾನೇ ಶಿವನೆಂದು ಸಮ್ಯಜ್ಞಾನಹೊಂದಿ ತಾನು ಮನುಷ್ಯನೆಂಬ ಭಾವವಳಿದು ಶಿವನಾಗಿಯೇ ವರ್ತಿಸುವನು. ಈ ಭಾವನೆಯಿಂದ ವೀರಶೈವಕ್ಕೆ ದ್ವೈತಾದ್ವೈತವೆಂದು ಹೆಸರುಂಟಾಗಿದೆ. ಮಲತ್ರಯಗಳಿಂದ ಜೀವನು ಬದ್ಧನಾಗಿರುವದರಿಂದ ಅವುಗಳನ್ನು ಹೋಗಲಾಡಿಸಲು ದ್ವೈತಭಾವದಿಂದ ಮೊದಲು ಆರಂಭಿಸಿ ನಂತರ ಅದ್ವೈತ ಅಂದರೆ ಕೇವಲ ಶಿವತ್ವವನ್ನು ಹೊಂದುವನು. ಈ ಕೇವಲತ್ವ ಅಥವಾ ಲಿಂಗಾಂಗ ಸಾಮರಸ್ಯವು ವೀರಶೈವರ ಕೊನೆಯ ಧ್ಯೇಯವಾಗಿದೆ. ಈ ಸಾಮರಸ್ಯವು ವೀರಶೈವದಲ್ಲಿ ಉರಿ ಉಂಡ ಕರ್ಪುರದಂತೆ, ಆಲಿ ನುಂಗಿದ ನೋಟದಂತೆ, ಬಯಲ ನುಂಗಿದ ಬ್ರಹ್ಮಾಂಡದಂತೆ, ಮುತ್ತು ನುಂಗಿದ ಉದಕದಂತೆ, ಪುಷ್ಪವು ನುಂಗಿದ ಪರಿಮಳದಂತೆ ಎಂಬ ಅನೇಕ ವಿಧವಾದ ಉಪಮೆಗಳಿಂದ ಬೋಧಿಸಲ್ಪಟ್ಟಿರುವದು. ವೇದಾಂತವು ಸಾಯುಜ್ಯ ಮೋಕ್ಷವನ್ನಷ್ಟೇ ಬೋಧಿಸುವದು. ಇದರಿಂದ ಸಂಪೂರ್ಣ ಐಕ್ಯವು ಘಟಿಸುವದಿಲ್ಲ. ಸಕ್ಕರೆಯಲ್ಲಿ ಹಿಟ್ಟು ಕೂಡಿಸಿದಂತೆ ಈ ಸಾಯುಜ್ಯವು ಘಟಿಸುವದು. ಆದರೆ ವೀರಶೈವವು ವೇದಾಂತಕ್ಕಿಂತಲೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಬಯಲಿನಲ್ಲಿ ಬಯಲು ಬೆರದಂತೆ ಕೇವಲ ಸಾಮರಸ್ಯವನ್ನೇ ಬೋಧಿಸುವದು. ವೇದಾಂತವು ಜಗತ್ತು ಅಸತ್ಯವೆಂದು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶೃತಿವಾಕ್ಯದ ವಿರೋಧವಾಗಿ ಹೇಳುತ್ತದೆ. ಆದರೆ ಪರಮಾತ್ಮನು ಜಗತ್ತಿನಲ್ಲಿ ವ್ಯಾಪಿಸಿರುವದರಿಂದ ಜಗತ್ತು ಸತ್ಯವೆಂದು ವೀರಶೈವವು ಹೇಳುತ್ತದೆ. ವೇದಾಂತವು ತಾನು ಶಿವನಾದ್ದರಿಂದ ತಾನು ಮಾಡತಕ್ಕ ಕ್ರಿಯೆ ಇಲ್ಲವೆಂದು ಹೇಳುತ್ತದೆ. ತಾನು ಸಾಕಾರನಿರುವದರಿಂದ ನಿರಾಕಾರನಾಗಲು ಕ್ರಿಯೆ ಬೇಕೆಂದು ವೀರಶೈವವು ಪ್ರತಿಪಾದಿಸುತ್ತದೆ. ವೇದಾಂತ ತತ್ವದಂತೆ ಜಗತ್ತು ಅಸತ್ಯವೆಂದು ಹೇಳಿದ ಪ್ಲೇಟೋನ ತತ್ವವು ವೀರಶೈವ ತತ್ವಕ್ಕೆ ವಿರೋಧವಾಗಿದೆ. ಜಗತ್ತಿನಲ್ಲಿಯೇ ದೇವರಿದ್ದಾನೆ ಎಂದು ಹೇಳಿದ ಅರಿಷ್ಟಾಟಲನ ತತ್ವವು ವೀರಶೈವ ತತ್ವಕ್ಕೆ ಸದೃಶವಾಗಿದೆ.

ಪ್ಲೇಟೋನು ೩೫ ಪ್ರವಚನಗಳನ್ನು ಬರೆದಿದ್ದಾನೆ. ಅವೆಲ್ಲವೂ ಇಂದಿನ ವರೆಗೆ ಲಭ್ಯವಾಗಿವೆ. ರಿಪಬ್ಲಿಕ್ ಎಂಬದು ಅವನ ಶ್ರೇಷ್ಠ

ವಾದ ಮತ್ತು ಪರಿಪಕ್ವವಾದ ರಾಜಕಾರಣ ವಿಷಯದ ಗ್ರಂಥವು ಫಿಲೆಬಸ್ ಎಂಬದು ಸುಶೀಲತ್ವವನ್ನು (*Idea of goodness*) ಬೋಧಿಸುವ ಗ್ರಂಥವು. ಅವನ ಎಲ್ಲ ಪ್ರವಚನಗಳು ಮನೋಹರವಾಗಿಯೂ ಸರಳ ಶೈಲಿಯುಳ್ಳವೂ ಆಗಿವೆ. ಈ ಪ್ರವಚನಗಳನ್ನು ಪ್ಲೇಟೋನು ಸಾಕ್ರೆಟಿಸನ ಬಾಯಿಂದಲೇ ನುಡಿಯುವಂತೆ ಮಾಡಿದ್ದಾನೆ. ಪ್ಲೇಟೋನು ತನ್ನ ಬೋಧೆಯನ್ನು ಪುಷ್ಟೀಕರಿಸುವದಕ್ಕೆ ಕಟ್ಟು ಕತೆಗಳ ಸಾದೃಶ್ಯವನ್ನು ಹೇರಳವಾಗಿ ಉಪಯೋಗಿಸಿದ್ದಾನೆ. ಇವನು ಅಥೆನ್ಸ ಪಟ್ಟಣದಲ್ಲಿ ಪ್ರಸಿದ್ಧವಾದ ಮನೆತನದವನು ಇವನು ಶ್ರೀಮಂತಿಕೆಯ ಮದದಿಂದ ಬೆಳೆದವನಾದ್ದರಿಂದ ಯಾವಾಗಲೂ ಉಚ್ಚ ಜನರ ಸಹವಾಸದಲ್ಲಿರುತ್ತಿದ್ದನು. ಪ್ರಜಾರಾಜ್ಯವನ್ನು ತಿರಸ್ಕರಿಸಿದನು. ಇವನ ನೈತಿಕ ವರ್ತನವು ಅನುಕರಣೀಯವಾಗಿತ್ತು. ಇವನು ಬಹು ಸುಂದರನೂ ಬಲವಾದ ಮೈಕಟ್ಟಿನವನೂ ಆಗಿದ್ದನು. ಪ್ಲೇಟೋನ ತತ್ವಜ್ಞಾನ ಬೆಳವಣಿಗೆಗೆ ಸಾಕ್ರೆಟಿಸ್, ಪಾರ್ಮೆನಿಡಿಸ್, ಪ್ರೊಟ್ಯಾಗೋರಾಸ, ಅನೆಗ್ಝಗೊರಾಸ, ಡೆಮಾಕ್ರಿಟಸ್, ಪೈಥೆಗೋರಾಸ ಪಂಥಿಗಳ ಪ್ರೇರಣೆಯು ಕಾರಣವಾಯಿತು. ಗಣಿತದ ತತ್ವಗಳು ಪ್ರತ್ಯಕ್ಷ ಜ್ಞಾನ (*perception*) ದಿಂದ ಭಿನ್ನವಾಗಿದ್ದು ಸಹಜವಾದ ಮನೋಭಾವನೆಗಳಾಗಿವೆ. (*Innate ideas*) ದೃಶ್ಯ ಜಗತ್ತು ಅಸ್ಥಿರವಾದದ್ದೆಂದು ಪ್ಲೇಟೋನು ಹೆರಾಕ್ಲೈಟಸನೊಡನೆ ಒಪ್ಪಿದನು. ಮತ್ತು ಈ ಜಗತ್ತಿನ ಇಂದ್ರಿಯ ಜ್ಞಾನವು ( *Sensation* ) ಸಂಬಂಧಾತ್ಮಕ ಸತ್ಯವನ್ನು ( *relative truth* ) ಕೊಡುವದೆಂದು ಪ್ರೊಟ್ಯಾಗೊರಾಸನ ತತ್ವಕ್ಕೆ ಅನುಮತಿಸಿದನು. ಆದರೆ ಸಾಕ್ರೆಟಿಸನ ಪ್ರೇರಣೆಯಿಂದ ತನ್ನ ತತ್ವಶಾಸ್ತ್ರವನ್ನು ಭಾವನಾಜ್ಞಾನ (*conception*) ದ ಮೇಲೆ ರಚಿಸಿದನು.

ತತ್ವಶಾಸ್ತ್ರ ರಚನೆ— ಸದ್ಗುಣವೇ ಜ್ಞಾನವು. ಜ್ಞಾನವೆಂದರೆ ಇಂದ್ರಿಯ ಜ್ಞಾನವಲ್ಲ ಎಂದು ಪ್ಲೇಟೋನ ಸಿದ್ಧಾಂತವುಂಟು. ಜಗತ್ತು ಎರಡು ವಿಧವಾದದ್ದೆಂದು ಇವನು ಗ್ರಹಿಸಿದನು. ನಿಜವಾದ ಜಗತ್ತು. (*Being*) ಮತ್ತು ಅಸ್ಥಿರವಾದ, ದೃಶ್ಯ ಜಗತ್ತು. (*Becoming*). ಮೊದಲನೆಯದು ಬುದ್ಧಿ ಗೋಚರವೂ ಎರಡನೆಯದು ಇಂದ್ರಿಗೋಚರವೂ ಆಗಿದೆ. ಇದು ವೀರಶೈವದ ಬ್ರಹ್ಮಸೃಷ್ಟಿ ಮತ್ತು ಶಿವಸೃಷ್ಟಿಗಳ ವರ್ಗೀಕರಣವನ್ನು ಹೋಲುತ್ತದೆ. ಆದರೆ ವೀರಶೈವ ಸಿದ್ಧಾಂತವು ಅವುಗಳಲ್ಲಿ ಶ್ರೇಷ್ಠ ಕನಿಷ್ಠ

ದರ್ಜೆಗಳನ್ನಷ್ಟೇ ಮಾನ್ಯ ಮಾಡಿ ಎರಡೂ ಸತ್ಯಸೃಷ್ಟಿಗಳೆಂದು ಒಪ್ಪು ತ್ತದೆ. ಆದರೆ ಪ್ಲೇಟೋನು ದೃಶ್ಯ ಜಗತ್ತು ಅಸತ್ಯವಾದದ್ದೆಂದು ಶಂಕ ರಾಚಾರ್ಯರಂತೆ ಹೇಳುವದರಿಂದ ಇವನಿಗೆ ಗ್ರೀಸದ ಶಂಕರಾಚಾರ್ಯ ನೆಂದು ಕರೆಯಬಹುದು. ನಿಜವಾದ ಭಾವನಾ ಜ್ಞಾನವು ಪ್ರತ್ಯಕ್ಷ ಜ್ಞಾನವನ್ನು ಅವಲಂಬಿಸಿರದೆ ಪರಲೋಕದಲ್ಲಿದೆ. ಅದರ ಸತ್ಯವು ಸ್ವಯಂ ಸಿದ್ಧವಾದದ್ದು. ಈ ಭಾವನಾಜ್ಞಾನಕ್ಕೇನೇ ಪ್ಲೇಟೋನು *Idea or Form* (ಭಾವನೆ) ರೂಪ ಅಥವಾ ಕಲಾ ಎಂದು ಕರೆದಿದ್ದಾನೆ. ಭಾವನಾ ಜ್ಞಾನವು ಸತ್ಯವಾಗಿದ್ದು ಪ್ರತ್ಯಕ್ಷ ಜ್ಞಾನವು ಭಾವನಾ ಜ್ಞಾನದ ಛಾಯೆ ಅಥವಾ ಪ್ರತಿಬಿಂಬವು. ಭೌತಿಕ ವಸ್ತುಗಳು ಭಾವನಾಜ್ಞಾನದ ಅಸ್ತಿತ್ವವನ್ನು ಆತ್ಮಕ್ಕೆ ನಿವೇದಿಸುವದನ್ನು ಮಾತ್ರ ಮಾಡುತ್ತವೆ. ಮನಸ್ಸು ಸಹ ದೃಶ್ಯ ಜಗತ್ತಿಗೆ ಸಂಬಂಧಪಟ್ಟಿದ್ದು. ಇವನು ಆಧುನಿಕರ ಗ್ರಹಿಕೆಯಂತೆ ಪ್ರಕೃತಿ ಮತ್ತು ಮನಸ್ಸು ಎಂದು ಪ್ರತ್ಯೇಕ ವಿಭಾಗವನ್ನು ಮಾಡುವದಿಲ್ಲ. ದೃಶ್ಯ ಜಗ ತ್ತಿನಲ್ಲಿ ಎಷ್ಟು ವಸ್ತುಗಳಿವೆಯೋ ಅಷ್ಟು ಭಾವನೆಗಳುಂಟು. ದೃಶ್ಯ ಜಗತ್ತು ನಿಜವಸ್ತುವಿನ ಪ್ರತಿರೂಪವು. ಪೈಥಾಗೋರಾಸನ ಪಂಥದವರು ವಸ್ತುಗಳು ಸಂಖ್ಯೆಯ ಪ್ರತಿರೂಪಗಳೆಂದು ಹೇಳಿದರು. ಇದರ ಪ್ರೇರ ಣೆಯೇ ಪ್ಲೇಟೋನ ಮೇಲೆ ಆಯಿತು. ಭಾವನೆಯು ಅಥವಾ ಕಲೆಯು (*Idea*) ವಸ್ತುವಿನಲ್ಲಿ ಭಾವನೆಯ ಗುಣವಿರುವ ವರೆಗೆ ವಸ್ತುವಿನಲ್ಲಿ ಇರು ವದು. ಭಾವನೆಯು ವಸ್ತುಗಳಿಂದ ಪ್ರತ್ಯೇಕವಾದಾಗ ಪ್ರತ್ಯಕ್ಷ ಜ್ಞಾನವು ಬದಲಾವಣೆ ಹೊಂದುವದು. ಭಾವನೆಗಳು ಶಾಶ್ವತವಾಗಿದ್ದು ದೃಶ್ಯ ಜಗತ್ತು ಬದಲಾವಣೆ ಹೊಂದತಕ್ಕದ್ದಾಗಿದೆ. ಕಲೆಗಳು ದೃಶ್ಯಜಗತ್ತಿನ ಅಂತಿಮಕಾರಣಗಳಾಗಿವೆ. (*teleotogical causes*) ಸತ್ಕಲೆಯು (*Idea of the Good*) ಎಲ್ಲ ಕಲೆಗಳ ಅಂತಿಮಧ್ಯೇಯವಾಗಿದೆ. ಸತ್ಕಲೆಯು ಎಲ್ಲ ಕಲೆಗಳ ನೈತಿಕಧ್ಯೇಯವಾಗಿದ್ದು ಅವುಗಳಿಗೆ ನಿಜತ್ವವನ್ನೂ ಬೆಲೆ ಯನ್ನೂ ಉಂಟುಮಾಡುತ್ತದೆ. ಪ್ಲೇಟೋನು ಸತ್ಕಲೆಯನ್ನು ದೇವರೆಂದೂ ಜಗತ್ತಿನ ಮೂಲಬುದ್ಧಿಯೆಂದೂ (*World reason*) ಕರೆಯುತ್ತಾನೆ. ಸದ್ವಸ್ತುವು ಪಾರಮಾರ್ಥಿಕ ಪುರುಷನಾಗಿರದೆ ಜಗತ್ತಿನ ನೈತಿಕ ಧ್ಯೇಯ ವಾಗಿದೆ. ಕಲೆಯು ಮನುಷ್ಯನ ಮನಸ್ಸಿನಲ್ಲಿಯ ಭಾವನೆ ಮಾತ್ರವೇ ಆಗಿರದೆ ಮನುಷ್ಯನ ಅಥವಾ ದೇವರ ಮನಸ್ಸಿನ ಬಾಹ್ಯವಾದ ನಿಜ ವಸ್ತುವಾಗಿದೆ. ಮನಸ್ಸಿನಲ್ಲಿಯ ವಿಚಾರವು ಮನೋಬಾಹ್ಯವಾದ ವಸ್ತು ವಿನ ಪ್ರತಿರೂಪವಾಗಿದೆ. ಇಂದ್ರಿಯ ಗೋಚರವಾದ ಕುದುರೆಯು ನಿಜ

ವಾಗಿರದೆ ಕುದುರೆಯ ಸಾಮಾನ್ಯ ಭಾವನೆಯು (*Idea of the horse in general*) ನಿಜವಾದದ್ದಾಗಿದೆ. ಸೌಂದರ್ಯವು ಮನೋಬಾಹ್ಯವಾದ ವಸ್ತುವಿದ್ದು ಸುಂದರ ವಸ್ತುಗಳಿಂದ ಭಿನ್ನವಾಗಿದೆ.

ಕಲೆಯ ಗುಣಗಳು— (೧) ಕಲೆಗಳು ಸ್ವಯಂಭೂತವಾದ ನಿಜ ವಸ್ತುಗಳು. (೨) ಕಲೆಗಳು ಸಾರ್ವತ್ರಿಕವಾದ ವಿಚಾರಗಳು. (೩) ಪ್ರತಿಯೊಂದು ಕಲೆಯು ಅನೇಕತ್ವದಲ್ಲಿ ಏಕತ್ವವಾಗಿದೆ. (೪) ಕಲೆಗಳು ಶಾಶ್ವತವೂ ಅವಿನಾಶಿಗಳೂ ಆಗಿವೆ. (೫) ಕಲೆಗಳು ಎಲ್ಲ ವಸ್ತುಗಳ ಮೂಲ ಸ್ವಾರಸ್ಯವಾಗಿವೆ. (೬) ಪ್ರತಿಯೊಂದು ಕಲೆಯು ಪರಿಪೂರ್ಣವಾದದ್ದು. (೭) ಕಲೆಗಳು ದೇಶ, ಕಾಲಾತೀತವಾಗಿವೆ. (೮) ಕಲೆಗಳು ಚಿತ್ಸ್ವರೂಪಗಳು. ಅವು ಬುದ್ಧಿಗೆ ಮಾತ್ರವೇ ಗಮ್ಯವಾಗಿವೆ. (೯) ಕಲೆಗಳು ಇಹಪರಗಳೆರಡರಲ್ಲಿಯೂ ಇವೆ. (೧೦) ಕಲೆಗಳ ಸಂಖ್ಯೆಯು ಅನಂತವಾಗಿದೆ. ಪ್ಲೇಟೋನು ಭಾವನಾ ವಾದಿಯು. (*Idealist*). ಭಾವನೆಗಳು ವಸ್ತುಗಳನ್ನು ಸೃಷ್ಟಿಸಲು ಅಸಮರ್ಥವಾಗಿವೆ. ಆದ್ದರಿಂದ ಪ್ಲೇಟೋನು ದೇವರ ಕಲ್ಪನೆಯನ್ನು ನಿರ್ಮಿಸಿದ್ದಾನೆ. ದೇವರು ಪ್ರಕೃತಿಯನ್ನು ಭಾವನೆಗಳ ಪ್ರತಿರೂಪದಲ್ಲಿ ಸೃಷ್ಟಿಸುವಂತೆ ಪ್ಲೇಟೋನು ಕೃತ್ರಿಮ ರೀತಿಯನ್ನು ಕಲ್ಪಿಸಿದ್ದಾನೆ. ಇದರಿಂದ ಭಾವನೆಗಳಲ್ಲಿ ಸ್ವಯಂ ಶಕ್ತಿಯ ಅಭಾವವು ಕಂಡುಬರುತ್ತದೆ. ಪ್ಲೇಟೋನ ತತ್ವದಲ್ಲಿ ಇದೊಂದು ದೊಡ್ಡ ಕೊರತೆಯು. ಇದರೆ ವೀರಶೈವವು ನೈಜವಾದವಿದ್ದು (*Realism*) ಸ್ವಯಂ ಶಕ್ತಿಯುಳ್ಳ ನಿತ್ಯ ಪರಿಪೂರ್ಣವಾದ ಪರಮಾತ್ಮನ ಅಸ್ತಿತ್ವವನ್ನು ಒಪ್ಪುವದು. ಆತನು ಜಗತ್ತಿನಲ್ಲಿಯೇ ಇದ್ದಾನೆಂದು ಹೇಳುವದು. ಜಗತ್ತು ಆತನಿಂದಲೇ ನಿರ್ಮಿತವಾಗಿದ್ದು ಆತನಲ್ಲಿಯೇ ಲಯವಾಗುವದೆಂದು ಹೇಳುವದು. ಕಲ್ಪಿತವಾದ ವಸ್ತುಗಳ ಅಸ್ತಿತ್ವವನ್ನು ನಿರ್ಮಿಸಿ ತತ್ವಶಾಸ್ತ್ರಕ್ಕೆ ವಿರೋಧವನ್ನು ವೀರಶೈವವು ತಂದುಕೊಂಡಿಲ್ಲ. ಸತ್ಕಲೆಯು ದೇವರಿಗೆ ಅಧೀನವಾಗಿದೆಯೆಂದು ಹೇಳಿವಲ್ಲಿ ಪ್ಲೇಟೋನ ಸಿದ್ಧಾಂತಕ್ಕೆಲ್ಲ ವಿರೋಧಾಭಾಸವುಂಟಾಗುವದು. ಆದರೆ ದೇವರು ಮತ್ತು ಸತ್ಕಲೆಯು ಒಂದಕ್ಕೊಂದು ಭಿನ್ನವಾಗಿರುವದಾದರೆ ಈ ದ್ವೈತವನ್ನು ಹೋಗಲಾಡಿಸುವದು ಹೇಗೆ? ಇದರಂತೆಯೇ ಕಲೆಗಳು ಮತ್ತು ಪ್ರಕೃತಿಗಳಲ್ಲಿ ದ್ವೈತಭಾವವು ಪ್ಲೇಟೋನ ತತ್ವದಲ್ಲಿ ಕಂಡುಬರುತ್ತದೆ. ಪರಮಾತ್ಮನು ಸ್ವಯಂಸಿದ್ಧನಿರಬೇಕು.

ಅವನಿಂದ ಜಗತ್ತಿನ ಸೃಷ್ಟಿಯ ಕಾರಣವು ಬೋಧವಾಗುವಂತಿರಬೇಕು. ಆದರೆ ಪ್ಲೇಟೋನ ಭಾವನೆಗಳು ಸ್ವಯಂಸಿದ್ಧತೆಯನ್ನಾಗಲಿ ಅಥವಾ ಜಗತ್ತಿನ ಸೃಷ್ಟಿಯನ್ನಾಗಲೀ ಸ್ಪಷ್ಟೀಕರಿಸಲು ಅಸಮರ್ಥವಾಗಿವೆ. ಇಂದ್ರಿಯಗೋಚರವಾದ ಕುದುರೆಯು ನಿಜವಾದದ್ದಲ್ಲ (ಪ್ಲೇಟೋನ ಹೇಳಿಕೆಯಂತೆ). ಆದರೂ ಅದು ಅಸ್ತಿತ್ವದಲ್ಲಿದೆ. ಕುದುರೆಯ ಭಾವನೆಯು ನಿಜವಾದದ್ದಿದ್ದರೂ ಅದರ ಅಸ್ತಿತ್ವವು ಗೋಚರವಿಲ್ಲ. ಅವನು ಭಾವನೆಯನ್ನು ಒಂದು ವಸ್ತುವಾಗಿ ತಿಳಿದದ್ದೇ ಪ್ರಮಾದವಾಗಿದೆ.

ಜ್ಞಾನಸಿದ್ಧಾಂತ— (೧) ಪ್ರತ್ಯಕ್ಷ ಇಂದ್ರಿಯಾನುಭವವು ಜ್ಞಾನವು (*Knowledge is porception*). ಎಂಬದು ಪ್ರೊಟ್ಯಾಗೋರಾಸನ ಸಿದ್ಧಾಂತವು. ಭವಿಷ್ಯ ಸಂಗತಿಗಳನ್ನು ನಿರ್ಧರಿಸುವದರಲ್ಲಿ ಈ ಸಿದ್ಧಾಂತವು ಸಟಿಯಾದದ್ದೆಂದು ಪ್ಲೇಟೋನ ಮತವು. ಯಾಕೆಂದರೆ ಮುಂದಿನ ವರ್ಷ ನಾನು ಮುಖ್ಯ ಮಂತ್ರಿಯಾಗಬಹುದೆಂದು ನಂಬಬಹುದು. ಆದರೆ ಅದರ ಬದಲು ನಾನು ಮುಂದಿನ ವರ್ಷ ಕಾರಾಗ್ರಹದಲ್ಲಿ ಬೀಳಬಹುದು. (೨) ಪ್ರತ್ಯಕ್ಷ ಇಂದ್ರಿಯಾನುಭವವು ವಿರೋಧಾತ್ಮಕವಾದ ನೋಟಗಳನ್ನು ಕೊಡುವದು. ಒಂದೇ ವಸ್ತುವು ಸಮೀಪವಿದ್ದಾಗ ದೊಡ್ಡದಾಗಿಯೂ ದೂರದಲ್ಲಿರುವಾಗ ಸಣ್ಣದಾಗಿಯೂ ಕಾಣುವದು. ಯಾವದು ನಿಜವೆಂದು ನಿರ್ಧರಿಸಲು ಬುದ್ಧಿಯನ್ನು ಉಪಯೋಗಿಸಬೇಕಾಗುವದು. ಎಲ್ಲ ಇಂದ್ರಿಯಾನುಭವವು ನಿಜವಾಗಿಲ್ಲ. ಮತ್ತು ಎಲ್ಲವೂ ಜ್ಞಾನಕೊಡುವಂಥವುಗಳಾಗಿಲ್ಲ. (೩) ಎಲ್ಲ ಪ್ರತ್ಯಕ್ಷ ಇಂದ್ರಿಯಾನುಭವಗಳು ನಿಜವಿರುವದಾದರೆ ಬಾಲಕನ ಇಂದ್ರಿಯಾನುಭವಗಳು ಸಹ ನಿಜವಾಗಿರಬೇಕು. ಪ್ರೊಟ್ಯಾಗೊರಾಸನ ಈ ಸಿದ್ಧಾಂತದಿಂದ ಎಲ್ಲ ಪುರಾವೆಗಳೂ ಖಂಡನೆಗಳೂ ಅಸಂಭವವಾಗುವವು. (೪) ಮನುಷ್ಯನು ಎಲ್ಲ ವಸ್ತುಗಳಿಗೆ ಪ್ರಮಾಣನಲ್ಲ. ಹಾಗಿದ್ದಲ್ಲಿ ಪಶು ಮೊದಲಾದ ಪ್ರಾಣಿಗಳೂ ಸಹ ಎಲ್ಲ ವಸ್ತುಗಳ ಪ್ರಮಾಣವಾಗುವವು. (೫) ಪ್ರೊಟ್ಯಾಗೋರಾಸನ ಸಿದ್ಧಾಂತವು ಆತ್ಮವಿರೋಧವಾಗಿದೆ. ನನಗೆ ಸತ್ಯವಾಗಿ ಕಾಣುವದು ನನ್ನ ಮಟ್ಟಿಗೆ ಸತ್ಯವಾದದ್ದು. ಪ್ರೊಟ್ಯಾಗೊರಾಸನ ಸಿದ್ಧಾಂತವು ನನಗೆ ತಪ್ಪೆಂದು ಕಂಡರೆ ಪ್ರೊಟ್ಯಾಗೊರಾಸನು ಅದು ತಪ್ಪೆಂದು ನನ್ನ ಮುಂದೆ ಒಪ್ಪಬೇಕಾಗುವದು. ಆದ್ದರಿಂದ ಅವನ ಸಿದ್ಧಾಂತವು ಸತ್ಯಾಸತ್ಯಗಳ ಭೇದವನ್ನು ತೆಗೆದು ಹಾಕುವದು. (೬) ಪ್ರತ್ಯಕ್ಷ ಇಂದ್ರಿಯಾನುಭವದಲ್ಲಿ ಇಂದ್ರಿಯಗಳಿಂದ

ಉತ್ಪನ್ನವಾಗದ ಅಂಶಗಳೂ ಉಂಟು. 'ಈ ಕಾಗದವು ಬೆಳ್ಳಗಿದೆ' ಎಂದು ಹೇಳಿದರೆ ಅದರಲ್ಲಿ ಕೇವಲ ಇಂದ್ರಿಯಾನುಭವವಿಲ್ಲ. ಬೆಳ್ಳಗಿದೆ ಎಂದು ಹೇಳುವಲ್ಲಿ ನಾನು ಕಾಗದವನ್ನು ಉಳಿದ ಬಿಳೀ ವಸ್ತುಗಳೊಡನೆ ಹೋಲಿಸಿದಾಗ ಮತ್ತು ಉಳಿದ ಬಣ್ಣಗಳ ವಸ್ತುಗಳಿಂದ ಭಿನ್ನ ಮಾಡಿದಾಗ ಕಾಗದವು ಬೆಳ್ಳಗಿದೆ ಎಂಬ ಜ್ಞಾನವುಂಟಾಗುವದು. ಹೋಲಿಸುವ ಮತ್ತು ಭಿನ್ನಮಾಡುವ ಕ್ರಿಯೆಯು ಇಂದ್ರಿಯಗಳಿಗೆ ಸಾಧ್ಯವಿಲ್ಲ. ಈ ಕ್ರಿಯೆಯು ಮನಸ್ಸಿನದು. ಕೈಯಿಂದ ಒಂದು ಚೆಂಡನ್ನು ಮುಟ್ಟಿದಾಗ ಅದು ದುಂಡಗಿದೆ ಎಂದು ಗೊತ್ತಾಗುವದು. ಕಣ್ಣಿನಿಂದ ನೋಡಿದಾಗ ಅದರ ದುಂಡಾಕೃತಿಯು ಗೊತ್ತಾಗುವದು. ಸ್ಪರ್ಶಕ್ಕೂ ನೋಟಕ್ಕೂ ಭೇದವಿದೆ. ಕಣ್ಣುಗಳು ಮುಟ್ಟಲಾರವು. ಕೈಗಳು ನೋಡಲಾರವು. ಆದರೆ ಮನಸ್ಸು ಇವೆರಡು ಇಂದ್ರಿಯಾನುಭವಗಳನ್ನು ಕೂಡಿಸಿ ಆ ವಸ್ತು ಯಾವದೆಂಬದನ್ನು ನಿರ್ಧರಿಸುತ್ತದೆ. ಭೇದಾಭೇದಭಾವನೆಗಳು ಇಂದ್ರಿಯಗಳಿಂದ ಜನ್ಯವಾಗಲಾರವು. ಆದ್ದರಿಂದ ಪ್ರತ್ಯಕ್ಷ ಇಂದ್ರಿಯಾನುಭವಗಳಿಂದ ಜ್ಞಾನವುತ್ಪನ್ನವಾಗಲಾರದು. (೭) ಅಭಿಪ್ರಾಯವಾದರೂ ಜ್ಞಾನವಾಗಿರಲಾರದು. ವಿಮರ್ಶಾತ್ಮಕ ಬುದ್ಧಿಯ ಆಶ್ರಯವುಳ್ಳದ್ದೇ ಜ್ಞಾನವು.

ಆತ್ಮದ ಅಮರತ್ವ— ಮನುಷ್ಯನ ಆತ್ಮವು ಇಹಪರಲೋಕಗಳೆರಡಕ್ಕೂ ಸಂಬಂಧಿಸಿರುವದು. ಆತ್ಮವು ಪ್ರತ್ಯಕ್ಷ ಇಂದ್ರಿಯಾನುಭವದಿಂದಲೂ ಆಶೆಗಳಿಂದಲೂ ಇಹಕ್ಕೆ ಸಂಬಂಧಿಸಿದೆ. ಅಂತರ್ಜ್ಞಾನದಿಂದ ಪರಲೋಕಕ್ಕೆ ಸಂಬಂಧಿಸಿದ್ದು ಅಮರತ್ವವುಳ್ಳದ್ದಾಗಿದೆ. ಮನುಷ್ಯನಲ್ಲಿ ಬುದ್ಧಿಪುರಸ್ಸರವಾದ ಮತ್ತು ಬುದ್ಧಿ ವಿರಹಿತವಾದ ಎರಡು ಸ್ವಭಾವಗಳುಂಟೆಂದು ಪ್ಲೇಟೋನು ಹೇಳುತ್ತಾನೆ. ಬುದ್ಧಿ ವಿರಹಿತವಾದ ಸ್ವಭಾವವನ್ನು ಚಿತ್ತ (*Will*) ಮತ್ತು ಅಹಂಕಾರ (*Sensuous appetites*) ಎಂದು ಎರಡು ವಿಧವಾಗಿ ವಿಭಾಗಿಸಿದ್ದಾನೆ. ಪ್ರಾಣಿಗಳಲ್ಲಿ ಕಡೆಯ ಎರಡು ಸ್ವಭಾವಗಳುಂಟು. ಸಸ್ಯಗಳಲ್ಲಿ ಅಹಂಕಾರವೊಂದೇ ಉಂಟು. ಆತ್ಮವು ಅವಿನಾಶಿಯಾಗಿದೆ. ಇಹದಲ್ಲಿಯ ಕರ್ಮಾನುಸಾರ ಆತ್ಮವು ಪುನರ್ಜನ್ಮದಲ್ಲಿ ಸುಖದುಃಖಗಳನ್ನು ಅನುಭೋಗಿಸುತ್ತದೆ. ಬುದ್ಧಿವಂತನು ದೇಹೇಚ್ಛೆಗಳನ್ನು ಜಯಿಸಿ ಪಾರಲೌಕಿಕದ ಕಡೆಗೆ ದೃಷ್ಟಿಯನ್ನು ತಿರುಗಿಸಬೇಕು. ಪುಣ್ಯಶಾಲಿಗಳು ಭಾವನಾಲೋಕ (ಪರ)ಕ್ಕೆ ತೆರಳುವರು. ಪಾಪಿಗಳು ಹೀನ ಪ್ರಾಣಿಗಳಾಗಿ ಹುಟ್ಟುವರು. ಆತ್ಮವು ಕ್ರಿಯಾರಹಿತವಾದದ್ದೆಂದು ಪ್ಲೇಟೋನು ಸಾಂಖ್ಯರಂತೆ ಹೇಳುತ್ತಾನೆ- ಆಧುನಿಕ ಮಾನಸಶಾಸ್ತ್ರಜ್ಞರು ಆತ್ಮವು ಕ್ರಿಯಾ

ಶಕ್ತಿಯುಳ್ಳದ್ದೆಂದು ಹೇಳುತ್ತಾರೆ. ಹಿಂದಿನ ಜನ್ಮದಲ್ಲಿ ಆತ್ಮವು ಭಾವನೆ (*Ideas*) ಗಳಿಂದ ಕೂಡಿತ್ತು. ಈ ಜನ್ಮದಲ್ಲಿ ಅವು ಮರೆತು ಹೋಗಿವೆ. ಆದರೆ ಪ್ರಪಂಚದಲ್ಲಿಯ ವಸ್ತುಗಳ ಸಂದರ್ಶನದಿಂದ ಭಾವನೆಗಳು ಆತ್ಮಕ್ಕೆ ನೆನಪಾಗುವವು. ಹೀಗೆ ಪ್ಲೇಟೋನು ನೆನಪಿನ ಸಹಾಯದಿಂದ ಹಿಂದಿನ ಜನ್ಮದ ಅಸ್ತಿತ್ವವನ್ನು ಸಿದ್ಧಗೊಳಿಸಲು ಪ್ರಯತ್ನಿಸಿದ್ದಾನೆ. ಆತ್ಮವು ಭಾವನಾ ಲೋಕಕ್ಕೆ ಸಂಬಂಧಿಸಿದ ಕಾರಣ ಮತ್ತು ಅವಿನಾಶಿಯಾದ ಕಾರಣ ಅದಕ್ಕೆ ಪುನರ್ಜನ್ಮವುಂಟೆಂದು ಪ್ಲೇಟೋನ ಮತವು.

ಭೌತಿಕ ಶಾಸ್ತ್ರವು— ದೃಶ್ಯಸೃಷ್ಟಿಗೆ ಸಂಬಂಧಿಸಿದೆ. ಅಂದರೆ ದೇಶ ಕಾಲಗಳಲ್ಲಿರುವ ವಸ್ತುಗಳಿಗೆ ಸಂಬಂಧಿಸಿದೆ. ದೃಶ್ಯಸೃಷ್ಟಿಯು ನಿರಂತರ ಬದಲಾವಣೆ ಹೊಂದುತ್ತಿರುವದರಿಂದ ಸಾಯುವ ವರೆಗೆ ನಿಜವಾದ ಜ್ಞಾನ ವುಂಟಾಗುವದು ಶಕ್ಯವಿಲ್ಲ. ದೇವರು ಜಗತ್ತನ್ನು ಬರಿದಾದ ಸ್ಥಳ ಅಥವಾ ಪ್ರಕೃತಿಯಿಂದ ಮಾಡಿದನು. ಪ್ರಕೃತಿಯಲ್ಲಿ ಭಾವನೆಗಳ ಪ್ರತಿಬಿಂಬಗ ಳನ್ನು ಮುದ್ರಿಸಿದ್ದರಿಂದ ಜಗತ್ತುಂಟಾಯಿತು. ಜಗತ್ತಿನ ವಸ್ತುಗಳು ಇಹಪರಲೋಕಗಳೆರಡರಲ್ಲಿಯೂ ಭಾಗಿಗಳಾಗಿವೆ. ಇವನು ಜಗತ್ತು ಜೀವ ಮಯವಾದದ್ದೆಂದು ಭಾವಿಸಿದನು. ಇದು ಆಧುನಿಕ ಸೃಷ್ಟಿಸ್ವಭಾವ ನಿಯಮ (*Mechanical theory*)ಕ್ಕೆ ವಿರೋಧವಾಗಿದೆ. ಪ್ರಕೃತಿಯಲ್ಲಿ ಭಾವನೆಗಳು ಬೆರೆಯುವದರಿಂದ ಜಗತ್ತಿನ ಅಸ್ಥಿರತ್ವಕ್ಕೆ ಕಾರಣವಾಯಿ ತೆಂದು ಪ್ಲೇಟೋನು ಹೇಳುತ್ತಾನೆ. ಭೂಮಿಯು ಜಗತ್ತಿನ ಕೇಂದ್ರವು. ನಕ್ಷತ್ರಗಳು ಭೂಮಿಯ ಸುತ್ತಲೂ ಚಕ್ರಾಕಾರವಾಗಿ ಸುತ್ತುತ್ತವೆ. ಜಗ ದಾತ್ಮವು (ದೇವರು) ಜಗತ್ತಿನಲ್ಲಿಯ ಚಲನೆಯ ಕಾರಣವು.

ನೀತಿಶಾಸ್ತ್ರ— ಆತ್ಮವು ಪರಲೋಕಕ್ಕೆ ಸಂಬಂಧಿಸಿರುವದು. ಇಹ ಜನ್ಮವು ಪಾಪಮಯವಾದ್ದರಿಂದ ಆತ್ಮವು ದೇವಸನ್ನಿಧಿಗೆ ತಿರುಗಬೇಕು. ಪಾರಮಾರ್ಥ ಜ್ಞಾನವನ್ನು ಹೊಂದುವದೇ ಸದ್ಗುಣವು. ಕಾಲಾಂತರದಲ್ಲಿ ಪ್ಲೇಟೋನು ತನ್ನ ಅಭಿಪ್ರಾಯವನ್ನು ಬದಲಾಯಿಸಿ ನೈತಿಕ ವರ್ತನವು ಇಹಪರಗಳೆರಡರಲ್ಲಿಯೂ ಸುಖವನ್ನುಂಟು ಮಾಡುವದೆಂದು ಹೇಳಿದನು. ಭಾವನಾಲೋಕದಲ್ಲಿ ಭಾಗಿಯಾಗಿರುವದು ಮಿಗಿಲಾದ ಶ್ರೇಯವೆಂದು ಹೇಳಿದನು. ಸುಖವು ಶ್ರೇಯಸ್ಸಿನ (*Good*) ಮುಖ್ಯ ಫಲವಲ್ಲವೆಂದು ಹೇಳಿದನು. (೧) ಶ್ರೇಯಸ್ಸಿಗಾಗಿಯೇ ಶ್ರೇಯಸ್ಸನ್ನು ಅವಲಂಬಿಸಬೇಕು. (೨) ಸುಖವು ಶ್ರೇಯಸ್ಸಲ್ಲ. ಯಾಕೆಂದರೆ ನಾನಾ ಸುಖಗಳು ಪರಸ್ಪರ

ವಿರೋಧವಾಗಿವೆ. (೩) ಸುಖವು ಅನೇಕ ಸಾರೆ ಮೊದಲು ವ್ಯತ್ಯಸ್ತವಾದ ಶರೀರ ಸ್ಥಿತಿಯು ಸುವ್ಯವಸ್ಥೆಗೊಳಿಸತಕ್ಕದ್ದಾಗಿದೆ. ಸುಖ ಮತ್ತು ಮಾನಸಿಕ ವೃತ್ತಿಗಳೆರಡೂ ಶ್ರೇಯಸ್ಸಿಗೆ ಅವಶ್ಯವಾದವುಗಳು. ಮತ್ತು ಅವೆರಡೂ ಜ್ಞಾನದಿಂದ ನಿರ್ಣಯಿಸಲ್ಪಡಬೇಕು. ಮಾನಸಿಕ ಮತ್ತು ಸುಂದರ ವಸ್ತುಗಳಿಂದಾದ ಸುಖವು ಇಂದ್ರಿಯ ಸುಖಕ್ಕಿಂತ ಮಿಗಿಲಾದದ್ದು. ಯಾಕೆಂದರೆ ಇಂದ್ರಿಯ ಸುಖದ ಪೂರ್ವದಲ್ಲಿ ಆಶೆಯುಂಟು, ಪರಿಣಾಮದಲ್ಲಿ ದುಃಖವುಂಟು. ಮನುಷ್ಯನ ಶ್ರೇಯಸ್ಸು ಸುಖಕ್ಕಿಂತ ಜ್ಞಾನಕ್ಕೆ ಹೆಚ್ಚು ಸಂಬಂಧಪಟ್ಟಿದೆ. ಅಜ್ಞಾನವು ದುಷ್ಕೃತಿಯ ಮೂಲವು.

ಮುಖ್ಯ ಸದ್ಗುಣಗಳು ಆತ್ಮದ ನಾಲ್ಕು ಅಂಗಗಳಾಗಿವೆ. ಆತ್ಮವು ಬುದ್ಧಿ ಪುರಸ್ಸರವಾದದ್ದು, ಬುದ್ಧಿ ವಿರಹಿತವಾದದ್ದು ಎಂದು ಪ್ಲೇಟೋನು ಎರಡು ವಿಧವಾಗಿ ವಿಂಗಡಿಸಿದ್ದು ಈ ಮೊದಲು ಹೇಳಿದ್ದಾಗಿದೆ. (೧) ಬುದ್ಧಿ ಪುರಸ್ಸರವಾದ ಆತ್ಮದ ಸದ್ಗುಣವು ಜ್ಞಾನವಾಗಿದೆ. ಬುದ್ಧಿ ವಿರಹಿತವಾದ ಆತ್ಮವು ಪುನಃ ಹೃದಯದಲ್ಲಿರುವ ಉದಾರವಾದ ಬುದ್ಧಿ ವಿರಹಿತ ಭಾಗವೆಂತಲೂ ಇದರ (೨) ಸದ್ಗುಣವು ಧೈರ್ಯವೆಂತಲೂ ಮತ್ತು ಯಕೃತ್ತಿನಲ್ಲಿ (*Liver*) ರುವ ಸಂಕುಚಿತವಾದ ಬುದ್ಧಿವಿರಹಿತವಾದ ಭಾಗವೆಂತಲೂ ಇದರಲ್ಲಿರುವ ಸದ್ಗುಣವು (೩) (*Temperance*) ಮಿತವೃತ್ತಿಯೆಂತಲೂ (೪) ನ್ಯಾಯಗುಣವು (*Justice*) ಮೇಲಿನ ಮೂರು ಸದ್ಗುಣಗಳ ಸಹಕಾರದಿಂದ ಪರಿಣಮಿಸುವದೆಂತಲೂ ಪ್ಲೇಟೋನ ಮತವು. ಜ್ಞಾನವು ವಿಚಾರ ಪ್ರವೃತ್ತಿಯುಳ್ಳದ್ದೂ ಮಾರ್ಗದರ್ಶಕವಾದದ್ದೂ ಇದೆ. ಮಿತವೃತ್ತಿಯು ಸುಖದ ಆಶೆಯನ್ನು ನಿಗ್ರಹಿಸತಕ್ಕದ್ದಾಗಿದೆ. ಧೈರ್ಯವು ದುಃಖದ ಭಯವನ್ನು ನಿವಾರಣೆಗೊಳಿಸುವದು. ನ್ಯಾಯ ಗುಣದ ಉದ್ದೇಶವು ಸಾರ್ವತ್ರಿಕ ಸುಸ್ಥಿತಿಯನ್ನುಂಟು ಮಾಡುವದಾಗಿದೆ. ಆತ್ಮವು ರಥಿಯಾಗಿಯೂ ಬುದ್ಧಿಯು ಸಾರಥಿಯಾಗಿಯೂ ಇಂದ್ರಿಯಗಳು ಕುದುರೆಗಳಾಗಿಯೂ, ಶರೀರವು ರಥವಾಗಿಯೂ ಮನಸ್ಸು ಲಗಾಮಾಗಿಯೂ ಇರುವದು. ಸಾರಥಿಯು ಬಲಿಷ್ಠನಾಗಿರದಿದ್ದರೆ ಇಂದ್ರಿಯಗಳೆಂಬ ಕುದುರೆಗಳು ಅಡ್ಡದಾರಿಯನ್ನು ಹಿಡಿಯುವವೆಂದು ಪ್ಲೇಟೋನು ಹೇಳುತ್ತಾನೆ. ಪ್ಲೇಟೋನ ಈ ನೈತಿಕ ವಿವರಣೆಯನ್ನು ಹೋಲುವ ವಿಚಾರವು ಕಠೋಪನಿಷತ್ತಿನಲ್ಲಿ ನಮ್ಮ ಪೂರ್ವದ ಋಷಿಗಳಿಂದ ಬಹು ಸ್ವಾರಸ್ಯವಾಗಿ ಹೇಳಲ್ಪಟ್ಟಿದೆ.—

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವಚ।
ಬುದ್ಧಿಂತು ಸಾರಥಿಂ ವಿದ್ಧಿ ಮನಃಪ್ರಗ್ರಹಮೇವಚ॥ ಶ್ಲೋ. ೩ ಅ. ೩

ಶರೀರವೆಂಬುದೇ ರಥ, ಆತ್ಮವೇ ರಥಿಯು (ರಥದಲ್ಲಿ ಕುಳಿತವನು), ಬುದ್ಧಿಯು ಸಾರಥಿಯು ಮನಸ್ಸೇ ಲಗಾಮು.

ಇಂದ್ರಿಯಾಣಿ ಹಯಾನಾಹುರ್ವಿಷಯಾಂ ಸ್ತೇಷುಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥
ಶ್ಲೋ. ೪ ಅ. ೩.

ಇಂದ್ರಿಯಗಳು ಕುದುರೆಗಳು, ವಿಷಯಗಳೇ ಅವು ಸಂಚರಿಸುವ ಮಾರ್ಗಗಳು. ಶರೀರ, ಮನಸ್ಸು ಇಂದ್ರಿಯಗಳೊಡನೆ ಕೂಡಿದಾಗ ಆತ್ಮವು ಭೋಕ್ತೃವೆಂದು ಜ್ಞಾನಿಗಳು ಹೇಳುತ್ತಾರೆ.

ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾಸದಾ ।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವಸಾರಥೇಃ॥ ಶ್ಲೋ ೫ ಅ.೩

ಯಾವನು ಅಜ್ಞಾನಿಯಾಗಿರುವನೋ ಯಾವನ ಮನಸ್ಸು ಯಾವಾಗಲೂ ಕಲುಷಿತವಾಗಿರುವದೋ ಅಂಥ ಸಾರಥಿಯ ಇಂದ್ರಿಯಗಳು ದುಷ್ಟ ಕುದುರೆಗಳಂತೆ ಸಾರಥಿಯ ಕೈವಶವಾಗಿರಲಾರವು. ಪ್ಲೇಟೋನು ಆತ್ಮ, ಬುದ್ಧಿ, ಮನಸ್ಸು, ಇಂದ್ರಿಯಗಳ ವ್ಯಾಪಾರವನ್ನು ಸೂಚಿಸಲು ರಥಾಶ್ವಗಳ ಉಪಮಾನೋಪಮೇಯಗಳನ್ನು ಉಪನಿಷತ್ತಿನಲ್ಲಿರುವಂತೆಯೇ ವರ್ಣಿಸಿದ್ದು ಮನೋರಂಜಕವಾಗಿದೆ

ಪ್ಲೇಟೋನು ಸೈರನೆಯಿಕರ ಮತ್ತು ಸೋಫಿಸ್ಟರ 'ಸದ್ಗುಣವು ವ್ಯಕ್ತಿಯ ಸುಖವು' ಎಂಬ ವ್ಯಾಖ್ಯೆಯನ್ನು ಖಂಡಿಸಿರುವನು.

(೧) ಸದ್ಗುಣವು ವ್ಯಕ್ತಿಯ ಸುಖವಾಗಿರುವದಾದರೆ ಅದು ಶ್ರೇಯದ ವಿಷಯ ಸಂಬಂಧವನ್ನು *(Objectivity of the good)* ನಾಶಗೊಳಿಸುತ್ತದೆ. ವ್ಯಕ್ತಿಗೆ ಶ್ರೇಯವಾಗಿಲ್ಲದ್ದು ಸ್ವಯಂ ಶ್ರೇಯವಾಗಿ ಉಳಿಯುವದಿಲ್ಲ. ರೋಗಿಗೆ ಅನ್ನವು ವಿಷವೆನಿಸಿದರೆ ಅನ್ನವು ಶ್ರೇಯ ವಸ್ತುವಲ್ಲವೆಂದು ಹೇಳಲಾಗುವದಿಲ್ಲ. (೨) ಇದು ಒಳ್ಳೇದು ಕೆಟ್ಟದು ಇವುಗಳ ಭೇದವನ್ನು ಅಲ್ಲಗಳೆಯುತ್ತದೆ. ಒಬ್ಬ ವ್ಯಕ್ತಿಯ ಸುಖವು ಇನ್ನೊಬ್ಬ ವ್ಯಕ್ತಿಗೆ ದುಃಖವಾಗಿ ತೋರುವದಾದರೆ ಒಂದೇ ವಸ್ತುವು ಏಕಕಾಲದಲ್ಲಿ ಒಳ್ಳೇದು ಕೆಟ್ಟದು ಅಂದರೆ ಒಬ್ಬನಿಗೆ ಒಳ್ಳೇದಾಗಿಯೂ ಇನ್ನೊಬ್ಬನಿಗೆ ಕೆಟ್ಟದಾಗಿಯೂ ಇರಬೇಕಾಗುವದು. (೩) ಈ ವ್ಯಾಖ್ಯೆಯು ಭಾವದ *(Feeling)* ಆಧಾರದ ಮೇಲೆ ನೀತಿಯನ್ನು ನಿರ್ಮಿಸುತ್ತದೆ. ನಮ್ಮ ಆಶೆಗಳ ತೃಪ್ತಿಯೇ ಸುಖವು. ಆಶೆಗಳು ಭಾವ ಮಾತ್ರವೇ ಆಗಿವೆ. ವಿಷಯಗತ ನೀತಿಯು *(Objective*

*morality*) ವ್ಯಕ್ತಿಗೆ ವಿಶಿಷ್ಟವಾದದ್ದರ ಮೇಲೆ ಅವಲಂಬಿಸಿರಲಾರದು. ಅದು ಸಾರ್ವತ್ರಿಕವಾದ ಬುದ್ಧಿಯನ್ನವಲಂಬಿಸಿರಬೇಕು. (ಳ) ನೀತಿಗೆ ಸ್ವಯಂಬೆಲೆಯಿರಬೇಕೇ ಹೊರತು ಅದರ ಬೆಲೆಯನ್ನು ಮತ್ತೊಂದು ವಸ್ತುವಿನಲ್ಲಿ ಹುಡುಕಬಾರದು. ನಾವು ಸತ್ಕಾರ್ಯವನ್ನು ಸತ್ಕಾರ್ಯಕ್ಕಾಗಿಯೇ ಮಾಡಬೇಕು. ಫಲಾಪೇಕ್ಷೆಗಾಗಿ ಮಾಡಬಾರದು. 'ಕರ್ಮಣ್ಯೇವಾಧಿಕಾರಸ್ತೆ ಮಾ ಫಲೇಷು ಕದಾಚನ' ಎಂಬ ಗೀತಾ ವಾಕ್ಯವೂ ಇದೇ ತತ್ವವನ್ನು ಬೋಧಿಸುತ್ತದೆ. ಸದ್ಗುಣವೇ ಸದ್ಗುಣದ ಪ್ರತಿಫಲವೆಂದು ತಿಳಿದಿರಬೇಕು. ಯಾವನು ನ್ಯಾಯವಂತನೂ, ನೀತಿವಂತನೂ, ಸದ್ಗುಣಿಯೂ ಇರುವನೋ ಅವನೇ ಸುಖಿಯು. ಜೀವಿತದ ಸರ್ವ ವಿಧವಾದ ಸುಸ್ಥಿತಿಯೇ ಸೌಖ್ಯವು. ಇದೇ ಉತ್ತಮವಾದ ಧ್ಯೇಯವು.

ಪ್ಲೇಟೋನ ಪ್ರೇಮ ಅಥವಾ ಭಕ್ತಿ— ಮನುಷ್ಯನು ತನ್ನ ಅಪರಿಪೂರ್ಣತೆಯಿಂದ ಪರಿಪೂರ್ಣತೆಯನ್ನು ಹೊಂದುವ ಇಚ್ಛೆಯೇ ಪ್ರೇಮವಾಗಿದೆ. ಭಕ್ತಿಯ ಬಾಹ್ಯ ಲಕ್ಷಣವು ಸೌಂದರ್ಯವಾಗಿದೆ. ಪ್ರೇಮವು ಅನೇಕ ವಿಧವಾಗಿದೆ. ಸುಂದರ ವಸ್ತುವಿನ ಪ್ರೇಮ, ರತಿಪ್ರೇಮ, ಆತ್ಮಪ್ರೇಮ, ಕಲಾ ಪ್ರೇಮ ಮುಂತಾದ್ದು. ಪ್ರೇಮವು ಕ್ರಮದಿಂದ ಬೆಳೆಯುತ್ತ ಕೊನೆಗೆ ಧರ್ಮ ಕ್ಷೇತ್ರದಲ್ಲಿ ಸದ್ವಸ್ತುವಿನ ಪ್ರೇಮ ಲಾಭವಾಗಿ (*Love of the good*) ಮನುಷ್ಯನು ಅಮರತ್ವವನ್ನು ಹೊಂದುವನು. ಪ್ಲೇಟೋನ ಪ್ರೇಮವು ಪಾರಮಾರ್ಥಿಕವಿದ್ದು (*philosophical*) ಅಂತಿಮಧ್ಯೇಯವಾದ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳತಕ್ಕದ್ದಾಗಿರುವದು

ರಾಜನೀತಿ— ವ್ಯಕ್ತಿಯ ಸುಖಕ್ಕಿಂತಲೂ ಯಾವತ್ತು ಸಮಾಜದ ಸುಖವೇ ಧ್ಯೇಯವು. ನ್ಯಾಯ ಗುಣವು (*justice*) ಪರಿಪೂರ್ಣವಾದ ಸಮಾಜದಲ್ಲಿ ಮಾತ್ರವೇ ಕಂಡುಬರುತ್ತದೆ. ಮತ್ತು ಅದು ಜ್ಞಾನ, ಧೈರ್ಯ ಮತ್ತು ಮಿತವೃತ್ತಿಗಳನ್ನು ಸಫಲಗೊಳಿಸುವದು. ರಾಜ್ಯಪದ್ಧತಿಯು ನ್ಯಾಯವನ್ನು ಸಂಸ್ಥಾಪಿಸತಕ್ಕದ್ದು. ಆಗಿನ ಕಾಲದ ಅನಾಯಕವಾದ ಪ್ರಜಾರಾಜ್ಯದಿಂದ ಅವನಿಗೆ ತೃಪ್ತಿಯಾಗದ್ದರಿಂದ ಏಕಪ್ರಭುತ್ವವೇ ಒಳ್ಳೇದೆಂದು ತನ್ನ ರಿಪಬ್ಲಿಕ್ (*Republic*) ಗ್ರಂಥದಲ್ಲಿ ಪ್ರತಿಪಾದಿಸಿದನು. ಪ್ರಭುತ್ವದ ಮೊದಲನೇ ಕರ್ತವ್ಯವೆಂದರೆ ವಿದ್ಯಾಪ್ರಸಾರವು. ಬುದ್ಧಿವಂತರೇ ರಾಜ್ಯಭಾರ ನಡಿಸಲು ಸಮರ್ಥರು. ಉಳಿ

ದವರು ಕಾಯಿದೆಗಳಿಗೆ ಅಧೀನರಾಗಿರತಕ್ಕದ್ದು. ಸಮಾಜದಲ್ಲಿ ಬೇರೆ ಬೇರೆ ಜನರು ಬೇರೆ ಬೇರೆ ಕಾರ್ಯಗಳನ್ನು ಮಾಡಬೇಕು. (೧) ಬುದ್ಧಿವಂತರು ರಾಜ್ಯಸೂತ್ರ ನಡಿಸಬೇಕು. (೨) ಶೂರರು ರಾಜ್ಯವನ್ನು ಸಂರಕ್ಷಿಸಬೇಕು. (೩) ಸಾಮಾನ್ಯ ಜನರು ವ್ಯಾಪಾರ ಮಾಡಬೇಕು ಮತ್ತು ಸೇವಾ ವೃತ್ತಿಯನ್ನು ಅನುಸರಿಸಬೇಕು. ಈ ವಿಧವಾದ ಸಾಮಾಜಿಕ ವಿಭಾಗವನ್ನು ಪ್ಲೇಟೋನು ಆತ್ಮದ ಮೂರು ವಿಧವಾದ ಅಂಗಗಳ ಆಧಾರದ ಮೇಲೆ ನಿರ್ಮಿಸಿದನು. ಈ ವಿಭಾಗವು ಮನುವಿನ ಚಾತುರ್ವರ್ಣ್ಯವನ್ನು ಹೋಲುತ್ತಿದ್ದರೂ ಮನುವು ಪ್ರತಿಯೊಂದು ವೃತ್ತಿಯನ್ನು ಜಾತಿಗೆ ತಳಕು ಹಾಕಿ ಒಂದು ವರ್ಣದವನು ಮತ್ತೊಂದು ವರ್ಣದ ವೃತ್ತಿಯನ್ನು ಮಾಡಲು ಶಕ್ತನಿದ್ದರೂ ಅದನ್ನು ಮಾಡದಂತೆ ನಿರ್ಬಂಧಿಸಿದನು. ಆದರೆ ಪ್ಲೇಟೋನು ಶ್ರಮ ವಿಭಾಗದ *(Division of labour)* ತತ್ವದ ಮೇಲೆ ಈ ವಿಭಾಗವನ್ನು ಮಾಡಿದ್ದರಿಂದ ಒಬ್ಬನು ಮತ್ತೊಂದು ವರ್ಗದ ವೃತ್ತಿಯನ್ನು ಮಾಡಲು ಶಕ್ತನಿದ್ದದರಿಂದ ಪ್ಲೇಟೋನ ಸಮಾಜ ವಿಭಜನೆಯು ಮನುವಿನಂತೆ ಸಂಕುಚಿತವಾಗಿರದೆ ಔದಾರ್ಯ ಗರ್ಭಿತವಾಗಿತ್ತು. ಪ್ಲೇಟೋನ ಅಭಿಪ್ರಾಯ ಪ್ರಕಾರ ಯಾವ ವ್ಯಕ್ತಿಯೂ ತನ್ನ ಉದ್ಯೋಗವನ್ನು ಸ್ವಯಂ ಹುಡುಕಿಕೊಳ್ಳಲಾರನು. ಸರಕಾರದ ಅಧಿಕಾರಿಗಳು ವ್ಯಕ್ತಿಯ ಸ್ಥಿತಿಯನ್ನು ಪರೀಕ್ಷಿಸಿ ಅವನ ಉದ್ಯೋಗವನ್ನು ನಿರ್ಧರಿಸುವರು, ಮತ್ತು ಮಕ್ಕಳ ಉತ್ಪತ್ತಿ ಮಾಡುವಾಗ ಪರವಾನಿಗೆಯನ್ನು ಕೊಡುವರು; ಮತ್ತು ಅಶಕ್ತ ಕೂಸುಗಳನ್ನು ನಾಶ ಮಾಡುವರು. ಕೂಸುಗಳು ಸರಕಾರದ ಸಂರಕ್ಷಣೆಯಲ್ಲಿಯೇ ಇರಬೇಕಲ್ಲದೆ ತಂದೆತಾಯಿಗಳಲ್ಲಿರಲಾರವು. ಪ್ರಜೆಗಳಿಗೆ ಏನೂ ಆಸ್ತಿ ಇರತಕ್ಕದ್ದಲ್ಲ. ಸತಿಪತಿಗಳ ನಡುವೆ ವಿವಾಹ ಬಂಧನವಿರದೆ ಸ್ವೇಚ್ಛಾ ವಿಹಾರವಿರಬೇಕು. ಹೀಗೆ ಪ್ಲೇಟೋನ ಸಮಾನತ್ವ ವಾದದ (*communism*) ಮೂಲ ಕರ್ತೃವಾಗಿದ್ದಾನೆ. ಈಗ ರಷಿಯಾದಲ್ಲಿ ಕೆಲ ರೂಪಾಂತರದಲ್ಲಿ ಈ ವಾದವು ಪ್ರಸಾರದಲ್ಲಿದೆ. ಪ್ಲೇಟೋನು ಮನುವಿನಂತೆ " ನ ಸ್ತ್ರೀ ಸ್ವಾತಂತ್ರ್ಯಮರ್ಹತಿ " ಎಂಬ ತತ್ವವನ್ನೇ ಎತ್ತಿ ಹಿಡಿದಿದ್ದಾನೆ. ಆಗಿನ ಕಾಲದ ಸ್ತ್ರೀಯರು ಸುಧಾರಿಸಿದ್ದಿಲ್ಲವಾದ ಕಾರಣ ಸಾಮಾನ್ಯ ಜನರ ಅಭಿಪ್ರಾಯವನ್ನೇ ಪ್ಲೇಟೋನು ಪ್ರತಿಧ್ವನಿಗೊಳಿಸಿದ್ದಾನೆ. ಇದರಲ್ಲಿ ಪ್ಲೇಟೋನ ವೈಶಿಷ್ಟ್ಯವೇನೂ ಕಂಡುಬರುವದಿಲ್ಲ. ಇವನ ಕಾಲದಲ್ಲಿ ಗುಲಾಮರನ್ನು ಮಾಡುವ ಪರಿ

ಪಾಠವು ವಿಶೇಷವಾಗಿತ್ತು. ಗುಲಾಮಗಿರಿಯನ್ನು ಇವನು ನಿಷೇಧಿಸಲಿಲ್ಲ. ಆದರೆ ಗುಲಾಮರನ್ನು ದಯೆಯಿಂದ ಕಾಣಬೇಕೆಂದು ಹೇಳಿದನು.

ಕಲಾ:— ಕಲೆಯ ಬೆಲೆಯನ್ನು ಕಲೆಯಲ್ಲಿಯೇ ಕಾಣಬೇಕು. ನೈತಿಕ ದೃಷ್ಟಿಯಿಂದ ಅದರ ಬೆಲೆಯನ್ನು ನಿರ್ಣಯಿಸಬಾರದು. ಹೀಗೆಂದು ಆಧುನಿಕ ವಿಚಾರವು ಕಲೆಯ ವಿಷಯವಾಗಿರುವದು. ಆದರೆ ಪ್ಲೇಟೋನು ಕಲೆಯನ್ನು (*Art*) ನೀತಿ ಮತ್ತು ತತ್ವಜ್ಞಾನಗಳಿಗೆ ಅಧೀನವಾಗಿ ಗಣಿಸಿದನು. ಪ್ಲೇಟೋನು ತತ್ವಜ್ಞಾನಿಯಿದ್ದಂತೆಯೇ ದೊಡ್ಡ ಕವಿಯೂ ಆಗಿದ್ದನು. ಕವಿತೆಯು ನೈತಿಕವಿರದಿದ್ದರೆ ಅದು ಎಷ್ಟು ಸುಂದರವಾಗಿದ್ದರೂ ಅದಕ್ಕೆ ಬೆಲೆಯಿಲ್ಲವೆಂದು ಹೇಳಿದನು. ಹೀಗೆ ಪ್ಲೇಟೋನು ಕಲೆಯ ಕೊಲೆಯನ್ನೇ ಮಾಡಿದ್ದಾನೆ. ಕಲೆಯು ಒಂದು ವಸ್ತುವಿನ ಹೋಲಿಕೆಯನ್ನುಂಟುಮಾಡುವದೆಂದು ಪ್ಲೇಟೋನ ಹೇಳಿಕೆ. ಕಲೆಯು ಹೊಸ ಸೃಷ್ಟಿಯನ್ನುಂಟುಮಾಡಬಲ್ಲದೆಂಬದನ್ನು (*Creativeness of art*) ಪ್ಲೇಟೋನು ಒಪ್ಪಲಿಲ್ಲ. ಕಲೆಗಾರನು ವಸ್ತುವಿನ ಪ್ರತಿಚಿತ್ರವನ್ನಷ್ಟೇ ಹುಟ್ಟಿಸದೆ ತನ್ನ ಚಾತುರ್ಯದಿಂದ ಹೊಸ ಭಾವವು ಅಂಕುರವಾಗ್ವವಂತೆ ಮಾಡುವನು. ಸ್ಫೂರ್ತಿಯಿಂದಲೇ ಅವನ ಕಲೆಯು ಒಡಮೂಡುವದು. ಅವನು ಒಂದು ವಸ್ತುವನ್ನು ಸಾಧಾರಣ ವಸ್ತುವಾಗಿ ತಿಳಿಯದೆ ಭಾವನೆಯ ಪ್ರಾದುರ್ಭಾವವೆಂದು ತಿಳಿಯುತ್ತಾನೆ. ಕಲೆಯು ಮತ್ತು ತತ್ವಜ್ಞಾನದ ಧ್ಯೇಯ ಒಂದೇ ಆಗಿದೆ. ಆ ಧ್ಯೇಯವು ಪರಿಪೂರ್ಣತೆಯನ್ನು ಅಥವಾ ಭಾವನೆಯನ್ನು (*Idea*) ಹೊಂದುವದಾಗಿದೆ.

ವಿದ್ಯಾ:— ವಿದ್ಯೆಯ ಕಾರ್ಯವು ಅಶಾಶ್ವತ ವಸ್ತುವನ್ನು ಬಿಟ್ಟು ಶಾಶ್ವತ ವಸ್ತುವಿನ ಧ್ಯಾನಮಗ್ನವಾಗುವಂತೆ ಆತ್ಮವನ್ನು ಪರಿವರ್ತನೆಗೊಳಿಸತಕ್ಕದ್ದಾಗಿದೆ. ಸರಕಾರವೇ ಬಾಲಕರಿಗೆ ವಿದ್ಯೆ ಕಲಿಸಬೇಕು. ಆರು ವರ್ಷಗಳ ವರೆಗೆ ಒಳ್ಳೇ ಆಹಾರ ಕೊಟ್ಟು ಅವರನ್ನು ಧಾರ್ಮಿಕ ಸಮಾರಂಭಗಳಿಗೆ ಕರದೊಯ್ಯುತ್ತಿರಬೇಕು. ಆರು ವರ್ಷದಿಂದ ಬಾಲಕ ಬಾಲಿಕೆಯರ ವಿದ್ಯಾಭ್ಯಾಸವು ಪ್ರತ್ಯೇಕವಾಗಿರಬೇಕು. ಕುದುರೆ ಸವಾರಿ, ಬಿಲ್ಲು, ಗಾಯನ, ಅಂಗಸಾಧನೆ, ಮೊದಲಾದವು ಒತ್ತಾಯದ ಶಿಕ್ಷಣವಾಗಿ ಇಡತಕ್ಕದ್ದು. ಮೂವತ್ತು ವಯಸ್ಸಿನ ತರುವಾಯ ತತ್ವಾಭ್ಯಾಸವು ಪ್ರಾರಂಭವಾಗಬೇಕು. ಈ ವಿಷಯವು ಬುದ್ಧಿವಂತರಿಗೆ ಮಾತ್ರವೇ ಸಲ್ಲತಕ್ಕದ್ದು.

ಪ್ಲೇಟೋನು ತನ್ನ ಭಾವನಾಲೋಕದ ವಿಚಾರ ಪ್ರತಿಪಾದನೆಯಲ್ಲಿ ಡೆಮಾಕ್ರಿಟಸನ ಅನುಕರಣ ಮಾಡಿದನೆಂದು ಈ ಮೊದಲು ಹೇಳಿದ್ದಾಗಿದೆ. ಡೆಮಾಕ್ರಿಟಸನು ತನ್ನ ಭಾವನೆಗಳನ್ನು ದೃಷ್ಟ ವಸ್ತುಗಳಿಂದಲೇ ತೆಗೆದಿದ್ದಾನೆ. ಇವೇ ಅಣುಗಳು. ಇವಕ್ಕೂ ಪ್ಲೇಟೋನ ಭಾವನೆಗಳಿಗೂ ಏನೂ ಸಾಮ್ಯವಿಲ್ಲ. ಅಣುಗಳು ದೃಶ್ಯ ಸೃಷ್ಟಿಯ ನಿಜವಸ್ತುಗಳು. ಪ್ಲೇಟೋನ ಭಾವನೆಗಳು ಪರಲೋಕದ ನಿಜವಸ್ತುಗಳು. ಆದರೆ ಈರ್ವರೂ ಪ್ರೊಟ್ಯಾಗೊರಾಸನ ಪ್ರತ್ಯಕ್ಷ ಜ್ಞಾನದ ಸಿದ್ಧಾಂತವನ್ನು ಖಂಡಿಸಿ ಬುದ್ಧಿಪ್ರಾಮಾಣ್ಯವಾದವನ್ನು (*Rationalism*) ಸ್ಥಾಪಿಸಿದ್ದಾರೆ. ಈರ್ವರೂ ಪ್ರತ್ಯಕ್ಷ ಜ್ಞಾನಕ್ಕೆ ನಿಯಮಿತ ಸತ್ಯವನ್ನೂ ಬುದ್ಧಿಗೆ ಪೂರ್ಣ ಸತ್ಯವನ್ನೂ ಕಲ್ಪಿಸಿದ್ದಾರೆ. ಈರ್ವರೂ ಜಗಜ್ಜೀವವಾದಿಗಳಾದ (*Hylozoist*) ಗ್ರೀಕರ ದ್ವೈತವನ್ನು ಹೋಗಲಾಡಿಸಲು ಯತ್ನಿಸಿದ್ದಾರೆ. ಆದರೆ ಡೆಮಾಕ್ರಿಟಸನು ಭೌತಿಕವಾದಿಯು (*Materialist*). ಪ್ಲೇಟೋನು ಮಾಯಾವಾದಿಯು ಅಥವಾ ಪಾರಲೌಕಿಕವಾದಿಯು (*Idealist*).

---

# ಬಸವರಾಜದೇವರಗಳೆಯೂ, ಬಸವನ ಚರಿತ್ರೆಯೂ.

(ಬಸವನ ಬಳಗದಿಂದ)

ಲೇಖಕಃ— ಎಸ್. ಎಸ್. ಮೂಳವಾಡ ಬಿ. ಏ. ಆನರ್ಸ.

ಚಾರಿತ್ರ ದೃಷ್ಟಿಯಿಂದ ಬಸವರಾಜದೇವ ರಗಳೆಯು ಮಹತ್ವದ್ದಾಗಿದೆ. ಆದುದರಿಂದ ಅದರಲ್ಲಿ ನಿರೂಪಿತವಾದ ಬಸವನ ಚರಿತ್ರವನ್ನು ಇನ್ನುಳಿದ ಪುರಾಣಗ್ರಂಥಗಳೊಡನೆ ತುಲನೆಮಾಡಿ ನೋಡುವದು ಅವಶ್ಯವಾಗಿದೆ. ಅದಕ್ಕನುಸರಿಸಿ ಈಗ ಭೀಮಕವಿ (೧೩೬೯) ಯು ಬಸವಪುರಾಣದ ಕಥಾಸಾರಾಂಶವನ್ನು ಇಲ್ಲಿ ಸಂಕ್ಷೇಪವಾಗಿ ನಿರೂಪಿಸಬೇಕಾಗಿದೆ.

ಬಸವಪುರಾಣ ಕಥಾಸಾರಾಂಶಃ— ಭೂಲೋಕದಲ್ಲಿ ಶೈವಾಚಾರವು ನಷ್ಟವಾಗಿ ನಾಸ್ತಿಕವಾದವು ಪ್ರಬಲವಾಯಿತು. ಇದನ್ನು ನಾರದನ ಮುಖದಿಂದ ಕೇಳಿದ ಪರಮೇಶ್ವರನು ಶೈವಮತದ ಜೀರ್ಣೋದ್ಧಾರಕ್ಕಾಗಿ ಭೂಲೋಕದಲ್ಲಿ ಜನ್ಮವೆತ್ತುವಂತೆ ನಂದಿಗೆ ಆಜ್ಞಾಪಿಸಿದನು. (೧) ಬಾಗೇವಾಡಿ ಗ್ರಾಮದಲ್ಲಿ 'ಪರಮಶೈವಾಂಬುರುಹ ತರಣಿ' ಯಾದ ಮಾದಿರಾಜನಿದ್ದನು. ಆತನೂ ಆತನ ಪತ್ನಿ ಮಾದಲಾಂಬಿಕೆಯೂ ಸಂತಾನಾಪೇಕ್ಷೆಯಿಂದ ನಂದಿ ವ್ರತವನ್ನು ಮಾಡುತ್ತಿದ್ದರು. ಅವರಿಗೆ ಪ್ರಸನ್ನನಾದ ನಂದಿಯು ಅವರ ಗರ್ಭದಲ್ಲಿ ಜನ್ಮವನ್ನು ತಳೆದನು. ಇದರಿಂದ ಆತನಿಗೆ ತನ್ನ ಉದ್ದಿಶ್ಯ ಕಾರ್ಯವನ್ನು ನೆರವೇರಿಸಲಿಕ್ಕೂ ಆಸ್ಪದ ದೊರೆಯಿತು. ಜನ್ಮವಾದ ಕೂಡಲೆ ಕೂಸಿಗೆ ಸಂಗಮನಾಥನಿಂದ ಲಿಂಗಧಾರಣೆ ನಡೆಯಿತು. ಬಾಲಕನು ಎಂಟು ವರುಷದವನಾದ ಕೂಡಲೆ ತಂದೆಯು ಪದ್ಧತಿಯಂತೆ ಆತನಿಗೆ ಉಪನಯನ ಸಂಸ್ಕಾರವನ್ನು ಮೊದಲು ಯೋಚಿಸಿದನು. ತಂದೆಯ ಈ ಏರ್ಪಾಟನ್ನು ಒಪ್ಪದೆ ಬಸವನು ಆತನನ್ನು ಪ್ರತಿಭಟಿಸುತ್ತಾನೆ. ಜನಿಸಿದ ಕೂಡಲೇ ಸಂಗಮನಾಥನಿಂದ ಲಿಂಗದೀಕ್ಷೆ ಪಡೆದ ತನಗೆ ಇನ್ನುಳಿದ ಸಂಸ್ಕಾರಗಳು ಬೇಕಿಲ್ಲವೆಂದು ವಾದಿಸಿ (೨) ತನ್ನ ತಂದೆತಾಯಿಗಳನ್ನು ತೊರೆದು ಬಾಗೇವಾಡಿಯಿಂದ ಹೊರಟು ಹೋಗುತ್ತಾನೆ. ಜೊತೆಯಲ್ಲಿ ಸಹೋದರಿ ನಾಗಲಾಂಬಿಕೆಯನ್ನೂ ಕರೆದುಕೊಂಡು ಸಂಗಮೇಶ್ವರ ಕ್ಷೇತ್ರಕ್ಕೆ ಹೋಗುತ್ತಾನೆ. ಬಸವನ ಈ ವೀರಶೈವ ಭಕ್ತಿಯನ್ನು ಕಂಡು ಬಲದೇವ ಮಂತ್ರಿಯು ಹರುಷಿತನಾಗಿ

ಬಸವನು ಅಲೌಕಿಕ ಪುರುಷನೆಂಬದನ್ನು ಕಂಡುಕೊಂಡು ಆತನಿಗೆ ತನ್ನ ಮಗಳಾದ ಗಂಗಾಬಿಕೆಯನ್ನು ಕೊಟ್ಟು ವಿವಾಹವನ್ನು ಜರಗಿಸುತ್ತಾನೆ. ಬಸವನು ತನ್ನ ಪತ್ನಿ, ಸಹೋದರಿಯರೊಡಗೂಡಿ ಸಂಗಮೇಶ್ವರನಲ್ಲಿ ಉಪದೇಶ ಪಡೆಯುತ್ತಾನೆ. (೩) ಕೆಲವು ದಿವಸಗಳು ಕಳೆದ ನಂತರ ಬಸವನ ಮಾವನಾದ ಬಲದೇವ ಮಂತ್ರಿಯು ಸತ್ತುಹೋಗಲು ಆತನ 'ಬಲುನಿಯೋಗವನೆಲ್ಲವಂ' ಪಾಲಿಸಲಿಕ್ಕೆ ಬಸವನೇ ಸಮರ್ಥನೆಂಬದನ್ನರಿತು ಬಿಜ್ಜಳನು ಆತನನ್ನು ಬರಮಾಡಿಕೊಂಡು ಮಂತ್ರಿಪದದ ಭಾರವನ್ನು ಅವನಿಗೆ ಒಪ್ಪಿಸುತ್ತಾನೆ. (೪) ಬಸವನು ಓಲಗದಲ್ಲಿರುವಾಗ ಒಂದು ಅಲೌಕಿಕ ಘಟನೆ ನಡೆಯುತ್ತದೆ. ಎಲ್ಲರೂ ಆಸ್ಥಾನದಲ್ಲಿ ಕೂತಿರುವಾಗ ಆಕಾಶದತ್ತಣಿಂ ಓಲೆಯೊಂದು ಬಂದು ಸಭಾಮಧ್ಯದಲ್ಲಿ ಬೀಳುತ್ತದೆ. ಆ ಲಿಖಿತವನ್ನು ಓದಲು ಇನ್ನಾರಿಗೂ ಸಾಧ್ಯವಾಗದೆ ಬಸವನೊಬ್ಬನು ಮಾತ್ರ ಅದನ್ನು ಓದುತ್ತಾನೆ. ಆ ಲಿಖಿತದಿಂದ ಬಿಜ್ಜಳನಿಗೆ ಅಪಾರವಾದ ಭಾಂಡಾರವು ದೊರೆಯುತ್ತದೆ. ಈ ಘಟನೆಯು ನಡೆದುದರಿಂದ ಬಸವನಲ್ಲಿ ಬಿಜ್ಜಳನ ಶ್ರದ್ಧೆ ಹೆಚ್ಚು. ಆತನನ್ನು ಅಲೌಕಿಕ ಪುರುಷನೆಂಬದಾಗಿ ಗ್ರಹಿಕೆಯಾಗುತ್ತದೆ. ಬಸವನು ತನ್ನ ವೀರಶೈವ ಆಚಾರದಲ್ಲಿ ವಿಶೇಷ ಮಗ್ನವಾಗುತ್ತಾನೆ. ಆತನ ಸಹೋದರಿ ನಾಗಲಾಂಬಿಕೆಯ ಗರ್ಭದಲ್ಲಿ ಈಶ್ವರನ ಚಿತ್ಕಳಾಂಶವು ಚನ್ನಬಸವನಾಗಿ ಹುಟ್ಟುತ್ತದೆ. ಬಸವಣ್ಣನವರ ಘನತೆಯು ಏಣ್ದೆಸೆಗಳಲ್ಲಿಯೂ ಪಸರಿಸುತ್ತದೆ. ಅದನ್ನು ಕೇಳಿದ ಶ್ರೀ ಅಲ್ಲಮಪ್ರಭುವು ಬಸವನನ್ನು ಕಾಣಲೆಂದು ಸಿದ್ಧರಾಮನೊಡನೆ ಕಲ್ಯಾಣಕ್ಕೆ ಬರುತ್ತಾನೆ. ಬಸವನು ಆತನನ್ನು ಸತ್ಕರಿಸಿ ಪೂಜಿಸುತ್ತಾನೆ. ಬಸವನು ಕೆಲವು ಅಲೌಕಿಕ ಕಾರ್ಯ (ಪವಾಡ) ಗಳನ್ನು ಎಸಗುತ್ತಾನೆ. ದಿನದಿನಕ್ಕೆ ಜಂಗಮರಲ್ಲಿ ಆತನ ಭಕ್ತಿ, ಆದರಗಳು ಹೆಚ್ಚುತ್ತವೆ. ಈ ಸಂಧಿಯು ದುರುಪಯೋಗ ಮಾಡಿಕೊಳ್ಳುವ ಅನೇಕ ಬಗೆಯ ಜಂಗಮರು ಬಸವನ ಆಶ್ರಯವನ್ನು ಪಡೆದು ಆತನಿಂದ ಪುರಸ್ಕಾರವನ್ನು ಹೊಂದುತ್ತಾರೆ. ಆಸ್ಥಾನದಲ್ಲಿ ಬಸವನ ಘನತೆಯು ಹೆಚ್ಚುತ್ತಿರುವದನ್ನು ಕಂಡು ಇನ್ನಿತರರು ಅಸೂಯೆ ಪಟ್ಟುಕೊಳ್ಳುತ್ತಾರೆ. ರಾಜ್ಯದ ಭಂಡಾರವನ್ನು ಬಸವನು ಜಂಗಮರಿಗಾಗಿ ಸೂರೆಗೈಯ್ಯುವನೆಂಬದಾಗಿ ಬಿಜ್ಜಳನ ಕಡೆಗೆ ದೂರು ಒಯ್ಯುತ್ತಾರೆ. ಬಸವನು ತನ್ನ ಅಲೌಕಿಕ ಶಕ್ತಿಯಿಂದ ಆ ಅಪವಾದವನ್ನು ಅಲ್ಲಗಳೆಯುತ್ತಾನೆ. ಬಸವನ ಸುತ್ತು ಜಂಗಮ ಸಂದೇಹ ದಿನೇ ದಿನೇ ಹೆಚ್ಚುತ್ತದೆ. ನಾಡು

ಪರನಾಡುಗಳಿಂದ ಎಷ್ಟೋ ಜನರು ಬಂದು ಆತನನ್ನು ಪೂಜಿಸುತ್ತಾರೆ. ಬಸವನ ಬಳಿಯಲ್ಲಿದ್ದ ಜನರಲ್ಲಿ ಎಷ್ಟೋ ಜನರು ಮಹಿಮಾಶಾಲಿಗಳಾಗಿದ್ದರು. ಬಸವನ ಪಕ್ಷದ ಜನರಿಗೂ ಬಿಜ್ಜಳನಿಗೂ ವಿರೋಧವು ಉಂಟಾಗುತ್ತದೆ. ತನ್ನ ಮಂತ್ರಿಯಿಂದ ತನ್ನ ತೇಜೋಭಂಗವಾಗುವ ಸಂದರ್ಭಗಳು ಬಿಜ್ಜಳನಿಗೆ ಬರುತ್ತವೆ. ಮಡಿವಾಳ ಮಾಚಿದೇವನ ಮೂಲಕ ಬಿಜ್ಜಳನ ರಾಜ್ಯಮದದ ಸೊಕ್ಕು ಅಡಗುತ್ತದೆ. ಇಂತಹ ಇನ್ನೂ ಕೆಲವು ಘಟನೆಗಳು ನಡೆಯುತ್ತವೆ. ಬಸವನ ಮಹಿಮಾ ವಿಶೇಷದಿಂದ ವೀರಶೈವ ಮತವು ಪ್ರಬಲಿಸುತ್ತದೆ. ಅದರ ಫಲವಾಗಿಯೇ ಜೈನ, ಬ್ರಾಹ್ಮಣ ಧರ್ಮಗಳು ಕಳೆಗುಂದುತ್ತವೆ. ಆದ್ದರಿಂದ ಪರವಾದಿಗಳು ಬಿಜ್ಜಳನಲ್ಲಿಗೆ ತಮ್ಮ ದೂರನ್ನು ಒಯ್ದು ಬಸವನ ವಿಷಯವಾಗಿ ಆತನ ಮನಸ್ಸನ್ನು ಕಲುಷಿತಮಾಡುತ್ತಾರೆ. ಬಸವನು ಬಿಜ್ಜಳನೆದುರು ಶೈವ ಭಕ್ತರ ಘನತೆಯನ್ನು ಪ್ರದರ್ಶಿಸುತ್ತಾನೆ. ಮುಂದೆ ಶಿವಭಕ್ತರು ಬ್ರಾಹ್ಮಣನಾದ ಮಧುವಯ್ಯ ಹೊಲೆಯರ ಹರಳಯ್ಯ ಇವರಲ್ಲಿ ಶರೀರ ಸಂಬಂಧವನ್ನು ಉಂಟುಮಾಡುತ್ತಾರೆ. ಆಗ ರೋಷದಿಂದ ಬಿಜ್ಜಳನು ಅವರ ಕಣ್ಣುಗಳನ್ನು ಕೀಳಿಸುತ್ತಾನೆ. ಈ ಶೈವ ದ್ರೋಹಕ್ಕಾಗಿ ಜಗದೇವನು ಬಸವನ ಆಜ್ಞೆಯನ್ನು ಅನುಸರಿಸಿ ಬಿಜ್ಜಳನ ಕೊಲೆಮಾಡುತ್ತಾನೆ. (೫) ಆಗ ಬಸವನು ಸಂಗಮೇಶ್ವರನಲ್ಲಿಗೆ ಹೋಗಿ ಲಿಂಗದಲ್ಲಿ ಐಕ್ಯವಾಗುತ್ತಾನೆ.

ಬಸವನ ವಿಷಯವಾಗಿರುವ ಗ್ರಂಥಗಳಲ್ಲಿ ಸಿಂಗಿರಾಜ ಪುರಾಣವು ಕೆಲವೊಂದು ದೃಷ್ಟಿಯಿಂದ ಮಹತ್ವದ್ದಾಗಿದೆ. ಯಾಕೆಂದರೆ ಇದರಲ್ಲಿ ಬಸವಪುರಾಣಕ್ಕೆ ವ್ಯತಿರಿಕ್ತವಾದ ಸಂಗತಿಗಳಿವೆ. ಮೇಲೆ ನಿರ್ದೇಶಿಸಿದ ಬಸವಪುರಾಣದ ಘಟನೆಗಳಿಗೆ ಅನುಕ್ರಮವಾಗಿ ೧, ೨, ೩ ,೪, ೫ ಹೀಗೆ ನಂಬರು ಹಾಕಿದೆಯಷ್ಟೇ. ಆ ನಂಬರಿನ ಘಟನೆಗಳಿಗೆ ಸಿಂಗಿರಾಜ ಪುರಾಣದಲ್ಲಿ ವ್ಯತಿರಿಕ್ತವಾಗಿರುವ ಮಾತುಗಳಿಗೆ ಅವೇ ನಂಬರುಗಳನ್ನು ಹಾಕಿ ಎಂ. ಆರ್. ಶ್ರೀಯವರ ಗ್ರಂಥವನ್ನು ಅನುಸರಿಸಿ ಕೆಳಗೆ ನಿರ್ದೇಶಿಸುತ್ತೇನೆ.

೧ ಬಸವನ ಅವತಾರದ ಕಾರಣವು ಹೀಗಿದೆ:— ಕಾರಣಾಂತರದಿಂದ ಭೂಮಿಗೆ ಬಂದಿದ್ದ ವೃಷಭೇಶ್ವರನು ಲಿಂಗವನ್ನು ಪಟ್ಟದಕಲ್ಲಿನ ಅನಿಮಿಷಯ್ಯನಿಗೆ ಕೊಡುತ್ತಾನೆ. ಲಿಂಗವಿಲ್ಲದ ವೃಷಭೇಶ್ವರನನ್ನು ದ್ವಾರಪಾಲಕರು ಕೈಲಾಸದಲ್ಲಿ ತಡೆಯುವರು. ಈ ವಿಚಾರವು ಈಶ್ವರನಿಗೆ ಮುಟ್ಟುವದು. ಲಿಂಗ ಪಡೆಯಲು ಭೂಮಿಯಲ್ಲಿ ಅವತರಿಸೆಂದು ವೃಷ

ಭೀಶ್ವರನಿಗೂ ಬಿಜ್ಜಳ ಕರ್ಣಿದೇವರಾಗಿ ಹುಟ್ಟಿರೆಂದು ದ್ವಾರಪಾಲಕರಿಗೂ ಈಶ್ವರನು ಆಜ್ಞೆ ಮಾಡುತ್ತಾನೆ.

೨ ...... .....

೩ ಬಸವಣ್ಣನವರಿಗೆ ಉಪದೇಶ ಕೊಟ್ಟವರು ಜಾತವೇದಿಮುನಿಗಳು. ಸಂಗಮೇಶ್ವರನಲ್ಲ.

೪ ಲಿಖಿತವನ್ನು ಓದುವದಕ್ಕೆ ಮೊದಲು ಬಸವನು ಸಾಧಾರಣ ಕರಣಿಕನಾಗಿದ್ದನು. ಓಲೆಯನ್ನು ಓದಿದ ಮೇಲೆಯೇ ಮಂತ್ರಿಪದವನ್ನು ಪಡೆದನು.

೫ ಸಿಂಗಿರಾಜ ಪುರಾಣದಲ್ಲಿ ಬಿಜ್ಜಳನ ಕೊಲೆಯ ವಿಚಾರವಿಲ್ಲ. ಬಿಜ್ಜಳನು ಬಸವಣ್ಣನವರ ಅಪ್ಪಣೆಯಂತೆ ಚನ್ನಬಸವೇಶನನ್ನು ಮಂತ್ರಿಯನ್ನು ಮಾಡಿಕೊಂಡನು.

ಅರ್ಥಾತ್ ಜಗದೇವೋಪಾಖ್ಯಾನವು ಸಿಂಗಿರಾಜ ಪುರಾಣದಲ್ಲಿ ಇಲ್ಲ.

ಮೇಲೆ ನಿರ್ದೇಶಿಸಿದ ಎರಡೂ ಪುರಾಣಗಳ ಹೇಳಿಕೆಗಳಿಗೆ ಭಿನ್ನವಾದ ಹೇಳಿಕೆಗಳು ಬಸವದೇವರಾಜ ರಗಳೆಯಲ್ಲಿ ಇವೆ. ಬಸವನ ತರ್ಕಶುದ್ಧ ವಿಚಾರಬದ್ಧ ಚರಿತ್ರೆಯನ್ನು ಕಂಡುಕೊಳ್ಳುವದಕ್ಕೆ ಅವು ಹೆಚ್ಚಾಗಿ ಸಹಾಯಕಾರಿಯಾಗುತ್ತವೆ. ಆದುದರಿಂದ ಆ ಹೇಳಿಕೆಗಳನ್ನು ಇಲ್ಲಿ ನಿರೂಪಿಸುವದು ಅವಶ್ಯ. ಮೇಲಿನಂತೆ ಅನುಕ್ರಮ ನಂಬರುಗಳನ್ನೇ ಹಾಕಿ ಬಸವದೇವರಾಜ ರಗಳೆಯ ವ್ಯತ್ಯಾಸಗಳನ್ನು ಕೆಳಗೆ ಕೊಡುತ್ತೇನೆ.

೧ ವೃಷಭಮುಖನು ಷಣ್ಮುಖನಿಗೆ ಪ್ರಸಾದವನ್ನು ಕೊಡದೆ ಕೊಟ್ಟೆನೆಂದು ಸುಳ್ಳು ಹೇಳುತ್ತಾನೆ. ಹೀಗೆ ಸುಳ್ಳು ಹೇಳಿದ್ದಕ್ಕಾಗಿ ಈಶ್ವರನು ಸಿಟ್ಟಾಗಿ ಭೂಮಿಯಲ್ಲಿ ಅವತರಿಸೆಂದು ವೃಷಭಮುಖನಿಗೆ ಆಜ್ಞಾಪಿಸುತ್ತಾನೆ.

೨ ಉಪನಯನದ ಸಲುವಾಗಿ ಬಸವನು ತಂದೆಯನ್ನು ಪ್ರತಿಭಟಿಸಲಿಲ್ಲ. ಯಾಕೆಂದರೆ ಚಿಕ್ಕಂದಿನಲ್ಲಿಯೇ ತಂದೆತಾಯಿಗಳು ತೀರಿಹೋಗಿದ್ದರು. ಬಸವನಿಗೆ ಉಪನಯನವಾಗಿ ಹೋಗಿತ್ತು. ಮುಂದೆ ಕರ್ಮಲತೆಯಂತಿರ್ದ ಜನ್ನಿವಾರವು ಅನವಶ್ಯಕವೆಂದು ಕಂಡುಕೊಂಡು ಅದನ್ನು ಕಿತ್ತೊಗೆದರು.

ಎಂದೆನುತ್ತಪ್ಪಿಕೊಂಡಡಿಗಡಿಗೆ ಮುಂಡಾಡಿ
ಬಂದಾಯುಸಮನುಸುರ್ದುರ್ ಕಡು ಮೋಹದಿಂ ನೋಡಿ
ದೇವ ಇಂತಿರತಕ್ಕುದೇ ದೂಷಕರ ನಡುವೆ
ದೇವ ಇಂತಿರ್ಪರೆ ಶಿವದ್ರೋಹಿಗಳ ನಡುವೆ

ಎನೆ ಶಶಿಧರಂ ರಾಮತಂದೆಯುಂ ಬಿಗಿದಪ್ಪಿ
ಎನಗೊಡೆಯರಿನಿತು ದಿನವಿಲ್ಲೆನುತಮರ್ದಪ್ಪಿ
ನಿನ್ನ ಬರವಂ ಪಾರುತಿರ್ದೆನೆಲೆ ರಾಮಯ್ಯ
ಎನ್ನೊಲವು ಬರ್ಪಂದದಿಂ ಬಂದೆ ರಾಮಯ್ಯ
ಅರುಹಸರ ಪ್ರತಿಮಾದಿಗಳನೆತ್ತಿ ಬಿಸುಟು ಕಳೆ
ನೆರೆದಿರ್ದ ಜೈನಸಂಕುಳವನೆಬ್ಬಟ್ಟಿ ಕಳೆ
ಎಂದು ಬೆಸಸಲು ರಾಮತಂದೆ ಹರುಷಂದಳೆದು
ಅಂದಿನಿರುಳಂ ಹರನೊಳೇಕಾಂತವಂ ಕಳೆದು
ವಸುಧೆಗಿನಕಿರಣ ಶಿವಭಕ್ತಿ ಪಸರಿಸುವಂತೆ
ದೆಸೆದಿಕ್ಕನಾವರಿಸಿ ತೊಳಗಿ ಬೆಳಗುತ್ತಿಂತೆ

ಬೆಳಗಾಗೆ ಶಿವನ ಪೂಜೆಗೆ ಪೂವ ತರಲೆಂದು
ಗಳಗಳನೆ ಬರೆ ರಂಗಮಂಟಪದ ನಡುವಂದು
ಹರನತ್ತ ಕಾಲಾಗಿ ಪಟ್ಟಿರೆ ಸವಣಗುನ್ನಿ
ಹರನಣುಗನೀಕ್ಷಿಸುತ್ತೇಳೆಲೆ ಹುಳಿತಗುನ್ನಿ
ಹರನಿರ್ದ ದೆಸೆಯೊಳೀ ಪರಿ ಇರಲ್ತಕ್ಕುದೇ
ನರಕಿ ಏಳೇಳು ಶಿವದ್ರೋಹಿ ಇರತಕ್ಕುದೇ

ಎಂದ ನುಡಿಗೇಳಿ ಸವಣಂ ಕರಂ ಘುಡುಘುಡಿಸಿ
ಡಂಬಿನ ಗೊರವ ಗಳಹದಿರು ನಿನ್ನ ಮಾತು ಹುಸಿ
ಶಿವನೆಂದಡಾರೆಲ್ಲಿಯಾರ್ಗಿತ್ತನೆಲೆ ಗೊರವ
ಹವಣರಿಯದೆನ್ನೊಡನೆ ನುಡಿವರೆ ಮರುಳ್ಗೊರವ
ಎನೆ ರಾಮತಂದೆ ಘುಡುಘುಡಿಸಿ ಮಸಗಿದನಂದು
ಕೊನೆ ಮೀಸೆ ಕೆತ್ತೆ ಸೆಡಿಲೇಳೆ ಏಳ್ದಂ ನಿಂದು

ಕೇಳ್ದಿಲವೊ ಮೂರುಂಪುರಂಗಳುರುಪಿದುದನರಿಯ
ಕಾಲನಂ ಭಸ್ಮೀಕೃತವ ಮಾಡಿದುದನರಿಯ
ಕಾಮನಂ ನೋಸಲಗಣ್ಣಿಂದುರುಪಿದುದನರಿಯ

ಸೋಮನಂ ಸಿರಿಮುಡಿಯೊಳಗೆ ಸೂಡಿದುದನರಿಯ
ಹರಿಯಜರ ನಡುವೆ ಉರಿಲಿಂಗವಾದುದನರಿಯ
ಅರೆಯಟ್ಟಿ ಬಪ್ಪ ವಿಷಮಂ ಧರಿಸಿದನನರಿಯ
ಹುಲಿಗೆರೆಯೊಳುದಯಿಸಿದ ಸೋಮನಾಥನನರಿಯ
ಎಲೆ ಮರುಳೆ ಬಾಣಂಗೆ ಕೆಯ್ಯನಿತ್ತುದನರಿಯ
ಎಲೆಲೆ ಮಯೂರಂಗೆ ಮೆಯ್ಯನಿತ್ತುದನರಿಯ
ಎಲೆ ಕಾಳಿದಾಸಂಗೆ ಕಣ್ಣನಿತ್ತುದನರಿಯ
ಎಲೆಲೆ ನಂಬೆಣ್ಣಂಗೆ ತನ್ನನಿತ್ತನನರಿಯ
ಎಲವೊ ದಾಸಂಗೆ ತವನಿಧಿಯನಿತ್ತುದನರಿಯ
ಓಹಿಲನನಿಳೆಯರಿಯೆ ಒಯ್ದ ದೇವನನರಿಯ
ಆಹ ಉದ್ಭಟನ ಪುರವೆರಸಿ ಒಯ್ದನನರಿಯ
ಎಲವೊ ಕರುಕುಚಿಕಂಗೆ ತಂದೆ ಇತ್ತನನರಿಯ
ಎಲವೋ ಕೊಡಗೂಸಿಯ ಹಾಲ ಸವಿದನನರಿಯ
ಎಂದು ಘರ್ಜಿಸಿ ರಾಮತಂದೆಗಳಖ್ಯಾದಲಿಸಿ
ಸಂದ ಭಕ್ತಂಗೆ ಸವಣ ನುಡಿದನಗ್ಗಲಿಸಿ

ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ
ಎಲೆ ಭಕ್ತ ಹಿಂದಾದ ಹಳೆಯ ಮಾತುಗಳೇಕೆ
ಇಂದೆಮ್ಮ ಮುಂದೆ ನಿನ್ನಯ ತಲೆಯನರಿದು ಪಡೆ
ಸಂದುದು ಬಳಿಕ್ಕ ನುಡಿಯಾವೆಲ್ಲರುಂ ನೋಡೆ
ಪಡೆಯಲ್ಜಿನಪ್ರತಿಮೆಗಳನೆತ್ತಿ ಬಿಸುಡುವೆವು
ನಡುವೆ ಶಿವಲಿಂಗಪ್ರತಿಷ್ಠೆಯಂ ಮಾಡುವೆವು
ಎನುತಿದನೋಡಂಬಟ್ಟೆವೆಂದು ಸವಣರ್ನುಡಿಯೆ
ತನಗಿಚ್ಚೆಯಂತಿರ್ದುದಂತವರದಂ ನುಡಿಯೆ

ಆ ರಾಮತಂದೆ ಪುಳುಕಿತನಾಗಿ ಹಿಗ್ಗುತುಂ
ಭೋರೆಂದು ಗುಡಿಗಟ್ಟಿ ಮತ್ತೆ ಮೈವೆಚ್ಚುತುಂ
ಇದು ಭಾಷೆ ಭಾಷೆ ಬರೆ ಬರೆ ಇದನೊಡಂಬಟ್ಟೆ
ಇದನಾರದೊಡೆ ಬಳಿಕ ಬಹುದೇ ಶಿವನ ಬಟ್ಟೆ
ಎಂದು ಭಾಷಾಪತ್ರಮಂ ಬರೆಯಿಸಿದನಂದು
ತಂದು ನೆರಪಿರೆ ನಿನ್ನ ಸವಣರನೆನುತ್ತಂದು

ಕರೆಯುವೇಳ್ದಂ ಜಗದೊಳುಳ್ಳ ಶಿವಭಕ್ತರಂ
ಬರುತಲಿರ್ದುದು ಹರನ ಗಣ ಸಮಿತಿಯೊತ್ತರಂ
ಅಗ್ಗಣಿಯ ಹೊನ್ನಿತಂದೆಗಳವರ್ಮುಂತಾಗಿ
ಅಗ್ಗಳೆಯ ದೇವರಸರವರ್ಗಳುಂ ಸಹಿತಾಗಿ
ದೆಸೆ ನೂರು ಗಾವುದದೊಳುಳ್ಳ ಶರಣರ ಮೊತ್ತ
ಎಸೆಯೆ ನೆರೆದುದು ಲಕ್ಕಲೆಕ್ಕದಿಂದತ್ತತ್ತ
ರಜತಗಿರಿ ಜಯಿಸಿ ಭಕ್ತರ ರೂಪುಗೊಂಡಂತೆ
ನಿಜಭಸಿತಕಾಂತಿಯುಂ ಚಂದ್ರಿಕೆಯೊಳಳ್ದಂತೆ
ಮುಕುಟದ ಮಹಾಮಹಿಮರಪ್ರತಿಮರಲ್ಲಲ್ಲಿ
ಅಕಳಂಕಚರಿತರನುಪಮಕೃಪಾಕರರಲ್ಲಿ
ಒಪ್ಪುವ ಕರಸ್ಥಲ ಉರಸ್ಥಲದಚಲರಲ್ಲಿ
ನಿಪ್ಪಸರದಚ್ಚ ಶಿವಲಿಂಗಪ್ರತಿಗಳಲ್ಲಿ
ಪಂಚಾಕ್ಷರಿಯೆ ರೂಪುಗೊಂಡಂದದಿಂ ಕೆಲರು
ಪಂಚಭೌತಿಕವಿಲ್ಲದೊಡಲೊಳಿರ್ಪರ್ಕೆಲರು
ಶಾಂತರುಗ್ರರು ಸತ್ಯರನುಪಮತ್ಯಾಗಿಗಳು
ಸಂತೋಷಿಗಳ್ಸುಖಿಗಳಸಮಶಿವಯೋಗಿಗಳು
ನೀಡಿ ನೆಗಪಿದ ಕೋಟಿವೃಷಭಧ್ವಜದ ನಡುವೆ
ಕೂಡೆ ಕೇಳಿಸುವ ಶರಣರ ಸಂದಣಿಯ ನಡುವೆ
ಗಿರುಘುಟಿಯ ಮದ್ದಳೆಯ ಕರಡೆಗಳ ಧ್ವನಿಯೊಳಗೆ
ತುರುಗಿದವುಜೆ ತಾಳ ಕವುಸಾಳದ ರವದೊಳಗೆ
ಕೊಂಬುಗಳ ಚಿರುಲುಗಳ ಕಹಳೆಗಳ ಧ್ವನಿಯೊಳಗೆ
ಬೊಂಬುಳಿಯ ಕಿನ್ನರಿಯ ಶಂಖಧ್ವನಿಗಳೊಳಗೆ
ಅರರೆ ನಡೆತಪ್ಪ ಸಿಂಹದ ಜಂಗುಳಿಗಳಂತೆ
ಉರವಣಿಸಿ ಘುಳುಘುಳಿಪ ಶರಭನ ನೆರವಿಯಂತೆ
ಮೊಳಗಿ ಮಿಂಚುತೆ ಬರ್ಪ ಸಿಡಿಲಬಳಗದ ತೆರದಿ
ತೊಳಗುತ್ತೆ ಬೆಳಗುತ್ತೆ ಬರ್ಪ ಕವಿಗಳ ತೆರದಿ
ಬಂದು ನೆರೆದುದು ಭೂಮಿಯಗಲಕ್ಕೆ ಹರಗಣಂ
ನಿಂದುಘೇ ಚಾಂಗು ಬೊಲ್ಲೆನುತಿರೆ ಶಿವನ ಗಣಂ
ಇಂತು ನೆರೆದಿರ್ದುದೊಂದೆಸೆಯೊಳಭವನ ಗಣಂ

ಮುಂತೆ ಮತ್ತೊಂದೆಸೆಗೆ ಸಾರ್ದು ಜೈನರ ಗಣಂ
ನೆರೆದು ಬರುತಿರ್ದುದು ಜಿನವ್ರತಿಗಳಲ್ಲಲ್ಲಿ
ಹರಿದು ಸಡಗರಿಸಿ ಸಾಲ್ವಿಡಿದು ಬರುತಲ್ಲಲ್ಲಿ
ಕೆಯ್ಯಗುಂಡಿಗೆ ನೋಟ ಕುಂಚದ ಹರಿದ ತಟ್ಟು
ಮೆಯ್ಯಗೇಣುದ್ದದ ಮಲಂ ಹರಿದ ತಲೆಕಟ್ಟು
ಮಿಂಚುವಲೆ ಹಡಿಕೆವಾಯಿ ಹಗೆ ಹಲ್ಲುಗಳ ಮೊರೆ
ಸಂಚಿಸಿದ ಹಲವು ಮಲವೆತ್ತು ಹೊಲಸು ನಾರೆ
ಕುರುಡರುಂ ಕುಂಟರುಂ ಡಂಭರುಂ ಸೀತರುಂ
ಬರಡರುಂ ನಿಃಕರಡರುಂ ನಿಜದ ಹುಸಿಕರುಂ
ಕ್ಷುದ್ರರುಂ ವಾಚಾಳರುಂ ಕೆಟ್ಟ ಸವಣರುಂ
ನಿದ್ರೆಯಿಂದೆದ್ದು ಬಂದಂತಿಪ್ಪ ಜಾಡ್ಯರುಂ
ಬತ್ತಲೆಗರುಂ ಬಡಕರುಂ ವೀತರಾಗರುಂ
ಕತ್ತಲಿಪ ಮುಖದ ಭಾಗ್ಯದ ಭೋಗಹೀನರುಂ
ಮುತ್ತ ಮುದುನರಿಯಂತೆ ಬಳ್ಳುಗರೆವರ್ಕೆಲರು
ಕತ್ತೆಯಂತರಿಚಿಕಾಳ್ಗಿಡೆವುತಿರ್ಪರ್ಕೆಲರು
ಗೂಗೆಯಂತಿರೆ ಮಿಗೆ ಪಲುಂಬುತಿರ್ಪರ್ಕೆಲರು
ಕಾಗೆಯಂತಿರೆ ಕಾಕುಗೆಡೆಯುತಿರ್ಪರ್ಕೆಲರು
ಉಮ್ಮಳಿಪ ಕಪಿಯಂತೆ ಸುಮ್ಮನಿರ್ಪರ್ಕೆಲರು
ತಮ್ಮೊಳಗೆ ತಾವು ಗುಜುಗುಜುಗುಟ್ಟುವರ್ಕೆಲರು
ವಾದದಿಂ ವಸಿಷ್ಠನಂ ಗೆಲಿವ ಪಂಡಿತರಲ್ಲಿ
ಸಾಧಿಸಿ ಸಕಲ ಮಂತ್ರ ಶಕ್ತಿಯಿಂದಂತಲ್ಲಿ
ವಾದವಶ್ಯಂ ಮೋಹನಸ್ತಂಭನವ ಬಲ್ಲ
ಭೇದಂಗಳಂ ದಂಡ ಸಾಮಂಗಳಂ ಬಲ್ಲ
ಪಂಡಿತರ್ಸವಣರುಂ ಜೈನರಾರ್ಹತರಲ್ಲಿ
ತಂಡತಂಡದ ಋಷಿಗಳೆಂಬ ಶ್ರಾವಕರಲ್ಲಿ
ಸವಣವಡೆಕೂಡೆ ನೆರೆದುದು ಗಣಂಗಳ ಮುಂತೆ
ರವಿಕಿರಣದುರವಣೆಗೆ ಸಾರ್ದ ಕಳ್ತಲೆಯಂತೆ
ದಾವಾನಲಂ ನೋಡಿ ನೆರೆದ ಕರಿಗೆಲೆಯಂತೆ
ಭಾವಿಸೆ ಮಹಾನಿಲಂಗೊಂಡಿರ್ದ ಮುಗಿಲಂತೆ
ಇಂತು ನೆರೆದಿರ್ದುದಾಶೇಷಶ್ರವಣರಲ್ಲಿ

R. N. B. 2554.

# ಶಿವಾನುಭವ.



ಸಂಪುಟ ೧೦.] ಅಗಸ್ಟ ೧೯೩೫. [ಸಂಚಿಕೆ ೨.

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇವರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು.

ಮತ್ತು ಅವರು ವಿಜಾಪುರ ಉಪ್ಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

ವರ್ಷ ೧೦] ಅಗಸ್ಟ ಪ್ರಭುಗೀತೆ. [ಸಂಚಿಕೆ ೨

# ಶ್ರೀ ಪ್ರಭುದೇವರ ಕಾಲ.

ಲೇಖಕಃ— ಬುದ್ಧಯ್ಯಾಸ್ವಾಮಿ ಪುರಾಣಿಕ.

## ೧ ನೆಯ ಪ್ರಕರಣ.

ನನ್ನಂಥ ಮಂದಬುದ್ಧಿಯ ಮನುಷ್ಯನು ಶ್ರೀಮನ್ನಿರಂಜನ ಜಗದ್ಗುರುವಾಚಾಮಗೋಚರನಾದಂಥ ಆ ಅನಾದಿ ಜಂಗಮಲಿಂಗನ ಕಾಲ ನಿರ್ಣಯ ಮಾಡುವದೆಂದರೆ ಆಕಾಶಕ್ಕೆ ಗವಸಣಿಗೆ ಹಾಕಿದಂತೆ ಹಾಸ್ಯಾಸ್ಪದವೇ ಸರಿ; ಆದಾಗ್ಯೂ ಯಥಾಮತಿ ಪ್ರಯತ್ನಮಾಡುವದು ನನ್ನ ಆದ್ಯ ಕರ್ತವ್ಯವೆಂದು ತಿಳಿದು ಕೆಳಗಿನ ನಾಲ್ಕು ಪಂಕ್ತಿಗಳನ್ನು ವಾಚಕರ ಅವಗಾಹನಕ್ಕಾಗಿ ಇದರಡಿಯಲ್ಲಿ ಕೊಡುತ್ತೇವೆ. ಅನಾದಿ ವೀರಶೈವ ಸಾರಸಂಗ್ರಹ ನಾಮಕ ಗ್ರಂಥದ ೧೬ ನೆಯ ಪ್ರಕರಣದಲ್ಲಿ ವೇದಾಗಮೋಪನಿಷತ್ತುಗಳ ಆಧಾರದಿಂದ ಈ ಅನಾದಿ ಜಂಗಮಲಿಂಗನ ಮಹಾತ್ಮ್ಯವನ್ನು ವರ್ಣನಮಾಡಿರುವರು. ಅದನ್ನು ವಾಚಕರು ಓದಬೇಕೆಂದು ನಾವು ಅವರಿಗೆ ಬೇಡಿಕೊಳ್ಳುತ್ತೇವೆ. ಅಂದರೆ ವೇದಾಗಮೋಪನಿಷತ್ತುಗಳ ಕಾಲವು ಯಾವ ಕಾಲವೋ ಅದೇ ಕಾಲವು ಶ್ರೀ ಪ್ರಭುದೇವರೆಂದು ವಾಚಕರಗೆ ಸಹಜವಾಗಿ ಲಕ್ಷ್ಯದಲ್ಲಿ ಬರಬಹುದು. ಶ್ರೀಯುತ ವೀರಪ್ಪ ಬಸಪ್ಪ ಬಿಳೀಅಂಗಡಿ, ಬಿ. ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ ಇವರು ಬರೆದ "ವೀರಶೈವ ಮತಪ್ರಾಚೀನತ್ವ" ಯೆಂಬ ಪುಸ್ತಕದಲ್ಲಿ ಅವರು ವೀರಶೈವ ಮತದ ಕಾಲನಿರ್ಣಯವನ್ನು ನಿಗಮಾಗಮೋಪನಿಷತ್ತುಗಳ ಶಿಲಾಲೇಖಗಳ ಮತ್ತು ತಾಮ್ರಪಟ ಇತ್ಯಾದಿಗಳ ಸಹಾಯದಿಂದ ಸಾಧಾರಣ ಸಿದ್ಧಗೊಳಿಸಿರುವರು. ಆ ಸನಾತನ ವೈದಿಕ ವೀರಶೈವ ಮತದ ಸಂಸ್ಥಾಪಕರಾದ ಶ್ರೀ ಪಂಚಾಚಾರ್ಯರಿಗೆ "ಮದೂರ್ಧ್ವ ಮುಖಸಂಜಾತೋ ನಿರಂಜನ ಗಣೇಶ್ವರಃ। ಶೂನ್ಯಪೀಠಾಧಿಕಾರೀಚ ಪಂಚಾಚಾರ್ಯ ಗುರುರ್ವರಃ॥" ಅಂದರೆ ನನ್ನ ಊರ್ಧ್ವಮುಖದಿಂದ ಉತ್ಪನ್ನ

ನಾದಂಥ ನಿರಂಜನನೆಂಬ ಹೆಸರಿನ ಗಣಾಧ್ಯಕ್ಷನು ಶೂನ್ಯಪೀಠದ ಅಧಿ ಕಾರಿಯಾಗಿ [redacted] ಈ ಸಂಪ್ರ ಭೇದಾಗವ [redacted] ಪ್ರಭುದೇವರ ಕಾಲನಿ [redacted] ಯದ ಕೂಡ ಮಾಡಬೇಕಾಗುವದು.

ಮೈಸೂರಿನ ಆರ್ಕಿಯಾಲಾಜಿಕಲ್ ಡಾಯರೆಕ್ಟರ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವಬಹಾದ್ದೂರ ಆರ್. ನರಸಿಂಹಾಚಾರ್ಯ ಎಂ. ಎ. ಎಮ್. ಆರ್. ಎ. ಎಸ್. ಇವರು ತಮ್ಮ ಕರ್ನಾಟಕ ಕವಿಚರಿತೆಯ (೧೯೨೪ ರಲ್ಲಿ ತಿದ್ದಿದ ಮುದ್ರಣ) ಪ್ರಥಮ ಸಂಪುಟದ ೧೮೦ ನೆಯ ಪುಟದಲ್ಲಿ ಶ್ರೀ ಪ್ರಭುದೇವರ ಕಾಲನಿರ್ಣಯವನ್ನು ಕೆಳಗಿನಂತೆ ಮಾಡಿರುವರು. ಅದರಲ್ಲಿ "ಇಸ್ವಿ ಸನ್ ೧೧೬೦ ನೆಯ ಸುಮಾರಿನಲ್ಲಿ ಈತನು ಷಟ್ಸ್ಥಲ ಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯವಚನ, ಬೆಡಗಿನವಚನ, ಮಂತ್ರಮಹಾತ್ಮ್ಯ, ಕಾಲಜ್ಞಾನವಚನವೆಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ಅಲ್ಲಮ ಎಂಬ ಹೆಸರೂ ಉಂಟು; ಮಾಯಾಕೋಲಾಹಳ ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ. ಈತನ ವಿಷಯವಾಗಿ ಚನ್ನಬಸವಪುರಾಣ, ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಿಂದ ಈ ಅಂಶಗಳು ತಿಳಿಯು ಬರುತ್ತವೆ:— ಇವನು ವೀರಶೈವಕವಿ, ಈತನ ತಂದೆ ನಿರಹಂಕಾರ, ತಾಯಿ ಸುಜ್ಞಾನಿ, ಇವನ ಚಿತ್ತಸ್ಥೈರ್ಯವನ್ನು ಪರೀಕ್ಷಿಸುವದಕ್ಕಾಗಿ ಪಾರ್ವತೀ ದೇವಿ ತನ್ನ ತಾಮಸ ಗುಣವನ್ನು ಸ್ತ್ರೀರೂಪವಾಗಿ ಹುಟ್ಟುವಂತೆ ಅಟ್ಟಿದಳು. ಅದು ಬೆಳವಲನಾಡಿನ ಬನವಸೆಯ ರಾಜನಾದ ಮಮಕಾರನೃಪನ ಪತ್ನಿ ಮೋಹಿನಿದೇವಿಯ ಗರ್ಭದಲ್ಲಿ ಮಾಯೆ ಎಂಬ ಹೆಣ್ಣುಮಗಳಾಗಿ ಹುಟ್ಟಿತು. ಆ ಹೆಣ್ಣುಮಗಳು ಈತನನ್ನು ಮೋಹಗೊಳಿಸಲು ಯತ್ನಿಸಿದಾಗ ಈತನು ಅವಳನ್ನು ತಿರಸ್ಕರಿಸಿದನು. ಇವನು ಅನಿಮಿಷನ ಕೈಯ ಲಿಂಗವನ್ನು ಸ್ವೀಕರಿಸಿದನು. ಗೊಗ್ಗಯ್ಯ ಮುಕ್ತಾಯಿಗಳಿಗೆ ಬೋಧಿಸಿ ಮುಕ್ತಿಯನ್ನು ಕೊಟ್ಟನು. ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಶಿವ ತತ್ವವನ್ನು ತಿಳಿಸಿ ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯಪೀಠವನ್ನು ಹತ್ತಿದನು. ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಹಾದೇವಿಗೆ ನಿರ್ವಾಣಪದವಿಯನ್ನು ಉಪದೇಶಿಸಿ ಬಸವನಿಗಿಂತ ಸ್ವಲ್ಪ ಕಾಲ ಮುಂಚೆ ಕದಳಿಯಲ್ಲಿ ಬಯಲಾದನು. ಇವನು ವೀರಶೈವ ಗುರು

ಗಳಲ್ಲಿ ಬಹಳ ಪ್ರಖ್ಯಾತನು. ಶ್ರೀ ಮದ್ದೇಶಿಕ ಷಟ್ಸ್ಥಲ ಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾಕೋಳಾಹಳ ಎಂದು ಕೆಲವರು ವೀರಶೈವ ಗ್ರಂಥಕರ್ತರು ಈತನನ್ನು ವಿಶೇಷಿಸಿ ಬರೆದಿದ್ದಾರೆ. ಇವನ ವಿಷಯವಾಗಿ ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ಪ್ರಭುನಟನ ತಾರಾವಳಿ, ಪ್ರಭುಚರಿತ್ರೆ, ಪ್ರಭುಗೀತೆ ಮೊದಲಾದ ಗ್ರಂಥಗಳು ಹುಟ್ಟಿವೆ. ಈತನ ವಚನಗಳಲ್ಲಿ ಗುಹೇಶ್ವರ ಎಂಬ ಅಂಕಿತವು ದೊರೆಯುತ್ತದೆ. ಜ್ಯೋತಿರ್ನಿರ್ಣಯ ಶಾಂಭವೀ ಜ್ಞಾನದೀಕ್ಷಾ ಬೋಧೆ ನಾಮಕ ಗ್ರಂಥದಲ್ಲಿ ವೀರಶೈವ ಮತವು ಈಶ್ವರ ಪ್ರೋಕ್ತವು. ಅದನ್ನು ಶ್ರೀ ಅಲ್ಲಮ ಪ್ರಭುದೇವನು ಕಲ್ಯಾಣಪಟ್ಟಣದಲ್ಲಿ ಶ್ರೀ ಬಸವಾದಿ ಪ್ರಮಥಗಣಂಗಳಿಗೆ ಎರಡೆಂಭತ್ತುಕೋಟಿ ವಚನಗಳಿಂದ ಉಪದೇಶಿಸಿದನು ಎಂದು ಹೇಳಿದೆ" ಎಂದು ಬರೆದಿರುವರು. ಶ್ರೀ ಪ್ರಭುದೇವರು ಐಕ್ಯವಾದನಂತರ ಅವರ ವಿಷಯವಾಗಿ ಹಿಂದಿನಿಂದ ಅನೇಕ ಗ್ರಂಥಗಳು ನಿರ್ಮಾಣವಾಗಿರುವವು. ಅವುಗಳಲ್ಲಿ ಕೆಲವು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಲ್ಪಟ್ಟಿರುವವು. ಹೀಗಿರಲು ಅವುಗಳನ್ನು ವಿಚಾರಿಸದೆ ಕರ್ನಾಟಕ ಕವಿಚರಿತೆಕಾರರು ಶ್ರೀ ಪ್ರಭುದೇವರ ಕಾಲವನ್ನು ಸುಮಾರು ಇಸ್ವಿ ಸನ್ ೧೧೬೦ ಎಂದು ನಿರ್ಣಯಿಸಿರುವರು. ಆದುದರಿಂದ ಅದನ್ನೇ ಇದರಡಿಯಲ್ಲಿ ವಿಶೇಷ ಸ್ಪಷ್ಟೀಕರಿಸುತ್ತೇವೆ. ಮೇಲೆ ಕಾಣಿಸಿದಂತೆ ಅನೇಕ ಪ್ರಾಚೀನ ಮತ್ತು ಅರ್ವಾಚೀನ ವೀರಶೈವ ಗ್ರಂಥಕರ್ತರು ಶ್ರೀ ಪ್ರಭುವನ್ನು ವಿಶೇಷಿಸಿ ಬರೆದವರಲ್ಲಿ ಕೆಲವರು ಸ್ತುತಿಸಿದ ಸ್ತೋತ್ರಗಳಲ್ಲಿ ಒಂದೊಂದೇ ಶ್ಲೋಕವನ್ನು ಮಾದರಿಗಾಗಿ ತೆಗೆದುಕೊಂಡು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ಎರಡನೆಯ ಪುಷ್ಪವಾದ ಶ್ರೀ ಪ್ರಭುದೇವರ ಸ್ತೋತ್ರಸಂಗ್ರಹದಲ್ಲಿ ಮುದ್ರಿಸಲಾಗಿದೆ. ಅವುಗಳೊಳಗಿನ ಕೆಲವು ವೀರಶೈವ ಗ್ರಂಥಕರ್ತೃಗಳ ಹೆಸರುಗಳನ್ನು ವಾಚಕರ ಸೌಕರ್ಯಕ್ಕಾಗಿ ಕೆಳಗೆ ಕೊಡುವೆವು.

ಕ್ರಿ. ಶ. ೧೬೦೬ ನೇಯ ಸುಮಾರಿನಲ್ಲಿ ವೃಷಭ ಪುರದ ಆಗಮಜ್ಞ ನಿಸಿದ್ಧವೀರನೆಂಬ ತನ್ನ ಗುರುವಿನ ಆಜ್ಞಾನುಸಾರವಾಗಿ ಎಳಂದೂರ ಸಿಂಹಾಸನಾಧೀಶ ಹರೀಶ್ವರನು (ಹರಿದೇವ) ಶ್ರೀ ಪ್ರಭುದೇವರ ಪುರಾಣವನ್ನು ನಾನಾ ಷಟ್ಪದಿಯಲ್ಲಿ ಬರೆದಿದ್ದಾನೆ. ಇದರಲ್ಲಿ ಸಂಧಿಗಳು ೯, ಪದಗಳು ೧೪೯೭ ಇದ್ದು ಇದರಲ್ಲಿ ಶಬ್ದವೈಚಿತ್ರ್ಯವು ಬಹಳೀ ಇದ್ದುದರಿಂದ ಈ

ಗ್ರಂಥಕ್ಕೆ ಪ್ರಾಸರತ್ನಾಕರವೆಂದು ಅನ್ನುವರು. ಇದರಲ್ಲಿ ಅಲ್ಲಮಪ್ರಭು ದೇವನ ಸಂಪೂರ್ಣ ಚರಿತ್ರೆ ಹೇಳಲ್ಪಟ್ಟಿದೆ.

ಕ್ರಿ. ಶ. ೧೫೮೪ ರಲ್ಲಿ ಮಳೆಯ ಮಲ್ಲೇಶನ ಶಿಷ್ಯನಾದ ವಿರೂಪಾಕ್ಷ ಪಂಡಿತನು ತನ್ನ ಚೆನ್ನಬಸವ ಪುರಾಣದಲ್ಲಿಯೂ, ಕ್ರಿ ಶ. ೧೫೮೦ ರ ಸುಮಾರಿನಲ್ಲಿ ಕೋಲ್ಹಾರದ ಅದೃಶ್ಯಕವಿಯು ತನ್ನ ಪ್ರೌಢದೇವರಾಯನ ಕಾವ್ಯದಲ್ಲಿಯೂ ಶ್ರೀ ಪ್ರಭುವನ್ನು ಕೊಂಡಾಡಿರುವರು.

ಕ್ರಿ. ಶ. ೧೫೫೦ ರ ಸುಮಾರಕ್ಕೆ ಪ್ರಸನ್ನ ದೇಶಿಕನ ಕುಮಾರ ಮರಿ ರಾಚವಟ್ಟೇಶ ನೆಂಬವನು ಪ್ರಭುನಟನ ತಾರಾವಳಿ ನಾಮಕ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ೨೭ ಪದಗಳಿದ್ದು ಅವುಗಳಲ್ಲಿ ಶ್ರೀ ಪ್ರಭುವಿನ ಸಂಪೂರ್ಣ ಚರಿತ್ರವನ್ನು ಹೇಳಿದೆ.

ಕ್ರಿ. ಶ. ೧೫೭೩ ನೆಯ ಸುಮಾರಿನಲ್ಲಿ ಭಾವಚಿಂತಾರತ್ನ, ವೀರಶೈವಾಮೃತ ಪುರಾಣ, ಪುರಾತನ ರಗಳೆ ಇತ್ಯಾದಿ ಉದ್ಗ್ರಂಥಗಳನ್ನು ಬರೆದ ಗುಬ್ಬಿ ಮಲ್ಲಣಾರ್ಯನೂ, ಕ್ರಿ. ಶ. ೧೫೦೦ ಸುಮಾರಿನಲ್ಲಿ ೬೩ ಪುರಾತನರ ಚರಿತ್ರೆಯನ್ನು ಬರೆದ ಪುಲಿಗೇರಿಯ ಸುರಂಗ ಕವಿಯೂ, ಕ್ರಿ. ಶ. ೧೪೭೦ ರಲ್ಲಿದ್ದ ತೋಂಟದ ಶ್ರೀ ಸಿದ್ಧೇಶ್ವರನೂ ಹಾಗು ಕರ್ನಾಟಕ ಕವಿ ಚರಿತಕಾರರ ಅಭಿಪ್ರಾಯದಂತೆ. ಕ್ರಿ. ಶ. ೧೪೩೦ ನಯ ಸುಮಾರಕ್ಕೆ ಆಗಿಹೋದ ಮತ್ತು ಅನುಭವಸೂತ್ರ, ಪ್ರಭುಗೀತೆ, ಏಕೋತ್ತರಷಟ್ಸ್ಥಲ ಷಟ್ಪದಿ, ಷಟ್ಸ್ಥಲ ಗದ್ಯ, ಶತಕತ್ರಯ ಇತ್ಯಾದಿ ಗ್ರಂಥಗಳನ್ನು ಬರೆದು ಪ್ರಸಿದ್ಧಿಯನ್ನು ಪಡೆದ ಮಗ್ಗೆಯಮಾಯಿದೇವಾಚಾರ್ಯನೂ ಶ್ರೀ ಪ್ರಭುವನ್ನು ಕೊಂಡಾಡಿರುವರು.

ಕ್ರಿ. ಶ. ೧೪೩೦ ರ ಸುಮಾರಿನಲ್ಲಿ ವಿದ್ಯಾನಗರದೊಳಗಿನ ೧೦೧ ವಿರಕ್ತರೊಳಗಿನ ಕಲ್ಮಠದ ಪ್ರಭುದೇವನೆಂಬವನು ಶ್ರೀ ಪ್ರಭುದೇವರ ಮಂತ್ರ ಗೋಪ್ಯದ ಮೇಲೆ ಟೀಕೆಯನ್ನು ಬರೆದಿರುವನು. ಅದೇ ಸುಮಾರಿನಲ್ಲಿ ಚಾಮರಸನೆಂಬವನು ಪ್ರಭುಲಿಂಗ ಲೀಲೆಯೆಂಬ ಗ್ರಂಥವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿರುವನು. ಇದರಲ್ಲಿ ೧೧೧೧ ಪದ್ಯಗಳಿದ್ದು ಪ್ರಭುವಿನ ಸಂಪೂರ್ಣ ಚರಿತ್ರವು ಹೇಳಲ್ಪಟ್ಟಿದೆ.

ಕ್ರಿ ಶ. ೧೪೩೦ ರ ಸುಮಾರಕ್ಕೆ ಕುಮಾರ ಬಂಕನಾಥನೆಂಬವನು ಶ್ರೀ ಪ್ರಭುದೇವರ ವಚನಗಳ ಮೇಲೆ ಟೀಕೆಯನ್ನು ಬರೆದಿರುವನು.

ಆದೇ ಕಾಲಕ್ಕೆ ಚೆನ್ನ ಶ್ರೀಪ್ರಭು, ಮಗಿಯನರೇಂದ್ರ ಮತ್ತು ಗುರುಬಸವ ಎಂಬವರು ಪ್ರತಿಯೊಬ್ಬರು ೧೧೦೦ ಪದ್ಯಗಳಿಂದ ಶ್ರೀ ಪ್ರಭುವನ್ನು ಕೊಂಡಾಡಿರುವರು. ಅವುಗಳೊಳಗೆ ಸಿಕ್ಕಷ್ಟು ಕೆಲವು ಪದ್ಯಗಳನ್ನು ಶ್ರೀ ಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ, ೪ ನೆಯ, ೯ ನೆಯ, ಮತ್ತು ೧೧ ನೆಯ, ಪುಷ್ಪಗಳಲ್ಲಿ ಹೇಳಿದೆ.

ಈ ಕುಮಾರ ಬಂಕನಾಥನ ಗುರುವಾದ ಮಹಲಿಂಗದೇವ (ವಾರಾಣಸೀಂದ್ರ) ನು ಕ್ರಿ. ಶ. ೧೪೨೫ ನೆಯ ಸುಮಾರಿನಲ್ಲಿ ಪ್ರಭುದೇವರ ಷಟ್‌ಸ್ಥಲ ಜ್ಞಾನಚಾರಿತ್ರೆ ಎಂಬ ಟೀಕಾತ್ಮಕ ಗ್ರಂಥವನ್ನು ಜಕ್ಕಣಾಮಾತ್ಯನ ಪ್ರಾರ್ಥನಾನುಸಾರವಾಗಿ ಬರೆದಿರುವೆನು.

ಕ್ರಿ. ಶ. ೧೪೦೦ ಸುಮಾರಿನಲ್ಲಿ ನೀಲಕಂಠ ಶಿವಾಚಾರ್ಯನು ತನ್ನ ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ ಕ್ರಿಯಾಸಾರವೆಂಬ ಗ್ರಂಥದಲ್ಲಿ ಶ್ರೀ ಪ್ರಭುವನ್ನು ಸ್ತುತಿಸಿರುವನು.

ಕ್ರಿ. ಶ. ೧೩೬೯ ನೆಯ ಸುಮಾರಿನಲ್ಲಿ ಉಭಯಕವಿತ್ವ ಸಮರ್ಥ ಭೀಮಕವಿಯು ತನ್ನ ಬಸವ ಪುರಾಣದಲ್ಲಿಯೂ ಮತ್ತು ಕ್ರಿ. ಶ. ೧೩೨೫ ನೆಯ ಸುಮಾರಿನಲ್ಲಿ ಜಟಾಶಂಕರ ದೇವನೆಂಬವನು ಶ್ರೀ ಪ್ರಭುದೇವರ ತ್ರಿವಿಧಿನಾಯಕ ಗ್ರಂಥದಿಂದಲೂ ಶ್ರೀ ಪ್ರಭುವನ್ನು ಕೊಂಡಾಡಿರುವರು.

ಕ್ರಿ. ಶ. ೧೨೨೨ ನೆಯ ಸುಮಾರಿನಲ್ಲಿ ಸೋಮರಾಜನೆಂಬ ಕವಿಯು ತನ್ನ ಶೃಂಗಾರಸಾರ ಅಥವಾ ಉದ್ಭಟ ಕಾವ್ಯದಲ್ಲಿ ಶ್ರೀ ಅಲ್ಲಮಪ್ರಭುವನ್ನು ಕೊಂಡಾಡಿ ಗುರು ಅಲ್ಲಮನ ಕೃಪೆಯಿಂದ ಈ ಕಾವ್ಯವನ್ನು ರಚಿಸಿದೆನೆಂದೂ ಮತ್ತು ಅಲ್ಲಮ ನಾಮ ಸ್ಮರಣೆಯನ್ನು ಒಂದೊಂದು ನಿಮಿತ್ತವಾಗಿ ಮಾಡಬೇಕೆಂತಲೂ ಹೇಳಿ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿ ಅಲ್ಲಮಪ್ರಿಯನೆಂದು ಈಶ್ವರನನ್ನು ಸ್ತುತಿಸಿರುವನು.

ಕ್ರಿ. ಶ. ೧೧೯೫ ರ ಸುಮಾರಿನಲ್ಲಿ ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಶಿಷ್ಯನಾದ ಸಂಗಯ್ಯನಿಗೋಸುಗ ಜ್ಯೋತಿರ್ಮಯ ಶಾಂಭವೀಜ್ಞಾನದೀಕ್ಷಾ ಬೋಧೆನಾಮಕ ಗ್ರಂಥದ ಪರಮ ರಹಸ್ಯವನ್ನು ೧೬೦ ವಚನಗಳಲ್ಲಿ ಅಡಕಮಾಡಿ ಹೇಳಿರುವನು. ಆ ಜ್ಯೋತೀರ್ಮಯ ಶಾಂಭವೀಜ್ಞಾನದೀಕ್ಷಾಭೋದೆಯಲ್ಲಿ "ಶ್ರೀ ಪ್ರಭುದೇವನು ಕಲ್ಯಾಣಪಟ್ಟಣದೊಳಗೆ ಶ್ರೀ ಬಸವಾದಿ ಪ್ರಮಥಗಣಂಗಳಿಗೆ ಎರಡೆಂಭತ್ತು ಕೋಟಿ ವಚನಗಳಿಂದ ವೀರಶೈವೋಪದೇಶವನ್ನು ಮಾಡಿದ" ನೆಂದು ಹೇಳಿದೆ.

ಕ್ರಿ. ಶ. ೧೧೬೦ ನೆಯ ಸುಮಾರಿನಲ್ಲಿ ಇದ್ದಂಥ ಮರುಳಶಂಕರ ದೇವನಿಗೆ ಪ್ರಭುದೇವನು ನಿರ್ವಾಣಪ್ರಾಪ್ತಿಯ ಮಾರ್ಗವನ್ನು ಹೇಳಿ ಮುಕ್ತಮಾಡಿದನೆಂದು ಪ್ರಭುಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ, ಪಾಲ್ಕುರಿಕೆ ಸೋಮಾರಾಧ್ಯನ ಗಣಸಹಸ್ರ ನಾಮದಲ್ಲಿ ಹೇಳಲ್ಪಟ್ಟ ಅಜ ಗಣ್ಣನು ಶ್ರೀ ಪ್ರಭುವಿನಿಂದ ಹೊಗಳಲ್ಪಟ್ಟನೆಂದೂ, ಅಜಗಣ್ಣನ ತಂಗಿ ಯಾದ ಮುಕ್ತಾಯಕ್ಕನನ್ನು ಉದ್ಧಾರ ಮಾಡಿದ ವಿವರವನ್ನು ಪ್ರಭು ಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ, ಹಾಗು ಉಭಯಕವಿಶರಭಭೇ ರುಂಡ, ಉಭಯಕವಿ ಕಮಲರವಿ ಅದಟಕವಿನಿಕರಚೌದಂತ ಮುಂತಾದ ಬಿರುದುಗಳನ್ನು ಧಾರಣಮಾಡಿದಂಥ ರಾಘವಾಂಕನು ಯಾವ ಸಿದ್ಧರಾ ಮೇಶ್ವರ ಪುರಾಣವನ್ನು ಬರೆದಿರುವನೋ, ಅಂಥ ಸಿದ್ಧರಾಮನ ಉದ್ಧಾ ರವನ್ನು ಮಾಡಿದನೆಂದೂ ಪ್ರಭುಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ ಕ್ರಿ. ಶ. ೧೧೬೦ ನೆಯ ಸುಮಾರಿನಲ್ಲಿ ಶ್ರೀ ಪ್ರಭುದೇವನು ಇದ್ದಿರಬಹು ದೆಂದು ಕರ್ನಾಟಕ ಕವಿಚರಿತ್ರೆಕಾರರ ಅಭಿಪ್ರಾಯವದೆ. ಕ್ರಿ. ಶ. ೧೧೫೬- ೬೭ ವರೆಗೆ ಬಿಜ್ಜಳನು ಕಲ್ಯಾಣ (ನಿಜಾಮು ಇಲಾಖಾ) ನಗರದಲ್ಲಿ ಸಾರ್ವ ಭೌಮರಾಜನಿದ್ದನು. ಆ ಕಾಲಕ್ಕೆ ಶ್ರೀ ಬಸವೇಶ್ವರನು ಆತನ ಮುಖ್ಯ ಮಂತ್ರಿಯಾಗಿದ್ದನು. ಆ ಕಾಲಕ್ಕೆ ಬಸವೇಶ್ವನು ಸುಮಾರು ೩೧-೩೨ ವರುಷದವನಿರಬಹುದು. ಯಾಕಂದರೆ ಅವನು ಕ್ರಿ. ಶ. ೧೧೩೪ ನೆಯ ಸುಮಾರಿನಲ್ಲಿ ಜನ್ಮ ತಾಳಿರುವನು. ಶ್ರೀ ಪ್ರಭುದೇವನು ಬಸವೇಶ್ವರನ ಕಾಲಕ್ಕೆ ಕಲ್ಯಾಣನಗರಕ್ಕೆ ಹೋದದ್ದು ಇತಿಹಾಸ ಪ್ರಸಿದ್ಧವದೆ. ಇಷ್ಟರ ಮೇಲಿಂದಲೇ ಶ್ರೀ ಪ್ರಭುದೇವನ ಕಾಲವು ಸುಮಾರು ಕ್ರಿ. ಶ. ೧೧೬೦ ಇರಬಹುದೆಂದು ಊಹಿಸುವದು ಸಮಂಜಸವೆನಿಸಲಾರದು. ಯಾಕಂದರೆ ಕಲ್ಯಾಣನಗರದಲ್ಲಿ ಬಸವೇಶನನ್ನು ಪ್ರಭುದೇವನು ಕಂಡ ವೇಳೆಯಲ್ಲಿ ಪ್ರಭುದೇವನೇನು ಚಿಕ್ಕವನೋ, ಬಸವೇಶನ ಸಮವಯಸ್ಕನೋ, ಅಥವಾ ಅವನಿಗಿಂತ ತರುಣನೋ, ಇಲ್ಲವೆ ಹಿರಿಯನೋ, ಇದನ್ನು ತಿಳಿಯಲು ಏನೂ ಮಾರ್ಗವಿಲ್ಲವು. ಮತ್ತು ಅದನ್ನು ಈ ವರೆಗೂ ಯಾವ ಇತಿಹಾ ಸಕಾರರೂ ಸಂಶೋಧಿಸಿ ಸಿದ್ಧಪಡಿಸಿಲ್ಲವು. ಬಸವನಗಿಂತಲು ಸುಮಾರು ೧೨೫ ವರುಷದ ಪೂರ್ವದಲ್ಲಿ ಶ್ರೀ ಪ್ರಭುದೇವನು ಇದ್ದನೆಂಬ ಬಗ್ಗೆ ಆಧುನಿಕ ಎಷ್ಟೋ ಕಾಗದ ಪತ್ರಗಳು ಸಿಗುತ್ತವೆ. ಅವು ಯಾವವೆಂದರೆ ಡಾಕ್ಟರ ಕೇತಕರ ಇವರು ತಮ್ಮ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೧೦-೧೧, (ಶ) ಅಕ್ಷರ, ಪುಟ ೨೯೪ ರಲ್ಲಿ " ಶ್ರೀ ಬಸವ ಇವನು ಲಿಂಗಾ

ಯುತ ಮತದ ಸಂಸ್ಥಾಪಕನಿರದೆ ಆ ಧರ್ಮದ ಸುಧಾರಕನೂ ಮತ್ತು ಪ್ರಸಾರಕನೂ ಇದ್ದನೆಂದು ಅಂದಿರುವರು. ಅದರಂತೆ ಅದೇ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೨೦ (ಶ) ಅಕ್ಷರ, ಪುಟ ೯೬ ರಲ್ಲಿ "೯-೧೦ ಶತಮಾನದಲ್ಲಿ ಕಾಶ್ಮೀರದೊಳಗೆ ಎರಡು ಶೈವ ಪಂಥಗಳು ಉದಯವಾದವು. ಅದರಂತೆ ೧೧ ನೆಯ ಶತಮಾನದಲ್ಲಿ ಕರ್ನಾಟಕ ಪ್ರಾಂತದೊಳಗೆ ವೀರಶೈವ ಅಥವಾ ಲಿಂಗಾಯತ ಪಂಥವು ಉದಯವಾಯಿತು. ಬಸವನು ವೀರಶೈವ ಪಂಥದ ಪ್ರವೃತ್ತಕನೆಂಬ ತಿಳವಳಿಕೆಯು ಇದ್ದರೂ ಬಸವನಿಗಿಂತಲೂ ಪೂರ್ವದಲ್ಲಿ ಈ ಪಂಥವು ಅಸ್ತಿತ್ವದಲ್ಲಿದ್ದು ಆ ಪಂಥವನ್ನು ಬಸವನು ಊರ್ಜಿತಾವಸ್ಥೆಗೆ ತಂದನೆಂದು ಇತ್ತೀಚೆಯ ಶೋಧಗಳ ಮೇಲಿಂದ ಸಿದ್ಧವಾಗಿದೆ" ಎಂದು ಅಂದಿದೆ. ಇದರ ಮೇಲಿಂದ ನೋಡಲಾಗಿ ಶ್ರೀ ಬಸವನಿಗಿಂತಲು ಪೂರ್ವದಲ್ಲಿ ಅನೇಕ ಶಿವಶರಣರು ಆಗಿಹೋದದ್ದು ನಿಜವೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಇವರೊಳಗಿನವನೊಬ್ಬನಾದ ಸಕಲೇಶ ಮಾದರಸನು ಕ್ರಿ. ಶ. ೧೧೫೦ ರ ಸುಮಾರಕ್ಕೆ ಆಗಿಹೋದನು. ಇವನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿಯು. ಪದ್ಮಣಾಂಕನು (ಸು. ೧೩೮೫) ಪದ್ಮರಾಜ ಪುರಾಣದಿಂದ ಇವನ ವಿಷಯವಾಗಿ ಈ ಅಂಶಗಳು ತಿಳಿಯುತ್ತವೆ. ಈತನ ತಂದೆಯಾದ ಮಲ್ಲರಸನು ಕಲ್ಲಕುರಿಕೆಯಲ್ಲಿ ದೊರೆಯಾಗಿದ್ದು ವಿರಕ್ತನಾಗಿ ಶ್ರೀ ಶೈಲಕ್ಕೆ ಹೋದನು. ಇವನು ಕೆಲವುಕಾಲ ಅಲ್ಲಿ ಆಳುತ್ತಿದ್ದು ವಿರಕ್ತಿ ಹುಟ್ಟಿ ಅಂಬೆಯಮಾರ್ಗವಾಗಿ ಶ್ರೀ ಶೈಲಕ್ಕೆ ಹೋಗಿ ತಂದೆಯನ್ನು ಕಾಣಲು ಅವನು— ನೀನು ಕಲ್ಯಾಣದಲ್ಲಿ ಧರ್ಮ ಸ್ಥಾಪನೆಗಾಗಿ ಹುಟ್ಟುವ ಬಸವನೊಡನೆ ಕಾಲವನ್ನು ಕಳೆಯಬೇಕು— ಎಂದು ಹೇಳಿ ಹಿಂದಕ್ಕೆ ಕಳುಹಿಸಿದನು. ಇವನ ಮಗ ಮಾಯಿದೇವ, ಮೊಮ್ಮಗ ಕೆರೆಯಪದ್ಮರಸ. ಇದರಿಂದ ಇವನು ಬಸವನಿಗಿಂತ ಕೆಲವು ಕಾಲ ಹಿಂದೆ ಇದ್ದವನೆಂದೂ ಕೆರೆಯಪದ್ಮರಸನ ಪಿತಾಮಹನೆಂದೂ ತಿಳಿಯುತ್ತದೆ. ಆದುದರಿಂದ ಇವನ ಕಾಲವು ಸುಮಾರು ಕ್ರಿ ಶ. ೧೧೫೦ ಆಗಿರಬಹುದೆಂದು ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೧೬೭ ನೆಯ ಪುಟದಲ್ಲಿ ಹೇಳಿರುವರು. ಶ್ರೀ ಪ್ರಭುದೇವನು ಮಹಾದೇವಿಯಕ್ಕನಿಗೆ ನಿರ್ವಾಣಪ್ರಾಪ್ತಿಯ ಮಾರ್ಗವನ್ನು ಬೋಧಿಸಲು ಕದಳೀ ಬನಕ್ಕೆ ಹೋಗುವ ದಾರಿಯಲ್ಲಿ ಶ್ರೀ ಶೈಲದಲ್ಲಿ ಈ ಸಕಲೇಶ ಮಾದರಸನನ್ನು ಉದ್ಧಾರ ಮಾಡಿದ್ದು ಪುರಾಣ ಪ್ರಸಿದ್ಧವದೆ. ಇದರ ಮೇಲಿಂದ ನೋಡಲಾಗಿ

ಶ್ರೀ ಪ್ರಭುದೇವನ ಕಾಲವು ಕ್ರಿ. ಶ, ೧೧೫೦ ರಕ್ಕಿಂತಲೂ ಹಿಂದೆ ಹೋಗುತ್ತದೆ. ಅದರಂತೆ ಶ್ರೀ ಸಿದ್ಧರಾಮನ ಕಾಲವಾದರೂ ಕ್ರಿ. ಶ. ೧೧೬೦ ರಕ್ಕಿಂತಲೂ ಹಿಂದೆ ಹೋಗುವದು. ಇದೂ ಅಲ್ಲದೆ ಈ ಸಿದ್ಧರಾಮನು ವಿದ್ಯಾಸಮುದ್ರನೆಂಬ ಬಿರುದನ್ನು ಪಡೆದಂಥ ಕರ್ಪರನೆಂಬ ಹೆಸರಿನ ಜೋಗಿಯನ್ನು ವಾದದಲ್ಲಿ ಗೆದ್ದಿರುವನು. ಕ್ರಿ. ಶ. ೧೦೮೪ ರೊಳಗಿನ ಕರ್ಪರಸೆನೇ ಇವನಿರಬಹುದು, (*Ind Ant XIII 91*) ಎಂದರೆ ಕ್ರಿ. ಶ. ೧೦೮೪ ರ ಸುಮಾರಿನಲ್ಲಿ ಈ ಸಿದ್ಧರಾಮನು ಪ್ರೌಢನೂ ಮತ್ತು ಬಹಳ ವಿದ್ವಾನನೂ ಇದ್ದಿರಬಹುದು. ಆದುದರಿಂದ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೦೮೪ ರಕ್ಕಿಂತಲೂ ಹಿಂದೆ ಹೋಗುತ್ತದೆ.

ಶ್ರೀ ರೇವಣ ಸಿದ್ಧೇಶ್ವರನು ಸಿದ್ಧರಾಮನ ತಾಯಿಯಾದ ಸುಗ್ಗಲ ದೇವಿಗೆ, ಸಿದ್ಧರಾಮನ ಜನನದ ವಿಷಯವಾಗಿ ಮುಂಚಿತವಾಗಿಯೇ ಸೂಚಿಸಿದ್ದನೆಂದು ವೀರಶೈವ ಗ್ರಂಥಗಳ ಮೇಲಿಂದ ತಿಳಿದು ಬರುತ್ತದೆ. ಆದುದರಿಂದ ಈ ರೇವಣಸಿದ್ಧೇಶ್ವರನ ಕಾಲವಾದರೂ ಸುಮಾರು ಕ್ರಿ. ಶ. ೧೦೬೦ ರ ಕ್ಕಿಂತಲೂ ಹಿಂದೆ ಇರಬೇಕಾಗುತ್ತದೆ. ಮತ್ತು ಶ್ರೀಕರಾಚಾರ್ಯನು ಈ ಗುರು ರೇವಣಸಿದ್ಧನ ನಾಮನಿರ್ದೇಶವನ್ನು ತನ್ನ ಶ್ರೀಕರ ಭಾಷೆಯಲ್ಲಿ ಮಾಡಿರುವನು. ಹಾಗು ಪ್ರಭುದೇವ ಮತ್ತು ರೇವಣಸಿದ್ಧ ಹೀಗೆ ಉಭಯತರು ಕೂಡಿ ಸಮಾಜೋದ್ಧಾರದ ಕೆಲಸಗಳನ್ನು ಮಾಡುತ್ತಿದ್ದರೆಂದು ವೀರಶೈವರ ಇತಿಹಾಸದಿಂದ ಸಿದ್ಧವಾಗುತ್ತದೆ. ಉಭಯತರ ಪುಣ್ಯಸ್ಥಾನಗಳಾದರೂ ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಒಂದಕ್ಕೊಂದು ಸಮೀಪದಲ್ಲಿರುವವು. ಇದೂ ಅಲ್ಲದೆ ಕಾಯಕದ ಜಂಗಮರೂ ಕೂಡ ಈ ವರೆಗೂ “ರೇವಣಸಿದ್ಧೇಶ್ವರ ಪ್ರಭುವೇ” ಎಂದು ಅನ್ನುತ್ತ ಭಿಕ್ಷೆಯನ್ನು ಬೇಡುತ್ತಿರುವರು. ಇದರಮೇಲಿಂದ ನೋಡಲಾಗಿ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೦೬೦ ಕ್ಕಿಂತಲೂ ಹಿಂದೆಹೋಗುತ್ತದೆ.

ಶ್ರೀಪತಿ ಪಂಡಿತ ವೀರಶೈವ ಪಂಡಿತತ್ರಯಗಳಲ್ಲಿ ಒಬ್ಬನು. ಇವನ ಕಾಲವು ಸುಮಾರು ಕ್ರಿ. ಶ. ೧೧೬೦ ಎಂದು ಕರ್ನಾಟಕ ಕವಿಚರಿತೆಕಾರರು ನಿರ್ಧರಿಸಿರುವರು. ಆದರೆ ಶ್ರೀಕರ ಭಾಷ್ಯದ ಕರ್ತೃವಾದ ಶ್ರೀಪತಿ (ಶ್ರೀಕರಾಚಾರ್ಯ)ನು ತನ್ನ ಶ್ರೀಕರ ಭಾಷ್ಯದ ಆದ್ಯಂತ್ಯದಲ್ಲಿ ತನಗೆ ಸಿಂಹಾಸನಾಧೀಶ ಯತೀಂದ್ರನೆಂದು ಸಂಬೋಧಿಸಿಕೊಂಡಿರುವನು. ಈತನು ಶಂಕರಾಚಾರ್ಯರ ಸಮಾನ ಯೋಗ್ಯತೆಯವನಿದ್ದು ಕ್ರಿ. ಶ. ೧೦೬೦ ರ

ಸುಮಾರಿನಲ್ಲಿ ಇದ್ದನೆಂದು ಮದ್ರಾಸದ ಶ್ರೀಯುತ ನಾರಾಯಣಶಾಸ್ತ್ರಿ, ಬಿ. ಎ. ಬಿ; ಎಲ್, ಇವರು ಇಂಡಿಯನ್ ರಿವ್ಯೂಮಾಸಿಕದ ಕ್ರಿ. ಶ. ೧೯೧೫ ನೇ ವರ್ಷದ ಮೇ ತಿಂಗಳ ಸಂಚಿಕೆಯಲ್ಲಿ ಹೇಳಿರುವರು.

ನಿರಾಭಾರಿ ಎಂಬ ಒಕ್ಕಣಿಕೆಯನ್ನು ಪ್ರಭುಸಾಂಪ್ರದಾಯಕರಾದ ವಿರಕ್ತರು ತಮಗೆ ಉಪಯೋಗಿಸುತ್ತಿರುವರು. ಇದರ ಮೇಲಿಂದ ಶ್ರೀಕರಾಚಾರ್ಯನು ವಿರಕ್ತನಿದ್ದಿರಬಹುದಲ್ಲದೆ ಆ ಕಾಲಕ್ಕೆ ನಿರಾಭಾರಿ ವಿರಕ್ತ ಆಶ್ರಮವು ಅಸ್ತಿತ್ವದಲ್ಲಿದ್ದು ಆ ಆಶ್ರಮದೊಳಗಿನ ಜನರು ಆ ಕಾಲದಲ್ಲಿ ಪ್ರಖ್ಯಾತರಿದ್ದದ್ದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ನಿರಾಭಾರಿ ವಿರಕ್ತ ಜನರು ಪಭುಸಾಂಪ್ರದಾಯಕರೆಂಬುವದು ಶಾಸ್ತ್ರ ಪ್ರಸಿದ್ಧವೇ ಅದೆ. ಅತ ಏವ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೧೬೦ ರ ಕ್ಕಿಂತಲೂ ಹಿಂದೆ ಹೋಗುತ್ತದೆ ಎಂದು ಮೇಲೆ ಹೇಳಿದ್ದು ನಿಸ್ಸಂಶಯವಾಗಿ ಸಿದ್ಧವಾಗುತ್ತದೆ.

ಮಿ॥ ಉಯಿಲ್ಯಮ್‌ರಾಯಿಸ್ ಇವರು ತಮ್ಮ ಮೈಸೂರ ಮತ್ತು ಕುರ್ಗ ಎಂಬ ಹೆಸರಿನ ಗ್ರಂಥದಲ್ಲಿ "ಹೇಗೆ ಏಕಾಂತ ರಾಮಯ್ಯನೆಂಬ ಒಬ್ಬ ಶಿವಶರಣನು ೫೦೦ ವೀರಶೈವ ಪಂಡಿತರೊಡನೆ ಬದಾಮಿ ತಾಲೂಕಿನ ಹತ್ತರಿರುವ ಐಹೊಳಿಯೆಂಬಲ್ಲಿದ್ದು ಇತರ ಮತಾವಲಂಬಿ ಜನರಿಗೆ ವೀರಶೈವ ದೀಕ್ಷೆಯನ್ನು ಕೊಡುತ್ತಿದ್ದನೆಂದೂ ಮತ್ತು ಅದೇ ಕಾಲಕ್ಕೆ ಶ್ರೀಬಸವನು ಬಿಜ್ಜಳನ ಮಂತ್ರಿಯಾಗಿದ್ದು ಏಕಾಂತರಾಮಯ್ಯನ ಕಾರ್ಯವನ್ನೇ ಮುಂದೆ ಸಾಗಿಸಿದ್ದನೆಂದೂ" ಅಂದಿರುವರು. ಅದರಂತೆಯೇ ಕ್ರಿ. ಶ. ೧೦೪೦ ರ ಸುಮಾರಿನಲ್ಲಿ ಜೇಡರ ದಾಸಿಮಾರ್ಯನೆಂಬ ಒಬ್ಬ ಶಿವಶರಣನು ಜೈನರನ್ನು ಗೆದ್ದು ಸುಗ್ಗಲದೇವಿಯು ಗಂಡನಾದ ಜಯಸಿಂಹನೆಂಬ ರಾಜನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟದ್ದು ತಿಳಿಯುಬರುತ್ತದೆ; (ಬಸವ ಪುರಾಣ ಸಂಧಿ ೫೭ ಮತ್ತು ವೃಷಭೇಂದ್ರವಿಜಯ ಆಶ್ವಾಸ ೩೫) ಕರ್ನಾಟಕ ಕವಿಚರಿತೆಕಾರರು ಕವಿಚರಿತೆಯ ಪ್ರಥಮಸಂಪುಟದ ೨೦೧ ನೇ ಪುಟದಲ್ಲಿ "ಬ್ರಹ್ಮಶಿವನೆಂಬ (ಸು. ೧೧೨೫) ಆ ಕವಿಯು ಹೆಸರನ್ನು ಹೇಳುವದರಿಂದ ದಾಸಿಮಯ್ಯನು ಅವನಿಗಿಂತ ಮುಂಚೆ ಇದ್ದಿರಬೇಕು. ಆದುದರಿಂದ ಈ ರಾಜನು ೧೦೧೮ ರಿಂದ ೧೦೪೨ ರ ವರೆಗೆ ಆಳಿದ ಚಾಳುಕ್ಯ ರಾಜನಾದ ೧ ನೇ ಜಯಸಿಂಹನಾಗಿರಬೇಕು" ಎಂದು ಅಂದಿರುವರು. ಈ ದಾಸಿಮಾರ್ಯನು ಜಂಗಮಲಿಂಗನ ಸ್ತುತಿಯನ್ನು ಮಾಡಿರುವನು ಶ್ರೀ ಪ್ರಭುದೇವನಿಗೆ ಜಂಗಮಲಿಂಗವೆಂಬುವದು ಜಗತ್ಪ್ರಸಿದ್ಧವದೆ. ಈ

ಜೇಡರ ದಾಸಿಮಾರ್ಯನಿಗೆ ನನ್ನಂಥ ದಾನಶೂರರಿಲ್ಲೆಂದು ಗರ್ವಬಂದಾಗ್ಗೆ ಆತನ ಗರ್ವ ಪರಿಹಾರವನ್ನು ಶಂಕರದಾಸಿಮಾರ್ಯನು ಮಾಡಿದನೆಂದು ಹರೀಶ್ವರಕೃತ ಶಂಕರದೇವ ರಗಳೆ, ಆಂಧ್ರಭಾಷೆಯೊಳಗಿನ ಸಿದ್ಧಕವಿಕೃತ ಮಲಬಸವ ಪುರಾಣ ಮತ್ತು ಭೀಮಕವಿಕೃತ ಬಸವಪುರಾಣ ಇತ್ಯಾದಿ ಗ್ರಂಥಗಳಲ್ಲಿ ಹೇಳಿರುವದು. ಇದರ ಮೇಲಿಂದ ಜೇಡರ ದಾಸಿಮಾರ್ಯ ಹಾಗು ಶಂಕರದಾಸಿಮಾರ್ಯ ಈ ಉಭಯತರು ಸಮಕಾಲೀನರೆಂದು ಗೊತ್ತಾಗುತ್ತದೆ. ಈ ಶಂಕರದಾಸಿಮಾರ್ಯನು ಪ್ರಭುದೇವರನ್ನು ಸ್ತುತಿಸಿ ರುವನೆಂದು ಶೂನ್ಯಸಂಪಾದನೆಯಲ್ಲಿ ಹೇಳಿರುವದು. ಆದುದರಿಂದ ಈ ಮೂವರು ಸಮಕಾಲೀನರೆಂದು ಸಿದ್ಧವಾಗುತ್ತದೆ. ಅಂದಮೇಲೆ ಪ್ರಭು ದೇವನ ಕಾಲವಾದರು ಕ್ರಿ ಶ. ೧೦೪೦ ರ ಕ್ಕಿಂತಲೂ ಹಿಂದೆ ಹೋಗು ತ್ತದೆ.

ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ದ್ವಿತೀಯ ಸಂಪುಟದ ೧೫೩ ನೇಯ ಪುಟದಲ್ಲಿ "ಸುಮಾರು ಕ್ರಿ. ಶ. ೧೨೫೦ ರಲ್ಲಿ ಅಮಲಾನಂದನಿಂದ ರಚಿತವಾದ ಕಲ್ಪತರುವೆಂಬ ವ್ಯಾಖ್ಯಾನದ ಹೆಸ ರನ್ನು ಶ್ರೀ ನಿಜಗುಣ ಶಿವಯೋಗಿಯು ತನ್ನ ವಿವೇಕ ಚಿಂತಾಮಣಿಯಲ್ಲಿ ಉತ್ತರ ಮೀಮಾಂಸದ ವಿಚಾರದ ಕಾಲಕ್ಕೆ ತೆಗೆದುಕೊಂಡಿರುವದರಿಂದ ಈ ನಿಜಗುಣಶಿವಯೋಗಿಯು ಕ್ರಿ. ಶ. ೧೨೫೦ ರಕ್ಕಿಂತ ಈಚೆಯವನೆಂ ತಲೂ, ಕ್ರಿ. ಶ. ೧೬೬೭ ರಲ್ಲಿ ಷಡಕ್ಷರದೇವನು ಇವನನ್ನು ಸ್ತುತಿಸುವದ ರಿಂದ ಇವನು ಆ ಕಾಲದ ಹಿಂದೆ ಇದ್ದಿರಬೇಕೆಂದೂ" ಅಂದು ನಿಜ ಗುಣ ಶಿವಯೋಗಿಯ ಕಾಲವನ್ನು ಕ್ರಿ. ಶ. ೧೫೦೦ ಎಂದು ಅಂದಿರುವರು. ಕವಿಚರಿತೆಕಾರರು ಅಮಲಾನಂದನ ಕಾಲವನ್ನು ಕ್ರಿ. ಶ. ೧೨೫೦ ಎಂದು ಸರಾಸರಿಯಾಗಿ ಗ್ರಹಿಸಿ ಇದಕ್ಕೆ ಯಾವ ಆಧಾರಗಳನ್ನು ಕೊಟ್ಟಿಲ್ಲ. ಇದು ಅಲ್ಲದೆ ಷಡಕ್ಷರದೇವ (ಕ್ರಿ. ಶ. ೧೬೬೫) ನ ಹೊರ್ತಾಗಿ ಹಿಂದೆ ಯಾರೂ ಸ್ತುತಿಸಿದ್ದನ್ನು ಹೇಳದೆ ಹಿಂದುಮುಂದೆ ೨೫೦ ವರ್ಷಗಳನ್ನು ಬಿಟ್ಟು ನಿಜಗುಣಶಿವಯೋಗಿಯ ಕಾಲವನ್ನು ಕ್ರಿ. ಶ. ೧೫೦೦ ಎಂದು ಅನ್ನು ವದು ಕೇವಲ ತಪ್ಪು ಅನಿಸುತ್ತದೆ. ಇದಕ್ಕಿಂತಲೂ ಮಿ॥ ಎಡ್ವರ್ಡ ಪಿ. ರಾಯಿಸ್. ಬಿ. ಎ. ಇವರು ಕ್ರಿ. ಶ. ೧೯೨೧ ರಲ್ಲಿ ಬರೆದ ತಮ್ಮ ಕನ್ನಡ ವಾಙ್ಮಯದ ಇತಿಹಾಸದ ೭೧ ನೇ ಪುಟದಲ್ಲಿ "ಈ ನಿಜಗುಣ ಶಿವ ಯೋಗಿಯ ಕಾಲವು ಕ್ರಿ. ಶ. ೧೨೫೦—೧೬೬೫ ರ ಮಧ್ಯದಲ್ಲಿರಬೇಕು.

ಅದನ್ನು ಖಂಡಿತವಾಗಿ ಹೇಳಲಿಕ್ಕೆ ಬರಲಾರದು" ಎಂದು ಅಂದು ಇದು ಬಹಳೇ ಸಯುಕ್ತಿಕ ಎಂದು ಅಂದಿರುವರು. ಆದರೆ ಮಿ॥ ಎಡ್ವರ್ಡರಾಯಿಸ್ ಇವರು ಸಹ ಕ್ರಿ. ಶ. ೧೩೫೦ ರಕ್ಕಿಂತಲೂ ಹಿಂದೆ ಹೋಗಲಾರರು, ಮತ್ತು ಡಾಕ್ಟರ ಕೇತಕರ ಇವರು ತಮ್ಮ ಮಹಾರಾಷ್ಟ್ರ ಜ್ಞಾನ ಕೋಶ, ಭಾಗ ೧೦-೧೧, (ಕ) ಅಕ್ಷರ, ಪುಟ ೩೬೬ ರಲ್ಲಿ "೧೭ ನೇ ಶತಮಾನದ ಮಧ್ಯದಲ್ಲಿ ನಿಜಗುಣಯೋಗಿಯೆಂಬವನೊಬ್ಬ ವಿದ್ವಾನ ಲಿಂಗಾಯತ ಲೇಖಕನಾಗಿ ಹೋದನು. ಅವನು ವಿವೇಕ ಚಿಂತಾಮಣಿ (ಚಂಪು) ಶೈವವಿದ್ಯೆಯ ಒಂದು ಪ್ರಕಾರದ ಜ್ಞಾನಕೋಶ ಕೈವಲ್ಯ ಪದ್ಧತಿ, ತಾತ್ವಿಕ ವಿಷಯದ ಮೇಲಿನ ಪದಗಳು ಪುರಾತನ ತ್ರಿವಿದಿ, ೬೩ ಪುರಾತನರ (ಶೈವಸಾಧುಗಳ) ತ್ರಿಪದಿ ಛಂದಸ್ಸದಲ್ಲಿಯ ವರ್ಣನೆ, ಪಾರಮಾರ್ಥಗೀತೆ ಮತ್ತು ಪರಮಾನುಭವಬೋಧೆ ಈ ಗ್ರಂಥಗಳನ್ನು ಬರೆದನು" ಎಂದು ಅಂದಿರುವರು. ಇದರ ಮೇಲಿಂದ ನೋಡಲಾಗಿ ಈ ಮೂರು ಗ್ರಂಥಕರ್ತೃಗಳಲ್ಲಿ ಕಿಂಚಿತ್ತಾದರೂ ಮೇಳವಿಲ್ಲೆಂದು ವಾಚಕರಿಗೆ ಸಹಜ ಲಕ್ಷದಲ್ಲಿ ಬರಬಹುದು.

ವಿವೇಕ ಚಿಂತಾಮಣಿಯ ಅಚ್ಚಾದ ಪ್ರತಿಯೊಳಗಿನ ಉತ್ತರ ಮೀಮಾಂಸಾ ಎಂಬ ಶಿರೋಲೇಖದ ಕೆಳಗೆ "ವಾಚಸ್ಪತಿ ಮಿತ್ರನು ಶಾಂಕರ ಭಾಷ್ಯದ ತಾತ್ಪರ್ಯ ಭೋದಕ ಭಾಮಿತಿ ನಾಮಕ ವ್ಯಾಖ್ಯಾನವನ್ನು ಬರೆದಿರುವನೆಂದೂ, ಈ ಭಾಮಿತಿ ವ್ಯಾಖ್ಯಾನಕ್ಕೆ ಕಲ್ಪತರು ವ್ಯಾಖ್ಯಾನವಿರುವದಲ್ಲದೆ ಈ ಕಲ್ಪತರುವಿಗೆ ಕೌಸ್ತುಭನಾಮಕ ಟೀಕೆ" ಎಂದು ಇರುವದು. ಇದರಲ್ಲಿ ಕಲ್ಪತರು ಹಾಗು ಕೌಸ್ತುಭ ಗ್ರಂಥಗಳ ಗ್ರಂಥಕರ್ತರ ಹೆಸರು ಹೇಳಿಲ್ಲ. ಹೀಗಿರಲು ಈ ಕಲ್ಪತರು ವ್ಯಾಖ್ಯಾನವನ್ನು ಅಮಲಾನಂದನೇ ಬರೆದಿರುವನೆಂದು ಹೇಳಲಿಕ್ಕಾಗದು. ಇರಲಿ. ಹಳೇ ತಾಡವಾಲೀ ಗ್ರಂಥಗಳಲ್ಲಿ ಭಾಮಿತಿ ಕರ್ತೃವಾದ ವಾಚಸ್ಪತಿ ಮಿತ್ರನ ನಾಮನಿರ್ದೇಶವಾದರೂ ಕಂಡುಬರುವದಿಲ್ಲ. ಆದುದರಿಂದ ಈ ಸಂಗತಿಯು ಅಚ್ಚಾದ ವಿವೇಕಚಿಂತಾಮಣಿಯಲ್ಲಿ ಕ್ಷೇಪಕ ಅಂದರೆ ಹಿಂದಿನಿಂದ ಸೇರಿಸಿರಬಹುದೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಇದೂ ಅಲ್ಲದೆ ಕೊಡಗು ಪ್ರಾಂತದ ದೊರೆಯಾದ ಲಿಂಗರಾಜನೆಂಬವನು ವಿವೇಕಚಿಂತಾಮಣಿಯೊಳಗಿನ ಪ್ರಥಮ ಪ್ರಕರಣದ ಭಾಷಾಂತರವನ್ನು ಸಂಸ್ಕೃತದಲ್ಲಿ ಮಾಡಿರುವದರಿಂದ ಆ ಪ್ರಕರಣಕ್ಕೆ ಲಿಂಗರಾಜೀಯ ಎಂದು ಹೆಸರು

ಬಂದಿದೆ. ಇದರೊಳಗಿನ ಸೂತ್ರವಿಚಾರದಲ್ಲಿಯೂ ಕೂಡ ಈ ಕಲ್ಪತರು ಗ್ರಂಥದ ನಾಮನಿರ್ದೇಶವೂ ಇಲ್ಲ. ಅದರಂತೆ ಸುಮಾರು ಎರಡನೂರು ವರ್ಷಗಳ ಪೂರ್ವದಲ್ಲಿ ಶಾಂತೇಶ್ವರನೆಂಬ ಒಬ್ಬ ವೀರಶೈವ ಕವಿಯು ಈ ವಿವೇಕ ಚಿಂತಾಮಣಿಯನ್ನು ಮರಾಠಿಯಲ್ಲಿ ಓವೀಬದ್ಧವಾಗಿ ಭಾಷಾಂತರ ಮಾಡಿರುವನು. ಇದರ ಸೂತ್ರ ವಿಚಾರದಲ್ಲಿಯೂ ಕೂಡ ಕಲ್ಪತರು ಮೊದಲಾದ ಗ್ರಂಥಗಳ ಹೆಸರು ಕಂಡುಬರುವದಿಲ್ಲ ಆದರೆ ಇತ್ತೀಚಿಗೆ ಅಚ್ಚಾದ ಗ್ರಂಥಗಳಲ್ಲಿ ಮಾತ್ರ ಭಾಮಿತಿ ಕಲ್ಪತರು ಮೊದಲಾದ ಗ್ರಂಥಗಳ ಹೆಸರು ಕಂಡುಬರುತ್ತವೆ. ಈ ಅಚ್ಚಾದ ಗ್ರಂಥದೊಳಗಿನ ಹೆಚ್ಚಿನ ವಿಷಯವನ್ನೇ ಪುನಃ ಓವೀಬದ್ಧ ಮರಾಠಿಯಲ್ಲಿ ಭಾಷಾಂತರ ಮಾಡಿಸಿ ಕೈಲಾಸವಾಸಿ ರಾ॥ ಬಾ॥ ವಾರದ ಅಪ್ಪಾಸಾಹೇಬರು ಪ್ರಕಟ ಮಾಡಿರುವರು. ಆದುದರಿಂದ ತಾಡವಾಲೀ ಗ್ರಂಥದಲ್ಲಿ ಇರದಂಥ ಸಂಗತಿಯು ಅಚ್ಚಾದ ವಿವೇಕ ಚಿಂತಾಮಣಿಯಲ್ಲಿ ಬಂದದ್ದು ಕ್ಷೇಪಕ ಅಂದರೆ ಹಿಂದಿನಿಂದ ಸೇರಿಸಿದ್ದು ನಿಜವಿರುತ್ತದೆಂದು ವಾಚಕರ ಮನವರಿಕೆಯಾಗದೆ ಇರಲಾರದು. ಮೂಲ ಹಳೇ ತಾಡವಾಲೀ ಗ್ರಂಥಗಳಲ್ಲಿ ಶಂಕರಾಚಾರ್ಯನ ಭಾಷ್ಯೆಗೆ ವಿವರ್ಣಾಚಾರ್ಯನು ವಿವರಣೆ ಮಾಡಿದನು ಎಂಬದರ ವರೆಗೆ ಇರುತ್ತದೆ. ಇದರ ಅನುಕರುಣವನ್ನೇ ಲಿಂಗರಾಜೀಯ ಮತ್ತು ಶಾಂತೇಶನ ಮರಾಠಿ ವಿವೇಕಚಿಂತಾಮಣಿಗಳಲ್ಲಿ ಮಾಡಿದಂತೆ ಕಂಡುಬರುತ್ತದೆ. ಇದರ ಮುಂದಿನ ಸಂಗತಿಯು ಅಂದರೆ ಶಂಕರಾಚಾರ್ಯನ ಶಿಷ್ಯರು ಶಾಂಕರ ಭಾಷ್ಯೆಗೆ ವೃತ್ತಿಪಂಚಪಾದಿಕಾ, ಬ್ರಹ್ಮವಿದ್ಯಾಭರಣ, ರಾಮಾನಂದೀಯ ಮೊದಲಾದ ಗ್ರಂಥಗಳನ್ನು ಬರೆದರೆಂದೂ, ಅನಕ್ಕೆ ಅವರ ಶಿಷ್ಯರಾದ ವಾಚಸ್ಪತಿ ಮಿತ್ರರು ಭಾಮಿತಿ ನಾಮಕ ವ್ಯಾಖ್ಯಾನವನ್ನು ಬರೆದರೆಂದೂ ಈ ವ್ಯಾಖ್ಯಾನಕ್ಕೆ ಕಲ್ಪತರು, ಇದಕ್ಕೆ ಕೌಸ್ತುಭ ಎಂಬ ಟೀಕಾಗ್ರಂಥಗಳೂ ಹಿಂದಿನಿಂದ ವಿವೇಕಚಿಂತಾಮಣಿಯಲ್ಲಿ ಹಾಕಿದ್ದು ನಿಜವೆಂದೂ ತೋರುತ್ತದೆ. ಹೀಗಿರುತ್ತಿರಲು ಹಿಂದಿನಿಂದ ಸೇರಿಸಲ್ಪಟ್ಟಂಥ ಕಲ್ಪತರು ಮೊದಲಾದ ಗ್ರಂಥಗಳ ಹೆಸರಿನ ಆಧಾರದ ಮೇಲಿಂದ ಮತ್ತು ಹಳೇ ತಾಡವಾಲೀ ಗ್ರಂಥಗಳನ್ನು ನೋಡದೆ ಈ ನಿಜಗುಣ ಶಿವಯೋಗಿಯ ಕಾಲವು ಸುಮಾರು ಕ್ರಿ. ಶ. ೧೫೦೦ ಎಂದು ಗೊತ್ತುಮಾಡುವದು ಬಹಳೇ ಅಯುಕ್ತವಾಗಿ ಕಂಡುಬರುತ್ತದೆ. ಮಹಾರಾಷ್ಟ್ರ ಜ್ಞಾನಕೋಶಕಾರರಾದ ಡಾಕ್ಟರ ಕೇತಕರ ಇವರು ಈ ನಿಜಗುಣಶಿವಯೋಗಿಯು

ಕಾಲವನ್ನು ೧೭ ನೇ ಶತಮಾನದ ಮಧ್ಯವೆಂದು ಹಿಡಿದಿರುವರು. ಇವರಿಗೆ ಕನ್ನಡ ವಾಙ್ಮಯವೆಂಬ ಎರಡನೇಯವರ ಲೇಖಗಳೇ ಆಧಾರವಾಗಿದ್ದಂತೆ ಕಂಡುಬರುತ್ತದೆ. ಇನ್ನು ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿ ಚರಿತೆಯ ಎರಡನೇ ಸಂಪುಟದಲ್ಲಿ "ನಿಜಗುಣಶಿವಯೋಗಿಯ ಗುರು ವಾದ ಚನ್ನಸಬಾಶಿವಯೋಗಿಯು ಶಿವಯೋಗಪ್ರದೀಪಿಕಾ ಎಂಬ ಗ್ರಂಥ ವನ್ನು ಬರೆದಿರುವನು, ಇದಕ್ಕೆ ಪಾರಮಾರ್ಥ ಪ್ರಕಾಶಿಕಾ ಎಂಬ ಹೆಸ ರಿನ ವ್ಯಾಖ್ಯಾನವನ್ನು ನಿಜಗುಣಶಿವಯೋಗಿಯು ಬರೆದಿರುವನು" ಎಂದು ಅಂದಿರುವರು. ಮತ್ತು ಈ ಚನ್ನಸದಾಶಿವನ ಕಾಲವು ತಿಳಿಯುವದಿಲ್ಲವು. ಅದು ತಿಳಿಯದ ಹೊರತು ನಿಜಗುಣಶಿವಯೋಗಿಯ ಕಾಲವನ್ನು ಗೊತ್ತುಮಾ ಡುವದು ಉಚಿತವಲ್ಲವೆಂದು ಅಂದಿರುವರು. ಈ ಮೇಲಿನ ವಿವೇಚನೆಯ ಮೇಲಿಂದ ನಿಜಗುಣಶಿವಯೋಗಿಯ ಕಾಲವು ಕ್ರಿ. ಶ. ೧೫೦೦ ಎಂಬು ವದು ಗೊತ್ತುಮಾಡುವದು ಯೋಗ್ಯವಲ್ಲೆಂದೂ ಇದಕ್ಕೂ ಹಿಂದಿರಬಹು ದೆಂದೂ ತೋರುತ್ತದೆ. ಏಕಂದರೆ ನಿಜಗುಣಶಿವಯೋಗಿಯು ವೀರಶೈವ ಕವಿಯಾಗಿದ್ದನು. ಈತನಿಗೆ ನಿಜಗುಣಾರಾಧ್ಯ ಎಂಬದು ಇನ್ನೊಂದು ಹೆಸರುಂಟು. ಇವನು ಶಂಭುಲಿಂಗನ ಬೆಟ್ಟದ ಸುತ್ತಲಿನ ಪ್ರಾಂತದ ರಾಜನಾಗಿದ್ದು ಆ ರಾಜ್ಯದ ತ್ಯಾಗವನ್ನು ಮಾಡಿ ವಿರಕ್ತನಾಗಿ ಅದೇ ಗುಡ್ಡದೊಳಗೆ ಶಿವಯೋಗತತ್ಪರನಾಗಿ ಇದ್ದನೆಂಬುದು ಇತಿಹಾಸಪ್ರಸಿದ್ಧ ವಿದೆ. ಇವನು ಬರೆದ ಷಟ್‌ಶಾಸ್ತ್ರಗಳಲ್ಲಿ ಶ್ರೀ ಬಸವಾದಿ ಪ್ರಮಥರ ನಾಮನಿರ್ದೇಶವು ಕಂಡುಬರುವದಿಲ್ಲ. ಇದೂ ಅಲ್ಲದೆ ಶ್ರೀ ಬಸವೇಶ್ವರನು ತನ್ನ ವಚನದಲ್ಲಿ ಈ ನಿಜಗುಣ ಶಿವಯೋಗಿಯನ್ನು ಹೊಗಳಿರುವನು. ಆದುದರಿಂದ ನಿಜಗುಣಶಿವಯೋಗಿಯು ಶ್ರೀ ಬಸವಾದಿ ಪ್ರಮಥರಗಿಂ ತಲು ಹಿಂದಿನವನೆಂಬುವದರಲ್ಲಿ ತಿಲಮಾತ್ರವೂ ಸಂಶಯವಿಲ್ಲವು ಎಷ್ಟು ಹಿಂದೆ ಇದ್ದಿರಬಹುದು ಎಂಬದು ಖಂಡಿತವಾಗಿ ಹೇಳಲಿಕ್ಕಾಗದು. ಇರಲಿ. ಇವನು ತನ್ನ ವಿವೇಕಚಿಂತಾಮಣಿಯಲ್ಲಿ ನಿರಾಭಾರಿ ಆಶ್ರಮದ ವರ್ಣನೆಯನ್ನು ಮಾಡಿ ಈ ನಿರಾಭಾರಿಗಳಲ್ಲಿ ಸ್ವಯ, ಚರ, ಪರ ಹೀಗೆ ಮೂರು ಭೇದಗಳು ಇವೆಯೆಂದು ವರ್ಣನೆ ಮಾಡಿರುವನು. ಈ ವಿರ ಕ್ತಾಶ್ರಮಕ್ಕೆ ಶ್ರೀ ಪ್ರಭುದೇವನು ಮುಖ್ಯ ಗುರುವಾದದ್ದು ಎಲ್ಲ ವಿರಕ್ತ ರಿಗೂ ಮಾನ್ಯವದೆ, ಆದುದರಿಂದ ಈ ನಿಜಗುಣ ಶಿವಯೋಗಿಯ ಕಾಲವು ಸುಮಾರು ಕ್ರಿ. ಶ. ೧೦೦೦ ಎಂದು ಹಿಡಿದರೆ ಇವನಿಗಿಂತಲೂ ಶ್ರೀ ಪ್ರಭು ದೇವನು ಪೂರ್ವದಲ್ಲಿ ಇದ್ದದ್ದು ಸಹಜವೆಂದು ಕಂಡುಬರುತ್ತದೆ.

ಶಾಲಿವಾಹನ ಶಕೆ ೭೮೬ ರಲ್ಲಿ ಪ್ರಭುದೇವನು ಕಲ್ಯಾಣಕ್ಕೆ ಬಂದು ಕಲಿಗತ ವರ್ಷ ೪೦೮೧, ಶಾಲಿವಾಹನ ಶಕೆ ೮೨೨ ರೌದ್ರಿನಾಮಸಂವತ್ಸರದಲ್ಲಿ ಚನ್ನಬಸವನಿಗೆ ಶೂನ್ಯಸಿಂಹಾಸನದ ಅಧಿಕಾರವನ್ನು ಕೊಟ್ಟು ಸರ್ವ ಪ್ರಥಮಗಣಂಗಳಿಗೆ ದರ್ಶನ ಆಶೀರ್ವಾದವನ್ನಿತ್ತು ಮುಂದೆ ನಡೆದನೆಂದು ಚಿತ್ರಕಲ್‌ದುರ್ಗ ಪಟ್ಟವಲ್ಲರಿ ಪ್ರಸ್ತಾವನೆಯ ೬ ನೇ ಪುಟದಲ್ಲಿ ಹೇಳಿರುವದು. ಇದರ ಮೇಲಿಂದ ಪ್ರಭುದೇವನ ಕಾಲವು ಕ್ರಿ. ಶ. ೯೦೦ ಕ್ಕಿಂತಲೂ ಹಿಂದೆ ಹೋಗುವದು.

ವಿರೂಪಾಕ್ಷ ಪಂಡಿತಕೃತ ಚೆನ್ನಬಸವ (೧೫೮೪) ಪುರಾಣದ ಕಾಂಡ ೫, ಸಂಧಿ ೯, ೧೮ ನೇ ಪದದಲ್ಲಿ "ಬಸವನು ಶಾಲಿವಾಹನ ಶಕೆ ೭೦೭ ರಕ್ತಾಕ್ಷಿನಾಮಸಂವತ್ಸರದಲ್ಲಿ ಐಕ್ಯನಾದನೆಂದು" ಹೇಳಿದೆ. ಇದರಮೇಲಿಂದ ಪ್ರಭುದೇವನ ಕಾಲವು ಸುಮಾರು ಕ್ರಿ. ಶ. ೮೦೦ ಆಗುತ್ತದೆ.

ಡಾಕ್ಟರ ಶ್ರೀಧರ ವೆಂಕಟೇಶ ಕೇತಕರಕೃತ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೧೨, ಪುಟ ೨೨೭ ರಲ್ಲಿ "ಗೋರಖನಾಥನು ಕಾನಫಾಟಿ ಯೋಗೀ ಪಂಥದ ಸಂಸ್ಥಾಪಕನೆಂದು ತಿಳಿಯಲ್ಪಡುತ್ತಾನೆ. ಗೋರಕ್ಷನಾಥ ಎಂಬ ಸಂಸ್ಕೃತ ಹೆಸರಿನ ಹಿಂದೀ ರೂಪವು ಗೋರಖನಾಥ ಎಂದು ಆಗಿದೆ. ಇವನ ಕಾಲವು ನಿಶ್ಚಿತವಾಗಿಲ್ಲವು. ಯಾಕಂದರೆ ಇವನ ಸಂಬಂಧವಾಗಿ ಪ್ರಚಾರದಲ್ಲಿದ್ದಂಥ ಅನೇಕ ಆಖ್ಯಾಯಿಕೆಗಳಲ್ಲಿ ಒಂದಕ್ಕೊಂದು ಮೇಳ ಇಲ್ಲದಂತೆ ಎಷ್ಟೋ ವಿಸಂಗತ ಸಂಗತಿಗಳು ಕಂಡುಬರುತ್ತವೆ. ನೇಪಾಳದೊಳಗೆ ೭ ನೇ ಶತಮಾನದಲ್ಲಿ ಆಗಿಹೋದ ನರೇಂದ್ರದೇವರಾಜನ ಕೂಡ ಈತನ ಸಂಬಂಧವನ್ನು ಹೊಂದಿಸುವರು, ಆದರೆ ಇವನು ಉತ್ತರ ಹಿಂದುಸ್ತಾನದಲ್ಲಿ ೧೫ ನೇ ಶತಮಾನದೊಳಗೆ ಇದ್ದಂಥ ಕಬೀರನ ಸಮಕಾಲೀನ ಪ್ರತಿಸ್ಪರ್ಧಿಯು ಎಂದು ತಿಳಿಯುವರು. ಮತ್ತು ಪಶ್ಚಿಮ ಹಿಂದುಸ್ತಾನದಲ್ಲಿ ೧೪ ನೇ ಶತಮಾನದ ಕಡೆಯ ಭಾಗದೊಳಗೆ ಕಚ್ಛದಲ್ಲಿ ಕಾನಫಾಟಿಯೆಂಬ ಪಂಥವನ್ನು ಆರಂಭಮಾಡಿದ ಧರ್ಮನಾಥನ ಗುರುವಿನ ಮಾನವನ್ನು ಈ ಗೋರಕ್ಷನಾಥನಿಗೆ ಕೊಡುವರು. ಗೋರಖನಾಥನ ಅಲ್ಪ ಚರಿತ್ರ ಮತ್ತು ಮಹಾರಾಷ್ಟ್ರಕ್ಕೆ ಆತನ ಸಂಬಂಧ ಎಂಬುವದರಲ್ಲಿ ಇವನು ಮಚ್ಛೇಂದ್ರನಾಥನ ಶಿಷ್ಯನಾಗಿದ್ದನು. ಇವನು ಜಾತಿಯಿಂದ ಬ್ರಾಹ್ಮಣನು. ಆಕಳ ಶಗಣಿಯ ಕಿಟ್ಟದಲ್ಲಿ ಉದ್ಭವಿಸಿದರಿಂದ ಈತನಿಗೆ ಗೋರಖನಾಥ ಎಂಬ ಹೆಸರು ಬಂದಿದೆ. ಈತನು ಮಚ್ಛೇಂದ್ರ

ನಾಥನನ್ನು ಸ್ತ್ರೀರಾಜ್ಯದೊಳಗಿಂದ ತಿರುಗಿ ಕರೆದುಕೊಂಡ ಬಂದ ಕಥೆಯು ಕೇಳಿಕೆಯಲ್ಲಿದೆ ಈತನ ನಿತ್ಯ ವಾಸಸ್ಥಳವು ಗೋರಖಪೂರ ಜಿಲ್ಹೆಯೊಳಗಿನ ಗೋರಖಪೂರವೆಂಬ ಗ್ರಾಮದಲ್ಲಿ ಇತ್ತೆಂದು ಹೇಳುವರು. ಈತನು ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿ ಬರೆದ ಎರಡು ಗ್ರಂಥಗಳು ಸಿಗುತ್ತವೆ. ವ್ರಜಭಾಷೆಯಲ್ಲಿಯೂ ಈತನು ಅಲ್ಪಸ್ವಲ್ಪ ಕಾವ್ಯರಚನೆಯನ್ನು ಮಾಡಿದ್ದು ಕಂಡುಬರುವದು. ರಸಾಯನ ಶಾಸ್ತ್ರದ ಮೇಲೆ ಗೋರಖಕಿಮಿಯಾಗಾರ ಎಂಬ ಹೆಸರಿನ ಒಂದು ಗ್ರಂಥವನ್ನು ಈತನು ಬರೆದಿರುವನು. ಮರಾಠಿಯಲ್ಲಿ ಇವನು ಬರೆದ ಅಮರನಾಥ ಸಂವಾದ ಎಂಬುದೊಂದು ಚಿಕ್ಕ ಗ್ರಂಥವೂ ಹಿಂದೀ ಭಾಷೆಯಲ್ಲಿ ಬರೆದ ಅನೇಕ ಸ್ಫುಟ ಕವಿತೆಗಳೂ ದೊರೆಯುತ್ತವೆ. ಇವನ ಕೆಲವು ವಾಕ್ಯಗಳನ್ನು ಗೋರಖಮತ ಎಂಬ ಹೆಸರಿನಿಂದ ಪ್ರಸಿದ್ಧಿಸಿರುವರು. ಈತನ ಶಿಷ್ಯನು ಗೈನೀನಾಥ, ಗೈನೀನಾಥನ ಶಿಷ್ಯನು ನಿವೃತ್ತಿನಾಥ (ಜ್ಞಾನೇಶ್ವರನ ಅಣ್ಣ) ಜೋತಿಷ್ಯದ ಮೇಲೆಯೂ ಈತನ ಕೆಲವು ಗ್ರಂಥಗಳು ಇರಬಹುದು. ಮೂಹೂರ್ತ ಮುಂತಾದವುಗಳ ಮೇಲೆ ಗೋರಖಮತವೆಂಬದೊಂದು ಸ್ವತಂತ್ರ ಮತವಿರುವದು. ಇವನು ನವನಾಥರೊಳಗಿನವನೊಬ್ಬನಿದ್ದು ಇವನ ಚರಿತ್ರವು ನವನಾಥ ಭಕ್ತಿಸಾರದಲ್ಲಿ ಹೇಳಿದೆ. ನೇಪಾಳವನ್ನು ಗೆದ್ದು ತಮ್ಮ ಕೈಯಲ್ಲಿ ಇಟ್ಟುಕೊಂಡಂಥ ಗುರಖಾ ಸಂಸ್ಥಾನಗಳಲ್ಲಿ ಗೋರಕ್ಷನಾಥನನ್ನು ಸಂರಕ್ಷಕದೇವರೆಂದು ತಿಳಿಯುವರು. ಪೂರ್ವದಲ್ಲಿ ನೇಪಾಳದ ಸಂರಕ್ಷಕ ದೇವರು ಮಚ್ಛೇಂದ್ರನಾಥನಿದ್ದು ಬರಬರುತ್ತ ಆತನ ಶಿಷ್ಯನಾದ ಗೋರಖನಾಥನು ಆ ಸ್ಥಾನದಲ್ಲಿರಬಹುದು. ತಿಬೇಟದಲ್ಲಿ ಗೋರಕ್ಷನಾಥನು ಒಬ್ಬ ಬೌದ್ಧ ಮಾಂತ್ರಿಕನೆಂದು ತಿಳಿಯುವರು. ಈ ಹೊತ್ತಿಗೂ ಹಿಂದುಸ್ತಾನದೊಳಗಿನ ಎಷ್ಟೋ ಭಾಗಗಳಲ್ಲಿ ಗೋರಖನಾಥನು ಸರ್ವಶಕ್ತಿವಾನ್ ಪರಮೇಶ್ವರನೆಂದು ಎಣಿಸಲ್ಪಡುವನು. ಸತ್ಯ ಯುಗದಲ್ಲಿ ಪಂಜಾಬದಲ್ಲಿಯೂ, ತ್ರೇತಾಯುಗದಲ್ಲಿ ಗೋರಖಪೂರದಲ್ಲಿಯೂ, ದ್ವಾಪಾರ ಯುಗದಲ್ಲಿ ಹುರಮುಜಗ್ರಾಮದಲ್ಲಿಯೂ, ಹಾಗು ಕಲಿಯುಗದಲ್ಲಿ ಕಾಠೇವಾಡದಲ್ಲಿಯೂ ಅವತರಿಸಿ ಆ ಆ ಸ್ಥಾನಗಳಲ್ಲಿಯು ಗೋರಖಮಠದಲ್ಲಿ ಈತನು ವಾಸಿಸುತ್ತಿದ್ದನೆಂದು ಆತನ ಭಕ್ತರು ತಿಳಿಯುವರು. ಭರ್ತೃಹರಿರಾಜನಿಗೆ ಗೋರಕ್ಷನಾಥನು ಸನ್ಯಾಸ ದೀಕ್ಷೆಯನ್ನು ಕೊಟ್ಟಂತೆ ಒಂದು ಕಥೆಯನ್ನು ಹೇಳುವರು. ಕೆಲವು ಸ್ಥಳಗಳಲ್ಲಿ ಭರ್ತೃಹರಿರಾಜನ ಬದಲು ಗೋಪೀಚಂದನ ಹೆಸರು ಹೇಳುವರು. ಮರಾಠಿ, ಹಿಂದೀ, ಬಂಗಾಲೀ

ಮುಂತಾದ ವಾಙ್ಮಯಗಳ ಆಧಾರದಿಂದ ಗೋರಖನಾಥನೆಂಬವನು ಒಬ್ಬ ಪ್ರಮುಖ ಶೈವಧರ್ಮ ಪ್ರಚಾರಕನಿದ್ದು ಮಧ್ಯಯುಗದಲ್ಲಿ ಉತ್ತರ ಹಿಂದುಸ್ಥಾನದೊಳಗಿನ ಭಕ್ತಿಮಾರ್ಗದ ಪ್ರಗತಿಗೆ ಪ್ರತಿಬಂಧಮಾಡುವ ಕಾರ್ಯವನ್ನು ಈತನು ಮಾಡಿದನೆಂದು ಹೇಳಬಹುದು. ಗೋರಖನಾಥನ ವಿಷಯವಾಗಿ ಸುಸಂಗತ ವಿವೇಚನವನ್ನೂ ಶೋಧವನ್ನೂ ಈ ಹೊತ್ತಿಗೂ ಯಾರೂ ಮಾಡಿಲ್ಲವು. ಈತನು ಇದ್ದನೋ ಅಥವಾ ಕಾಲ್ಪನಿಕ ಪುರುಷನೋ ಎಂಬುದನ್ನು ನಿಶ್ಚಯಾತ್ಮಕವಾಗಿ ಹೇಳಲಾಗದು. ನೇಪಾಳದಲ್ಲಿ ಮಹಾಯಾನಿ ಬೌದ್ಧ ಸಾಂಪ್ರದಾಯದವರ ವರ್ಚಸ್ಸವನ್ನು ಇವನು ಕಿತ್ತೊಗೆದು ಮಾಡಿದ ಮಹತ್ಕಾರ್ಯವು ನೇಪಾಳದ ಇತಿಹಾಸ ಶೋಧಕರಿಗೆ ಚನ್ನಾಗಿ ಕಂಡುಬರುವದು. ಗೋರಖಪಂಥದ ವಿಷಯವಾಗಿ ವಿವೇಚನೆಯನ್ನು ಕಾನಫಾಟಿ ಎಂಬ ಲೇಖದಲ್ಲಿ ಹೇಳಿರುವೆವು ಎಂದು ಹೇಳಿರುವದು.

ಈ ಮೇಲಿನ ವಿವೇಚನೆಗಳ ಮೇಲಿಂದ ನೋಡಲಾಗಿ ಗೋರಖನಾಥನು ೭ ನೇ ಶತಮಾನದಲ್ಲಿ ನೇಪಾಳದಲ್ಲಿ ಆಗಿಹೋದ ನರೇಂದ್ರದೇವರಾಜನ ಸಮಕಾಲೀನನೆಂದೂ ಉತ್ತರಹಿಂದುಸ್ಥಾನದಲ್ಲಿ ೧೫ ನೇ ಶತಮಾನದಲ್ಲಿ ಆಗಿಹೋದ ಕಬೀರನ ಸಮಕಾಲೀನ ಪ್ರತಿಸ್ಪರ್ಧಿ ಎಂದೂ ಹಾಗೂ ಪಶ್ಚಿಮ ಹಿಂದುಸ್ಥಾನದೊಳಗೆ ೧೪ ನೇ ಶತಮಾನದ ಅಂತ್ಯ ಭಾಗದಲ್ಲಿ ಕಚ್ಛದೊಳಗೆ ಕಾನಫಾಟಿ ಪಂಥವನ್ನು ಆರಂಭಮಾಡಿದ ಧರ್ಮನಾಥನ ಗುರುವಿನ ಕಾಲದವನೆಂದೂ ಈ ರೀತಿ ಮೂರು ಭಿನ್ನಾಭಿಪ್ರಾಯಗಳು ಹೊರಬೀಳುವವು. ಒಟ್ಟಿನಮೇಲೆ ಈತನ ಕಾಲವು ಇನ್ನೂ ನಿಶ್ಚಿತವಾಗಿಲ್ಲವು. ಮತ್ತು ಈ ಗೋರಖನಾಥನ ಶಿಷ್ಯನು ಆತನ ತಮ್ಮನಾದ ಗೈನಿನಾಥನು ಈತನ ಶಿಷ್ಯನು ನಿವೃತ್ತಿನಾಥನೆಂದು ಹೇಳಿದೆ. ಈ ನಿವೃತ್ತಿನಾಥನ ಶಿಷ್ಯನು ಆತನ ಖಾಸ ತಮ್ಮನಾದ ಜ್ಞಾನದೇವನು. ಈ ಗುರುಪರಂಪರೆಯು ಮಚ್ಛೇಂದ್ರಸಂಹಿತೆ ಹಾಗು ಭಕ್ತಿತತ್ವಾಮೃತಗಳಲ್ಲಿ ಹೇಳಿದೆ. ಮತ್ತು ಮಹಾರಾಷ್ಟ್ರ ಜ್ಞಾನಕೋಶ, ಭಾಗ ೨ (ಜ್ಞ) ಅಕ್ಷರ, ಪುಟ ೪—೫ ರಲ್ಲಿ "ಜ್ಞಾನೇಶ್ವರನ ಜನ್ಮವು ಶಾಲಿಹಾಹನ ಶಕೆ ೧೧೯೩-೯೪-೯೫ ಎಂದೂ ಹಾಗು ಆತನು ತನ್ನ ವಯಸ್ಸಿನ ೨೪ ನೇ ವರ್ಷದಲ್ಲಿ ಆಳಂದಿಯಲ್ಲಿ ಸಮಾಧಿಷ್ಠನಾದನೆಂದೂ" ಹೇಳಿದೆ. ಶ್ರೀಯುತ ಬಾಳಕೃಷ್ಣ ಲಕ್ಷ್ಮಣ ಘಾಟಕಕೃತ ಜ್ಞಾನೇಶ್ವರ ಚರಿತ್ರ, ಪುಟ ೫೪ ರಲ್ಲಿ

"ಶ್ರೀ ಜ್ಞಾನದೇವನ ಜನ್ಮವು ಶಾಲಿವಾಹನ ಶಕೆ ೧೧೯೭ (ಕ್ರಿ. ಶ. ೧೨೭೫) ಯುವನಾಮಸಂವತ್ಸರ, ಶ್ರಾವಣ ವದ್ಯ, ಅಷ್ಟಮಿ ಬುಧವಾರ ರಾತ್ರಿ ೨ ಪ್ರಹರಗಳ ನಂತರ ಆಯಿತೆಂದು ಹೇಳಿದೆ. ಇದರ ಮೇಲಿಂದ ಜ್ಞಾನೇಶ್ವರನ ಕಾಲವು ೧೩ ನೇ ಶತಮಾನದ ಕಡೆಯ ಭಾಗದಲ್ಲಿ ಇದ್ದಂತೆ ವಾಚಕರಿಗೆ ಕಂಡುಬರುವದು. ಗುರುಪರಂಪರೆಯಿಂದ ನೋಡಲಾಗಿ ಗೋರಖನಾಥನು ಜ್ಞಾನೇಶ್ವರನ ಮುತ್ತ್ಯಾಗುರುವು ಆಗುವನು. ಅತ ಏವ ಗೋರಖನಾಥನ ಕಾಲವಾದರೂ ೧೩ ನೇ ಶತಮಾನಕ್ಕಿಂತಲೂ ಹಿಂದೆ ಹೋಗುತ್ತದೆ. ಅಂದ ಮೇಲೆ ಡಾ॥ ಕೇತಕರ ಇವರು ತಮ್ಮ ಮಹಾರಾಷ್ಟ್ರ ಜ್ಞಾನಕೋಶದಲ್ಲಿ ಕೆಲವರು ೧೪ ನೇ ಶತಮಾನದಲ್ಲಿಯೂ ಕೆಲವರು ೧೫ ನೇ ಶತಮಾನದಲ್ಲಿಯೂ ಗೋರಖನಾಥನು ಇದ್ದನೆಂದು ಹೇಳುತ್ತಾರೆಂದು ಹೇಳಿದ್ದು ತೀರ ತಪ್ಪೆಂದು ಕಂಡುಬರುತ್ತದೆ. ಕ್ರಿ. ಶ. ೧೦೦೦ ಸುಮಾರಕ್ಕೆ ಇದ್ದ ನಿಜಗುಣಶಿವಯೋಗಿಯು ತನ್ನ ವಿವೇಕಚಿಂತಾಮಣಿ ನಾಮುಕ ಗ್ರಂಥದಲ್ಲಿ ಕೌಳಯಾಮುಳ ಪಂಥ ಎಂಬ ಶಿರೋಲೇಖದ ಕೆಳಗೆ ನವನಾಥರುಗಳ ಹೆಸರುಗಳನ್ನು ಕೊಟ್ಟು ಕಡೆಯವನಾದ ಗೋರಖನಾಥನ ಹೆಸರನ್ನು ಹೇಳಿರುವನು. ನಿಜಗುಣಶಿವಯೋಗಿಯು ತನ್ನ ಗ್ರಂಥಗಳಲ್ಲಿ ಈ ಗೋರಖನಾಥನ ನಾಮನಿರ್ದೇಶವನ್ನು ಮಾಡಿರುವದರಿಂದ ಇವನ ಕಾಲವಾದರೂ ೯ ನೇ ಶತಮಾನದ ಕಡೇ ಭಾಗದಲ್ಲಿ ಬೀಳುತ್ತದೆ. ೭ ನೇ ಶತಮಾನದ ಕಡೇ ಭಾಗದಲ್ಲಿ ಪ್ರಭುದೇವನು ಇದ್ದನೆಂದು ನಾವು ಈ ಮೊದಲೇ ಸಿದ್ಧಮಾಡಿದ್ದು ವಾಚಕರ ಲಕ್ಷ್ಯದಲ್ಲಿರಬಹುದು. ಪ್ರಭುದೇವನು ಈ ಗೋರಖನಾಥನ ಪರಾಭವವನ್ನು ಮಾಡಿ ಆತನಿಗೆ ಜ್ಞಾನೋಪದೇಶವನ್ನು ಮಾಡಿದ ಕಥೆಯನ್ನು ಚಾಮರಸಕೃತ (೧೪೩೦) ಪ್ರಭುಲಿಂಗಲೀಲೆಯಲ್ಲಿ ಹೇಳಿರುವದು. ಪ್ರಭುದೇವನ ಜ್ಞಾನೋಪದೇಶದ ಬಲದಿಂದ ಗೋರಕ್ಷನಾಥನು ಕನ್ನಡದಲ್ಲಿ ಕೆಲವು ವಚನಗಳನ್ನು ಬರೆದಿರುವನು. ಪ್ರತಿಯೊಂದು ವಚನದ ಅಂತ್ಯದಲ್ಲಿ "ಗೋರಕ್ಷಪಾಲಕ ಮಹಾಪ್ರಭು ಸಿದ್ಧ ಸೋಮನಾಥಲಿಂಗ" ಎಂದು ಗೋರಕ್ಷನಾಥನು ತನ್ನ ಮುದ್ರಿಕೆಯನ್ನು ಹಾಕಿರುವನು. ಕರ್ನಾಟಕ ಕವಿಚರಿತೆಕಾರರು ತಮ್ಮ ಗ್ರಂಥದ ೩ ನೆಯ ಸಂಪುಟದ ೩೫೫ ನೆಯ ಪುಟದಲ್ಲಿ ಈ ವಚನಗಳ ಉಲ್ಲೇಖವನ್ನು ಮಾಡಿರುವರು. ಇದರ ಮೇಲಿಂದ ಗೋರಖನಾಥನಿಂದ ಮುಂದಿನ ನಾಥಪಂಥದ ಗುರುಗಳು ವೀರಶೈವ ಮತಾವಲಂಬಿಗಳು ಇದ್ದದ್ದು ಸಹಜವಾಗಿ ಕಂಡುಬರುತ್ತದೆ. ಮತ್ತು

ಕೆಳಗಿನ ಉದಾಹರಣೆಗಳ ಮೇಲಿಂದ ಇದು ಸ್ಥಿರಪಡುತ್ತದೆ. ಅದು ಹೇಗಂದರೆ, ಈ ಗೋರಖನಾಥನ ಶಿಷ್ಯನಾದ ಜ್ಞಾನದೇವನು ತನ್ನ ಪಂಚೀಕರಣ ನಾಮಕ ಗ್ರಂಥದ ಅಜಪಾಬ್ರಹ್ಮಾಂಡದ ಪುಟ ೪೩-೪೪, ಓವಿ ೨ ರಿಂದಾ ೧೦ ಇವುಗಳಲ್ಲಿ ಲಿಂಗ ಎಂಬ ಸದರಿನ ಕೆಳಗೆ ೧ ಆಚಾರಲಿಂಗ ೨ ಗುರುಲಿಂಗ, ೩ ಶಿವಲಿಂಗ, ೪ ಜಂಗಮಲಿಂಗ, ೫ ಪ್ರಸಾದಲಿಂಗ, ೬ ಮಹಾಲಿಂಗ, ಎಂದು ವೀರಶೈವ ಧರ್ಮದೊಳಗಿನ ಲಿಂಗದ ಪಾರಿಭಾಷಿಕ ಹೆಸರುಗಳನ್ನು ಕೊಟ್ಟಿರುತ್ತಾನೆ. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಈ ತ್ರಿವಿಧ ಲಿಂಗಗಳು ಮೇಲೆ ಹೇಳಿದಂತೆ ಷಡ್ವಿಧಲಿಂಗಗಳಾದದ್ದು ವೀರಶೈವ ಧರ್ಮಗ್ರಂಥಗಳ ಹೊರ್ತು ಅನ್ಯ ಧರ್ಮಗ್ರಂಥಗಳಲ್ಲಿ ಹೇಳಿರುವದಿಲ್ಲ. ಶ್ರೀಯುತ ವ್ಹಿ. ವ್ಹಿ. ಪಾಠಕ ಇವರು ಅಚ್ಚುಹಾಕಿಸಿದ ಶ್ರೀ ಜ್ಞಾನದೇವಕಥಿತಂ ಮಹಾವಾಕ್ಯ ಪಂಚೀಕರಣಮ್ ಜಗದೀಶ್ವರ ಪ್ರೆಸ್ ಗಾಯವಾಡಿ ಗಿರಗಾವ ನಂಬರ ೯ ಮುಂಬಯಿ. ಅದರಂತೆ ಶ್ರೀಯುತ ಭಿಡೆ ಇವರು ಅಚ್ಚುಹಾಕಿಸಿದ ಜ್ಞಾನೇಶ್ವರಿಯಲ್ಲಿ ಕೆಳಗಿನಂತೆ ವೀರಶೈವ ಧರ್ಮತತ್ವಗಳನ್ನು ಸ್ಪಷ್ಟವಾಗಿ ಹೇಳಿರುವರು. ಅವುಗಳ ವಿವರವು ಕೆಳಗಿನಂತೆ.

| ವಿಷಯ | ಭಾಗ. | ಭ. ಗೀತಾ ಶ್ಲೋಕ. | ಜ್ಞಾನೇಶ್ವರೀ ಓವಿ. |
|---|---|---|---|
| ವೀರಶೈವಾಚರಣೆ | ೩ | ೧೦ | ೮೬-೯೨ |
| ಲಿಂಗಾಂಗ | ೬ | ೧೫ | ೩೦೫ |
| ಕಾಪಡಿಮಹೇಶು | ೬ | ೧೦ | ೧೫೩ |
| ಸತಿಪತಿಭಾವ | ೧೨ | ೧೪ | ೧೫೬ |

ಇದರ ಪ್ರಸ್ತಾವನೆಯ ೫ನೇ ಪುಟದಲ್ಲಿ ಕಂಡುಬರುವ 'ಕೋರಾನ್ನ' 'ಲಿಂಗಾಂಗ' (ಶಿವಜೀವೈಕ್ಯ) ಮತ್ತು 'ಕಾಪಡಿಮಹೇಶು' (ಅಂದರೆ ಶ್ರೀಬಸವನು ಐಕ್ಯವಾದ ಕಪ್ಪಡಿ ಸಂಗಮನಾಥ) ಈ ಶಬ್ದಗಳು ವೀರಶೈವ ಮತದ ಪಾರಿಭಾಷಿಕ ಶಬ್ದಗಳಿರುವವು.

ಇದರ ಮೇಲಿಂದ ನೇಪಾಳದಲ್ಲಿ ೭ನೇಯ ಶತಮಾನದೊಳಗೆ ಆಗಿ ಹೋದಂಥ ನರೇಂದ್ರ ದೇವರಾಜನ ಕೂಡ ಈ ಗೋರಖನಾಥನನ್ನು ಹೊಂದಿಸಿದ್ದು ಯೋಗ್ಯವೆಂದು ಕಂಡುಬರುತ್ತದೆ. ಒಟ್ಟಿನ ಮೇಲೆ ಗೋರಖನಾಥನು ೭ನೇ ಶತಮಾನದಲ್ಲಿ ಇದ್ದದ್ದು ನಿಜವಿರುತ್ತದೆ. ಇನ್ನು ಈ ಗೋರಖನಾಥನು ತನ್ನ ಗೋರಖ ಸಂಹಿತೆಯಲ್ಲಿ "ಶಿಷ್ಯಾಣಾಂ ಚ ಗುರು

ಮಾತಾ । ಗುರೋರ್ಮಾತಾತು ಜಂಗಮಃ ॥ ಜಂಗಮಸ್ಯ ನ ಮಾತಾಸ್ತಿ । ಹ್ಯಾದಿ ನಾಥಸ್ತು ಜಂಗಮಃ ॥೧॥ ಶಿಷ್ಯೋತ್ಪತ್ತಿರ್ಗುರೋ ಶ್ಚೈವ । ಗುರೋತ್ಪತ್ತಿ ಸ್ತು ಜಂಗಮಾತ್ ॥ ಜಂಗಮೋತ್ಪತ್ತಿಃಶೂನ್ಯತ್ವಾ ತ್ತಚ್ಛೂನ್ಯೋ ಜಂಗಮೋ ಭವೇತ್ ॥೨॥" ಎಂದರೆ ಶಿಷ್ಯನಿಗೆ ಗುರುವೇ ತಾಯಿಯು. ಮತ್ತು ಗುರುವಿಗೆ ಜಂಗಮವೇ ತಾಯಿಯು. ಆದರೆ ಜಂಗ ಮಕ್ಕೆ ತಾಯಿಯು ಇರದೆ ಜಂಗಮವೇ ಆದಿಸ್ಥಲವಾಗಿರುವದು. ಶಿಷ್ಯ ನುತ್ಪತ್ತಿಯು ಗುರುವಿನಿಂದಲೂ, ಗುರುವಿನುತ್ಪತ್ತಿಯು ಜಂಗಮನಿಂದಲೂ, ಜಂಗಮನುತ್ಪತ್ತಿಯು ಶೂನ್ಯತ್ವದಿಂದಲೂ ಆಗಿದ್ದು ಈ ಶೂನ್ಯತ್ವಕ್ಕೆ ಜಂಗ ಮವೆಂದೆನ್ನುವರು. ಈ ಶ್ಲೋಕಗಳು ರಾ॥ ಬ॥ ವಾರದ, ಸೊಲ್ಲಾಪುರ, ಇವರು ಪ್ರಸಿದ್ಧಿಸಿದ ವಿರಕ್ತೋತ್ಪತ್ತಿ ಕ್ರಿಯಾ ಲಕ್ಷಣ ಎಂಬ ಗ್ರಂಥದ ೭೬ನೇ ಪುಟದಲ್ಲಿ ದೊರೆಯುತ್ತವೆ. ಅಷ್ಟಾವರಣಾಂತರ್ಗತ ಜಂಗಮ ಪದವಾಚಕ ನಿರಾಭಾರಿ ವಿರಕ್ತರಿಗೆ ಶ್ರೀಪ್ರಭುದೇವನು ಆದಿಗುರುವಾದದ್ದು ನಿರ್ವಿವಾದವದೆ. ಆದುದರಿಂದ ಶ್ರೀಪ್ರಭುದೇವನ ಕಾಲವು ೭ ನೇಯು ಶತ ಮಾನಕ್ಕಿಂತಲೂ ಹಿಂದೆ ಹೋಗುತ್ತದೆ.

ಕ್ರಿ. ಶ. ೬೮೭ನೇ ವರ್ಷದಲ್ಲಿ ಕರ್ನಾಟಕದ ವಿನಯಾದಿತ್ಯನೆಂಬ ಚಾಳುಕ್ಯ ರಾಜನು ತನ್ನ "ವೀರ" ವೆಂಬ ಗ್ರಾಮದಲ್ಲಿ "ಅಲ್ಲ ಅಥವಾ ಅಲ್ಲಮ" ಎಂಬ ಹೆಸರಿನ ಒಬ್ಬ ಬ್ರಾಹ್ಮಣನಿಗೆ ದಾನ ಕೊಟ್ಟದ್ದರ ವರ್ಣನೆಯು ಒಂದು ಶಿಲಾಶಾಸನದಲ್ಲಿ ಅದೆ. ಅದರಲ್ಲಿ "ಕೌಂಡಿಣ್ಯ ಗೋತ್ರದ ದುರ್ಗಶರ್ಮನ ಮೊಮ್ಮಗನೂ ಮತ್ತು ಪಾಂಚಾಲಶರ್ಮನ ಮಗನೂ ಆದ ಅಲ್ಲ ಇಲ್ಲವೆ ಅಲ್ಲಮಶರ್ಮನಿಗೆ ವೀರವೆಂಬ ಗ್ರಾಮವನ್ನು ದಾನಕೊಟ್ಟಿದೆ" ಎಂದು ಸಂಸ್ಕೃತದಲ್ಲಿ ಹೇಳಿದೆ. ಈಶಿಲಾಲೇಖನವು ಎಪಿಗ್ರಾಫಿ ಕಾ ಇಂಡಿಕಾದ ೧೯೨೭ನೇ ಇಸ್ವಿಯು ಎಪ್ರಿಲ ತಿಂಗಳದ ಸಂಚಿಕೆಯಲ್ಲಿ ಇರುವದು. ಇದರ ಮೇಲಿಂದ ಕ್ರಿ. ಶ. ೬೮೭ರಲ್ಲಿ ಅರಬಸ್ತಾನದ ಹೊರಗೆ ಮುಸಲ್ಮಾನರ ಸುಳದಾಟವು ಇಲ್ಲದ ಕಾಲಕ್ಕೆ "ಅಲ್ಲ ಅಥವಾ ಅಲ್ಲಮ" ಎಂಬ ಹೆಸರು ಶುದ್ಧ ಕರ್ನಾಟಕ ದೇಶದೊಳಗಿನದು ಇದ್ದಿತೆಂಬುವದಕ್ಕೆ ಏನೂ ಸಂಶಯ ತೋರುವದಿಲ್ಲ. ಇದೂ ಅಲ್ಲದೆ ಶ್ರೀ ಅಲ್ಲಮಪ್ರಭು ದೇವನ ಹೆಸರನ್ನೇ ಈ ಶಿಲಾಲೇಖನದೊಳಗಿನ ಬ್ರಾಹ್ಮಣನಿಗೆ ಇಟ್ಟಿರ ಬಹುದೆಂದೂ ತರ್ಕಿಸಬಹುದು. ಮತ್ತು ೭ನೇ ಶತಮಾನದಲ್ಲಿ ಪ್ರಭು ದೇವನು ಬಹಳೇ ಪ್ರಖ್ಯಾತನೂ ಹಾಗೂ ಪರಮಪೂಜ್ಯನೂ ಇದ್ದದ್ದು ನಿರ್ವಿವಾದವಾಗಿ ಸಿದ್ಧವಾಗುತ್ತವೆ.

ಸುಮಾರು ಕ್ರಿ. ಶ. ದ ಪೂರ್ವದಲ್ಲಿ ೧ ನೇಯ ಶತಮಾನದಿಂದ೧ ನೇ ವಂಶವು, ಕ್ರಿ. ಶ. ೯೦೦ ರಿಂದ ೨ ನೇ ವಂಶವು, ಹಾಗು ಕ್ರಿ. ಶ. ೧೧೧೭ ರಲ್ಲಿ ೩ ನೇ ವಂಶವು, ಹೀಗೆ ಚೋಳರಾಜರ ೩ ವಂಶಗಳು ಆಗಿಹೋಗಿವೆ. ೧ ನೇ ವಂಶದಲ್ಲಿ ಕರಿಕಾಲ ಚೋಳನೂ, ೨ ನೇ ವಂಶದಲ್ಲಿ ಪರಾಂತಕನೂ (ಕ್ರಿ. ಶ. ೯೦೦-೯೪೦) ಮತ್ತು ೩ ನೇ ವಂಶದಲ್ಲಿ ಚಾಲುಕ್ಯ ಕಲೋತ್ತುಂಗ ಅಥವಾ ರಾಜೇಂದ್ರ ಚೋಳನೂ (ಕ್ರಿ ಶ. ೧೦೭೦ ರಿಂದ ೧೧೧೭) ಬಹಳೀ ಪ್ರಖ್ಯಾತರಾಗಿ ಹೋಗಿರುವರು. ಇವರೊಳಗಿನ ಕರಿಕಾಲ ಚೋಳನೆಂಬ ಅರಸನನ್ನು ಶ್ರೀ ಪ್ರಭುದೇವನು ಉದ್ಧಾರ ಮಾಡಿದ್ದು ಪುರಾಣಪ್ರಸಿದ್ಧವದೆ ಇದನ್ನೇ ಚೆನ್ನ ಶ್ರೀ ಪ್ರಭು (ಕ್ರಿ. ಶ. ೧೪೩೦) ಕವಿಯು ತನ್ನ ಪದ್ಯದಲ್ಲಿ ಹೇಳಿದ್ದು ಶ್ರೀ ಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೇ ಪುಷ್ಪದ ೭೪ ನೇ ಪುಟದೊಳಗಿನ ಒಂದನೇ ಪದ್ಯದ ೩ ನೇ ನುಡಿ ಪ್ರಾರಂಭಕ್ಕೆ "ಕರಿಕಾಲ ಚೋಳಗೆ ಒಲಿದ ದೇವನು" ಎಂದು ಉಲ್ಲೇಖಿಸಿದೆ. ಆದರೆ ಈ ಕರಿಕಾಲ ಚೋಳನು ೨ ನೇ ಇಲ್ಲವೆ ೩ ನೇ ವಂಶದೊಳಗಿನ ಪುರುಷನೆಂದು ತಿಳಿಯಲು ಕಿಂಚಿತ್ತಾದರೂ ಮಾರ್ಗ ವಿಲ್ಲವು. ೨ ನೇ ೩ ನೇ ವಂಶದೊಳಗಿನ ಕರಿಕಾಲ ಚೋಳನೆಂಬ ರಾಜನ ಸಂಗತಿಯು ಈ ವರೆಗೂ ಉಪಲಬ್ಧವಿಲ್ಲವು. ಅಂದಮೇಲೆ ಅವನು ಒಂದನೇ ವಂಶದವನೇ ಎಂದು ತಿಳಿದರೆ ಪ್ರಭುದೇವನ ಕಾಲವು. ಕ್ರಿ ಶ. ಕ್ಕಿಂತಲೂ ಹಿಂದೆ ಹೋಗುತ್ತದೆ. ಇರಲಿ. ಇದರಮೇಲಿಂದ ಪ್ರಭುದೇವನು ಕ್ರಿ. ಶ. ದ ಪೂರ್ವದಲ್ಲಿ ೧ನೇ ಶತಮಾನದಲ್ಲಿ ಇದ್ದದ್ದು ನಿಸ್ಸಂದೇಹ ಸಿದ್ಧವಾಗುತ್ತದೆ.

ಹಠಯೋಗ ಪ್ರದೀಪಿಕಾ (ಕಲ್ಕತ್ತಾ ಎಡಿಸನ್) ಎಂಬ ಒಂದು ಸ್ವತಂತ್ರ ಗ್ರಂಥವು ಅಚ್ಚಾಗಿದೆ. ಅದರ ಕರ್ತೃವು ಕಲಕತ್ತೆಯ ಕಡೆಯವನಿದ್ದು ಆ ಗ್ರಂಥವು ಇತ್ತೀಚಿಗೆ ಕಲ್ಕತ್ತೆಯಲ್ಲಿಯೇ ಅಚ್ಚಾಗಿದೆ. ಆದರಲ್ಲಿ "ಅಲ್ಲಮಃ ಪ್ರಭುದೇವಶ್ಚ ಘೋಡಾ ಚೋ್ಯಲಿಚ ಟಿಂಟಿಣೀ। ಭಾನುಕೀ ನಾದ ದೇವಶ್ಚ ಖಂಡಃ ಕಾಪಾಲಕಸ್ತಥಾ॥" ಈ ಶ್ಲೋಕವದೆ. ಈ ಪುಸ್ತಕದ ಕಾಲನಿರ್ಣಯವು ಮೊದಲಿಗೆ ಆಗಬೇಕು. ಇದೂ ಅಲ್ಲದೆ ಈ ಗ್ರಂಥದಲ್ಲಿ ಹೇಳಲ್ಪಟ್ಟಂಥ ಯೋಗಿಗಳ ಹೆಸರುಗಳ ಜೊತೆಗೆ ಶ್ರೀ ಅಲ್ಲಮ ಪ್ರಭುವಿನ ಹೆಸರಾದರೂ ಕಂಡುಬರುತ್ತದೆ. ಅಂದಮೇಲೆ ಪ್ರಭುದೇವನು ಆ ಯೋಗಿಗಳ ಸಮಕಾಲಿಕನು ಇಲ್ಲವೆ ಅವರಿಗಿಂತಲೂ

ಪೂರ್ವಿಕನು ಇದ್ದಿರಬಹುದು. ಇದು ನಿಶ್ಚಯಾತ್ಮಕವಾಗಿ ಹೇಳಲಿಕ್ಕೆ ಬಾರದಿದ್ದರೂ ಆ ಕಾಲಕ್ಕೆ ಆಸೇತುಹಿಮಾಲಯದ ವರೆಗೂ ಪ್ರಭು ದೇವನ ಸಂಚಾರವೂ ಸರ್ವರ ಮುಖದಲ್ಲಿ ಆತನ ದಿವ್ಯ ನಾಮಸ್ಮರಣವೂ ಇದ್ದಿರಬಹುದೆಂದು ಅನುಮಾನವು ಹೊರಡುತ್ತದೆ.

ವೇದವ್ಯಾಸಕೃತ ಭವಿಷ್ಯೋತ್ತರ ಪುರಾಣಾಂತರ್ಗತ ಪ್ರಭುಲಿಂಗ ಲೀಲೆಯೆಂಬುದೊಂದು ೨೫ ಅಧ್ಯಾಯವುಳ್ಳ ಸಂಸ್ಕೃತ ಪುರಾಣವದೆ. ಅದ ರಲ್ಲಿ ಅಲ್ಲಮಪ್ರಭುದೇವನ ಸಂಪೂರ್ಣ ಚರಿತ್ರೆಯು ಹೇಳಿದೆ. ಈ ಗ್ರಂಥ ದೊಳಗಿನ ಭಾಷಾಸರಣಿಯು ಯಾವ ಕಾಲದೊಳಗಿನ ಭಾಷಾ ಶೈಲಿಗೆ ಹೋಲುತ್ತದೆಂಬುದನ್ನು ಮೊದಲು ಚನ್ನಾಗಿ ವಿಚಾರಿಸಿದರೆ ಭುದೇವನ ಕಾಲವನ್ನು ತಿಳಿಯಲು ಬಹಳೇ ಸುಲಭವಾಗುವದು.

ನಾರಾಯಣೋಪನಿಷತ್ತಿನಲ್ಲಿ "ಪರಾತ್ಪರಂ ಯನ್ಮಹತೋ ಮಹಾಂತಂ ಪರಾತ್ಪರಂ । ಪರಾದವ್ಯಕ್ತಾತ್ಪರಂ। ಯಜ್ಜಂಗಮ ಲಿಂಗಕಂ।" ಎಂದು ವರ್ಣನೆಯದೆ; ಎಂದರೆ ಜಂಗಮಲಿಂಗವು ಶ್ರೇಷ್ಠನಾದ ವಸ್ತು ವಿಗಿಂತಲೂ ಶ್ರೇಷ್ಠವೂ ಮಹತ್ತಿನಕಿಂತಲೂ ಮಹತ್ತಾದದ್ದು ಇದ್ದು ಅವ್ಯ ಕ್ತಕ್ಕಿಂತಲೂ ಶ್ರೇಷ್ಠವಿರುವದು. ಆದರೆ ಮಾರ್ಸಡೇನಕೃತ ಹಿಂದುಸ್ಥಾನ ಇತಿಹಾಸ ಅಧ್ಯಾಯ ೩ ನೇದರಲ್ಲಿ "ಕ್ರಿ. ಶ. ದ ಪೂರ್ವದಲ್ಲಿ ೧೦೦೦-೩೦೦ ವರ್ಷಗಳ ವರೆಗೆ ಉಪನಿಷತ್ ಕಾಲವೆಂದು ಆಧುನಿಕ ಪಾಶ್ಚಾತ್ಯ ಹಾಗು ಪೌರಾತ್ಯ ಪಂಡಿತರ ಅಭಿಪ್ರಾಯವದೆ." ಎಂದು ಹೇಳಿರುವದು. ಜಂಗ ಮಲಿಂಗನ ಆದಿಗುರುವು ಶ್ರೀ ಪ್ರಭುದೇವನೆಂದು ಸಿದ್ಧವಾಗಿರುವದಷ್ಟೇ. ಆದುದರಿಂದ "ಮುಚ್ಛಿಖಾಚಕ್ರ ಮಧ್ಯಸ್ಥಂ। ಚರಲಿಂಗಂ ನಿರಂಜನಂ। ಕೃತ್ವಾಬಹಿರ್ಗತಂ" ಮುಂತಾದ ಅಚಿಂತ್ಯಾಗಮದ ೧೦ ನೇ ಪಟಲದೊ ಳಗಿನ ಆಧಾರಗಳ ಮೇಲಿಂದ ಈ ಚರಲಿಂಗ ಕಾಲವನ್ನೇ ನಿರ್ಣಯಿ ಸುವದು. ಅಸಾಧ್ಯವೆಂದು ಕಂಡುಬರುತ್ತದೆ.

ಇದರಂತೆ ಸುಪ್ರಭೇದಾಗಮದಲ್ಲಿ "ಮದೂರ್ಧ್ವ ಮುಖಸಂಜಾತೋ ನಿರಂಜನ ಗಣೇಶ್ವರಃ। ಶೂನ್ಯಪೀಠಾಧಿಕಾರೀಚ। ಪಂಚಾಚಾರ್ಯ ಗುರುರ್ವರಃ॥" ಎಂದು ವರ್ಣನೆಯದೆ. ಎಂದರೆ ನನ್ನ ಊರ್ಧ್ವಮುಖ ದಿಂದ ಉತ್ಪನ್ನನಾದ ನಿರಂಜನನೆಂಬ ಗಣಾಧ್ಯಕ್ಷನು ಶೂನ್ಯಪೀಠದ ಅಧಿ ಕಾರಿಯಾಗಿ ಪಂಚಾಚಾರ್ಯರಿಗೆ ಶ್ರೇಷ್ಠ ಗುರುವಾಗಿ ಇದ್ದಿರುವನು.

ಮತ್ತು ಪಾರಮೇಶ್ವರಾಗಮದಲ್ಲಿ "ಇಷ್ಟೋತ್ಪತ್ತಿರ್ಗುರೋಶ್ಚೈವ ಗುರೂತ್ಪತ್ತಿಸ್ತು ಜಂಗಮಾತ್। ಜಂಗಮೋತ್ಪತ್ತಿಶೂನ್ಯತ್ವಾತ್। ತಚ್ಛೂನ್ಯಂ ಚರಲಿಂಗಕಂ ॥" ಎಂದಿರುವದು; ಎಂದರೆ ಇಷ್ಟಲಿಂಗದ ಉತ್ಪತ್ತಿಯು ಗುರುವಿನಿಂದಲೂ ಗುರುವಿನ ಉತ್ಪತ್ತಿಯು ಜಂಗಮನಿಂದಲೂ ಹಾಗು ಜಂಗಮನ ಉತ್ಪತ್ತಿಯು ಶೂನ್ಯತ್ವದಿಂದಲೂ ಇದ್ದು ಆ ಶೂನ್ಯವೇ ಚರಲಿಂಗವು.

ಸ್ವಾಯಂಭು ಆಗಮದ ೮ ನೆಯ ಪಟಲದಲ್ಲಿ. "ಮಮಜಂಗಮ ಲಿಂಗೇನ। ಸಾಕಂ ಪಂಚಗಣಾಧಿಪಾಃ। ಆವಿರ್ಭೂತಾ ಮಹೀ ಭಾಗೇ। ಮದನುಜ್ಞಾನಸಾರತಃ"॥ ಎಂದು ಹೇಳಿದೆ. ಅದರಂತೆ ಶಾಕಟಾಯನ ದಲ್ಲಿ "ಶಿಷ್ಯಪ್ರಾಣೋ ಗುರೋರ್ದೇವಿ। ಗುರುಪ್ರಾಣಸ್ತು ಜಂಗಮಃ। ಜಂಗಮಸ್ಯ ಪ್ರಸಾದಃ ಸ್ಯಾತ್। ಸರ್ವಶಾಸ್ತ್ರೇಷು ಗೀಯತೆ"॥ ಎಂದು ಹೇಳಿದೆ; ಎಂದರೆ ಗುರುವು ಶಿಷ್ಯನ ಪ್ರಾಣವು ಮತ್ತು ಜಂಗಮನು ಗುರುವಿನ ಪ್ರಾಣವು ಆಗಿ ಇರುವದರಿಂದ ಜಂಗಮನ ಪ್ರಸಾದವನ್ನು ಸರ್ವರೂ ಸೇವಿಸಬೇಕು ಎಂದು ಸರ್ವ ಶಾಸ್ತ್ರಗಳಲ್ಲಿ ಹೇಳಿದೆ.

ಸಿದ್ಧಾಂತ ಶಿಖಾಮಣಿಯಲ್ಲಿ "ಮದೀಯ ಲಿಂಗಸಂಭೂತಂ। ಮದ್ಭಕ್ತ ಪರಿಪಾಲಕಂ॥ ವಿಸ್ಮಿತಾ ಮಾನುಷಾಃ ಸರ್ವೇ। ತ್ವಾಮ್ ಭಜಂತು ಮದಾಜ್ಞಯಾ"॥ ಎಂದು ಹೇಳಿದೆ. ಏವಂಚ ಸೂಕ್ಷ್ಮಾಗಮ, ಪಾರಮೇಶ್ವರಾಗಮ, ಸುಪ್ರಭೇದಾಗಮ, ಅಚಿಂತ್ಯಾಗಮ, ಯೋಗಜಾಗಮ, ವೀರಾಗಮ, ಸ್ವಾಯಂಭು ಆಗಮ, ಉತ್ತರವಾತುಲತಂತ್ರ, ಪಾರಮೇಶ್ವರ ತಂತ್ರ, ಸನ್ಯಾಸೋಪನಿಷತ್, ನಾರಾಯಣೋಪನಿಷತ್, ಛಾಂದೋಗ್ಯಸ್ಮೃತಿ, ಅಮೃತಬಿಂದುಸ್ಮೃತಿ, ಶಾಕಟಾಯನ, ಶಂಕರ ಸಂಹಿತಾ, ಗೋರಕ್ಷಸಂಹಿತಾ, ಶಾಂಕರಭಾಷ್ಯ, ಶ್ರೀಕರಭಾಷ್ಯ, ಕ್ರಿಯಾಸಾರ, ವ್ಯಾಸೋಕ್ತ ಭವಿಷ್ಯತ್‌ಪುರಾಣಾಂತರ್ಗತ ಪ್ರಭುಲಿಂಗಲೀಲಾ, ಸಿದ್ಧಾಂತಶಿಖಾಮಣಿ, ಅನಾದಿ ವೀರಶೈವ ಸಾರಸಂಗ್ರಹ, ವೀರಶೈವಾಚಾರ ಪ್ರದೀಪಿಕಾ, ಪರಮಲಘು ಮಂಜೂಷಾ, ಕಾವ್ಯಪ್ರಕಾಶ, ವಿಶ್ವಗುಣಾದರ್ಶ ಚಂಪು, ವಿವೇಕಚಿಂತಾಮಣಿ, ವಚನಶಾಸ್ತ್ರ ಮುಂತಾದ ಪ್ರಮಾಣ ಭೂತ ಗ್ರಂಥಗಳಲ್ಲಿ ವಿಸ್ತಾರಪೂರ್ವಕವಾಗಿ ವರ್ಣಿಸಲ್ಪಟ್ಟಂಥ ಶ್ರೀ ಪ್ರಭುಸಾಂಪ್ರದಾಯಕ ನಿರಾಭಾರಿ ವಿರಕ್ತಜನರಿಗೆ "ಆದೌ ತಚ್ಚರಲಿಂಗಂ ತು। ನಿರಂಜನ ಇತಿಸ್ಮೃತಮ್। ತ್ರೀಣಾಯಾಮ್ ದೈವತಂಚೈ

ತತ್। ನಿರ್ಮಾಯ ಇತಿ ಕೀರ್ತಿತಮ್। ದ್ವಾಪಾರೇ ನಿಷ್ಕಲಂಚೇತಿ। ವಿಸ್ಮೃತಂ ಚ ತದೇವ ಹಿ। ಕಲೌಪ್ರಭುರಿತಿಖ್ಯಾತಮ್। ತಸ್ಯ ನಾಮಾನಿ ವೈಕ್ರಮಾತ್॥" ಎಂದರೆ ಈ ಚರಲಿಂಗಕ್ಕೆ ಕೃತಯುಗದಲ್ಲಿ ನಿರಂಜನ ವೆಂತಲೂ, ತ್ರೇತಾಯುಗದಲ್ಲಿ ನಿರ್ಮಾಯನೆಂತಲೂ, ದ್ವಾಪಾರ ಯುಗ ದಲ್ಲಿ ನಿಷ್ಕಲನೆಂತಲೂ ಕಲಿಯುಗದಲ್ಲಿ ಪ್ರಭುವೆಂತಲೂ ಹೀಗೆ ಕ್ರಮ ವಾಗಿ ಹೆಸರುಗಳು ಬಂದಿವೆ ಎಂಬ ಈ ಉತ್ತರವಾತುಲತಂತ್ರದ ಆಧಾ ರದಿಂದ ಯುಗ ಯುಗಾಂತರಗಳಲ್ಲಿ ಗುರುರೂಪದಿಂದ ಅವತರಿಸಿದಂಥ ಶ್ರೀ ಪ್ರಭುದೇವನ ಕಾಲವನ್ನು ನಿಶ್ಚೈಸುವದು ನಾವು ಹಿಂದೆ ಹೇಳಿ ದಂತೆ ಬಹಳೇ ದುಸ್ತರವಾಗಿರುವದು.

ಮೈಸೂರ ಆರ್ಕಿಯಾಲಾಜಿಕಲ್ ಖಾತೆಯ ಡಾಯರೆಕ್ಟರರಾದ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ ಬಹಾದ್ದೂರ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಕ್ರಿ. ಶ. ೧೧೬೦ನೇ ಸುಮಾರಿನಲ್ಲಿ ಶ್ರೀ ಪ್ರಭುದೇವನು ಇದ್ದನೆಂದು ನಿಶ್ಚೈ ಯಿಸಿರುವರು. ಅದೇ ಪ್ರಭುದೇವನು ವೇದಾಗಮೋಪನಿಷತ್ತುಗಳ ಕಾಲದಲ್ಲಿಯೂ ಇದ್ದನೆಂದು ಹೇಳಿದರೆ ಆಧುನಿಕ ಪಾಶ್ಚಾತ್ಯ ಹಾಗು ಪೌರ್ವಾತ್ಯ ಪಂಡಿತರಿಗೆ ಅಸಂಭವನೀಯವೆಂದು ಕಂಡು ಬರುತ್ತದೆ. ಅದು ದರಿಂದಲೇ ಮಹಾರಾಷ್ಟ್ರ ಜ್ಞಾನಕೋಶಕಾರರಾದ ಡಾಕ್ಟರ ಕೇತಕರ ಇವರಾದರೂ ಕೂಡ ತಮ್ಮ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೬-೭ (ಅ) ಅಕ್ಷರ, ಪುಟ ೪೯ಳ ರಲ್ಲಿ "ಅಲ್ಲಮಪ್ರಭು ಇವನಿಗೆ ಪ್ರಭುಲಿಂಗ ಎಂದೂ ಅನ್ನುವರು. ಇವನು ಆರಾಧ್ಯ ಜಾತಿಯ ತೆಲಗು ಬ್ರಾಹ್ಮಣ ನಿದ್ದನೆಂದು ತಿಳುವಳಿಕೆಯದೆ. ಆದರೆ ಇವನು ಐತಿಹಾಸಿಕ ಪುರುಷನಿ ದ್ದನೆಂಬುವದರ ವಿಷಯವಾಗಿ ನಿಶ್ಚಿತವಿಲ್ಲವು. ಲಿಂಗಾಯತ ಧರ್ಮದ ಸಂಸ್ಥಾಪಕನಾದ ಬಸವನಿಗಿಂತಲೂ ಮುಂಚಿತವಾಗಿ ಈ ಪುರುಷನಿದ್ದ ನೆಂದು ವೀರಶೈವರು ತಿಳಿಯುತ್ತಾರೆ. ಪ್ರಭುಲಿಂಗಲೀಲೆಯೆಂಬುದೊಂದು ಕನ್ನಡ ಭಾಷೆಯಲ್ಲಿ ಗ್ರಂಥವಿದ್ದು ಆದರಲ್ಲಿ ಈತನ ವರ್ಣನೆಯು ಕಂಡು ಬರುತ್ತದೆ. ಈ ಕಾವ್ಯದಲ್ಲಿ ಪ್ರಭುಲಿಂಗನಿಗೆ ಗಣಪತಿಯು ಅವತಾರ ವೆಂದು ಹೇಳಿದೆ, ಹಾಗು ಪ್ರತ್ಯಕ್ಷ ಪಾರ್ವತಿಯು ಇವನನ್ನು ಪರೀಕ್ಷಿ ಸುವ ಕುರಿತು ತನ್ನ ಅಂಶದಿಂದ ಒಬ್ಬ ಬನವಾಸಿ ರಾಜಕನ್ಯೆಯನ್ನು ಉತ್ಪನ್ನ ಮಾಡಿದ ಕಥೆಯನ್ನು ಹೇಳಿದೆ. ಈತನು ಅತ್ಯಂತ ಪವಿತ್ರ ವರ್ತನವುಳ್ಳವನೂ, ಶಾಂತನೂ, ಬಹಳ ಪ್ರವಾಸ ಮಾಡಿದವನೂ,

ಮತ್ತು ಅಲ್ಲಲ್ಲಿಗೆ ಅನೇಕ ಚಮತ್ಕಾರಗಳನ್ನು ತೋರಿಸಿದ್ದರಿಂದ ಜನರಲ್ಲಿ ಪ್ರಸಿದ್ಧಿಯನ್ನು ಪಡೆದಿರುವನೆ"ಂದೂ ಹೇಳಿದೆ.

"ಕೊಲ್ಹಾಪುರ ಸಂಸ್ಥಾನದೊಳಗಿನ ಅಳತೆಯೆಂಬ ಗ್ರಾಮದಲ್ಲಿ ಅಲ್ಲಮಪ್ರಭುದೇವನ ದೇವಾಲಯವಿದ್ದದ್ದು ಅದು ಆತನದಾಗಿದೆ. ಔರಂಗಜೇಬನ ಸ್ಮರಣಾರ್ಥವಾಗಿ ದೇವಿಗೆ ಈ ಹೆಸರು ಕೊಟ್ಟಿದೆ" ಎಂದು ಒಂದು ಕಡೆಯೂ, ಮತ್ತು ಎರಡನೇ ಕಡೆಯಲ್ಲಿ ಅದೇ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೧೦-೧೧, (ಕ) ಅಕ್ಷರ ಪುಟ ೩೦೧ ರಲ್ಲಿ "ಪ್ರಭುಲಿಂಗಲೀಲಾ ಗ್ರಂಥವು ಷಟ್ಪದಿಯಲ್ಲಿ ಅದೆ. ಅದರ ನಾಯಕನು ಪ್ರಭುಲಿಂಗ ಅಥವಾ ಅಲ್ಲಮ ಪ್ರಭು ಇದ್ದು ಆತನು ಬಸವನಿಗೆ ಸಹಕಾರಿಯಾಗಿದ್ದನು. ಈ ಗ್ರಂಥದಲ್ಲಿ ಪ್ರಭುಲಿಂಗನಿಗೆ ಗಣಪತಿಯ ಅವತಾರವೆಂದು ಹೇಳಿದೆ. ಒಂದು ವೇಳೆ ಪಾರ್ವತಿಯು ಸಂಸಾರ ವಿರಕ್ತಿಯ ಪರೀಕ್ಷೆ ಮಾಡುವ ಕುರಿತು ಬನವಾಸಿನಾಮಕ ಒಬ್ಬ ರಾಜಕನ್ಯೆಯಲ್ಲಿ ಪ್ರಭುಲಿಂಗನಿಗೆ ಮೋಹ ಹುಟ್ಟುವಂತೆ ತನ್ನ ಕೆಲವಂಶವನ್ನು ಹಾಕಿದಳೆಂದು ಒಂದು ಕಥೆಯದೆ" ಎಂದು ವರ್ಣನವದೆ. ಈ ಮೇಲಿನ ಎರಡೂ ವರ್ಣನೆಗಳನ್ನು ನೋಡಲಾಗಿ ಅಲ್ಲಮಪ್ರಭುವಿನ ವಿಷಯವಾಗಿ ಡಾಕ್ಟರ ಕೇತಕರ ಇವರು ಕೊಟ್ಟಂಥ ಅಭಿಪ್ರಾಯವು ಕೇವಲ ಚಾಮರಸಕೃತ ಪ್ರಭುಲಿಂಗಲೀಲೆಯ ಆಧಾರದ ಮೇಲಿಂದ ಕೊಟ್ಟಂತೆ ವಾಚಕರಿಗೆ ಸಹಜವಾಗಿ ಕಂಡು ಬರುತ್ತದೆ. ಆದರೆ ಆ ಅಭಿಪ್ರಾಯವನ್ನು ಕೂಡ ಚಾಮರಸನ ಪ್ರಭುಲಿಂಗಲೀಲೆಯನ್ನು ಚನ್ನಾಗಿ ಓದಿ ಕೊಟ್ಟಂತೆ ಕಾಣುವದಿಲ್ಲವು. ಈ ಅಭಿಪ್ರಾಯದಲ್ಲಿಯೂ ಕೂಡ ಒಂದಕ್ಕೊಂದು ಮೇಳವಿಲ್ಲವು. ಒಮ್ಮೆ ಅವರು ಅಲ್ಲಮ ಪ್ರಭುದೇವನಿಗೆ ಗಣಪತಿಯ ಅವತಾರನೆಂದು ತಿಳಿದಿರುವರು, ಎಂದರೆ ಸರಳಶುಂಡ, ವಕ್ರತುಂಡ, ಶಿವಕುಮಾರ, ಗಜಾನನ ಈತನೇ ಅವನೆಂದು ಅವರ ತಿಳುವಳಿಕೆಯಾಗಿದೆ. ಆದರೆ ವಾಸ್ತವಿಕವಾಗಿ ಅದು ಹಾಗಿರದೆ ಆ ಲಂಬೋದರ ಏಕದಂತನ ತಾಯಿತಂದೆಗಳಾದ ಪಾರ್ವತೀ ಪರಮೇಶ್ವರರ ಲಗ್ನದಲ್ಲಿ ಯಾವ ಗಣಪತಿಯು ಅಂದರೆ ಗಣಾನಾಂ ಪತಿಃ। ಎಂದರೆ ಪ್ರಮಥಗಣಗಳ ಒಡೆಯನಾದ ಯಾವ ಪರಶಿವನನ್ನು ಪೂಜಿಸಿರುವರೋ ಅದೇ ಸಾಕ್ಷಾತ್ ಶಿವಸ್ವರೂಪನಾದ ಈ ಪ್ರಭುದೇವನಿರುವನು. ಮತ್ತೊಂದು ಕಡೆಯಲ್ಲಿ ಅಲ್ಲಮ ಪ್ರಭುದೇವನು ಆರಾಧ್ಯಬ್ರಾಹ್ಮಣನಿದ್ದು ಲಿಂಗಾ

ಯತ ಧರ್ಮದ ಸಂಸ್ಥಾಪಕನಾದ ಬಸವನಿಗಿಂತಲೂ ಮುಂಚೆ ಇದ್ದ ನೆಂದು ಹೇಳಿದೆ. ಬೇರೊಂದು ಕಡೆ ಇವನು ಬಸವನ ಸಹಕಾರಿ ಯೆಂದು ಹೇಳಿದೆ. ಒಂದು ಕಡೆ ಅಲ್ಲಮಪ್ರಭುದೇವನು ಐತಿಹಾಸಿಕ ಪುರು ಷನಿದ್ದ ಬಗ್ಗೆ ನಿಶ್ಚಯವಿಲ್ಲವೆಂದೂ ಹಾಗು ಬೇರೊಂದು ಕಡೆ (ಮಹಾರಾಷ್ಟ್ರ ಜ್ಞಾನಕೋಶ, ಭಾಗ ೧೨ ಇ ಪುಟ ೨೦-೨೧) ಶ್ರೀ ಬಸವನು ಚನ್ನಬಸವಗೆ ಅಲ್ಲಮ ಪ್ರಭುವಿನ ದರ್ಶನವನ್ನು ಮಾಡಿಸುವೆನೆಂದು ಆಶ್ವಾಸನ ಕೊಟ್ಟನು. ಮತ್ತು ಕಲ್ಯಾಣದಲ್ಲಿ ಬಸವ ಚನ್ನಬಸವರುಗಳಿಗೆ ಭೆಟ್ಟಿಯಾಗುವ ಕುರಿತು ಸಿದ್ಧರಾಮನೊಡನೆ ಸೊಲ್ಲಾಪುರದಿಂದ ಪ್ರಭುದೇವನು ಹೊರಟನು. ದಾರಿಯಲ್ಲಿ ಪ್ರದೇಶಗಳ ಶೋಭೆಯನ್ನು ಕಂಡು ಇವರು ಸಂತುಷ್ಟರಾ ದರು. ಕಲ್ಯಾಣದ ಹೊರಗಿನ ಉಪವನದ ಶೋಭೆಯನ್ನು ನೋಡುತ್ತ ಅರಮನೆಯ ಕಡೆಗೆ ಹೊರಟರು. ತದನಂತರ ಶಾಂತಿಯ ಪರಮಸ್ಥಾ ನವಾದ ಬಸವಪ್ರಧಾನನ ಅರಮನೆಯ ಎದುರಿಗೆ ಬರಲಾಗಿ ಬಸವನು ತನ್ನ ಸೇವಕರಿಂದ ಅವರಿಗೆ ಒಳಗೆ ಬರಹೇಳಿದನು. ಆದರೆ ಈ ಕೂಲಿಯ ಆದರವನ್ನು ಕಂಡು ಪ್ರಭುದೇವನು ಆಮಂತ್ರಣವನ್ನು ನಾಕರಿಸಿದನು. ಅಷ್ಟರಲ್ಲಿ ಚನ್ನಬಸವನು ಇದರ ಪರಿಣಾಮವು ಅತ್ಯಂತ ಅನಿಷ್ಟವಾಗ ಬಹುದೆಂದು ತಿಳಿದು ಪೂಜ್ಯ ಅತಿಥಿಗಳಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕಾರಮಾಡಿದನು. ಪ್ರಭುದೇವನು ಸಿದ್ಧರಾಮನೊಡನೆ ಚನ್ನಬಸವನ ಅರಮನೆಯ ಬಹಿರ್ಭಾಗದಲ್ಲಿ ಕುಳಿತನು. ಯಾಕಂದರೆ ದೀಕ್ಷೆ ಇಲ್ಲದ ವರಿಗೆ ಒಳಗೆ ಪ್ರವೇಶವಿಲ್ಲನೆಂದು ಚನ್ನಬಸವನ ಕಟ್ಟಪ್ಪಣೆ ಇತ್ತು" ಎಂದು ಹೇಳಿದೆ. ಮತ್ತು ಅದೇ ಜ್ಞಾನಕೋಶ, ಭಾಗ ೧೨-೧೩, (ಚ) ಅಕ್ಷರ, ಪುಟ ೨೩ ರಲ್ಲಿ "ಆ ಮೇಲೆ ಪ್ರಭುದೇವನು ಚನ್ನಬಸವನ ಅಪ್ಪ ಣೆಯನ್ನು ಕೇಳಿದನು. ಅನಂತರ ಸಿದ್ಧರಾಮನು ಭವಿಷ್ಯತ್ಕಾಲದ ಬಗ್ಗೆ ಪ್ರಶ್ನೆ ಮಾಡಿದ್ದರಿಂದ ಚನ್ನಬಸವನು ಹೇಳತೊಡಗಿದನು. ಪ್ರಭುದೇವನು ಸಂಚರಿಸುತ್ತ ಕಲ್ಯಾಣಕ್ಕೆ ಬಂದು ಬಸವನ ಯಜ್ಞಕುಂಡದ ಮೇಲೆ ಆರೋಹಣ ಮಾಡುವನು. ಅದರಿಂದ ಸರ್ವ ಜಂಗಮರು ಸಿಟ್ಟಾಗು ವರು. ಮುಂದೆ ಆ ಪ್ರಭುದೇವನೊಬ್ಬನೇ ಯಾವತ್ತೂ ಅನ್ನವನ್ನು ತಿಂದು ಯಾವತ್ತೂ ಜಂಗಮರಿಗೆ ಸಂತುಷ್ಟ ಮಾಡುವನು." ಎಂದು ವರ್ಣನವದೆ. ಈ ಯಾವತ್ತೂ ವಿವೇಚನೆಗಳ ಮೇಲಿಂದ ಅಲ್ಲಮಪ್ರ ಭುದೇವನು ಬಸವನ ಒಬ್ಬ ಸಹಕಾರಿಯಾಗಿದ್ದನೆಂದು ಮಹಾರಾಷ್ಟ್ರ

ಜ್ಞಾನಕೋಶಕಾರರ ಅಂಬೋಣವದೆ. ಒಮ್ಮೆ ಪಾರ್ವತಿಯು ಪರೀಕ್ಷೆಯ ದೆಶೆಯಿಂದ ಬನವಾಸಿ ರಾಜಕನ್ಯೆಯನ್ನು ಕಳಿಸಿದಳೆಂದೂ ಮತ್ತೊಂದು ಕಡೆ ಬನವಾಸಿ ನಾಮಕ ರಾಜಕನ್ಯೆಯನ್ನು ಕಳಿಸಿದಳೆಂದೂ ಹೇಳಿದೆ. ಬನವಾಸಿ ಇದು ಮನುಷ್ಯರ ಹೆಸರು ಇರದೆ ಒಂದು ಪ್ರಾಂತದ ಹೆಸರು ಅದೆ. ಏವಂಚ ಈ ಸಂಗತಿಯನ್ನು ಹೇಳುವಾಗ್ಗೆ ಡಾಕ್ಟರ ಕೇತಕರ ಇವರು ಎರಡನೇಯವರ ಬೊಗಶೆಯಿಂದ ನೀರು ಕುಡಿದಂತೆ ಆಗಿದೆ. ಹೀಗೆ ಮಾಡದೆ ಅವರು ಈ ಸಂಗತಿಯನ್ನು ಚನ್ನಾಗಿ ವಿಚಾರ ಮಾಡಿ ಬರೆಯಬೇಕಾಗಿತ್ತು. ಹಾಗೇನೂ ಮಾಡಿದಂತೆ ಕಂಡುಬರುವದಿಲ್ಲವು. ಆದುದರಿಂದ ಕೆಳಗಿನ ವಿಚಾರಗಳನ್ನು ಸೂಕ್ಷ್ಮ ರೀತಿಯಿಂದ ವಿಚಾರ ಮಾಡಿದರೆ ವಾಚಕರ ಸಂಶಯಗಳು ತನ್ನಷ್ಟಕ್ಕೆ ತಾವೇ ದೂರವಾಗಿ ನಮ್ಮ ಅಭಿಪ್ರಾಯದ ಸತ್ಯತೆಯು ಗೊತ್ತಾಗಬಹುದು. ಆ ವಿಚಾರಗಳು ಕೆಳಗಿನಂತೆಃ—

ಜಯಕರ್ನಾಟಕ ವರ್ಷ ೨, ಅಂಕ ೮, ಜೇಷ್ಠ ಶುದ್ಧ ೧೫, ಶಾಲಿವಾಹನ ಶಕೆ ೧೮೪೬ ಪುಟ ೬೨೪ ರಲ್ಲಿ "ಶತಾಯುರ್ವೈ ಪುರುಷಃ" (ವೇದವಾಕ್ಯ) ಈ ವಾಕ್ಯವನ್ನು ನೋಡಿದರೆ ಮನುಷ್ಯನ ಜನ್ಮಸಿದ್ಧ ಆಯುಷ್ಯವು ೧೦೦ ವರ್ಷದಿದ್ದು ಸದಾಚಾರದಿಂದ ಅದಕ್ಕಿಂತಲೂ ಹೆಚ್ಚು ಮತ್ತು ದುರಾಚಾರದಿಂದ ಅದಕ್ಕಿಂತಲೂ ಕಡಿಮೆಯೂ ಮಾಡಲಿಕ್ಕೆ ಬರುತ್ತದೆ. ಅದು ಹೇಗಂದರೆ, ಮಹಾಭಾರತ ಯುದ್ಧದ ಕಾಲದಲ್ಲಿ ಜೀವಂತವಿದ್ದ ವೀರರ ವಯೋಮಾನವು ಭೀಷ್ಮಾಚಾರ್ಯ ೧೭೦ ವರ್ಷ, ಧೃತರಾಷ್ಟ್ರ ೧೫೦, ವ್ಯಾಸಮಹರ್ಷಿ ೧೫೫, ಶ್ರೀಕೃಷ್ಣ ೧೨೫, ವಸುದೇವ ೧೫೦, ದೇವಕಿ ೧೪೦, ಈ ಪ್ರಕಾರವಾಗಿ ಇತ್ತು. ಆ ಕಾಲಕ್ಕೆ ಈ ಯಾವತ್ತರು ಕೇವಲ ಜೀವಧಾರಿಗಳಾಗಿರದೆ ಅಮರಣ ಬಹಳೇ ಸಶಕ್ತರಾಗಿದ್ದರು. ಧೃತರಾಷ್ಟ್ರನು ತನ್ನ ವಯಸ್ಸಿನ ೧೮೬ ನೇ ವರ್ಷದಲ್ಲಿ ಭೀಮನ ಉಕ್ಕಿನ ಮೂರ್ತಿಯನ್ನು ಹಿಚಿಕಿ ಅದನ್ನು ಪುಡಿ ಪುಡಿ ಮಾಡಿದನು. ಬಾಯಬಲ್ಲಿನಲ್ಲಿ ಅಬ್ರಾಹೀಮನು ೧೭೫ ವರ್ಷ ಇದ್ದನೆಂದೂ ಐಝ್ಯಾಕನು ೧೮೦ ವರ್ಷ ಇದ್ದನೆಂದೂ ಹೇಳಿದೆ. ಹಿಂದುಸ್ಥಾನದೊಳಗಿನ ಆಧುನಿಕ ಜನರಲ್ಲಿ ಕುರಬರ ಮಲ್ಲಾರಿಯು ೧೧೫ ವರ್ಷ, ರಾಮಶೇಟ ಭುರಿಕಿ, ಸಾತಾರಾ, ೧೦೮ ವರ್ಷ, ಅಹಮ್ಮದಖಾನ ಕೊಲ್ಹಾಪೂರ ೧೦೮ ವರ್ಷ, ನಿಜಾಮುಉಲಮುಲ್ಕ ೧೦೪ ವರ್ಷ, ರಾಮಲಾಲ ಕಾಗಡಿ ಹರಿದ್ವಾರ ೧೦೪

ವರ್ಷ, ಪಂಡಿತ ಪ್ರಭಾಕರ ಶಾಸ್ತ್ರಿ ೧೦೮ ವರ್ಷ ಈ ಪ್ರಕಾರ ಬಾಳಿದರೆಂದು ಹೇಳಿದೆ. ಯುರೋಪದೊಳಗಿನ ಆಧುನಿಕ ಜನರು ಥಾಮಸ್ ಪಾರ್ ೧೫೩ ವರ್ಷ, ಮೇರಿ ಬಿಂಜಲ್ ೧೧೨ ವರ್ಷ, ಹೇನರಿ ಜೋಕಿನ್ಸ ೧೬೯ ವರ್ಷ, ಕೌನ್ಸರಿಸ್ ಮೇಂಡ ೧೪೦ ವರ್ಷ ಜೀವಿಸಿದ್ದರೆಂದು ಹೇಳಿದೆ. ರೋಮಾನಿಯಾ, ಬಲ್ಗೇರಿಯಾ ಮುಂತಾದ ದೇಶಗಳಲ್ಲಿ ಈಗ್ಗೂ ಕೂಡ ೧೨೫ ವರ್ಷ ವಯಸ್ಸಿನ ಜನರು ಸಿಗುತ್ತಿರುವರು." ಎಂದು ಹೇಳಿದೆ. ಇದು ಅಲ್ಲದೆ ಥಾಮಸ್ ಕಾರ್ನ ಶೋಅರ್‌ಡೀಚ್ (ಇಂಗ್ಲಂಡ) ಇವನು ಕ್ರಿ. ಶ ೧೩೮೧ ರಲ್ಲಿ ಹುಟ್ಟಿ ಕ್ರಿ. ಶ. ೧೫೮೮ ರಲ್ಲಿ ಮರಣಹೊಂದಿದನು. ಅಂದರೆ ಇವನು ಒಟ್ಟಿಗೆ ೨೦೭ ವರ್ಷ ಜೀವಂತನಿದ್ದನು. ಇವನ ಜೀವಮಾನದ ಕಾಲದಲ್ಲಿ ೪, ೫, ೬, ೭ ನೆಯ ಹೇನ್ರಿಗಳು ೪, ೫, ೬ ನೆಯ ಎಡ್ವರ್ಡರು ೩ನೇ ರಿಚರ್ಡನು ಹೀಗೆ ಒಂಭತ್ತು ಮಂದಿ ಅರಸರೂ ಮೇರಿ ಹಾಗು ಇಲಿಝಾ ಎಂಬ ರಾಣಿಯರೂ ಹೀಗೆ ೧೧ ಮಂದಿ ಇಂಗ್ಲಂಡದ ರಾಜ್ಯವನ್ನು ನಡಿಸಿದರೆಂದು ಹೇಳಿದೆ. ತಾರೀಖು ೩೦-೬-೧೯೩೨ನೇ ಇಸ್ವಿಯ ಲೋಕಮತದಲ್ಲಿ "ಚೀನದೊಳಗಿನ ಷಾಂಗ ಚುವಾ೯ ಎಂಬ ಹೆಸರಿನ ಒಂದು ಹಳ್ಳಿಯಲ್ಲಿ ಅಜಾಂಗಯೂನ ಈ ಹೆಸರಿನ ಒಬ್ಬ ಮುದಕನು ೨೨೫ ವರ್ಷದವನಿದ್ದು ಸದ್ಯಕ್ಕೆ ಜೀವಂತನಿರುವನು. ಅವನಿಗೆ ೧೪ ಮಂದಿ ಹೆಂಡರುಗಳಾಗಿದ್ದು ಅವರಿಂದ ಒಂದು ನೂರಾ ಯಂಭತ್ತು ಹುಡುಗರಿರುವರೆ"ಂದು ಹೇಳಿದೆ. ಝರೋ ಆಗಾ (ಕಾನ್ಸಟಾಂಟಿನೋಪಲ್) ಇವನು ಕ್ರಿ. ಶ. ೧೭೭೫ ರಲ್ಲಿ ಹುಟ್ಟಿದನು. ಈಗ್ಗೆ ಇವನು ಜೀವಂತನಿದ್ದು ಕೂಲಿ ಕೆಲಸವನ್ನು ಮಾಡುತ್ತಾನೆ. ಇವನ ವಯಸ್ಸು ಈಗ್ಗೆ ೧೬೦ ಅದೆ. ೮೫ ನೇ ವರ್ಷದಲ್ಲಿ ಇವನಿಗೆ ಮಗ ಹುಟ್ಟಿದನು. ೧೦೫ನೇ ವರ್ಷದಲ್ಲಿ ಇವನ ಯಾವತ್ತೂ ಹಲ್ಲುಗಳು ಬಿದ್ದು ತಿರುಗಿ ಬಂದವು. ಬಾಳ್ಟಿಮೋರದಲ್ಲಿ ಇರ್ಝಾಕ ಹಶಾಯಷಸ್ಕೀ ಇವನು ಈಗ್ಗೆ ೧೧೩ ವರ್ಷದವನಿರುವನು. ಇವನ ಸಾರಾಯೆಂಬ ಹೆಂಡತಿಯು ೧೧೧ ವರ್ಷದವಳಿರುವಳು. ಕ್ರಿ. ಶ. ೧೯೨೫ ಡಿಶೆಂಬರದ ಫಿಜಿಕಲ್ ಕಲ್ಚರ, ಪುಟ ೨೯, ೧೩೬, ೧೩೮ ಇವುಗಳಲ್ಲಿ "ರಾಕ್‌ಫೇಲರ ಸಂಸ್ಥೆಯ ಡಾಕ್ಟರ ಅಲೆಕ್ಸ ಕ್ಯಾರೆಲ್ ಮತ್ತು ಜೋಹನ್ಸಹಾಫಕಿನ್ನಸದ ಡಾಕ್ಟರ ರೆಡಮಂಡ್ ಪರೆಲ್ ಈ ಉಭಯತರು ಕೆಲವು ಪ್ರಯೋಗಗಳನ್ನು ಮಾಡಿ ಪ್ರಾಣಿಗಳ ಸ್ನಾಯುಗಳು ಅಮರವಿರುತ್ತವೆಂದು ಸಿದ್ಧ

ಮಾಡಿರುವರು. ಪ್ರಾಣಿಗಳ ಪ್ರಾಣಕೋಶ (ಶೆಲ್ಸ) ಗಳಲ್ಲಿ ಏನೂ ಹೆಚ್ಚು ಕಡಿಮೆ ಮಾಡದಿದ್ದರೆ ಅವು ಜೀವಂತ ಉಳಿದು ನಿಯಮಿತತನದಿಂದ ಬೆಳೆಯುತ್ತವೆ. ಸೂಕ್ಷ್ಮ ಜಂತುಗಳಿಂದ (ಬ್ಯಾಕ್ಟೀರಿಯಾ) ರಕ್ಷಣ ಮಾಡಿ ಕೆಲವು ರಸಾಯನ ದ್ರವ್ಯದಲ್ಲಿ ಹಾಕಿ ಇಟ್ಟರೆ ಜೀವಂತ ಕೋಳಿಯ ಕಾವಿನ ಹೊರ್ತು ಕೋಳಿ ಮರಿಗಳ ಸ್ನಾಯುಗಳು ಬೆಳೆಯುತ್ತವೆ. ಇದರ ಮೇಲಿಂದ ಕಂಡುಬರುವದೇನಂದರೆ, ಮಾನವ ಪ್ರಾಣಿಗಳ ಶಾರೀರಿಕ ಹಾಗು ಮಾನಸಿಕ ಶಕ್ತಿಗಳು ಚನ್ನಾಗಿ ಉಳಿಯುವಂತೆ ಇಟ್ಟರೆ ಅವು ಸಾಮಾನ್ಯವಾಗಿ ತಿಳಿದಿರುವ ಆಯುರ್ಮಾನದ ಕಾಲಕ್ಕಿಂತಲೂ ಹೆಚ್ಚು ದಿವಸ ನಿಶ್ಚಯವಾಗಿ ಬಾಳುತ್ತವೆ. ಇಂಥ ಶಾಸ್ತ್ರೀಯ ಪ್ರಯೋಗಗಳು ಮೊಟ್ಟಮೊದಲು ಜರ್ಮನಿಯಲ್ಲಿ ಆರಂಭವಾಗಿ ತೀವ್ರವೇ ಅಮೇರಿಕೆಯ ಲ್ಲಿಯೂ ಕೂಡ ಅವುಗಳ ಪ್ರಸಾರವಾಯಿತು. ಹೀಗೆ ಮೆಲ್ಲಮೆಲ್ಲನೆ ಈ ಶಾಸ್ತ್ರೀಯ ಪ್ರಯೋಗಗಳು ಇಂಗ್ಲಂಡದಲ್ಲಿಯೂ ಆರಂಭವಾದವು. ಈ ವರೆಗೆ ಈ ಶಾಸ್ತ್ರದ ಮೇಲೆ ಸುಮಾರು ಅರವತ್ತು ಪ್ರಸಿದ್ಧ ಡಾಕ್ಟ ರರು ಉತ್ತಮ ಗ್ರಂಥಗಳನ್ನು ಬರೆದಿರುವರು. ಅವುಗಳೊಳಗಿನ ಕೆಲವು ಗ್ರಂಥಗಳು ಬಹಳೇ ಪ್ರಸಿದ್ಧವಿರುವವು. (೧) ಡಾಕ್ಟರ ಬೆಂಡಿ ಡ್ರಿಕ್ಟ ಲಸ್ಟ ಇವನ ಸ್ವಾಭಾವಿಕ ಗುಣದ ಶಾಸ್ತ್ರದ ಇತಿಹಾಸವು. (೨) ಹೋ ರ್‍ಯಾಸ ಫ್ಲೇಚರ ಇವನ "ಹೇಗೆ ತಿನ್ನಬೇಕು?" (೩) ಬರ್ನರ ಮ್ಯಾಕ ಫೆಡನ್ ಇವನ "ಏನು ತಿನ್ನಬೇಕು?" ಮತ್ತು (೪) ಉತ್ತರ ಅಮೇ ರಿಕೆಯ ಸಂಯುಕ್ತ ಸಂಸ್ಥಾನಗಳಿಂದ ಪ್ರಸಿದ್ಧವಾದ "ಹೇಗೆ ಜೀವಿಸ ಬೇಕು" (೫) ಸ್ಯಾಂಡಫೋರ್ಡ ಬೆನಟ್ ಇವನ "ಮುಪ್ಪು ಅದರ ಕಾರಣಗಳು ಮತ್ತು ಅದನ್ನು ಹೋಗಲಾಡಿಸುವ ಉಪಾಯಗಳು." (೬) ಎಡಾಫಜಸ್ಟ ಇವನ "ನಿರಂತರ ಹೇಗೆ ಇರಬೇಕು ಮತ್ತು ಸ್ವಾಭಾ ವಿಕ ಗುಣವನ್ನು ಹೇಗೆ ಹೊಂದಬೇಕು" ಇತ್ಯಾದಿ. ಇದು ಆದಿಭೌತಿಕ ವಿಚಾರವಾಯಿತು. ಆಧ್ಯಾತ್ಮಿಕ ರೀತಿಯಿಂದ ಯಾರಿಗಾದರೂ ಇದರ ವಿಚಾರ ಮಾಡುವದು ಅವಶ್ಯವಿದ್ದರೆ ಅವರು ಅಗತ್ಯವಾಗಿ ಈ ವಿಷ ಯದ ಮೇಲಿನ ಪಾತಂಜಲ ಯೋಗಶಾಸ್ತ್ರವನ್ನೂ ಹಾಗು ಅದರ ಮೇಲಿನ ಟೀಕಾತ್ಮಕ ಗ್ರಂಥಗಳನ್ನೂ ಓದತಕ್ಕದ್ದು. ಸ್ವಾಮಿ ವಿವೇಕಾ ನಂದರು ತಮ್ಮ ಪುಸ್ತಕದ ೧ ನೆಯ ಸಂಪುಟದ ೩೦೬ ನೆಯ ಪುಟ ದಲ್ಲಿ " ಪೃಥ್ವ್ಯಪ ತೇಜೋ ನಿಲಖೇ ಸಮುತ್ಥಿತೇ । ಪಂಚಾತ್ಮಕೇ ಯೋಗ ಗುಣೇ ಪ್ರವೃತ್ತೇ ॥ ನತಸ್ಯ ರೋಗೋ ನ ಜರಾ ನ ಮೃತ್ಯುಃ । ಪ್ರಾಪ್ತಸ್ಯ

ಯೋಗಾಗ್ನಿಮಯಂ ಶರೀರಂ॥ ಎಂದರೆ ಯೋಗಾಭ್ಯಾಸಿಗಳು ಪಂಚ ಭೂತಗಳಿಂದ ಆಗುವ ಗುಣಧರ್ಮಗಳನ್ನು ತಿಳುಕೊಂಡರೆ ಅವರಿಗೆ ಯೋಗವು ಸಿದ್ಧಿಸಿತೆಂದು ಹೇಳಬಹುದು. ಅವರಿಗೆ ಮುಪ್ಪು, ಮರಣವು, ವ್ಯಾಧಿಯು ಬರಲಾರವು. ಅವರ ಶರೀರವು ಯೋಗಾಗ್ನಿಯಿಂದ ದಗ್ಧವಾಗಿರುತ್ತದೆ," ಎಂದು ಹೇಳಿರುವರು. ಅದೇ ಪುಸ್ತಕದ ೨೪೩, ೨೪೪, ೨೪೫ ನೇ ಪುಟಗಳಲ್ಲಿ "ಕ್ಲೇಶ ಮೂಲಃ ಕರ್ಮಾಶಯೋ ದೃಷ್ಟಾದೃಷ್ಟ ಜನ್ಮವೇದನೀಯಃ। ಎಂದರೆ ಯೋಗಿಗಳು ತಮ್ಮ ಭೌತಿಕ ಶರೀರವನ್ನು ಬದಲು ಮಾಡುತ್ತಾರೆ. ಅವರು ಶರೀರದ ರಚನೆಗಳಲ್ಲಿ ರೋಗಾದಿಗಳು ಸೇರದಂತೆ ಸ್ಥಿತ್ಯಂತರ ಮಾಡುತ್ತಾರೆ. ಅದಕ್ಕೆ ನಾವು ಮರಣವೆಂದೆನ್ನುತ್ತೇವೆ. ಮನುಷ್ಯನ ಸ್ನಾಯುಗಳಲ್ಲಿ ಆತ್ಮನು ಸಂಚರಿಸುತ್ತಿದ್ದರೆ ಅವನಿಗೆ ನಾವು ಜೀವಂತನೆಂದೂ ಮತ್ತು ಈ ಕಾರ್ಯವು ನಿಂತ ಕೂಡಲೆ ಆತನು ಮೃತನಾದನೆಂದೂ ಹೇಳುತ್ತೇವೆ. ಆದರೆ ಮನುಷ್ಯನು ಈ ಎರಡೂ ಕಾರ್ಯಗಳಿಗೆ ಮಿಕ್ಕಿದವನಾದರೆ ಆತನಿಗೆ ಜನನ ಮರಣಾದಿಗಳೇ ಇಲ್ಲವು. ನಾವು ಈ ಭೌತಿಕ ಶರೀರದ ಒಡೆಯರು. ನಾವು ಅದನ್ನು ಮನಬಲ್ಲಂತೆ ಮಾಡಬಹುದು. ಇದು ನಮಗೆ ಸಿದ್ಧಿಸಿದ್ದಾದರೆ ಮನಬಲ್ಲಂತೆ ನಾವು ತಾರುಣ್ಯವನ್ನು ಹೊಂದಬಹುದು. ಆ ಮೇಲೆ ನಮಗೆ ಜನನ ಮರಣ ಹಾಗು ರೋಗಾದಿಗಳೇ ಇಲ್ಲವು" ಎಂದು ಹೇಳಿರುವರು. ಇದಕ್ಕಿಂತಲೂ ಹೆಚ್ಚಿನ ಸಂಗತಿಗಳು ಬೇಕಾಗಿದ್ದರೆ ಅವರು ಅಗತ್ಯವಾಗಿ ಶ್ರೀ ಸ್ವಾಮಿ ವಿವೇಕಾನಂದರ ಯೋಗ ವಿಷಯದ ಮೇಲಿನ ವ್ಯಾಖ್ಯಾನಗಳನ್ನು ಓದಬೇಕು; ಎಂದರೆ ಮನುಷ್ಯನಿಗೆ ತನ್ನ ಆಯುಷ್ಯವನ್ನು ಹೇಗೆ ಹೆಚ್ಚಿಸಲಿಕ್ಕೆ ಬರುತ್ತದೆ ಎಂಬುವದು ಸಹಜವಾಗಿ ಮನವರಿಕೆಯಾಗಬಹುದು. ಶ್ರೀ ಯೋಗೀಂದ್ರರವರ ಯೋಗ ಅಥವಾ ಆರೋಗ್ಯ ಶಾಸ್ತ್ರ, ಪುಟ ೨೦ ರಲ್ಲಿ "ಪ್ರಾಣಿ ಮತ್ತು ವನಸ್ಪತಿ ಇವುಗಳ ಗುಣಧರ್ಮಗಳನ್ನು ತಿಳಿಯುವ ವಿದ್ಯೆಯನ್ನು ಪಡೆದವರಲ್ಲಿ ಹೆಸರಾದ ಡಾಕ್ಟರ ಹ್ಯಾಲಿಹಾಪ್ಟರ ಮೊದಲಾದವರು ಮುಪ್ಪಿನಿಂದ ಮರಣ ಹೊಂದಿದರು. ತೀರ ವಿರಳವೆಂದು ಒಪ್ಪಿರುವರು. ಮರಣದ ಸಾಧಾರಣ ಕಾರಣಗಳು ಕುತ್ತು ಇಲ್ಲವೆ ಅಪಾಯವೆಂದು ಹೇಳಬಹುದು. ಇವುಗಳಲ್ಲಿ ನಾವು ವ್ಯಾಧಿಗಳನ್ನೂ ಸೇರಿಸಬಹುದು. (ಡಾಕ್ಟರ ಡಬ್ಲ್ಯು ಡಿ. ಹಾಲಿಬರ್ಟನ್, ಎಮ್. ಡಿ. , ಇವರ ಪ್ರಾಣಿ ಮತ್ತು ವನಸ್ಪತಿಗಳ ಗುಣಧರ್ಮ ತಿಳಿಯುವ ಕೈಪಿಡಿ, ಪುಟ ೯೬೭) ತಾರುಣ್ಯದಲ್ಲಿ ಮನುಷ್ಯನ ಸತ್ವವು ಅಥವಾ

ಜೈತನ್ಯವು ಹೆಚ್ಚಿದಾಗ್ಗೆ ಅನೇಕ ರೋಗಗಳು ದೂರಾಗುವವು; ಆದರೆ ತಡೆಯುವ ಶಕ್ತಿಯು ವಯಸ್ಸು ಆದಾಗ್ಗೆ ಕುಗ್ಗುತ್ತಹೋದರೆ ಕೆಲವು ರೋಗಗಳು ರೂಢವಾದ ಆಲಸ್ಯದಿಂದ ಬಹಳವಾಡಿ ಗೊತ್ತಾಗದೆ ಮಹತ್ವದ ಶರೀರದ ಭಾಗಕ್ಕೆ ಅಂಟಿಕೊಂಡು ಅವುಗಳ ಉಪಟಳವನ್ನು ತಡಿಯುಲಿಕ್ಕೆ ಶರೀರವು ಅಸಮರ್ಥವಾಗುತ್ತದೆ. ಇದರಿಂದಲೇ ಮನುಷ್ಯನ ಇತಿಹಾಸವು ಮುಗಿಯುತ್ತದೆ. ಇದಕ್ಕೇನೇ ನಾವು ಮರಣವೆಂದೆನ್ನುತ್ತೇವೆ. ಮನುಷ್ಯನಿಗೆ ೧೦೦ ವರ್ಷಗಳನ್ನು ಮಿಕ್ಕಿ ಅನಿಯಮಿತ ಅವಧಿಯ ವರೆಗೆ ಬಾಳಲಿಕ್ಕೆ ಶಕ್ಯವಿದೆ ಎಂದು ಇತ್ತೀಚಿನ ಎಷ್ಟೋ ನಾಮಾಂಕಿತ ಡಾಕ್ಟರರು ಒಪ್ಪಿರುವರು. ೨೦೦ ವರ್ಷಗಳಗಿಂತಲೂ ಹೆಚ್ಚಿಗೆ ಸಶಕ್ತರಾಗಿ ಬಾಳಿದವರ ಉದಾಹರಣೆಗಳುಂಟು. ಯೋಗಾಭ್ಯಾಸಿಗಳು ೩ ಶತಮಾನಗಳಿಗಿಂತಲೂ ಹೆಚ್ಚಿಗೆ ಬಾಳಿದವರ ಉದಾಹರಣೆಗಳನ್ನು ಕೊಡುವರು. (ಜ್ಯೋಛ್ನೆ ಎಂಬ ಟೀಕಾ ಸಹಿತ ಇರುವ ಹಠಯೋಗ ಪ್ರದೀಪಿಕಾ, ಶ್ಲೋಕಗಳು ೧, ೫, ೬, ೭, ಶಹಾ ಮತ್ತು ಟ್ರಾಯರ ಕೃತ ಪರ್ಶಿಯನ ದಬಿಸ್ತಾನದ ಭಾಷಾಂತರ, ೨ ನೆಯ ಪುಸ್ತಕ, ಪುಟ ೧೩೭-೧೩೮, ಕ್ರಿ. ಶ. ೧೮೪೩ ನೆಯ ಆವೃತ್ತಿ) ಮನುಷ್ಯನಿಗೆ ೩೦೦ ವರ್ಷಗಳ ಆಯುಷ್ಯವೆಂಬುವದು ಕೇಳಿದ ಕೂಡಲೆ ಈಗ್ಯೆ ಎಷ್ಟು ಅಗಾಧವೆನಿಸುತ್ತದೆಯೋ ಅಷ್ಟು ಹಿಂದಿನ ಕಾಲಕ್ಕೆ ಅನಿಸುತ್ತಿದ್ದಿಲ್ಲವೆಂದು ಬರ್ನಾರ್ಡಶಾ ಎಂಬವನು ತನ್ನ ಪ್ರಸಿದ್ಧ ಗ್ರಂಥದಲ್ಲಿ ಹೇಳಿದ್ದು ನಿಜವೆಂದು ತೋರುತ್ತದೆ. ಸದ್ಯದ ಸೃಷ್ಟಿಯು ಇರುವಿಕೆಯ ಸ್ಥಿತಿಗತಿಯ ಮೇಲಿಂದ ಬರ್ನಾರ್ಡಶಾನ ಅಭಿಪ್ರಾಯದಲ್ಲಿ ಕಿಂಚಿತ್ ಅತಿಶಯೋಕ್ತಿಯು ಇರುವದೆಂದು ಎನಿಸಬಹುದು. ಮುಂದೆ ಯಾವ ಕಾಲಕ್ಕೆ ಮಾನವನ ಆಯುಷ್ಯ ಮರ್ಯಾದೆಯು ೩೦೦ ವರ್ಷದ್ದು ಆಗುವದೆಂಬದನ್ನು ಹೇಳಲಿಕ್ಕೆ ನಮಗೆ ಅಸಾಧ್ಯವು. ಆದರೆ ಈ ಶಾಸ್ತ್ರೀಯ ಯುಗದಲ್ಲಿ ಈ ಸಂಗತಿಯು ಸಹಜವಾಗಬಹುದು. ೧೯ನೆಯ ಶತಮಾನದ ಒಂದು ಸಂಚಿಕೆಯಲ್ಲಿ ಡಾಕ್ಟರ ಎಫ್. ಎ. ಇ. ಕ್ರೂ ಇವರು ಈಗ್ಗೆ ಒಂದು ಹುಳಕ್ಕೆ ತಾರುಣ್ಯವು ಪ್ರಾಪ್ತವಾಗುವದು ಶಕ್ಯವಿದೆ ಎಂದು ಅಂದಿರುವರು. ಪ್ಲೆನೇರಿಯಾ ಎಂಬದೊಂದು ಮುಪ್ಪಾದ ಹುಳವನ್ನು ಉಪವಾಸ ಇಟ್ಟರೆ ಅದರ ತೂಕವು ೨೫ ರಿಂದ ೬ರ ವರೆಗೆ ಕಡಿಮೆಯಾಗುವದು. ಮತ್ತು ಅದೇ ಆಕಾರದ ತರುಣ ಹುಳದಲ್ಲಿದ್ದಷ್ಟೇ ಪೋಷಕ ದ್ರವ್ಯಗಳು ಅದರಲ್ಲಿ ಸಿಗುತ್ತವೆ. ಮತ್ತು ಅದು ಚಿಕ್ಕ ವಯಸ್ಸಿನದು ಕಾಣುವದು. ಇದಲ್ಲದೆ ಅದು ನಿಜವಾಗಿ ಚಿಕ್ಕ

ದಿದ್ದು ಪೋಷಣ ಮಾಡಿದಂತೆ ಪ್ರೌಢವಾಗಿ ಬೆಳೆಯುತ್ತದೆ. ಮೇಲಾಗಿ ಇದೇ ಪ್ರಯೋಗವನ್ನು ಮೇಲಿಂದಮೇಲೆ ಮಾಡಿದರೆ ಅದರ ಆಯುಷ್ಯವು ೨೦ ಪಾಲು ಹೆಚ್ಚಿಗೆ ಬೆಳೆಯುವದು. ನಿಯಮಿತವಾದ ಉಪವಾಸವು ಮಾನವನಲ್ಲಿಯೂ ವಿಶೇಷ ಕ್ರಾಂತಿಯನ್ನುಂಟುಮಾಡಿದೆಯೆಂದು ಡಾಕ್ಟರ ಕ್ಯಾರ್ರರವರ ಅಭಿಪ್ರಾಯವದೆ. ತಾರುಣ್ಯ ಪ್ರಾಪ್ತಿಯ ವಿದ್ಯೆಯನ್ನು ಬಲ್ಲಂಥ ಹಿಂದುಸ್ತಾನದೊಳಗಿನ ಯೋಗಿ ಜನರು ಸಾವಿರಾರು ವರ್ಷಗಳ ಪೂರ್ವದಲ್ಲಿ, ಎಂದರೆ ಯೇಸುಕ್ರಿಸ್ತನ ಮರಣದ ಪೂರ್ವದಲ್ಲಿ, ಕೆಲವು ಅಮೌಲ್ಯವಾದ ಉದಂಹರಣೆಗಳಿಂದ ಇದನ್ನು ಸಿದ್ಧಮಾಡಿರುವರು ಅವರ ಅನುಭವಗಳು ಈಗಿನ ರಸಾಯನ ಕಾಲದಲ್ಲಿ ಹೊಸದಾಗಿ ಶೋಧಿಸಿದ ಪ್ರಯೋಗಗಳಿಗೆ ಸರಿ ಬೀಳುತ್ತವೆಯೆಂದು ನನ್ನ ಸ್ವಂತ ಅನುಭವದಿಂದ ನಾನು ವಾಚಕರಿಗೆ ಹೇಳಬಲ್ಲೆನು. ಡಾಕ್ಟರ ಫಿಸ್ಕಿ ಮತ್ತು ಫೀಶರ ಎಂಬ ಪ್ರಸಿದ್ಧ ವೈದ್ಯರು ರಸಾಯನ ಶಾಸ್ತ್ರದ ಶೋಧವು ಹೆಚ್ಚಾದಂತೆ ಆಯುಷ್ಯಮರ್ಯಾದೆಯು ಇಂತಿಷ್ಟೇ ಎಂದು ಗೊತ್ತಾಗುವದಿಲ್ಲವೆಂದು ಹೇಳಿರುವರು. ಮನುಷ್ಯನ ಮರಣದ ಬಗ್ಗೆ ಅನೇಕ ಕಾರಣಗಳಿರುವವು. ಆದರೆ ಮನುಷ್ಯನು ಸಾಯಲೇ ಬೇಕೆಂಬ ಬಗ್ಗೆ ಯೋಗ್ಯ ಕಾರಣಗಳು ಎಲ್ಲಿಯೂ ಹೇಳಿಲ್ಲವು, ('ಹೇಗೆ ಬದುಕಬೇಕು' ೧೫ ನೆಯ ಆವೃತ್ತಿ, ಪುಟ ೧೬೧) ಮನುಷ್ಯನ ಸ್ನಾಯುಗಳು ಶರೀರದ ಹೊರಗೆ ಏಳು ವರ್ಷಗಳ ವರೆಗೆ ಜೀವಂತ ಇರುತ್ತವೆಯೆಂದು ಕಳೆದ ಮಹಾಯುದ್ಧಕಾಲದೊಳಗಿನ ಡಾಕ್ಟರ ಕ್ಯಾರೆಲ್ ಇವರ ಶಾಸ್ತ್ರೀಯ ಪ್ರಯೋಗಗಳ ಮೇಲಿಂದ ಸಿದ್ಧವಾಗಿದೆ. ಈ ಸ್ನಾಯುಗಳು ಬೆಳೆಯುತ್ತ ದ್ವಿಗುಣಿತವಾಗುತ್ತವೆ. ಯೋಗ್ಯರೀತಿಯಿಂದ ತೊಳೆದು ಇಟ್ಟರೆ ವೃದ್ಧಿಯನ್ನು ಹೊಂದುತ್ತವೆ" ಎಂದು ಹೇಳಿದೆ. ಇದರ ಮೇಲಿಂದ ಹಿಂದ ಋಷಿಗಳು ಸಹಸ್ರಾವಧಿ ವರ್ಷಗಳವರೆಗೆ ಬಾಳುತ್ತಿದ್ದರೆಂಬುವದರಲ್ಲಿ ವಿಶೇಷ ತಥ್ಯಾಂಶವಿದೆ ಎಂದು ಮನವರಿಕೆಯಾಗುತ್ತದೆ.

ಇನ್ನು ಲೌಕಿಕ ರೀತಿಯಿಂದ ವಿಚಾರಿಸಿದರೆ ಲೌಕಿಕ ಉದಾಹರಣೆಗಳಿಂದಲೂ ಈ ಸಂಗತಿಯು ಸಹಜವಾಗಿ ತಮ್ಮ ಮನವರಿಕೆಯಾಗಬಹುದು. ಉದಾಹರಣಾರ್ಥವಾಗಿ:- ಒಂದೇ ಕಾಲಕ್ಕೆ ಒಬ್ಬನೇ ಮಾಡಿದ ಒಂದೇ ನಮೂನೆಯ ೨ ಘಡಿಯಾಳಗಳನ್ನು ತೆಗೆದುಕೊಳ್ಳೋಣ ಒಂದಕ್ಕೆ ಒಬ್ಬನೇ ದಿನಂಪ್ರತಿ ವೇಳೆಗೆ ಸರಿಯಾಗಿ ಕೀಲಿಯನ್ನು ಕೊಡುತ್ತಾ

ಹೋದರೆ ಅದು ಬಹಳ ದಿವಸ ನಡೆಯುತ್ತದೆ. ಇನ್ನೊಂದಕ್ಕೆ ಬೇಕಾದವರು ಬೇಕಾದಾಗ್ಗೆ ಮನಬಲ್ಲಂತೆ ವೇಳೆ ತಪ್ಪಿ ಕೀಲಿಯನ್ನು ಕೊಡುತ್ತ ಹೋದರೆ ಅದು ತೀವ್ರವೇ ಕೆಡುವ ಸಂಭವವದೆ. ಅದರಂತೆ '೧೦೦ ಮೈಲುಗಳ ವರೆಗೆ ತಡೆಯುವಂಥ' ಎಂದು ಮೇಲೆ ಬರೆದ ಕೆಲವು ಟಾಯರುಗಳನ್ನು ತಕ್ಕೊಳ್ಳೋಣ. ಸರಿಯಾಗಿ ಉತ್ತಮವಾದ ದಾರಿಯ ಮೇಲೆ ಉಪಯೋಗಿಸಿದರೆ ಅವು ಬಹಳ ದಿವಸ ತಡೆಯುತ್ತವೆ. ಮನಬಲ್ಲಂತೆ ಉಪಯೋಗ ಮಾಡಿದರೆ ಅವು ತೀವ್ರವೇ ನಾಶಹೊಂದುತ್ತವೆ. ಇದು ಅಲ್ಲದೆ ಇಂಗಳಿನ ಮೇಲೆ ಬೂದಿಯನ್ನು ಹಾಕಿಟ್ಟರೆ ಆ ಇಂಗಳವು ಹೆಚ್ಚು ವೇಳೆ ತಡೆಯುತ್ತದೆ. ಅದರಂತೆಯೇ ಒಬ್ಬ ಸಶಕ್ತ ಮನುಷ್ಯನ ಶ್ವಾಸೋಚ್ಛ್ವಾಸವು ೪ ಸೇಕಂದುಗಳಿಗೆ ಒಂದು ಬಾರಿ ಆಗುತ್ತದೆ. ಇದಕ್ಕೆ ಯೋಗಶಾಸ್ತ್ರದಲ್ಲಿ ಜಪವೆಂದೆನ್ನುತ್ತಾರೆ. ಇಂಥ ಜಪಗಳು ಒಂದು ಮಿನಿಟಿನಲ್ಲಿ ೧೫, ಒಂದು ತಾಸಿಗೆ ೯೦೦, ಮತ್ತು ಒಂದು ದಿವಸಕ್ಕೆ ೨೧೬೦೦ ಆಗುತ್ತವೆ. 'ಶತಾಯುರ್ವೈ ಪುರುಷಃ' ಈ ನ್ಯಾಯದಿಂದ ಒಬ್ಬನಿಗೆ ೧೦೦ ವರ್ಷ ಆಯುಷ್ಯ ಹಿಡಿದರೆ ಅವನಿಗೆ ೨೧೬೦೦×೩೬೫×೧೦೦=೭೮೮೪೦೦೦೦೦ ಜಪಗಳಾಗುತ್ತವೆ. ಇಷ್ಟು ಜಪ ಸಂಖ್ಯೆಯು ಮುಗಿಯದ ಹೊರ್ತು ಮಾನವನಿಗೆ ಮರಣ ಬರಲಾರದು. ಯೋಗಿ ಜನರು ಪ್ರಾಣಾಯಾಮದಿಂದ ತಮ್ಮ ಪ್ರಾಣವಾಯುವಿನ ಕುಂಭಕ ಮಾಡಿ ತಮ್ಮ ಶ್ವಾಸೋಚ್ಛ್ವಾಸವನ್ನು ಬಂದು ಇಟ್ಟರೆ ಅವರ ಆಯುಷ್ಯ ಮರ್ಯಾದೆಯು ಹೆಚ್ಚುತ್ತದೆ. ಇದರ ವಿರುದ್ಧವಾದ ಉದಾಹರಣೆಗಳನ್ನು ಟಪಾಲರನ್ನರನ ಉದಾಹರಣೆಯಿಂದ ನಾವು ಕಾಣಬಹುದು. ಓಡುವದರಿಂದ ಅವನ ಶ್ವಾಸೋಚ್ಛ್ವಾಸಗಳು ದ್ವಿಗುಣಿತವಾಗಿ ಅವನ ಆಯುಷ್ಯ ಮರ್ಯಾದೆಯು ಕಡಿಮೆಯಾಗುತ್ತದೆ. ಏವಂಚ ಯೋಗಿ ಜನರಿಗೆ ತಮಗೆ ಬೇಕಾದಂತೆ ಶ್ವಾಸೋಚ್ಛ್ವಾಸವನ್ನು ನಿಯಮನ ಮಾಡಲಿಕ್ಕೆ ಬರುತ್ತದೆ. ಆದುದರಿಂದಲೇ ಶ್ರೀಮದ್ರೇಣುಕ ಭಗವತ್ಪಾದಾಚಾರ್ಯರು ೧೪೦೦ ವರ್ಷಗಳ ವರೆಗೆ ಎಂದರೆ ೭೦೦ ವರ್ಷ ಗುಪ್ತವಾಗಿಯೂ ಹಾಗು ೭೦೦ ವರ್ಷ ಪ್ರಕಟ ರೂಪದಿಂದಲೂ ಭೂಮಂಡಲದಲ್ಲಿ ಸಂಚರಿಸುತ್ತಿದ್ದರೆಂದು ಪುರಾಣ ಪ್ರಸಿದ್ಧವದೆ. ಇದೇ ನಿಯಮವು ಶ್ರೀಮದನಾದಿ ಅಲ್ಲಮಪ್ರಭುವಿಗೂ ಹತ್ತುತ್ತದೆ. ಆದುದರಿಂದ ಶ್ರೀಪ್ರಭುದೇವನು ತನ್ನ ತನ್ನ ವಚನದಲ್ಲಿ "ಕೃತಯುಗದಲ್ಲಿ ನಾನು ಭಕ್ತಿಕಾರಣ ಸ್ಥೂಲಕಾಯ

ನೆಂಬ ಗಣೇಶ್ವರನಾಗಿರ್ದೆನೈಯ್ಯಾ, ತ್ರೇತಾಯುಗದಲ್ಲಿ ನಾನು ಭಕ್ತಿ ಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆನೈಯ್ಯಾ, ದ್ವಾಪರದಲ್ಲಿ ನಾನು ಭಕ್ತಿಕಾರಣ ಅನುಮಿಷನೆಂಬ ಗಣೇಶ್ವರನಾಗಿರ್ದೆನೈಯ್ಯಾ, ಕಲಿ ಯುಗದಲ್ಲಿ ನಾನು ಭಕ್ತಿಕಾರಣ ಅಲ್ಲಮಪ್ರಭುದೇವನೆಂಬ ಗಣೇಶ್ವರ ನಾಗಿರ್ದೆ ಕಾಣಾ ಗುಹೇಶ್ವರಾ" ಎಂದು ತನ್ನ ಒಂದು ವಚನದಲ್ಲಿ ಸ್ಪಷ್ಟವಾಗಿ ಹೇಳಿರುವನು

---

# "ಲೋಕಪ್ರಿಯ ಸರ್ವಜ್ಞಮೂರ್ತಿಯ ವಚನಗಳು."

ಲೇಖಕ:— ಕೀರ್ತನಕೇಸರಿ, ಕೀರ್ತನ ವಿಚಕ್ಷಣ, ಕೀರ್ತನ ಶಿರೋಮಣಿ,
ಶಿವಕೀರ್ತನ ಕವಿರಾಜ, ಕವಿರತ್ನ .
ಬಿ. ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆಮಠ, ತುಮಕೂರು.

ಕರ್ಣಾಟಕ ಸಾಹಿತ್ಯ ನಭೋಮಂಡಲದಲ್ಲಿ ಪಂಪ ರನ್ನರಂತಹ ಮಹಾಕವಿಗಳನ್ನೂ, ಹರಿಹರ ರಾಘವಾಂಕರಂತಹ ಕ್ರಾಂತಿಕಾರಕ ಕವಿಗಳನ್ನೂ, ಲಕ್ಷ್ಮೀಶ ಕುಮಾರ ವ್ಯಾಸರಂತಹ ಕವಿಕೋಕಿಲೆಗಳನ್ನೂ, ನಿಜಗುಣ ಪುರಂದರರಂತಹ ಮಹಾನುಭಾವರನ್ನೂ ನಾವು ಥಳಥಳಿಸುವ ನಕ್ಷತ್ರಗಳೆಂದು ಭಾವಿಸಿದರೆ "ಸರ್ವಜ್ಞ" ನನ್ನು ಧೃವತಾರೆಯೆಂದು ಕರೆಯಬೇಕಾಗುತ್ತದೆ.

ಆದಿಪಂಪನಿಂದ ಅಭಿನವ ಕಾಲಿದಾಸನ ವರೆಗಿನ ಅಸಂಖ್ಯಾತ ಕನ್ನಡ ಕವಿಗಳು ಕನ್ನಡ ಸಾಹಿತ್ಯವನ್ನು ನಾನಾ ಮುಖದಿಂದ ಬೆಳೆಸಿ ದ್ದಾರೆ ಹಾಗೂ ಬೆಳಗಿಸಿದ್ದಾರೆ. ಅಚ್ಚಗನ್ನಡಗಬ್ಬಿಗನಾದ ಕೆಚ್ಚೆದೆಯ ಆಂಡಯ್ಯನು ಸಕ್ಕದದ ಹಂಗಿಲ್ಲದೆ ತಿರುಳ್ಗನ್ನಡವಲ್ಲಿಯೇ ತನ್ನ ಶಬ್ದ ವನ್ನು ಬರೆದು ಕನ್ನಡ ಕೀರ್ತಿಧ್ವಜವನ್ನು ಎತ್ತಿ ನಿಲ್ಲಿಸಿದ್ದಾನೆ. ಉಪ ನಿಷತ್ತನ್ನು ಹೋಲುವ ವಚನ ರಚನೆಗಳಿಂದ ಬಸವಾದಿಗಳು ಕನ್ನಡತಿ ಯನ್ನು ಕಳೆಯೇರಿಸಿದ್ದಾರೆ. ಇವರೆಲ್ಲರಿಗೂ ಮಿಗಿಲೆನಿಸಿ ವಿನೂತನವೂ ವಿಲಕ್ಷಣವೂ ಆದ ಮಾರ್ಗವನ್ನು ಹಿಡಿದು ಸರ್ವಜ್ಞನು ಸಿಡಿಲಿನಂತೆ ಕಠೋರವೂ, ಗಂಗೆಯಂತೆ ಪವಿತ್ರವೂ, ಹಿಮಾಲಯದಂತೆ ಮಹೋ ನ್ನತವೂ, ಸಾಗರದಂತೆ ಗಂಭೀರವೂ, ಬಂಗಾರದಂತೆ ಪ್ರಿಯತಮವೂ,

ವಸಂತದಂತೆ ಆಹ್ಲಾದಕರವೂ, ನವರತ್ನಹಾರದಂತೆ ಅಮೌಲ್ಯವೂ ಆದ ತನ್ನ ವಚನಗಳಿಂದ ಕನ್ನಡಿಗರ ಕಿವಿ ನಾಲಿಗೆ ಮನಗಳನ್ನು ಸೆರೆ ಹಿಡಿದಿದ್ದಾನೆ.

ಕನ್ನಡ ನುಡಿಯು ಬೆಡಗು, ಬಿನ್ನಾಣ, ಇಂಪು, ಸೊಂಪು, ಗತಿ, ಗಮಕಗಳನ್ನು ಕಾಣಬೇಕಾದರೆ ನಾವು ಸರ್ವಜ್ಞ ವಚನಗಳನ್ನು ಅವ ಲೋಕಿಸಬೇಕಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞ ವಚನಗಳು ಹಾಲಿನೊಳಗಣ ತುಪ್ಪದಂತೆ, ಹೂವಿನೊಳಗಣ ವಾಸನೆಯಂತೆ, ಆಕಾಶ ದೊಳಗಣ ಮಂಜಿನಂತೆ, ದೀಪದೊಳಗಿನ ಪ್ರಕಾಶದಂತೆ, ದೇಹದೊಳ ಗಿನ ಜೀವನಂತೆ ಎಂದು ನಾವು ಉಪಮಿಸಬಹುದು.

ತಮಿಳು ಭಾಷೆಯಲ್ಲಿ ತಿರುವಳ್ಳುವ ಕವಿಗೂ ತೆಲುಗಿನಲ್ಲಿ ವೇಮಣ್ಣಾ ಕವಿಗೂ ಮರಾಠಿ ಸಾಹಿತ್ಯದಲ್ಲಿ ಸಮರ್ಥ ರಾಮದಾಸ ಮುನಿಗೂ, ಹಿಂದಿ ವಾಙ್ಮಯದಲ್ಲಿ ಕಬೀರದಾಸನಿಗೂ, ಸಂಸ್ಕೃತದಲ್ಲಿ ಭರ್ತೃಹರಿಗೂ ಇರುವ ಸ್ಥಾನವನ್ನೇ ಕನ್ನಡದಲ್ಲಿ ಸರ್ವಜ್ಞನಿಗೆ ಸಲ್ಲಿಸ ಬಹುದು ಎಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಕನ್ನಡ ನಾಡಿನಲ್ಲಿ ಸರ್ವಜ್ಞನು ಉದಯಿಸಿ ವೇದಸಾರರೂಪವಾದ ತನ್ನ ವಚನಗಳನ್ನು ಹರಡದಿದ್ದರೆ ಅಂದು ಕನ್ನಡ ಸಾಹಿತ್ಯವು ತಂತಿ ಯಿಲ್ಲದ ತಂಬೂರಿಯಂತೆ, ತುಪ್ಪವಿಲ್ಲದ ಊಟದಂತೆ, ಹಲ್ಲಿಲ್ಲದ ಬಾಯಿ ಯಂತೆ, ವಿದೂಷಕನಿಲ್ಲದ ನಾಟಕದಂತೆ, ಮೀಶೆಯಿಲ್ಲದ ಮುಖದಂತೆ, ರಾಗವಿಲ್ಲದ ಓದುಗಾರಿಕೆಯಂತೆ, ಹನುಮನಿಲ್ಲದ ರಾಮಾಯಣದಂತೆ, ಗಿಳಿಯಿಲ್ಲದ ಪಂಜರದಂತೆ ಆಗುತ್ತಿದ್ದಿತೆಂದು ಹೇಳಬಹುದು.

ಸರ್ವಜ್ಞನ ವಚನಗಳನ್ನು ಓದಬೇಕೆನ್ನುವವರಿಗೆ ಅವನ ಕಾಲ, ದೇಶ, ಮತ, ಜೀವನ ಕ್ರಮ, ಸಂದೇಶ, ವ್ಯಕ್ತಿತ್ವ, ಹುಟ್ಟು, ಸಾವು ಈ ಮೊದಲಾದ ವಿಚಾರಗಳು ತಿಳಿದಿರಬೇಕೆಂದುದು ಅವಶ್ಯಕ. ಅದನ್ನು ಸಂಕ್ಷೇಪವಾಗಿ ಮಾಡಿಕೊಡುವುದೇ ಈ ಲೇಖನದ ಉದ್ದೇಶ. ಕವಿಯ ವಿಚಾರದೊಂದಿಗೆ ಅವನ ಗ್ರಂಥ ವಿಮರ್ಶೆಯನ್ನು ಇದರಲ್ಲಿ ಗರ್ಭೀಕರಿಸಿದೆ.

## ಸರ್ವಜ್ಞ ಕವಿಗಳು.

ಈಗ ನಾವು ಚರ್ಚಿಸಬೇಕಾದುದು ಲೋಕಪ್ರಿಯ ಸರ್ವಜ್ಞಮೂರ್ತಿಯ ವಿಚಾರವನ್ನು ಮಾತ್ರ. ಆದರೆ ಈ ಹೆಸರಿನ ಕವಿಗಳು ಬಹಳ ಮಂದಿ

ಆಗಿರಬಹುದೇ ಎಂದು ಆಲೋಚಿಸುವುದು ನಮ್ಮ ಆದ್ಯಕರ್ತವ್ಯವಾಗಿದೆ. ಒಂದೇ ಹೆಸರಿನ ಕವಿಗಳು ಹಲವರಾಗಿರುವರೆಂಬುದು ಕನ್ನಡ ಸಾಹಿತ್ಯದ ಪರಿಚಯವಿರುವವರಿಗೆಲ್ಲಾ ತಿಳಿದ ಮಾತು. ಏಕೆಂದರೆ ನಿಜಗುಣ, ಷಡಕ್ಷರ, ಎಂಬ ಹೆಸರಿನ ಮೂರುಮೂರು ಮಂದಿ ಕವಿಗಳು ನಾಗವರ್ಮ, ಗುಣವರ್ಮ, ಪದ್ಮರಸ ಎಂಬ ಹೆಸರಿನ ಇಬ್ಬಿಬ್ಬರು ಕವಿಗಳು ನಮ್ಮ ಸಾಹಿತ್ಯದಲ್ಲಿ ಆಗಿಹೋಗಿದ್ದಾರೆ. ಅಂತೆಯೇ “ಸರ್ವಜ್ಞ” ಎಂಬ ಹೆಸರನ್ನು ಧರಿಸಿದ ಇತರರೂ ಇರಬಹುದೇ ಎಂದು ವಿಚಾರ ಮಾಡೋಣ.

ವಿದ್ವಾಂಸರು ಭಗವಂತನನ್ನು “ಸರ್ವಜ್ಞ” ಎಂದು ಕರೆಯುತ್ತಾರೆ. ಶಿವಸಹಸ್ರ ನಾಮದಲ್ಲಿ “ಓಂ ಸರ್ವಜ್ಞಾಯನಮಃ” ಎಂದು ಪರಮೇಶ್ವರನನ್ನು ಮಹರ್ಷಿಗಳು ಕರೆದಿದ್ದಾರೆ. ಸರ್ವಜ್ಞ ಮೂರ್ತಿಯೂ ತನ್ನ ವಚನ ಒಂದರಲ್ಲಿ “ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ। ಒಬ್ಬ ಸರ್ವಜ್ಞ ಕರ್ತನೂ ಜಗಕೆಲ್ಲ। ಒಬ್ಬನೇ ದೈವ ಸರ್ವಜ್ಞ” ಎಂಬ ಪದ್ಯದಲ್ಲಿ ಸರ್ವಲೋಕೇಶ್ವರನಾದ ಪರಮೇಶ್ವರನನ್ನು ಸರ್ವಜ್ಞನೆಂದು ಕರೆದಿದ್ದಾನೆ.

ಭರತಖಂಡದಲ್ಲಿ ಅಸಾಧಾರಣ ಪಂಡಿತರಾದವರನ್ನು ಈಗಿನ ಕಾಲದಲ್ಲಿ ‘ಮಹಾಮಹೋಪಾಧ್ಯಾಯ’ ಎಂಬ ಪ್ರಶಸ್ತಿಯಿಂದ ಕರೆಯುವಂತೆ ಪ್ರಾಚೀನ ಕಾಲದಲ್ಲಿ ಘಟಾನು ಘಟಿಗಳಾದ ವಿದ್ವಾಂಸರನ್ನು “ಸರ್ವಜ್ಞ” ಎಂದು ಕರೆಯುತ್ತಿದ್ದಂತೆ ಕಾಣುತ್ತದೆ.

“ಹದಿನಾಲ್ಕನೇ ಶತಮಾನದಲ್ಲಿ ಮಹಾಭಾರತಕ್ಕೆ ಸಂಸ್ಕೃತ ಭಾಷೆಯಲ್ಲಿ ಉತ್ತಮೋತ್ತಮವಾಗಿ ವ್ಯಾಖ್ಯಾನವನ್ನು ಬರೆದ ವಿದ್ವಾಂಸನೊಬ್ಬನಿಗೆ ‘ಸರ್ವಜ್ಞನಾರಾಯಣ’ ನೆಂದೂ ಸುಮಾರು ಇದೇ ಶತಮಾನದಲ್ಲಿ ಜೀವಿಸಿದ್ದ ವಿದ್ಯಾನಿಧಿ ಸಾಯಣಾಚಾರ್ಯನ ಅಣ್ಣನಾದ ಮಾಧವನಿಗೆ ಸರ್ವಜ್ಞ ಹಾಗೂ ವಿದ್ಯಾರಣ್ಯ ಎಂಬ ಬಿರುದುಗಳಿದ್ದಂತೆ ತೋರುತ್ತದೆ. ೧೬ ನೇ ಶತಮಾನದಲ್ಲಿ ಆಗಿಹೋದ ಮೂರನೇ ಸೋಮೇಶನೆಂಬ ಅರಸನಿಗೆ ‘ಭೂಲೋಕಮಲ್ಲ’ ನೆಂತಲೂ ‘ಸರ್ವಜ್ಞ ಚಕ್ರವರ್ತಿ’ ಯೆಂತಲೂ ಹೆಸರುಗಳಿದ್ದಂತೆ ತಿಳಿದುಬರುತ್ತದೆ.” ±

ನಮ್ಮ ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ “ಸರ್ವಜ್ಞಮೂರ್ತಿ” ಯಲ್ಲದೆ, ಈ ಹೆಸರಿನ ಇತರರೂ ಇರಬಹುದೆಂಬುದಕ್ಕೆ ಅವಕಾಶವಿದೆ.

± ಟಿಪ್ಪಣಿ:— ಸ. ವ. ಪ್ರ. ಮು. ಪೀಠಿಕೆ ನೋಡಿ.

ಮೈಸೂರು ಪ್ರಾಚೀನ ಪುಸ್ತಕಾಲಯದಲ್ಲಿ "ಸರ್ವಜ್ಞ ಪದ" ಎಂಬ ತಾಳೆಯೋಲೆಯ ಗ್ರಂಥವೊಂದಿದೆ. ಇದರ ಛಂದಸ್ಸು 'ಚೌಪದ' ಎಂದಿದೆ. ಕವಿ 'ಸರ್ವಜ್ಞ' ಎಂದಿದೆ. ಈ ಸಂದರ್ಭವನ್ನು ನೋಡಿದರೆ "ತ್ರಿಪದಿ"ಯ ಸರ್ವಜ್ಞಮೂರ್ತಿಯ ಕೀರ್ತಿಯು ಕನ್ನಡ ನಾಡಿನಲ್ಲಿ ಹಬ್ಬಿದುದನ್ನು ಕಂಡು ಮತ್ತಾವನೋ ಒಬ್ಬ ಕವಿಯು 'ಸರ್ವಜ್ಞ' ಎಂಬ ಅಂಕಿತವನ್ನಿಟ್ಟುಕೊಂಡು ಸ್ಪರ್ಧೆಗಾಗಿ "ಚೌಪದ" ಗಳನ್ನು ಬರೆದನೇನೋ ಎಂದು ನಮಗೆ ಅನುಮಾನವುಂಟಾಗುತ್ತದೆ. ಅಲ್ಲದೆ ಅದೇ ಮೈಸೂರು ಪ್ರಾಚೀನ ಪುಸ್ತಕಾಲಯದಲ್ಲಿ ಹಾಡಿನ ರೂಪದಿಂದ "ಸರ್ವಜ್ಞ ಪದಗಳು" ಎಂಬ ಗ್ರಂಥವೊಂದಿದೆ. ಇದರ ಕವಿ 'ಸರ್ವಜ್ಞ' ಎಂದು. ಈ ಹಾಡುಗಳ ಕರ್ತೃವು "ತ್ರಿಪದಿ" ಕಾರನಾದ ಸರ್ವಜ್ಞಮೂರ್ತಿಯೋ ತದ್ಭಿನ್ನನೋ ಎಂಬುದೂ ವಿಚಾರಾರ್ಹವಾಗಿದೆ. ಅದೇ ಪುಸ್ತಕಾಲಯದಲ್ಲಿ "ಸರ್ವಜ್ಞ ಕಾಲಜ್ಞಾನ" ಎಂಬುದೊಂದು ಗ್ರಂಥವಿದೆ. ಇದನ್ನು ಬರೆದವ "ಸರ್ವಜ್ಞ ಮುನಿ" ಎಂಬಾತನೆಂದಿದೆ. ಈ ಸರ್ವಜ್ಞಮುನಿಯೂ ನಮ್ಮ ಲೇಖನಕ್ಕೆ ವಿಷಯನಾದ ಸರ್ವಜ್ಞಮೂರ್ತಿಯೂ ಒಬ್ಬನೇ, ಭಿನ್ನನೇ ಎಂಬುದೂ ವಿಚಾರಾರ್ಹವಾಗಿದೆ.

ಶ್ರೀಮಾನ್ ಉತ್ತಂಗಿ ಚನ್ನಪ್ಪನವರು ಅನೇಕ ವರ್ಷಕಾಲ ಹಲವು ತಾಡ ಓಲೆ ಗ್ರಂಥಗಳನ್ನೂ ಮುದ್ರಣ ಗ್ರಂಥಗಳನ್ನೂ ಪರಿಶೋಧಿಸಿ ಬರೆದ ಸರ್ವಜ್ಞ ವಚನಗಳ ಮೊದಲನೇ ಮುದ್ರಣದ ವಿಸ್ತಾರವಾದ ಪೀಠಿಕೆಯಲ್ಲಿ ಸರ್ವಜ್ಞನೆಂಬ ಹೆಸರಿನ ಕವಿಗಳು ಕನ್ನಡದಲ್ಲಿ ಹಲವರಾಗಿರಬಹುದೆಂಬ ಅರ್ಥವನ್ನು ಎಲ್ಲಿಯೂ ಹೊರಗೆಡವಿಲ್ಲ.

ಪ್ರಾಕ್ತನವಿಮರ್ಶವಿಚಕ್ಷಣ, ಮಹಾಮಹೋಪಾಧ್ಯಾಯ, ರಾವಬಹದ್ದೂರ ಆರ್ ನರಸಿಂಹಾಚಾರ್ಯ ಎಂ. ಎ. *M. R. A. S.* ಅವರಾದರೂ ಕನ್ನಡ ಕವಿಚರಿತ್ರೆಯನ್ನು ಎರಡನೇಭಾಗದಲ್ಲಿ ಸರ್ವಜ್ಞಮೂರ್ತಿ ವಿಚಾರವನ್ನು ಚರ್ಚಿಸುವಾಗ ಈ ಹೆಸರಿನ ಹಲವರಾಗಿರಬಹುದೆಂಬ ಅಭಿಪ್ರಾಯವನ್ನು ಎಲ್ಲಿಯೂ ಹೇಳಿಲ್ಲ. ಆದರೂ ಈ ವಿಚಾರದಲ್ಲಿ ನಮಗುಂಟಾದ ಸಂದೇಹಗಳನ್ನು ಚರ್ಚಿಸಿದರೆ ಸಂಶೋಧಕರ ಮನಸ್ಸು ಇತ್ತಬೀಳಬಹುದೆಂದು ನಾನು ಭಾವಿಸುತ್ತೇನೆ.

ಸರ್ವಜ್ಞಮೂರ್ತಿಯು ತ್ರಿಪದಿಗಳನ್ನು ಬರೆದನೆಂಬುದು ಪ್ರಸಿದ್ಧವಾದ ವಿಚಾರ. ಚೌಪದಿಗಳನ್ನೂ ಹಾಡುಗಳನ್ನೂ ಬರೆದಿರುವ ಕವಿಗಳು ಅಥವಾ

ಕವಿಯು ಬೇರೊಬ್ಬನಿರಬಹುದೆಂದು ತೋರುತ್ತದೆ. ಮೂಲ ಗ್ರಂಥಗಳು ನಮ್ಮ ಹಸ್ತಗತವಾಗುವ ವರೆಗೆ ನಾವೀ ವಿಚಾರದಲ್ಲಿ ಸಿದ್ಧಾಂತ ಮಾಡ ಲಾಗುವುದಿಲ್ಲ.

ಪ್ರಾಚೀನ ಗ್ರಂಥ ಸಂಶೋಧಕರೂ, ಕನ್ನಡ ಸಾಹಿತ್ಯಸೇವಾಸಕ್ತರೂ ಆದ ವೇ. ನಿಃ ನಿಮಠದ ಶಾಂತವೀರಾದ್ಯರು ಈಗ ಒಂದು ವರ್ಷದ ಕೆಳಗೆ ನಾನು ದಾವಣಗೇರಿಯಲ್ಲಿ ಅವರಿಗೆ ಭೆಟ್ಟಿಯಾದಾಗ ಪ್ರಸಂಗತ್ವೇನ "ಸರ್ವಜ್ಞಮೂರ್ತಿಗಿಂತಲೂ ಭಿನ್ನನಾದ ಸರ್ವಜ್ಞಕವಿ" ಎಂಬುವನೊಬ್ಬ ನಿದ್ದಾನೆಂದೂ ಆತನ ಗ್ರಂಥವು ತಮ್ಮ ಸಂಗ್ರಹದಲ್ಲಿದೆಯೆಂದೂ ಹೇಳಿ ದ್ದರು. ನಾನು ಈ ಪೀಠಿಕೆಯನ್ನು ಬರೆಯುವ ಮೊದಲು ಆ ಗ್ರಂಥ ವನ್ನು ಹಸ್ತಗತ ಮಾಡಿಕೊಳ್ಳಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲವಾಗಿ ಉಪಾಯವಿಲ್ಲವಾಗಿದೆ.

"ಸರ್ವಜ್ಞ ತ್ರಿಪದಿಗಳನ್ನು ಸಂಪಾದನೆಯು ಸಿದ್ಧವೀರೇಶನು ಸಂಗ್ರ ಹಿಸಿದ್ದಾನೆಂದು ಕವಿಚರಿತ್ರೆಗಾರರೇ ಹೇಳಿದ್ದಾರೆ. ಸಿದ್ಧವೀರನ ಕಾಲ, ಕ್ರಿ. ಶ. ೧೬೦೦ ಎಂದು ಅವರೇ ನಿರ್ಣಯಿಸಿದ್ದಾರೆ. ಅಲ್ಲದೆ ಕೆಲವು ತಾಳವೋಲೆ ಗ್ರಂಥಗಳಲ್ಲಿ 'ಱ' ಎಂಬ ಪ್ರಾಚೀನಾಕ್ಷರವು ಲಭಿಸುವದ ರಿಂದ ತ್ರಿಪದಿಕರ್ತೃನಾದ ಸರ್ವಜ್ಞಮೂರ್ತಿಯು ಕ್ರಿ ಶ. ೧೬೦೦ ಕ್ಕಿಂತಲೂ ಹಿಂದಿನವನಾಗಿರಬೇಕೆಂದು ಸಿದ್ಧವಾಗುತ್ತದೆ.

ಕಾಲಜ್ಞಾನ ತ್ರಿವಿಧಿಯಲ್ಲಿ ವಿಜಯನಗರದ ನಾಶ, ಶ್ರೀರಂಗಪಟ್ಟಣ ಆಂಗ್ಲರ ವಶವಾದುದು ಈ ಮೊದಲಾದ ಹೊಸ ವಿಚಾರಗಳಿರುವುದರಿಂದ ಈ ಕಾಲಜ್ಞಾನಕರ್ತೃವು ಆಧುನಿಕನಾಗಿರಬೇಕು. ಇವನನ್ನೇ ಸರ್ವಜ್ಞ ಮುನಿ ಎಂದು ಕರೆಯಬಹುದು. ಉತ್ತಂಗಿಯವರೇ ಹೇಳುವಂತೆ ಬಾದಾಮಿ ತಾಡವೋಲೆ ಗ್ರಂಥದಮೇಲೆ "ಸರ್ವಜ್ಞಗಣೇಶ್ವರನು ನಿರೂಪಿ ಸಿದ ಕಾಲಜ್ಞಾನವಚನವೆಂದು ಹೆಸರು" ಎಂದಿರುವುದಾದ ಪ್ರಯುಕ್ತ ಈ ಕಾಲಜ್ಞಾನ ಕರ್ತೃವು ಮೂಲ ಸರ್ವಜ್ಞಮೂರ್ತಿಯಲ್ಲನೆಂದೂ ಸರ್ವಜ್ಞಗ ಣೇಶ್ವರ, ಸರ್ವಜ್ಞಮುನಿ ಎಂಬ ಹೆಸರಿನ ಅನ್ಯನೆಂದೂ ಇವನು ಬಸವನ ಕಾಲಜ್ಞಾನವಚನವನ್ನೇ ತ್ರಿಪದಿರೂಪದಲ್ಲಿ ಬರೆದು ತನ್ನ ಕೆಲವು ವಿಚಾರ ಗಳನ್ನು ಸೇರಿಸಿದನೆಂದೂ ಹೇಳಬಹುದು.

"ಪರಮಾರ್ಥ" ಎಂಬ ಮುದ್ರಿಕೆಯ ಕೆಲವು ಪದ್ಯಗಳನ್ನು ನಾವು ಸರ್ವಜ್ಞ ವಚನಗಳ ಪ್ರಥಮಮುದ್ರಣದ ಪುಟ ೭೦ ರಲ್ಲಿ ಕಾಣಬಹು

ದಾಗಿದೆ. ಇವುಗಳ ರಚನಾವಿಧಾನವನ್ನು ನೋಡಿದರೂ ಇವೂ ಸಹ ಸರ್ವಜ್ಞಮುನಿಯವೇ ಹೊರತು ಸರ್ವಜ್ಞಮೂರ್ತಿಯವಲ್ಲವೆಂದು ಹೇಳಬಹುದಾಗಿದೆ. ಸಾರಾಂಶಃ— ಕನ್ನಡ ಭಾಷೆಯಲ್ಲಿ ತ್ರಿಪದಿಗಳನ್ನು ಬರೆದು ಪ್ರಸಿದ್ಧನಾದ ಪ್ರಾಚೀನ ಸರ್ವಜ್ಞಮೂರ್ತಿ, ಇವನಿಗೆ ಸಾಲೆಸರ್ವಜ್ಞನೆಂದೂ ಹೆಸರು. ಇವನನ್ನು ಸ್ಪರ್ಧಿಸಲು ಚೌಪದಿಹಾಡುಗಳನ್ನು ಬರೆದಿರಬಹುದು. ಸರ್ವಜ್ಞಕವಿ, ಕಾಲಜ್ಞಾನತ್ರಿಪದಿಗಳನ್ನು ಬರೆದ ಸರ್ವಜ್ಞಗಣೇಶ್ವರ ಅಥವಾ ಸರ್ವಜ್ಞಮುನಿ ಎಂದೂ "ಪರಮಾರ್ಥ" ಎಂಬ ಮುದ್ರಿಕೆಯುವನು ಸರ್ವಜ್ಞಮುನಿಯೇ ಆಗಬಹುದೆಂದು ತೋರಿಬರುತ್ತದೆ.

ಈ ವಿಚಾರವು ಅತ್ಯಂತ ಮಹತ್ವದ್ದಿದ್ದು ಸಂಶೋಧಕರು ಇತ್ತ ಲಕ್ಷಿಸಬೇಕೆಂದು ನಾನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇನೆ. ಕಾಲಜ್ಞಾನ ತ್ರಿಪದಿಗಳನ್ನು ಬರೆದು ಶ್ರೀರಂಗಪಟ್ಟಣವು ಆಂಗ್ಲರ ವಶವಾದುದನ್ನು ಹೇಳುವ ಸರ್ವಜ್ಞನು ಸಂಪಾದನೆ ಸಿದ್ಧವೀರಾಚಾರ್ಯನ ಕಾಲಕ್ಕಿಂತ ಹಿಂದಿದ್ದ ಸರ್ವಜ್ಞಮೂರ್ತಿಗಿಂತ ಭಿನ್ನನೆಂಬುದರಲ್ಲಿ ಅನುಮಾನವಿಲ್ಲ. ತ್ರಿಪದಿಕಾರನಾದ ಸರ್ವಜ್ಞಮೂರ್ತಿ ಅಥವಾ ಸಾಲೆಸರ್ವಜ್ಞನು ೧೬ನೇ ಶತಮಾನಕ್ಕಿಂತ ಹಿಂದಿನವನಾಗಿರಲೇಬೇಕೆಂದು ತೋರುತ್ತದೆ.

## ಕವಿಯ ಕಾಲ.

ಸರ್ವಜ್ಞಮೂರ್ತಿಯ ಕಾಲವಿಚಾರದಲ್ಲಿ ವಿದ್ವಾಂಸರಲ್ಲಿ ಮತಭೇದವಾಗಿದೆ.

೧. ಮಿ॥ ಕಿಟಲ್‌ಸಾಹೇಬರು ೧೮ ನೇ ಶತಮಾನದವನೆನ್ನುವರು.

೨. ಶ್ರೀ. ಆರ್. ನರಸಿಂಹಾಚಾರ್ಯರು ೧೭ ನೇ ಶತಮಾನವೆನ್ನುವರು.

೩. ಶ್ರೀ. ಉತ್ತಂಗಿ ಚನ್ನಪ್ಪನವರು ೧೬ ನೇ ಶತಮಾನವೆನ್ನುವರು.

೪. " ಸರ್ವಜ್ಞ ಸಂದೇಶ " ಕಾರರೂ ೧೬ ನೇ ಶತಮಾನವನ್ನೇ ಒಪ್ಪಿರುವರು.

ಸಂಪಾದನೆಯ ಸಿದ್ಧವೀರಣಾಚಾರ್ಯನು (ಕ್ರಿ. ಶ. ೧೬೦೦) ಸರ್ವಜ್ಞತ್ರಿಪದಿಗಳನ್ನು ಸಂಗ್ರಹಿಸಿರುವದರಿಂದ ಸರ್ವಜ್ಞಮೂರ್ತಿಯು ಸಿದ್ಧವೀರಣಾಚಾರ್ಯನಿಗಿಂತಲೂ ಹಿಂದಿನವನಾಗಿರಲೇಬೇಕೆಂದು ಹಿಂದೆಯೇ ಹೇಳಲಾಗಿದೆ. ನಮ್ಮ ಊಹೆಯ ಪ್ರಕಾರ "ಸರ್ವಜ್ಞಮುನಿ"ಯ ಕಾಲ

ಜ್ಞಾನ ತ್ರಿಪದಿಗಳನ್ನು ಸರ್ವಜ್ಞಮೂರ್ತಿಯ ವಚನಗಳಲ್ಲಿ ಮಿಶ್ರ ಮಾಡಿ ಪ್ರಕಟಿಸಿದುದೇ ಇವನ ಕಾಲದಲ್ಲಿ ವಿದ್ವಾಂಸರಲ್ಲಿ ಮತಭೇದವಾಗಲಿಕ್ಕೆ ಕಾರಣವಾಯ್ತು. ಮೂಲ ಸರ್ವಜ್ಞನೂ ಕಾಲಜ್ಞಾನದ ಸರ್ವಜ್ಞನೂ ಬೇರೆಯೆಂದರೆ, ಸರ್ವಜ್ಞಮೂರ್ತಿಯು ೧೬ ನೇ ಶತಕಕ್ಕೆ ಹಿಂದಿನವನೇ ಆಗುತ್ತಾನೆ. ಕಾಲಜ್ಞಾನ ಕರ್ತೃವು ಬೇರೆಯಲ್ಲವಾದರೆ ಮಿ॥ ಕಿಟಲ್ ಪಂಡಿತರ ಮತವೇ ನಿಶ್ಚಯವಾಗಬೇಕಾಗುತ್ತದೆ. ಸಾರಾಂಶವೇನಂದರೆ:- ಹಾಡುಗಳ ಸರ್ವಜ್ಞಕವಿ, ಕಾಲಜ್ಞಾನದ ಸರ್ವಜ್ಞಮುನಿ, ತ್ರಿಪದಿಗಳ ಸರ್ವಜ್ಞಮೂರ್ತಿ ಇವರುಗಳು ಭಿನ್ನರಾಗಿರಬಹುದೆಂದು ತೋರುತ್ತದೆ. ಪ್ರಾಚೀನನಾದ ಸರ್ವಜ್ಞಮೂರ್ತಿಯು ೧೬ ನೇ ಶತಮಾನಕ್ಕೆ ಹಿಂದಿನವನಾಗಿರಬೇಕೆಂದು ನಮ್ಮ ಅಭಿಪ್ರಾಯವಾಗಿದೆ.

## ಸರ್ವಜ್ಞನ ಮತ.

ಈ ಕವಿಯ ಉದಾರಭಾವದಿಂದ ಯುಕ್ತವಾದ ಕೆಲವು ವಚನಗಳನ್ನು ಕಂಡು ಹಲವರು ಇವನನ್ನು ಯಾವ ಮತಕ್ಕೂ ಅಂಟದ ಅವಧೂತನಾಗಿರಬಹುದೆಂದು ಶಂಕಿಸುತ್ತಾರೆ. ಇದು ಎಷ್ಟು ಮಾತ್ರಕ್ಕೂ ಸರಿಯಲ್ಲ. ಕವಿಚರಿತ್ರೆಕಾರರು ಹೇಳಿರುವಂತೆ ಇವನು ವೀರಶೈವ ಕವಿಯೇ ಆಗಿದ್ದಾನೆ. ಇವನ ಷಟ್‌ಸ್ಥಲ ಪದ್ಧತಿಯಲ್ಲಿ ಇದಕ್ಕೆ ಬೇಕಾದಷ್ಟು ನಿದರ್ಶನಗಳನ್ನು ಕೊಡಬಹುದು.

(೧) ಇವನು ವೀರಶೈವ ಸಿದ್ಧಾಂತಾನುಸಾರವಾಗಿ ಶಿವಾಧಿಕ್ಯವನ್ನು ಸ್ಥಾಪಿಸುತ್ತಾನೆ. ಉದಾಹರಣೆ:—"ಹುಟ್ಟಿಸುವನಜನೆಂಬ ಕಷ್ಟದಾ ನುಡಬೇಡ। ಹುಟ್ಟಿಸನು ತನ್ನ ಶಿರವರಿಯೆ ಮತ್ತೊಂದ। ಹುಟ್ಟಿಸನದೇಕೆ ಸರ್ವಜ್ಞ॥" ಎಂಬೀ ಪದ್ಯದಲ್ಲಿ ಚತುರ್ಮುಖ ಬ್ರಹ್ಮನನ್ನೂ, "ಹತ್ತು ಭವವನು ಎತ್ತಿ ಎತ್ತು ಎಮ್ಮೆಯ ಕಾದು। ಮತ್ತೆ ಪಾಂಡವರಿಗಾಳಾದ ಹರಿಯು ತಾ। ನೆತ್ತಣಾ ದೈವ ಸರ್ವಜ್ಞ॥" ಎಂಬ ಪದ್ಯದಲ್ಲಿ ನಾರಾಯಣನನ್ನೂ ಧಿಃಕರಿಸಿ "ಹರಿಬೊಮ್ಮರೆಂಬುವರು ಹರನಿಂದಲಾದವರು। ಅರಸಿಗೆ ಆಳು ಸರಿಯಹನೆ? ಶಿವನಿಂದ। ಮೆರೆವರಿನ್ನಾರು ಸರ್ವಜ್ಞ॥" ಎಂಬ ಪದ್ಯದಲ್ಲಿ ಶಿವನ ಹೆಚ್ಚುಗಾರಿಕೆಯನ್ನು ನಿರೂಪಿಸಿದ್ದಾನೆ. ಈ ರೀತಿಯಲ್ಲಿ ವಿಷ್ಣು-ಬ್ರಹ್ಮರನ್ನು ಹಳಿದು ಶಿವನೇ ದೇವತೆಗಳಲ್ಲಿ ಅಧಿಕನೆಂದು ಸಾಧಿಸತಕ್ಕವರು ವೀರಶೈವ ಕವಿಗಳ ಹೊರತು ಮತ್ತಾರೂ ಅಲ್ಲ.

(೨) ವೀರಶೈವ ಸಾಹಿತ್ಯದ ಪಾರಿಭಾಷಿಕ ಶಬ್ದಗಳು (*Technical words*) ಇವನ ಗ್ರಂಥದಲ್ಲಿ ಬಹಳವಾಗಿವೆ. "ಕರಣ ಪ್ರಸಾದವ ನೆಂಜಲೆಂದವನಿಗೆ, ಲಿಂಗವುಳ್ಳನೆ ಪುರುಷ, ನಿಜ ಸುಖಿ ಮಹೇಶ್ವರನು, ಆರ್ಪಿತದ ಭೇದ, ಲಿಂಗವಿರಹಿತನಾಗಿ ನುಂಗದಿರು ಎನುವನು, ಜಂಗಮ ಭಕ್ತರ ನಡೆ ಲೇಸು, ಐಕ್ಯದೊಳಗಿಪ್ಪ ಶರಣರಿಗೆ, ಇಷ್ಟಲಿಂಗದಿ ಮನವ ನಟ್ಟನೇ ನಿಲಿಸದೇ, ಕಂಡವರ ಕಂಡು ತಾ ಕೊಂಡು ಲಿಂಗವ ಕಟ್ಟಿ ಕಾಯಕದ ಭಕ್ತನಾ ಯಯುತರ ನೋಡಿರೋ? ಲಿಂಗಸಂಗಿಗಳ ನುಡಿ ಲೇಸು, ಸಜ್ಜೆಯಲ್ಲಿ ಶಿವನ ಧರಿಸಿಪ್ಪ ಶರಣರ, ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವದು" ಇತ್ಯಾದಿ ವಚನಗಳು ಈ ಕವಿಯು ವೀರ ಶೈವನೆಂಬುದಕ್ಕೆ ಸಾಕ್ಷಿಯಾಗಿವೆ.

(೩) ಕರ್ಣಾಟಕದಲ್ಲೆಲ್ಲಾ ಬಹುದಿನಗಳಿಂದಲೂ ಇವನನ್ನು ವೀರ ಶೈವನೆಂದೇ ಹೇಳಿಕೊಂಡು ಬರುತ್ತಿದ್ದಾರೆ.

ಈ ಎಲ್ಲ ಕಾರಣಗಳಿಂದಲೂ ಸರ್ವಜ್ಞಮೂರ್ತಿಯು ವೀರ ಶೈವನೂ, ವೀರಶೈವ ಸಿದ್ಧಾಂತವನ್ನು ಚನ್ನಾಗಿ ಬಲ್ಲವನೂ ಆಗಿದ್ದ ನೆಂದು ನಿರ್ಧರವಾಗಿ ಹೇಳಬಹುದು ಆದರೆ ಇವನು ವಚನಕಾರರಿ ಗಿಂತಲೂ ಉದಾರನೂ ಲೌಕಿಕ ವಿಚಾರದಲ್ಲಿ ಕುಶಲನೂ ಆಗಿದ್ದಾ ನೆಂಬುದರಲ್ಲಿ ಅನುಮಾನವಿಲ್ಲ.

## ಕವಿಯ ಚರಿತ್ರೆ.

ಬಾಲ್ಯ:— ಶ್ರೀಯುತ ಉತ್ತಂಗಿ ಚನ್ನಪ್ಪನವರು ಸರ್ವಜ್ಞ ವಚ ನಗಳ ಪ್ರಥಮ ಮುದ್ರಣ ಪೀಠಿಕೆಯಲ್ಲಿ ಈ ಕವಿಯ ಚರಿತ್ರೆಯನ್ನು ಬಹಳ ಚನ್ನಾಗಿಯೂ, ವಿಸ್ತಾರವಾಗಿಯೂ ಹೇಳಿದ್ದಾರೆ. ಸರ್ವಜ್ಞನು ತನ್ನ ಜನ್ಮ ವೃತ್ತಾಂತವನ್ನು ತಾನೇ ಬರೆದಿರುವುದರಿಂದ ಇವನ ಜೀವನ ಚರಿತ್ರೆ ಯನ್ನು ತಿಳಿಯಬೇಕೆನ್ನುವವರಿಗೆ ಕೊಂಚ ಅನಕೂಲವಾಗಿದೆ. ಧಾರ ವಾಡ ಜಿಲ್ಲೆಯ ಮಾಸೂರ ಗ್ರಾಮದ ಬಸವರಸನೆಂಬ ಆರಾಧ್ಯ ಬ್ರಾಹ್ಮ ಣನು ತನ್ನ ಹೆಂಡತಿ ಅಕ್ಕ ಮಲ್ಲಮ್ಮನು ಮಕ್ಕಳಿಲ್ಲದೆ ಮರಗುತ್ತಿರಲು ಕಾಶಿಯ ಮುಕ್ಕಣ್ಣನ ದರ್ಶನಕ್ಕೆ (ಪುತ್ರಕಾಂಕ್ಷಿಯಾಗಿ) ಹೋದನು. ವಿಶ್ವನಾಥನ ಅನುಗ್ರಹವೂ ಆಯಿತು. ಮತ್ತೆ ಹಿಂತಿರುಗಿ ಬರುವಾಗ ಅಂಬಲೂರಿನ ಕುಂಬಾರ ಮಾಳಿಯೆಂಬವಳು ಕರ್ಮಧರ್ಮ ಸಂಯೋಗ

ದಿಂದ ಗಂಟು ಬೀಳಲು ಅವರೀರ್ವರ ಸಂಪರ್ಕದಿಂದ ಸರ್ವಜ್ಞನುದಯಿಸಿದನು. ಸರ್ವಜ್ಞನ ಬಾಲ್ಯವೆಲ್ಲಾ ಕುಂಬಾರ ಸಾಲೆಯಲ್ಲಿಯೇ ಕಳೆಯಿತು. ಇದರಿಂದಲೇ ಇವನಿಗೆ ಸಾಲೆಸರ್ವಜ್ಞನೆಂಬ ಹೆಸರೂ ಬಂದಿರಬಹುದೆಂದು ತೋರುತ್ತದೆ.

ಸರ್ವಜ್ಞನು ತಾನು ಮೊದಲು ಕೈಲಾಸದಲ್ಲಿ ಪುಷ್ಪದತ್ತನೆಂಬ ಪ್ರಮಥನೆಂದೂ, ತಾನು ಹಿಂದಿನ ಜನ್ಮದಲ್ಲಿ ವರರುಚಿಯಾಗಿದ್ದೆನೆಂದೂ, ಈ ಜನ್ಮದಲ್ಲಿ ಸಾಲೆಸರ್ವಜ್ಞನಾದೆನೆಂದೂ ತನಗೆ ಬಸವರಸ-ಮಾಳವ್ವೆಯರು ಕೇವಲ ನಿಮಿತ್ತ ಮಾತ್ರರಾದ ತಂದೆ-ತಾಯಿಗಳೆಂದೂ ತಾನು ನಿಜವಾಗಿ ಪಾರ್ವತೀ-ಪರಮೇಶ್ವರನ ವರಪುತ್ರನೆಂದೂ ಹೇಳಿಕೊಂಡಿದ್ದಾನೆ. ಬಸವೇಶ್ವರನು ತನ್ನ ಹಿಂದಿನ ಏಳು ಜನ್ಮಗಳ ವೃತ್ತಾಂತವನ್ನೂ ಗೌತಮಬುದ್ಧನು ತನ್ನ ನಲವತ್ತು ಜನ್ಮಗಳ ವೃತ್ತಾಂತವನ್ನೂ ಹೇಳಿದ್ದಾರೆ. ಹೀಗೆಯೇ ಸರ್ವಜ್ಞನು ತನ್ನ ಹಿಂದಿನ ಜನ್ಮಗಳೆರಡರ ವೃತ್ತಾಂತವನ್ನು ಅರಿತು ಹೇಳಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಮಹಾತ್ಮರಾದವರಿಗೆ ಇದು (ಹೀಗೆ ಜನ್ಮಾಂತರ ವಿಚಾರ ತಿಳಿಯುವುದು) ಸ್ವಾಭಾವಿಕವಾಗಿದೆ. ಅಂತಹ ವಿಶೇಷವಾದ ಸಂಸ್ಕಾರವುಳ್ಳವರಾದ್ದರಿಂದಲೇ ಅವರನ್ನು ಮಹಾಪುರುಷರೆಂದು ಕರೆಯುತ್ತಾರೆ.

ಸರ್ವಜ್ಞನು ಕೇವಲ ಬಾಲ್ಯದಲ್ಲಿಯೇ ಕುಂಬಾರ ಸಾಲೆಯನ್ನು ಬಿಟ್ಟು ಹೊರಟು ಹೋದಂತೆ ಕಾಣುತ್ತದೆ. ಇವನು ಮಾಳಿ-ಮಾಳರನ್ನು ಮಾತಾ-ಪಿತೃಗಳೆಂದು ಗೌರವಿಸದೆ ಧಿಃಕರಿಸಿ ತಾನು "ಚಂದ್ರಶೇಖರನ ವರಪುತ್ರ"ನೆಂದು ವಾದಿಸಿದುದೇ ಇದಕ್ಕೆ ಕಾರಣವಾಗಿರಬೇಕು.

ಪ್ರೌಢಾವಸ್ಥೆ:— ಸರ್ವಜ್ಞನು ಒಂದೆಡೆಯಲ್ಲಿ ನಿಲ್ಲದೆ ಸದಾ ದೇಶಾಟನದಲ್ಲಿಯೂ, ವಿದ್ವತ್ಸಂಭಾಷಣೆಯಲ್ಲಿಯೂ, ಪರಶಿವ ಧ್ಯಾನ-ಪೂಜೆಗಳಲ್ಲಿಯೂ ಕಾಲ ಕಳೆಯುತ್ತಿದ್ದನೆಂದು ತೋರುತ್ತದೆ. ಇವನ ವಚನಗಳನ್ನು ಓದಿದರೆ ಕಡೆಯಪಕ್ಷ ಇವನು ಸಮಗ್ರ ಕನ್ನಡ ದೇಶವನ್ನೆಲ್ಲಾ ಸಂಚರಿಸಿರಬೇಕೆಂದು ಊಹಿಸಬಹುದಾಗಿದೆ. ಅಲ್ಲದೆ ಆಂಧ್ರ ದ್ರಾವಿಡರ ಪರಿಚಯವೂ ಇವನಿಗಾಗಿರಬಹುದೆಂಬುದು ಇವನು ತೆಲುಗರನ್ನೂ ತಿಗುಳರನ್ನೂ ಅಣಕಿಸಿರುವ ಪದ್ಯಗಳಿಂದ ತಿಳಿಯಬರುತ್ತದೆ.

ಸರ್ವಜ್ಞನ ಜನ್ಮತಿಥಿ ಯಾವುದು? ಅವನು ಎಷ್ಟು ವರ್ಷ ಬಾಳಿದನು? ಅವನ ವಿದ್ಯಾಭ್ಯಾಸವೆಲ್ಲಿ? ಅವನ ಅಂತ್ಯವೆಂದು? ಸಮಾಧಿ

ಯೆಲ್ಲಿ? ಎಂಬೀ ರಹಸ್ಯವನ್ನು ಇತಿಹಾಸ ಪುರುಷನು ನಮಗೆ ತಿಳಿಸಿ ಕೊಡುವಂತಿಲ್ಲ. ಅವನ ಗ್ರಂಥವನ್ನು ಓದುವುದರಿಂದ ಅವನು ಸುಮಾರು ನಲವತ್ತು-ಐವತ್ತು ವರ್ಷಗಳ ವರೆಗಾದರೂ ಬದುಕಿದ್ದು ಕಡೆಗೆ ಶಿವ ಯೋಗದಿಂದ ಲಿಂಗದಲ್ಲಿ ಅಡಗಿರಬಹುದೆಂದು ಹೇಳಬಹುದಾಗಿದೆ. ಸಾರಾಂಶಃ– ಸರ್ವಜ್ಞಮೂರ್ತಿಯ ಜನ್ಮ-ಬಾಲ್ಯಗಳ ವಿಚಾರವಾಗಿ ಕೆಲವು ಸಂಗತಿಗಳು ತಿಳಿದುಬಂದರೂ ಅವನ ಯೌವನ-ವಾರ್ಧಿಕ್ಯಕಾಲ ವಿಚಾರವೂ, ಅವನು ಐಕ್ಯನಾದ ಮತ್ತು ಎಲ್ಲಿ ಸಮಾಧಿಸ್ಥನಾದನೆಂಬ ಸಮಾಚಾರವೂ ಇನ್ನೂ ತಿಳಿದುಬಂದಿಲ್ಲವೆಂದು ವಿಧಿಯಿಲ್ಲದೆ ಒಪ್ಪಿಗೊಳ್ಳಬೇಕಾಗಿದೆ.

## ಜೀವನಧ್ಯೇಯ.

ಪ್ರತಿಭಾಶಾಲಿಯಾದ ಸರ್ವಜ್ಞನು ಯಾವಾಗಲೂ ಗರ್ವದಿಂದಿರದೆ ಸರ್ವರೊಳಗೊಂದೊಂದು ನುಡಿಗಲ್ತು ವಿದ್ಯದ ಪರ್ವತವೆ ಆಗಿ ತನ್ನಲ್ಲಿದ್ದ ಜ್ಞಾನಾಮೃತವನ್ನು ಕನ್ನಡಿಗರಿಗೆಲ್ಲಾ ಹಂಚುತ್ತ ಪಟ್ಟಣಕ್ಕೆ ಪಂಚ ರಾತ್ರೆ ಹಳ್ಳಿಗೆ ಏಕರಾತ್ರೆಯಂತೆ ಸಂಚರಿಸಿ ತಾನು ವಿರಕ್ತನೂ ನಡೆನು ಡಿಗಳಲ್ಲೊಂದಾದ ಮಹಿಮನೂ ಆಗಿ ಜನರಿಗೆ ಭಕ್ತಿ, ಜ್ಞಾನ, ವೈರಾಗ್ಯ ಬೋಧೆ ಮಾಡುತ್ತಾ "ನೀತಿಯೆ ಸಕಲ ಲೋಕಕ್ಕೆಲ್ಲ ಸಾಧನವೆಂದು" ಡಂಗೂರು ಸಾರುತ್ತ ತನ್ನ ಸಿಡಿಲಿನ ನುಡಿಗಳಿಂದ ಕನ್ನಡಿಗರನ್ನು ಬಡಿ ದೆಬ್ಬಿಸಿ ತನ್ನ ಜನ್ಮವನ್ನು ಸಾರ್ಥಕವಮಾಡಿಕೊಂಡುದರ ಜತೆಗೆ ಕರ್ಣಾ ಟಕವನ್ನೂ ಹುರಿದುಂಬಿಸಿ ಕಳೆಯೇರಿಸಿ ನಾಡಿನ ಸೇವೆಗಾಗಿ ಹೆಣ ಗಾಡಿದನು. ಇದುವೇ ಅವನ ಜೀವನ ಧ್ಯೇಯವೆಂದು ನಾವು ಅನು ಮಾನವಿಲ್ಲದೆ ಹೇಳಬಹುದಾಗಿದೆ.

## ಗ್ರಂಥರಚನೆ.

ಈಗ ನಮಗೆ ಪ್ರಾಪ್ತವಾಗಿರುವ ವಚನಗಳನ್ನೆಲ್ಲಾ "ಸರ್ವಜ್ಞಮೂರ್ತಿ" ಯೇ ಗ್ರಂಥರೂಪದಲ್ಲಿ ಬರೆದಿಟ್ಟನೆಂದು ಹೇಳಲಾಗುವುದಿಲ್ಲ. ಹಾಗಿದ್ದರೆ ಜೈಮಿನಿಭಾರತ, ಚನ್ನಬಸವಪುರಾಣ ಮೊದಲಾದ ಗ್ರಂಥಗಳ ತಾಳ ಪೋಲೆ ಪ್ರಾಚೀನ ಪ್ರತಿಗಳು ಸಿಕ್ಕಿದಂತೆ ಸರ್ವಜ್ಞ ತ್ರಿಪದಿಗಳ ಪೂರ್ಣ ಪ್ರತಿಯು ಸಿಗಬೇಕಾಗಿತ್ತು. ಸರ್ವಜ್ಞನು ಕೆಲವು ಮುಖ್ಯವಾದ ವಚ ನಗಳನ್ನು ಬರೆದಿಟ್ಟಿದ್ದರೂ ಇಟ್ಟಿರಬಹುದು. ಆದರೆ ವಿಶೇಷತಃ ಆತನ ಬಾಯಿಂದ ಕೇಳಿದವರು ಬರೆದಿಟ್ಟವು ಕೆಲವು. ಜನರಲ್ಲಿ ಬಾಯಿಂದ

ಬಾಯಿಗೆ ಪ್ರಚಾರದಲ್ಲಿ ಬಂದ ವಚನಗಳನ್ನು ಬರೆದಿಟ್ಟವು ಕೆಲವು. ಇಂತಹ ಸಂಗ್ರಹಕಾರರಲ್ಲಿ ಸಂಪಾದನೆ ಸಿದ್ಧವೀರಾಚಾರ್ಯನೊಬ್ಬನೆಂದು ಹೇಳಬಹುದು.

ಸರ್ವಜ್ಞನ ವಚನಗಳೆಲ್ಲಾ ಒಂದೆಡೆಯಲ್ಲಿ ಇದುವರೆಗೆ ಶ್ರೀಮಾನ್ ಉತ್ತಂಗಿಯವರು ಸರ್ವಜ್ಞ ವಚನಗಳ ಗ್ರಂಥವನ್ನು ಪ್ರಕಟಿಸುವ ವರೆಗೆ ಲಭಿಸುತ್ತಿರಲಿಲ್ಲವೆಂದು ಹೇಳಬಹುದಾಗಿದೆ. ಇಷ್ಟು ದೀರ್ಘಕಾಲದ ವರೆಗೆ ಸರ್ವಜ್ಞ ವಚನಗಳೆಲ್ಲವೂ ಒಂದೆಡೆ ಲಭಿಸದಂತಾಗಲು ಮುಖ್ಯ ಕಾರಣವೆಂದರೆ ಸರ್ವಜ್ಞನು ತನ್ನ ವಚನಗಳನ್ನೆಲ್ಲಾ ಒಂದು ಗ್ರಂಥರೂಪವಾಗಿ ಬರೆದಿಡದಿದ್ದುದೇ ಆಗಿದೆ.

## ವಚನಗಳ ಸಾರ.

ಸರ್ವಜ್ಞಮೂರ್ತಿಯ ವಚನಗಳನ್ನು ಪ್ರಕಾಶಕರು (೧) ಪಾರಮಾರ್ಥಿಕ ವಚನಗಳು, (೨) ನೈತಿಕ ವಚನಗಳು, (೩) ಲೌಕಿಕ ಪದ್ಯಗಳು ಎಂಬುದಾಗಿ ವಿಭಾಗಿಸಿದ್ದು ಯೋಗ್ಯವೇ ಆಗಿದೆ. ಪಾರಮಾರ್ಥಿಕ ವಚನಗಳು ವೀರಶೈವ ಸಿದ್ಧಾಂತಕ್ಕೆ ಸಂಬಂಧಪಟ್ಟ ಗುರು, ಲಿಂಗ, ಜಂಗಮ ತೀರ್ಥ, ಪ್ರಸಾದ ಮೊದಲಾದ ಅಷ್ಟಾವರಣ ವಿಚಾರಗಳನ್ನು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್ಸ್ಥಲ ವಿಚಾರಗಳನ್ನು ತಿಳಿಸತಕ್ಕವಾಗಿವೆ. ಮುಖ್ಯವಾಗಿ ಈ ಭಾಗವು ವೀರಶೈವ ಮತತತ್ವವನ್ನು ತಿಳಿಯುವವರಿಗೆ ಬಹಳ ಸಹಾಯಕವಾಗಿವೆ.

ನೈತಿಕವಚನಗಳುಃ— ಪ್ರಪಂಚದಲ್ಲಿ ಜೀವಿಸುವ ಪ್ರತಿಯೊಬ್ಬ ಮಾನವನಿಗೂ ಉಪಯುಕ್ತವಾಗಿವೆ. ಈ ಭಾಗದಲ್ಲಿ ಕವಿಯು ದಾನ, ಧರ್ಮ, ರಾಜನೀತಿ, ಸತ್ಸಂಗ, ದುಸ್ಸಂಗ, ಮೂರ್ಖರ ಸ್ವಭಾವ, ಅದೃಷ್ಟ ವಿಚಾರ ತನ್ನ ಕಾಲದ ಜೈನರು ಬ್ರಾಹ್ಮಣರು, ಇವರ ಸ್ವಭಾವ ವಿವಿಧವಾದ ನೀತಿಗಳು ಇವುಗಳನ್ನು ಹೇಳಿದ್ದಾನೆ.

ಲೌಕಿಕ ಪದ್ಧತಿಗಳಲ್ಲಿ ಸ್ತ್ರೀಯರ ಲಕ್ಷಣ, ಸ್ವಭಾವ, ಜಾತಿಯ ರೀತಿ, ವಿಟರ ಸ್ವಭಾವ, ವೇಶ್ಯಾ ಹೃದಯ, ಅನ್ನದಾನದ ಫಲ. ರಸವಾದ ಕೆಲವು ಜ್ಯೋತಿಶ್ಶಾಸ್ತ್ರದ ವಿಚಾರಗಳು ಬೆಡಗಿನ ವಚನ ಇವುಗಳನ್ನು ಹೇಳಿದ್ದಾನೆ. ಸಾರಾಂಶಃ— ಸರ್ಜ್ಞವಮೂರ್ತಿಯ ವಚನಗಳು ಮನುಷ್ಯನಿಗೆ ತಿಳಿಸಬೇಕಾದ ಸಕಲ ವಿಚಾರಗಳನ್ನೂ ಬಹಳ ಹೃದ

ಯಂಗವುವಾಗಿ ತಿಳಿಸುತ್ತವೆ. ಈತನ ಗ್ರಂಥವನ್ನು ಕನ್ನಡಿಗರ ವಸ್ತು ಕೋಶ (*Encyclopaedia*) ಎಂದು ಕರೆಯಬಹುದು. ಮುಖ್ಯ ವಾಗಿ ಈತನ ವಚನಗಳನ್ನು ಸಾಂಗವಾಗಿ ಓದಿದಲ್ಲಿ ಅವುಗಳ ಮಹ ತ್ವವು ಓದುಗರಿಗೆ ಅಂಗವಾಗಲಾರವು. ಸರ್ವಜ್ಞ ಕವಿಯ ಸರ್ವಜ್ಞತ್ವವು ತಿಳಿಯಲಾರದು.

## ಶಾಸ್ತ್ರ ಪಾಂಡಿತ್ಯ.

ಸರ್ವಜ್ಞ ಮೂರ್ತಿಗೆ "ಸರ್ವಜ್ಞ" ಎಂಬ ಹೆಸರು ಜನ್ಮನಾಮವಾ ಗಿರದೆ (ಆ ಜನ್ಮನಾಮ ನಮಗೆ ತಿಳಿದುಬಂದಿಲ್ಲ.) ಜನರು ಇವನ ಬಹುಶೃತತ್ವನ್ನು ಕಂಡುಕೊಟ್ಟ ಬಿರುದಾಗಿರಬಹುದು. ಕವಿಯೂ ಕೂಡ ಈ ಅಭಿಪ್ರಾಯವನ್ನೇ "ಸರ್ವಜ್ಞನೆಂಬುವನು ಗರ್ವದಿಂದಿರದವನೆ? । ಸರ್ವರೊಳೊಳಕೊಂಡು ನುಡಿಗಲಿತು ವಿದ್ಯದ । ಪರ್ವತವೆ ಸರ್ವಜ್ಞ" ಎಂಬ ವಚನದಲ್ಲಿ ಮೌನವಾಗಿ ಪ್ರಕಟಿಸಿದ್ದಾನೆ.

ಕವಿಕುಲಲಲಾಮನಾದ ಕಾಲಿದಾಸನೂ ಕೂಡ "ಮಂದಃ ಕವಿಯಶಃ ಪ್ರಾರ್ಥೀಗಮಿಷ್ಯಾಮ್ಯುಪಹಾಸ್ಯತಾಂ । ಪ್ರಾಂಶು ಲಭ್ಯೇ ಫಲೇಲೋಭಾ ದುದ್ಬಾಹುರಿವ ವಾಮನಃ ॥ ಅಂದರೆಃ— ಮಂದಬುದ್ಧಿಯುಳ್ಳ ನಾನು ಮಹಾ ಕವಿಯ ಕೀರ್ತಿಯನ್ನು ಅಪೇಕ್ಷಿಸಿ ಅಪಹಾಸ್ಯಕ್ಕೆ ಈಡಾಗುತ್ತಿದ್ದೇನೆ. ಈ ನನ್ನ ಪ್ರಯತ್ನವು ಗಿಡ್ಡ ಮಾನವನು ಉನ್ನತ ವೃಕ್ಷಕ್ಕೆ ಕೈಚಾಚಿ ವಿಫಲವಾದಂತಾಗಿದೆ" ಎಂದು ಹೇಳಿ ಅಪಾರವಾದ ವಿನಯ ವನ್ನು ಪ್ರಕಟಿಸಿರುವಾಗ ಈ ಕವಿಯು ಸರ್ವಜ್ಞನೆಂದು ಬಿರುದು ಕಟ್ಟಿ ಕೊಂಡುದು ಸರಿಯೇ? ಇದು ಇವನ ಹೆಮ್ಮೆಗೆ ನಿದರ್ಶನವಲ್ಲವೇ? ಎಂದು ಕೇಳುವವರೂ ಇದ್ದಾರೆ. ಇದಕ್ಕೆ ಸಮಾಧಾನವೂ ಉಂಟು.

ಕನ್ನಡ ಕವಿಗಳು ಪ್ರಾಯೇಣ ತಮ್ಮ ಬಿರುದುಗಳನ್ನು ತಾವು ಹೊಗಳಿ ಕೊಳ್ಳುವ ತಮ್ಮ ಪಾಂಡಿತ್ಯವನ್ನು ಹೊಗಳಿಕೊಳ್ಳುವ ಸಾಂಪ್ರದಾಯ ವುಳ್ಳವರಾಗಿದ್ದಾರೆ. ಕನ್ನಡ ಕವಿಗಳ ಈ ಸಂಪ್ರದಾಯಕ್ಕೆ ಸರ್ವಜ್ಞನು ಹೊರಗಾದವನಲ್ಲ. ಕನ್ನಡ ಕವಿಗಳ ಈ ಭಾವವು ದುರಹಂಕಾರವೆಂದು ಭಾವಿಸಬಾರದು. ಇದು ಆತ್ಮವಿಶ್ವಾಸದ ನುಡಿ. ಅಥವಾ ಸಾತ್ವಿಕಾ ಹಂಕಾರ. ಇದರಲ್ಲಿ ಸರ್ವಜ್ಞನು ತಾನು ಗರ್ವದಿಂದಾದವನಲ್ಲವೆಂದೂ ಸರ್ವರೊಳಗೊಂದೊಂದು ನುಡಿ ಕಲ್ತು ವಿದ್ಯದ ಪರ್ವತವಾದವನೆಂದೂ

ಬಹಳ ವಿನಯವಾದ ರೀತಿಯಿಂದಲೇ ತನ್ನ ಬಿರುದನ್ನು ಹೇಳಿ ವಾಚಕನ ಚಿತ್ತದ ಮೇಲೆ ತನ್ನ ಸರ್ವಜ್ಞತ್ವದ ಮುದ್ರೆ ಒತ್ತಿ ಅವರ ಚಿತ್ತ ಸಾಮ್ರಾಜ್ಯದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿಬಿಡುತ್ತಾನೆ. ಆದುದರಿಂದ ವಿನಯಮೂರ್ತಿಯಾದ ಕಾಲಿದಾಸನಂತೆಯೇ ಸಾತ್ವಿಕ ಹೆಮ್ಮೆಯ ಸರ್ವಜ್ಞಮೂರ್ತಿಯೂ ನಮಗೆ ಮಾನ್ಯನಾಗಿದ್ದಾನೆ. ಇವನ ಒಂದೊಂದು ವಚನವೂ ಕವಿಯ ಸರ್ವಜ್ಞತ್ವವನ್ನು ತೋರಿಸುತ್ತವೆಯೆಂಬದನ್ನು ವಾಚಕರು ಮೂಲ ಗ್ರಂಥವನ್ನು ಓದುವುದರಿಂದ ಮನಗಾಣಬಹುದು.

ಸರ್ವಜ್ಞನು ಈ ಪ್ರಪಂಚವೆಂಬ ಪಾಠಶಾಲೆಯಲ್ಲಿ ವಿದ್ವಾಂಸರಾದ ಅನೇಕ ಗುರುಗಳಿಂದ ಅನೇಕ ಶಾಸ್ತ್ರಗಳನ್ನು ಕಲಿತಿರಬಹುದೆಂದು ತೋರುತ್ತದೆ. ಇವನಿಗೆ ಜ್ಯೋತಿಷ-ವೈದ್ಯ-ರಸವಾದ-ಯೋಗ, ಸ್ತ್ರೀಪುರುಷ ಲಕ್ಷಣ, ಶಿವಾನುಭವ ಈ ಶಾಸ್ತ್ರಗಳಲ್ಲಿ ಬೇಕಾದಷ್ಟು ಪಾಂಡಿತ್ಯವಿತ್ತೆಂಬುದಕ್ಕೆ ಅವನ ಗ್ರಂಥವೇ ಸಾಕ್ಷಿಯಾಗಿದೆ. ಅವನ ಬೆಡಗಿನ ವಚನಗಳು ವಿದ್ವಾಂಸರನ್ನು ಬೆರಗುಗೊಳಿಸುವುದಲ್ಲದೆ ಬೆರಳನ್ನು ಸಹ ಕಚ್ಚುವಂತೆ ಮಾಡುತ್ತವೆ. ಮೇಲಾಗಿ ಸರ್ವಜ್ಞನು ಉತ್ತಮ ಸಾಹಿತ್ಯವಿದನೂ, ಮಿಗಿಲಾದ ಲೋಕಾನುಭವಿಯೂ ಆಗಿದ್ದನೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾದ ವಿಚಾರವಾಗಿದೆ. ಇವನ ವೈದ್ಯ ಪದ್ಧತಿ, ಜ್ಯೋತಿಷ ಪದ್ಧತಿ, ರಸವಾದ ಪದ್ಧತಿ, ಶಿವಯೋಗ ಪದ್ಧತಿ, ಇವುಗಳು ಇವನು ಅನೇಕ ಶಾಸ್ತ್ರಗಳನ್ನು ಬಲ್ಲವನೆಂಬುದಕ್ಕೆ ನಿದರ್ಶನವಾಗಿವೆ.

## ಸಂಸ್ಕೃತ ಜ್ಞಾನವಿತ್ತೆ?

ಸರ್ವಜ್ಞಮೂರ್ತಿಗೆ ಗೀರ್ವಾಣ ಭಾಷೆಯ ಪರಿಚಯವಿತ್ತೆ? ಎಂದು ಅನೇಕರು ಪ್ರಶ್ನೆಮಾಡುತ್ತಾರೆ. ಇವನ ಗ್ರಂಥವನ್ನೆಲ್ಲಾ ಓದಿದರೆ "ತತ್ವಮಸಿ" "ಜಾತಸ್ಯಮರಣಂಧೃವಂ" ಎಂಬ ಎರಡು ಮೂರು ಸಂಸ್ಕೃತ ಪದಗಳು ಮಾತ್ರ ಲಭಿಸುತ್ತವೆ. ಆದುದರಿಂದ ಇವನಿಗೆ ಸಂಸ್ಕೃತ ಭಾಷೆ ಬರುತ್ತಿರಲಿಲ್ಲವೆಂದು ಕೆಲವರು ತರ್ಕಿಸುತ್ತಾರೆ. ಇದು ಸರಿಯಲ್ಲವೆಂದು ತೋರುತ್ತದೆ. ಸರ್ವಜ್ಞಮೂರ್ತಿಯು ಅನೇಕ ಸಂಸ್ಕೃತನ್ಯಾಯಗಳ ತಿರುಳನ್ನು ಕನ್ನಡ ಗಾದೆಗಳಲ್ಲಿ ಹೇಳಿದ್ದಾನೆ. ಇಂತಹ ಕೆಲವು ಸಂಸ್ಕೃತನ್ಯಾಯಗಳನ್ನು ಶ್ರೀ ಉತ್ತಂಗಿಯವರು ಪ್ರಥಮ ಮುದ್ರಣದ ಪೀಠಿಕೆಯಲ್ಲಿ ಕೊಟ್ಟಿದ್ದಾರೆ. ಜ್ಯೋತಿಷ್ಯ, ವೈದ್ಯಾದಿಶಾಸ್ತ್ರಜ್ಞಾನವನ್ನು ಸಂಸ್ಕೃತಜ್ಞಾನವಿಲ್ಲದೆ

ಸಂಪಾದಿಸುವುದಕ್ಕಾಗುತ್ತಿರಲಿಲ್ಲವೆಂದು ಹೇಳಬಹುದು. ಸರ್ವಜ್ಞನು ಕೇವಲ ಪಂಡಿತರಿಗಾಗಿ ತನ್ನ ಗ್ರಂಥವನ್ನು ನಿರ್ಮಿಸದೆ ಜನಸಾಮಾನ್ಯರನ್ನು ಉದ್ದೇಶಿಸಿ ತನ್ನ ವಚನಗಳನ್ನು ಹಾಡಿದ್ದರಿಂದಲೂ ಅವನು ಸಂಪೂರ್ಣ ವಾಗಿ ಕನ್ನಡಿಗತನವುಳ್ಳ ಕವಿಯಾದದರಿಂದಲೂ ಸಂಸ್ಕೃತದ ಆಡಂಬರಕ್ಕೆ ಹೋಗದೆ ತಿರುಳುಗನ್ನಡದಲ್ಲಿಯೇ ತನ್ನ ತ್ರಿಪದಿಗಳನ್ನು ಹಾಡಿದ್ದಾನೆ. ಇವನಿಗೆ ಭಗವದ್ಗೀತೆ, ಉಪನಿಷತ್ತು ಮೊದಲಾದುವುಗಳ ಜ್ಞಾನವಿತ್ತೆಂದು ಇವನ ವಚನಗಳನ್ನು ಓದುವದರಿಂದ ತಿಳಿದುಬರುತ್ತದೆ. ಆದುದರಿಂದ ಸರ್ವಜ್ಞನು ಸಂಸ್ಕೃತ ಜ್ಞಾನಹೀನನೆಂಬುದು ಸರಿಯಲ್ಲವೆಂದು ನಮ್ಮ ಭಾವನೆಯಾಗಿದೆ.

## ಅಂದಿನ ಕರ್ಣಾಟಕದ ಸ್ಥಿತಿ.

ಸರ್ವಜ್ಞಮೂರ್ತಿ ವಚನಗಳಿಂದ ಅಂದಿನ ಕರ್ಣಾಟಕದ ಸ್ಥಿತಿಗತಿ ಗಳನ್ನು ಕೆಲಮಟ್ಟಿಗೆ ತಿಳಿಯಲಿಕ್ಕೂ ಅವಕಾಶವಿದೆ. ಬ್ರಾಹ್ಮಣಪದ್ಧತಿ ಯಲ್ಲಿ ತನ್ನ ಕಾಲದ ಬ್ರಾಹ್ಮಣ ಸಮಾಜದ ಗುಣಾವಗುಣಗಳನ್ನು ಟೀಕಿಸಿದ್ದಾನೆ.

## ಅಂಕಿತದ ವಿಚಾರ.

ಸರ್ವಜ್ಞಮೂರ್ತಿಯು "ಸರ್ವಜ್ಞ" ಎಂಬ ಹೆಸರಿನಿಂದ ತನ್ನ ವಚ ನಗಳನ್ನು ಬರೆದಿದ್ದಾನೆ. ವಚನಗಳ ಕಡೆಯಲ್ಲಿ ಬರುವ ಈ ಹೆಸ ರನ್ನು "ಅಂಕಿತ" ಎಂದು ಹೇಳುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಮಹಾ ಮಹಾ ಕವಿಗಳೂ ಒಂದೊಂದು ದೇವರ ಅಂಕಿತ ಮಾಡಿ ತಮ್ಮ ಕಾವ್ಯ ಗಳನ್ನು ಬರೆದಿದ್ದಾರೆ. ಕುಮಾರವ್ಯಾಸನು ತನ್ನ ಕಾವ್ಯಗಳನ್ನು ಗದುಗಿನ ವೀರನಾರಾಯಣನಿಗೂ, ಲಕ್ಷ್ಮೀಶನು ದೇವಪುರದ ಲಕ್ಷ್ಮೀರಮಣನಿಗೂ, ಹರಿಹರ, ರಾಘವಾಂಕ, ಭೀಮಕವಿ, ವಿರೂಪಾಕ್ಷಪಂಡಿತಾದಿಗಳು ಹಂಪೆಯ ವಿರೂಪಾಕ್ಷನಿಗೂ, ನಿಜಗುಣನು ಶಂಭುಲಿಂಗನಿಗೂ ಪುರಂದರದಾಸನು ಪುರಂದರವಿಠಲನಿಗೂ, ಅಂಕಿತಮಾಡಿ ತಮ್ಮ ಗ್ರಂಥಗಳನ್ನೂ ವಚನಗ ಳನ್ನೂ ಬರೆದಿದ್ದಾರೆ.

ವೀರಶೈವ ವಚನಕಾರರು ಪ್ರತಿಯೊಬ್ಬರೂ ಒಂದೊಂದು ಅಂಕಿತ ವನ್ನು ಸ್ವೀಕರಿಸಿದ್ದಾರೆ. ಹರಿದಾಸರೂ ಬೇರೆ ಬೇರೆ ಅಂಕಿತಗಳಿಂದ ವಚನಗಳನ್ನು ನಿರ್ಮಿಸಿದ್ದಾರೆ.

ಸರ್ವಜ್ಞಮೂರ್ತಿಯು ಹೇಳುವ "ಸರ್ವಜ್ಞ" ಎಂಬ ಅಂಕಿತವು ಕವಿಯ ಹೆಸರೊ? ಅಥವಾ ಜಗಕೆ ಒಬ್ಬನೇ ದೇವನಾದ ಸರ್ವಜ್ಞವೆನಿಸಿದ ಭಗವಂತನ ಹೆಸರೋ? ಎಂಬುದು ವಿಚಾರಣೀಯವಾಗಿದೆ. ಈ ಕವಿಯು ಗರ್ವದಿಂದಿದ್ದವನಲ್ಲವಾದ್ದರಿಂದಲೂ, ಕೀರ್ತಿಕಾಂಕ್ಷಿಯಲ್ಲವಾದ್ದರಿಂದಲೂ ಇವನು ಹೇಳುವ ಅಂಕಿತವು ಕವಿಯ ಹೆಸರಲ್ಲದೆ ಭಗವಂತನಾದ ಸರ್ವಜ್ಞನನ್ನೇ ನಿರ್ದೇಶಿಸಿದ್ದಾಗಿರಬೇಕೆಂದು ನಮ್ಮ ಮತವಾಗಿದೆ. ಏತಕ್ಕೆಂದರೆ ಹಲವು ಕನ್ನಡ ಕವಿಗಳೂ ತತ್ರಾಪಿ ವೀರಶೈವ ವಚನಕಾರರೂ ಸರ್ವಶಕ್ತನಾದ ಪರಮೇಶ್ವರನನ್ನೇ ಯಾವುದಾದರೊಂದು ಅಂಕಿತದಿಂದ ಸಂಬೋಧಿಸಿ ತಮ್ಮ ಗ್ರಂಥಗಳನ್ನು ಬರೆದಿದ್ದಾರೆ. ಸರ್ವಜ್ಞಮೂರ್ತಿಯೂ ಈ ಪದ್ಧತಿಗೆ ಅಪವಾದವಲ್ಲವೆಂದು ನಮ್ಮ ತಿಳುವಳಿಕೆಯಾಗಿದೆ.

ಅಂದಿನ ಬ್ರಾಹ್ಮಣ ಸಮಾಜದಲ್ಲಿ ಬಾಹ್ಯಾಚಾರವೂ ವರ್ಣಾಭಿಮಾನವೂ ಬಹಳವಾಗಿತ್ತು. ಯಜ್ಞಯಾಗಗಳ ನೆವದಲ್ಲಿ ಪ್ರಾಣಹಿಂಸೆ ಬಹಳವಾಗಿ ನಡೆಯುತ್ತಿತ್ತು. ವೇದಪ್ರಾಮಾಣ್ಯದ ಭರದಲ್ಲಿ ಸ್ವತಂತ್ರ ವಿಚಾರಗಳಿಗೆ ಮಾನ್ಯತೆಯಿರಲಿಲ್ಲ. ಜನಾಂಗವು ಕೇವಲ ಶ್ರದ್ಧಾಪ್ರಪಂಚದಲ್ಲಿಯೇ ತೇಲಿ ಮುಳುಗಿತ್ತು. ಬ್ರಾಹ್ಮಣರಲ್ಲಿ ಒಂದು ಕುಲವಾದ ಕಮ್ಮೆ ಎಂಬ ಪಂಗಡಕ್ಕೆ ಸೇರಿದವರು "ತನಗಾದವರ ಕೊಲುವ" ಸ್ಥಿತಿಗೆ ಬಂದಿದ್ದರು. ಅಕ್ಕರವ ಕಲಿತವರು ಉಪಕಾರಿಗಳನ್ನು ತಿನಗಲಿತಿದ್ದರು. ಕರಣಿಕರು ನರಕಕ್ಕೆ ಪಾಥೇಯವನ್ನು ಕಟ್ಟಿಕೊಳ್ಳುತ್ತಿದ್ದರು "ಹಾರುವನುಪಕಾರಿ ಹಾರುವನಪಕಾರಿ ಹಾರುವನು ತೋರ್ಪಬಹುದಾರಿ ಮುನಿದರೆ ಹಾರುವನೆ ಮಾರಿ ಸರ್ವಜ್ಞ॥ ಎಂದು ಮೊದಲಾಗಿ ಅಂದಿನ ಹಾರುವರ (ಬ್ರಾಹ್ಮಣರ) ವಿಚಾರವನ್ನು ಕವಿಯು ಹೇಳಿರುವನು.

ಜೈನ ಪದ್ಧತಿಯಲ್ಲಿ ತನ್ನ ಕಾಲದ ಜೈನ ಸಮಾಜದ ರೀತಿನೀತಿಗಳನ್ನೂ ಸರ್ವಜ್ಞನು ವಿವರಿಸಿರುವನು. ಸರ್ವಜ್ಞನು ಸ್ವಭಾವತಃ ಅಹಿಂಸಾವಾದಿಯಾದ್ದರಿಂದಲೂ ಸರ್ವಜ್ಞನು ಅನುಸರಿಸಿದ ವೀರಶೈವ ಸಿದ್ಧಾಂತದಲ್ಲಿ ಸಹ ಪ್ರಾಣಿಹಿಂಸಾಪ್ರಧಾನವಾದ ಯಜ್ಞಯಾಗಗಳು ನಿಷೇಧಿಸಿರುವುದರಿಂದಲೂ ಕವಿಯು ಅಹಿಂಸಾಪ್ರಧಾನವಾದ ಜೈನ ಧರ್ಮವನ್ನು ಬಹಳವಾಗಿ ಮೆಚ್ಚಿದ್ದಾನೆ. ಇದಕ್ಕೆ "ಕೊಲುವಧರ್ಮವನೊಯ್ದು ಒಲೆಯೊಳಗೆ ಇಕ್ಕುವಾ। ಕೊಲಲಾಗದೆಂಬ ಜೈನನ ಮತವೆನ್ನ; ತಲೆಯಮೇಲಿರಲಿ ಸರ್ವಜ್ಞ" ಈ ವಚನವೇ ಸಾಕ್ಷಿಯಾಗಿದೆ. ಅಂದಿನ

ಶ್ರವಣರು ಕೇವಲ ಸತ್ಯವಂತರಾಗಿದ್ದರೆಂದು ತೋರುತ್ತದೆ. "ಉಪ್ಪು ಸಪ್ಪನೆಯುಕ್ಕು ಕಪ್ಪುರವು ಕರಿದಕ್ಕು। ಸರ್ಪನಿಗೆ ಬಾಲವೆರಡಕ್ಕು ಶ್ರವಣರು। ತಪ್ಪಾಡಿದಂದು ಸರ್ವಜ್ಞ॥ ಎಂಬ ಪದ್ಯವು ನಮ್ಮ ಮೇಲಿನ ಅಭಿಪ್ರಾಯಕ್ಕೆ ಆಧಾರವಾಗಿದೆ. ಅಂದಿನ ಜೈನ ಸಮಾಜವು ಸರ್ವಜ್ಞನಂತಹ ಖಂಡಿತವಾದಿಯ ಮೆಚ್ಚುಗೆಯನ್ನು ಪಡೆಯುವಂತಿತ್ತೆಂದು ತೋರುತ್ತದೆ.

ಷಟ್ಸ್ಥಲ ವಚನಗಳನ್ನು ಓದಿದರೆ ಅಂದಿನ ಲಿಂಗವಂತ ಸಮಾಜದ ಸ್ಥಿತಿಗತಿಯನ್ನೂ ನಾವು ಊಹಿಸಬಹುದು. ವೀರಶೈವರಲ್ಲಿ 'ಭವಿ ಭಕ್ತ' ಎಂಬ ಪಕ್ಷಪಾತವು ಬಹಳವಾಗಿತ್ತೆಂದು ತೋರುತ್ತದೆ. ಆಲಸ್ಯದಿಂದ ಶಿವಪೂಜೆಮಾಡುವವರನ್ನು ಲಿಂಗವ ಕಂಡು ಪೂಜಿಸದೆ ಯಮದಂಡನೆಗೆ ಗುರಿಯಾಗುತ್ತಿದ್ದವರನ್ನೂ ಇಷ್ಟಲಿಂಗದಿ ಮನವ ನೆಟ್ಟನೇ ನಿಲಿಸದೇ ಕಷ್ಟಭ್ರಮೆಗಳಿಗೊಳಗಾಗಿ ಕರ್ಮದ ಬಟ್ಟೆಗೆ ಹೋದವರನ್ನೂ ಲಿಂಗಕ್ಕೆ ತೋರದೇ ನುಂಗುವ ಭಕ್ತರನ್ನೂ ತಾನೆಂಬುದಿಲ್ಲದ ಐಕ್ಯರನ್ನೂ ಸುಖದುಃಖವನ್ನು ಶಿವನಿಗಿತ್ತು ತಾ ಕಿಂಕರತೆಯನ್ನು ಕೈಕೊಂಡ ಶರಣರನ್ನೂ ಹಿಂಸೆಗೆ ಒಡಂಬಡದ ಮಾಹೇಶ್ವರರನ್ನೂ ಶಿವಪೂಜೆಮಾಡಿ ಶಿವನ ಕೊಂಡಾಡಿ ಶಿವಲೋಕವನ್ನು ಸೂರೆಗೊಳ್ಳುವ ಶಿವಭಕ್ತರನ್ನೂ ಸರ್ವಜ್ಞಮೂರ್ತಿಯು ಕಂಡಿದ್ದನೆಂದು ತೋರುತ್ತದೆ. ಈ ಕವಿಯು ಷಟ್ಸ್ಥಲವಚನಗಳ ಮೇಲಿಂದ ಅಂದಿನ ವೀರಶೈವ ಸಮಾಜವು ಐವತ್ತಕ್ಕೆ ಏರದ ಐದಕ್ಕೆ ಇಳಿಯದ ಸ್ಥಿತಿಯಲ್ಲಿತ್ತೆಂಬದನ್ನು ನಾವು ಊಹಿಸಬಹುದಾಗಿದೆ.

ಇದೂ ಅಲ್ಲದೆ ಕವಿಯ ಕಾಲದ ತಿಗುಳ (ತಮುಳ) ತೆಲಗ, ತುರುಕ, ಅಕ್ಕಸಾಲಿಗ, ಬಡಿಗ, ಬಣಜಿಗ, ಪಂಚಾಳ, ಹಟಗಾರ, ಗಾಜುಗಾರ, ಬೇಡ, ಬೆಸ್ತ, ಜಾಲಗಾರ ಈ ಮೊದಲಾದ ಜನರ ಗುಣಶೀಲಗಳನ್ನೂ ತಿಳಿಯಲಿಕ್ಕೆ ಕೆಲವು ವಚನಗಳು ನಮಗೆ ಸಹಾಯಕವಾಗಿವೆ. ಇತ್ಯಾದಿ ವಿಚಾರಗಳಿಂದ ಅಂದಿನ ಕನ್ನಡನಾಡಿನ ಜನಜೀವನವು ಹೇಗಿತ್ತೆಂಬದನ್ನು ನಾವು ಊಹಿಸಬಹುದಾಗಿದೆ.

## ಕವಿಯ ಮುಖ್ಯ ಸಂದೇಶ.

ಸರ್ವಜ್ಞಮೂರ್ತಿಯ ಸಂದೇಶಗಳಲ್ಲಿ ಮುಖ್ಯವಾದದ್ದು ದೇವರು ಒಬ್ಬನೇ ಎಂಬ ಉಪನಿಷತ್ಸಿದ್ಧಾಂತವನ್ನೇ ಈ ಕವಿಯು ಎತ್ತಿಹಿಡಿದ

ಮತ್ತು ಕುಲಗೋತ್ರಗಳ ದುರಭಿಮಾನ ಕಡಿಮೆಯಾಗಬೇಕೆಂದು ಹಿಂದೂ ಸಮಾಜದ ನಾಶಕ್ಕೆ ಮುಖ್ಯ ಕಾರಣಗಳಾದ

೧ ದೇವರು ಬಹುಜನರೆಂದೂ ಅವರೊಳಗೆ ಹೆಚ್ಚುಕಡಿಮೆ ಭಾವ ವುಂಟೆಂದೂ ಭಾವಿಸಿದುದು.

೨. ವರ್ಣಾಶ್ರಮಿಗಳ ಅಭಿಮಾನ, ಜಾತಿ-ಮತಗಳ ಗೊಂದಲ ದಿಂದ ಹಿಂದೂ ಸಮಾಜದಲ್ಲಿ ಅನೈಕಮತ್ಯವು ಬೆಳೆದುದು.

ಈ ಎರಡು ವಿಚಾರಗಳಿಂದ ಹಿಂದೂ ಸಮಾಜವು ನಾಶವಾಗು ತ್ತಿದೆಯೆಂದು ಮಹಾನುಭಾವನಾದ ಸರ್ವಜ್ಞನು ತಿಳಿದು ದೇವರು ಒಬ್ಬನೇ ಎಂದೂ, ದೇವರೊಲಿದಾತನೇ ಜಾತನೆಂದೂ, ಜಾತಿ ಹೀನನ ಮನೆಯು ಜ್ಯೋತಿಹೀನವಲ್ಲೆಂದೂ ಎಚ್ಚರಿಸಿ ಅಜ್ಞಾನಮಯವಾಗಿದ್ದ ಸಮಾಜಕ್ಕೆ ಎಚ್ಚರಿಕೆಯ ಡಂಗುರವನ್ನು ಸಾರಿ ಹೇಳಿದನು. ಸರ್ವಜ್ಞ ಮೂರ್ತಿಯಿಂದ ಕರ್ಣಾಟಕಕ್ಕಾದ ಈ ಉಪಕಾರವು ಸಾಮಾನ್ಯವಾದು ದಲ್ಲ. ಕರ್ಣಾಟಕದಲ್ಲಿ ಅನ್ಯಮತ ಸಹಿಷ್ಣುತಾ ಭಾವವೂ, ಜಾತಿ-ಜಾತಿಗಳ ಪ್ರೇಮ ಬಾಂಧವ್ಯವೂ, ಏಕದೇವೋಪಾಸನೆಯ ತತ್ವವೂ ಬಹು ಜನರಲ್ಲಿ ನೆಲೆಗೊಳ್ಳಲಿಕ್ಕೆ ಸರ್ವಜ್ಞ ಸಂದೇಶವು ಬಹುಮಟ್ಟಿಗೆ ಕಾರಣವೆಂದು ನಾವು ಭಾವಿಸಿದ್ದೇವೆ.

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು ।
ಸುಡುವಗ್ನಿಯೊಂದೆ ಇರುತಿರೆ ಕುಲಗೋತ್ರ ।
ನಡುವೆ ಎತ್ತಣದು ಸರ್ವಜ್ಞ ॥

ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ।
ಜಾತಿ ವಿಜಾತಿ ಎನಬೇಡ ದೇವನೊಲಿ ।
ದಾತನೇ. ಜಾತ ಸರ್ವಜ್ಞ ॥

ಯಾತರದು ಹೂವೇನು ನಾ ತರದು ಸಾಲದೇ ।
ಜಾತಿ ವಿಜಾತಿ ಎನಬೇಡ ದೇವನೊಲಿ ।
ದಾತನೇ ಜಾತ ಸರ್ವಜ್ಞ ॥

ಅವಯವಗಳೆಲ್ಲರಿಗೆ ಸಮನಾಗಿ ಇರುತಿರಲು ।
ಭವಿ, ಭಕ್ತ, ಶ್ವಪಚ, ಶೂದ್ರರು ಇಂತೆಂಬ ।
ಕವನಲೆತ್ತಣದು ಸರ್ವಜ್ಞ ॥

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ ।
ಒಬ್ಬ ಸರ್ವಜ್ಞಕರ್ತನು ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ ॥

ಆ ದೇವ ಈ ದೇವ ಮಾದೇವನೆನಬೇಡ ।
ಆ ದೇವ ದೇವ ಭುವನ ಪ್ರಾಣಿಗಳಿ ।
ಗಾದವನೆ ದೇವ ಸರ್ವಜ್ಞ ॥

ಎಂಬೀ ವಚನಗಳನ್ನು ಹಿಂದುವೆನಿಸಿದ ಪ್ರತಿಯೊಬ್ಬ ವ್ಯಕ್ತಿಯೂ ಸದಾ ಪಠಿಸುತ್ತಿರುವುದು ಒಳ್ಳೆಯದು.

## ಮೂರ್ತಿಪೂಜೆ.

ಮೂರ್ತಿಪೂಜೆಯು ಆರ್ಯ ಸಂಸ್ಕೃತಿಗೆ ಸೇರಿದುದಲ್ಲ. ಇದು ದ್ರಾವಿಡ ಸಂಸ್ಕೃತಿಯ ಕುರುಹು. ಈಗಿನ ಹಿಂದೂ ಸಮಾಜವು ಆರ್ಯ ದ್ರಾವಿಡ ಸಂಸ್ಕೃತಿಗಳ ಮಿಶ್ರ ಸಂಸ್ಕೃತಿಗಳನ್ನು ಸ್ವೀಕರಿಸಿದೆ. ದೇವರನ್ನು ಮೂರ್ತಿಗಳಲ್ಲಿ ಭಾವಿಸಿ ಪೂಜಿಸುವುದೂ, ಬಹುದೇವತೋಪಾಸನೆ, ಕ್ಷುದ್ರ ದೇವತೋಪಾಸನೆಯೂ ದ್ರಾವಿಡರವೆಂಬುದನ್ನು ಇತಿಹಾಸವಿದರೆಲ್ಲರೂ ಒಪ್ಪಿಕೊಂಡಿದ್ದಾರೆ. ಮೂರ್ತಿಪೂಜೆಯಲ್ಲಿ ಗುಣವಿದ್ದಂತೆ ದೋಷವೂ ಇದೆ. ಸರ್ವಜ್ಞಮೂರ್ತಿಯು ಖಡಾಖಡಿಯಾಗಿ ಮೂರ್ತಿಪೂಜೆಯನ್ನು ಖಂಡಿಸಿದ್ದರೂ ತಾನು ಲಿಂಗರೂಪೀ ಮೂರ್ತಿಯನ್ನು ಪೂಜಿಸತಕ್ಕವನೇ ಆಗಿದ್ದನು. ಆದುದರಿಂದ ಅವನ ಮೂರ್ತಿಪೂಜಾ ಖಂಡನೆಯು ಕ್ರೈಸ್ತ ಮಹಮ್ಮದೀಯರ ಮೂರ್ತಿಪೂಜಾ ವಿರೋಧದಂತಿರದೆ ಮೂರ್ತಿಪೂಜೆಯ ಅತಿರೇಕವನ್ನು ಮಾತ್ರ ಖಂಡಿಸಿದ್ದಾನೆಂದು ಭಾವಿಸಬೇಕಾಗಿದೆ.

ಆದಿದೈವವನು ತಾ ಭೇದಿಸಲರಿಯದೇ ।
ಹಾದಿಯಾ ಕಲ್ಲಿಗೆಡೆಮಾಡಿ ನಮಿಸುವಾ ।
ಮಾದಿಗರ ನೋಡು ಸರ್ವಜ್ಞ ।

ತನ್ನಲಿಹ ಲಿಂಗವನು ಮನ್ನಿಸಲಿ ಕರಿಯದೇ
ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುತಿಹ ।
ಅನ್ಯಾಯ ನೋಡ ಸರ್ವಜ್ಞ ॥

ಉಣಬಂದ ಜಂಗಮಕೆ ಉಣಬಡಿಸಲೊಲ್ಲದೆ ।
ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ।
ಬಣಗುಗಳ ನೋಡು ಸರ್ವಜ್ಞ ॥

ಕಲ್ಲು ಕಲ್ಲೆಂಬುವಾ ಕಲ್ಲೊಳಿರ್ಪುದೆ ದೈವ ।
ಕಲ್ಲಲ್ಲಿ ಕಳೆಯ ನಿಲಿಸಿದಾ ಗುರುವಿನ ।
ಸೊಲ್ಲಲ್ಲೆ ದೈವ ಸರ್ವಜ್ಞ ॥

ಒಟ್ಟಿಯಾ ಕಲ್ಲಿಂಗೆ ಒಟ್ಟೆ ಪತ್ರಿಯನಿಟ್ಟು ।
ಕಟ್ಟಿದಾ ಲಿಂಗವಡಿಯಾಗಿ ಶರಣೆಂಬ ।
ಭ್ರಷ್ಟರನು ನೋಡು ಸರ್ವಜ್ಞ ॥

ಮೇಲೆ ಹೇಳಿದ ವಚನಗಳಲ್ಲಿ ಮೂರ್ತಿಪೂಜೆಯ ನಿರಸನ ಮಾಡಿದ್ದರೂ "ಕಟ್ಟಿದಾ ಲಿಂಗವಡಿ ಮಾಡಿ" ಅಂದರೆ ವೀರಶೈವನಾದವನು ಇಷ್ಟ ಲಿಂಗವನ್ನು ಕೆಳಗುಮಾಡಿ ಸ್ಥಾವರ ಲಿಂಗಕ್ಕೆ ನಮಸ್ಕರಿಸಬಾರದೆಂದು ಕವಿಯು ಹೇಳುತ್ತಾನೆ. ಇಲ್ಲಿ ವೀರಶೈವ ಸಿದ್ಧಾಂತದಂತೆ ಇಷ್ಟಲಿಂಗ ಪೂಜೆಯನ್ನು ಕವಿಯು ಅಂಗೀಕರಿಸಿರುವುದರಿಂದಲೂ ಲಿಂಗಮುಖವು ಜಂಗಮವೆಂಬ ವೀರಶೈವ ತತ್ವವನ್ನು ಮೇಲಿನ ಮೂರನೇ ವಚನದಲ್ಲಿ ಹೇಳಿರುವುದರಿಂದಲೂ ಕವಿಯು ಮೂರ್ತಿಪೂಜೆಯ ಅತಿರೇಕವನ್ನು ಮಾತ್ರ ಖಂಡಿಸುವನೇ ಹೊರತು ಇಷ್ಟಲಿಂಗರೂಪವಾದ ಪ್ರೌಢತಮವಾದ ಮೂರ್ತಿ ಪೂಜೆಯನ್ನು ನಿರಸನಮಾಡಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಕವಿಯು ಮೂರ್ತಿಪೂಜೆಯಲ್ಲಿ ತೇಲಿ ಮುಳುಗಿ ಅದರ ತತ್ವವನ್ನು ತಿಳಿಯದೆ ಅಂಧಶ್ರದ್ಧೆಯಲ್ಲಿ ರಮಿಸುವವರಿಗೆ ಈ ಮೂಲಕ ಎಚ್ಚರಿಕೆ ಕೊಟ್ಟಿರು ವುದು ಯೋಗ್ಯವೇ ಆಗಿದೆ.

## ಕವಿಯು ವಿರಕ್ತನಾಗಿದ್ದನು.

ಸರ್ವಜ್ಞಮೂರ್ತಿಯು ಅನೇಕ ವಚನಗಳಲ್ಲಿ ಸ್ತ್ರೀ ಪುರುಷ ರಹಸ್ಯಗಳನ್ನು ವಿವರಿಸಿರುವುದರಿಂದ ಕೆಲವರು ಇವನು ಸಂಸಾರಿಯಾಗಿರಬಹುದೇ? ಎಂದು ಸಂದೇಹಿಸುವರು. ಇದು ಸರಿಯಲ್ಲವೆಂದು ತೋರುತ್ತದೆ ಶೃಂಗಾರ ರಸ ಸಂಬಂಧದಿಂದ ವಿಚಾರಗಳನ್ನು ಸ್ತ್ರೀ ಸಂಪರ್ಕವಿಲ್ಲದ ಯೋಗಿಗಳೂ ಹೇಳಿರುವ ಉದಾಹರಣೆಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಿಕ್ಕುತ್ತವೆ. ಮಹಾಕವಿ ಹರಿಹರದೇವ, ಗುಬ್ಬಿ ಮಲ್ಲಣಾರ್ಯ, ಷಡಕ್ಷರದೇವ ಮೊದಲಾದ ಕವಿ ಪುಂಗವರು ತಮ್ಮ ಕಾವ್ಯಗಳಲ್ಲಿ ಬೇಕಾದಷ್ಟು ಶೃಂಗಾರದ ಪ್ರಸಂಗಗಳನ್ನು ಹೇಳಿದ್ದರೂ ಅವರೆಲ್ಲರೂ ಮಹಾ ಶಿವಯೋಗಿಗಳೆಂದೇ ಇಂದಿನ ವರೆಗೂ ಪರಿಗಣಿತರಾಗಿದ್ದಾರೆ. ಸರ್ವ

ಜ್ಞನಾದರೂ ಈ ಪಂಕ್ತಿಗೇ ಸೇರತಕ್ಕವನು. ಶಾಸ್ತ್ರಜ್ಞಾನದಿಂದಲೂ, ಕಾವ್ಯ ಪರಿಚಯದಿಂದಲೂ, ಮಹಾ ಶಕ್ತಿಯಿಂದಲೂ ಕವಿಗಳು ಬೇಕಾದು ದನ್ನು ಬರೆಯಬಲ್ಲರು. ವೇಶ್ಯಾವಾಟಿಯ ವಿಚಾರವನ್ನು ಬರೆದಿರುವ ಮಹಾ ಕವಿಗಳೆಲ್ಲರೂ ಸೂಳೆಗೇರಿಯಲ್ಲಿ ಉತ್ತೀರ್ಣರಾಗಬೇಕಾದ ಅವ ಶ್ಯಕತೆ ಹೇಗಿಲ್ಲವೋ ಹಾಗೆ ಸ್ತ್ರೀ ರಹಸ್ಯ ವಿಚಾರವನ್ನು ಹೇಳುವ ಕವಿ ಗಳೆಲ್ಲರೂ ಸ್ತ್ರೀ ಸಂಗವನ್ನು ಮಾಡಿರಲೇಬೇಕೆಂಬ ನಿಯಮವಿಲ್ಲ. ಹಾಗಿ ದ್ದರೆ ಸರ್ವಜ್ಞನ ಮುಖದಿಂದ

ನೀರಬೊಬ್ಬುಳಿಯಂತೆ ತೋರುತಿಹದೇಹದ ;
ಸಾರವರಿಯದೇ ಸುಖಿಪುದಜ್ಞಾನದ ।
ದಾರಿಯಹುದೆಂದ ಸರ್ವಜ್ಞ ॥

ಉರಗನ ಮುಖದಿ ಸಿಕ್ಕಿರುತಿಪ್ಪ ಕಪ್ಪೆತಾ ।
ಎರಗುವ ನೊಣಕೆ ಹರಿದಂತೆ ಸಂಸಾರ ।
ದಿರವು ಕಾಣಯ್ಯ ಸರ್ವಜ್ಞ ॥

ಎಂಬ ವೀರವೈರಾಗ್ಯದ ವಚನಗಳು ಹೊರಡಲಿಕ್ಕೆ ಕಾರಣವಿರಲಿಲ್ಲ.

ಸರ್ವಜ್ಞನು ಕರದಿ ಕಪ್ಪರ ಹಿಡಿದು ಮೂಡೆ ಬೋಳಿಸಿಕೊಂಡು ತುಂಡು ಗಂಬಳಿ ಹೊದೆದು ಹಿಂಡನಗಲಿದ ಗಜದಂತೆ ಇರುವವನು ನಿಶ್ಚಯ ಬಿಡದೆ ಒಬ್ಬರಿಚ್ಛೆಯಲಿ ನಡೆಯದೆ ನೆಚ್ಚಿ ಒಂದೂರೊಳಿರದೆ ಕುಲಗೆಟ್ಟು ಶಿವನ ಮರೆಹೊಕ್ಕವನು ಇಂತಹ ಕವಿಯು ಸಾಮಾನ್ಯ ಮಾನವರಂತೆ ಸಂಸಾರ ಪಾಶದಲ್ಲಿ ಸಿಕ್ಕತಕ್ಕವನಲ್ಲವೆಂದೂ ಹಿಂಡನಗಲಿದ ಗಜದಂತೆ ಊರೂರಿಗೆ ಅಲೆಯುತ್ತಿದ್ದ ಪರಮವಿರಕ್ತನೆಂದೂ ಸುಲಭವಾಗಿ ಊಹಿಸ ಬಹುದು.

## ಕವಿಯ ಗುಣಶೀಲಗಳು.

ಸರ್ವಜ್ಞಮೂರ್ತಿಯ ಗುಣಶೀಲಗಳು ಹೇಗಿದ್ದವೆಂದು ನಾವು ಅವನ ಹೃದಯದ ಯೋಚನೆಯ ಫಲವಾದ ಅವನ ಗ್ರಂಥವನ್ನು ಓದುವುದ ರಿಂದ ಊಹಿಸಬಹುದು. ಅವನ ಒಂದೊಂದು ಸದ್ಗುಣಗಳ ಮೇಲೆಯೂ ಬೇಕಾದಷ್ಟು ಬರೆಯಬಹುದಾದರೂ ಲೇಖನ ವಿಸ್ತಾರಭಯದಿಂದ ಅವು ಗಳನ್ನೆಲ್ಲಾ ಸಂಗ್ರಹವಾಗಿ ಮುಂದೆ ನಿರೂಪಿಸಿದೆ.

(೧) ಸರ್ವಜ್ಞನು ಕೇವಲ ಸ್ವಾತಂತ್ರ್ಯ ಪ್ರಿಯ. ಇದಕ್ಕೆ "ಜಗದಿ ಸ್ವತಂತ್ರವೇ ಲೇಸು" 'ಹಂಗಿನರಮನೆಗಿಂತ ವಿಂಗಡದ ಗುಡಿ ಲೇಸು' ಇತ್ಯಾದಿ ವಚನಗಳೇ ಸಾಕ್ಷಿಯಾಗಿವೆ.

(೨) ಈ ಕವಿಯು ಕೇವಲ ಖಂಡಿತವಾದಿ. ಇದಕ್ಕೆ "ಕಂಡಂತೆ ಹೇಳಿದರೆ ಕೆಂಡವುರಿಯುವುದು ಭೂ । ಮಂಡಲದೊಳಗೆ ಕಂಡಿತವ ನಾಡುವರ। ಕಂಡಿಹುದೆ ಕಷ್ಟ" ಎಂಬ ವಚನವೇ ಸಾಕ್ಷಿಯಾಗಿದೆ.

(೩) ಇವನು ಕೇವಲ ವೈರಾಗ್ಯವಂತ. ಸದಾ ಭಿಕ್ಷಾಟನದಲ್ಲಿದ್ದು ಜೀವಿಸಿದವನು. 'ಸಿರಿಯು ಸಂಸಾರವನು ಸ್ಥಿರವೆಂದು ನಂಬದಿರು' 'ಶಿರಿ ವರಿಂ ಸಿರಿವಂತರಾರು' ಈ ವಚನಗಳೇ ಇದಕ್ಕೆ ಸಾಕ್ಷಿಯಾಗಿವೆ.

(೪) ಸಮದರ್ಶಿತ್ವ, ಪರಮತ ಸಹಿಷ್ಣುತಾ ಇವು ಸರ್ವಜ್ಞನ ಮುಖ್ಯವಾದ ಗುಣಗಳಾಗಿವೆ. ಇದಕ್ಕೆ "ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ" "ಜೈನನ ಮತವೆನ್ನ ತಲೆಯ ಮೇಲಿರಲಿ" ಎಂಬ ವಚನಗಳು ಆಧಾರವಾಗಿವೆ.

(೫) ಧೈರ್ಯಶಾಲಿ. ಕವಿಯಲ್ಲಿ ಈ ಗುಣವಿದ್ದುದಕ್ಕೆ 'ನಿಶ್ಚಯವ ಬಿಡದೆ ಒಬ್ಬರಿಚ್ಛೆಯಲಿ ನಡೆಯದೆ ಸ್ವಚ್ಛಂದವಾಗಿದ್ದುದೇ ಪ್ರಮಾಣವಾಗಿದೆ. ಜಾತಿ ವೀರರು ಸಾವ ಭೀತಿಗಂಜುಳಿವರೇ, ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ,' ಎಂಬ ನುಡಿಗಳೂ ಇದಕ್ಕೆ ಸಾಕ್ಷಿಯಾಗಿವೆ.

(೬) ಉದ್ಯೋಗ ಪ್ರಿಯ. ಸರ್ವಜ್ಞನು ಕೇವಲ ಉದ್ಯೋಗ ಪ್ರಿಯನಾಗಿದ್ದನೆಂಬುದಕ್ಕೆ "ಉದ್ಯೋಗವುಳ್ಳವನ ಹೊದ್ದುವುದು ಸಿರಿಬಂದು ಉದ್ಯೋಗವಿಲ್ಲದಿರುವನಾ ಕರದೊಳಗಿದ್ದುದೂ ಪೋಪು" ಎಂಬ ವಚನವೇ ಪ್ರಮಾಣವಾಗಿದೆ. ಸರ್ವಜ್ಞನ ಈ ಬೋಧೆಯು ಡಾಕ್ಟರ ಜಗದೀಶ ಚಂದ್ರ ಬೋಸರ *The duty is the God* ಎಂಬ ಮಾತನ್ನು ಸ್ಮರಣೆಗೆ ತರುತ್ತದೆ.

(೭) ರಸಿಕ ಶಿರೋಮಣಿ. ಈ ಕವಿಯು ವೈರಾಗ್ಯವುಳ್ಳವನಾದರೂ ಇವನ ವಾಕ್ಯಗಳು ನವರಸಮಯವಾಗಿವೆ. ಹಾಸ್ಯರಸದಲ್ಲಿ ಇವನಿಗೆ ಅಭಿರುಚಿಯಿದ್ದಂತೆ ಕಾಣುತ್ತದೆ. ಇದಕ್ಕೆ ಇವನ ಗ್ರಂಥವೇ ಸಾಕ್ಷಿಯೆನ್ನಬಹುದು.

(೮) ಅಹಿಂಸಾವಾದಿ. "ಕೊಲ್ಲದಿರ್ಪ ಧರ್ಮವೆಲ್ಲರಿಗೆ ಸಮ್ಮತವು ಅಲ್ಲದೆ ಮಾರಿ ಕೊಲ್ಲುವನು ನರಕಕ್ಕೆ ನಿಲ್ಲದೇ ಹೋಹ" ಎಂಬ ವಚನವೇ ಇದಕ್ಕೆ ಪ್ರಮಾಣವಾಗಿದೆ.

(೯) ಶಿವಭಕ್ತ. ಇದಕ್ಕೆ 'ಪರದೈವ ಕಾಲೂರಿ ನಿಂದಿಲ್ಲ' 'ಶಂಭು ವಿದ್ದಂತೆ ಮತ್ತೊಂದು ದೈವವನು ನಂಬುವನೆ ಹೆಡ್ಡ" ಎಂಬೀ ವಚನವೇ ಕವಿಯ ಶಿವಭಕ್ತಿಗೆ ಸಾಕ್ಷಿಯಾಗಿದೆ.

ನಿಷ್ಠುರ ಸ್ವಭಾವಿ. ಇವನು ಯಾರ ಹಂಗಿಗೂ ಸಿಗದೆ ಲೋಕ ಹಿತವನ್ನು ಬಯಸುವವನಾದುದರಿಂದ ಕೆಲವು ಸಮಯದಲ್ಲಿ ನಿಷ್ಠುರನಾಗಿರುವನು. ಇದಕ್ಕೆ ಇವನ ಗ್ರಂಥದಲ್ಲಿ ವಿಪುಲವಾಗಿ ಪ್ರಮಾಣಗಳು ಸಿಕ್ಕುತ್ತವೆ.

## ರಾಮಾಯಣ-ಮಹಾಭಾರತಗಳ ದ್ವೇಷಿ ಅಲ್ಲ.

ಸರ್ವಜ್ಞಮೂರ್ತಿಯು ರಾಮಾಯಣ-ಭಾರತ ಗ್ರಂಥಗಳನ್ನು ತಿರಸ್ಕಾರದಿಂದ ಕಂಡನೆಂಬ ಪ್ರತೀತಿಯು ಬಹು ಜನರ ಮನಸ್ಸನ್ನು ಹೊಕ್ಕಿದೆ. ಇದಕ್ಕೆ

"ಹಾದರದ ಕಥೆಯನ್ನು ಸೋದರರ ವಧೆಯನ್ನು।
ಆದರಿಸಿ ಪುಣ್ಯ ಕಥೆಯೆಂದು ಕೇಳುವರು।
ಮಾದಿಗರು ನೋಡ ಸರ್ವಜ್ಞ ॥"

ಎಂಬ ವಚನವನ್ನು ಉದಾಹರಿಸುತ್ತಾರೆ. ಇದು ವೃಥಾಪವಾದವೆಂದು ನಮ್ಮ ಅಭಿಪ್ರಾಯ. ಹಾದರದ ಕಥೆ = ರಾಮಾಯಣ, ಸೋದರರ ವಧೆ = ಭಾರತವೆಂದು ಕವಿಯು ಹೇಳಿಲ್ಲ. ಇದು ಯಾರೋ ಜಾವಳರು ಮಾಡಿದ ಅರ್ಥ. ಏಕ ಪತ್ನೀ ವ್ರತಕ್ಕೆ ಪರಮಾವಧಿಯೆನಿಸಿದ ಪತಿವ್ರತಾಶಿರೋಮಣಿಯಾದ ಸೀತಾರಾಮರ ಬಗ್ಗೆ ಕವಿಯು ತುಚ್ಛಭಾವ ತಾಳಲಾರನೆಂದು ನಾವು ಧೈರ್ಯವಾಗಿ ಹೇಳುತ್ತೇವೆ. ರಾಮಾಯಣದಲ್ಲಿ ಹಾದರದ ಪ್ರಸಂಗವೇ ಇಲ್ಲ. ಆದ್ದರಿಂದ ಅದು ಹಾದರದ ಕಥೆಯಲ್ಲ. ಭಾರತದಲ್ಲಿ ಸೋದರರ ವಧೆಯಿದ್ದರೂ ಅದು ಕ್ಷತ್ರಿಯ ಧರ್ಮದಂತೆ ಮಾಡಿದ ಯುದ್ಧ ಆದ್ದರಿಂದ ಅದು ಸೋದರರ ವಧೆಯಲ್ಲ. ಸರ್ವಜ್ಞನೂ ಹಾಗೆ ಭಾವಿಸಿಲ್ಲ. ಪ್ರಪಂಚದಲ್ಲಿ ವ್ಯಭಿಚಾರ ಸಂಬಂಧವಾದ, ಅಣ್ಣ ತಮ್ಮಂದಿರ ಕಲಹ ಸಂಬಂಧವಾದ ಮಾತುಗಳನ್ನು ಕೇಳತಕ್ಕದ್ದಲ್ಲವೆಂದು

ಮಾತ್ರ ಕವಿಯ ಅಭಿಪ್ರಾಯವೆಂದು ನಮ್ಮ ತಾತ್ಪರ್ಯ. ಸೀತಾ, ರಾಮ, ಹನುಮಂತ, ಪಾಂಡವರನ್ನು ಹಳಿಯುವ ಪದ್ಯಗಳನ್ನು ನಾವು ಈ ಕವಿಯ ವಚನಗಳಲ್ಲಿ ಎಲ್ಲಿಯೂ ಕಾಣಲಾಗುವದಿಲ್ಲ.

## ಕವಿಯು ದೇಶಾಭಿಮಾನಿ.

ಸರ್ವಜ್ಞನು ತನ್ನ ಜೀವಿತ ಕಾಲವನ್ನೆಲ್ಲ ಕನ್ನಡಿಗರಿಗೆ ಉಪದೇಶ ಮಾಡುವುದರಲ್ಲಿಯೇ ಕಳೆದಿರುವನೆಂಬದನ್ನು ನಾವು ಲಕ್ಷಿಸಿದರೆ ಅವನ ದೇಶಾಭಿಮಾನವೂ ಪರೋಪಕಾರ ಬುದ್ಧಿಯೂ ನಮಗೆ ಹೊಳೆಯದಿರುವುದಿಲ್ಲ. "ಕನ್ನಡಿಗನ ಕಳೆಯು" ಉತ್ತಮವಾದುದೆಂದು ಹೇಳುವಾಗ ಕವಿಯ ಮನಸ್ಸು ದೇಶಾಭಿಮಾನದಿಂದ ತುಂಬಿತುಳುಕುತ್ತಿತ್ತೆಂದು ತೋರುತ್ತದೆ.

## ಸದಾ ಸಂಚಾರದಲ್ಲಿದ್ದ.

ಕವಿಯು ಸದಾ ಸಂಚಾರದಲ್ಲಿದ್ದನೆಂದು ಕಾಣುತ್ತದೆ. "ನೆಚ್ಚಿಬಂದೊರೊಳಿತದಿರು" ಎಂದು ಇವನೇ ಹೇಳಿಬಿಟ್ಟಿದ್ದಾನೆ. ಇವನಿಗೆ ಅಪಾರವಾದ ಲೋಕಾನುಭವ ಬರಲಿಕ್ಕೆ ಶಾಸ್ತ್ರಾಧ್ಯಯನದ ಜತೆಗೆ ಈ ದೇಶಾಟನವೂ ಸಹಾಯವಾಯ್ತೆಂದು ಧಾರಾಳವಾಗಿ ಹೇಳಬಹುದು. ಗ್ರಂಥಾವಲೋಕನದಿಂದ ಶಾಸ್ತ್ರ ಮೌಢ್ಯವು ಹೋಗುವಂತೆ ದೇಶಾಟನದಿಂದ ಲೋಕಮೌಢ್ಯವು ನಾಶವಾಗುತ್ತದೆ. ಈ ಕವಿಗೆ ಈ ಬಗೆಯ ಎರಡೂ ಅನುಕೂಲವಿದ್ದುದರಿಂದ ಇವನು ನಿಜವಾಗಿಯೂ ಸರ್ವಜ್ಞನೆನಿಸಿದನು.

## ಹೀನೋಪಮೆಗಳು.

ಸರ್ವಜ್ಞನು ಕೆಲವು ಹೀನೋಪಮೆಗಳನ್ನು ಹೇಳಿರುವುದು ಪ್ರೌಢರಿಗೆ ಸರಿದೋರುವುದಿಲ್ಲವಾದರೂ ಪಾಮರ ಜನರ ಬೋಧೆಗೆ ಅವು ಹೆಚ್ಚು ಸಹಾಯಕವಾಗುತ್ತವೆ. ಸರ್ವಜ್ಞನು ವಚನಗಳನ್ನು ಹಾಡಿದ್ದು ರಾಜಾಸ್ಥಾನದ ಪಂಡಿತರನ್ನಾಗಲಿ ಪ್ರಭುಗಳನ್ನಾಗಲಿ ಮೆಚ್ಚಿಸಲಿಕ್ಕಿಲ್ಲ. ಕೇವಲ ಪಾಮರರ ಉದ್ಧಾರಕ್ಕಾಗಿ, ಸರ್ವಜ್ಞನ ವಚನಗಳನ್ನು ಇಂದಿನ ವರೆಗೆ ಉಳಿಸಿದವರು ಬಳಸಿದವರು ವಿಶೇಷತಃ ಪಂಡಿತರಲ್ಲ. ಕೇವಲ ಪಾಮರರೇ. ಸರ್ವಜ್ಞವಚನಗಳು ಅತ್ತ ಪ್ರೌಢ ವಾಙ್ಮಯವೂ ಅಲ್ಲ. ಇತ್ತ ಜನಪದಸಾಹಿತ್ಯವೂ ಇಲ್ಲ. ಸಾರಾಂಶಃ— ಜನಸಾಮಾನ್ಯದಲ್ಲಿದ್ದ ಅಜ್ಞಾನ ಅನಾಚಾರಗಳನ್ನು ಹೋಗಲಾಡಿಸುವುದಕ್ಕಾಗಿ ಅವರಿಗೆ ರುಚಿಸುವ ಭಾಷೆ

ಯಲ್ಲಿ ತಿಳಿಯುವ ರೀತಿಯಲ್ಲಿ ಕವಿಯು ವಚನಗಳನ್ನು ಹಾಡಿದ್ದಾನೆ. ಆದುದರಿಂದ ಹೀನೋಪಮೆಗಳು ವಿದ್ವಾಂಸರಿಗೆ ಅಸಹ್ಯವಾಗಿದ್ದರೂ ಪಾಮರರಾದ ಕತ್ತಿಮಾನವರಿಗೆ ಇವು ಶಸ್ತ್ರಚಿಕಿತ್ಸೆಯಂತೆ ಉಪಯುಕ್ತವಾಗಿಯೇ ಇವೆ.

## ಪೂರ್ವ ಕವಿಗಳು.

ಸರ್ವಜ್ಞನು ಕನ್ನಡ ಕವಿಗಳ ಸಂಪ್ರದಾಯದಂತೆ ಯಾವ ಪೂರ್ವ ಕವಿಗಳನ್ನೂ ಸ್ಮರಿಸಿಲ್ಲ. ಇವನನ್ನೂ ಇಂದಿನ ವರೆಗೆ ಯಾವ ಕವಿಯೂ ಸ್ಮರಿಸಿದಂತೆ ಕಾಣುವದಿಲ್ಲ. ವಿಚಾರ ಮಾಡಿದರೆ ಇವನು ಯಾವ ಕವಿಗೂ ಕಡಿಮೆಯಾದವನಲ್ಲ. ಹೀಗಾಗಲು ಕವಿಯು ದರಿದ್ರನಾರಾಯಣರಲ್ಲಿಯೇ ಹುಟ್ಟಿ ಬೆಳೆದು ಅವರ ಹಿತಕ್ಕೇ ವಚನಗಳನ್ನು ಹಾಡಿ, ಯಾವ ರಾಜಾಸ್ಥಾನದ ಆಶ್ರಯವನ್ನೂ ಹೊಂದದೆ, ತನ್ನ ಗ್ರಂಥವನ್ನಾದರೂ ಪರಿಪೂರ್ಣವಾಗಿ ಬರೆದಿಡುವ ಮನಸ್ಸಿಲ್ಲದೆ "ಹಿಂಡನಗಲಿದ ಗಜದಂತಿ"ರ್ದುದೇ ಕಾರಣವೆಂದು ತೋರುತ್ತದೆ. ಸೋಮೇಶ್ವರ ಶತಕ, ಸಿದ್ಧನೀತಿ, ಶಿವಶರಣರ ವಚನಗಳಿಂದ ವಿಷಯ ಸಂಗ್ರಹಿಸಿದ್ದರೂ ಕವಿ ಯಾರ ಹೆಸರನ್ನೂ ಸ್ಮರಿಸಿಲ್ಲ.

## ವಚನಕಾರರೂ ಸರ್ವಜ್ಞನೂ.

ಸರ್ವಜ್ಞನ ವಚನಗಳಲ್ಲಿ ಬಸವಾದಿ ಪ್ರಮುಥರ ವಚನಗಳ ಭಾವ ಕೆಲವೆಡೆಯಿದೆ. ವಚನಕಾರರು ಪ್ರತಿಪಾದಿಸುವ ಏಕೇಶ್ವರ ವಾದ, ಮೂರ್ತಿಪೂಜಾ ನಿರಸನ, ಕ್ಷುದ್ರ ದೇವತಾ ಪೂಜಾ ತಿರಸ್ಕಾರ, ಶಿವಾಧಿಕ್ಯ, ಖಂಡಿತವಾದಿತ್ವ, ವಿಚಾರ ಸ್ವಾತಂತ್ರ್ಯ, ಶಿವಾನುಭವ ನಿಷ್ಠೆ ಈ ಮೊದಲಾದ ತತ್ವಗಳನ್ನು ಜೀರ್ಣಿಸಿಕೊಂಡು ಸರ್ವಜ್ಞನು ತನ್ನ ವಚನಗಳಲ್ಲಿ ಅವೇ ತತ್ವಗಳನ್ನು ಇನ್ನೂ ರಮಣೀಯವಾಗಿ ಹೇಳಿದ್ದಾನೆ.

ವಚನಕಾರನಿಗಿಂತಲೂ ಇವನಲ್ಲಿ ಮಿಗಿಲಾದ ಗುಣಗಳಿವೆ. ಉದಾರವಾದ ಭಾವಗಳಿವೆ. ವಚನಕಾರರಲ್ಲಿರುವ ಭವಿ-ಭಕ್ತ ಭೇದವೂ, ಅನ್ಯಮತ ತಿರಸ್ಕಾರವೂ ಇವನಲ್ಲಿಲ್ಲ. ಸರ್ವಜ್ಞನು ವಚನಕಾರರಿಗಿಂತ ಹೆಚ್ಚಾದ ಲೋಕಾನುಭವಿ, ಬಹುಶ್ರುತ, ರಸಿಕ, ಮಾತಿನ ಜಾಣ, ಕಸವನ್ನು ರಸವನ್ನಾಗಿ ಮಾಡುವಂಥ ಚದುರ ಎಂದು ನಾವು ಧಾರಾಳವಾಗಿ ಹೇಳಬಹುದು. ಸಾರಾಂಶಃ- ಸರ್ವಜ್ಞನು ವಚನಕಾರರಲ್ಲಿರುವ

ಸದ್ಗುಣಗಳನ್ನೊಳಗೊಂಡು ಅವರಲ್ಲಿಲ್ಲದ ಕೆಲವು ಅಸಾಧಾರಣ ಗುಣದಿಂದ ಅಲಂಕೃತನಾಗಿ ರಸಭರಿತವೂ ಅಸಾದೃಶವೂ ಆದ ವಚನಗಳಿಂದಲೂ ತನ್ನದೇ ಆದ ಒಂದು ಶೈಲಿಯಿಂದಲೂ ಕೂಡಿ ಸಕಲ ಕನ್ನಡಿಗರನ್ನೂ ತನ್ನ ಮಾತಿನ ಮಂತ್ರದಿಂದ ಬಂಧಿಸಿ ಬಿಟ್ಟಿರುವನು.

## ಕವಿಯ ವ್ಯಕ್ತಿತ್ವ.

"ಕಿರಿದರೊಳ್ ಪಿರಿದುಮರ್ಥಮಂ ನರಿಪಲ್ಕರೆ ವಾಕ್ ನಾತನಾದಂ ನಿಪುಣಂ" ಎಂಬುದಾಗಿ ಕವಿರಾಜಮಾರ್ಗದಲ್ಲಿ ನೃಪತುಂಗ ದೇವನು ಹೇಳಿದ್ದಾನೆ. ಆದರೆ ಅಂದಿನಿಂದ ಇಂದಿನ ವರೆಗೆ ನೃಪತುಂಗನ ಅಭಿಪ್ರಾಯದಂತೆ ಕಿರಿದರೊಳ್ ಪಿರಿದುಮರ್ಥಮನೊರೆದವರಲ್ಲಿ ಸರ್ವಜ್ಞಮೂರ್ತಿಯೇ ಅಗ್ರಗಣ್ಯನಾಗಿದ್ದಾನೆ. ವಚನಕಾರರೂ ಹರಿದಾಸರೂ ಹಿತವೂ ಮಿತವೂ ಆದ ರೀತಿಯಲ್ಲಿ ಎಪಿಟಮಿ (*Epitome Short and Sweet*) ತಮ್ಮ ವಚನಗಳನ್ನು ಹಾಡಿದ್ದರೂ ಪರೀಕ್ಷೆಗೆ ನಿಂತರೆ ಅವರೆಲ್ಲರಿಗಿಂತಲೂ ಸರ್ವಜ್ಞನೇ ಹೆಚ್ಚು ಅಂಕಗಳನ್ನು ತೆಗೆದುಕೊಳ್ಳುತ್ತಾನೆ.

ಕಾವ್ಯವು "ಮನೋಭವನಲರಂಬಿನಂತೆ" ವಾಚಕರ ಹಾಗೂ ಶ್ರೋತೃಗಳ ಚಿತ್ತವನ್ನು ಅಪಹರಿಸಬೇಕೆಂದು ಷಡಕ್ಷರದೇವ ಮಹಾಕವಿಯು ಹೇಳಿರುವನು. ಸರ್ವಜ್ಞನು ಹೀಗೆಯೇ ತನ್ನ ವಚನಗಳನ್ನು ಹೇಳಿ ಬರೆದಿದ್ದಾನೆ. ಹಿತವಾಗಿಯೂ ಮಿತವಾಗಿಯೂ ಸರಸವಾಗಿಯೂ ಇರುವಂತೆ ಕವಿತೆಯನ್ನು ಬರೆವುದರಲ್ಲಿ ಸರ್ವಜ್ಞನು ಅಗ್ರಗಣ್ಯನೆಂದರೆ ಪ್ರಾಯೇಣ ಯಾರೂ ವಿರೋಧಿಸುವುದಿಲ್ಲ.

## ಸರ್ವಜ್ಞನ ಛಂದಸ್ಸು.

ಸರ್ವಜ್ಞಮೂರ್ತಿಯ ಕೀರ್ತಿಯು ಕನ್ನಡನಾಡಿನಲ್ಲಿ ಗೋಪಾಲಕರಿಂದ ಭೂಪಾಲಕರ ವರೆಗೆ ಹಬ್ಬಲಿಕ್ಕೆ ಪಾಮರರಿಂದ ಪಂಡಿತರ ವರೆಗೆ ಪಸರಿಸಲಿಕ್ಕೆ ಕವಿಯು ಆರಿಸಿಕೊಂಡ ಛಂದಸ್ಸೂ ಒಂದು ಕಾರಣವಾಗಿದೆ. ನಾವು "ತ್ರಿಪದಿ" ಗಳನ್ನು ಸರ್ವಜ್ಞನ ಛಂದಸ್ಸೆಂದು ಬೇಕೆಂತಲೇ ಕರೆದಿದ್ದೇವೆ. ತ್ರಿಪದಿಗಳನ್ನು ಅನೇಕ ಕವಿಗಳು ಬರೆದಿದ್ದರೂ ತ್ರಿಪದಿಯಲ್ಲಿಯೇ ಹಲವು ಕವಿಗಳು ಗ್ರಂಥನಿರ್ಮಾಣಮಾಡಿದ್ದರೂ ತ್ರಿಪದಿಗಳು ಸರ್ವಜ್ಞನ ಕೈಯ್ಯಲ್ಲಿ ಪಳಗಿದಂತೆ, ಭಾವಪೂರ್ಣವಾದಂತೆ, ಸರ

ಸವಾದಂತೆ, ತೇಜಃಪುಂಜವಾದಂತೆ, ಚಿತ್ತಾಕರ್ಷಕವಾದಂತೆ, ಹೃದಯಂಗಮವಾದಂತೆ ಮತ್ತಾವ ಕವಿಯ ಹಸ್ತದಿಂದಲೂ ಹೊರಸೂಸಿಲ್ಲ.

ಕನ್ನಡಸಾಹಿತ್ಯದಲ್ಲಿ ಆದಿಪಂಪನ ವೃತ್ತಗಳೂ ಹರಿಹರನ ರಗಳೆಗಳೂ, ಬಸವೇಶನ ವಚನಗಳೂ, ಲಕ್ಷ್ಮೀಶನ ಷಟ್ಪದಿಗಳೂ, ನಿಜಗುಣನ ಹಾಡುಗಳೂ, ಷಡಕ್ಷರ ಕಂದಗಳೂ, ರತ್ನಾಕರ ವರ್ಣಿಯ ಸಾಂಗತ್ಯಗಳೂ ಪ್ರಸಿದ್ಧವಾಗಿರುವಂತೆ ಸರ್ವಜ್ಞನ ತ್ರಿಪದಿಗಳೂ ವಿಖ್ಯಾತವಾಗಿವೆ.

'ತ್ರಿಪದಿ' ಎಂಬ ಛಂದಸ್ಸು ಸಂಸ್ಕೃತ ಜನ್ಯವಲ್ಲ. ಇದು ದ್ರಾವಿಡ ಛಂದಸ್ಸಿಗೆ ಸೇರಿದುದು. ನಾಗವರ್ಮನು ತನ್ನ "ಛಂದೋಂಬುಧಿ" ಎಂಬ ಗ್ರಂಥದಲ್ಲಿ ತ್ರಿಪದಿಯಲ್ಲಿಯೇ ತ್ರಿಪದಿ ಲಕ್ಷಣವನ್ನು ಹೇಳಿದ್ದಾನೆ. ನಾಗವರ್ಮನ ಕಾಲ ಕ್ರಿ. ಶ. ೯೯೦ ಎಂದು ಕವಿಚರಿತ್ರೆಗಾರರು ಹೇಳಿದ್ದಾರೆ. ಅಂದರೆ ನಾಗವರ್ಮನ ಕಾಲದಲ್ಲಿಯೇ ತ್ರಿಪದಿಗಳು ಕನ್ನಡದಲ್ಲಿ ಬಳಕೆಯಲ್ಲಿದ್ದವೆಂದು ತೋರುತ್ತದೆ. ನಾಗವರ್ಮನ ಸಮಕಾಲೀನನೇ ಆದ ರನ್ನನು ತನ್ನ ಗದಾಯುದ್ಧದಲ್ಲಿಯೂ ಸೋಮರಾಜನು ತನ್ನ "ಶೃಂಗಾರಸಾರ" ದಲ್ಲಿಯೂ ಷಡಕ್ಷರ ದೇವನು ತನ್ನ ರಾಜಶೇಖರವಿಳಾಸದಲ್ಲಿಯೂ ತ್ರಿಪದಿಗಳನ್ನು ಹೇಳಿದ್ದಾರೆ. ಇದರಿಂದ ತ್ರಿಪದಿಗಳ ಛಂದಸ್ಸು ಮಹಾ ಕಾವ್ಯಗಳಿಗೂ ಉಪಯೋಗಬೀಳುತ್ತಿತ್ತೆಂದು ನಾವು ತಿಳಿಯಬಹುದಾಗಿದೆ.

ವೀರಶೈವ ಕವಿಗಳನೇಕರು ತ್ರಿಪದಿಯಲ್ಲಿಯೇ ತಮ್ಮ ಗ್ರಂಥಗಳನ್ನು ಬರೆದಿದ್ದಾರೆ. ಇಂಥವುಗಳಲ್ಲಿ ನಿಜಗುಣಶಿವಯೋಗಿಯ "ಪುರಾತನರ ತ್ರಿಪದಿ" ಯೂ ವೈಲಾರದ ಬಸವಲಿಂಗಶರಣನ "ಗುರುಕರುಣತ್ರಿಪದಿ" ಯೂ, ಜಟಾಶಂಕರ ದೇವನ ಪ್ರಭುದೇವನ ತ್ರಿಪದಿಯೂ, ಪುರಾತನ ದೇವಿಯರ ತ್ರಿಪದಿಯೂ, (ಕವಿಹೆಸರು ಗೊತ್ತಾಗಿಲ್ಲ) ಕನ್ನಡಿಗರಲ್ಲಿ ಬಹಳವಾಗಿ ಬಳಕೆಯಲ್ಲಿವೆ.

## ತ್ರಿಪದಿಯ ಲಕ್ಷಣ.

ಸರ್ವಜ್ಞಮೂರ್ತಿಯ ವಚನಗಳೆಲ್ಲ ತ್ರಿಪದಿ ಛಂದಸ್ಸಿನಲ್ಲಿರುವುದರಿಂದ ತ್ರಿಪದಿಯ ಲಕ್ಷಣವನ್ನು ತಿಳಿವುದೂ ಅವಶ್ಯವಾಗಿದೆ. ಅದನ್ನಿಲ್ಲಿ ನಾವು ಸಂಗ್ರಹವಾಗಿ ಹೇಳುತ್ತೇವೆ. ಈ ವಿಚಾರವನ್ನು ವಿಸ್ತಾರವಾಗಿ ತಿಳಿಯಲಾಶಿಸುವವರು "ಸರ್ವಜ್ಞ ವಚನ"ಗಳ ಪ್ರಥಮ ಮುದ್ರಣದ ಪೀಠಿಕೆಯನ್ನು ಅವಲೋಕಿಸುವುದು ಉತ್ತಮ.

"ತ್ರಿಪದಿ" ಅಂದರೆ ಮೂರು ಪಾದವುಳ್ಳ ಪದ್ಯ ಎಂದರ್ಥ. ಇದರಲ್ಲಿ ಮೊದಲನೇ ಪಾದದಲ್ಲಿ ೨೦ ಮಾತ್ರೆಗಳೂ, ಎರಡನೇ ಪಾದದಲ್ಲಿ ೧೮ ಮಾತ್ರೆಗಳೂ, (ಕೆಲವು ಕಡೆ ೧೭ ಮಾತ್ರೆಗಳಿರುವುದೂ ಉಂಟು) ಮೂರನೇ ಪಾದದಲ್ಲಿ ೧೩ ಮಾತ್ರೆಗಳೂ ಇರುತ್ತವೆ.

ಮೊದಲನೆ ಸಾಲಿನಲ್ಲಿ ಅರ್ಧ ಸಾಲಾದ ಮೇಲೆ ಮತ್ತೆ ಮೊದಲಿನ ಪ್ರಾಸೇ ಮತ್ತರ್ಧ ಸಾಲಿನ ಎರಡನೆ ಅಕ್ಷರದಲ್ಲಿ ಬರುತ್ತದೆ. ಇದನ್ನು ತ್ರಿಪದಿಯ ಅಸಾಧಾರಣ ಗುಣವೆನ್ನಬಹುದು. ರಾಜಶೇಖರವಿಳಾಸ, ಶೃಂಗಾರಸಾರ ಮಹಾ ಕಾವ್ಯಗಳಲ್ಲಿರುವ ತ್ರಿಪದಿಗಳನ್ನು ಹೇಳುವಾಗ ಎರಡನೇ ಪಾದದಲ್ಲಿ ಮೂರು ಗಣಗಳ ವರೆಗೆ ಹೇಳಿ ಮತ್ತೆ ಆ ಎರಡನೆ ಸಾಲವನ್ನು ಮೊದಲಿಗೆ ಹೇಳುವ ರೂಢಿಯುಂಟು. ಹಳ್ಳಿಗರಲ್ಲಿ ವಾಡಿಕೆಯಾಗಿರುವ 'ಪನಕೆವಾಡು' ಗಳಲ್ಲಿನ ತ್ರಿಪದಿಗಳನ್ನು ಮೇಲೆ ಹೇಳಿದಂತೆ ಹೇಳುವುದುಂಟು. ಸರ್ವಜ್ಞ ತ್ರಿಪದಿ, ಗುರುಕರುಣತ್ರಿಪದಿ, ಮೊದಲಾದವುಗಳನ್ನು ಹೇಳುವಾಗ ಮೇಲೆ ಹೇಳಿದಂತೆ ಎರಡನೇ ಪಾದವನ್ನು ಹಿಂದೆಮುಂದೆ ಮಾಡುವ ಪದ್ಧತಿಯು ಕಾಣಲಿಲ್ಲ. ಈ ತ್ರಿಪದಿಗಳನ್ನು ತ್ರಿವದಿ, ತ್ರಿವಳಿ, ತಿವದಿ ಎಂದೂ ಕರೆಯುತ್ತಾರೆ.

ನಾಗವರ್ಮನು ಛಂದೋಂಬುಧಿಯಲ್ಲಿ ತ್ರಿಪದಿಯ ಲಕ್ಷಣವನ್ನು "ಬಿಸರುಹೋದ್ಭವಗಣಂ। ರಸದಶಸ್ಥಾನದೊಳ್। ಬಿಸರುಹ ನೇತ್ರಗಣವೆಂ ಬಕರ್ಮಳಿದುವು। ಬಿಸರುಹನೇತ್ರೆ ತ್ರಿಪದಿಗೆ" ಎಂದು ಹೇಳಿದ್ದಾನೆ. ಈ ತ್ರಿಪದಿಯಲ್ಲಿ ಆರು ಮತ್ತು ಹತ್ತನೇ ಗಣವು ಬ್ರಹ್ಮಗಣ ಬರಬೇಕೆಂದು ನಾಗವರ್ಮನ ಮತ. ಆದರೆ ಸರ್ವಜ್ಞ, ಷಡಕ್ಷರ, ಸೋಮರಾಜರ ತ್ರಿಪದಿಗಳಲ್ಲಿ ರಸ, ದಶ, ಸ್ಥಾನದಲ್ಲಿ ಪ್ರಾಯೇಣ ನಾಗವರ್ಮನು ಹೇಳಿದಲಕ್ಷಣವಿಲ್ಲ. ಕವಿಚಕ್ರವರ್ತಿ ರನ್ನನ ಗದಾಯುದ್ಧದಲ್ಲಿ ಪ್ರಯೋಗಿಸಲ್ಪಟ್ಟಿರುವ ತ್ರಿಪದಿಯು.

"ಪದ್ಯರಚನೆಯೊಳ್ ಕಾಳಿದಾಸನುಂ।
ಗದ್ಯರಚನೆಯೊಳ್ ಬಾಣನುಮುಂ ಕವಿಗಳಿರ್ವರುಂ।
ನೆಗಳ್ದರದರಿಂ ಸತ್ಕವಿಗಳಿರ್ವರುಮೆಮಗಭಿ ವಂದ್ಯರ್"

ಎಂಬ ಪ್ರಕಾರವಿದ್ದು ನಾಗವರ್ಮನ ಮತಕ್ಕೂ ಸರ್ವಜ್ಞನ ಪದ್ಧತಿಗೂ ಸರಿ ಹೋಗದ ಬೇರೊಂದು ಲಕ್ಷಣವುಳ್ಳದ್ದಾಗಿದೆ. ಈ ತ್ರಿಪದಿಯ ಲಕ್ಷಣವು ಯಾವ ಛಂದೋ ಗ್ರಂಥದಲ್ಲಿದೆಯೋ ನಮಗೆ ತಿಳಿಯದು.

ರನ್ನನ ಕಾಲದಲ್ಲಿ ಈ ತರದ ತ್ರಿಪದಿಗಳು ರೂಢಿಯಿದ್ದರೂ ಇರಬಹುದು. ಇಲ್ಲವಾದರೆ ಮಹಾಕವಿ ರನ್ನನು ಇದನ್ನು ತನ್ನ ಕಾವ್ಯದಲ್ಲಿ ಪ್ರಯೋಗಿಸು ತ್ತಿದ್ದನೆಂತು ?

## ಕವಿಯ ಜಾಣ್ಮೆ.

ತನ್ನ ಗ್ರಂಥವನ್ನು ಬರೆಯಲಿಕ್ಕೆ ಸರ್ವಜ್ಞನು ವಿಲಕ್ಷಣವೂ ಮನೋ ಹರವೂ ಆದ ತ್ರಿಪದಿ ಛಂದಸ್ಸನ್ನು ಸ್ವೀಕರಿಸಿದನು. ಪ್ರಾಯೇಣ ಪ್ರತಿಭಾ ಶಾಲಿಗಳಾದ ಕವಿಗಳೆಲ್ಲರೂ ಈ ಮಾರ್ಗವನ್ನೇ ಸ್ವೀಕರಿಸಿರುತ್ತಾರೆಂದು ತೋರುತ್ತದೆ. ಹರಿಹರದೇವನು ಜೈನರ ಚಂಪೂ ಶೈಲಿಯನ್ನು ಬಿಟ್ಟು ರಗಳೆಗಳಲ್ಲಿಯೇ ತನ್ನ ಶಿವಶರಣರ ಚರಿತ್ರೆಗಳನ್ನು ಬರೆದನು. ಕೆರೆಯ ಪದ್ಮರಸನೂ ತನ್ನ ದೀಕ್ಷಾಬೋಧೆಯೆಂಬ ಗ್ರಂಥವನ್ನು ರಗಳೆಯಲ್ಲಿಯೇ ಬರೆದಿರುವನು. ರಾಘವಾಂಕ ಪಂಡಿತನು ಷಟ್ಪದಿಗಳಲ್ಲಿಯೇ ತನ್ನ ಗ್ರಂಥಗಳನ್ನೆಲ್ಲಾ ಬರೆದನು. ನಿಜಗುಣ ಶಿವಯೋಗಿಯು ರಗಳೆ, ಹಾಡು, ಸಾಂಗತ್ಯ, ತ್ರಿಪದಿ, ಗದ್ಯ ಮೊದಲಾದ ವಿವಿಧ ಛಂದಸ್ಸಿನಲ್ಲಿ ಗ್ರಂಥ ನಿರ್ಮಾಣ ಮಾಡಿದನು. ಬಸವೇಶನು ಬಿಡುಗನ್ನಡ ವಚನಗಳಲ್ಲಿಯೇ ತನ್ನ ಗ್ರಂಥಗಳನ್ನು ಬರೆದು ಇತರ ಶರಣರಿಗೆ ಮಾರ್ಗದರ್ಶಕನಾದನು. ಪುರಂದರದಾಸರೇ ಮೊದಲಾದ ಹರಿದಾಸರೂ ಹಾಡುಗಳು ಸುಳಾದಿ ಗಳು ದ್ವಿಪದಿಗಳು ಮೊದಲಾದ ಛಂದಸ್ಸಿನಲ್ಲಿ ತಮ್ಮ ಗ್ರಂಥಗಳನ್ನು ಬರೆದರು. ರತ್ನಾಕರವರ್ಣಿಯು ಸಾಮಾನ್ಯವಾದ ಸಾಂಗತ್ಯದಲ್ಲಿಯೇ "ಭರತೇಶ ವೈಭವ"ದಂತಹ ಅಗಾಧವಾದ ಗ್ರಂಥವನ್ನು ನಿರ್ಮಿಸಿದನು.

ಆಂಧ್ರ ವಾಙ್ಮಯದಲ್ಲಿ ಸುಪ್ರಸಿದ್ಧನಾದ ಪಾಲ್ಕುರಿಕೆ ಸೋಮನಾ ಥನು "ದ್ವಿಪದಿ"ಗಳಲ್ಲಿಯೇ ಬಸವಪುರಾಣದಂಥ ಉತ್ತಮೋತ್ತಮ ಕಾರ್ಯವನ್ನು ನಿರ್ಮಿಸಿದನು. ತಮಿಳು ಭಾಷೆಯಲ್ಲಿ ಋಷಿಕವಿಯೆನಿಸಿದ ತಿರುವಳ್ಳುವ ಕವಿಯು ದ್ವಿಪದಿಯ ಛಂದಸ್ಸಿನಲ್ಲಿಯೇ ಕುರುಳ್ ಎಂಬ ಲೋಕವಿಖ್ಯಾತ ಗ್ರಂಥವನ್ನು ನಿರ್ಮಿಸಿರುವನು. ಆಂಧ್ರ ಕವಿಕೋಕಿಲೆ ಯೆನಿಸಿದ ವೇಮಣ್ಣನು ಪ್ರೌಢತಮವಾದ ಚಂಪೂಶೈಲಿಯನ್ನು ಬಿಟ್ಟು ಸಾಮಾನ್ಯ ಗೀತೆಗಳಲ್ಲಿಯೇ ಗ್ರಂಥವನ್ನು ಬರೆದಿರುವನು. ಹೀಗೆಯೇ ಕನ್ನಡಿಗರ ಜೀವಸ್ವರೂಪನಾದ ಸರ್ವಜ್ಞ ಮೂರ್ತಿಯೂ ಕೂಡ ಸಾಮಾ ನ್ಯವೆನಿಸಿದ "ತ್ರಿಪದಿ"ಗಳಲ್ಲಿ ಸಕಲಶಾಸ್ತ್ರಸಾರರೂಪವೂ, ಬಹು ಅರ್ಥ

ಗರ್ಭಿತವೂ ಆದ ವಚನಗಳನ್ನು ಹಾಡಿ ತನ್ಮೂಲಕ ತನ್ನ ಅಸಾಧಾರಣ ವಾದ ಜ್ಞಾನ್ಯೆಯನ್ನು ಪ್ರಕಟಿಸಿರುವನು.

## ವ್ಯಾಕರಣ ವಿಚಾರ.

ಸರ್ವಜ್ಞನು ಎಲ್ಲ ವಿಚಾರದಲ್ಲಿಯೂ ಒಬ್ಬರ ಹಂಗಿನಲ್ಲಿಲ್ಲದವನು. ನಿಶ್ಚಯವ ಬಿಡದೆ ಒಬ್ಬರಿಚ್ಛೆಯಲಿ ನಡೆಯದೆ ಸ್ವೇಚ್ಛೆಯಾಗಿ ತಿರುಗುವವನು. ಹಿಂಡನಗಲಿದ ಗಜದಂತೆ ಓಡಾಡುತ್ತಿದ್ದ ಈ ತುಂಡುಗಂಬಳಿಯ ಪುರುಷನು ವೈಯ್ಯಾಕರಣಿಗಳ ಬಲೆಗೆ ಬೀಳುವವನೇ? ಎಂದಿಗೂ ಇಲ್ಲ. "ಪ್ರಯೋಗ ಶರಣರಿದ್ದ ವೈಯ್ಯಾಕರಣರಿದ್ದ" ಎಂಬ ಮಾತು ಸರ್ವಜ್ಞನಿಗೆ ತಿಳಿಯದಂತಿರಲಿಲ್ಲ.

ಸರ್ವಜ್ಞನ ಗ್ರಂಥದಲ್ಲಿ ಎಷ್ಟೋ ಕಡೆ ಶಬ್ದಗಳು ಕಾವ್ಯ ಮಾರ್ಗವನ್ನು ಬಿಟ್ಟಿವೆ. ವ್ಯಾಕರಣ ಸೂತ್ರಗಳನ್ನು ಧಿಃಕರಿಸಿವೆ. ಗ್ರಾಮ್ಯ ಭಾಷೆಯನ್ನು ಹಿಂಬಾಲಿಸಿವೆ. ಹೀಗಾದುದೇ ಸರ್ವಜ್ಞ ವಚನಗಳಿಗೆ ಒಂದು ಬಗೆಯ ರಮಣೀಯತೆಯನ್ನೂ, ಚೈತನ್ಯವನ್ನೂ ಉಂಟುಮಾಡಿದೆ. ಇದರಿಂದಲೇ ಸರ್ವಜ್ಞ ವಚನಗಳು ನಗರ ವನಗಳಲ್ಲಿ ಗಿಡಲತೆಗಳಂತೆ ಕೃತ್ರಿಮ ಸೌಂದರ್ಯವನ್ನು ತಾಳದೆ ಘೋರಾರಣ್ಯದ ಗಿಡಬಳ್ಳಿಗಳಂತೆ ನೈಸರ್ಗಿಕತೆಯಿಂದ ತುಂಬಿಕೊಂಡಿವೆ.

## ಸರ್ವಜ್ಞನ ಶೈಲಿ.

ಶೈಲಿಯು ಕವಿಯ ಯೋಗ್ಯತಾ ನಿರ್ಣಯಕ್ಕೆ ಮುಖ್ಯ ಸಾಧನ. ಶೈಲಿಯೇ ಕವಿ (*Style is the man*) ಎಂಬ ಆಂಗ್ಲವಾಕ್ಯವೊಂದು ಪ್ರಸಿದ್ಧವಾಗಿಯೇ ಇದೆ. ಸರ್ವಜ್ಞನು ದೀರ್ಘ ಸಮಾಸಗಳನ್ನು, ಕ್ಲಿಷ್ಟಕರವಾದ ಶಬ್ದಗಳನ್ನೂ ಪ್ರಾಯೇಣ ಉಪಯೋಗಿಸುವುದಿಲ್ಲ. ಇವನ ಶಬ್ದಗಳು ಕಿರಿಯವು ಹಿರಿದಾದ ಅರ್ಥವನ್ನು ಕೊಡತಕ್ಕವು. ಜನರಿಗೆ ಬಹುಮಟ್ಟಿಗೆ ಪರಿಚಯವಾದವು. ಬೆಡಗಿನ ವಚನಗಳನ್ನು ಸರ್ವಜ್ಞನು ಬರೆದುದು ತಾವು ಮಹಾಪ್ರೌಢರೆಂದು ವಿಜೃಂಭಿಸುತ್ತಿದ್ದ ಕವಿಗಳಿಗಾಗಿ, ಪಂಡಿತರಿಗಾಗಿ. ಇವರ ಮೆದಳನ್ನು ಕಲಕುವುದಕ್ಕಾಗಿ. ಆದರೆ ಈ ಬೆಡಗಿನ ವಚನಗಳು ಕೂಡ ಪಂಡಿತರಿಗಿಂತಲೂ ಪಾಮರರಲ್ಲಿಯೇ ಪ್ರಚಾರದಲ್ಲಿರುವುದೊಂದು ಚಮತ್ಕಾರ. ಸರ್ವಜ್ಞ ವಚನಗಳು ಓದುಗಬ್ಬವಾಗಿದ್ದರೂ ಅದು ವಿಶೇಷತಃ ಹಾಡುಗಬ್ಬವಾಗಿಯೇ ಪ್ರಚಾರದಲ್ಲಿರುವುದು. ಇನ್ನೊಂದು

ಸ್ವಾರಸ್ಯವಾದ ವಿಚಾರ. ಸರ್ವಜ್ಞನ ವಚನದಲ್ಲಿಯು ಕೆಲವು ನೀತಿವಾಕ್ಯಗಳು ಗಾದೆಯು ಮಾತುಗಳಂತೆ ಜನರಲ್ಲಿ ರೂಢಿಯಾಗಿರುವುವೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಸರ್ವಜ್ಞ ವಚನಗಳಂತೆ ಕನ್ನಡದಲ್ಲಿ ಪ್ರಚಾರದಲ್ಲಿರುವ ಪದ್ಯಗಳೆಂದರೆ ಸೋಮೇಶ್ವರ ಶತಕದ ಪದ್ಯಗಳು ಹೊರತು ಮತ್ತಾವುದೂ ಇಲ್ಲ.

ಸರ್ವಜ್ಞ ವಚನದಲ್ಲಿ ಮಹಾಕಾವ್ಯದಲ್ಲಿರಬೇಕಾದ ಕೆಲವು ಅಲಂಕಾರಗಳಿವೆ. ಇವನು ರೂಪಕ, ಯಮಕ, ಉಪಮಾ, ದೃಷ್ಟಾಂತ, ಶ್ಲೇಷ ಮೊದಲಾದ ಅಲಂಕಾರಗಳನ್ನು ಉಪಯೋಗಿಸಿಕೊಂಡಿದ್ದಾನೆ. ಇವನ ವಚನದಲ್ಲಿ ಶೃಂಗಾರ, ಅದ್ಭುತ, ಬೀಭತ್ಸ ಮೊದಲಾದ ರಸಗಳಿದ್ದರೂ ಹಾಸ್ಯ ರಸವು ಮಿಗಿಲಾಗಿದೆಯೆಂದು ಹೇಳಬಹುದು.

ಶೃಂಗಾರ ರಸದಲ್ಲಿ ಷಡಕ್ಷರದೇವನೂ, ವೀರರಸದಲ್ಲಿ ರನ್ನನೂ, ಕರುಣಾರಸದಲ್ಲಿ ರಾಘವಾಂಕನೂ, ಭಕ್ತಿರಸದಲ್ಲಿ ಹರಿಹರನೂ ಮಿಗಿಲಾಗಿರುವಂತೆ ಹಾಸ್ಯರಸದಲ್ಲಿ ಸರ್ವಜ್ಞನು ಶ್ರೇಷ್ಠನೆನಿಸಿರುವನು.

ಗಾಂಭಿರ್ಯಕ್ಕೆ ಆದಿಪಂಪನೂ, ಸಕಲತೆಗೆ ಅಭಿನವಪಂಪನೂ, ಉದಾರತೆಗೆ ಕುಮಾರವ್ಯಾಸನೂ, ಮಧುರತೆಗೆ ಲಕ್ಷ್ಮೀಶನೂ ಹೆಸರಾಗಿರುವಂತೆ ವಿನೋದಕ್ಕೆ ಸರ್ವಜ್ಞನು ಸೀಮಾಪುರುಷನಾಗಿರುವನು.

ಸರ್ವಜ್ಞನ ಶೈಲಿಯಲ್ಲಿ ಪದಪ್ರಯೋಗಚಾತುರ್ಯವು ಒಂದು ಮುಖ್ಯ ಗುಣವಾಗಿದೆ. ಇವನು ಇನ್ನಾವಕವಿಯೂ ಹೇಳಿಲ್ಲವಾದ ಕೆಲವು ಮನೋಹರವಾದ ಶಬ್ದಗಳನ್ನು ನಿರ್ಮಿಸಿದ್ದಾನೆ. ತಗ್ಗಿನಕುಣಿ, ಕಾಮನಕೆರೆ, ಉಕ್ಕೆಯುಬಚ್ಚಲು, ಸಂದಿಯುಗಾಯ (ಯೋನಿ) ಗುದ್ದುಗಣ್ಣವ (ಮುದುಕ) ಕಾಡನುಡಿ (ಬೈಗಳು) ತುತ್ತಿನಚೀಲ (ಹೊಟ್ಟೆ) ಎಲುವಿನಮನೆ (ದೇಹ) ಕೊಲುವಧರ್ಮ (ಕರ್ಮಮಾರ್ಗ) ಸಂದರಿವು (ಬ್ರಹ್ಮಜ್ಞಾನ) ನಾಡನುಡಿ (ರಾಜಕೀಯವಿಚಾರ) ಕಿರಿಗೂಸು (ಕನ್ಯೆ) ಅಟ್ಟೆಕಸ್ಕುವಿರಕೆ, ಇಂಬರಿಯು ವಾಕೆ (ಪಕ್ಷಿ) ಇವೇ ಮೊದಲಾದ ಶಬ್ದಗಳನ್ನು ಅವನ ವಚನದಲ್ಲಿ ಕಂಡಾಗ ನಾವು ಇವನ ಶಬ್ದರಚನಾನೈಪುಣ್ಯವನ್ನು ಕಂಡು ತಲೆದೂಗುತ್ತೇವೆ. ಚಕಿತರಾಗುತ್ತೇವೆ. ಆನಂದಪರವಶರಾಗುತ್ತೇವೆ.

ಶಬ್ದ ಪ್ರಯೋಗದಲ್ಲಿ ನೈಪುಣ್ಯವಿದ್ದಂತೆಯೇ ಈ ಕವಿಗೆ ಪದಪ್ರಯೋಗದಲ್ಲಿಯೂ ಕುಶಲತೆಯಿದೆ. ಪರಿಮಾಣವಕ್ಕು, ಪದವಕ್ಕು. ಕೈಲಾಸನೆರೆಮನೆಯಕ್ಕು. ಈಚಲೊಂದೆಡೆಗೆ ಉಪಕಾರಿ. ಮಸಿವಂಣವೆಂದ, ಕೋಡೆಯನು ಕಲಿಯು ಒಂದೆಂಬ, ಬೆಟ್ಟಕರ್ಪುರಉರಿದು ಬೊಬ್ಬಿಡಲು

ಬಂದಿಲ್ಲ, ಮುತ್ತು ಗೋಳು ಪುಟ್ಟಿ ಮತ್ತೆನೀರಪ್ಪುದೇ, ಉಣ್ಣೆ ಕೆಚ್ಚ ಲೊಳಿರ್ದು ಉಣ್ಣ್ಲು ಸು ನೊರೆಹಾಲ, ಕೊಲುವ ಕೈಯೊಳು ಪೂಜೆ, ಮೆಲುವ ಬಾಯೊಳು ಮಂತ್ರ, ಅದ್ವೈತಿ ತಾನಾಗಿ ಯುದ್ಧವಿನ್ನಾರೊಡನೆ, ಸತ್ತು ಹೋದರೆ ನಿನಗದೆತ್ತಣದುಮೋಕ್ಷನ್ಯೆ, ಇತ್ಯಾದಿ ಪ್ರಯೋಗಗಳು ಕನ್ನಡ ಸಾಹಿತ್ಯಸಮುದ್ರದ ರತ್ನಗಳೆಂದು ಹೇಳುವಂತಿವೆ.

## ಕವಿಯ ಆದರ್ಶ.

ಸರ್ವಜ್ಞನು ಬಾಯಿಬಿಟ್ಟು ಹೇಳದಿದ್ದರೂ ಅವನ ವಚನಗಳಲ್ಲಿ ಸೋಮೇಶ್ವರ ಕವಿ, ಸಿದ್ಧ ಕವಿ, ವಚನಕಾರರು. ಭರ್ತೃಹರಿ ಈ ಮೊದ ಲಾದವರ ಭಾವಗಳನ್ನು ಕಾಣಬಹುದು. ಅನೇಕ ಸಂಸ್ಕೃತವಾಕ್ಯಗಳ ಭಾಷಾಂತರವನ್ನು ಕಾಣಬಹುದು. ಕವಿಯು ಅನೇಕ ಶಾಸ್ತ್ರಗಳನ್ನು ಓದಿ ದವನಾಗಿದ್ದನೆಂದು ನಾವು ಹಿಂದೆಯೇ ಹೇಳಿದ್ದೇವೆ. ಆದರೆ ಸರ್ವಜ್ಞನು ಪುಲಿಗೆರೆಯ ಸೋಮೇಶ್ವರ ಕವಿಯ.

ವೃ॥ ಕೆಲವಂ ಬಲ್ಲವರಿಂದ ಕಲ್ತುಕೆಲವಂ ಶಾಸ್ತ್ರಂಗಳಿಂ ಕೇಳುತಂ।
ಕೆಲವಂ ಮಾಳ್ಪವರಿಂದ ಕಂಡುಕೆಲವಂ ಸುಜ್ಞಾನದಿಂ ನೋಡುತಂ।
ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞನಪ್ಪಂನರಂ।
ಪಲವುಂ ಪಳ್ಳಸಮುದ್ರಮೈಹರಹರಾ ಶ್ರೀಚೆನ್ನಸೋಮೇಶ್ವರಾ॥

ಎಂಬ ವೃತ್ತವನ್ನು ಸದಾ ತನ್ನ ಲಕ್ಷ್ಯದಲ್ಲಿಟ್ಟಿದ್ದು ಅದರಂತೆ ಆಚ ರಿಸಿ ಸರ್ವರೊಳಗೊಂದೊಂದು ನುಡಿ ಕಲ್ತು ವಿದ್ಯದ ಪರ್ವತವೆ ಆಗಿ ಕಡೆಗೆ ಸರ್ವಜ್ಞನಾದನೆಂದು ತೋರುತ್ತದೆ.

## ಕವಿಯ ಕವನಶಕ್ತಿ.

"ನಾಋಷಿಃ ಕುರುತೇ ಕಾವ್ಯಂ" ಎಂಬ ಪ್ರಾಚೀನ ವಾಕ್ಯದಂತೆ ಋಷಿಯ ಅಂಶವಿಲ್ಲದವನು ಕವಿಯಾಗಲಾರನು. ಕವಿತಾಶಕ್ತಿಯು ಸಂಸ್ಕಾ ರಜನ್ಯವಾದುದೆಂದೂ ಕಲಿತರೆ ಬರುವುದಿಲ್ಲವೆಂದೂ ಪ್ರಾಚೀನರ ಮತ. ಈ ಅರ್ಥದಲ್ಲಿ ಷಡಕ್ಷರ ಕವಿಯ

ಕಂದ॥ ಕಲಿಸಿದೊಡೇಂಬರ್ಕುಮೆಸ।
ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ।
ವಿಲಸಿತ ರತಿರಸ ರಸಿಕತೆ।
ತಲೆದೋರ್ಪುದು ತಾನೆ ಕಲಿಸಲೇಂಬಂದಪುದೇ॥

ಎಂಬೀ ಪದ್ಯವು ನಮ್ಮ ಅಭಿಪ್ರಾಯವನ್ನು ಸಮರ್ಥಿಸಲಿಕ್ಕೆ ಸಹಾಯಕವಾಗಿದೆ. ಇದೇ ಕವಿಯು ಹೇಳುವಂತೆ "ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇಳ್ಗೆಯಿಂ ಮಹಿಯೊಳೆ ಸತ್ಕವಿತ್ವದಿ ಪಿಷನ್ಮಣಿ ಸಾರ್ಗರ್ಮಂ" ಎಂಬ ಮಾತಿನಿಂದ ಪೂರ್ವಜನ್ಮದ ಪುಣ್ಯಪ್ರಭಾವದಿಂದ ಕವಿತಾಶಕ್ತಿಯು ಪ್ರಾಪ್ತವಾಗುತ್ತದೆ. ಈ ಶಕ್ತಿಯು ದೇಶಾಟನ, ಪಂಡಿತ ಭಾಷಣ, ಕಾವ್ಯಾವಲೋಕನಗಳಿಂದ ವಿಕಾಸವಾಗುತ್ತದೆ. ಸರ್ವಜ್ಞನಿಗೆ ಈ ಬಗೆಯ ಎಲ್ಲ ಯೋಗ್ಯತೆಯೂ ಇದ್ದುದರಿಂದ ಅವನ ಕವಿತೆಯು ಪ್ರಾಸಾದಿಕವಾಗಿದೆ.

ಸರ್ವಜ್ಞನು ಆಶುಕವಿ (ಅಂದರೆ ನೆನೆಸಿಕೊಂಡ ಕೂಡಲೇ ಒಂದು ವಿಚಾರದ ಮೇಲೆ ಕವನವನ್ನು ಹೇಳುವ ಶಕ್ತಿಯುಳ್ಳವನೆಂದು ತಾತ್ಪರ್ಯ) ಆದ್ದರಿಂದಲೇ ಅವನ ವಚನಗಳೆಲ್ಲಾ ಒಂದೇ ಕಾಲದಲ್ಲಿ ಒಂದೆಡೆಯಲ್ಲಿ ಕೂತು ಬರೆದವುಗಳಲ್ಲ. ದೇಶಾಟನದಲ್ಲಿ ಪ್ರಸಂಗ ಬಂದಾಗ ಹಾಡಿದವು. ಈ ತತ್ವವನ್ನು ತಿಳಿದೇ ನಾವು ಅವನ ಕಾವ್ಯವನ್ನು ಅವಲೋಕಿಸಬೇಕಾಗಿದೆ.

ಕವಿಗಳಲ್ಲಿ "ವಿಶ್ವವಾಕ್ಕು" ಗಳೆಂದೂ "ವಾಗ್ವಶ್ಯ" ರೆಂದೂ ಎರಡು ಭಾಗವುಂಟೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮಾತುಗಳಿಗೆ ಅಧೀನನಾಗಿರತಕ್ಕವನು "ವಾಗ್ವಶ್ಯ" ನೆಂದು ಹೇಳುತ್ತಾರೆ. ಇಂಥವನೇ ಕುಕವಿ. ಪಾಮರಕವಿ ಎಂಬುವನು. ಯಾವನಿಗೆ ಶಬ್ದಾರ್ಥಗಳು ವಿಧೇಯವಾಗಿರುತ್ತವೋ ಯಾವನ ಮೇಲೆ ಸರಸ್ವತಿಯು ಸಂಪೂರ್ಣವಾದ ಅನುಗ್ರಹವಿದೆಯೋ ಅವನು "ವಶ್ಯವಾಕ್ಕು" ಎನಿಸಿಕೊಳ್ಳುತ್ತಾನೆ. ಇವನೇ ಮಹಾಕವಿ ಪಂಡಿತಕವಿ ಎಂದೆನಿಸಿಕೊಳ್ಳುತ್ತಾನೆ. ಇಂಥವನಿಗೆ ಆಶುಕವಿತ್ವಶಕ್ತಿಯಿದ್ದರಂತೂ ಸುವರ್ಣಕ್ಕೆ ಸೌರಭವು ಸೇರಿದಂತೆಯೇ ಸರಿ. ಸರ್ವಜ್ಞನು ಆಶುಕವಿಯೂ ವಶ್ಯವಾಕ್ಕಾದ ಮಹಾಕವಿಯೂ ಆಗಿದ್ದಾನೆ.

ಸರ್ವಜ್ಞನು ತನಗೆ ಲಭಿಸಿದ ಅಮೌಲ್ಯವಾದ ಕವಿತಾಶಕ್ತಿಯನ್ನು ಯಾವನಾದರೊಬ್ಬ ರಾಜನ ಆಸ್ಥಾನಕ್ಕೆ ಹೋಗಿ ಧನಿಕನ ಮನೆಗೆ ಹೋಗಿ ಅವರನ್ನು ಸ್ತುತಿಗೆಯ್ಯುವುದರಲ್ಲಿ ತನ್ನ ಸತ್ವವನ್ನೂ ಜೀವಿತವನ್ನೂ ಕಳೆದುಕೊಳ್ಳದೆ ಹರಿಹರನು ಪಂಪಾಶತಕದಲ್ಲಿ ಹೇಳಿದಂತೆ "ಮನುಜನ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ತನತನಗಾದಚಂದ್ರ ರವಿಕರ್ಣ ದಧೀಚಿಗಳೆಂದು" ಹೊಗಳಿ ತನ್ನ ಅಮೌಲ್ಯ

ವಾದ ಶಕ್ತಿಯನ್ನು ಕಳೆದುಕೊಳ್ಳದೆ ಜನತಾ ಜನಾರ್ದನನ ಸೇವೆಗಾಗಿ ತನ್ನ ಶಕ್ತಿಯನ್ನೆಲ್ಲಾ ಎರೆದು ದೇಶಸೇವೆಮಾಡಿ ತನ್ನ ವಚನಗಳನ್ನು ಸಾರ್ಥಕಪಡಿಸಿದ್ದಾನೆ. ಆದುದರಿಂದ ಸರ್ವಜ್ಞಮೂರ್ತಿಯನ್ನು ನಾವು ರಾಜಾಸ್ಥಾನದಲ್ಲಿ ತುಳಿದು "ಇಂದುವದನೆ ಕುಂದರದನೆ" ಎಂದು ಬರೆದ ಕವಿಗಿಂತಲೂ ಶ್ರೇಷ್ಠನೆಂದೂ ಉಪಯುಕ್ತನೆಂದೂ ಕರೆಯುತ್ತೇವೆ. ಈ ಪ್ರಕಾರ ಸರ್ವಜ್ಞನು ತನಗೆ ಭಗವಂತನು ಅನುಗ್ರಹಿಸಿದ ಕವಿತಾ ಶಕ್ತಿಯನ್ನು ಲೋಕಸೇವೆಗೂ ಭಾಷಾಸೇವೆಗೂ ಒಪ್ಪಿಸಿ ಕೃತಾರ್ಥನಾಗಿದ್ದಾನೆ.

## ಕವಿಯ ರೂಪ.

ಸರ್ವಜ್ಞ ವಚನಗಳು ಪ್ರಥಮ ಮುದ್ರಣ ಪೀಠಿಕೆಯಲ್ಲಿ ಶ್ರೀ ಉತ್ತಂಗಿಯವರು ಸರ್ವಜ್ಞನ ರೂಪವನ್ನು ಕುರಿತು ಬರೆದಿದ್ದಾರೆ. ಈಗ ನಮಗೆ ಸರ್ವಜ್ಞನ ಭಾವಚಿತ್ರ ಸಿಕ್ಕಿಲ್ಲ. ಸಿಗುವ ಸಂಭವವೂ ಕಾಣಲಿಲ್ಲ. ಉತ್ತಂಗಿಯವರು ಪ್ರಥಮ ಮುದ್ರಣದಲ್ಲಿ ಕೊಟ್ಟಿರುವ ಚಿತ್ರವು ಊಹೆ ಹೊರತು ಅವನ ರೂಪವನ್ನು ತಿಳಿಯುವುದಕ್ಕೆ ಬೇರೆ ಮಾರ್ಗವಿಲ್ಲ. ಬಹುಮಟ್ಟಿಗೆ ಕವಿಯು ಹಾಗೆಯೇ ಇದ್ದಿರಬಹುದೆಂದು ತೋರುತ್ತದೆ.

ಸರ್ವಜ್ಞನು ಆರಾಧ್ಯನಾದ ಬಸವರಸ ದ್ರಾವಿಡಳಾದ ಕುಂಬಾರ ಮಾಳಿ ಇವರ ಸಂಸರ್ಗದಿಂದ ಹುಟ್ಟಿದವನಾದ್ದರಿಂದ ಅವನು ಆರ್ಯ ದ್ರಾವಿಡ ಸಂಮಿಶ್ರರೂಪವುಳ್ಳವನಾಗಿದ್ದಾನೆಂದು ತೋರುತ್ತದೆ. ಅವನ ವಚನಗಳಲ್ಲಿಯೂ, ಆರ್ಯ ದ್ರಾವಿಡ ಸಂಸ್ಕೃತಿಯ ಮಿಶ್ರಭಾವವಿದೆಯೆಂಬುದನ್ನು ನಾವು ಪರೀಕ್ಷಿಸಬಹುದು. ಮಿಕ್ಕ ವಿಚಾರವನ್ನು ಊಹಿಸಲಿಕ್ಕೆ ನಾವು ಅಸಮರ್ಥರಾಗಿರುವೆವು. ಇವನು ಕಾಲಿಗೆ ಹಾವಿಗೆಯನ್ನೇ ಹಾಕುತ್ತಿರಬೇಕು. ಏಕೆಂದರೆ ಇವನು ಕೇವಲ ಅಹಿಂಸಾವಾದಿ. ಹೆಗಲ ಮೇಲೆ ತುಂಡುಗಂಬಳಿಯೂ ಗುಡಾರದ ಮಾಡೆಯೂ ಇವನ ಹೆಗ್ಗುರುತೆಂದು ತೋರುತ್ತದೆ.

## ಉತ್ತಂಗಿಯವರ ಸಾಹಸ.

ಕನ್ನಡ ಭಾಷಾಸೇವೆಮಾಡಿದವರನ್ನು ಜೈನರು, ವೀರಶೈವರು, ಬ್ರಾಹ್ಮಣರು ಎಂದು ಮುಖ್ಯವಾಗಿ ವಿಂಗಡಿಸುವ ಪದ್ಧತಿಯುಂಟು. ಇನ್ನು ಮೇಲೆ ಈ ಪಟ್ಟಿಯಲ್ಲಿ ಕ್ರೈಸ್ತರನ್ನೂ ಸೇರಿಸಬೇಕಾಗಿದೆ.

ಗೌರವೀಯರಾದ ರೈಸ್, ಮತ್ತು ಕಿಟಲ್ ಸಾಹೇಬರುಗಳು ಕನ್ನಡಸಾಹಿತ್ಯಕ್ಕೆ ಮಾಡಿದ ಸೇವೆಯು ಸಾಮಾನ್ಯವಾದುದಲ್ಲ. ಅವರ ಮತಕ್ಕೆ ಸೇರಿದವರೂ ನಮ್ಮ ದೇಶೀಯರೂ ಆದ ಶ್ರೀ ಉತ್ತಂಗಿ ಚನ್ನಪ್ಪನವರ ಕನ್ನಡ ಭಾಷಾಸೇವೆಯೂ ಅಸದೃಶವಾಗಿದೆ. ಇವರು ಹಿಂದೂ ಸಮಾಜದ ಹಿತಚಿಂತಕ ಬಸವೇಶ್ವರನೂ ಅಸ್ಪೃಶ್ಯತಾನಿವಾರಣೆಯೂ, ಅನುಭವಮಂಟಪ, ನಾರಾಯಣ ವಾಮನತಿಲಕರ ಚರಿತ್ರೆ ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಸರ್ವಜ್ಞ ವಚನಗಳನ್ನು ಸರ್ವೋತ್ತಮವಾಗಿ ಈಗ ಹತ್ತು ವರ್ಷಗಳ ಮೊದಲು ಪ್ರಕಟಿಸಿ ಕನ್ನಡ ಭಾಷೆಗೇ ಮಹೋಪಕಾರ ಮಾಡಿದ್ದಾರೆ. ಬಸವೇಶ್ವರ ಮಹಾದೇವಿಯಕ್ಕ ಇವರ ವಚನಗಳನ್ನೂ ಸರ್ವಜ್ಞನ ವಚನಗಳನ್ನೂ ಇಂಗ್ಲಿಷ್ ಭಾಷೆಯಲ್ಲಿ ತರ್ಜುಮೆ ಮಾಡಿ ಈ ಕನ್ನಡ ಕವಿಗಳ ಕೀರ್ತಿಯನ್ನು ಲೋಕದಲ್ಲಿ ಹರಡಲು ಪ್ರಯತ್ನಿಸಿದ್ದಾರೆ. ಈಗಾಗಲೇ ಸರ್ವಜ್ಞ ವಚನಗಳನ್ನು (ಇನ್ನೂ ಹೊಸದಾಗಿ ಕೆಲವು ತ್ರಿಪದಿಗಳನ್ನು ಸಂಗ್ರಹಿಸಿ) ದ್ವಿತೀಯ ಮುದ್ರಣ ಮಾಡಿಸಿ ಕನ್ನಡಿಗರ ಕೈಗೆ ಕೊಡುವವರಾಗಿದ್ದಾರೆ. ಇವರು ಉಪಾಧ್ಯಾಯರಾಗಿಯೂ ಬೋಧಕರಾಗಿಯೂ ಕನ್ನಡನಾಡಿನ ಸೇವೆ ಮಾಡಿದ್ದಾರೆ. ಈ ಪ್ರಕಾರ ಉತ್ತಂಗಿಯವರ ಭಾಷಾಸೇವೆಯೂ ಸಾಹಸವೂ ಸ್ತೋತ್ರಾರ್ಹವಾಗಿವೆ.

## ಈ ಕವಿಯ ಬಗ್ಗೆ ಕನ್ನಡಿಗರ ಕರ್ತವ್ಯ.

ಸರ್ವಜ್ಞಮೂರ್ತಿಯ ವಿಚಾರವಾಗಿ ಕನ್ನಡಿಗರು ಇನ್ನೂ ತೋರಿಸಬೇಕಾದ ಶ್ರದ್ಧೆಯನ್ನು ತೋರಿಸಿಲ್ಲವೆಂದೇ ಹೇಳಬೇಕಾಗಿದೆ. ಅಥಣಿಯ ಆತ್ಮೋದ್ಧಾರ ಗ್ರಂಥಮಾಲೆಯವರು 'ಸರ್ವಜ್ಞಸಂದೇಶ' ವನ್ನು ಪ್ರಕಟಿಸಿದುದೂ ಕೆಲವು ದಿನಗಳ ಹಿಂದೆ ತಿಪಟೂರು ಕರ್ಣಾಟಕ ಸಂಘದವರು 'ಸರ್ವಜ್ಞಜಯಂತಿ' ಯನ್ನು ಆಚರಿಸಿದುದೂ ಕೊಂಚ ಸಮಾಧಾನಕರವಾಗಿದೆ.

ಕವಿರನ್ನಪ್ರಶಸ್ತ, ಕವಿಲಕ್ಷ್ಮೀಶ, ಮುದ್ದಣಸಂಚಿಕೆ, ಗಳಂತೆ 'ಸರ್ವಜ್ಞ ಕೈಪಿಡಿ' ಯೊಂದು ಆವಶ್ಯವಾಗಿದೆ. ಎಲ್ಲೆಲ್ಲಿಯೂ ಸರ್ವಜ್ಞನ ಪುಣ್ಯದಿನಾಚರಣೆಯಾಗಬೇಕಾಗಿದೆ. ಅವನ ದಿವ್ಯ ಸಂದೇಶವು ಜನಪದದ ನಾಡಿನಾಡಿಯಲ್ಲಿ ಪ್ರವಹಿಸಬೇಕಾಗಿದೆ. ಸರ್ವಜ್ಞನ ವಚನಗಳನ್ನು ಇತರ ಭಾಷೆಗಳಲ್ಲಿಯೂ ಭಾಷಾಂತರಿಸಿ ಪ್ರಚುರಪಡಿಸಬೇಕಾಗಿದೆ. ಸರ್ವಜ್ಞನಿ

ಗಾಗಿ ತಮ್ಮ ಜೀವಿತವನ್ನು ಧಾರೆಯೆರೆದ ಶ್ರೀ ಉತ್ತಂಗಿಯವರನ್ನು ಎಲ್ಲರೂ ಅಭಿನಂದಿಸಬೇಕಾಗಿದೆ. ಅಲ್ಲಿನ ವರೆಗೆ ಕನ್ನಡಿಗರ ಕರ್ತವ್ಯ ಮುಗಿದಂತಾಗಲಿಲ್ಲ.

---

## ಜರ್ಮನಿಯಲ್ಲಿ ಆರ್ಯಧರ್ಮ.

ರಶಿಯ ದೇಶವು ತನ್ನ ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡಲು ಅತ್ಯನ್ನತವಾಗಿ ಸಾಹಸಪಡುತ್ತಲಿರುವದು ಕಂಡು ಬರುತ್ತಿದೆ. ಆದರೆ ಅದು ತನ್ನ ಈ ಕಾರ್ಯವನ್ನು ಸಾಧಿಸುವಲ್ಲಿ ಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಬಿಟ್ಟಿದೆ. ಇಷ್ಟೇ ಅಲ್ಲ, ಧರ್ಮವು ಸಮಾಜದ ಬೆಳವಣಿಗೆಗೆ ಬಾಧಕವೆಂದು ಎಣಿಸಿ ಪ್ರಾರ್ಥನಾಲಯಗಳಿಗೆ ಯಾರೂ ಹೋಗಕೂಡದೆಂದು ನಿರ್ಬಂಧಿಸಿದೆ. ಮತ್ತು ಧರ್ಮ ಬೋಧಕರು ಧರ್ಮಬೋಧೆಯ ಕಾರ್ಯಗಳನ್ನು ಮಾಡಕೂಡದೆಂತಲೂ ಅಪ್ಪಣೆಯನ್ನಿತ್ತಿದೆ. ಹೀಗೆ ಅದು ಧರ್ಮವನ್ನು ತ್ಯಜಿಸಿ ಕೇವಲ ಆರ್ಥಿಕ ಉನ್ನತಿಯ ಕಡೆಗೆ ಲಕ್ಷ್ಯವನ್ನಿಟ್ಟುಕೊಂಡು ಸಮಾಜ ಸುಧಾರಣಾ ಕಾರ್ಯಗಳಲ್ಲಿ ತೊಡಗಿರುತ್ತದೆ. ಆದರೆ ಇದರ ಪರಿಣಾಮವು ಅಂತ್ಯದಲ್ಲಿ ಏನಾಗುವದೆಂಬವರ ಕಡೆಗೆ ಎಲ್ಲರ ಲಕ್ಷವು ಈಗ ಹತ್ತಿರುತ್ತದೆ.

ಆದರೆ ರಶಿಯಾ ದೇಶಕ್ಕೆ ಮಗ್ಗುಲಾಗಿದ್ದ ಜರ್ಮನೀ ದೇಶದಲ್ಲಿ ಬೇರೊಂದು ಬಗೆಯಾಗಿ ಸಮಾಜ ಸುಧಾರಣಾ ಕ್ರಾಂತಿಯನ್ನು ಮಾಡುವ ಪ್ರಯತ್ನಗಳು ಸಾಗಿರುತ್ತವೆ. ಜರ್ಮನಿಯು ನಿಜವಾಗಿ ಈಗಿನ ಶಾಸ್ತ್ರೀಯ ಯುಗದಲ್ಲಿ ಅತ್ಯಂತ ಮೇಲ್ತರದ ಸ್ಥಾನವನ್ನು ಪಡೆದುಕೊಂಡಿದೆ. ಅದು ಈಗ ಹಿಟ್ಲರನ ಸಂಪೂರ್ಣ ಅಧಿಕಾರಕ್ಕೆ ಒಳಪಟ್ಟದ್ದಾಗಿರುತ್ತದೆ. ಅವನು ಈಗ ಅಲ್ಲಿ ಸಂಪೂರ್ಣ ಸಾರ್ವಭೌಮ ರಾಜನಾಗಿರುವನೆಂತಲೇ ಹೇಳಬಹುದು. ಆದರೆ ಅವನ ನೇತೃತ್ವದಲ್ಲಿ ಬೇರೊಂದು ಬಗೆಯ ಸಂಸ್ಕರಣ ಕಾರ್ಯಗಳು ನಡೆದಿವೆ. ಈ ಕಾರ್ಯಗಳಿಗೆ ಆರ್ಯ ಧರ್ಮದ ತತ್ವಗಳೇ ತಳಹದಿಯಾಗಿರುತ್ತವೆ. ಆರ್ಯ ಧರ್ಮವನ್ನು ಪುನರುಜ್ಜೀವನಗೊಳಿಸಬೇಕೆಂದು ಹಿಟ್ಲರನ ಧ್ಯೇಯವಾಗಿದೆ. ಜರ್ಮನರು ರಶಿಯನರಂತೆ ಧರ್ಮವನ್ನು ತಮ್ಮ ಸುಧಾರಣಾ ಕಾರ್ಯಗಳಲ್ಲಿ ಬಿಟ್ಟಿರುವದಿಲ್ಲ. ಹೋದ ಈಸ್ಟರ ಹಬ್ಬದಲ್ಲಿ ಪುರಾತನ ಕಾಲದ ಆರ್ಯರು ಆಚರಿಸು

ತ್ತಿದ್ದ ಸೂರ್ಯೋಪಾಸನೆಯನ್ನು ಕೈಕೊಂಡರು. ಈ ದೇವತೆಗೆ ಸಿಗ್ ಫ್ರಿಡ್ ಎಂಬ ಹೆಸರು ಇದೆ. ರಾಕ್ಷಸ ಸಂಹಾರಕನೆಂದು ಈ ದೇವತೆಯ ಬಗ್ಗೆ ಅವರಲ್ಲಿ ದಂತಕಥೆಗಳು ಇವೆ. ಅವನ ಕಥೆಯು ವಿಷ್ಣುವು ವಾಮನ ಮೂರ್ತಿಯಾಗಿ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದು ಅಲ್ಲಿ ಬಂಧಿಸಿಟ್ಟ ವೃತ್ತಾಂತವನ್ನು ಹೋಲುತ್ತದೆ.

ಈಗ ಜರ್ಮನ್ನ ಭಾಷೆಯಲ್ಲಿ ಆರ್ಯರ ಪುರಾತನ ಧಾರ್ಮಿಕ ಶಬ್ದಗಳು ರೂಢವಾಗತೊಡಗಿವೆ. ಹಿಟಲರನು ಇನ್ನುಮೇಲೆ ಜರ್ಮನ್ನ ಜನರು ಶುದ್ಧ ಆರ್ಯವಂಶೀಯರಕೂಡ ತಮ್ಮ ಶರೀರ ಸಂಬಂಧಗಳನ್ನು ಬೆಳಿಸಬೇಕೆಂದು ಕಡುತರವಾದ ಕಾಯದೆಗಳನ್ನು ಕಲ್ಪಿಸಿರುವನು. ಈ ಹೊಸಬಗೆಯ ಧಾರ್ಮಿಕ ತತ್ವಗಳ ಜ್ಞಾನವನ್ನು ಜರ್ಮನ್ನ ತರುಣರಿಗೆ ಮಾಡಿಕೊಡುವ ಏರ್ಪಾಡುಗಳು ಉಂಟಾಗಹತ್ತಿವೆ. ಜರ್ಮನರಲ್ಲಿ ದೀಕ್ಷಾ ವಿಧಿಯಂಥ ದೀಕ್ಷೆಯೊಂದಿದೆ. ಇದಕ್ಕೆ ಜ್ಯುಗೇಂಡ್ ವೈ (*Jugend wei he*) ಎಂಬ ಹೆಸರು. ಜರ್ಮನ್ನ ತರುಣರನ್ನು ಪುರಾತನ ಕಾಲದ ಕೋಟೆಗಳಲ್ಲಿ ಬರಮಾಡಿಕೊಂಡು ಈ ವಿಧಿಯನ್ನು ಅಲ್ಲಿ ಅವರಿಗೆ ನೆರವೇರಿಸುವರು. ಸ್ವಸ್ತಿಕ ಚಿನ್ಹವುಳ್ಳ ನಿಶಾನಿಯು ಈಗ ಜರ್ಮನ್ನ ರಾಜ್ಯದಲ್ಲಿ ಹಾರಾಡುತ್ತಲಿದೆ. ಇದು ಅವರಲ್ಲಿ ಐಹಿಕಸುಖಸಾಧನೆಯ ಚಿನ್ಹವಾಗಿದೆ. ಇದರೊಡನೆ ಧಾರ್ಮಿಕ ಉನ್ನತಿಯ ದ್ಯೋತಕವಾದ ಬೇರೊಂದು ನಿಶಾನಿಯನ್ನು ಸಹ ಕಲ್ಪಿಸಿ ಅದನ್ನು ಹಾರಾಡಿಸುತ್ತಲಿರುವರು. ಇದರಲ್ಲಿ ಆಕಾಶವರ್ಣದ ಬಟ್ಟೆಯ ಮೇಲೆ ಸುವರ್ಣ ಬಣ್ಣದಿಂದ ಸೂರ್ಯನ ಚಿನ್ಹವನ್ನು ಬರೆದಿರುವರು. ಈ ಎರಡೂ ನಿಶಾನಿಗಳನ್ನು ಮುಂದಿಟ್ಟುಕೊಂಡು ತರುಣರ ಮೆರವಣಿಗೆಗಳು ದೇಶದಲ್ಲೆಲ್ಲ ಕಾಲಕಾಲಕ್ಕೆ ಹೊಡುತ್ತಲಿವೆ.

ಜರ್ಮನಿಯ ಪ್ರಸಿದ್ಧ ನದಿಯಾದ ರ್‍ಹಾಯಿನ ನದಿಯ ಕೆಳಭಾಗದ ಕಂದರ ಪ್ರದೇಶಗಳಲ್ಲಿ ಅರಣ್ಯ ಭೂಮಿಗಳು ಪಸರಿಸಿರುತ್ತವೆ. ಈ ಭೂಭಾಗವು ಪ್ರಥ್ವೀ ತಾಯಿ ಎಂಬ ದೇವತೆಗೆ ಅರ್ಪಿಸಲ್ಪಟ್ಟದ್ದಾಗಿದೆ. ಈ ದೇವತೆಗೆ ಫೊಲ್ಡ (*Folde*) ಎಂಬ ಹೆಸರು. ಈ ದೇವತೆಯ ಹೆಸರಿನಿಂದ ಪೂಜಾವಿಧಾನಗಳು ಇಲ್ಲಿ ಒಂದು ಸಾವಿರ ವರ್ಷದ ಹಿಂದೆ ನಡಿಯುತ್ತಿದ್ದವಂತೆ. ಆದರೆ ಈಗ ಆ ವಿಧಾನಗಳು ಹಿಟಲರನ ಹೊಸ ಅಪ್ಪಣೆಯ ಮೇರೆಗೆ ಪುನಃ ಪ್ರಾರಂಭವಾಗಿವೆ.

ಈ ಪ್ರಕಾರ ಜರ್ಮನರ ಒಂದು ನಿಶಾನೆಯು ಕೆಂಪುವರ್ಣವುಳ್ಳದಾಗಿದ್ದು ಅದು ಜನಾಂಗದ ಐಹಿಕ ಉನ್ನತಿಯ ದ್ಯೋತಕವಾಗಿಯೂ, ಇನ್ನೊಂದು ನೀಲಿವರ್ಣದ ನಿಶಾನೆಯು ಜರ್ಮನರ ಆತ್ಮವಿಕಾಸದ ಗುರುತಾಗಿಯೂ ಜರ್ಮನ್ ಸಂಸ್ಕೃತಿಯ ಹೊಸ ಪ್ರವಾಹವು ಅಲ್ಲಿ ಈಗ ಹರಿಯತೊಡಗಿದೆ.

ಜರ್ಮನ್ನ ಪ್ರತಿಯೊಬ್ಬ ತರುಣನು ಜರ್ಮನಿಯು ತನ್ನ ತಂದೆಯ ದೇಶವೆಂದು ತಿಳಿದು ಆದರ ಉನ್ನತಿಗಾಗಿ ತನ್ನ ಸರ್ವಸ್ವವನ್ನೆಲ್ಲ ಅರ್ಪಿಸುವೆನೆಂದು ಅವನಿಂದ ಒಂದು ಪ್ರತಿಜ್ಞೆಯು ಸಾರ್ವಜನಿಕವಾಗಿ ತಗೆದುಕೊಳ್ಳುವ ರೂಢಿಯು ಉಂಟಾಗಿದೆ. ಈ ವಿಧಾನವು ಆಗಿಂದಾಗ್ಗೆ ಅಲ್ಲಿ ಆಗುವ ಉತ್ಸವಾದಿಗಳಲ್ಲಿ ಜರಗಹತ್ತಿದೆ.

ತರುಣರ ಕೂಟಗಳು ಏರ್ಪಡಿಸಲ್ಪಟ್ಟು ದೇಶದಲ್ಲಿ ಕಂಗೊಳಿಸುವ ಅರಣ್ಯಭೂಮಿಗಳಲ್ಲಿ ಸಂಚರಿಸುತ್ತ ಹೋಗುವ ಒಲವು ಈಗ ಹೆಚ್ಚಾಗಹತ್ತಿದೆ. ಇಂಥ ತರುಣರ ಸಂಘಗಳು ಅಲ್ಲಿ ಬಹು ಸಂಖ್ಯಾಕವಾಗಿ ಉತ್ಪನ್ನವಾಗುವದರಲ್ಲಿ ಇವೆ. ಈ ಸಂಘಗಳಲ್ಲಿ ಸೇರಿದವರು ಕಾಲ್ನಡಿಗೆಯಿಂದ ನಡೆಯುತ್ತ ಹಳ್ಳಿಗಾಡದ ಜನರಲ್ಲಿ ಬೆರೆಯುತ್ತ ತಮ್ಮ ವಿಚಾರಗಳನ್ನು ದೇಶದಲ್ಲಿ ಪಸರಿಸುತ್ತ ತಿರುಗುವುದುಂಟು. ಈ ಸಂಚಾರಕ ತರುಣರ ತಂಡಗಳು ರಾತ್ರಿಯಲ್ಲಿ ತಂಗುವದಕ್ಕೆ ಅನುಕೂಲವಾಗಬೇಕೆಂದು ಅಲ್ಲಲ್ಲಿ ತರುಣ ನಿಲಯುಗಳು ಸ್ಥಾಪಿಸಲ್ಪಟ್ಟವೆ. ಈ ತಂಡಗಳು ರಾತ್ರಿಯನ್ನು ಅಲ್ಲಿ ಕಳೆದು ಮರುದಿನ ಮುಂದಿನ ನಿಲಯಕ್ಕೆ ತೆರಳುವವು.

ವಿಚಾರ ಮಾಡಿ ನೋಡಿದಲ್ಲಿ ಐಹಿಕವನ್ನು ಬಿಟ್ಟು ಪಾರಮಾರ್ಥವಿಲ್ಲ, ಪಾರಮಾರ್ಥವನ್ನು ಬಿಟ್ಟು ಐಹಿಕವಿಲ್ಲ. ಅವು ಪರಸ್ಪರಾವಲಂಬಿಗಳಾಗಿವೆ. ಈ ತತ್ವವನ್ನು ಗುರಿಯಾಗಿಟ್ಟುಕೊಂಡು ವೀರಶೈವ ಧರ್ಮತತ್ವಗಳು ಕಲ್ಪಿಸಲ್ಪಟ್ಟವೆ. ಷಟ್‌ಸ್ಥಲ ಶಾಸ್ತ್ರದ ಪ್ರತಿಯೊಂದು ವಿಷಯದಲ್ಲಿ ಇವು ಎರಡೂ ಮಾರ್ಗಗಳು ಪರಸ್ಪರ ಹೆಣೆದುಹೋಗಿವೆ. ಸಮಾಜ ಸುಧಾರಣೆಯ ಕಾರ್ಯಗಳಲ್ಲಿ ಈ ರೀತಿಯು ಇರದೇ ಹೋದಲ್ಲಿ ಅದರ ಗತಿಯು ಕುಂಠಿತವಾಗದೆ ಇರದು.

# ಪಾಶ್ಚಾತ್ಯರ ತತ್ವಶಾಸ್ತ್ರ.

ಲೇಖಕ— ವೀರಪ್ಪ ಯಂಗಟಿ, ಬಿ. ಎ. ಎಲ್. ಎಲ್. ಬಿ. ಹಾವೇರಿ.

(ಮುಂದೆ ಸಾಗಿದ್ದು)

ಅರಿಸ್ಟಾಟಲ— ಕ್ರಿ. ಪೂ. ೩೮೪ ರಿಂದ ೩೨೨ ರ ವರೆಗೆ. ಇವನು ಥ್ರೇಸ ದೇಶದಲ್ಲಿ ಸ್ಟ್ಯಾಗೀರಾ ಎಂಬಲ್ಲಿ ಹುಟ್ಟಿದನು. ಇವನ ತಂದೆಯು ಮೆಸೆಡೋನಿಯಾ ರಾಜ್ಯದ ಅರಸನಾದ ಅಮಿಂಟಾಸನ ವೈದ್ಯನಾಗಿದ್ದನು. ಅರಿಷ್ಟಾಟಲನಿಗೆ ಚಿಕ್ಕಂದಿನಿಂದ ವೈದ್ಯ ವಿದ್ಯೆಯಲ್ಲಿ ಶಿಕ್ಷಣವು ದೊರೆಯಿತು. ಇದರಿಂದ ಮುಂದೆ ಅವನಿಗೆ ಪ್ರತಿಯೊಂದು ಶಾಸ್ತ್ರದ ಪ್ರತಿಪಾದನೆಯಲ್ಲಿ ತಪ್ಪಿಲ್ಲದಂತೆಯೂ, ನಿಶ್ಚಿತವಾಗಿಯೂ, ನೈಜಸ್ಥಿತಿಗನುಗುಣವಾಗಿಯೂ ನಿರ್ಣಯಗಳನ್ನು ತೆಗೆಯಲು ಸಹಾಯವುಂಟಾಯಿತು. ಚಿಕ್ಕಂದಿನಲ್ಲಿಯೇ ತಾಯಿ-ತಂದೆಗಳು ಮೃತವಾದ್ದರಿಂದ ಇವನು ಪ್ರೋಕ್ಸಿನಸ್ ಎಂಬವನಿಂದ ಸಂರಕ್ಷಣೆ ಹೊಂದಿದನು. ಪ್ಲೇಟೋನ ಆಶ್ರಮಕ್ಕೆ ಈತನು ಕ್ರಿ. ಪೂ. ೩೬೭ ರಲ್ಲಿ ಬಂದು ಸೇರಿದನು. ಆಗ ಇವನಿಗೆ ೧೮ ವರ್ಷ ವಯಸ್ಸಾಗಿದ್ದಿತು. ಅಲ್ಲಿ ಇವನು ೨೦ ವರ್ಷಗಳ ವರೆಗೆ ಅಂದರೆ ತನ್ನ ೩೭ ನೇ ವಯಸ್ಸಿನ ವರೆಗೆ ಇದ್ದನು. ಅಲ್ಲಿ ಇವನು ಸಾಧಾರಣ ವಿದ್ಯಾರ್ಥಿಯಾಗಿರದೆ ತೀಕ್ಷ್ಣ ಮೇಧಾವಿಯೆಂದು ಪ್ರಸಿದ್ಧಿಗೆ ಬಂದನು. ಉತ್ತಮ ಬರಹಗಾರನೆಂದು ಪ್ರಖ್ಯಾತಿ ಹೊಂದಿದನು. ಪ್ಲೇಟೋನ ವಿದ್ಯಾಪೀಠದಲ್ಲಿ ನೈತಿಕ ಮತ್ತು ತಾತ್ವಿಕ ಸಿದ್ಧಾಂತಗಳ ಕಡೆಗೆ ಈತನ ಪ್ರವೃತ್ತಿಯು ಬಲಿಯಿತು. ಇದಲ್ಲದೆ ವಿದ್ಯಾಪೀಠದ ಪ್ರವೃತ್ತಿಯನ್ನು ಭೌತಿಕ ಶಾಸ್ತ್ರಗಳ ಕಡೆಗೆ ತಿರುಗಿಸುವಂತೆ ಈತನು ಕಾರಣನಾದನು. ಇವನು ತೀಕ್ಷ್ಣ ಬುದ್ಧಿಯವನಿದ್ದದರಿಂದ ತನ್ನ ಗುರುವಾದ ಪ್ಲೇಟೋನ ಸಿದ್ಧಾಂತಗಳನ್ನು ಸಹ ಖಂಡಿಸುತ್ತಿದ್ದನು.

ಪ್ಲೇಟೋನ ಮರಣದ ತರುವಾಯ ಅವನ ಅಣ್ಣನ ಮಗನಾದ ಸ್ಪೂಸಿಯಸ್ ಎಂಬವನು ವಿದ್ಯಾಪೀಠದ ಅಧಿಪತಿಯಾದನು. ಆಗ ಅರಿಸ್ಟಾಟಲನು ಅಥೆನ್ಸ ಪಟ್ಟಣ ಬಿಟ್ಟು ಹೆರ್ಮಿಯಾಸ ಎಂಬ ಅರಸನ ಆಸ್ಥಾನಕ್ಕೆ ಹೋದನು. ಅಲ್ಲಿ ಅವನು ಆರು ವರ್ಷಗಳ ಕಾಲ ಇದ್ದನು. ಕ್ರಿ. ಪೂ. ೩೪೩ ರಲ್ಲಿ ಫಿಲಿಪ್ ರಾಜನು ತನ್ನ ಮಗನಾದ ಅಲೆಕ್ಝಾಂಡರನಿಗೆ ವಿದ್ಯೆ ಕಲಿಸಲು ಅರಿಸ್ಟಾಟಲನಿಗೆ ಆಮಂತ್ರಣ ಕೊಟ್ಟನು.

ನಾಲ್ಕು ವರ್ಷ ಅಲೆಕ್ಝಾಂಡರನಿಗೆ ವಿದ್ಯೆ ಕಲಿಸಿ ಅವನ ಮೇಲೆ ಅಗಾಧವಾದ ಪರಿಣಾಮವನ್ನುಂಟು ಮಾಡಿದನು. ಅಲೆಕ್ಝಾಂಡರನು ತನ್ನ ಗುರುವಿನ ವಿಷಯದಲ್ಲಿ ಹೇಳುವದೇನಂದರೆ—"ನನ್ನ ಜೀವಿತದ ಸಂಬಂಧವಾಗಿ ನನ್ನ ತಂದೆಗೆ ಋಣಿಯಾಗಿದ್ದೇನೆ. ಉತ್ತಮ ರೀತಿಯಿಂದ ಹೇಗೆ ಜೀವಿಸಬೇಕೆಂಬ ಜ್ಞಾನ ಮಾಡಿಕೊಟ್ಟ ಸಂಬಂಧವಾಗಿ ನಾನು ಅರಿಸ್ಟಾಟಲನಿಗೆ ಋಣಿಯಾಗಿದ್ದೇನೆ." ಅಲೆಗ್ಝಾಂಡರನು ಯಾವಾಗಲೂ ಅರಿಸ್ಟಾಟಲನ ನೀತಿಶಾಸ್ತ್ರ ಗ್ರಂಥವನ್ನು ತನ್ನ ಹತ್ತರ ಇಟ್ಟುಕೊಂಡಿರುತ್ತಿದ್ದನು. ಅಲೆಗ್ಝಾಂಡರನಲ್ಲಿದ್ದ ರಾಜಕಾರಣ ಪಟುತ್ವ, ಆತ್ಮನಿಗ್ರಹ, ಉದಾರತನ, ಶಾಂತಿ, ಸಮಾಧಾನ ಗುಣಗಳು ಅರಿಸ್ಟಾಟಲನ ಬೋಧೆಯಿಂದ ಲಭಿಸಿದ್ದವು. ಅಲೆಗ್ಝಾಂಡರನು ಅರಿಸ್ಟಾಟಲನ ಪ್ರಾಣಿಶಾಸ್ತ್ರ (*Zoology*) ಶೋಧೆಗಾಗಿ ಒಂದು ಸಾವಿರ ಜನರನ್ನು ಏಶಿಯಾ ಮತ್ತು ಗ್ರೀಸ ದೇಶಗಳಲ್ಲಿ ಸಂಚರಿಸುವ ವ್ಯವಸ್ಥೆ ಮಾಡಿ ಅರಿಸ್ಟಾಟಲನ ವಶದಲ್ಲಿರಿಸಿದ್ದಲ್ಲದೆ ಅನೇಕ ದ್ರವ್ಯವನ್ನು ತನ್ನ ಗುರುವಿಗೆ ಕೊಟ್ಟನು.

ಅಲೆಗ್ಝಾಂಡರನು ಏಶಿಯಾಖಂಡದಲ್ಲಿ ದಂಡೆತ್ತಿ ಹೋದನಂತರ ಅರಿಸ್ಟಾಟಲನು ಅಥೆನ್ಸ ಪಟ್ಟಣಕ್ಕೆ ಹೋಗಿ ತನ್ನ ವಿದ್ಯಾಪೀಠವನ್ನು ಕ್ರಿ. ಪೂ. ೩೩೫ ರಲ್ಲಿ ಸ್ಥಾಪಿಸಿದನು. ೧೨ ವರ್ಷಗಳ ವರೆಗೆ ಇವನು ಈ ವಿದ್ಯಾಪೀಠದ (*Lyceum*) ನಿಯಂತ್ರತ್ವವನ್ನು ವಹಿಸಿದ್ದನು. ಪ್ಲೇಟೋನ ವಿದ್ಯಾಪೀಠ (*Academy*) ಕ್ಕಿಂತಲೂ ಇದು ಉತ್ಕೃಷ್ಟವಾದ ಪ್ರಖ್ಯಾತಿಯನ್ನು ಹೊಂದಿತು. ಇವನ ನೇತೃತ್ವದಲ್ಲಿ ಅಸಂಖ್ಯಾತವಾದ ಗ್ರಂಥಗಳು ರಚಿಸಲ್ಪಟ್ಟವು. ಆಮೇಲೆ ಅಥೆನ್ಸ ಜನರು ಅಲೆಗ್ಝಾಂಡರನ ವಿರೋಧವಾಗಿ ದಂಗೆಯೆದ್ದದರಿಂದ ಅರಿಸ್ಟಾಟಲನು ಅಥೆನ್ಸದಲ್ಲಿ ಸುರಕ್ಷಿತವಾಗಿ ಇರದಂತಾದ್ದರಿಂದ ಅವನು ಚಾಲಸಿಸ್ ಪಟ್ಟಣಕ್ಕೆ ಪಲಾಯನ ಮಾಡಬೇಕಾಯಿತು. ಅವನು ಅಲ್ಲಿಯೇ ಮುಂದಿನ ವರ್ಷ ಅಂದರೆ ಕ್ರಿ. ಪೂ. ೩೨೨ ರಲ್ಲಿ ಮರಣಹೊಂದಿದನು. ಅರಿಸ್ಟಾಟಲನ ನಾಲ್ವತ್ತು ಗ್ರಂಥಗಳು ಈಗ ಉಪಲಬ್ಧವಾಗಿವೆ. ಅಲೆಗ್ಝಾಂಡ್ರಿಯಾದ ವಾಚನಾಲಯದಲ್ಲಿಯ ಪುಸ್ತಕ ಪಟ್ಟಿಯು ಇವನ ಉಳಿದ ಒಂದುನೂರಾ ನಾಲ್ವತ್ತಾರು ಗ್ರಂಥಗಳ ಹೆಸರನ್ನು ಹೇಳುವದು. ಈಗ ಅವು ಕಳೆದು ಹೋಗಿವೆ. ಇವನು ಸಾಮಾನ್ಯ ಜನತೆಯ ಸಲುವಾಗಿ ನ್ಯಾಯ,

ನೀತಿ, ರಾಜನೀತಿ, ಜ್ಞಾನ, ವಿದ್ಯಾ, ಪ್ರೇಮ ಮೊದಲಾದ ವಿಷಯುಗಳ ಮೇಲೆ ಪ್ರವಚನಗಳನ್ನು ಬರೆದನು. ಅವುಗಳಲ್ಲಿ ಅವನ ನಿರ್ಮಾಣ ಶಕ್ತಿಯೂ, ಹೊಸ ವಿಚಾರಗಳೂ ತುಂಬಿತುಳುಕುತ್ತವೆ.

ಪ್ಲೇಟೋನು ಪ್ರೋಟ್ಯಾಗೊರಾಸನ ಪ್ರತ್ಯಕ್ಷಜ್ಞಾನದ ಸಿದ್ಧಾಂತವನ್ನು ಖಂಡಿಸಿ ಭಾವನಾಲೋಕಕ್ಕೆ ವಿಶೇಷ ಮಹತ್ವಕೊಟ್ಟನು. ಅರಿಸ್ಟಾಟಲನು ದೃಶ್ಯಜಗತ್ತಿಗೆ ಪ್ರಾಮುಖ್ಯತೆಯನ್ನು ಕೊಟ್ಟನು. ಭಾವನೆಗಳು ಜಗತ್ತಿನಿಂದ ಪ್ರತ್ಯೇಕವಾಗಿರುವದಾದರೆ ಅವುಗಳ ಅಸ್ತಿತ್ವವು ನಮಗೆ ಗೊತ್ತಾಗುವ ಬಗೆ ಹೇಗೆ? ಅಲ್ಲದೆ ಅವುಗಳ ಮೂಲಕ ಜಗತ್ತಿನ ಸೃಷ್ಟಿಯನ್ನು ವಿವರಿಸುವದೆಂತು? ಎಂದು ಪ್ಲೇಟೋನ ಸಿದ್ಧಾಂತವನ್ನು ಖಂಡಿಸಿದನು. ಬಿಳಿಯ ಬಣ್ಣದ ಭಾವನೆಯುಂಟೆಂದು ತಿಳಿದರೂ ಅದು ಬಿಳೀ ವಸ್ತುವನ್ನು ಹೇಗೆ ನಿರ್ಮಾಣಮಾಡಬಲ್ಲದು? ಒಂದುವೇಳೆ ಭಾವನೆಗಳು ಜಗತ್ತಿನ ವಸ್ತುಗಳ ಸೃಷ್ಟಿಕಾರಣವನ್ನು ವಿವರಿಸುತ್ತವೆಂದು ತಿಳಿದರೂ ವಸ್ತುಗಳ ಚಲನೆಯನ್ನು ವಿವರಿಸಲಾರವು. ಯಾಕಂದರೆ ಭಾವನೆಗಳಿಗೆ ಸ್ವಯಂಚಲನೆಯಿಲ್ಲ. ಆದ್ದರಿಂದ ಭಾವನೆಗಳ ಪ್ರತಿಬಿಂಬಗಳಾದ ದೃಶ್ಯವಸ್ತುಗಳು ನಿಶ್ಚಲವಾಗಿರಬೇಕಾಯಿತು. ಪ್ಲೇಟೋನು ಜಗತ್ತಿನಲ್ಲಿಯ ನಾನಾ ಸೃಷ್ಟವಸ್ತುಗಳ ಕಾರಣವನ್ನು ಹೇಳಲಶಕ್ತನಾಗಿದ್ದು ಮತ್ತೊಂದು ಭಾವನಾಲೋಕವನ್ನು ನಿರ್ಮಿಸಿದ್ದಾನೆ. ಅವನ ಭಾವನೆಗಳು ದೃಷ್ಟವಸ್ತುಗಳ ಪ್ರತಿರೂಪಗಳೇ ವಿನಾ ಬೇರೆಯಲ್ಲ. ಇವನ ಭಾವನೆಗಳು ವಸ್ತುಗಳ ಸತ್ವವೆಂದು ತಿಳಿದಾಗ್ಯೂ ಭಾವನೆಗಳನ್ನು ವಸ್ತುಗಳಿಂದ ಪ್ರತ್ಯೇಕವಾಗಿರಿಸಿದ್ದು ಪ್ರಮಾದವಾಗಿದೆ. ಭಾವನೆಯು ಸಮಷ್ಟಿಯಾಗಿದ್ದರೆ ವ್ಯಷ್ಟಿಯುಲ್ಲಿಯೇ ಇರತಕ್ಕದ್ದು.

ಅರಿಸ್ಟಾಟಲನ ಮೂಲಸಿದ್ಧಾಂತಃ— . ಇವನು ಪ್ರತ್ಯಕ್ಷಜ್ಞಾನಕ್ಕೂ ಭಾವನೆಗೂ ಅಗಲಿರದಂಥ ಸಂಬಂಧವನ್ನು ಕಲ್ಪಿಸಿದನು. ದೃಶ್ಯವಸ್ತುಗಳು ಭಾವನೆಗಳಿಂದ ಭಿನ್ನವಿದ್ದಾಗ ಸತ್ಯವಾಗಿರಲಾರವು. ಭಾವನೆಗಳು ದೃಶ್ಯವಸ್ತುಗಳಿಂದ ಭಿನ್ನವಿರುವಾಗ ಕೇವಲ ಛಾಯಾಮಾತ್ರವಾಗಿರುವವು. ನಿಜವಸ್ತುವು ದೃಶ್ಯಜಗತ್ತಿನಲ್ಲಿ ಪ್ರಕಟವಾಗುವ ಸತ್ವವಾಗಿದೆ. ಮತ್ತು ಜಗತ್ತಿನಲ್ಲಿಯೇ ಅದರ ವಾಸವು. ವ್ಯಕ್ತಿಯೇ ನಿಜವಾದ ವಸ್ತುವು.

**ತರ್ಕಶಾಸ್ತ್ರ**— ಎಲ್ಲ ವ್ಯವಹಾರಿಕ ಶಾಸ್ತ್ರಗಳ ಸಮಸ್ಯೆಗಳನ್ನು ಬಿಡಿಸಲು ತರ್ಕವು ನಿಜವಾದ ಸಾಧನವೆಂದು ಇವನು ತಿಳಿದನು. ಸೃಷ್ಟಿ

ಯಲ್ಲಿ ಜರಗುವ ಕಾರ್ಯಗಳಿಗೆಲ್ಲ ಒಂದು ವಿಶಿಷ್ಟವಾದ ಕಾರಣ ಉಂಟೆಂದು ಇವನು ತಿಳಿದನು. ತರ್ಕಪದ್ಧತಿಯು ಶಾಸ್ತ್ರೀಯವಾಗಿದ್ದರೆ ಆದು ಸೃಷ್ಟಿ ನಿಯಮಗಳನ್ನು ಅನುಸರಿಸಬೇಕು. ಪ್ರತಿಯೊಂದು ಪ್ರತ್ಯಕ್ಷ ಜ್ಞಾನವನ್ನು ಒಂದೇ ಸಾರ್ವತ್ರಿಕ ಭಾವನೆಯೊಳಗಿಂದ ಹೊರಪಡಿಸಬೇಕು. (*Deduction of particular perception from universal idea.*) ಇವನ ತರ್ಕವನ್ನು ಚನ್ನಾಗಿ ರಚಿಸಿದ್ದರಿಂದ ಇವನಿಗೆ ತರ್ಕಶಾಸ್ತ್ರದ ಪಿತಾಮಹನೆಂದು ಹೆಸರಾಯಿತು.

ತತ್ವಶಾಸ್ತ್ರ:— ಸೃಷ್ಟಿಯಲ್ಲಿಯ ವಸ್ತುಗಳು ತಾವೇ ನಿಜವಾಗಿರದೆ ಆವುಗಳು ಜಗದಾತ್ಮದೊಂದಿಗೆ ಕೂಡಿದಾಗ ಮಾತ್ರವೇ ನಿಜವಾಗಿರುವವು. ಸೃಷ್ಟಿಯ ಪ್ರತಿಯೊಂದು ವಸ್ತುವು ಪ್ರಕೃತಿ ಮತ್ತು ಕಲಾ ಇವೆರಡರ ಸಂಯೋಗದಿಂದಾಗಿದೆ. ಪ್ರಕೃತಿಯು ಕಲೆಯಾಗಿ ಪರಿಣಮಿಸುವುದೇ ಧ್ಯೇಯವಾಗಿದೆ. ಸಜೀವ ವಸ್ತುಗಳ ನಿರ್ಮಾಣದಲ್ಲಿ ಉಪಾದಾನ ಕಾರಣ, ಕಾರ್ಯಕಾರಣಗಳೆರಡು ಅವಶ್ಯವೆಂತಲೂ ನಿರ್ಜೀವ ವಸ್ತುಗಳ ರಚನೆಯಲ್ಲಿ ಉಪಾದಾನ, ನಿಮಿತ್ತ, ಕಾರ್ಯಕಾರಣ, ಅಂತಿಮ ಕಾರಣಗಳು ಅವಶ್ಯವೆಂತಲೂ ಇವನು ಹೇಳುತ್ತಾನೆ. ಪ್ರತಿಯೊಂದು ವಸ್ತುವು ಆದರಷ್ಟಕ್ಕೆ ಸ್ವಯಂಸಿದ್ಧವಾಗಿ ಕಂಡರೂ ಮತ್ತೊಂದು ವಸ್ತುವಿನೊಡನೆ ಹೋಲಿಸಿದಾಗ ಅದು ಸ್ವಯಂಸಿದ್ಧವಾಗಿ ಕಂಡುಬರುವದಿಲ್ಲ. ಪುಷ್ಪವು ಸ್ವಯಂಪರಿಪೂರ್ಣವಾಗಿ ಕಂಡುಬಂದರೂ ಫಲದೊಡನೆ ಹೋಲಿಸಿದಾಗ ಅದರ ಪೂರ್ಣತೆಗೆ ಭಂಗಬರುವದು ಪುಷ್ಪವು ಫಲಕ್ಕೆ ಪ್ರಕೃತಿರೂಪವಾಗಿದ್ದು ಮೊಗ್ಗೆಗೆ ಕಲಾರೂಪವಾಗಿದೆ. ಇಲ್ಲಿ ಅರಿಸ್ಟಾಟಲನು ದ್ವೈತಭಾವವನ್ನು ಪ್ರಕಟಿಸಿದ್ದಾನೆ. ಶುದ್ಧ ಕಲೆಯೇ ಪರಮಾತ್ಮವಾಗಿದೆ. ಪರಮಾತ್ಮನು ಪ್ರಕೃತಿಯಿಂದ ಭಿನ್ನನಾಗಿರುವನು.

ದೇವರು:— ಪ್ರಕೃತಿಯು ಸಂಭಾವ್ಯವಸ್ತು (*Potential*) ವಾಗಿರುವದರಿಂದ ಚಲನಾ ಮತ್ತು ಉತ್ಪಾದಕ ಶಕ್ತಿರಹಿತವಾಗಿದೆ. ಪ್ರಕೃತಿಯ ಮೇಲೆ ಕಲೆಯ ಪ್ರೇರಣೆಯುಂಟಾದಾಗ ಚಲನೆಯುತ್ಪನ್ನವಾಗುವದು. ಪ್ರಕೃತಿಯಲ್ಲಿ ರೂಪಾಂತರಹೊಂದುವ ಗುಣವುಂಟು. ಕಲೆಯಲ್ಲಿ ಕ್ರಿಯಾಶಕ್ತಿಯುಂಟು ಇವನ ಕಲೆಯು ಹಿಂದೂ ತತ್ವಶಾಸ್ತ್ರದಲ್ಲಿಯ ಚಿಚ್ಛಕ್ತಿಗೆ ಸದೃಶವಾಗಿದೆ. ಇವನ ಸೃಷ್ಟಿಕ್ರಮವು ಆದ್ಯಂತವಿಲ್ಲದೆ ವರ್ತುಳಾ

ಕಾರವಾಗಿದೆ. ದೇವರು ಜಗತ್ತಿನ ಚಲನೆಗೆ ಕಾರಣನಾಗಿದ್ದಾನೆ. ದೇವರು ಯಾಂತ್ರಿಕ ರೀತಿಯ ಕಾರಣನಾಗಿರದೆ ಅಂತಿಮ ಅಥವಾ ಧ್ಯೇಯರೂಪವಾದ ಕಾರಣನಿದ್ದಾನೆ. ದೇವರು ತನ್ನ ಭಾವವನ್ನೇ ಹೊಂದುವ ಹಾಗೆ ಪ್ರಕೃತಿಯನ್ನು ಪ್ರೇರಣೆಮಾಡುತ್ತಾನೆ. ದೇವರು ಶಾಶ್ವತನೂ, ಅಚಲನೂ, ನಿತ್ಯನೂ, ಜಗತ್ತಿನ ಉತ್ಪತ್ತಿಗೆ ಕಾರಣನೂ, ನಿತ್ಯಪರಿಪೂರ್ಣನೂ, ಚಿತ್ಸ್ವರೂಪನೂ, ಕೇವಲಾತ್ಮಧ್ಯಾನಾಸಕ್ತನೂ, ಅನನ್ಯನೂ ಇದ್ದಾನೆ. ದೇವರ ವಿಷಯವಾದ ಈ ಅದ್ವೈತ ವಿಚಾರವು ಗ್ರೀಕರು ಈ ವರೆಗೂ ಪ್ರತಿಪಾದಿಸಿದ್ದಾಗಿದೆ. ಈ ವಿಚಾರವು ಗ್ರೀಕ ತತ್ವಜ್ಞಾನದ ಪರಿಪಕ್ವವಾದ ಫಲವಾಗಿದೆ.

ಪ್ರಕೃತಿಃ— ದೇವರು ಪ್ರಕೃತಿಯಿಂದ ಭಿನ್ನನಾಗಿರಬಲ್ಲನಾದರೂ ಪ್ರಕೃತಿಯು ದೇವರನ್ನಗಲಿರಲಾರದು. ಪ್ರಕೃತಿಯು ಎರಡುಸ್ವರೂಪವುಳ್ಳದಾಗಿದೆ. ಕಲೆಯೊಡನೆ ಸಹಕಾರಿತ್ವದಿಂದ ದೃಶ್ಯ ಜಗತ್ತಿನ ನಿರ್ಮಾಣದಲ್ಲಿ ಸಹಾಯ ಭೂತವಾಗಿದೆ. ಮತ್ತು ಸೃಷ್ಟಿಯಲ್ಲಿಯ ಅನಾಯಕತ್ವಕ್ಕೆ ಮೂಲವಾಗಿದೆ. ಕಲೆಯು ಪೂರ್ಣ ಪ್ರಾದುರ್ಭಾವಹೊಂದಲು ಮತ್ತು ಸೃಷ್ಟ ಜಗತ್ತು ದೇವರಂತೆ ಪರಿಪೂರ್ಣತೆಯನ್ನು ಹೊಂದಲು ಪ್ರಕೃತಿಯು ಅತಂಕವಾಗಿದೆ. ಈತನ ಪ್ರಕೃತಿಯು ಪ್ಲೇಟೋನ ಪ್ರಕೃತಿಯಂತೆ ಶೂನ್ಯಪದಾರ್ಥವಾಗಿರದೆ ಭೌತಿಕ ವಸ್ತುಗಳ ಮೂಲವಸ್ತು (*sustratum*) ಆಗಿದೆ. ಇದು ಅನಂತವೂ, ಅಮರ್ಯಾದಿತವೂ ಆಗಿದ್ದು ಇದರ ಪ್ರತಿಗಾಮಿ ಪ್ರೇರಣೆಯಿಂದ ಅದೃಷ್ಟ (*fate*) ಮತ್ತು ಕಷ್ಟಸಂಭವ (*accident*) ಗಳು ಜರಗುವವು. ಸೃಷ್ಟಿಯು ಯಾಂತ್ರಿಕ ಮತ್ತು ಧ್ಯೇಯಭೂತವಾದ ಎರಡು ಕಾರಣಗಳಿಂದ ಕೂಡಿದೆ. ಪರಮಾತ್ಮನೊಬ್ಬನೇ ಧ್ಯೇಯಭೂತವಾದ ಅಥವಾ ಅಂತಿಮ ಕಾರಣನು. ಅವನಿಂದಲೇ ಸೃಷ್ಟಿಯೊಳಗಿನ ಕಾರ್ಯವು ಜರಗುತ್ತದೆ. ಪ್ರಕೃತಿಗೆ ಸ್ವಯಂ ಚಲನೆಯಿಲ್ಲ. ಪ್ರಕೃತಿಯಲ್ಲಿ ದೈವೀಸ್ವರೂಪವನ್ನು ಹೊಂದುವ ಇಚ್ಛೆಯುಂಟಾದಾಗ ಚಲನೆಯುತ್ಪನ್ನವಾಗುವದು. ಸೃಷ್ಟಿಯು ಅರಿಸ್ಟಾಟಲನಿಗೆ ಜೀವಮಯವಾಗಿತ್ತು. ಆಧುನಿಕಶಾಸ್ತ್ರ ಸಿದ್ಧಾಂತದ ಪ್ರಕಾರ ಸೃಷ್ಟಿಯು ಜಡವಾಗಿದ್ದು ಯಾಂತ್ರಿಕ ಕಾರಣಕ್ಕೆ ಅಧೀನವಾಗಿದೆ. ಕ್ರಿಸ್ತರ ಸಿದ್ಧಾಂತದಂತೆ ಇವನ ಸೃಷ್ಟಿಯು ನಿರ್ಮಾಣವಾದದ್ದಲ್ಲ ಅಥವಾ ಡಾರ್ವಿನ್ನನ ಉತ್ಕ್ರಾಂತಿವಾದದಲ್ಲಿ ಹೊಸ ಜೀವಜಾತಿಗಳು ಕ್ರಮದಿಂದ ಅಭಿವೃದ್ಧಿಯಾಗುತ್ತಹೋದಂತೆ(*Evolulion*)

ಇವನ ಸಿದ್ಧಾಂತವಲ್ಲ. ಇವನ ಜಗತ್ತು ಯಾವಾಗಲೂ ಅಸ್ತಿತ್ವವಲ್ಲಿದೆ ಆದಕ್ಕೆ ಸ್ಥಲದ ಮೇರೆಯುಂಟೋವಿನಃ ಕಾಲದ ಮೇರೆ ಇಲ್ಲ. ಮತ್ತು ಜಗತ್ತಿನಲ್ಲಿ ದೈವೀ ಬುದ್ಧಿಯು ಯಾವಾಗಲೂ ವಾಸವಾಗಿದೆ. ಯಾಂತ್ರಿಕ ಕಾರಣಗಳಿಂದ ಬದ್ಧವಾದ ವಸ್ತುಗಳೂ ಬುದ್ಧಿಯುಕ್ತವಾದ ಪ್ರಾಣಿಗಳೂ ದೇವರನ್ನೇ ಹೊಂದುವ ಧ್ಯೇಯವುಳ್ಳವಾಗಿವೆ. ಯಾಂತ್ರಿಕ ಕಾರಣಗಳಿಂದ ಬದ್ಧವಾದ ವಸ್ತುಗಳ ವಿಚಾರ ಮಾಡುವ ಶಾಸ್ತ್ರಕ್ಕೆ ಭೌತಿಕಶಾಸ್ತ್ರವೆಂದೂ ಬುದ್ಧಿಯುಕ್ತವಾದ ಪ್ರಾಣಿಗಳ ವಿಷಯದ ಶಾಸ್ತ್ರಕ್ಕೆ ಮಾನಸ, ನೈತಿಕ ಮತ್ತು ರಾಜನೈತಿಕ ಶಾಸ್ತ್ರಗಳೆಂದೂ ಅರಿಷ್ಟಾಟಲನು ತಿಳಿದನು. ಭೂಮಿಯು ಗೋಳಾಕಾರವಾದದ್ದೆಂದೂ ಅಚಲವಾದದ್ದೆಂದೂ ಅದರ ಸುತ್ತಲೂ ಸೂರ್ಯ, ಚಂದ್ರ, ನಕ್ಷತ್ರಮಂಡಳಗಳು ಸುತ್ತುತ್ತಿರುವವೆಂದೂ, ಪರಮಾತ್ಮನು ಇವೆಲ್ಲವನ್ನು ಚಲಿಸುವಂತೆ ಮಾಡುತ್ತಾನೆಂದೂ ಈತನು ತಿಳಿದನು. ಗ್ರಹಗಳ ಚಲನೆಯಿಂದ ಭೂಲೋಕದ ಜೀವಿಗಳ ಮೇಲೆ ಪರಿಣಾಮವುಂಟಾಗುವದೆಂದೂ ಅವು ದೇವತೆಗಳೆಂತಲೂ ಈತನು ಗ್ರಹಿಸಿದನು. ಸೃಷ್ಟಿಯಲ್ಲಿ ಮೂರು ವಿಧವಾದ ಚಲನೆಗಳುಂಟು. ಸ್ಥಳಭೇದ (ಯಾಂತ್ರಿಕ ಸ್ವರೂಪದ್ದು) ಗುಣಭೇದ (ರಸಾಯನಿಕ) ವಸ್ತುಭೇದ (ಸಚೇತನ ವಸ್ತುಸಂಬಂಧವಾದ–*Organic*) ವಸ್ತುಭೇದವು ಉಳಿದ ಎರಡು ಭೇದಗಳಿಗಿಂತ ಹೆಚ್ಚು ಸತ್ಯವಾದದ್ದು. ಗುಣಭೇದಗಳು ಪರಿಮಾಣ ಭೇದಗಳಿಂದ ಭಿನ್ನವಾಗಿವೆಎಂದು ಇವನು ಯಥಾರ್ಥವಾಗಿ ಶಾಸ್ತ್ರಪದ್ಧತಿಗನುಗುಣವಾಗಿ ಹೇಳಿರುವನು.

ಮಾನಸಶಾಸ್ತ್ರ:— ಮನುಷ್ಯನು ಸೃಷ್ಟಿಯ ಅಂಗವಾಗಿದ್ದಾನೆ. ಮೊದಲು ಯಾಂತ್ರಿಕ ಬದಲಾವಣೆಯಿದ್ದು ಆ ಮೇಲೆ ರಸಾಯನಿಕ ಆನಂತರ ಸಚೇತನ ವಸ್ತುಗಳಲ್ಲಿ ಬದಲಾವಣೆ ಹೀಗೆ ಕ್ರಮವಿರುವದು. ಸಚೇತನದಲ್ಲಿ ಪುನಃ ಸಸ್ಯಜೀವ, ಇಂದ್ರಿಯಯುಕ್ತ ಜೀವ ಮತ್ತು ಬುದ್ಧಿಯುಕ್ತ ಜೀವ ಎಂಬ ಕ್ರಮಭೇದವುಂಟು. ಸಸ್ಯಗಳಿಗೆ ಸಜಾತಿ ಮಾಡಿಕೊಳ್ಳುವ ಮತ್ತು ಹಬ್ಬಿಸುವ ಶಕ್ತಿಯುಂಟು. ಇಂದ್ರಿಯಯುಕ್ತ ಜೀವಿಗಳಿಗೆ ಆಹಾರೇಚ್ಛೆ, ಸ್ವಯಂಚಲನೆಗಳುಂಟು. ಮನುಷ್ಯನಿಗೆ ಈ ಶಕ್ತಿಗಳಿರುವದಲ್ಲದೆ ಬುದ್ಧಿಶಕ್ತಿಯು ವಿಶಿಷ್ಟವಾಗಿರುವದು. ಮತ್ತು ಧ್ಯೇಯಯುಕ್ತವಾಗಿರುವದು. ಬುದ್ಧಿಯ ಕಾರ್ಯಗಳೆಲ್ಲವು ಯಾವದೊಂದು ಧ್ಯೇಯದ ಕಡೆಗೆ ಮುಖ್ಯವಾಗಿರುವವು. ಜೀವಾತ್ಮದ ಉದ್ದೇಶವನ್ನು ಶರೀರವು ಸಫಲಗೊ

ಳಿಸುವದು. ಬುದ್ಧಿಯು ಜೀವಾತ್ಮದ ಅಂಶವಾಗಿದೆ. ಅದು ಭೌತಿಕವಾಗಿರದೆ ಬದಲಾವಣೆಯನ್ನು ಹೊಂದಲಾರದ್ದೂ ಸುಖದುಃಖಗಳಿಂದ ಅಲಿಪ್ತವಾದದ್ದೂ ಇದೆ. ದೇಹವು ನಾಶವಾದ ನಂತರ ಸಹ ಅದು ಉಳಿಯುವದು. ವಿಚಾರವೇ ಬುದ್ಧಿಯ ಕ್ರಿಯೆಯಾಗಿದೆ. ಇವನು ಬುದ್ಧಿಯಲ್ಲಿ ಅನಾಸಕ್ತ ಬುದ್ಧಿ (*Passive reason*) ಮತ್ತು ಆಸಕ್ತಬುದ್ಧಿ (*Active reason*) ಎಂದು ಎರಡು ವಿಭಾಗಮಾಡಿದ್ದಾನೆ. ಅನಾಸಕ್ತ ಬುದ್ಧಿಯು ಕ್ರಮದಿಂದ ಬೆಳವಣಿಗೆ ಹೊಂದುವ ವ್ಯಕ್ತಿಯಲ್ಲಿದೆ. ಆಸಕ್ತ ಬುದ್ಧಿಯೊಂದೇ ಮರಣದ ನಂತರ ಉಳಿಯುವದು. ಇದು ದೇವರಲ್ಲಿ ಬೆರೆಯುವದೋ ಹಾಗೇ ಉಳಿಯುವದೋ ಎಂಬ ಬಗ್ಗೆ ಇವನು ಏನೂ ಹೇಳಿಲ್ಲ.

ನೀತಿಶಾಸ್ತ್ರ:- ಸದ್ಗುಣವು ಬುದ್ಧಿಯ ಚಟುವಟಿಕೆಯನ್ನುಂಟುಮಾಡಲು ಸಾಧನವಾಗಿದೆ. ಬೌದ್ಧಿಕಚಟುವಟಿಕೆಯು ನೈತಿಕ ಜೀವನದ ಶ್ರೇಯಸ್ಸಾಗಿದೆ. ಸುಖವೇ ಮನುಷ್ಯನ ಧ್ಯೇಯವು. ಸುಖವು ಮನುಷ್ಯ ಪ್ರಯತ್ನದ ಮತ್ತು ಪರಿಸ್ಥಿತಿಯ ಫಲವಾಗಿದೆ. ಸುಖದ ಬೆಲೆಯನ್ನು ನಿರ್ಧರಿಸಲು ಸದ್ಗುಣವು ಪ್ರಮಾಣವಾಗಿದೆ. ಮನುಷ್ಯಕಾರ್ಯದ ಪ್ರತಿಫಲವಾಗಿ ಸುಖಗಳು ಯಾವಾಗಲೂ ಪ್ರತಿಫಲಿಸುವವೆಂದು ಹೇಳಲು ಬರುವದಿಲ್ಲ. ಇಂದ್ರಿಯನಿಗ್ರಹ ಮಾಡುವದರಲ್ಲಿ ವ್ಯವಹಾರಿಕ ಸದ್ಗುಣವಿರುವದೆಂತಲೂ ಬೌದ್ಧಿಕ ವ್ಯವಸಾಯದಿಂದ ಬೌದ್ಧಿಕ ಸದ್ಗುಣವುಂಟಾಗುವದೆಂತಲೂ ಈತನ ಮತವು. 'ಜ್ಞಾನವೇ ಸದ್ಗುಣವಾಗಿದೆ' ಎಂಬ ಸಾಕ್ರೆಟಿಸನ ಸಿದ್ಧಾಂತವನ್ನು ಇವನು ಖಂಡಿಸಿದನು. ಒಂದು ಕಾರ್ಯವು ಕೆಟ್ಟದೆಂದೂ ತಿಳಿದಿದ್ದರೂ ಮನುಷ್ಯನು ಕಾಮ-ಕ್ರೋಧಾದಿಗಳ ವಶವರ್ತಿಯಾಗಿ ಅದನ್ನು ಮಾಡುವನು. ಆದ್ದರಿಂದ ಇಚ್ಛಾಸ್ವಾತಂತ್ರ್ಯವನ್ನು ಇವನು ಪ್ರತಿಪಾದಿಸಿದನು. ಧೈರ್ಯವು ಭೀರುತ್ವ ಮತ್ತು ದುಡುಕುತನಗಳ ಮಾಧ್ಯಮಿಕ ಸದ್ಗುಣವು. ವ್ಯವಹಾರಿಕ ಸದ್ಗುಣಗಳನ್ನು ಸಾಧಿಸುವದರಲ್ಲಿ ಮಿತಗುಣವು ಸಾಧನವು. ಬೌದ್ಧಿಕ ಸದ್ಗುಣಗಳಿಂದ ಮನುಷ್ಯನು ದೈವಿಕ ಸುಖವನ್ನು ಹೊಂದುವನು.

ರಾಜನೀತಿ:— ಇಹಲೋಕದಲ್ಲಿ ಸುಖಕ್ಕಿಂತ ಬೌದ್ಧಿಕ ಚಟುವಟಿಕೆಯೇ ಮೇಲಾದದ್ದು, ಸರಕಾರವು ವ್ಯಕ್ತಿಯ ಸದ್ಗುಣವನ್ನು ಬೆಳಸ

ಬೇಕು. ವ್ಯಕ್ತಿಯು ತನ್ನ ಹಿತವನ್ನು ಸಮಾಜದ ಹಿತಕ್ಕೆ ಅಧೀನ ಮಾಡಬೇಕು. ಸರಕಾರಕ್ಕೆ ಜನರ ಹಿತವೇ ಧ್ಯೇಯವಾಗಿರಬೇಕು. ಇವನು ಪ್ಲೇಟೋನಂತೆ ಸಮಾಜ ಸಮತಾವಾದಿಯಾಗಿರದೆ ವಿವಾಹ ಪದ್ಧತಿಯನ್ನೂ ಕೌಟುಂಬಿಕ ಸಂಬಂಧವನ್ನೂ ಬಲವಾಗಿ ಪ್ರತಿಪಾದಿಸಿದನು. ಇವನು ಸ್ತ್ರೀಯರ ಗೌರವವನ್ನು ತಿಳಿಸಿ ಅವರಿಗೆ ಯೋಗ್ಯ ಮರ್ಯಾದೆ ಇರತಕ್ಕದ್ದೆಂದು ಹೇಳಿದನು. ಗುಲಾಮಗಿರಿಯ ಪದ್ಧತಿಯಾದರೂ ಇವನಿಗೆ ಸೇರಲಿಲ್ಲ.

---

# ಸಾಕ್ರೆಟೀಸ ಮತ್ತು ಬಸವ.

ಲೇಖಕ:— ನೀಲಕಂಠ (ಬಸವನ ಬಳಗ).

---

ಸಾಕ್ರೆಟಿಸನು ಜನ್ಮ, ಶಿಕ್ಷಣ, ಸಂಸ್ಕೃತಿಗಳಿಂದ ಗ್ರೀಕನು. ಆದರೆ ಆತನ ತತ್ವಗಳು ಗ್ರೀಸಕ್ಕಷ್ಟೇ ಸಂಬಂಧಿಸಿದಂಥವಲ್ಲ. ದೇಶಕಾಲವನ್ನು ಮೀರಿದಂಥವುಗಳು. ಆ ತತ್ವಗಳ ಮೂಲಕ ಸಾಕ್ರೆಟಿಸನು ವಿಶ್ವವ್ಯಾಪಕನೂ ಅಮರನೂ ಆಗಿದ್ದಾನೆ.

ಸಾಕ್ರೆಟಿಸನಿಗೂ ಬಸವೇಶ್ವರನಿಗೂ ತಾದಾತ್ಮ್ಯ ಸಂಬಂಧವಿರುತ್ತದೆ. ಬಸವನು ಜನ್ಮದಿಂದ ಶೈವನಾದರೂ ಮತ ಸಂಸ್ಕೃತಿಗಳಿಂದ ವೀರಶೈವನಾಗಿದ್ದಾನೆ. ಆತನ ದಿವ್ಯ ತತ್ವಗಳು ವಿಶ್ವವ್ಯಾಪಕವಾಗಿವೆ. ಆದರೆ ತಿಳುವಳಿಕೆಯಿಲ್ಲದವರು ಆ ತತ್ವಗಳು ವೀರಶೈವ ಧರ್ಮಕ್ಕಷ್ಟೇ ಸಂಬಂಧಿಸಿರುವವೆಂದು ಭಾವಿಸುತ್ತಾರೆ. ಸಾಕ್ರೆಟಿಸನಂತೆ ಬಸವನೂ ವಿಶ್ವವ್ಯಾಪಕನಾಗಿದ್ದಾನೆ. ಬಸವನು ಲಿಂಗಾಯತನಾದರೂ ಆತನ ತತ್ವಗಳು ಮಾನವ ಸೃಷ್ಟಿಗೆಲ್ಲ ಸಂಬಂಧಿಸಿದಂಥವಾಗಿರುತ್ತವೆ.

ಸಾಕ್ರೆಟಿಸನು ಪಾಶ್ಚಾತ್ಯ ತತ್ವಜ್ಞಾನ ಶಾಸ್ತ್ರದ ಮೂಲ ಪುರುಷನು. ಸಾಕ್ರೆಟಿಸನಗಿಂತ ಪೂರ್ವದಲ್ಲಿ ಪ್ರಕೃತಿವಾದಿಗಳಿದ್ದರು. (*Cosmologist*) ಈ ದೃಶ್ಯರೂಪೀ ಜಗತ್ತು ಹೇಗೆ ನಿರ್ಮಿತವಾಯಿತೆಂಬದನ್ನು ನಿರ್ಧರಿಸಲಿಕ್ಕೆ ಅವರು ಪೃಥ್ವಿ, ಆಪ್, ತೇಜ, ವಾಯು, ಆಕಾಶಗಳೆಂಬೀ ಪಂಚಮಹಾಭೂತಗಳನ್ನಾಶ್ರಯಿಸಿದರು. ಈ ತತ್ವಗಳಿಂದಲೇ ವಿಶ್ವದ ಉತ್ಪತ್ತಿಯಾಯಿತೆಂದು ಅವರು ಸಾಧಿಸಿದರು. ಗ್ರೀಕರ ಮನೋಭೂಮಿಕೆಯಲ್ಲಿ ಮೊಟ್ಟಮೊದಲು ಬಿಂಬಿಸಿದ ವಿಚಾರಗಳಿವು.

ಬರಬರುತ್ತ ಈ ಪಂಚಭೂತಗಳನ್ನೇ ಜನರು ನಾನಾ ಪ್ರಕಾರದ ದೇವತೆಗಳನ್ನು ಮಾಡಿ ಆರಾಧಿಸಹತ್ತಿದರು. ಅಗ್ನಿ, ವರುಣ, ಆಕಾಶ ಮುಂತಾದವುಗಳು ದೇವರೆಂದು ತಿಳಿದು ಧರ್ಮದ ಅನೇಕ ಮೂಢ ಭಾವನೆಗಳಿಗೆ ಆಸ್ಪದ ಕೊಟ್ಟರು. ಪೂಜೆ, ಮಂತ್ರ, ಮಹೋತ್ಸವಾದಿ ಮೂಢ ಭಾವನೆಯ ಕಾರ್ಯಗಳು ಅವರಲ್ಲಿ ಬೇರೂರಿದವು. ಗ್ರೀಸ ದೇಶದ ಆಲಂಫಿಕ್ ಆರಫಿಕ್ ಎಂಬ ಧರ್ಮ ವಿಚಾರಗಳು ಮೂಢ ಭಾವನೆಯ ಮುದ್ದೆಗಳೆಂದು ಸುಜ್ಞರು ತಿಳಿಯುತ್ತಾರೆ. ಆದರೆ ವಿಶ್ವ ವ್ಯಾಪಕ ದೃಷ್ಟಿಯಿಂದ ಈ ವಿಚಾರಗಳು ಅಪೂರ್ಣವಾಗಿರುತ್ತವೆ. ಕಾಲ ಗತಿಯಿಂದ ಹೆಚ್ಚಿನ ಬುದ್ಧಿಯ ಉದಾತ್ತ ವಿಚಾರಗಳು ತಲೆದೋರಲು ಈ ಮೂಢ ಭಾವನೆಗಳು ಕಾಲ್ದೆಗೆಯಲೇಬೇಕಾಯಿತು.

ಈ ಪ್ರಕೃತಿವಾದಿಗಳು ೨-೩ ಶತಮಾನಗಳ ವರೆಗೆ ತಮ್ಮ ಮೂಗು ಮೇಲು ಮಾಡಿಕೊಂಡು ಮೆರೆದರು. ಆದರೆ ಮುಂದೆ ಗ್ರೀಸದಲ್ಲಿ ದಿವ್ಯ ತತ್ವಜ್ಞಾನಿಗಳುದಿಸಿದ್ದರಿಂದ ಆ ಪ್ರಕೃತಿವಾದಿಗಳು ಮೂಲೆ ಹಿಡಿದರು. ಈ ತತ್ವಜ್ಞಾನಿಗಳೆಂದರೆ ಸೋಫಿಸ್ಟರು. ಇವರು ಸದ್ಗುಣದ ಸಹೋದರರೂ ವಿಚಾರದ ಪುರಸ್ಕರ್ತರೂ ಆಗಿದ್ದರು. ಜನರಿಗೆ ನೀತಿಯನ್ನು ಉಪದೇಶಿಸುತ್ತ ಅವರು ಜನರ ಮೂಢ ಭಾವನೆಗಳನ್ನು ಮೂಲೆಗೊತ್ತಿ ಸುವಿಚಾರಗಳನ್ನೇ ಪ್ರಚಾರಗೊಳಿಸಲಾರಂಭಿಸಿದರು. ಆದರೆ ಅವರ ದುರ್ದೈವದಿಂದ ಸರಕಾರದವರು ಇವರು ಕ್ರಾಂತಿಕರಾಗಿ ತರುಣರ ಮನಸ್ಸನ್ನು ಕಲುಷಿತಗೊಳಿಸುವರೆಂಬ ಆರೋಪದ ಮೇಲಿಂದ ಇವರನ್ನು ಅಟಕಿನಲ್ಲಿಟ್ಟರು. ಸೋಫಿಸ್ಟರು ನಿಜವಾಗಿ ಸದ್ಗುಣ-ಸದಾಚಾರಗಳನ್ನು ಬೋಧಿಸುತ್ತಿದ್ದುದೇನೋ ನಿಜ. ಆದರೆ ಅವರು ಈ ಪ್ರಚಾರಕ ಕಾರ್ಯವನ್ನು ದುಡ್ಡಿನಾಶೆಯಿಂದ ಮಾಡುತ್ತಿದ್ದರು. ಈ ಮೇರೆಗೆ ಅವರು ತಮ್ಮ ಪವಿತ್ರವಾದ ಸದ್ಬುದ್ಧಿಯನ್ನು ದುಡ್ಡಿಗಾಗಿ ಮಾರಿಕೊಂಡರು. ಆದುದರಿಂದ ಅವರ ವರ್ಚಸ್ಸು ಕ್ರಮೇಣ ಕಡಿಮೆಯಾಯಿತು. ಇಷ್ಟರಲ್ಲಿ ಸಾಕ್ರೆಟಿಸನ ಕೀರ್ತಿಧ್ವಜವು ತಲೆಯೆತ್ತಿ ಮೆರೆಯಿತು. ಆತನು ಸದ್ಗುಣ-ಸದಾಚಾರಗಳನ್ನು ಬೋಧಿಸುವದು ದುಡ್ಡಿನಾಶೆಯಿಂದಲ್ಲ. ಆದರೆ ಕರ್ತವ್ಯದಿಂದೆಂಬ ಮಾತನ್ನು ಆತನು ಸೋಫಿಸ್ಟರಿಗೆ ಮನವರಿಕೆ ಮಾಡಿ ಕೊಟ್ಟನು. ಅಮೇಲೆ ನೀತಿಯು ಕ್ರಮಬದ್ಧವಾಗಿ ಪ್ರಚಾರದಲ್ಲಿ ಬರಲು ಉಪಕ್ರಮವಾಯಿತು.

ಬಸವೇಶ್ವರನ ಜೀವಮಾನದಲ್ಲಿ ಸಹ ಇದೇ ಮಾದರಿಯ ಸಂಗತಿಗಳೇ ದೃಗ್ಗೋಚರವಾಗುವವು. ಮೊಟ್ಟಮೊದಲು ವೇದಕಾಲದಿಂದ ತತ್ವಜ್ಞಾನದ ಮೂಲ ವಿಚಾರಗಳು ಭರತಖಂಡದಲ್ಲಿ ಮೊಳಕೆಯೊಡೆದವು. ಮಳೆ, ಗಾಳಿ, ಮಿಂಚು, ಗುಡುಗು ಮೊದಲಾದ ನೈಸರ್ಗಿಕ ರೂಪಗಳನ್ನು ದೇವರಂತೆ ಪೂಜಿಸುವದು ಆ ಕಾಲದ ವೈಲಕ್ಷಣ್ಯವಾಗಿದ್ದಿತು. ಹಿಂದುಸ್ತಾನದ ವೈದಿಕ ಧರ್ಮವೆಂದರೆ ಗ್ರೀಸದೇಶದ ಆರಪಿಕ್ ಮತ್ತು ಅಲಂಫಿಕ್ ಧರ್ಮದಂತೆ ತೀರ ಪ್ರಾಕೃತ ಸ್ಥಿತಿಯುಳ್ಳದ್ದೆಂದು ಅರವಿಂದ ಘೋಷರವರು ಹೇಳಿದ್ದಾರೆ. ಮುಂದೆ ಉಪನಿಷತ್ಕಾಲದಲ್ಲಿ ದೇವರೆಂದರೆ ಪರಬ್ರಹ್ಮವೆಂಬ ಕಲ್ಪನೆಯು ತಲೆದೋರಿತು. ಈ ಪರಬ್ರಹ್ಮವೇ ಮುಂದೆ ಪುರುಷವಾಚಕವಾಗಿ ಈಶ್ವರ, ಕೃಷ್ಣ ಮುಂತಾದ ನಾಮಗಳಿಂದ ಕಂಗೊಳಿಸಿತು. ಆ ಮೇಲೆ ಪುರುಷರೂಪೀ ದೇವತೆಗಳ ಬಗ್ಗೆ ಸಾಂಪ್ರದಾಯದಂತೆ ಪೂಜಾ ವಿಧಾನಗಳು ನಡೆಯಲಾರಂಭಿಸಿದವು. ಈ ಪೂಜಾ ವಿಧಾನಗಳು ಗ್ರೀಕರ ಪೂಜಾ ಕ್ರಮಗಳನ್ನು ಬಹುಮಟ್ಟಿಗೆ ಹೋಲುತ್ತವೆ. ಗ್ರೀಸ ದೇಶದಲ್ಲಿ ಈ ತರಹದ ಪೂಜೆಪುನಸ್ಕಾರಗಳ ವಿರುದ್ಧವಾಗಿ ಸಾಕ್ರೆಟಿಸನು ಎದ್ದು ನಿಂತಂತೆ ನಮ್ಮ ವೈದಿಕ ಮೂಢ ಭಾವನೆಯು ವಿಧಾನಗಳ ವಿರುದ್ಧವಾಗಿ ಬಸವೇಶ್ವರನು ನಡುಕಟ್ಟಿ ನಿಂತನು.

ಗ್ರೀಸದಂತೆ ಭರತಖಂಡವಾದರೂ ಮೊದಲು ಪ್ರಾಕೃತಿಕ ರೂಪಗಳನ್ನು ದೇವರೆಂದು ಭಾವಿಸಿ ಪೂಜಿಸುತ್ತಲಿದ್ದಿತು. ಆದರೆ ಆ ಕಾಲಕ್ಕೆ ಆಧ್ಯಾತ್ಮ ಶಾಸ್ತ್ರವಾಗಲಿ ನೀತಿಶಾಸ್ತ್ರವಾಗಲಿ ಕ್ರಮಬದ್ಧವಾದ ಸ್ಥಿತಿಯಲ್ಲಿದ್ದಿಲ್ಲ. ಮುಂದೆ ಶಂಕರ, ರಾಮಾನುಜ, ಬುದ್ಧ ಮೊದಲಾದವರು ಈ ವಿಷಯದ ಕಡೆಗೆ ವಿಶೇಷ ಗಮನಕೊಟ್ಟರು. ಅವರು ಧರ್ಮವನ್ನು ಮೂಢಭಾವನೆಯಿಂದ ಬಿಡಿಸಿ ತಾತ್ವಿಕ ಸ್ವರೂಪಕ್ಕೆ ತರಬೇಕೆಂದು ಹವಣಿಸಿದರು. ಆದರೆ ಅವರ ಪ್ರಯತ್ನಗಳೇನೂ ಅಷ್ಟು ಯಶಸ್ವಿಯಾಗಲಿಲ್ಲ-ಯಾಕಂದರೆ ಅವರು ತಾನೇ ದೇವರೆಂಬ ಹಾಗೂ ಪುರುಷರೂಪ ದೇವರೊಬ್ಬನಿರುತ್ತಾನೆಂಬ ವಿಚಾರವನ್ನು ಪ್ರಚಾರಮಾಡಿದರು. ಆದರೆ ಬಸವೇಶ್ವರನು ಆತ್ಮಬ್ರಹ್ಮ, ಪುರುಷಬ್ರಹ್ಮ ವಿಚಾರಗಳು ತೀರ ಅಪರಿಪಕ್ವವಾದವುಗಳೆಂದು ಮೊದಲು ಕಂಡುಹಿಡಿದನು. ಯಾಕಂದರೆ ಅವು ವಿವೇಕಕ್ಕೆ ಸಮಂಜಸವಾಗಲಾರವು. ಬಸವಾದಿ ಪ್ರಮಥರು ಹೇಳಿಕೊಟ್ಟ ದೇವರೆಂದರೆ ವಿಶ್ವವ್ಯಾಪಿಯಾದ ಪರಬ್ರಹ್ಮವಸ್ತುವು ಆದರೆ ಮರ್ಯಾದಿತ

ವಾದ ಪುಟ್ಟದೇವತೆಯಲ್ಲ. ಪರಬ್ರಹ್ಮವಸ್ತುವೆಂದರೆ ಅಪಾರ ಸತ್ಯವು (*Infinita goodness*) ಎಲ್ಲ ಮಾನವರಿಗೆ ಮನವರಿಕೆಯಾಗುವ ತತ್ವವಿದು. ಸಾಕ್ರೆಟಿಸ ಮತ್ತು ಬಸವೇಶ್ವರರು ಪ್ರತಿಪಾದಿಸುವ ದೇವರೆಂದರೆ ಅಪಾರವಾದ ಸತ್ಯವಲ್ಲದೆ ಬೇರೊಂದಲ್ಲ.

ಈ ಉಭಯ ಮಹಿಮರ ತತ್ವಗಳು ವಿಶೇಷವಾಗಿ ಪರಸ್ಪರ ಹೋಲುತ್ತವೆ. ನಿನ್ನ ನೀನರಿದೊಡೆ ಅಲ್ಲಿಯೇ ಎಲ್ಲ ತತ್ವದ ರಹಸ್ಯವಿರುವದೆಂದು ಬಸವೇಶ್ವರನು ಮನವರಿಕೆ ಮಾಡಿಕೊಟ್ಟನು. ತನ್ನ ತಾನರಿಯಬೇಕಾದರೆ ಮೊದಲು ತಾನು ಅಜ್ಞಾನಿಯೆಂದೇ ಭಾವಿಸಿ ನಡೆಯಬೇಕಾಗುತ್ತದೆ. ನಾನು ಎಲ್ಲ ತಿಳಿದವನೆನ್ನುವದು ಅಹಂಕಾರದ ಬೀಜವು. ನನಗೆ ಏನೂ ಗೊತ್ತಿಲ್ಲವೆನ್ನುವದು ವಿನಯದ ತಳಹದಿಯು. ಇದರಲ್ಲಿ ಮಾನವರ ಸೇವೆ ಮಾಡಲು ಅಪಾರವಾದ ಶಕ್ತಿಯಿರುತ್ತದೆ. ಇದೇ ಬಸವನ ತತ್ವವು.

ಸಾಕ್ರೆಟಿಸನು ಮಹಾಜ್ಞಾನಿಯಾಗಿದ್ದರೂ ತಾನು ಏನೂ ತಿಳಿಯದವನೆಂದೇ ಪ್ರತಿಪಾದಿಸುತ್ತಿದ್ದನು. ಈತನಾದರೂ ತನ್ನ ತಾನರಿದರೆ ಅದರಲ್ಲಿಯೇ ಎಲ್ಲ ತತ್ವವು ಅಡಕವಾಗಿರುತ್ತದೆಂಬ ಮಾತನ್ನೇ ಎತ್ತಿ ಹಿಡಿದನು. ಜ್ಞಾನಿಗಳು ಜನರೆದುರಿಗೆ ತಾವು ಅಜ್ಞಾನಿಗಳೆಂದು ಹೇಳಿದರೆ ಅದು ಆಶ್ಚರ್ಯವಾಗಿ ತೋರಬಹುದು. ಬಸವೇಶ್ವರನು ದ್ವಿತೀಯ ಶಂಭುವೆಂದೂ ಸರ್ವಜ್ಞನೆಂದೂ ಶರಣಪ್ರಮಥರು ಕೊಂಡಾಡಿದರು. ಆತನು "ಎನಗಿಂತ ಕಿರಿಯರಾರಿಲ್ಲ, ಶಿವಶರಣರಿಗಿಂತ ಹಿರಿಯರಾರಿಲ್ಲ" ಎಂಬ ಕಿಂಚಿಜ್ಞತ್ವದ ವಿಚಾರಗಳನ್ನೇ ಮುಂದು ಮಾಡಿದನು. ಯಾವ ದೇಶವಲ್ಲಿದ್ದರೇನು? ಯಾವ ಕಾಲದಲ್ಲಿದ್ದರೇನು? ಮಹಾತ್ಮರ ವಿಚಾರಗಳು ಒಂದೇ ಮಾದರಿಯವಿರುತ್ತವೆ.

---

# ನಿಜಸುಖವಾವುದು?

ಮನುಷ್ಯನು ಉಚ್ಚತಮ ಸ್ಥಿತಿಯನ್ನು ಹೊಂದಲಿಕ್ಕೆ ಯಾವಾಗಲೂ ಅಪೇಕ್ಷೆ ಪಡುವದುಂಟು. ಈ ಉಚ್ಚತಮ ಸ್ಥಿತಿ ಎಂದರೆ ನಿರಂತರ ಸೌಖ್ಯವನ್ನು ಹೊಂದುವದೇ ಇದೆ. ಆದರೆ ಈ ಸೌಖ್ಯವಾವುದೆಂಬ ವಿಷಯದಲ್ಲಿ ಅನೇಕರ ಅನೇಕ ಅಭಿಪ್ರಾಯಗಳುಂಟು.

ಆದರೆ ಹಿಂದೂ ಧರ್ಮದಲ್ಲಿ ಮೋಕ್ಷವನ್ನು ಹೊಂದುವದೇ ಸೌಖ್ಯವೆಂದು ತಿಳಿಯಲ್ಪಟ್ಟಿದೆ. ಈ ಬಗೆಯಾಗಿ ಅದರಲ್ಲಿಯ ಎಲ್ಲ ಪಂಗಡಗಳೂ ಎಲ್ಲ ತತ್ವವೇತ್ತಿಗಳೂ ಧರ್ಮ ಸುಧಾರಕರೂ ತಿಳಿದಿರುವರು. ಜಗತ್ತೆಲ್ಲವು ಪರಮಾತ್ಮನಿಂದ ಉಂಟಾಗಿದ್ದು ಅವನಲ್ಲಿಯೇ ಅದು ಕಡೆಗೆ ಬೆರೆದು ಹೋಗತಕ್ಕದ್ದೆಂದು ಈಗ ಎಲ್ಲರೂ ಭಾವಿಸಿರುವರು. ಒಬ್ಬ ವಚನಕಾರನು ಅನ್ನುವದೇನಂದರೆ:— "ಅಯ್ಯಾ ಚಂದ್ರನಿಂದಾದ ಕಲೆ ಚಂದ್ರನ ಬೆರಸಿ ಚಂದ್ರನಾದಂತೆ ಸೂರ್ಯನಿಂದಾದ ಕಿರಣ ಸೂರ್ಯನ ಬೆರಸಿ ಸೂರ್ಯನಾದಂತೆ ಅಗ್ನಿಯಿಂದಾದ ಕಾಂತಿ ಅಗ್ನಿಯ ಬೆರಸಿ ಅಗ್ನಿಯಾದಂತೆ ದೀಪದಿಂದಾದ ಬೆಳಗು ದೀಪವ ಬೆರಸಿ ದೀಪವಾದಂತೆ ಸಮುದ್ರದಿಂದಾದ ನದಿ ಸಮುದ್ರವ ಬೆರಸಿ ಸಮುದ್ರವಾದಂತೆ" ಪರಮಾತ್ಮನಿಂದ ಪುಟ್ಟಿದ ಪ್ರಾಣಿಯು ಕಡೆಗೆ ಅವನಲ್ಲಿಯೇ ಬೆರೆದು ಹೋಗುವದೇ ಅದರ ಅಂತಿಮಧ್ಯೇಯವಾಗಿರತಕ್ಕದ್ದು. ಇದನ್ನೇ ಮನುಷ್ಯನು ಸದಾ ಕಾಂಕ್ಷಿಸುತ್ತಿರಬೇಕು ಎಂದೂ ಹಿಂದೂ ಧರ್ಮವು ಯಾವಾಗಲೂ ಬೋಧಿಸುತ್ತಿರುವದು.

ಹಿಂದು ಧರ್ಮ ಶಾಸ್ತ್ರದಲ್ಲಿ ಪರಮಾತ್ಮನು ಆಕಾರ ರಹಿತನೆಂದು ಹೇಳಲ್ಪಟ್ಟಿರುತ್ತದೆ. ಅವನು ನಿರ್ಗುಣ, ನಿರಂಜನ, ನಿರುಪಮ ಎಂಬ ಶಬ್ದಗಳಿಂದ ವರ್ಣಿಸಲ್ಪಟ್ಟಿರುತ್ತಾನೆ. ವೀರಶೈವ ವಚನಕಾರರಾದರೂ ಅವನು ಶೂನ್ಯವೆಂದು ಭಾವಿಸಿ ಹಾಗೆ ಅನೇಕ ಉಕ್ತಿಗಳಲ್ಲಿ ಅವನನ್ನು ವರ್ಣಿಸುವದುಂಟು. ಇಲ್ಲಿ ಶೂನ್ಯವೆಂದರೆ ನಾಸ್ತಿಕ ಮತವಾದಿಗಳು ತಿಳಿಯುತ್ತಿರುವಂತೆ ದೇವರ ಅಸ್ತಿತ್ವವೇ ಇಲ್ಲವೆಂಬ ಭಾವವಲ್ಲ. ಇದರ ಅಭಿಪ್ರಾಯವು ಜಗತ್ತನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಅವಯವ, ನಿರವಯವ ಈ ಉಭಯಕ್ಕೆ ಮೀರಿ ತೋರುವಂಥ ಸ್ಥಿತಿ ಎಂದಿದೆ.

ಶೂನ್ಯವನ್ನು ಬಯಲು ಎಂಬ ಅಚ್ಚಗನ್ನಡ ಶಬ್ದದಿಂದಲೂ ವಚನಕಾರರು ಕರೆಯುವದುಂಟು.

ಹೀಗೆ ಬಯಲು ರೂಪುಳ್ಳ ಪರಮಾತ್ಮನಲ್ಲಿ ಅನೇಕ ಬಗೆಯ ಶಕ್ತಿಗಳು ಅಡಗಿರುವವು. ಜಗತ್ತಿನ ಸೃಷ್ಟಿಯು ಕಾಲದಲ್ಲಿ ಈ ಶಕ್ತಿಗಳು ಬಹಿಸ್ಫುರಿಸಲ್ಪಡಲು ದೃಶ್ಯ ಜಗತ್ತು ನಮ್ಮ ದೃಷ್ಟಿಗೆ ಗೋಚರವಾಗುವದು. ಹೀಗೆ ಗೋಚರವಾಗುವ ಪೂರ್ವದಲ್ಲಿ ಅದು ಆರು ಸ್ಥಿತ್ಯಂತರಗಳೊಳಗಿಂದ ಹಾಯ್ದು ಬರಬೇಕಾಗುವದು. ಇವುಗಳಿಗೆ ಸಾದಾಖ್ಯಗಳೆಂಬ ಹೆಸರನ್ನು ವಚನಕಾರರು ಕೊಟ್ಟಿರುವರು. ಅವು ಯಾವವೆಂದರೆ ಕರ್ತೃಸಾದಾಖ್ಯ, ಕರ್ಮಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯ ಎಂದು ಇರುವವು.

ಜಗತ್ತಿನಲ್ಲೆಲ್ಲ ಆಲೆದಾಡುವ ಶಕ್ತಿಗಳಲ್ಲಿ ಎರಡು ಭಾಗಗಳನ್ನು ನಾವು ಮಾಡಬಹುದು. ಯಾವ ಶಕ್ತಿಗಳು ಒಂದನ್ನೊಂದು ಆಕರ್ಷಿಸುತ್ತವೋ ಅವುಗಳಿಗೆ ಪ್ರೀತಿಯೆಂತಲೂ ಯಾವವು ಒಂದನ್ನೊಂದು ಪರಸ್ಪರ ನೂಕುತ್ತವೋ ಅವು ಹಗೆತನವುಳ್ಳವೆಂತಲೂ ವಾಡಿಕೆಯಾಗಿ ಹೇಳುವದುಂಟು. ಪರಸ್ಪರ ಆಕರ್ಷಿಸುವ ಶಕ್ತಿಯು ಸುಖವಾಗಿ ಪರಿಣಮಿಸುವದು. ಈ ಶಕ್ತಿಯ ಯೋಗ್ಯ ಉಪಯೋಗದಿಂದಲೇ ಜಗತ್ತಿನ ಪ್ರಗತಿಯು ಮತ್ತು ಮಾನವೀ ಸ್ವಭಾವದ ಉನ್ನತಿಯು ಇರುತ್ತದೆ. ಆದರೆ ಯಾವ ಶಕ್ತಿಯಿಂದ ಪದಾರ್ಥಗಳು ಒಂದನ್ನೊಂದು ನೂಕುತ್ತವೆಯೋ ಅದು ಜಗತ್ತನಲ್ಲಿ ದ್ವೇಷಾಸೂಯ ಭಾವಗಳನ್ನು ಹುಟ್ಟಿಸುತ್ತದೆ. ಈ ಉಭಯ ಶಕ್ತಿಗಳ ಮೂಲಕ ಜಗತ್ತಿನ ಪ್ರಗತಿಯು ಇಲ್ಲವೆ ಅವನತಿಯು ಉಂಟಾಗುತ್ತದೆ.

ಆದರೆ ಮೋಕ್ಷ ಸ್ಥಿತಿಯು ಈ ಉಭಯ ಬಗೆಯ ಭಿನ್ನತೆಗೆ ಮೀರಿದ್ದಾಗಿರುತ್ತದೆ. ಈ ಭಿನ್ನತೆಗೆ ಅದು ತೀರ ಬೇರೆಯಾಗಿದೆ. ಇಲ್ಲಿ ಸುಖವೂ ಇಲ್ಲ, ದುಃಖವೂ ಇಲ್ಲ. ಶರಣ ಸ್ಥಿತಿಯಲ್ಲಿರುವವರು ಈ ಬಗೆಯಾಗಿ ಇರಬೇಕೆಂದು ವಚನಕಾರರು ಯಾವಾಗಲೂ ಬೋಧಿಸುತ್ತಿರುವರು. ಶರಣನು ಸಂಗರಹಿತನೂ ದ್ವೈತಾದ್ವೈತವನ್ನು ಮೀರಿದವನೂ ಇರ್ಬ್ಬಾನೆ. ಅವನು ಸಾವಯುನೂ ಅಲ್ಲ; ನಿರವಯುನೂ ಅಲ್ಲ. ಇಂಥ ಶರಣನು ದುಃಖರಹಿತನಾಗಿರುತ್ತಾನೆ. ಮತ್ತು ಅವನಲ್ಲಿ ನಿತ್ಯ ನಿರಂಜನ ಪ್ರಭೆಯು

ಬೆಳಗು ಯಾವಾಗಲೂ ಪ್ರಕಾಶಿಸುತ್ತಲಿರುತ್ತದೆ. ಇಂಥವನು ಅನುಪಮವಾದ ಸುಖಸಾಗರದಲ್ಲಿ ಯಾವಾಗಲೂ ತೇಲಾಡುತ್ತಲಿರುವನು.

ಆದರೆ ಮನುಷ್ಯನು ಈ ಬಗೆಯ ಸ್ಥಿತಿಯನ್ನು ಒಳಕೊಳ್ಳುವದಿಲ್ಲಾದ್ದರಿಂದ ಅವನ ಶಕ್ತಿಗಳೆಲ್ಲವೂ ಐಹಿಕ ಸುಖೋಪಭೋಗಗಳಲ್ಲಿ ಕುಂದುತ್ತ ಹೋಗಿ ಕಡೆಗೆ ನಾಶಬಡುತ್ತವೆ. ಅವನು ಯಾವಾಗಲೂ ಊಟ-ಉಡಿಗೆ, ನಿದ್ರೆ, ಇಂದ್ರಿಯಸುಖ ಇವುಗಳಲ್ಲಿ ಲೋಲುಪ್ತನಾಗಿ ಕಾಲ ಕಳೆಯುತ್ತಿರುವನು. ಇದರಿಂದ ಅವನು ಅನೇಕ ಬಗೆಯ ಕಷ್ಟಗಳಿಗೆ ಈಡಾಗುವನು. ಅವನು ಯಾವಾಗಲೂ ಚಿಂತಾತುರನಾಗಿರುವನು. ಹೀಗೆ ಮಾನವ ಜಾತಿ ಎಲ್ಲವೂ ವ್ಯರ್ಥವಾಗಿ ಕಾಲ ಕಳೆಯುತ್ತಿರುವದು. ಆದರೆ ಈ ಬಗೆಯ ಜೀವಿತವು ಮನುಷ್ಯನ ಧ್ಯೇಯವಲ್ಲ. ಇದು ಅವನ ಪ್ರಗತಿಯ ಹಾದಿಯಲ್ಲ. ಆದ್ದರಿಂದ ಇಂಥ ಹಾದಿಯಲ್ಲಿ ಸಿಲುಕದೆ ಕಂಗೆಡದೆ ಯಾರು ಶಾಂತ ಮತ್ತು ಉಚ್ಚ ಮನಸ್ಕರಾಗಿ ಇರುತ್ತಾರೋ ಅಂಥವರ ಚೈತನ್ಯವು ಮತ್ತು ಶಕ್ತಿಯು ಅಚ್ಚಳಿಯದೆ ಉಳಿಯುತ್ತದೆ. ಇವರೇ ಲೋಕನಾಯಕರಾಗುವರು ಮತ್ತು ಧರ್ಮ ಸುಧಾರಕರಾಗುವರು. ಇವರಿಂದಲೇ ಜಗತ್ತಿನ ಪ್ರಗತಿಯ ಜ್ಯೋತಿಯು ಯಾವಾಗಲೂ ಬೆಳಗುತ್ತಲಿರುವದು.

ಮನುಷ್ಯನು ಈ ಬಗೆಯ ಪರಿಸ್ಥಿತಿಯಲ್ಲಿ ಬರಬೇಕಾದರೆ ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗ ಎಂಬ ಹೆಸರಿನ ಕ್ರಿಯೆಗಳಿಂದ ತನ್ನನ್ನು ಶುದ್ಧಮಾಡಿಕೊಳ್ಳಬೇಕೆಂದು ವಚನಕಾರರು ಹೇಳುತ್ತಿರುವರು. ಷಟ್‌ಸ್ಥಲ ಶಾಸ್ತ್ರಜ್ಞರು ಮನುಷ್ಯನ ಪ್ರಗತಿಯ ಕಾರ್ಯಗಳಲ್ಲಿ ಈ ಬಗೆಯ ವಿಭಾಗಗಳನ್ನು ಮಾಡಿರುವರು. ಸಂಸಾರದ ವ್ಯಾಮೋಹದ ಕಡೆಗೆ ಒಯ್ಯುವ ಗುಣಗಳನ್ನು ತ್ಯಜಿಸಿ ಬಿಡುವದೇ ತ್ಯಾಗಾಂಗವೆನಿಸುವದು. ಹೀಗೆ ದುಷ್ಟ ವಾಸನೆಗಳನ್ನು ಬಿಟ್ಟುಕೊಟ್ಟು ಉಚ್ಚ ವಾತಾವರಣದಲ್ಲಿದ್ದುಕೊಂಡು ತನ್ನ ಕ್ರಿಯೆಗಳನ್ನು ಮಾಡುತ್ತಿರುವದೇ ಭೋಗಾಂಗವೆನಿಸುವದು. ಈ ಎರಡನೇ ಸ್ಥಿತಿಯಲ್ಲಿ ಮನುಷ್ಯನು ಕುವಿಚಾರಗಳನ್ನು ತೊಲಗಿಸಿ ಸದ್ವಿಚಾರ ಮತ್ತು ಸತ್ಕೃತ್ಯಗಳಲ್ಲಿ ಮಗ್ನನಾಗಿರುತ್ತಾನೆ. ಯೋಗಾಂಗದಲ್ಲಿ ಅತ್ಯಂತ ಉಚ್ಚತಮ ಸ್ಥಿತಿಯಲ್ಲಿದ್ದುಕೊಂಡು ಪರಮಾತ್ಮನಲ್ಲಿ ಸಂಪೂರ್ಣ ಸಾಮರಸ್ಯವನ್ನು ಹೊಂದಿರುತ್ತಾನೆ. ಈ ಕಡೆಯ ಸ್ಥಿತಿಯು ಮನುಷ್ಯನ ವಿಕಾಸತೆಯ ಪೂರ್ಣತ್ವ ಎಂದು ಹೇಳಬಹುದು.

ಹೀಗೆ ಮನುಷ್ಯನು ಪ್ರಗತಿಯನ್ನುಂಟುಮಾಡಿಕೊಳ್ಳುತ್ತ ಕಡೆಗೆ ಮೋಕ್ಷವನ್ನೈದುವನು. ಇದೇ ನಿಜವಾದ ಅಂತಿಮ ಸುಖವು. ಈ ಸುಖದ ರೀತಿಯನ್ನು ವಚನಕಾರರು ತಮ್ಮ ವಚನಗಳಲ್ಲಿ ಅನೇಕ ಬಗೆಯಾಗಿ ಹೇಳಿರುವರು.

"ಅಂಗದುದಯ ಲಿಂಗಸುಖವು. ಲಿಂಗದುದಯ ಅಂಗಸುಖವು. ಅಂಗಲಿಂಗ ಸಂಗಸುಖದಿಂದ ಮಿಕ್ಕಿ ಮೀರಿ ನಿಂದ ಪರಮಸುಖವನೇನೆಂಬೆನಯ್ಯ? ಕೂಡಲ ಚನ್ನಸಂಗನ ಶರಣನನೇನೆಂಬೆನಯ್ಯ?"

"ಅಂತರಂಗದಲ್ಲಿ ಅನುಮಿಷನಾಗಿ ನಿರಂತರ ಲಿಂಗಸುಖಿ ನೋಡಯ್ಯ. ತುಂಬಿದುದು ತುಳುಕದು ನೋಡಯ್ಯ? ಒಲಿದುದು ಓಸರಿಸದು ನೋಡಾ. ಚನ್ನಮಲ್ಲಿಕಾರ್ಜುನಯ್ಯ ನೀನೊಲಿದ ಶರಣಂಗೆ ನಿಸ್ಸೀಮ ಸುಖವಯ್ಯ."

"ಆಲಿಕಲ್ಲ ಹರಳಿನಂತೆ ಅರಗಿನ ಪುತ್ಥಳಿಯಂತೆ ತನು ಕರಗಿ ನೆರೆವ ಸುಖವ ನಾನೇನೆಂಬೆ? ನಮ್ಮ ಕೂಡಲಸಂಗಮ ದೇವರ ಮನಮುಟ್ಟಿ ನೆರೆವ ಸುಖವ ನಾನಾರಿಗೆ ಉಸುರುವೆನು?"

---

# ಶ್ರೀ ಮಹಾಂತೇಶ ಕಡಕೋಳ ಮಡಿವಾಳಪ್ಪನವರ ಪದ್ಯಗಳು.

(ಚ. ಮ. ಕೋರಿ,)

→※0※←

ಮಡಿವಾಳಪ್ಪನವರು ನಿಜಾಮ ಇಲಾಖಾ ಗುಲಬುರ್ಗಾ ಜಿಲ್ಹಾ ಆಂದೋಲಾ ತಾಲೂಕ ಕಡಕೋಳ ಗ್ರಾಮದಲ್ಲಿ ವಾಸಿಸುತ್ತಿದ್ದರು. ಇವರು ಮಹೇಶ್ವರ ವರ್ಗದಲ್ಲಿ ಜನ್ಮತಾಳಿದರು. ಲೌಕಿಕ ಪಾರಮಾರ್ಥಿಕ ಚತುರರಾದ ಶರಣರೂ ಶಿವಾನುಭವಿಗಳೂ ಆಗಿದ್ದರು. ಇವರು ಕಲಬುರ್ಗಿಯ ಶಿವಶರಣರಾದ ಶರಣಬಸಪ್ಪನವರ ಸಮಕಾಲೀನರು. ಶ್ರೀ ಶರಣಬಸಪ್ಪನವರಿಂದಲೇ ದೀಕ್ಷೆಯನ್ನು ಹೊಂದಿದರು. ಶರಣಪ್ಪನವರ ಜನ್ಮಸ್ಥಳವಾದ ಅರಳಗುಂಡಿಗಿಯ ಸಮೀಪದಲ್ಲಿಯೇ ಕಡಕೋಳವಿರುವದು. ಚಿಣಮಗೇರಿಯ ಮಹಾಂತ ಸ್ವಾಮಿಗಳಿಂದಲೇ ಅನುಗ್ರಹವನ್ನು ಪಡೆದು ಅನೇಕ ಪದ್ಯಗಳನ್ನು ಹಾಡಿದ್ದಾರೆ. ಪ್ರತಿಯೊಂದು ಪದ್ಯದ ಕೊನೆಯಲ್ಲಿ ತಮ್ಮ ಗುರುಗಳಾದ ಮಹಾಂತಸ್ವಾಮಿಗಳ ಅಂಕಿತವನ್ನಿಟ್ಟಿದ್ದಾರೆ. ಪದ್ಯಗಳು ಬಹಳ ಸ್ಫೂರ್ತಿದಾಯಕವೂ ಶಿವಾನುಭವ ಜನ್ಯವಾದುವೂ ಗ್ರಾಮ್ಯ ಜನರಿಗೂ ಕೂಡ ತಿಳಿಯುವಂಥವೂ ಇರುತ್ತವೆಂಬದು ಕೆಳಗಿನ ಪದ್ಯಗಳನ್ನು ಓದುವದರಿಂದ ಗೊತ್ತಾಗುತ್ತದೆ. ಇವರ ಕವಿತಾ ಶಕ್ತಿಯು ಅಗಾಧವಾದದ್ದು. ಇವರ ದರ್ಶನಕ್ಕಾಗಿ ದೂರ ಪ್ರದೇಶಗಳಿಂದ ಜನರು ಬರುತ್ತಿದ್ದರು. ಖೈನೂರ ಕೃಷ್ಣಪ್ಪ, ತೆಲಗುಬಾಳದ ರಾಮಪ್ಪ, ಕಡ್ಲೆವಾಡದ ಸಿದ್ದಪ್ಪ ಈ ಮೂವರನ್ನೇ ಮಾತ್ರ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡಿದ್ದರು. ಅವರ ಶಿಷ್ಯರೆಲ್ಲರೂ ತಮ್ಮ ಗುರುಗಳಂತೆಯೇ ಕವಿತಾ ಶಕ್ತಿಯನ್ನು ಪಡೆದಿದ್ದರು. ಅವೆಲ್ಲ ಪದ್ಯಗಳನ್ನು ಸಂಗ್ರಹಿಸಿ ಪ್ರಚುರಪಡಿಸುವದು ಅತ್ಯಂತ ಆವಶ್ಯವಿರುವದು. ಕಾಲಕ್ರಮದಿಂದ ಅವರು ರಚಿಸಿದ ಪದ್ಯಗಳಲ್ಲಿ ಅನೇಕ ದೋಷಗಳು ಸೇರಿದಂತೆ ಕಂಡುಬರುತ್ತವೆ. ಬಲ್ಲವರು ಅವುಗಳನ್ನು ತಿದ್ದಿ ಪ್ರಕಟಿಸುವದು ಅವಶ್ಯವದೆ. ಮ. ರಾ. ರಾ. ರಾಮಚಂದ್ರಪ್ಪ ಬೋನಾಳ ಮು॥ ಮೊರುಟಗಿ ಇವರು ಸಂಗ್ರಹಿಸಿದವುಗಳಲ್ಲಿ ಕೆಲವನ್ನು ನಾನು ಇಲ್ಲಿ ಕೊಟ್ಟದ್ದೇನೆ.

---

೧

ಮೇಲುದ ನಿಲುಕಿಸಿಕೋ ಕಾಯಿ। ಕೆಳಗ್ಹಲುಬಿ ತೆರೆವದ್ಯಾತಕೆ ಬಾಯಿ ॥ಪ॥ ಒಂದೆ ಬೇರಿಗೆ ಮೂರೆಲೆಯಾಗಿ। ಅದಕ್ಹೊಂದಿ ಇಪ್ಪತ್ತೈದು ಶಾಖೆಗಳಾಗಿ। ಮುಂದೆ ಮೂವತ್ತಾರು ಕಾಯಾಗಿ। ಇದರ ಸಂದೇಹ ಬಲ್ಲಣ್ಣಗ ತಿಳಿಯಾಗಿ ॥೧॥ ಹಣ್ಣೊಳು ರಸಪೂರ್ಣ ತುಂಬೇದ। ಆ ಹಣ್ಣು ಕಾಯ್ದುಕೊಂಡೊಂದು ಗಿಳಿಯಾದ। ಕಣ್ಣಿಟ್ಟು ನೋಡು ಕಾಣಿಸುತಾದ ಇದು ಅಣ್ಣಪ್ಪಗಳಿಗೆ ಬಲ್ಲಿದ್ದಾದ ॥೨॥ ನೆಲನೀರು ಕಿಚ್ಚು ಮೇಲಾಕಾಶ। ಅದರೊಳು ಹುಟ್ಟಿ ಬೆಳೆದದ್ದೀದೇಶಾ। ಸಲೆ ಕಲ್ಪವೃಕ್ಷ ಶ್ರೀ ಮಹಾಂತೇಶಾ। ತಾನು ತಿಳಿದಾತನೆ ಬಲ್ಲ ಸರ್ವೇಶಾ ॥೩॥

ಹಲುಬಿ=ಚಿಂತಿಸಿ.

೨

ದಾವಪಥ ದಾವನೆಲೆ ದಾವಸುಖಬಲ್ಲ। ಮೂವರೊಂದಾದರನು ತಿಳಿದಕ್ಹೇಳಿಲ್ಲಿ ॥ಪ॥ ಬ್ರಹ್ಮನಿಂದಲೆ ಜಗವು। ಜಗದಿಂದಲೆ ಬ್ರಹ್ಮ। ಬ್ರಹ್ಮವೆ ಜಗವು ಆ ಜಗವೇ ಪರಬ್ರಹ್ಮ॥೧॥ ಜೀವದಿಂದಲೆ ಅರಿವು। ಅರಿವಿನಿಂದಲೆ ಜೀವ। ಜೀವೆ ಅರಿವು ಆ ಅರಿವೇ ಪರಶಿವನು ॥೨॥ ಬುಡದಿಂದ ನಡುಕಡೆಯೋ। ಕಡೆಯಿಂದ ನಡುಬುಡವೋ। ಬುಡನಡುವೊ ಕಡೆಯೋ। ಕಡೆನಡುವೋ ಬುಡವೋ। ಪೊಡವಿಯೊಳ್ ಕಡಕೋಳ ಒಡೆಯ ಮಹಾಮಹಾಂತನಾವು ಮಡಿವಾಳನು। ವಾಕ್ಯ ಮಡಿವಾಳನು ॥೩॥

ದಾವ=ಯಾವ ಮಡಿವಾಳ=ಶುದ್ಧಮಾಡುವವ.

೩

ಶಿವನಾಮವ ಸ್ಮರಿಸೋ। ಈ ಭವ ಮಾಲೆಯು ಪರಿಹರಿಸೋ ॥ ಪ ॥ ಥೋಡೆ ದಿನದ ಸಂತಿ। ಆತ್ಮನ ನೋಡದೆ ನೀ ಕುಂತಿ। ಕೂಡಿ ಮರೆಗೆ ನಿಂತಿ ತುಳಕಳಿ ಮಾಡುವಳೇ ಕಾಂತಿ॥ ಬ್ಯಾಡೋ ಪರರ ಚಿಂತಿ। ಸಾಕ್ಷಿಮು ಕೇಳಿದರೇನಂತಿ॥ ೧ ॥ ಆಯುಷ್ಯ ಹತ್ಗತ್ತು। ರಾತ್ರಿಗೆ ಹೋದವು ಐವತ್ತು ಪ್ರಾಯುಳ ಇಪ್ಪತ್ತು। ಪ್ರಾಯದ ಘಾಯಿಗೆ ಮೂವತ್ತು। ವಾಯಿಗಿಲ್ಲ ಹೊತ್ತು ನೀ ತಿಳಿ ವ್ಯಾಳ್ಯೆವ್ಯಾಳೆಕೆ ಗೊತ್ತು ॥ ೨ ॥ ಕುಲ ಛಲಕ್ಹೋರಾಡಿ। ತಾ ಪ್ರಜ್ವಲಿಸುವ ಮುಖ ಬಾಡಿ। ಹಲವರಿಗ್ಹಳಿದಾಡಿ। ಪುಣ್ಯದ ಫಲ ಹೋಯಿತು ಝಾಡಿ। ಕಲಕಿನೊಳಗೆ ಕೂಡಿ ನಡದೆಲೊ

ನೆಲಮನೆಗೆಲಿ ಥೋಡಿ ॥ ೩ ॥ ಆಶೆಯು ಹಿಡಿಬ್ಯಾಡ । ಬಹಳ ನಿರಾಶಿಲಿ ಕೆಡುಬ್ಯಾಡ । ದ್ವೇಷವ ತೊಡು ಬ್ಯಾಡ । ಒಬ್ಬರ ದೂಷಿಸಿ ನುಡಿ ಬ್ಯಾಡ । ಭಾಷಿಲೆ ಕೆಡುಬ್ಯಾಡ । ಗುರುಮಹಾಂತೇಶನ ಬಿಡುಬ್ಯಾಡ ॥ ೪ ॥ ಅರ್ಥ ಪ್ರಾಣಾಭಿಮಾನ । ಅವರವರರಿತು ನೀಡೋ ಖಾನ । ಕರ್ತಾ ಶ್ರೀಗುರು ಧ್ಯಾನ । ಅವ್ಯಕ್ತ ತುರ್ತ ಮಾಡೋ ಪಾನ ॥ ೫ ॥

ಥೋಡೆ=ಸ್ವಲ್ಪ, ಕೆಲವು. ನಾಳ್ಯೆಮು=ನಾಳೆಯುಮು. ಹತ್ಹತ್ತು=ನೂರು. ವಾಯು=ಜೀವ. ಹೋರ್‍ಯಾಡಿ=ಜಗಳಾಡಿ. ಹಳಿದಾಡಿ=ನಿಂದಿಸಿ. ಝಾಡಿ= ಎಲ್ಲಾ. ಕಲಕು=ದೋಷ ನೆಲಮನೆ=ಗೋರಿ, ಕುಣಿ, ಸ್ಮಶಾನದಲ್ಲಿಯು ಮನೆ. ಭಾಷಿಲೆ=ಮಾತಿನಿಂದ. ಖಾನ=ಆಹಾರ.

೪

ತನ್ನ ತಾ ತಿಳದ ಮ್ಯಾಲೆ। ಇನ್ನೇನಿನ್ನೇನು। ತನ್ನಂತೆ ಸರ್ವರ ಜೀವಾ। ಮನ್ನಿಸಿ ಮೂಕಾದ ಮ್ಯಾಲೆ ॥ಪ॥ ತಾನೇ ಪೃಥ್ವಿ, ಅಪ್, ತೇಜ, ತಾನೆ ವಾಯು, ಆಕಾಶಾತ್ । ತಾನೆ ಸೂರ್ಯ ಚಂದ್ರ ತಾರಾ। ತಾನೆ ಬ್ರಹ್ಮಾಂಡಾದ ಮ್ಯಾಲೆ ॥೧॥ ತಾನೆ ತ್ವಕ್ಕು ಶ್ರೋತೃಹೃದಯು। ತಾನೇ ಜಿಂಹೆ ನೇತ್ರ ಘ್ರಾಣ। ತಾನೇ ಕಾಯು ಕರಣ ಹರಣ। ತಾನೇ ಪಿಂಡಾಂಡಾದ ಮ್ಯಾಲೆ ॥೨॥ ತಾನೇ ಹೆತ್ತಾ ಅತ್ತಾ ಸತ್ತಾ। ತಾನೇ ಭೃತ್ಯ ತಾನೇ ಮೃತ್ಯ ತಾನೆ ಅರಿತ ಬೆರಿತ ತಾನೆ। ತಾನೇ ಸರ್ವ ಲ್ಲಾದ ಮ್ಯಾಲೆ ॥೩॥ ತಾನೆ ಲಕ್ಷ ಸಾವಿರ ನೂರು। ತಾನೆ ಹತ್ತೊಂಭತ್ತು ಎಂಟು। ಏಳು ಆರು ಐದು। ನಾಲ್ಕು ಮೂರು ಎರಡೊಂದಾದ ಮ್ಯಾಲಿ ॥೪॥ ತಾನೇ ನೀನು ನೀನೇ ತಾನು। ತಾನೆ ಅಲ್ಲಿ ತಾನೆ ಇಲ್ಲಿ। ತಾನೆ ಮಾಹಾಂತ ಮಾಹಾಂತ ತಾನೆ ಏನೋ ಏನೊಂದಾದ ಮ್ಯಾಲೆ ॥೫॥

೫

ಸುಳ್ಳೆ ಸುಳ್ಳೆ ಸುಳ್ಳೆ ನೀ ಮಾಡುವದೆಲ್ಲಾ ॥ಪ॥ ಆಶೆಯುಳಿದು ಪರ ದೇಶವ ತಿರಿದುಂಡೂ ಶ್ರೀಶೈಲ ಉಳವಿ ಹಂಪಿ ಕಾಶೀಯಾತ್ರೆಗಳೆಲ್ಲಾ ॥೧॥ ಪಟ್ಟದಯ್ಯನು ತಾನು। ಕೊಟ್ಟ ಲಿಂಗಕ್ಕೆ ಮನ। ಸಿಟ್ಟು ಪೂಜಿಸಿ ನಯನ। ದೃಷ್ಟಿ ನೋಡುವದೆಲ್ಲಾ ॥೨॥ ಅಷ್ಟಾವರಣವ ಹಿಡಿದು। ಅಷ್ಟಾರ್ಚನೆಯಿಂದ ಶ್ರೇಷ್ಠ ಪೂಜಿತನಾಗಿ। ಮುಟ್ಟಿ ಪೂಜಿಸುವದೆಲ್ಲಾ ॥೩॥ ಆರು ಮೂರರ ಮೇಲೆ। ಏರಿನಿಂದ್ರಲು ಬಲು। ಮೀರಿದ ಉನ್ಮನಿಪ್ರಭೆ।

ಸೂರೆಗೊಂಬುವದೆಲ್ಲಾ ॥೪॥ ಶೇಷನ ಮುಖದೊಳು। ಸೂಸುವ ಅವ್ಯಕ್ತ। ಸಾಸಿರೆಸಳಿನಲ್ಲಿ ಘೋಷ ಕೇಳುವದೆಲ್ಲಾ ॥೫॥ ಬಿಳಿದು ಕೆಂಪದು ಬಂತು। ಒಳಗ ಬಂದದ್ದು ಚಿತ್ತು। ಹಸರು ಹಳದಿ ಕಪ್ಪು ಗೊತ್ತು ಅಂಬುವದೆಲ್ಲಾ ॥೬॥ ನಾನಾ ವಿನೋದದಿ। ಮೌನ ಮಹಾಂತೇಶನು ತಾನೇ ತಾನೆಂಬುವದೊಂದೇ। ನಾನು ನೀನೆಂಬುವದೆಲ್ಲಾ ॥೭॥

ಘೋಷ=ಧ್ವನಿ, ಸೂರೆಗೊಂಬು=ಪ್ರಕಾಶಿಸು.

೬

ಬುಡಕಡೆ ಇಲ್ಲದ ನಿಷ್ಕಲ ಲಿಂಗವ್ವಾ। ಅಡಿಹಿಡಿ ಸಂಗವ್ವಾ। ಜಡದೃಶ್ಯ ಅದೃಶ್ಯ ಆಗುದೆ ಸಿದ್ಧವ್ವಾ। ಬಿಡುಭ್ರಮೆ ಮುದ್ದವ್ವಾ ॥ಪ॥ ಸೋಹಂ ಬ್ರಹ್ಮ ಎಂಬುದೆ ಶೀಲವ್ವಾ। ಭಯುಯಾಕಿಲ್ಲವ್ವಾ। ಲಯ ನಿರ್ಲಯ ಕರಿಗೊಂಬುದು ಎಲ್ಲವ್ವಾ। ನಯನಗಳೆರಡು ಇಲ್ಲದ ಕಲ್ಲವ್ವಾ। ಜಗಜಯುಮಲ್ಲವ್ವಾ ॥೧॥ ಜೀವ ಮನವು ತನುವು ಮರವಿಯು ಮಾಳವ್ವಾ। ದೇವರಗೋಳವ್ವಾ। ಕಾಮನ ರತಿಸುಖ ಯುಮುಮದ ಕಾಳವ್ವಾ। ಪಾವನ ಶ್ರೀಗುರು ಚರಣದ ಧೂಳವ್ವಾ। ಸೇವಿಸಿ ಬಾಳವ್ವಾ ॥೨॥ ಬಲ್ಲಿದ ಮಹಾಂತೇಶನ ನಾಗವ್ವಾ। ಎಲ್ಲಕ ಬಾಗವ್ವಾ। ಇಲ್ಲದ್ದು ಹುಡುಕುದು ಯಾತರ ಯೋಗವ್ವಾ। ತಲ್ಲಣಿಸುವ ತಾಪತ್ರದ ಭೋಗವ್ವಾ। ಸಲ್ಲದು ರಾಗವ್ವಾ ॥೩॥

೭

ಶಿವಲ್ಲಿ ಯಾಕಿನ್ನು ಭೋರಿಗೆ। ಜ್ಞಾದದ ಬಳಕಿಲ್ಲ ನಿನಗಿನ್ನು ಭೋರಿಗೆ ॥ ಪ ॥ ಇಳೆಯೊಳು ಸಂಸಾರ ಭೋರಿಗೆ। ನೀವಾಡಿ ಕೆಡುವಂಥ ಭೋರಿಗೆ। ಹುಟ್ಟೇನು ಹುಟ್ಟದೇನು ಭೋರಿಗೆ। ಹುಟ್ಟಿ ಕೆಟ್ಟ ತನವು ಭೋರಿಗೆ। ಕೊಟ್ಟೇನು ಕೊಂಡೇನು ಭೋರಿಗೆ। ಕೊಟ್ಟು ಇಟ್ಟು ಹಂಗಿಸುವಂಥ ಭೋರಿಗೆ ॥ ೧ ॥ ಜೇಸಿಕೆ ತನುವಿನ್ನು ಭೋರಿಗೆ। ಮೆಚ್ಚಿ ಘಾಸಿಯಾಗಬೇಡ ಭೋರಿಗೆ। ಆಶೆ ತೀರಿದ ಮೇಲೆ ಭೋರಿಗೆ। ತಾಸು ಬಾಳದು ಹುಚ್ಚ ಭೋರಿಗೆ ॥ ೨ ॥ ಓದೇನು ಹಾಡಿ ಏನು ಭೋರಿಗೆ। ಓದಿ ಹಾದಿ ಕಾಣದಂಥ ಭೋರಿಗೆ। ಸಾಧುರನ ಜರಿವಂಥ ಭೋರಿಗೆ। ವೇದನಾದ ಅರಿಯದಂಥ ಭೋರಿಗೆ ॥ ೩ ॥ ನೆಚ್ಚಿಕಿ ತನುವಿನ್ನು ಭೋರಿಗೆ। ಮೆಚ್ಚಿ ಘಾಸಿಯಾಗಬೇಡ ಭೋರಿಗೆ। ನಿದ್ರಿಯು ಮಾಡಬ್ಯಾಡ ಭೋರಿಗೆ।

ನೀ ಎದ್ದು ಕೊಂಡಿರೋ ಭೋರಿಗೆ ॥ ೪ ॥ ಸಜ್ಜನರ ಬದಿಲಿದ್ದು ಭೋರಿಗೆ। ಬಿಟ್ಟು ಕುರಿಹಾಲು ಕುಡಿವಂಥ ಭೋರಿಗೆ। ನರ ದೇಹದೊಳು ಬಂದು ಭೋರಿಗೆ। ಲಕ್ಷ್ಮೀಪುರ ಮಹಾಂರ ಅರಿಯದ ಭೋರಿಗೆ ॥ ೫ ॥

ಬಳಿಕೆ=ಸಂಸ್ಕಾರ, ಫಾಸಿಯಾಗಬೇಡ=ನಾಶಹೊಂದಬೇಡ ಹಾದಿ ಕಾಣದಂಥ= ಸನ್ಮಾರ್ಗ ತಿಳಿಯದಂಥ, ಜರಿ=ನಿಂದಿಸು, ನೆಚ್ಚಿಕಿ=ನಂಬಿದ, ನಿದ್ದಿಯು ಮಾಡಬೇಡ=ಅಜ್ಞಾನದಲ್ಲಿ ಇರಬೇಡ, ಭೋರಿಗೆ=ಒಂದು ಬೈಗಳ.

ಒಮ್ಮೆ ತಾಳೀಕೋಟಿಯ ಪ್ರಸಿದ್ಧರಾದ ಒಬ್ಬ ಫಕೀರರು ಇವರ ಖ್ಯಾತಿಯನ್ನು ಕೇಳಿ ದರ್ಶನಕ್ಕೆಂದು ಕಡಕೋಳಕ್ಕೆ ಬರುತ್ತಿರಲು, ಊರ ಮುಂದಿನ ಹಳ್ಳದಲ್ಲಿಯೇ ಪರಸ್ಪರರ ದರ್ಶನವಾಯಿತು ಆಗ ಅವರ ಗುರುತು ಪರಸ್ಪರರಿಗೆ ಇದ್ದಿರಲಿಲ್ಲ. ಆಗ ಆ ಫಕೀರರು ಮಡಿವಾಳಪ್ಪ ನವರು ಎಲ್ಲಿರುವರೆಂದು ಕೇಳಲು ಆಗ ಮಡಿವಾಳಪ್ಪನವರು ಇಲ್ಲೇ ದಿಬ್ಬದ ಮೇಲಿನ ಗುಡಿಸಲಿನಲ್ಲಿ ಇರುವರೆಂದು ಅವರನ್ನು ಕರೆದೊಯ್ಯು ವಾಗ ತಾವು ಯಾರೆಂದು ವಿಚಾರಿಸಲು ಅವರು ನಾನೊಬ್ಬ ಫಕೀರ ನೆಂದು ಅನ್ನಲು ಆಗ ಫಕೀರನಾಗಬೇಕಾದರೆ ಹೇಗಿರಬೇಕೆಂದು ಹಾಡಿದ ಪದವಿದು.

೮

ಫಕೀರನಾಗಬೇಕಾದರೆ ಮನದ ವಿಕಾರವೆಲ್ಲಾ ಕಳೆಯಬೇಕು। ಅಕಾರ ಉಕಾರ ಮಕಾರ ಓಂಕಾರ ಝೇಂಕಾರನಾದ ಉಳಿದಿರಬೇಕು ॥ಪ॥ ಸತಿಸುತ ಪಿತರೆಂಬ ಮೋಹದ ಮಡಕಿ ಗತಿಲಿಂದ ಅತಿಶಯ ಗಳಿ ದಿರಬೇಕು। ಕೃತಕ ಕೂದಲ ಅತಿ ಗಳೆಯದ ಸುಮತಿ ಎಂಬೋ ಗಡ್ಡಾ ಬೆಳಿಸಿರಬೇಕು ॥ ೧ ॥ ಹಸಿವು ತೃಷೆ ವ್ಯಸನ್ಹಾಸಿಗಳಿಂದ ಮನ ಹಸನ ಮಾಡುವ ಸೊಗಸಿರಬೇಕು। ತುಸು ಮಾತ್ರ ಕಳಿನಸಿ ಮೊಸದಲೆ ಮುಸಲ್ಮಾನ ನಾಗಿ ಬಹಳ ಸೊಗಸಿರಬೇಕು ॥೨॥ ಕಾಮ ಕ್ರೋಧ ಲೋಭ ಮದ ಮೋಹವು ತಾಮಸ ಗುಣಗಳು ಸುಟ್ಟಿರಬೇಕು। ನಾಮ ಶೀಮೆಗಳು ಮುಟ್ಟೀನೆಂಬೋ ಪ್ರೇಮದ ಲುಂಗಿ ಉಟ್ಟಿರಬೇಕು ॥ ೩ ॥ ಸಾಕು ಬೇಕು ಎರಡೇಕ ಮಾಡಿ ಠೀಕಾಗಿ ಕೋಲು ಹಿಡಿದಿರಬೇಕು। ಲೋಕದೊಳಗ ಲವನಾನಾಗಿ ಬಲು ಜೋಕಿಲೆ ಮೇಲಕ್ಕೆ ನಡದಿರಬೇಕು ॥ ೪ ॥ ಸತ್ಯವು ಹಿಡಿದು ಮಿಥ್ಯವು ಕಡಿದು ಕತ್ತಲೆ ಕರ್ಮವು ಕಡದಿರಬೇಕು। ಚೀಲಾ ಮೀರಾ ಮಹಾಂತೇಶನ ಭಜಿಸುತ ಆನಂದ ಅಲಾಯಿ ಆಡಲಿಬೇಕು ॥ ೫ ॥

ಕ್ಷತಕಕೂಡಲ ಲತಿಗಳೆಯದೆ=ಗಡ್ಡಾಬಿಡದೆ, ಠೀಕಾಗಿ = ಚನ್ನಾಗಿ, ಲವಲಾಕನಾಗಿ = ಹೌದೆನಿಸಿಕೊಂಡು, ಮೇಲಕ್ಕೆ ನಡೆದಿರಬೇಕು = ಆತ್ಮಜ್ಞಾನ ಪಡಕೊಳ್ಳುವ ಮಾರ್ಗ ಹಿಡಿದಿರಬೇಕು.

೯

ಧನವು ಗಳಿಸಬೇಕೆಂಥಾದ್ದು । ಈ ಜನರಿಗೆ ತಿಳಿದಂಥಾದ್ದು । ಅನು ದಿನ ಅಜಹರಿ ಮನುಮುನಿ ಇಂದ್ರರು ಹೌದ್ಹಾದೆಂಬುವಂಥಾದ್ದು ಕೊಟ್ಟರೆ ತೀರದಂಥಾದ್ದು । ಇದು ಬಿಟ್ಟರೆ ಹೋಗದಂಥಾದ್ದು । ಬಚ್ಚಿಟ್ಟ ಗಂಟು ಬೈಲಿಗೆ ಇಟ್ಟರೆ ಯಾರೂ ಮುಟ್ಟದಂಥಾದ್ದು ॥೧॥ ಕರ್ಮವ ಬಾರದಂಥಾದ್ದು । ಒಮ್ಮೆರಿಗೂ ಮರ್ಮವ ತೋರದಂಥಾದ್ದು ನಿರ್ಮಲವಾದ ಮನಸ್ಸಿಲೆ ದಾನ ಧರ್ಮ ಬೇರುವಂಥಾದ್ದು ॥೨॥ ಮರಿಯಬಾರದಂಥಾದ್ದು । ನಿಜ ಅರುವಿನಲ್ಲಿರುವಂಥಾದ್ದು । ವರವು ಹೇಳಿದನು ಗುರು ಮಹಾಂತೇಶನು । ಕುರುಹು ಹೇಳಿದಂಥಾದ್ದು ॥೩॥

ಮರ್ಮ = ವೈರತ್ವ, ಕುರುಹು = ಗುರುತು.

---

# ದೇವರ ಅಸ್ತಿತ್ವ ಮತ್ತು ಶಾಸ್ತ್ರೀಯ ಶೋಧಕರು.



ಈಗಿನ ಶಾಸ್ತ್ರೀಯ ಯುಗದಲ್ಲಿ ಶಾಸ್ತ್ರೀಯ ಅಥವಾ ವೈಜ್ಞಾನಿಕ ...ಗಳು ದೇವರ ಅಸ್ತಿತ್ವಕ್ಕೆ ಭಂಗತಂದಿವೆ, ಹಾಗೂ ಅವುಗಳ ತತ್ವಗಳ ...ಿಂದ ದೇವರಿಲ್ಲೆಂದು ದೃಢವಾಗಹತ್ತಿದೆ, ಎಂದು ಬಹು ಜನರು ...ತ್ತಲಿರುವರು. ಇಂಥವರಲ್ಲಿ ವಿದ್ವಾಂಸರೂ ಅತ್ಯುತ್ತಮ ಶೀಲ ಮತ್ತು ...ಪ್ರಘಃವುಳ್ಳವರೂ ಕೂಡ ಇರುವದಾಗಿ ಕಂಡುಬರುತ್ತದೆ. ಇವರಲ್ಲಿ ಕೆಲವರು ತಾವು ನಾಸ್ತಿಕವೆಂದು ಕರೆದುಕೊಳ್ಳುತ್ತಾರೆ. ಕೆಲವರು ತಾವು ಜಡವಸ್ತುವೇ ನಿಜವೆಂದು ತಿಳಿಯುವವರಿದ್ದೇವೆಂದು ಹೇಳಿಕೊಳ್ಳುತ್ತಾರೆ. ಇನ್ನೂ ಕೆಲವರು ತಾವು ಅಜ್ಞೇಯವಾದಿಗಳೆಂದೆನ್ನಿಸಿಕೊಳ್ಳುತ್ತಾರೆ, ಅಂದರೆ ಜಗತ್ತು ತಿಳಿಯಲು ಅಶಕ್ಯವೆಂದೆನ್ನುವವರಿದ್ದಾರೆ. ಬೇರೆ ಕೆಲವರು ಜಗತ್ತಿನಲ್ಲಿ ಯಾವದೂ ಸತ್ಯವಲ್ಲ. ಹಿತಸಾಧನೆಯ ಹೊರ್ತು ಬೇರೊಂದಿಲ್ಲವೆಂದೆನ್ನುವವರೂ ಇದ್ದಾರೆ. ಆದರೆ ಇವರೆಲ್ಲರಲ್ಲಿ ದೇವರಿದ್ದಾನೆಂಬ ಕಲ್ಪನೆ ಇಲ್ಲ. ಅವರು ಶಾಸ್ತ್ರೀಯ ವಿಷಯಗಳು ದೇವರ ಅಸ್ತಿತ್ವವನ್ನು ಹೊಡೆದು ಹಾಕಿರುವವೆಂದು ನಂಬಿರುವರು.

ಆದರೆ ಇಂಥ ತಿಳುವಳಿಕೆಯಲ್ಲಿ ನಿಜಾಂಶವು ಇದೆಯೋ ಹ್ಯಾಗೆ ಎಂಬದನ್ನು ದೃಢಪಡಿಸುವದು ಅತ್ಯಂತ ಮಹತ್ವದ್ದದೆ ಯಾಕಂದರೆ—ಧರ್ಮ ಜಾಗ್ರತೆಗೆ ದೇವರಿದ್ದಾನೆಂಬ ನಂಬಿಗೆಯು ಮೊದಲು ಬೇಕು. ದೇವರಿದ್ದಾನೆಂಬ ತಿಳುವಳಿಕೆಯು ಇಲ್ಲವೆ ಹೋದರೆ ಧರ್ಮವೂ ಕೂಡ ಅದರೊಡನೆ ಹೊರಟುಹೋಗುವದು. ಸಾಂಪ್ರತ ಕಾಲದಲ್ಲಿ ಅತ್ಯದ್ಭುತವಾದ ಶಾಸ್ತ್ರೀಯ ಶೋಧಗಳು ಭರದಿಂದ ಸಾಗಹತ್ತಿವೆ. ಇವುಗಳ ಮೂಲಕ ವಿಶ್ವದಲ್ಲೆಲ್ಲ ಒಬ್ಬ ಚಿದಾತ್ಮನು ವ್ಯವಹರಿಸುತ್ತಾನೆಂಬ ವಿಚಾರಕ್ಕೆ ಇಂಬಿಲ್ಲವೋ ಹ್ಯಾಗೆ ಎಂಬುದೊಂದು ಗೂಢ ಪ್ರಶ್ನೆಯು ಈಗ ಉತ್ಪನ್ನವಾಗಹತ್ತಿದೆ.

ಈ ವಿಷಯದ ಬಗ್ಗೆ ಆಧುನಿಕ ಶಾಸ್ತ್ರಜ್ಞರ ಅಭಿಪ್ರಾಯವೇನೆಂಬದನ್ನು ತಿಳಿಯುವದು ಬಹು ಮಹತ್ವದ್ದದೆ. ಈ ಕಾಲದಲ್ಲಿ ಬೇರೆ ಬೇರೆ ದೇಶಗಳಲ್ಲಿ ಅತ್ಯಂತ ವಿಖ್ಯಾತಿಹೊಂದಿದ ಶಾಸ್ತ್ರಜ್ಞರು ಅನೇಕರಿದ್ದಾರೆ. ಅವರಲ್ಲಿ ಕೆಳಗೆ ಕಾಣಿಸುವವರು ಅತ್ಯಂತ ಮೇಲ್ತರದ ಸ್ಥಾನವನ್ನು ಹೊಂದಿರುವರು. ಅವರ ಹೆಸರುಗಳು ವೈಜ್ಞಾನಿಕ ವಿಷಯ ನಿಪುಣ

ರಲ್ಲಿ ಗೊತ್ತಿಲ್ಲದಿರುವದು ಶಕ್ಯವಿಲ್ಲ. ಇಂಥವರ ಅಭಿಪ್ರಾಯಗಳನ್ನು ನಾವು ಪರೀಕ್ಷಿಸಿ ನೋಡಿದಲ್ಲಿ ಶಾಸ್ತ್ರೀಯ ವಿಷಯಗಳು ಮತ್ತು ಧರ್ಮ ಇವುಗಳಲ್ಲಿ ಪರಸ್ಪರ ವಿರೋಧವಿಲ್ಲ, ಇಷ್ಟೇ ಅಲ್ಲ, ವಿಜ್ಞಾನಶಾಸ್ತ್ರದ ತತ್ವಗಳು ಧಾರ್ಮಿಕ ಮೂಲ ತತ್ವಗಳ ಸತ್ಯತೆಯನ್ನು ಹೆಚ್ಚೆಚ್ಚು ಈಗ ಬಲಪಡಿಸುತ್ತಲಿವೆ ಎಂಬದು ಕಂಡುಬರದೆ ಇರಲಾರದು. ಇವರ ಅಭಿಪ್ರಾಯಗಳನ್ನು ನಾವು ಸಂಕ್ಷೇಪವಾಗಿ ಇಲ್ಲಿ ವಿವರಿಸುತ್ತೇವೆ.

## ಆಲಬರ್ಟ ಈನಸ್ಟೀನ.

ಆಲಬರ್ಟ ಈನಸ್ಟೀನನು ಜರ್ಮನಿಯ ಪ್ರಸಿದ್ಧ ಗಣಿತಜ್ಞನು. ಇವನು ಜ್ಯೂ ಜಾತಿಯವನಾದ್ದರಿಂದ ಹಿಟ್ಲರನ ಕಾನೂನುಗಳಿಗೆ ಒಳಪಟ್ಟು ಜರ್ಮನಿ ದೇಶವನ್ನು ಬಿಟ್ಟುಕೊಟ್ಟು ಅಮೇರಿಕೆಗೆ ಹೋಗಬೇಕಾಯಿತು. ಇವನು ಅನ್ನುವದೇನಂದರೆ:—" ಈಗ ದೇವರಿದ್ದಾನೆಂದು ನನ್ನ ಅಭಿಪ್ರಾಯವಾಗಿದೆ. ಸ್ಪಿನೋಜಾನು ಯಾವ ಬಗೆಯ ದೇವರು ಇದ್ದಾನೆಂದು ಹೇಳುತ್ತಾನೋ ಅಂಥ ದೇವರ ಮೇಲೆ ನನ್ನ ವಿಶ್ವಾಸವಿದೆ. ವಿಶ್ವದಲ್ಲೆಲ್ಲ ಸುವ್ಯವಸ್ಥೆಯು ಇದೆ ಈ ವ್ಯವಸ್ಥೆಯು ವಿಶ್ವದಲ್ಲಿ ಪರಮಾತ್ಮನು ಇದ್ದಾನೆಂಬದನ್ನು ತೋರಿಸಿಕೊಡುತ್ತದೆ. ಜಗತ್ತಿನಲ್ಲೆಲ್ಲ ಅರಿವು ಇದೆ. ಅದು ಹೆಜ್ಜೆಜ್ಜೆಗೆ ತೋರಿಬರುತ್ತದೆ. ಈ ಅರಿವು ಇದ್ದದರಿಂದಲೇ ವಿಶ್ವದಲ್ಲೆಲ್ಲ ಸುವ್ಯವಸ್ಥೆಯು ನೆಲೆಗೊಂಡಿದೆ. ಇದರ ಮೂಲಕವಾಗಿಯೇ ಶಾಸ್ತ್ರಜ್ಞರು ತಮ್ಮ ಭೌತಿಕ ಶೋಧಗಳನ್ನು ಯಾವಾಗಲೂ ಆಶಾಯುಕ್ತರಾಗಿ ನಡಿಸುತ್ತಲಿದ್ದಾರೆ. ಜಗತ್ತು ಆಕಸ್ಮಿಕವಾಗಿ ತಾನಾಗಿಯೇ ಉಂಟಾದ ಒಂದು ವಸ್ತುವಲ್ಲ ಎಂದು ಈನಸ್ಟೀನನು ಅಭಿಪ್ರಾಯಪಟ್ಟಿರುತ್ತಾನೆ.

## ಜೆ. ಎಸ್. ಹಾಲ್ಡೇನ.

ಜಾನ್. ಎಸ್. ಹಾಲ್ಡೇನ ಇವರು ಪೃಥ್ವಿಯಲ್ಲಿ ಅತ್ಯಂತ ಪ್ರಸಿದ್ಧರಾದ ವಿಜ್ಞಾನಶಾಸ್ತ್ರಜ್ಞರು. ಇವರು ಆಕ್ಸಫರ್ಡ ಮತ್ತು ಬರ್ಮಿಂಗ ಹ್ಯಾಮ ವಿಶ್ವವಿದ್ಯಾಲಯಗಳಲ್ಲಿ ಪ್ರೊಫೆಸರರಾಗಿ ಕೆಲಸಮಾಡಿದ್ದಾರೆ. ಇವರು ಅನ್ನುವದೇನಂದರೆ:— ಈ ದೃಶ್ಯ ಜಗತ್ತು ತಾನಾಗಿಯೇ ಉಂಟಾಗಿ ವ್ಯವಹರಿಸುತ್ತಿರುವಂಥ ಒಂದು ಬಗೆಯ ಯಂತ್ರದಂತಿರುವದಿಲ್ಲ. ಆದರೆ ಅದೊಂದು ದೈವೀ ಶಕ್ತಿಯುಳ್ಳದ್ದು (*Spiritual world*) ಎಂದು ನನಗೆ ಅನಿಸುತ್ತದೆ. ಇದರ ಸ್ವರೂಪವು ನಮಗೆ

ಇನ್ನೂ ಪೂರ್ಣವಾಗಿ ತಿಳಿದಿಲ್ಲ. ಆರಿವಾಸಿಯಾಗಿ ನಮ್ಮ ಕಣ್ಣಿಗೆ ಸ್ವಲ್ಪಸ್ವಲ್ಪ ಹೊಳೆಯಹತ್ತಿರುತ್ತದೆ. ಜಗತ್ತಿನ ನಿಜವಾದ ವಸ್ತುವು ಈ ದೈವೀ ಶಕ್ತಿಯುಳ್ಳದ್ದೇ ಇದೆ ಎಂದು ನನಗೆ ಮನವರಿಕೆಯಾಗುತ್ತಲಿದೆ.

ಜಗತ್ತಿನ ಉತ್ಪತ್ತಿ ಮತ್ತು ಅದರ ವ್ಯವಹಾರವು ರಸಾಯನ ಶಾಸ್ತ್ರ ಮತ್ತು ಪದಾರ್ಥ-ವಿಜ್ಞಾನಶಾಸ್ತ್ರ ಇವುಗಳ ತತ್ವಗಳನ್ನು ಮಾತ್ರ ಅನುಸರಿಸಿ ಆದದ್ದು ಅಥವಾ ನಡೆದದ್ದು ಇರುವದಿಲ್ಲೆಂಬದು ಈಗ ಬಹಳವಾಗಿ ದೃಢಪಡುತ್ತ ನಡೆದಿದೆ. ಈಗ ಹೊಸದೊಂದು ವಿಶ್ವರಚನಾಶಾಸ್ತ್ರವು ನಿರ್ಮಾಣವಾಗುವದರಲ್ಲಿ ಇದೆ. ದೃಶ್ಯ ಜಗತ್ತಿನಲ್ಲಿ ನಡೆಯುತ್ತಿರುವ ವ್ಯಾಪಾರಗಳನ್ನು ರಸಾಯನ ಶಾಸ್ತ್ರಜ್ಞರು ಬಾಹ್ಯ ಪ್ರಥಕ್ಕರಣ ಮಾತ್ರ ಮಾಡಬಲ್ಲರು. ಅದರ ಮೂಲಭೂತ ನಿಜಾಂಶಗಳು ಪ್ರಕೃತಿ ಶಾಸ್ತ್ರಗಳಿಂದ ಸಂಪೂರ್ಣವಾಗಿ ಗೊತ್ತಾಗುವವೆಂದು ಮೊದಲಿಗೆ ತಿಳುವಳಿಕೆಯಾಗಿತ್ತು. ಆದರೆ ಹೆಚ್ಚು ಹೆಚ್ಚು ಶೋಧಗಳು ಹೊರಡಹತ್ತಿದಂದಿನಿಂದ ಈ ನಂಬಿಗೆಯು ಕೇವಲ ಭ್ರಾಮಕವೆಂದು ಕಂಡು ಬರಹತ್ತಿದೆ. ಶರೀರರಚನಾ ಶಾಸ್ತ್ರಜ್ಞರೂ ಕೂಡ ಈ ಬಗೆಯ ತಿಳುವಳಿಕೆಯನ್ನೇ ಸ್ವೀಕರಿಸಹತ್ತಿರುವರು. ವಿಶ್ವದ ಬಗ್ಗೆ ಮೊದಲಿಗಿದ್ದ ಯಾಂತ್ರಿಕ ಕಲ್ಪನೆಯು ಅಷ್ಟು ಸಮಾಧಾನಕರವಾಗಿ ಮೊದಲೂ ತೋರಿರಲಿಲ್ಲ. ಮತ್ತು ಮುಂದಾದರೂ ತೋರುವ ಸಂಭವವಿಲ್ಲ. ಈ ಅಭಿಪ್ರಾಯವೇ ಈಗ ಹೆಚ್ಚೆಚ್ಚು ಬಲಗೊಳ್ಳಹತ್ತಿದೆ. ಈಗಿನ ನಮ್ಮ ವಿಜ್ಞಾನ ಶಾಸ್ತ್ರಜ್ಞನಿಗೆ ಒಬ್ಬ ಮನುಷ್ಯನ ಬೆಲೆಗಟ್ಟಲು ಹೇಳಿದಲ್ಲಿ ಅವನು ಮಾಡಲು ಶಕ್ಯವಿರುವ ರೀತಿಯನ್ನು ಕೆಳಗೆ ಕಾಣಿಸಿದಂತೆ ವಿವರಿಸಬಹುದು. ಏನಂದರೆಃ— ಪ್ಲೇಟೋ, ಡಾಂಟೆ, ನ್ಯೂಟನ್ನ ಈನಸ್ಟೀನ ಇವರಂಥ ಮಹಾ ವಿಭೂತಿಗಳ ತಲೆಬುರುಡಿಯಲ್ಲಿಯ ಮಿದುಡು, ಅವರ ಸ್ನಾಯುಗಳು ಹಾಗೂ ಅವರ ಇತರ ಭಾಗಗಳು ಇವುಗಳನ್ನು ತೆಗೆದುಕೊಂಡು ಪೃಥಕ್ಕರಣ ಮಾಡಿ ಅವುಗಳಿಂದ ಹೊರಟ ಸೆಣದಿಂದ ಸಾಬಣದ ಇಂತಿಷ್ಟು ಉದ್ದ ತುಣಕುಗಳಾಗುವವು, ಅವರ ಶರೀರದಲ್ಲಿಯ ಕಬ್ಬಿಣದ ಅಂಶದಿಂದ ಹೆಂಗಸರು ತಲೆಯಲ್ಲ ಸಿಕ್ಕಿಸಿಕೊಳ್ಳುವಂಥ ಟಾಚಣಿಗಳು ಇಂತಿಷ್ಟಾಗುವವು, ಈ ಪ್ರಕಾರ ಅವರ ಶರೀರದಲ್ಲಿಯ ಜೀನಸುಗಳ ಮಾಪನ್ನು ಗೊತ್ತುಪಡಿಸಿ ಅವುಗಳೆಲ್ಲದರ ಒಟ್ಟು ತೂಕ ಇಂತಿಷ್ಟು ಗ್ರೇಣು ಆಗುವದು ಎಂದು ಹೇಳಿಕೊಡಬಹುದು. ಆದರೆ ಮನುಷ್ಯನ

ಯೋಗ್ಯತೆಯನ್ನು ಹೀಗೆ ಕಟ್ಟುವದು ಎಷ್ಟು ಹಾಸ್ಯಾಸ್ಪದವೆಂಬುದು ಕಂಡುಬರದೆ ಇರಲಾರದು.

ಮನುಷ್ಯನ ಯೋಗ್ಯತೆಯು ಅವನ ಬಾಹ್ಯಶಾರೀರಿಕಶಕ್ತಿ ಮತ್ತು ಅವನಲ್ಲಿಯ ದ್ರವ್ಯಗಳು ಇವುಗಳ ಮೇಲೆ ಅವಲಂಬಿಸದೆ ಅದು ಅವನ ಬುದ್ಧಿ ಮತ್ತು ಅವನ ಮಾನಸಿಕಶಕ್ತಿ ಇವುಗಳ ಮೇಲೆ ಅವಲಂಬಿಸಿರುತ್ತದೆ.

ಹಾಗೆಯೇ ಮನುಷ್ಯನು ವಿಶ್ವದಲ್ಲೆಲ್ಲ ವ್ಯಾಪಿಸಿರುವ ವಸ್ತುಗಳ ಭಾರವನ್ನು ಕಂಡುಹಿಡಿಯಬಹುದು. ಅಥವಾ ದೂರದರ್ಶಕ ಯಂತ್ರದ ಸಹಾಯದಿಂದ ಕಣ್ಣಿಗೆ ಅಗೋಚರವಾದ ಚುಕ್ಕಿಗಳನ್ನು ಕಂಡುಹಿಡಿಯಬಹುದು. ಆದರೂ ಅವನ ಮಾನಸಿಕ ಅಂತರಂಗದ ವ್ಯಾಪಾರಗಳಿಗೂ ಬಾಹ್ಯ ಶಾರೀರಿಕ ಸ್ಥೂಲ ವ್ಯಾಪಾರಗಳಿಗೂ ಮಹದಂತರವದೆ. ಕೇವಲ ಜಡವಸ್ತು ಮತ್ತು ಚೈತನ್ಯವಸ್ತು ಇವುಗಳು ಮಾನವೀ ಬುದ್ಧಿಗೆ ನಿಲುಕಲಾರದಷ್ಟು ದೂರದೂರವಾಗಿವೆ.

## ಸರ ಆರ್ಥರ ಎಡ್ಡಿಂಗಟನ್ನ.

ಸರ ಆರ್ಥರ ಎಸ್. ಎಡ್ಡಿಂಗಟನ್ ಎಂಬವರು ಕೇಂಬ್ರಿಜ್ಜ ವಿಶ್ವವಿದ್ಯಾಲಯದಲ್ಲಿ ಒಬ್ಬ ಪ್ರಸಿದ್ಧ ಖಗೋಲಶಾಸ್ತ್ರಜ್ಞರಿರುವರು. ಈ ವಿಷಯದ ಬಗ್ಗೆ ಅವರು ಅನ್ನುವದೇನೆಂದರೆ:— ೧೯ ನೇ ಶತಮಾನದಲ್ಲಿಯ ವೈಜ್ಞಾನಿಕರು ಜಡವಸ್ತುಗಳು ಮತ್ತು ಅವುಗಳಿದ್ದ ದೃಶ್ಯ ಜಗತ್ತು ತಾನಾಗಿಯೇ ವ್ಯವಹರಿಸುತ್ತವೆ ಎಂದು ತಿಳಿಯುತ್ತಿದ್ದರು. ಇಂಥವರು ಆಗ ಬಹು ಜನರಿದ್ದರು. ಆದರಂತೆಯೇ ಮನುಷ್ಯನಿಗೆ ಸ್ವತಂತ್ರತೆ ಎಂಬುದು ಇಲ್ಲ, ಅವನ ಕಾರ್ಯಗಳು ಈ ಪೂರ್ವದಲ್ಲಿಯೇ ನಿಶ್ಚಯಿಸಲ್ಪಟ್ಟಿವೆ, ಅವನ ಅಧೀನತೆಯಲ್ಲಿ ಯಾವದೂ ಇಲ್ಲ. ಮತ್ತು ಅವನ ಕಾರ್ಯಗಳು ತಮ್ಮಷ್ಟಕ್ಕೆ ತಾವೇ ಉಂಟಾಗುತ್ತವೆ ಎಂಬ ವಿಚಾರಗಳುಳ್ಳವರೂ ಆಗ ಅನೇಕರಿದ್ದರು ಅಂದರೆ ಈ ಜಗತ್ತೆಲ್ಲ ಒಂದು ಯಂತ್ರದಂತೆ ತಾನಾಗಿಯೇ ನಡೆದಿರುತ್ತದೆ, ಅದಕ್ಕೆ ಬಾಹ್ಯ ಪ್ರೇರಣೆಯ ಅವಶ್ಯಕತೆ ಇಲ್ಲ, ಪ್ರಾಣಿವರ್ಗಗಳೂ ವನಸ್ಪತಿಗಳೂ ಕೂಡ ಅವುಗಳಿಗೆ ಸಂಬಂಧಪಟ್ಟ ಶಾಸ್ತ್ರೀಯ ತತ್ವಗಳಿಗೆ ಅನುಸಾರವಾಗಿ ನಡೆಯುತ್ತಲಿವೆ ಎಂಬ ಅಭಿಪ್ರಾಯಗಳು ಹೊರಪಡುತ್ತಿದ್ದವು. ಆದರೆ ಆಧುನಿಕ ಶಾಸ್ತ್ರೀಯ ಜ್ಞಾನವು ಇಂಥ ವಿಚಾರಗಳನ್ನು ಹೊರದೂಡಹತ್ತಿದೆ. ಅದು ಈಗ ವಿಶ್ವದಲ್ಲೆಲ್ಲ ಒಂದು ದೈವೀ ಶಕ್ತಿಯು ಅಡಗಿರುತ್ತದೆಂದು ತಿಳಿಯಹತ್ತಿದೆ.

ಮತ್ತು ಆ ಶಕ್ತಿಯು ಮನುಷ್ಯನಲ್ಲಿಯೂ ಕೂಡ ವಾಸಿಸುತ್ತದೆ ಎಂಬ ವಿಚಾರಗಳೂ ಕೂಡ ಉಂಟಾಗಹತ್ತಿವೆ ಹೀಗೆ ಹಿಂದಿನ ನಾಸ್ತಿಕವಾದವು ಈಗ ಹೊರಟುಹೋಗಹತ್ತಿದೆ. ಹೀಗೆ ನಮ್ಮ ಅನುಭವದ ಕಾರ್ಯಗಳಲ್ಲಿ ಮನಸ್ಸಿಗೆ ಉಚ್ಚಸ್ಥಾನವು ದೊರೆಯುಹತ್ತಿದೆ. ಮನಸ್ಸೇ ಮುಖ್ಯವಾದದ್ದು ಮತ್ತು ಅದೇ ನಮಗೆ ಪ್ರತ್ಯಕ್ಷವಾಗಿ ಸಂಬಂಧಿಸಿದ್ದು. ಉಳಿದದ್ದೆಲ್ಲವೂ ಅಪ್ರತ್ಯಕ್ಷವಾಗಿ ದೂರಿನಿಂದ ಅನುಮಾನಪೂರ್ವಕವಾಗಿ ನಮ್ಮ ಮೇಲೆ ಪರಿಣಾಮ ಮಾಡುತ್ತವೇ ಹೊರ್ತು ಬೇರೊಂದಿಲ್ಲ. ಈ ಪ್ರಕಾರ ಧರ್ಮವು ಮನುಷ್ಯನ ಮನಸ್ಸು ಮತ್ತು ಚೈತನ್ಯ ಇವುಗಳಿಗೆ ವಿಶೇಷ ಸಂಬಂಧ ಪಟ್ಟದ್ದಾಗಿದೆ. ಅದನ್ನು ದೂರಮಾಡಲಿಕ್ಕೆ ಬಗಲಾರದು ಎಂದು ಇವರ ಅಭಿಪ್ರಾಯುವದೆ.

## ಕಿರ್ಟ್‌ಲೆ. ಎಫ್. ಮ್ಯಾದರ.

ಕಿರ್ಟ್‌ಲೆ. ಎಫ್. ಮ್ಯಾದರ ಎಂಬವರು ಈಗ ಹಾರ್ವರ್ಡ ವಿಶ್ವವಿದ್ಯಾಲಯದಲ್ಲಿ ಭೂಗರ್ಭಶಾಸ್ತ್ರಜ್ಞರಿರುವರು ಇವರ ಅಭಿಪ್ರಾಯವೇನಂದರೆ:— ಹತ್ತಿಪ್ಪತ್ತು ವರ್ಷಗಳ ಹಿಂದೆ ವಿಶ್ವದಲ್ಲೆಲ್ಲ ತುಂಬಿದ ಶಕ್ತಿಯು ಕಾರಣಗಳನ್ನು ವಿವೇಚಿಸುವಲ್ಲಿ ಹ್ಯಾಗೆ ಒಂದು ಯಂತ್ರವು ನಡೆದಿರುತ್ತದೋ ಹಾಗೆಯೇ ಈ ವಿಶ್ವವೂ ನಡೆದಿರುತ್ತದೆಂದು ಹೇಳಲ್ಪಡುತ್ತಿತ್ತು. ಆದರೆ ಈಚಿಗೆ ಕೆಲವು ವರ್ಷಗಳಲ್ಲಿ ಈ ವಿಚಾರಗಳಿಗೆ ಸಮರ್ಥನೆಯು ದೊರೆಯಲಾರದಂತೆ ಆಗಿದೆ. ನಾವು ದೃಶ್ಯ ಜಡ ವಸ್ತುಗಳನ್ನು ಹೆಚ್ಚು ಹೆಚ್ಚಿಗೆ ಪೃಥಕ್ಕರಣ ಮಾಡಿದ ಹಾಗೆ ಮತ್ತು ವಸ್ತುಗಳ ತಿರುಳು ಏನಿರುತ್ತದೆಂಬದನ್ನು ಶೋಧಿಸುತ್ತ ಹೋದ ಹಾಗೆ ಹೊಸ ಹೊಸ ವಿಚಾರಗಳು ವೈಜ್ಞಾನಿಕರಲ್ಲಿ ಉಂಟಾಗಹತ್ತಿವೆ. ವಿಶ್ವದಲ್ಲೆಲ್ಲ ಒಂದು ಪ್ರಚಂಡ ಶಕ್ತಿಯು ತುಂಬಿರುವದಲ್ಲದೆ ಅದು ಪದಾರ್ಥದ ಅಣುವಿನಲ್ಲಿಯೂ ಕೂಡ ಇರುತ್ತವೆ. ಇದರ ವೈಶಿಷ್ಟ್ಯವು ಯಾಂತ್ರಿಕವಾಗಿರದೆ ಮಾನಸಿಕವಾಗಿರುತ್ತದೆ. ಜಗತ್ತು ಬರೇ ಒಂದು ದೊಡ್ಡ ಯಂತ್ರದಂತಿರದೆ ಅದು ಒಂದು ದೊಡ್ಡ ವಿಚಾರದಂತಿದೆ. ಇದರಲ್ಲಿ ಕಂಡುಬರುವ ಸಂಗತಿಗಳು ಒಂದು ಯಂತ್ರದ ಕ್ರಿಯೆಗಳಂತಿರದೆ ಮಾನಸಿಕ ಕ್ರಿಯೆಗಳಂತೆ ಇವೆ. ಈ ಕಾಲಕ್ಕೆ ವೈಜ್ಞಾನಿಕರು ಪದಾರ್ಥಗಳನ್ನು ಮತ್ತು ಅನೇಕ ಬಗೆಯ ಶಕ್ತಿಗಳನ್ನು ಪೃಥಕ್ಕರಣವನ್ನು ಅತ್ಯಂತವಾಗಿ ಮಾಡಿರುತ್ತಾರೆ. ಅವರ ಪ್ರಯೋಗಗಳಿಂದ ಜಗತ್ತಿನಲ್ಲೆಲ್ಲ ಇರುವ ನಿಜವಾದ ವಸ್ತುವು ಮನಸ್ಸು

ಇದೆ ಎಂದು ಹೆಚ್ಚೆಚ್ಚಿಗೆ ಕಂಡುಬರಹತ್ತಿದೆ. ಇಷ್ಟೇ ಅಲ್ಲ ಈ ಮನಸ್ಸಿನ ಬಾಹ್ಯ ಪ್ರಕಟತೆಯೇ ಜಡವಸ್ತುವಾಗಿದೆ. ದೇವರ ಸ್ವರೂಪದ ಬಗ್ಗೆ ಹೀಗೆ ನನ್ನ ನಂಬಿಗೆಯಾಗಿದೆ. ನನ್ನ ದೃಷ್ಟಿಯಿಂದ ಜಗತ್ತಿನಲ್ಲಿದ್ದ ಎಲ್ಲವೂ ದೇವರು ಮತ್ತು ಈ ದೇವಾಂಶವು ಮನುಷ್ಯನಲ್ಲಿಯೂ ತಲೆದೋರಿ ಅವನ ವ್ಯಕ್ತಿವೈಶಿಷ್ಟ್ಯವನ್ನು ಹೆಚ್ಚುಮಾಡುತ್ತಲಿದೆ.

ಈ ರೀತಿಯಾಗಿ ಇರುವ ಪರಮಾತ್ಮನಲ್ಲಿ ಉತ್ತಮವಾದುದು ಇದೆಯೇ ಹ್ಯಾಗೆ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಜಗತ್ತಿನಲ್ಲಿ ಉತ್ತಮ ಗುಣವುಳ್ಳ ಜನರು ಇರುವದರ ಮೇಲಿಂದ ವಿಶ್ವವ್ಯಾಪಿಯಾದ ಶಕ್ತಿಯಲ್ಲಿಯೂ ಕೂಡ ಉತ್ತಮತನವು ಇದೆ ಎಂದು ಹೇಳಲು ಪ್ರತ್ಯವಾಯವಿಲ್ಲ. ಮತ್ತು ಈ ಉತ್ತಮತನವೇ ಜಗತ್ತಿನಲ್ಲಿ ದಯೆ, ಸತ್ಯ ಮುಂತಾದ ಸದ್ಗುಣಗಳನ್ನು ಉಂಟುಮಾಡುತ್ತದೆ.

## ಆರ್ಥರ. ಎಚ್. ಕಾಂಪಟನ್ನ.

ಆರ್ಥರ. ಎಚ್. ಕಾಂಪಟನ್ನ ಎಂಬವರು ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಪದಾರ್ಥವಿಜ್ಞಾನ ಶಾಸ್ತ್ರದ ಪ್ರಸಿದ್ಧ ಸಂಶೋಧಕರಿರುವರು. ಅವರ ಅಭಿಪ್ರಾಯವೇನಂದರೆಃ— ಮೊದಲಿನ ಪ್ರಗತಿಯ ತತ್ವವು ಈಗಿನ ಹೊಸ ಸಂಶೋಧನದ ಕಾಲದಲ್ಲಿ ಹಳೆಯದಾಗಹತ್ತಿದೆ. ಈ ತತ್ವದ ಪ್ರಕಾರ ವಸ್ತುಗಳು ಸುತ್ತಲಿನ ಪರಿಸ್ಥಿತಿಗೆ ಅನುಸರಿಸಿ ಪ್ರಗತಿಯ ಮಾರ್ಗವನ್ನು ಅನುಸರಿಸುತ್ತಹೊಗುವವೆಂದು ತಿಳಿಯುವದುಂಟು. ಆದ್ದರಿಂದ ಈ ಪರಿಸ್ಥಿತಿಯನ್ನು ಯಾವದು ಚನ್ನಾಗಿ ಎದುರಿಸಬಲ್ಲದೋ ಅದೇ ಮಾತ್ರ ಬಾಳುವದು. ಈ ತರದ ವಿಚಾರಗಳ ಮೂಲಕ ಬೆಳವಣಿಗೆಯು ಬುದ್ಧಿಪುರಸ್ಸರವಾಗಿ ಇರದೆ ಆಕಸ್ಮಿಕವಾದ ಸಂಗತಿಗಳಮೇಲೆ ಅವಲಂಭಿಸಿರುತ್ತವೆಂದು ತಿಳಿಯಬೇಕಾಗುತ್ತದೆ ಆದರೆ ಈಚೆಗೆ ಹೊರಟ ಶಾಸ್ತ್ರೀಯ ಶೋಧಗಳ ಮೂಲಕ ಈ ತಿಳುವಳಿಕೆಯು ನಿಜತತ್ವವನ್ನು ಸ್ಥಿರಪಡಿಸುವದು ಕಠಿಣವಾಗಹತ್ತಿದೆ. ಈಗಿನ ಪದಾರ್ಥವಿಜ್ಞಾನ ಶಾಸ್ತ್ರಜ್ಞರು ಅಭಿಪ್ರಾಯ ಪಡುವದೇನಂದರೆ, ಈ ವಿಶ್ವವು ಅಗಣಿತ ಸೂಕ್ಷ್ಮ ಅಣುಗಳಿಂದ ತುಂಬಿ ಹೋಗಿದ್ದು ಈ ಅಣುಗಳಲ್ಲೆಲ್ಲ ಅನೇಕ ಗುಣಗಳೂ ಅನೇಕ ಬಗೆಯ ಶಕ್ತಿಗಳೂ ಇರುತ್ತವೆ. ಇವುಗಳ ಪರಸ್ಪರ ಆಘಾತ ಪ್ರತ್ಯಾಘಾತಗಳು ಜಗತ್ತಿನಲ್ಲಿ ನಡೆಯುತ್ತಲೇ ಇವೆ. ಆದರೆ ಇವುಗಳಲ್ಲೆಲ್ಲ ಅರಿವು ಎಂಬ

ದೊಂದು ಇದ್ದು ಅದು ತನಗೆ ಬೇಕಾದ ಅಣುಗಳನ್ನು ತನ್ನ ಕಡೆಗೆ ಎಳೆಯುತ್ತದೆಂದು ಭಾವಿಸಲ್ಪಟ್ಟಿದೆ. ಇದರಿಂದ ಜಗತ್ತು ಒಂದು ಉದ್ದೇಶ ಪೂರ್ವಕವಾಗಿ ಪ್ರಕಟವಾಗುತ್ತಲಿದೆ ಎಂದು ತಿಳಿಯಬೇಕಾಗುತ್ತದೆ. ಆದ್ದರಿಂದ ಅದು ಆಕಸ್ಮಿಕವಾಗಿ ತನ್ನಷ್ಟಕ್ಕೇ ತಾನೇ ಪ್ರಕಟವಾದುದಲ್ಲ. ಎಲ್ಲಿ ಅರಿವು ಎಂಬುದು ಇದೆಯೋ ಅಲ್ಲಿ ಸ್ವಾತಂತ್ರ್ಯವುಳ್ಳ ಒಂದು ವಸ್ತುವು ಇದೆ, ಎಂದು ತಿಳಿಯಬೇಕಾಗುತ್ತದೆ. ಮನುಷ್ಯನಿಗೆ ಸ್ವಾತಂತ್ರ್ಯವಿದ್ದದ್ದಾದರೆ ಅವನಲ್ಲಿ ಉದ್ಭವಿಸುವ ವಿಚಾರಗಳು ಕೇವಲ ಅವನ ಪರಮಾಣುಗಳ ಕ್ರಿಯೆಗಳಿಂದಾಗಲಾರವು. ಒಂದು ವೇಳೆ ಹಾಗೆ ತಿಳಿದದ್ದಾದರೆ ಆ ಪರಮಾಣುಗಳ ಕೈವಶದಲ್ಲಿಯೇ ಅವನು ಉಳಿಯತಕ್ಕದ್ದು. ಹೀಗಾದಲ್ಲಿ ಅವನಿಗೆ ಸ್ವಾತಂತ್ರ್ಯವು ಇರಲಾರದು. ಮನುಷ್ಯನಿಗೆ ಸ್ವಾತಂತ್ರ್ಯವಿದೆ, ಎಂದು ಎಣಿಸಿದರೆ ಅವನಲ್ಲಿ ಕೆಲಮಟ್ಟಿಗಾದರೂ ವಿಚಾರ ಶಕ್ತಿಯು ಇರಲೇ ಬೇಕು. ಈ ವಿಚಾರ ಶಕ್ತಿಯು ಬರೇ ಕೇವಲ ಮಿದುಳಿನ ಬಾಹ್ಯ ಕ್ರಿಯೆಯಲ್ಲ. ಈ ಮಿದುಳಿನ ಕ್ರಿಯೆಯು ಕೂಡ ಒಂದು ಅಂತಃ ಶಕ್ತಿಯ ಪರಿಣಾಮವಾಗಿದೆ.

ಹೀಗೆ ಅಂತಃಶಕ್ತಿಯೊಂದಿದೆ ಎಂದು ನಾವು ಗ್ರಹಿಸಿದಕ್ಕೆ ಮಿದುಳಿನ ಕಾರ್ಯಗಳು ನಿಂತುಹೋದರೂ ಕೂಡ ಈ ಶಕ್ತಿಯು ಸಾಯಲಾರದು. ಆದ್ದರಿಂದ ಮನುಷ್ಯನು ಮರಣಹೊಂದಿದರೂ ಕೂಡ ಈ ಅಂತಃಶಕ್ತಿಯ ಮೂಲಕ ಅವನಲ್ಲಿ ಎಚ್ಚರಿಕೆ ಉಳಿಯುವದೆಂಬ ಅನುಮಾನವು ಹೊರಡುವದು. ಹೀಗೆ ಪರಲೋಕವೆಂಬುದೊಂದು ಇದೆ ಎಂದು ತಿಳಿಯಬೇಕಾಗುವದು. ಹೀಗೆ ಅಭಿಪ್ರಾಯವನ್ನು ಆರ್ಥರ ಕಾಂಪಟನ್ನ ಇವರು ತೋರ್ಪಡಿಸಿರುವರು.

## ರಾಬರ್ಟ ಎ. ಮಿಲಿಕ್ಕನ್ನ.

ರಾಬರ್ಟ ಏ. ಮಿಲಿಕನ್ನ ಎಂಬವರು ಪಸಾಡೆನಾ ಎಂಬಲ್ಲಿಯ ಔದ್ಯೋಗಿಕ ಸಂಸ್ಥೆಯಲ್ಲಿ ಪದಾರ್ಥವಿಜ್ಞಾನಶಾಸ್ತ್ರದ ಪ್ರೋಫೆಸರರಿರುವರು. ಇವರ ಅಭಿಪ್ರಾಯವೇನಂದರೆ:— ವಿಶ್ವದಲ್ಲೆಲ್ಲ ನಾನಾ ವಿಧತ್ವವು ತೋರಿ ಬರುತ್ತದೆ. ಆದರೆ ಇದನ್ನೆಲ್ಲ ಒಂದುಗೂಡಿಸುವ ತತ್ವವು ಪರಮಾತ್ಮನಿರುವನು. ಪೃಥ್ವಿಯು ಮೂಲಸ್ಥಿತಿಯಲ್ಲಿ ಸಂಚಲವಾದದ್ದೂ ವಾಯುರೂಪೀ ವಸ್ತುಗಳಿಂದ ಕೂಡಿಕೊಂಡಂಥಾದ್ದೂ ಇದ್ದು ಮುಂದೆ ಬರ

ಬರುತ್ತ ಅದು ಕೋಟ್ಯಾವಧಿ ವರ್ಷಗಳಲ್ಲಿ ಈಗಿನ ಸ್ಥಿರತರವಾದ ಭೂಮಿಯ ಆಕಾರವನ್ನು ಹೊಂದಿದೆ. ಈ ಭೂಮಿಯಲ್ಲಿ ಜೀವಜಂತು ಗಳು ಉತ್ಪನ್ನವಾಗುತ್ತ ಬಂದು ಅವುಗಳಲ್ಲಿ ಮನುಷ್ಯನೆಂಬ ಅಗಾಧ ಪ್ರಾಣಿಯೊಬ್ಬನು ಉದ್ಭವಿಸಿರುವನು. ಮನುಷ್ಯ ಮೊದಲ್ಗೊಂಡು ಎಲ್ಲ ವಸ್ತುಗಳಲ್ಲಿ ಜೀವಕಳೆಯು ಸ್ಫುರಿಸಿದ್ದರಿಂದ ಪೃಥ್ವಿಯಲ್ಲೆಲ್ಲ ಪ್ರಗತಿಯ ಕಾರ್ಯಗಳು ಉಂಟಾಗಿರುತ್ತವೆ. ಇದು ಪರಮಾತ್ಮನ ಅಸ್ತಿತ್ವದ ದ್ಯೋತ ಕವೇ ಇರುತ್ತದೆ. ಈ ಪರಮಾತ್ಮನ ಕಳೆಯು ಮನುಷ್ಯನಲ್ಲಿ ದೈವೀ ಶಕ್ತಿಯ ರೂಪದಿಂದ ವ್ಯವಹರಿಸುತ್ತದೆ. ಇದೆಲ್ಲ ದೇವರ ಅದ್ಭುತ ಕಾರ್ಯ ವಾಗಿದೆ. ಇದಕ್ಕೂ ಹೆಚ್ಚಿನದು ಯಾವದಿರಬೇಕು?

## ಸರ ಜೇಮ್ಸ ಜೀನ್ಸ.

ಸರ್ ಜೇಮ್ಸ ಜೀನ್ಸ ಇವರು ಕೇಂಬ್ರಿಜ ಮತ್ತು ಪ್ರಿನ್ಸಟನ್ನ ಇಲ್ಲಿ ಗಣಿತಶಾಸ್ತ್ರ ಮತ್ತು ಖಗೋಲಶಾಸ್ತ್ರ ಇವುಗಳ ಪ್ರೊಫೆಸರರು ಇರುವರು. ಹಾಗೂ ಇವರು ಗ್ರೇಟಬ್ರಿಟನದ ರಾಯಲ್ ಸೋಸಾಯಿ ಟಿಯ ಸೆಕ್ರೆಟರಿಗಳೂ ಇರುವರು. ಇವರು ಅನ್ನುವದೇನಂದರೆ, ವಿಶ್ವವು ಒಂದು ದೊಡ್ಡ ಯಂತ್ರದಂತೆ ಇರದೆ ಅದೊಂದು ಅರಿವು ಎಂದು ಅನ್ನ ಬಹುದಾಗಿದೆ. ಈಗ ಮಹತ್ವದ ಶಾಸ್ತ್ರೀಯ ಶೋಧಗಳು ಅಸಂಖ್ಯವಾಗಿ ಹೊರಟದ್ದು ಅವೆಲ್ಲವುಗಳೂ ಈ ವಿಚಾರವನ್ನೆ ದೃಢಪಡಿಸುತ್ತವೆ. ಈಗಿನ ಎಲ್ಲ ಶಾಸ್ತ್ರಜ್ಞರು ಬಹುತರವಾಗಿ ಇದೇ ರೀತಿಯ ಅಭಿಪ್ರಾಯವುಳ್ಳವ ರಿರುವರು. ಸೃಷ್ಟ ಪದಾರ್ಥಗಳಲ್ಲಿ ಮನಸ್ಸು ಆಕಸ್ಮಿಕವಾಗಿ ಬಂದುದಲ್ಲ. ಅದರಲ್ಲಿ ಹುಟ್ಟಿಸುವ ಸಾಮರ್ಥ್ಯವಿದೆ. ಅದರಲ್ಲಿ ನಿಯಂತ್ರಣ ಶಕ್ತಿ ಇದೆ. ಈ ಬಗೆಯ ವಿಚಾರಗಳು ಈಗ ರೂಢವಾಗಹತ್ತಿವೆ. ಒಟ್ಟಿಗೆ ವಿಶ್ವವೆಂ ದರೆ ಶುದ್ಧ ಅರಿವು ಎಂದು ಹೇಳಬಹುದು. ಈ ವಿಚಾರದ ಬಗೆಯು ಇನ್ನೂ ಪೂರ್ಣವಾಗಿ ಗೋಚರವಾಗದಿದ್ದರೂ ಈ ಭಾವವು ಹೆಚ್ಚೆಚ್ಚಿಗೆ ವ್ಯಕ್ತವಾಗಹತ್ತಿದೆ. ಮೊದಲಿನ ಕಾಲದಲ್ಲಿ ಶಾಸ್ತ್ರಜ್ಞರಲ್ಲಿ ಜಡವಸ್ತುಗಳ ಗುಣಪರೀಕ್ಷೆಯೇ ಮುಖ್ಯ ಅಭ್ಯಾಸವಾಗಿತ್ತು. ಆದರೆ ಈಗ ಇದರ ದಿಶೆಯು ಬದಲಾಗುವದರಲ್ಲಿ ಇದೆ. ಯಾಕಂದರೆ ಈ ಜಡವಸ್ತುಗಳು ಯಾವವೂ ಸ್ಥಿರವಾಗಿ ಉಳಿಯುವಂತೆ ತೋರುವದಿಲ್ಲ. ಅವು ನಶ್ವರವಾ ಗಿವೆ. ಆದ್ದರಿಂದ ವಿಶ್ವದ ಆಧಾರವಾದುದೂ ಸತ್ಯವಾದುದೂ ಬೇರೊಂದು

ಪದಾರ್ಥ ಇದ್ದು ಅದು ಮನಸ್ಸು ಎಂಬ ವಿಚಾರವು ಈಗ ಬಲಪಡುತ್ತಲಿದೆ ಎಂದು ಹೇಳಿದ್ದಾರೆ.

ಈ ಪ್ರಕಾರ ವಿಜ್ಞಾನ ವಿಷಯ ಬಲ್ಲವರಲ್ಲಿ ಅತ್ಯಂತ ಪ್ರಖ್ಯಾತಿ ಹೊಂದಿದ ಸಂಶೋಧಕರು ಪರಮಾತ್ಮನ ವಿಷಯದಲ್ಲಿ ಯಾವ ಅಭಿಪ್ರಾಯವುಳ್ಳವರಿರುವರೆಂಬದನ್ನು ನಾವು ಮೇಲೆ ವಿವರಿಸಿದ್ದೇವೆ. ಆ ಅಭಿಪ್ರಾಯಗಳೆಲ್ಲ ಒಂದೇ ರೀತಿಯವಾಗಿರುತ್ತವೆ. ಇವುಗಳಿಂದ ನಾವು ತಿಳಿಯತಕ್ಕದ್ದೇನಂದರೆ ವಿಶ್ವದಲ್ಲಿ ಅರ್ಥವಿಲ್ಲದ್ದು ಯಾವದೂ ಇಲ್ಲ. ಆಕಸ್ಮಿಕವಾಗಿ ತಾನೇ ಆದದ್ದೂ ಇರುವದಿಲ್ಲ. ಎಲ್ಲದರಲ್ಲಿಯೂ ದೈವೀಶಕ್ತಿಯು ಇದೆ, ಅರಿವು ಇದೆ. ಎಲ್ಲವೂ ಉದ್ದೇಶಪೂರ್ವಕವಾಗಿ ವ್ಯವಹರಿಸುತ್ತವೆ, ಸತ್ಯವಾಗಿವೆ, ಅತ್ಯುತ್ತಮವಾಗಿವೆ, ಚೈತನ್ಯಯುಕ್ತವಾಗಿವೆ. ಇವೆಲ್ಲವುಗಳ ಪೂರ್ಣತೆಯೇ ದೇವರು.

---

# ಸ್ವಾದಿಯ ಸದಾಶಿವರಾಯ ಮತ್ತು ಬಸವರಾಜರು.

ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಕೆಳದಿಯ ರಾಜರಿಗೂ ಕೊಡಗು ಹಾಗು ಬೀಳಗಿ ಅರಸುಮನೆತನಗಳಿಗೂ ಸಂಬಂಧಿಸಿದ ವೃತ್ತಾಂತ ಗಳು ಅನೇಕ ಸಾರೆ ಬಂದಿರುವವು. ಕರ್ನಾಟಕದ ಈ ಪ್ರಸಿದ್ಧ ರಾಜ ಮನೆತನಗಳ ಸಾಮಾನ್ಯ ವಿವರಣೆಗಳಲ್ಲದೆ ಅವುಗಳಲ್ಲಿ ಆಗಿ ಹೋದ ಅನೇಕ ಪ್ರಸಿದ್ಧ ರಾಜರ ವೃತ್ತಾಂತಗಳೂ ಕೂಡ ಬಂದಿರುತ್ತವೆ. ಅಲ್ಲದೆ ಈ ಪತ್ರಿಕೆಯ ಸಂಪುಟಗಳಲ್ಲಿ ಬೀಳಗಿ ಮತ್ತು ಕೊಡಗು ರಾಜ ವಂಶ ಗಳ ಪುರಾತನ ಸಮಗ್ರ ವೃತ್ತಾಂತಗಳು ಕೊಡಲ್ಪಟ್ಟಿವೆ. ಅದರಂತೆ ಹಾಗಲವಾಡಿ ರಾಜಮನೆತನದಲ್ಲಿ ಆಗಿಹೋದ ಪ್ರತಿಯೊಬ್ಬ ಅರಸನ ಸಂಕ್ಷಿಪ್ತ ವೃಂತಾಂತವು ಹಿಂದಿನ ಸಂಚಿಕೆಯೊಂದರಲ್ಲಿ ಬಂದಿರುತ್ತದೆ. ಇವೆಲ್ಲವುಗಳ ಮೇಲಿಂದ ಈ ವೀರಶೈವ ರಾಜರುಗಳು ಕರ್ನಾಟಕದ ಸಂಸ್ಕೃತಿಯನ್ನು ಹ್ಯಾಗೆ ಎತ್ತಿಹಿಡಿಯುತ್ತಿದ್ದರೆಂಬದು ವಾಚಕರಿಗೆ ಸ್ಪಷ್ಟ ವಾಗದೆ ಇರದು. ಅವರ ಕಾಲದಲ್ಲಿ ಅನೇಕ ಪ್ರಖ್ಯಾತ ಕವಿಗಳೂ ಶಾಸ್ತ್ರ ನಿಪುಣರೂ ವ್ಯಾಕರಣ ಛಂದಶ್ಶಾಸ್ತ್ರ ಬಲ್ಲವರೂ ಉತ್ಪನ್ನರಾಗಿದ್ದುದು ಕಂಡುಬರುತ್ತದೆ. ಈ ರಾಜರಂತೆ ಸ್ವಾದಿಯ ರಾಜರೂ ಕೂಡ ಕರ್ನಾ ಟಕದ ಇತಿಹಾಸದಲ್ಲಿ ಪ್ರಸಿದ್ಧಿಯನ್ನು ಹೊಂದಿರುವರು.

ಸ್ವಾದಿಯ ರಾಜ್ಯವು ಈಗಿನ ಕಾರವಾರ ಜಿಲ್ಹೆಯ ಉತ್ತರಭಾಗ ದಲ್ಲಿ ನೆಲಸಿತ್ತು. ಅಂದರೆ ಈಗಿನ ಶಿರ್ಸಿ, ಯಲ್ಲಾಪುರ, ಹಲ್ಲಿಯಾಳ, ಸುಪಾ ಈ ಪ್ರದೇಶಗಳಲ್ಲಿ ಅಲ್ಲದೆ ಘಟ್ಟದ ಕೆಳಗೆ ಗೋವೆಯ ಸರಹ ದ್ದಿನಿಂದ ಮಿರ್ಜಾನ ನದಿಯ ವರೆಗೂ ಹಬ್ಬಿತ್ತು. ಈ ಪ್ರಾಂತದ ದಕ್ಷಿಣಭಾಗವು ಬಲಾಢ್ಯರಾದ ಕೆಳದಿ ರಾಜರುಗಳ ವಶದಲ್ಲಿ ಇದ್ದುದ ರಿಂದ ಇವರ ರಾಜ್ಯದಲ್ಲಿ ಒಳಸೇರಲು ಇವರಿಗೆ ಶಕ್ಯವಾಗಲಿಲ್ಲ. ಸ್ವಾದಿಯ ರಾಜ್ಯವು ಅತ್ಯಂತ ಫಲದ್ರುಪವೂ ಶ್ರೀಮಂತಿಕೆಯುಳ್ಳದ್ದೂ ಆಗಿತ್ತು. ಇಲ್ಲಿ ಕಾರವಾರ ಮೊದಲಾದ ಮಹತ್ವದ ಬಂದರಗಳಿದ್ದವು. ಇವುಗಳ ಮೂಲಕ ನಡೆಯುತ್ತಿದ್ದ ವ್ಯಾಪಾರದ ಮೂಲಕ ಈ ರಾಜ್ಯಕ್ಕೆ ಒಳ್ಳೇ ಮಹ ತ್ವವು ಒದಗಿತ್ತು. ಅದ್ದರಿಂದ ವಿಜಯನಗರದ ಕೃಷ್ಣರಾಜನು ತನ್ನ ಸಮೀಪದ ಆಪ್ತನಾದ ಅರಸಪ್ಪ ನಾಯಕನನ್ನು ಈ ಭಾಗದ ಸುಭೇ ದಾರನನ್ನಾಗಿ ನೇಮಿಸಿದ್ದನು. ಈ ಅರಸಪ್ಪನಾಯಕನು ಸ್ವಾದಿಯ ಗ್ರಾಮ

ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಇವನೇ ಮುಂದೆ ಸ್ವಾದಿಯ ರಾಜರ ಮೂಲಪುರುಷನಾದನು.

ಅರಸಪ್ಪನಾಯಕನ ತರುವಾಯ ರಾಮಚಂದ್ರನಾಯಕನು ಅವನ ತರುವಾಯ ರಘುನಾಥನಾಯಕನು ರಾಜ್ಯವಾಳಿದರು. ರಘುನಾಥನಾಯಕನ ತರುವಾಯ ಮಧುಲಿಂಗನಾಯಕನು ಪಟ್ಟವೇರಿದನು. ಇವನು ವೀರಶೈವ ಮತವನ್ನು ಸ್ವೀಕರಿಸಿದಂತೆ ತಿಳಿಯುತ್ತದೆ. ಇವನ ಮಗನೇ ಸದಾಶಿವರಾಯನಾಯಕನು. ಅವನು ೧೬೭೪ ರಿಂದ ೧೬೯೭ ರ ವರೆಗೆ ರಾಜ್ಯವಾಳಿದನು. ಸ್ವಾದಿಯ ರಾಜವಂಶದಲ್ಲಿ ಇವನೇ ಅತ್ಯಂತ ಪ್ರಸಿದ್ಧನಾಗಿದ್ದನು. ಇವನ ತರುವಾಯ ಇವನ ಮಗ ಬಸವಲಿಂಗರಾಜನು ಆಳತೊಡಗಿದನು. ಇವನಾದರೂ ತಂದೆಯಂತೆಯೇ ಅತ್ಯಂತ ಪ್ರಸಿದ್ಧಿ ಹೊಂದಿದನು. ಇವನು ೧೬೯೭ ರಿಂದ ೧೭೪೫ ರ ವರೆಗೆ ಆಳಿದನು. ಸ್ವಾದಿಯ ರಾಜರಲ್ಲಿ ಈ ಉಭಯ ರಾಜರ ಆಳಿಕೆಯ ಕಾಲವೇ ಅತ್ಯಂತ ಮಹತ್ವದ್ದಿರುತ್ತದೆ. ಈ ಉಭಯತರ ಸಂಕ್ಷಿಪ್ತ ವೃತಾಂತವನ್ನು ನಾವು ಇಲ್ಲಿ ಕೊಡುತ್ತೇವೆ.

ವಿಜಾಪೂರ ಬಾದಶಹರು ಆಳುವ ವರೆಗೂ ಈ ರಾಜರು ಅವರಿಗೆ ಅಂಕಿತರಾಗಿ ನಡಿಯುತ್ತಿದ್ದರು. ಆ ರಾಜ್ಯವು ೧೬೮೬ ರಲ್ಲಿ ಮುಳುಗಿ ಹೋದ ಬಳಿಕ ಸ್ವಾದಿಯ ಅರಸರು ಸ್ವತಂತ್ರರಾದರು. ಈ ಅರಸರ ಸೈನ್ಯದಲ್ಲಿ ೩೦೦೦ ರಾಹುತರೂ ೧೨೦೦೦ ಕಾಲಾಳುಗಳೂ ಇದ್ದರೆಂದು ಫ್ರಾಯರ್ ಎಂಬ ಪ್ರವಾಸಿಯು ತನ್ನ ಗ್ರಂಥದಲ್ಲಿ ಬರೆದಿರುವನು. ಸದಾಶಿವರಾಯನು ಪಟ್ಟವೇರಿದ ಬಳಿಕ ಅವನು ತನ್ನ ರಾಜ್ಯವನ್ನು ಪಶ್ಚಿಮಕ್ಕೆ ಸಮುದ್ರದ ವರೆಗೂ ಬೆಳಿಸಿದನು.

ಈ ಉಭಯ ಅರಸರ ಕಾಲದಲ್ಲಿ ಇವರ ಮುಖ್ಯ ಎದುರಾಳಿಗಳೆಂದರೆ ಇಂಗ್ಲಿಷರು, ಮತ್ತು ಮರಾಠರು, ಇವರೇ ಆಗಿದ್ದರು. ಇವರಲ್ಲಿ ಪೋರ್ತುಗೀಜರು ಗೋವೆಯಲ್ಲಿ ರಾಜ್ಯವಾಳುತ್ತಿದ್ದರು. ಆದರೆ ಇಂಗ್ಲಿಷರು ಮಾತ್ರ ಈ ಅರಸರ ರಾಜ್ಯದಲ್ಲಿಯೇ ಅಂದರೆ ಕಾರವಾರದಲ್ಲಿ ತಮ್ಮ ಅಂಗಡಿಯನ್ನು ಹಾಕಿಕೊಂಡು ಇದ್ದರು. ಆಗಿನ ಇವರ ಅಂಗಡಿಗಳೆಂದರೆ ಕೋಟೆ ಕೊತ್ತಲುಗಳನ್ನು ಕಟ್ಟಿಕೊಂಡು ಸೈನಿಕರನ್ನು ಅಲ್ಲಿ ಇಟ್ಟುಕೊಂಡು ಜಿನಸುಗಳನ್ನು ಖರೀದಿ ಮಾಡುವದೂ ಪರದೇಶಕ್ಕೆ ಕಳಿಸುವದೂ ಆಗಿ

ದ್ದವು. ಪ್ರಸಂಗ ಬಂದರೆ ಯುದ್ಧಕ್ಕೂ ಅವರು ಸನ್ನದ್ಧರಾಗುತ್ತಿದ್ದರು. ಇಂಗ್ಲಿಷ, ಡಚ್ಚ, ಫ್ರೆಂಚ, ಮತ್ತು ಪೋರ್ತುಗೀಜ ವ್ಯಾಪಾರಸ್ಥರು ಹಿಂದುಸ್ತಾನ ದೇಶದಲ್ಲಿ ಬಂದು ಅಂಗಡಿಕಾರರಾಗಿದ್ದರೂ ಯಾವ ಬಗೆಯ ಕೋಲಾಹಲಗಳನ್ನೆಬ್ಬಿಸಿದರೆಂಬದು ಇತಿಹಾಸ ಪ್ರಸಿದ್ಧವಾಗಿದೆ. ಫ್ರೆಂಚರು ಮತ್ತು ಇಂಗ್ಲಿಷರು ಮದ್ರಾಸ ಮತ್ತು ಕಲಕತ್ತೆಯಲ್ಲಿ ಅಂಗಡಿಗಳನ್ನು ತೆರೆದು ಮುಂದೆ ಅವರು ತಮ್ಮ ತಮ್ಮ ರಾಜ್ಯಗಳನ್ನೇ ಸ್ಥಾಪನೆ ಗೈದರು. ಇದೇ ಬಗೆಯ ಕಾಯಕವನ್ನು ಇಂಗ್ಲಿಷರೂ ಪೋರ್ತುಗೀಜರೂ ಕರ್ನಾಟಕದ ಬಂದರಗಳಲ್ಲಿ ಇದ್ದುಕೊಂಡು ಮಾಡಲೆಣಿಸಿದ್ದರು. ಆದ್ದರಿಂದ ಅವರು ಇಲ್ಲಿಯ ರಾಜ್ಯಗಳಲ್ಲಿ ಕೈಹಾಕಲೂ ಬಗೆಯುತ್ತಿದ್ದರು. ಆದರೆ ಬಲಾಢ್ಯರಾದ ವಿಜಯನಗರದ ಅರಸರ ಮತ್ತು ಪರಾಕ್ರಮಶಾಲಿಗಳೂ ಜಾಣರೂ ಆದ ಕೆಳದಿಯ ಮತ್ತು ಸ್ವಾದಿಯ ರಾಜರುಗಳ ಮೂಲಕ ಇವರ ಆಟವೇನೂ ಇಲ್ಲಿ ನಡೆಯಲಿಲ್ಲ. ಸದಾಶಿವರಾಯ ನಾಯಕನು ಕಾರವಾರವನ್ನು ಕೈವಶಮಾಡಿಕೊಂಡ ಬಳಿಕ ಅಲ್ಲಿದ್ದ ಇಂಗ್ಲಿಷರ ಕಾರವಾರದ ಅಂಗಡಿಯ ಮೇಲೆ ಕಪ್ಪವನ್ನು ಎತ್ತಿದನೆಂಬು ತಿಳಿದು ಬರುತ್ತದೆ. (ಬ್ರೂಸಿಸ ಅನಲ್ಸ) ಇದು ೧೬೭೯ ರಲ್ಲಿ. ಮುಂದೆ ಇಂಗ್ಲಿಷರು ತಮ್ಮ ಈ ಅಂಗಡಿಯನ್ನು ಹಾಗೂ ಹೀಗೂ ಸಾಗಿಸುತ್ತ ಬಂದರು. ಈ ಕಾಲದಲ್ಲಿ ಅವರು ಹುಬ್ಬಳ್ಳಿ ಮೊದಲಾದ ಕರ್ನಾಟಕದ ವ್ಯಾಪಾರದ ಕೇಂದ್ರಸ್ಥಳಗಳ ಕೂಡ ವ್ಯವಹಾರವನ್ನು ನಡಿಸುತ್ತಿದ್ದರು. ಆದರೆ ೧೬೮೮ ರಲ್ಲಿ ಕೆಳಗೆ ಕಾಣಿಸಿದ ಸಂಗತಿ ಸಂಭವಿಸಿತು. ಆಗ ಇಂಗ್ಲಿಷರ ಹಡಗದಲ್ಲಿಯ ಕೆಲವು ನಾವಿಕರು ಕಾರವಾರದಲ್ಲಿಯ ಒಂದು ಆಕಳನ್ನು ಕದ್ದು ಅದನ್ನು ಕೊಂದರು. ಆಗ ಪಟ್ಟಣದ ಜನರು ಸಿಟ್ಟಿಗೆದ್ದು ಅವರ ಅಂಗಡಿಯನ್ನು ಮುತ್ತಿದರು. ಈ ಹೊಡೆದಾಟದಲ್ಲಿ ಪಟ್ಟಣದಲ್ಲಿಯ ಇಬ್ಬರು ಸತ್ತರು. ಆಗ ಜನರು ಹಡಗದಲ್ಲಿ ಹಾಕಿದ್ದ ಮೆಣಸನ್ನು ಕೈವಶಮಾಡಿಕೊಂಡರು. ಆಕಳನ್ನು ಕೊಂದದ್ದಕ್ಕೆ ಕಂಪನಿಯವರು ಲುಕ್ಸಾನ ಕೊಡಲು ಒಪ್ಪಿಕೊಂಡರು. ಆಗ ಈ ಜಗಳವು ನಿಂತಿತು. ಮುಂದೆ ಇಂಗ್ಲಿಷ ವರ್ತಕರು ಕಾರವಾರ ಕೋಟೆಯನ್ನು ಭದ್ರಪಡಿಸುತ್ತ ನಡೆದರು. ಆದರೆ ಸದಾಶಿವರಾಯನ ಮಗನಾದ ಬಸವರಾಜನು ಇದಕ್ಕೆ ಒಪ್ಪದೆ ೧೭೧೫ ರಲ್ಲಿ ಆ ಕೋಟೆಯನ್ನು ಕೆಡಿವಿಬಿಟ್ಟನು. ಮತ್ತು ಸಮೀಪದಲ್ಲಿ ಸದಾಶಿವಗಡ ಎಂಬ ಭದ್ರವಾದ ಕೋಟೆಯನ್ನು ತನ್ನ ತಂದೆಯ ಹೆಸರಿನಿಂದ ಕಟ್ಟಿಸಿದನು. ಇದರಿಂದ ಇಂಗ್ಲಿಷ ವರ್ತಕರಿಗೆ ತಮ್ಮ ಸುರಕ್ಷತೆಗೆ ಭಂಗಬರು

ವದೆಂದು ತೋರಿತು. ಇಂಗ್ಲಿಷರ ಮುಖ್ಯಾಧಿಕಾರಿಯಾದ ಟೇಲರ ಎಂಬ ವನು ಬಸವರಾಜನ ಒಂದು ಹಡಗವನ್ನು ಹಿಡಿದುಕೊಂಡನು. ಆಗ ರಾಜನು ಒಂದು ದಂಡನ್ನು ತೆಗೆದುಕೊಂಡು ಬಂದು ಇಂಗ್ಲಿಷರ ವಸಾಹತಕ್ಕೆ ಎರಡು ತಿಂಗಳ ವರೆಗೆ ಮುತ್ತಿಗೆ ಹಾಕಿದನು. ಇಂಗ್ಲಿಷರ ನೌಕೆಯು ಈ ಮುತ್ತಿಗೆಯನ್ನು ಎಬ್ಬಿಸಲು ಎರಡು ಸಾರೆ ಪ್ರಯತ್ನಿಸಿತು. ಆದರೆ ಅದು ನಿಷ್ಫಲವಾಯಿತು. ಕಡೆಗೆ ಒಬ್ಬ ಮುಸಲ್ಮಾನನ ಮಧ್ಯಸ್ಥಿಕೆಯಿಂದ ಅರಸನು ಈ ಮುತ್ತಿಗೆಯನ್ನು ಎಬ್ಬಿಸಿದನೆಂದು ತಿಳಿಯುತ್ತದೆ. ಆದರೆ ಬಸವರಾಜನು ಇಂಗ್ಲಿಷರ ಕೂಡ ಮುಂದೆ ವಿರೋಧಿಯಾಗಿ ವರ್ತಿಸಹತ್ತಿದ್ದರಿಂದ ಇಂಗ್ಲಿಷರು ಕಾರವಾರದಿಂದ ತಮ್ಮ ಅಂಗಡಿಯನ್ನೇ ಕಿತ್ತುಕೊಂಡು ಹೋಗಬೇಕಾಯಿತು.

ಇಂಗ್ಲಿಷರ ತರುವಾಯ ಸ್ವಾದಿಯ ಅಸಸರಿಗೆ ಮೊಗಲರು ಮತ್ತು ಮರಾಠರು ಇವರೇ ಮುಖ್ಯ ಇದರಾಳಿಗಳಾಗಿ ಉಳಿದರು ವಿಜಾಪೂರ ರಾಜ್ಯವು ಹಾಳಾದ ಬಳಿಕ ಕರ್ನಾಟಕ ಭಾಗವೆಲ್ಲ ಮೊಗಲರ ಕೈಸೇರಿತು. ಮೊಗಲರು ಕೆಳದಿ ಮತ್ತು ಸ್ವಾದಿಯ ಅರಸರ ಮೇಲೆ ದಾಳಿಯನ್ನು ಮಾಡಿದರು. ಆಗ ರಾಜ್ಯವಾಳುತ್ತಿದ್ದ ಸದಾಶಿವರಾಯನಾಯಕನು ಅವರಂಗಜೇಬನಿಗೆ ಕಪ್ಪವನ್ನು ಕೊಡಲು ಒಪ್ಪಿಕೊಂಡನು. ಸದಾಶಿವರಾಯನು ಕೆಲವು ಸಾರೆ ಸಂಭಾಜಿಯ ಕೂಡವೂ ಯುದ್ಧ ಹೂಡುವ ಪ್ರಸಂಗಗಳು ಬಂದವು. ಆದರೆ ಈ ಯಾವ ಯುದ್ಧಗಳಲ್ಲಿಯೂ ಸದಾಶಿವರಾಯನನ್ನು ತನ್ನ ಕೈವಶಮಾಡಿಕೊಳ್ಳಲಿಕ್ಕೆ ಸಂಭಾಜಿಗೆ ಶಕ್ಯವಾಗಲಿಲ್ಲ. ಸಂಭಾಜಯು ಪೋರ್ತುಗೀಜರನ್ನು ಕೆಣಕಿದ್ದರಿಂದ ಈ ಉಭಯತರು ಕೂಡಿಕೊಂಡು ಅವನ ವಿರುದ್ಧ ಯುದ್ಧ ಹೂಡಿದರು. ಆಗ ಸಂಭಾಜಿಯು ಒಂದು ಸೈನ್ಯವನ್ನು ತಾನು ಸ್ವತಃ ತೆಗೆದುಕೊಂಡು ಸ್ವಾದಿಯ ಪಟ್ಟಣದ ಮೇಲೆ ಸಾಗಿಬಂದನು. ಆದರೆ ಇದರ ಪರಿಣಾಮವೇನೂ ಆಗಲಿಲ್ಲವೆಂದು ಆರ್ಮ್ ಎಂಬ ಒಬ್ಬ ಗ್ರಂಥಕಾರನು ತನ್ನ ಇತಿಹಾಸದಲ್ಲಿ ಹೇಳಿದ್ದಾನೆ. ೧೬೮೫ ರಲ್ಲಿ ಇದೇ ಬಗೆಯಾಗಿ ಉಭಯತರಲ್ಲಿ ಪುನಃ ವ್ಯಾಜ್ಯವು ಉಂಟಾಗಲು ಸದಾಶಿವರಾಯನು ಮರಾಠರ ಸ್ವಾಮಿತ್ವವನ್ನು ಸಂಪೂರ್ಣವಾಗಿ ಅಲ್ಲಗಳೆದು ನಾಯಕ ಎಂಬ ಹೆಸರನ್ನು ಬಿಟ್ಟುಕೊಟ್ಟು ರಾಜನೆಂಬ ಬಿರುದನ್ನು ಧರಿಸಿದನು. ಆದರೆ ಈ ಕಾಲದಲ್ಲಿ ಸಂಭಾಜಿಯು ಮೊಗಲರ ಕೂಡ ಯುದ್ಧದಲ್ಲಿ ತೊಡಗಿದ್ದ

ರಿಂದ ಸದಾಶಿವರಾಯನ ವಿರುದ್ಧವಾಗಿ ಅವನು ಏನೂ ಮಾಡಲಾರದವನಾದನು. ಮುಂದೆ ೧೭೫೭ ನೇ ಇಸ್ವಿಯಲ್ಲಿ ಪೇಶ್ವೆ ಬಾಳಾಜಿ ಬಾಜೀರಾಯನು ಕರ್ನಾಟಕದ ಮೇಲೆ ಸ್ವಾರೀಮಾಡಿದನು. ಆಗ ಸ್ವಾದಿಯ ರಾಜ್ಯವು ಅತ್ಯಂತ ಶ್ರೀಮಂತಿಕೆಯುಳ್ಳದ್ದೆಂದು ಬಹು ಪ್ರಸಿದ್ಧಿಯನ್ನು ಹೊಂದಿತ್ತು. ಆದ್ದರಿಂದ ಮರಾಠರ ದಂಡು ಸ್ವಾದಿಯ ರಾಜಧಾನಿಯನ್ನು ಮುತ್ತಿ ಸುಲಿಗೆಯ ಮಾಡಿತು. ಆಗ ಬಸವಲಿಂಗರಾಜನು ರಾಜನಾಗಿದ್ದು ಅವನು ಮರಾಠರಿಗೆ ಚೌಥವನ್ನು ಕೊಡಲು ಒಪ್ಪಿದ್ದರಿಂದ ಅವರಲ್ಲಿ ಒಡಂಬಡಿಕೆಯಾಯಿತು. ಮುಂದೆ ೧೭೫೯ ರಲ್ಲಿಯೂ ಬಸವಲಿಂಗರಾಜನು ಪೇಶ್ವೆಯರ ವಿರುದ್ಧ ಕಾಳಗ ಹೂಡಿದ್ದು ತಿಳಿದು ಬರುತ್ತದೆ. ಆಗ ಅವನು ಪೋರ್ತುಗೀಜರ ಸಹಾಯವನ್ನು ಪಡೆದಿದ್ದನು. ಆದರೆ ಇದರ ಅಂತ್ಯ ಪರಿಣಾಮವೇನಾಯಿತೆಂಬದು ನಮಗೆ ತಿಳಿದು ಬಂದಿಲ್ಲ.

ಸ್ವಾದಿಯ ಅರಸರು ವ್ಯಾಪಾರಾಭಿವೃದ್ಧಿಯ ವಿಷಯದಲ್ಲಿ ಜನರಿಗೆ ಬಹಳ ಸಹಾಯಮಾಡುತ್ತಿದ್ದದರಿಂದ ಅವರ ರಾಜ್ಯವು ಬಹಳ ಸಂಪತ್ತುಳ್ಳದ್ದಾಗಿತ್ತು. ಆ ಕಾಲಕ್ಕೆ ಉತ್ತರ ಕರ್ನಾಟಕದ ಸರಕುಗಳು ಸಿರಸಿ ಸಂಬ್ರಾಣಿ ಹಲ್ಲಿಯಾಳ ಈ ಮಾರ್ಗಗಳಿಂದ ಹಾಯ್ದು ಪಶ್ಚಿಮ ತೀರದ ಬಂದರಗಳಿಗೆ ಸಾಗಿಸಲ್ಪಡುತ್ತಿದ್ದವು. ಸ್ವಾದಿಯ ರಾಜ್ಯದಲ್ಲಿ ಕಾರವಾರ, ಅಂಕೋಲಾ, ಕದರಿಮುಡಿ ಮತ್ತು ಮಿರಜಾನ ಈ ಬಂದರಗಳು ಮುಖ್ಯವಾಗಿದ್ದವು. ಇವೆಲ್ಲವೂ ಆಗ ದೊಡ್ಡ ಪಟ್ಟಣಗಳಾಗಿ ಬಹು ವಿಸ್ತಾರವಾಗಿದ್ದವು. ಹಲ್ಲಿಯಾಳದಲ್ಲಿ ಇಂಗ್ಲಿಷರದೊಂದು ಅಂಗಡಿಯು ಇತ್ತು. ಇಂಗ್ಲಿಷ ಮತ್ತು ಪೋರ್ತುಗೀಜ ವ್ಯಾಪಾರಸ್ಥರು ಹುಬ್ಬಳ್ಳಿಯಲ್ಲಿ ನಿಂತು ಅಲ್ಲಿ ಮಾಲನ್ನು ಖರೀದಿಮಾಡಿ ಪರದೇಶಗಳಿಗೆ ಸ್ವಾದಿಯ ರಾಜ್ಯದೊಳಗಿಂದ ಹಾಯ್ದು ಸಾಗಿಸುತ್ತಿದ್ದರು. ಆಗ ಕಾರವಾರ ಜಿಲ್ಹೆಯಲ್ಲಿಯ ಎಲ್ಲ ವರ್ಗದ ಜನರು ವ್ಯಾಪಾರೋದ್ಯೋಗಗಳಲ್ಲಿ ತೊಡಗಿಕೊಂಡು ಧನಸಂಪನ್ನರಾಗಿದ್ದರು. ಆದ್ದರಿಂದ ಮರಾಠಾ ಮತ್ತು ಪೇಶ್ವೆಯರು ಸ್ವಾದೀ ನಾಡಿನಲ್ಲಿ ಹಾವಳಿಮಾಡಿ ಸುಲಿಗೆಯನ್ನು ಮಾಡಲಿಕ್ಕೆ ಯಾವಾಗಲೂ ಹಾತೊರೆಯುತ್ತಿದ್ದರು. ಆದರೆ ಇದು ಅತ್ಯಂತ ಭದ್ರವಾದ ಮತ್ತು ಬಿಕ್ಕಟ್ಟಿನ ಪ್ರದೇಶವಿದ್ದದರಿಂದ ಅವರ ಆಟವು ಅಲ್ಲಿ ಹೆಚ್ಚಾಗಿ ಸಾಗುತ್ತಿದ್ದಿಲ್ಲ. ಸ್ವಾದಿಯ ರಾಜರು ತಮ್ಮ ವ್ಯಾಪಾರದ ಅಭಿವೃದ್ಧಿಯ ಸಲುವಾಗಿ ಯಾವಾಗಲೂ ಪೋರ್ತುಗೀಜ

ರೊಡನೆ ಸ್ನೇಹದಿಂದ ಇರುತ್ತಿದ್ದರು. ಆದ್ದರಿಂದ ಪೋರ್ತುಗೀಜರ ಯುದ್ಧಗಳಲ್ಲಿ ರಾಜರು ಅವರಿಗೆ ಯಾವಾಗಲೂ ಸಹಾಯ ಮಾಡುತ್ತ ಬಂದರು. ೧೬೯೭ ರಲ್ಲಿ ಪೋರ್ತುಗೀಜರ ಕೂಡ ಅವರು ಒಪ್ಪಂದ ಮಾಡಿಕೊಂಡು ತಮ್ಮಲ್ಲಿಯ ತೇಗಿನ ಕಟ್ಟಿಗೆಯನ್ನು ಹಡಗದಿಂದ ಒಯ್ಯಲು ಮತ್ತು ಕ್ರಿಸ್ತೀಜನರ ಸಲುವಾಗಿ ಒಂದು ದೇವಾಲಯವನ್ನು ಕಟ್ಟಿಸಲು ಅಪ್ಪಣೆ ಕೊಟ್ಟರು. ೧೭೩೫ ರಲ್ಲಿ ಈ ಒಡಂಬಡಿಕೆಯು ಪುನಃ ಸ್ವೀಕರಿಸಲ್ಪಟ್ಟಿತು. ೧೭೪೨ ರಲ್ಲಿಯೂ ಇದೇ ಬಗೆಯ ಒಪ್ಪಂದವಾಗಿ ಸ್ವಾದಿಯ ರಾಜ್ಯದಲ್ಲಿ ಕೆಲವು ಗ್ರಾಮಗಳು ಪೋರ್ತುಗೀಜರಿಗೆ ಕೊಡಲ್ಪಟ್ಟಿದ್ದಲ್ಲದೆ ಪ್ರಾರ್ಥನಾಲಯಗಳನ್ನು ಅಲ್ಲಿ ಕಟ್ಟಲು ಒಪ್ಪಿಗೆಯು ಕೊಡಲ್ಪಟ್ಟಿತು. ಈ ಪ್ರಕಾರ ಸ್ವಾದಿಯ ಅರಸರು ಪೋರ್ತುಗೀಜರೊಡನೆ ಮಿತ್ರತ್ವದಿಂದ ನಡೆದರು. ವಿಜಯನಗರದ ಅರಸರೂ ಕೂಡ ಇದೇ ಬಗೆಯಾಗಿ ಪೋರ್ತುಗೀಜರ ಕೂಡ ನಡೆದದ್ದು ಕಂಡುಬರುತ್ತದೆ.

ಫ್ರಾಯರ ಎಂಬ ಪ್ರವಾಸಿಯು ೧೬೭೬ ರಲ್ಲಿ ಈ ಭಾಗದಲ್ಲಿ ಸಂಚಾರ ಮಾಡಿದನು. ಅವನು ತನ್ನ ವರ್ಣನೆಯಲ್ಲಿ ಹೇಳಿರುವದೇನಂದರೆ— ಸ್ವಾದಿಯ ರಾಜ್ಯವು ಮೆಣಸಿನ ಹುಟ್ಟುವಳಿಗಾಗಿ ಬಹು ಪ್ರಸಿದ್ಧವಾಗಿದೆ. ಇಲ್ಲಿ ಹುಟ್ಟುವ ಈ ಜೀನಸು ಪೃಥ್ವಿಯಲ್ಲೆಲ್ಲ ಅತ್ಯುತ್ತಮವಿದ್ದು ಅದು ಬಹು ತುಟ್ಟಿಯಾಗಿ ಮಾರುತ್ತದೆ. ಈ ರಾಜ್ಯದ ಒಟ್ಟು ಉತ್ಪನ್ನವು ೩೦ ಲಕ್ಷ ಪ್ಯಾಗೋಡಾ ಅಂದರೆ ಸುಮಾರು ೧ ಕೋಟಿ ರೂಪಾಯಿ ಇತ್ತೆಂದು ಬರೆದಿದ್ದಾನೆ. ೧೬೯೫ ರಲ್ಲಿ ಗೇಮಿಲಿ ಎಂಬ ಹೆಸರಿನ ಇಟಾಲಿಯನ್ ಪ್ರವಾಸಿಗನು ಈ ರಾಜ್ಯದಲ್ಲಿ ಹಾಯ್ದು ಹೋದನು. ಅವನು ಅನ್ನುವದೇನಂದರೆ- ಸ್ವಾದಿಯ ಅರಸನು ಪರ್ವತಪ್ರದೇಶದಲ್ಲಿ ರಾಜ್ಯವಾಳುತ್ತಿದ್ದಾನೆ. ಇದು ಶ್ರೀಮಂತ ನಾಡಾಗಿದೆ, ಅರಸನು ಹಲ್ಲಿಯಾಳದ ದಕ್ಷಿಣಕ್ಕೆ ೭ ಮೈಲಿನಮೇಲಿರುವ ಸಾಂಬ್ರಾಣಿಯಲ್ಲಿರುತ್ತಾನೆ. ಅಲ್ಲಿ ದೊಡ್ಡ ವ್ಯಾಪಾರವು ನಡೆಯುತ್ತದೆ. ಈ ಒಂದೇ ಊರಿಂದ ಅವನಿಗೆ ೩ ಲಕ್ಷ ರೂಪಾಯಿ ಉತ್ಪನ್ನವಿರುತ್ತದೆ. ೧೭೨೦ ರಲ್ಲಿ ಹೆಮಿಲ್ಟನ್ ಎಂಬ ಪ್ರವಾಸಿಯು ಬರೆದಿರುವದು ಏನಂದರೆ— ಕಂದರುಗಳಲ್ಲಿ ಧಾನ್ಯವು ಸಮೃದ್ಧಿಯಾಗಿದೆ. ಇಲ್ಲಿ ಅತ್ಯುತ್ತಮ ಮೆಣಸು ಆಗುತ್ತಿದ್ದಂತೆ ಹಿಂದುಸ್ತಾನದಲ್ಲಿ ಬೇರೆ ಯಾವ ಕಡೆಗೂ ಆಗುವದಿಲ್ಲ. ಈ ಎಲ್ಲ ವರ್ಣನೆಗಳ ಮೇಲಿಂದ ಸ್ವಾದಿಯ ರಾಜ್ಯವು ಸಣ್ಣದಿದ್ದರೂ ಕೂಡ ಎಷ್ಟು ವೈಭವಸ್ಥಿತಿಯುಳ್ಳದ್ದು ಇತ್ತೆಂಬದು ಚನ್ನಾಗಿ ತಿಳಿದು ಬರುವಂತಿದೆ.

ಸ್ವಾದಿಯ ಅರಸರು ವಾಙ್ಮಯ ಕಾರ್ಯದಲ್ಲಿಯೂ ಮುಂದಾಗಿದ್ದರು. ಸದಾಶಿವರಾಯನು ಸ್ವತಃ ಒಬ್ಬ ಕವಿಯಾಗಿದ್ದನು. ಅವನು ಸದಾಶಿವನೀತಿ ಒಂದು ಕಾವ್ಯವನ್ನು ಬರೆದಿರುವನು. ಈ ರಾಜರ ಕುಲದೇವತೆಯು ಬನವಾಸಿ ಮಧುಕೇಶ್ವರನೆಂದು ತಿಳಿದುಬರುತ್ತದೆ. ಈ ದೇವಾಲಯಕ್ಕೆ ಅವನು ದೊಡ್ಡ ಉಂಬಳಿಗಳನ್ನು ಹಾಕಿಕೊಟ್ಟಿರುವನು. ಇವನ ರಾಜ್ಯದಲ್ಲಿ ಬನವಾಸಿಯೊಂದಲ್ಲದೆ ಗೋಕರ್ಣ, ಉಳವಿ ಹೀಗೆ ಪ್ರಸಿದ್ಧ ಕ್ಷೇತ್ರಗಳೂ ಇವೆ. ಅವುಗಳಿಗೂ ಆವರು ವಿಶೇಷ ಸಹಾಯ ಮಾಡುತ್ತ ಬಂದರು. ಆರಂಭದ ಕೆಲವು ರಾಜರು ಜೈನ ಧರ್ಮವನ್ನು ಪೋಷಿಸುತ್ತಿದ್ದಹಾಗೆ ಕಂಡುಬರುತ್ತದೆ. ಆದ್ದರಿಂದ ಜೈನ ದೇವಾಲಯಗಳಿಗೂ ಜೈನರಿಗೂ ಇವರು ತುಂಬಾ ಸಹಾಯ ಮಾಡಿದರು. ಸ್ವಾದಿಯಲ್ಲಿ ಅನೇಕ ಜೈನ ಮನೆತನಗಳಿದ್ದು ಅವುಗಳಲ್ಲಿ ಮಹತ್ವದ ಪುರಾತನ ಗ್ರಂಥಗಳು ಇನ್ನೂ ಉಪಲಬ್ಧವಿವೆಂದು ತಿಳಿದುಬರುತ್ತದೆ. ಸದಾಶಿವರಾಯನು ತನ್ನ ರಾಜ್ಯದಲ್ಲಿ ಘಟ್ಟದ ಮೇಲಿನ ಸೀಮೆಗೆ ಬಾಲಾಘಾಟವೆಂತಲೂ ಸಮುದ್ರ ತೀರದ ಪ್ರದೇಶಕ್ಕೆ ಪಯಣಘಾಟವೆಂತಲೂ ವಿಂಗಡಿಸಿ ರಾಜ್ಯದ ವ್ಯವಸ್ಥೆಯನ್ನು ಮಾಡಿದ್ದನೆಂದು ಗ್ರ್ಯಾಂಟ ಎಂಬ ಇತಿಹಾಸಕಾರನು ಹೇಳುತ್ತಾನೆ.

ಈ ಪ್ರಕಾರ ಉಭಯ ರಾಜರ ಬಗ್ಗೆ ಉಪಲಬ್ಧವಿರುವ ವಿಷಯಗಳಿದ್ದು ಇವುಗಳಿಂದ ಇವರು ಅತ್ಯುತ್ತಮ ರೀತಿಯಿಂದ ಸುಮಾರು ೭೫ ವರ್ಷಗಳವರೆಗೆ ಶಾಂತತೆಯಿಂದ ಮತ್ತು ಉತ್ತಮರೀತಿಯಿಂದ ರಾಜ್ಯವಾಳಿದ್ದು ಕಂಡುಬರುತ್ತದೆ. ಆದರೆ ಇದರ ತರುವಾಯ ರಾಜ್ಯವಾಳಿದ ಇಮ್ಮಡಿ ಸದಾಶಿವನು ಬಹಳ ದುರ್ಬಲನಾದ್ದರಿಂದ ರಾಜ್ಯದಲ್ಲಿ ಅವ್ಯವಸ್ಥೆಯಾಯಿತು. ಮತ್ತು ೧೭೬೩ ರಲ್ಲಿ ಹೈದರಲ್ಲಿಯ ಸರದಾರನು ಸ್ವಾದಿಯ ರಾಜ್ಯವನ್ನು ಅಭಿಯೋಗಿಸಲು ರಾಜನು ಓಡಿ ಹೋಗಿ ಪೋರ್ತುಗೀಜರಿಗೆ ಶರಣುಹೋಗಬೇಕಾಯಿತು. ಈ ಪ್ರಕಾರ ಈ ಸ್ವಾದಿಯ ರಾಜ್ಯವು ಮುಂದೆ ಲಯವಾಯಿತು.

ಸ್ವಾದಿಯ ಅರಸರ ಇತಿಹಾಸವನ್ನು ಹಿಂದಿನ ಕಾಲದ ಒಬ್ಬ ಕವಿಯು ಬರೆದಿರುವಂತೆ ನಮ್ಮ ಕೇಳಿಕೆಯಲ್ಲಿ ಇದೆ. ಹಾಗೆಯೇ ಅವರ ಅನೇಕ ವೃತ್ತಾಂತಗಳು ಈ ಭಾಗದಲ್ಲಿ ಇರಬಹುದು. ಆದರೆ ಅವುಗಳನ್ನು ಯಾರೂ ಇನ್ನೂ ವರೆಗೆ ಶೋಧಿಸಿ ಪ್ರಸಿದ್ಧಿಸಿರುವದಿಲ್ಲ. ಇದರಿಂದ ಬೇಳಗಿ, ಕೆಳದಿ ಮತ್ತು ಕೊಡಗು ಈ ರಾಜರ ವಿಷಯದಲ್ಲಿ ನಮಗೆ ತಿಳಿದಷ್ಟು ವೃತ್ತಾಂತ

ಗಳು ಈ ಸ್ವಾದಿಯ ರಾಜರ ಬಗ್ಗೆ ತಿಳಿದು ಬಂದಿಲ್ಲ. ಇದು ಖೇದಕರ ವಾದದ್ದು. ಆದ್ದರಿಂದ ಕರ್ನಾಟಕ ಇತಿಹಾಸ ಸಂಶೋಧಕರು ಇತ್ತ ಕಡೆಗೆ ವಿಶೇಷ ಲಕ್ಷಕೊಡುವರೆಂದು ನಾವು ಹಾರೈಸುತ್ತೇವೆ.

---

# ಸಂಪಾದಕರ ಸೂಚನೆಗಳು.

## ವಿಷಯ ಪರಿಚಯ.

ಈ ಸಂಚಿಕೆಯಲ್ಲಿ ಬಂದ ವಿಷಯಗಳನ್ನು ಪರಿಶೀಲಿಸಿದಲ್ಲಿ ಅವುಗಳ ಲೇಖಕರು ಆಯಾ ವಿಷಯಗಳನ್ನು ಚನ್ನಾಗಿ ಅಭ್ಯಾಸಮಾಡಿ ಅವುಗಳನ್ನು ಬರೆದಿರುವರೆಂಬದು ತತ್‍ಕ್ಷಣವೇ ಗೋಚರವಾಗುವದು. ಈ ಲೇಖಗಳನ್ನು ಕಳಿಸಿದ್ದಕ್ಕೋಸ್ಕರ ಶಿವಾನುಭವ ಪತ್ರಿಕೆಯು ಅವರಿಗೆ ಋಣಿಯಾಗಿದೆ.

ಶ್ರೀ ಪ್ರಭುದೇವರು ಮತ್ತು ಸರ್ವಜ್ಞಕವಿಃ— ಈ ಉಭಯತರು ಕರ್ನಾಟಕದಲ್ಲಿ ಕ್ರಾಂತಿಕಾರಕ ಮಹಾಪುರುಷರಾಗಿರುವರೆಂದು ಹೇಳಬಹುದು. ಶಿ॥ ಮು॥ ಬುದ್ಧಯ್ಯನವರು ತಮ್ಮ ಲೇಖದಲ್ಲಿ ಮಾಡಿದ ವಿಧಾನಗಳನ್ನು ಬಹುಜನರು ಒಪ್ಪಲಿಕ್ಕಿಲ್ಲ. ಆದರೆ ಲೇಖಕರು ಶ್ರೀ ಪ್ರಭುದೇವರ ಮೇಲೆ ಇನ್ನೂ ಕೆಲವು ಲೇಖಗಳನ್ನು ಬರೆಯುವವರಾದ್ದರಿಂದ ಅವು ಮುಗಿಯುವ ವರೆಗೂ ಈ ವಿಧಾನಗಳ ಬಗ್ಗೆ ಯಾರೂ ಚರ್ಚಿಸಬಾರದೆಂದು ಅವರ ಅಪೇಕ್ಷೆ ಇದೆ. ಆದ್ದರಿಂದ ಈ ವಿಷಯದಲ್ಲಿ ನಾವು ಸದ್ಯಕ್ಕೆ ಪ್ರಸ್ತಾಪಿಸುವದು ಉಚಿತ ತೋರುವದಿಲ್ಲ ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳವರ ಲೇಖದಿಂದ ಅವರು ಸರ್ವಜ್ಞನ ಕವಿತೆಗಳನ್ನು ಎಷ್ಟು ಮನಸ್ಸುಗೊಟ್ಟು ಅಭ್ಯಾಸ ಮಾಡಿರುವರೆಂಬದು ಚನ್ನಾಗಿ ತಿಳಿದುಬರುತ್ತದೆ. ಇದು ಅಭಿನಂದನೀಯವೂ ಅನುಕರಣೀಯವೂ ಆಗಿರುತ್ತದೆ. ಆದರೆ ಶಾಸ್ತ್ರಿಗಳವರು ತಮ್ಮ ಲೇಖದಲ್ಲಿ ಸರ್ವಜ್ಞನು ವಚನಕಾರರಕಿಂತಲೂ ಮಿಗಿಲಾದವನೆಂದು ಹೇಳಿದ್ದು ಮಾತ್ರ ಸರಿಯಾಗಲಾರದು. ವಚನಕಾರರಲ್ಲಿ ಭವಿಭಕ್ತಭೇದವೂ, ಅನ್ಯಮತತಿರಸ್ಕಾರವೂ ಇದೆ ಎಂದು ಶಿ॥ ಮೂ॥ ಶಿವ

ಮೂರ್ತಿ ಶಾಸ್ತ್ರಿಗಳವರು ಅವರ ಮೇಲೆ ದೋಷ ಹೊರಿಸಿರುವರು. ಆದರೆ ಪೂರ್ವದ ವಚನಕಾರರಲ್ಲಿ ಈ ಬಗೆಯ ಭೇದಭಾವವು ಇರುವದಿಲ್ಲೆಂದು ನಾವು ಧಾರಾಳವಾಗಿ ಹೇಳಬಹುದು. ಭವಿಯಾದ ಬಿಜ್ಜಳನ ಗದ್ದುಗೆಯ ಕೆಳಗೆ ಓಲೈಸಲು ಬಸವೇಶ್ವರನು ಹಿಂದೆಗೆಯಲಿಲ್ಲ ಇಷ್ಟೇ ಅಲ್ಲ; ಅವನು ಅದನ್ನು ಸಮರ್ಥಿಸಿದ್ದನ್ನು ನಾವು ಲಕ್ಷಿಸುವದು ಅವಶ್ಯವದೆ. ಭಕ್ತಭವಿ ಎಂಬ ಭೇದವನ್ನು ಮಾಡುವ ಅರುವತ್ತನಾಲ್ಕು ಶೀಲಗಳನ್ನು ವಚನಕಾರರು ಚನ್ನಾಗಿ ದೂಷಿಸಿದ್ದನ್ನು ನಾವು ಲಕ್ಷದಲ್ಲಿಡಬೇಕು. ಸರ್ವಜ್ಞನು ತನ್ನ ವಚನಗಳನ್ನು ಪಾಮರರಿಗೋಸ್ಕರ ಲೌಕಿಕ ದೃಷ್ಟಿಯಿಂದ ಬರೆದಿದ್ದಾನೆ. ಆದರೆ ವಚನಕಾರರು ತಮ್ಮ ಉಕ್ತಿಗಳನ್ನು ಪಾರಮಾರ್ಥಿಕ ದೃಷ್ಟಿಯಿಂದ ಶಿವಾನುಭವಿಗಳಿಗೋಸ್ಕರ ಬರೆದಿರುವರು. ಆದ್ದರಿಂದ ಈ ಉಭಯತರನ್ನು ಪರಸ್ಪರ ಹೋಲಿಸಿದ್ದಾದರೆ ತಪ್ಪಾಗುವ ಸಂಭವವಿದೆ.

ಪಾಶ್ಚಿಮಾತ್ಯರ ತತ್ವಜ್ಞಾನ :— ಈ ಲೇಖದಲ್ಲಿ ಮಿ. ಯುಗಟಿಯವರು ಪೃಥ್ವಿಯಲ್ಲಿ ಅತ್ಯಂತ ಪ್ರಸಿದ್ಧರಾದ ಅರಿಸ್ಟಾಟಲ ಮತಗಳನ್ನು ನಿರೂಪಿಸಿರುವರು. ಈ ತತ್ವವೇತ್ತ್ರಿಯ ವಿಚಾರಗಳು ವೀರಶೈವರಿಗೆ ಮನನೀಯವಾಗಿವೆ. ಬಸವನಬಳಗದವರು ಸಾಕ್ರೆಟೀನ ಮತ್ತು ಬಸವ ಎಂಬ ಚಿಕ್ಕ ಲೇಖವನ್ನು ಬರೆದಿರುವರು

ಇತರ ಸಾಮಾನ್ಯ ಲೇಖಗಳು— ಇವು ಈ ಸಂಚಿಕೆಯಲ್ಲಿ ಮೂರು ಇವೆ ದೇವರ ಅಸ್ತಿತ್ವದ ಬಗ್ಗೆ ಆಧುನಿಕ ಶಾಸ್ತ್ರೀಯ ಶೋಧಕರು ಯಾವ ವಿಚಾರವುಳ್ಳವರಿರುವರೆಂಬದನ್ನು ತಿಳಿಯುವದು ಅತ್ಯಂತ ಮಹತ್ವದ್ದದೆ ಆದ್ದರಿಂದ ಈ ವಿಷಯದ ಬಗ್ಗೆ ಬಂದ ಲೇಖವನ್ನು ವಾಚಕರು ಚನ್ನಾಗಿ ಪರಿಶೀಲಿಸುವರೆಂದು ನಂಬಿದೇವೆ. ಉಳಿದ ಎರಡು ಲೇಖಗಳು ನಿಜಸುಖವಾವುದು, ಮತ್ತು ಜರ್ಮನಿಯಲ್ಲಿ ಆರ್ಯಧರ್ಮ ಎಂಬವು ಇವೆ.

ಸ್ವಾದಿಯ ಸದಾಶಿವರಾಯ ಮತ್ತು ಬಸವರಾಜ :— ಸ್ವಾದಿಯ ಅರಸರ ಬಗ್ಗೆ ಬಹು ಸ್ವಲ್ಪ ಲೇಖಗಳು ಈಗ್ಗೆ ಪ್ರಸಿದ್ಧವಾಗಿವೆ ಈ ವರೆಗೆ ಪ್ರಕಟವಾದ ಅಲ್ಪಸ್ವಲ್ಪ ಸಂಗತಿಗಳನ್ನು ಕ್ರೋಢೀಕರಿಸಿ ಈ ಲೇಖನವು ಬರೆಯಲ್ಪಟ್ಟಿದೆ. ಈ ಲೇಖದಿಂದ ಈ ಅರಸರು ಕರ್ನಾಟಕದ ಇತಿಹಾಸದಲ್ಲಿ ಮಾಡಿದ ಮಹತ್ವದ ಕಾರ್ಯಗಳಾವವು ಎಂಬದು ಸ್ಥೂಲರೀತಿಯಿಂದ ಗೊತ್ತಾಗದೆ ಇರದು.

ಶರಣ ಸಾಹಿತ್ಯಃ— ಈ ಸಂಚಿಕೆಯಲ್ಲಿ ನಿಜಾಮು ಇಲಾಖೆಯಲ್ಲಿ ಅತ್ಯಂತ ಪ್ರಸಿದ್ಧಿಹೊಂದಿದ ಕಡಕೋಳ ಮಡಿವಾಳಪ್ಪನವರ ಪದ್ಯಗಳು ಕೆಲವು ಮತ್ತು ಮಲ್ಲೇನಹಳ್ಳಿ ಚನ್ನಬಸವದೇವರು ಮಾಡಿದ ಪದ್ಯಗಳು ಕೊಡಲ್ಪಟ್ಟಿವೆ. ಈ ಉಭಯತರು ಕೇವಲ ಪಾರಮಾರ್ಥಿಕ ವಿಷಯದಲ್ಲಿ ಕಾಲಕಳೆದಿರುವರು. ಆದರೆ ಈ ಪದಗಳನ್ನು ಹಳ್ಳಿಯ ಜನರು ಬಾಯಿಂದ ಅನ್ನುವಾಗ್ಗೆ ಸಂಗ್ರಹಿಸಿದ್ದವಿರುವದರಿಂದ ಇವು ಅಶುದ್ಧವಾಗಿರುವದು ಸ್ವಾಭಾವಿಕವಾಗಿದೆ. ಇವುಗಳನ್ನು ಶ್ರಮಬಟ್ಟು ಸಂಗ್ರಹಿಸಿದ್ದಕ್ಕೆ ಮಿ.ಚ. ಮ. ಕೋರಿ ಮು. ವಿಜಾಪುರ ಹಾಗು ಮಿ. ಎಚ್. ಆರ್. ಮಹಾಂತಯ್ಯ ಮು. ತುಮಕೂರು ಇವರು ಅಭಿನಂದನೀಯರಾಗಿರುವರು.

ಉರಿಲಿಂಗಪೆದ್ದಿಗಳ ವಚನ ಮತ್ತು ಹರಿಹರನ ರಗಳೆಗಳುಃ— ಈ ಸಂಚಿಕೆಯಲ್ಲಿ ಕೆಲವು ದೊಡ್ಡ ಲೇಖಗಳು ಸೇರ್ಪಡೆಯಾದ್ದರಿಂದ ಈ ಮಹತ್ವದ ಗ್ರಂಥಗಳಿಗೆ ಕೊಡತಕ್ಕಷ್ಟು ಪುಟಗಳನ್ನು ಅಸಿರ್ವಾಹಕಕ್ಕಾಗಿ ಕೊಟ್ಟಿರುವದಿಲ್ಲ. ಇದಕ್ಕೋಸ್ಕರ ವಾಚಕರು ಕ್ಷಮಿಸಬೇಕು.

## ಶಿವಾನುಭವಕ್ಕೆ ಪ್ರೋತ್ಸಾಹ.

ಶಿವಾನುಭವ ಪತ್ರಿಕೆಗೆ ಈ ಕಾಲಕ್ಕೆ ಸಹಾಯ ದೊರೆಯುವದು ಅತ್ಯಂತ ಆವಶ್ಯಕವಾಗಿರುವದು. ಈ ಪತ್ರಿಕೆಗೆ ಈಗ ೨೨೪ ಜನ ವರ್ಗಣೀದಾರರು ಮಾತ್ರ ಉಳಿದಿರುವರು. ಈ ಸ್ಥಿತಿಯಲ್ಲಿ ಜಿ. ರಾಯಚೂರ ಮಾನ್ವಿಯ ಶ್ರೀಯುತ ಜಾನೇಕಲ್ಲಗೌಡ ಬಸಪ್ಪನವರು ೭ ಜನ ವರ್ಗಣೀದಾರರನ್ನು ಕೂಡಿಸಿಕೊಟ್ಟದ್ದಕ್ಕಾಗಿ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಈ ಮಹನೀಯರು ಶಿವಾನುಭವಕ್ಕೋಸ್ಕರ ಪ್ರೀತಿಯನ್ನು ವಹಿಸಿ ಯಾವಾಗಲೂ ನಮಗೆ ಸಹಾಯ ಮಾಡುತ್ತಲಿರುವರು. ಇವರ ಅನುಕರಣವನ್ನು ಸಮಾಜದವರು ಮಾಡಿದ್ದಾದರೆ ಗ್ರಂಥ ಸಂಶೋಧನ ಮತ್ತು ಗ್ರಂಥ ಪ್ರಕಟನೆಯ ಮಹತ್ವದ ಕಾರ್ಯವು ತೀವ್ರವಾಗಿ ಆಗುವದಲ್ಲದೆ ಈ ಕಾರ್ಯ ಮಾಡುವವರಿಗೂ ಪ್ರೋತ್ಸಾಹವಾಗುವದು. ಶಿವಾನುಭವ ಪತ್ರಿಕೆಯು ವೀರಶೈವ ಸಂಸ್ಕೃತಿಯ ಒಂದು ವಿಶ್ವಕೋಶದಂತಿವೆ ಎಂಬದನ್ನು ವಾಚಕರು ಲಕ್ಷಿಸಬೇಕೆಂದು ನಮ್ಮ ಸವಿನಯ ಪ್ರಾರ್ಥನೆ ಇದೆ.

ಶ್ರೀಯುತ ಎವ್. ಎನ್. ಶಿವಪ್ಪ ಚಿಕ್ಕಪೇಟೆ ಬೆಂಗಳೂರ ಸಿಟಿ ಇವರು ತಮ್ಮ ಸಹೋದರರ ಲಗ್ನಕಾಲದಲ್ಲಿ ೧ ರೂಪಾಯಿ ಮತ್ತು ಶ್ರೀ ಸಿದ್ಧರಾಮೇಶ್ವರ ಸ್ವಾಮಿ ಮು. ಬೆಲವಂತರ ಇವರು ತಮ್ಮ ತಂದೆಯವ ರಾದ ಚನ್ನಬಸವೇಶ್ವರ ಸ್ವಾಮಿಗಳು ಲಿಂಗೈಕ್ಯರಾದಾಗ್ಗೆ ೨ ರೂಪಾಯಿಗಳನ್ನು ಶಿವಾನುಭವ ಪತ್ರಿಕೆಯ ಪೋಷಣ ದ್ರವ್ಯವಾಗಿ ಕಳಿಸಿದ್ದಕ್ಕೆ ನಾವು ಈ ಮಹನೀಯರಿಗೆ ತುಂಬಾ ಆಭಾರಿಯಾಗಿದ್ದೇವೆ-

## ಶ್ರೀ ಚನ್ನಬಸವೇಶ್ವರ ಸ್ವಾಮಿಗಳವರ ಲಿಂಗೈಕ್ಯವು.

ಇವರು ತಾರೀಖು ೨೮-೬-೩೫ನೇ ದಿವಸ ಬೆಲವಂತರ ಗ್ರಾಮದಲ್ಲಿ ತಮ್ಮ ೯೫ನೇ ವಯಸ್ಸಿನಲ್ಲಿ ಲಿಂಗೈಕ್ಯರಾದ ಬಗ್ಗೆ ನಾವು ಬಹಳ ವಿಷಾದಿಸುತ್ತೇವೆ. ಇವರು ಅತ್ಯಂತ ಧಾರ್ಮಿಕ ವೃತ್ತಿಯವರೂ ಸದ್ಗುಣಿಗಳೂ ಆಗಿದ್ದರು. ಇದರಿಂದ ಇವರು ಎಲ್ಲರಿಗೂ ಬಹಳ ಪ್ರಿಯರಾಗಿದ್ದರು. ಶ್ರೀ ಅಥಣಿ ಶಿವಯೋಗಿಗಳೂ, ಸೊಂಡೂರ ಮಹಾರಾಜರೂ ಇವರ ಬಗ್ಗೆ ಅತ್ಯಂತ ಪೂಜ್ಯಭಾವವುಳ್ಳವರಾಗಿದ್ದರು. ಇವರು ಚನ್ನಬಸವೇಶ್ವರ ಗ್ರಂಥ ಮಾಲೆ ಎಂಬ ಹೆಸರಿನಿಂದ ಮಂಗಲ ಸ್ತೋತ್ರಾವಲಿ ಎಂಬ ಗ್ರಂಥವನ್ನು ಪ್ರಕಟಿಸಿರುವರು. ಮತ್ತು ಇನ್ನೂ ಅನೇಕ ಗ್ರಂಥಗಳನ್ನ ಪ್ರಕಟಿಸುವವ ರಾಗಿದ್ದರು. ಅಷ್ಟರಲ್ಲಿಯೇ ಇವರು ಲಿಂಗೈಕ್ಯರಾದರು. ಇದಕ್ಕೋಸ್ಕರ ನಾವು ಬಹಳ ವಿಷಾದಿಸುತ್ತೇವೆ. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿ ಯನ್ನೀಯಲಿ.

---

ಮಂತ್ರವು ಸಾವಿರವೀ ಮನೆಯಲಿ ಝೇಂಕಾರವು ತಾನಿರ್ಪುದು ಜಿನು ಗದೆ ಸುಸ್ವರಗೈಯುತ ತಾನಾ। ಅನುನಯದಿಂ ಮಹಲಿಂಗವೆಯಾಗಿ ಜನರರಿಯದ ಪಾತಾಳ ಮುಖದಿ। ತಾನಿರುತಲಿ ಶಾಂತಿಕಲಾದಿನಾಮ। ವಿನ್ನರುಪುವೆ ಚಿಚ್ಛಕ್ತಿಗೆ ಒಪ್ಪುವ। ದಿನಪಕೋಟಿ ಪ್ರಭೆ ರೂಪಿಲಿ ಇರ್ದ ವನುತಿಯು ಮುಕ್ತಿ ಸಾದಾಖ್ಯದಲಿ ಪುನರಪಿ ಪೊರ್ದದ ಸಂಜ್ಞೆಗಳಿಂದ। ತೊನೆಯುತ ಸದ್ಭಾವದ ಹಸ್ತದೊಳು। ಸಾನುರಾಗದಿ ಸಮರಸಭಕ್ತಿಲಿ। ಮೌನದಿ ತೃಪ್ತಿಯನಪ್ಪಿಸುತಲ್ಲಿ। ನ್ಯೂನವಿರದೆ ಜ್ಯೋತಿಯ ಆಕಾರವು ನೀನರಿ ಐಕ್ಯನ ಸ್ಥಲವಿದು ಎಂದ ॥೬॥

ಗುರುದಯವಾಗಲ್। ಮರೆದಿರದ್ದೋಗಲ್ಕರಿಷಡ್ವರ್ಗಗಳಿರದ್ದಾಳಾ ಗಲ್ ಪರತರಕೆಳಸಲ್ಕುರುಹಿದು ತೋರಲ್ ಬೆರೆದ್ದೊಕ್ಕರಸಲ್ ನರಭಾ ವರಿಯಲ್ ಪರಿಭವಕೆಡಿಸಲ್ಕರಿವುರೆ ನಿಲಲ್ಸುರ ರೋಲ್ಸೈಸಲ್ಸುಖ ಚಿರವಾ ಗಲ್ಸರಿ ಮಿಗಿಲಿಲ್ಲದನೇ ವರಗುರುವೆಂದರಿಯುತ ನಂಬಲಸ್ಥಿರವಿಂತಾಗಲ್ಪ ರಿಕಿಸಿ ದೇಹದೊಳರಸುತ ನೋಡಲ್ಪರದಿ ಚಕ್ರಗಳಿರವಿಂತೆನುತ ಪರ ಮುಮುಕ್ಷುಗಳರಿವರು ಎಂಬೀ ಭರವಸೆಯಿಂದಾ ನರಿತಷ್ಟು ಸುರಿದೆ ಗುರಿ ಯಲಿ ಮಗ್ನರಾಗುವೆನೆಂಬುವರಿದ ನರಿಯಲ್ಬೇರಿಲ್ಲವೆಂಬ ಬಹು ಯೋಗ ಗಳರಿಯಲ್ಕರಿದಲ್ಲವು ಇದು ಸಿದ್ಧಿಸೆ ಕರಕರಕಾಡುವ ಮಾಯೆಯನೀಗುವ ಕುರುಹಿದು ಎನ್ನುತ ಸೋಮೆಕಟ್ಟೆ ಗುರುವರ ಪೇಳಿದ ಪರಿಯಿದು ಆದರಿಂ ಒರೆದೆನು ಮಲ್ಲನ ಪುರದೊಳಗಿದನು ॥೭॥

---

## ನೊಣವಿನ ಕೆರೆಯ ವರ್ಣನೆ.

ರಾಗ ಲಾವಣಿ.

---

ಸಾರತರ ಭಾರತಖಂಡದಿ, ಭೂನಾರಿ ವದನದಂತೆ
ತೋರುವ ಮೌಕ್ತಿಕ ಪುರವನು ವರ್ಣಿಪರಾರಪಾರವಂತೆ ॥ ಪ ॥

ಪುರ ಹೊರ ಭಾಗದಿ ಸುರನದಿಯಂದದಿ ಕೆರೆಯು ನಿರ್ಮಲಂತೆ।
ಪರಿಯುವ ತೊರೆ ಕಾಲುವೆ ಕಾವೇರಿ ಸರಿ ಸಮಾಂತುದುಪಿಂತೆ ॥
ಪರಿ ಶೋಭಿಸ ಉಪವನದ ಸೊಬಗು ಸಿರಿಧರನ ಮೋಹಿಪಂತೆ।
ವರ ಕದಳಿಯು ನಾರಂಗ, ಕ್ರಮುಕ ಫಲವೆರಸಿ ಸಾರ್ಪುದಂತೆ ॥ ೧ ॥

ಶ್ರೀಯುತ ಎಮ್. ಎನ್. ಶಿವಪ್ಪ ಚಿಕ್ಕಪೇಟೆ ಬೆಂಗಳೂರ ಸಿಟಿ ಇವರು ತಮ್ಮ ಸಹೋದರರ ಲಗ್ನಕಾಲದಲ್ಲಿ ೧ ರೂಪಾಯಿ ಮತ್ತು ಶ್ರೀ ಸಿದ್ಧರಾಮೇಶ್ವರ ಸ್ವಾಮಿ ಮು. ಬೆಲವಂತರ ಇವರು ತಮ್ಮ ತಂದೆಯವರಾದ ಚನ್ನಬಸವೇಶ್ವರ ಸ್ವಾಮಿಗಳು ಲಿಂಗೈಕ್ಯರಾದಾಗ್ಗೆ ೨ ರೂಪಾಯಿಗಳನ್ನು ಶಿವಾನುಭವ ಪತ್ರಿಕೆಯ ಪೋಷಣ ದ್ರವ್ಯವಾಗಿ ಕಳಿಸಿದ್ದಕ್ಕೆ ನಾವು ಈ ಮಹನೀಯರಿಗೆ ತುಂಬಾ ಆಭಾರಿಯಾಗಿದ್ದೇವೆ-

## ಶ್ರೀ ಚನ್ನಬಸವೇಶ್ವರ ಸ್ವಾಮಿಗಳವರ ಲಿಂಗೈಕ್ಯವು.

ಇವರು ತಾರೀಖು ೨೮-೬-೩೫ನೇ ದಿವಸ ಬೆಲವಂತರ ಗ್ರಾಮದಲ್ಲಿ ತಮ್ಮ ೯೫ನೇ ವಯಸ್ಸಿನಲ್ಲಿ ಲಿಂಗೈಕ್ಯರಾದ ಬಗ್ಗೆ ನಾವು ಬಹಳ ವಿಷಾದಿಸುತ್ತೇವೆ. ಇವರು ಅತ್ಯಂತ ಧಾರ್ಮಿಕ ವೃತ್ತಿಯವರೂ ಸದ್ಗುಣಿಗಳೂ ಆಗಿದ್ದರು. ಇದರಿಂದ ಇವರು ಎಲ್ಲರಿಗೂ ಬಹಳ ಪ್ರಿಯರಾಗಿದ್ದರು. ಶ್ರೀ ಅಥಣಿ ಶಿವಯೋಗಿಗಳೂ, ಸೊಂಡೂರ ಮಹಾರಾಜರೂ ಇವರ ಬಗ್ಗೆ ಅತ್ಯಂತ ಪೂಜ್ಯಭಾವವುಳ್ಳವರಾಗಿದ್ದರು. ಇವರು ಚನ್ನಬಸವೇಶ್ವರ ಗ್ರಂಥಮಾಲೆ ಎಂಬ ಹೆಸರಿನಿಂದ ಮಂಗಲ ಸ್ತೋತ್ರಾವಲಿ ಎಂಬ ಗ್ರಂಥವನ್ನು ಪ್ರಕಟಿಸಿರುವರು. ಮತ್ತು ಇನ್ನೂ ಅನೇಕ ಗ್ರಂಥಗಳನ್ನ ಪ್ರಕಟಿಸುವವರಾಗಿದ್ದರು. ಅಷ್ಟರಲ್ಲಿಯೇ ಇವರು ಲಿಂಗೈಕ್ಯರಾದರು. ಇದಕ್ಕೋಸ್ಕರ ನಾವು ಬಹಳ ವಿಷಾದಿಸುತ್ತೇವೆ. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

---

ಮಂತ್ರವು ಸಾವಿರವೀ ಮನೆಯುಲಿ ಝೇಂಕಾರವು ತಾನಿರ್ಪುದು ಜಿನು ಗದೆ ಸುಸ್ವರಗೈಯುತ ತಾನಾ। ಅನುನಯದಿಂ ಮಹಲಿಂಗವೆಯಾಗಿ ಜನರರಿಯದ ಪಾತಾಳ ಮುಖದಿ। ತಾನಿರುತಲಿ ಶಾಂತಿಕಲಾದಿನಾಮ। ವಿನ್ನರುಪುವೆ ಚಿಚ್ಛಕ್ತಿಗೆ ಒಪ್ಪುವ। ದಿನಪಕೋಟಿ ಪ್ರಭೆ ರೂಪಿಲಿ ಇರ್ದ ವನುತಿಯು ಮುಕ್ತಿ ಸಾದಾಖ್ಯದಲಿ ಪುನರಪಿ ಪೊರ್ದದ ಸಂಜ್ಞೆಗಳಿಂದ। ತೊನೆಯುತ ಸದ್ಭಾವದ ಹಸ್ತದೊಳು। ಸಾನುರಾಗದಿ ಸಮರಸಭಕ್ತಿಲಿ। ಮೌನದಿ ತೃಪ್ತಿಯುನರ್ಪಿಸುತಲ್ಲಿ। ನ್ಯೂನವಿರದೆ ಜ್ಯೋತಿಯ ಆಕಾರವು ನೀನರಿ ಐಕ್ಯನ ಸ್ಥಲವಿದು ಎಂದ ॥೬॥

ಗುರುದಯವಾಗಲ್। ಮರೆದಿರದ್ಯೋಗಲ್ಕರಿಷಡ್ವರ್ಗಗಳಿರದ್ದಾಳಾ ಗಲ್ ಪರತರಕೆಳಸಲ್ಕುರುಹಿದು ತೋರಲ್ ಬೆರೆದ್ಯೊಕ್ಕರಸಲ್ ನರಭಾ ವರಿಯಲ್ ಪರಿಭವಕೆಡಿಸಲ್ಕರಿವುರೆ ನಿಲಲ್ಸುರ ರೋಲೈಸಲ್ಸುಖ ಚಿರವಾ ಗಲ್ಸರಿ ಮಿಗಿಲಿಲ್ಲದನೇ ವರಗುರುವೆಂದರಿಯುತ ನಂಬಲಸ್ಥಿರವಿಂತಾಗಲ್ಪ ರಿಕಿಸಿ ದೇಹದೊಳರಸುತ ನೋಡಲ್ಪರದಿ ಚಕ್ರಗಳಿರವಿಂತೆನುತ ಪರ ಮುಮುಕ್ಷುಗಳರಿವರು ಎಂಬೀ ಭರವಸೆಯಿಂದಾ ನರಿತಷ್ಟು ಸುರಿದೆ ಗುರಿ ಯುಲಿ ಮಗ್ನರಾಗುವೆನೆಂಬುವರಿದ ನರಿಯಲ್ಬೇರಿಲ್ಲವೆಂಬ ಬಹು ಯೋಗ ಗಳರಿಯಲ್ಕರಿದಲ್ಲವು ಇದು ಸಿದ್ಧಿಸೆ ಕರಕರಕಾಡುವ ಮಾಯೆಯುನೀಗುವ ಕುರುಹಿದು ಎನ್ನುತ ಸೋವೆುಕಟ್ಟೆ ಗುರುವರ ಪೇಳಿದ ಪರಿಯಿದು ಆದರಿಂ ಒರೆದೆನು ಮಲ್ಲನ ಪುರದೊಳಗಿದನು ॥೭॥

---

## ನೊಣವಿನ ಕೆರೆಯು ವರ್ಣನೆ.

ರಾಗ ಲಾವಣಿ.

ಸಾರತರ ಭಾರತಖಂಡದಿ, ಭೂನಾರಿ ವದನದಂತೆ
ತೋರುವ ಮಕ್ಷಿಕ ಪುರವನು ವರ್ಣಿಸರಾರಪಾರವಂತೆ ॥ ಪ ॥

ಪುರ ಹೊರ ಭಾಗದಿ ಸುರನದಿಯಂದದಿ ಕೆರೆಯು ನಿರ್ಮಲಂತೆ।
ಪರಿಯುವ ತೊರೆ ಕಾಲುವೆ ಕಾವೇರಿ ಸರಿ ಸಮಾಂತುದುಪಿಂತೆ ॥
ಪರಿ ಶೋಭಿಪ ಉಪವನದ ಸೊಬಗು ಸಿರಿಧರನ ಮೋಹಿಪಂತೆ।
ವರ ಕದಳಿಯು ನಾರಂಗ, ಕ್ರಮುಕ ಫಲವೆರಸಿ ಸಾರ್ವದಂತೆ ॥ ೧ ॥

ಚೂತ ಫಲ ಸುದಾಡಿಮ ಗಜ ನಿಂಬೆಯು ಕಾತುಫಲಿತುವಂತೆ ।
ಸಾತಿಶಯದಫಲ ಪುಷ್ಪಗಳವೇ, ಸುತ್ರಾಮ ಕಾಂಡದಂತೆ ॥
ಭೂತಳ ತಿರುಗುವ ಯಾಚಕರನು ತಾ ಪ್ರೀತಿಲಿ ಕರೆವಂತೆ ।
ಓತು ಬೆಳೆದ ರಸದಾಳಿ ಗರಿಯು ಕರವಾತ ಬೀಸಲಂತೆ ॥ ೨ ॥

ತೆನೆವಾಲ್ಕುಡಿಯಲ್ಕೆರಗಿ ಮರಳುವ ಗಿಳಿವಿಂಡಿನ ಸೊಂಪು ।
ತೊನೆದಾಡುತ ಬೆಳೆ ಬಾಗಿಹ ರಾಜಾನ್ನಗೊನೆಯಂಜನವೆಂಪು ॥
ಅನಿಮಿಷಾಧಿಪನ ಪುರ ಸಾದೃಶ್ಯವೆ ಘನವ್ರತರಲ್ಲಿ ಗುಂಪು ।
ಇನನೊಡಗೂಡುವ ಕಮಲಮುಖಿಯರ್ವ್ಯರ್ಥಪುನುಗು
ಗಂಧ ಕಂಪು ॥ ೩ ॥

ಕೊತ್ತಳ ಹುಲಿಮುಖ ಕೋಟೆ ತೆನೆಯು ವಿಚಿತ್ರ ಬಾಗಿಲಿಂದ ।
ಶತ್ರುಗಳೆದೆದಲ್ಲಣದತಿ ವೀರರ ಮೊತ್ತ ಸುಳಿವ ಚಂದ ॥
ಜತ್ತುಗೊಂಡು ಹರ್ಮ್ಯದ ಗೃಹಗಳು ಸಾಲ್ವೆತ್ತುವು ಚಲುವಿಂದ ।
ಮತ್ತು ವೀಧಿಗಳು ಸಿಂಗರ ದಳೆದುವು ನಿತ್ಯೋತ್ಸವದಿಂದ ॥ ೪ ॥

ಗಗನಜ ಶೃಂಗಾರದಂತೆ ಮಿಗಿಲಾಗಿಹ ಗೋಪುರವು ।
ಖಗಗಳ್ ಪಾರಲು ನಿಲುಕದಂತೆ ನಿಗುರಿರುವ ಸ್ತಂಭದಿರವು ॥
ಝಗಝಗಿಸುವ ರತ್ನದ ದೀಪ್ತಿಲಿನವರಂಗತಿ ಶೋಭನವು ।
ಭಗಣವು ಸಾಲ್ಗೈದುವೊ ಎನೆ ಮೌಕ್ತಿಕ ಬಿಗಿದ ಕುಚ್ಚಿ ನಿರವು ॥ ೫ ॥

ಅಧ್ಯಯನ ಪದ ಪಾಳಿ ಕ್ರಮದಿ ಪ್ರಸಿದ್ಧರಿರುವರಲ್ಲಿ ।
ಉದಾತ್ತ ಸ್ವರಿತಪ್ರಚಯ ಅನುದಾತ್ತ ಸ್ವರವು ನಾಲ್ಕರಲ್ಲಿ ॥
ನಿರ್ಧರದಲಿ ಪರಮಾತ್ಮನ ಸೇವಿಸುತಿರ್ದರೆಲ್ಲಾ ಇಲ್ಲಿ ।
ಸದ್ಗುಣಯುಕ್ತರು ಭಗವದ್ಭಕ್ತರು ಸರ್ವ ದ್ವಿಜರು ಅಲ್ಲಿ ॥ ೬ ॥

ಚತುರಾನನ ಸಮವಾದಿಪ ವಿದ್ವತ್ಪ್ರಸರವನೇನೆಂಬೆ ।
ಶತಮಖಮಂತ್ರಿಗೆ ಸಮಪುರೋಹಿತ ಶತಿಗಳೂರತುಂಬಿ ॥
ಅತಿ ಭಕ್ತಿಲಿ ಶೃತಿಯೋದಿವ ಆರ್ಯೋತ್ತಮರ ಸಂದಣಿಂದೆ ।
ಸತತವು ಹವಿರಗ್ನಿಯು ಮಂತ್ರದಿ ಸಾಹಸರು ವಿಪ್ರರೆಂಬೆ ॥೭॥

ಅರಿವಿಜಯದಿ ದಾನಂಗಳಲಿ ದುರ್ಧರರಾಗುತಲಿನ್ನು ।
ಖರಿಪಾಲಿಸಿ ಪ್ರಜೆಗಳ ಕುಲಧರ್ಮವ ನೆರವೇರಿಸಿ ತಾನು ॥

ವರರಾವುತರಾಣತಿಯೊಳು ಕರುಣವ ಬೆರಸಿ ತೋರುತ್ತೇನು ।
ಪರಭಯು ಪಾಪವು ಪರ್ದಿಸದಾಳುವ ಆರಸುಗಳಿಹರಿನ್ನು ॥ ೮ ॥

ಚಿನ್ನ ಬಣ್ಣವು ತೂಕ ಪ್ರಮಾಣವು ಧಾನ್ಯಗಳಳತೆಗಳ ।
ನಿರ್ಣಯವಾಗಿಯೆ ರತ್ನಪರೀಕ್ಷೆಗಳನ್ನು ತಿಳಿದು ಪವಳ ॥
ಕಿನ್ನು ಕಣಜ ಬಳ್ಳುಚ್ಚಿಗೆರತಿಯಂದೆನ್ನುತಿಡುತ ಕೊಳ್ವ ।
ಸನ್ನುತದಿಂದಿನ ಮಣಿಯು ಭಜಿಪ ಸಂಪನ್ನ ವಣಿಜರ್ವಿಪುಳ ॥ ೯ ॥

ಗೋಪಾಲನೆ ಧರಣಿಯ ಭಕ್ತಿಯ ಕೃಷಿವ್ಯಾಪಕ ತರುವಾಗಿ ।
ರೂಪು ರುಚಿಯ ಭೇದವ ಭಾವಿಸದತಿ ಪಾಪವರ್ಜಿತರಾಗಿ ॥
ಲೋಪವಿರದೆ ದೃಢ ಚಿತ್ತದಿ ಸರ್ವನು ಕಾಪಾಡುವ ತ್ಯಾಗಿ ।
ಭೂಪನೊಳಗೆ ಪರಿಭಾಗಗೊಂಬ ಕುಲದೀಪಕರಿಹರಾಗಿ ॥ ೧೦ ॥

ಅಷ್ಟಭೇದದೊಳು ವರ್ತಿಪ ಗುರುಕರುಣಾಷ್ಟಲಿಂಗ ತ್ರಿವಿಧ ।
ಶಿಷ್ಟ ಭಸಿತ ಸಪ್ತಕರುದ್ರಾಕ್ಷಿಗಳಿಷ್ಟ ವಿಧಿಯ ಕ್ರಮದ ॥
ಶ್ರೇಷ್ಠ ಮೂಲ ಪಂಚಾಕ್ಷರಿ ಪಂಚಕರಿಷ್ಟವರಿದ ಜಪದ ।
ಕಷ್ಟವಳಿಪ ತೀರ್ಥದ ದಶಭೇದದ ನಿಷ್ಠೆ ಏಕದಶದ ॥ ೧೧ ॥

ಸ್ವಯ ಚರಪರವೆಂದರಿದು ಭಕ್ತಿ ನಯವೆರಸಿ ತೀವಿದಂಥ ।
ಕಯ ಕೇಡಿಲ್ಲದೆ ಶಿವನ ಕಾಯದೊಳು ಬೆರಸಿ ತೋರುವಂಥ ॥
ನಿಯಮ ಕರ್ಮ ಲೋಕಾಂತದ ಹಂಗಿಗೆ ನಿರ್ಮಿರ್ದು ಬಾಳುವಂಥ ।
ಲಯವಾಗದ ಶಿವ ಧರ್ಮರತಿಯ ನತಿಭಯಬಿ ಪಾಲಿಪಂಥ ॥ ೧೨ ॥

ನಂದಿ ಸ್ಕಾಂದ ಲೈಂಗ್ಯಾದಿ ಪದ್ಮ ವೆಂದೇಳ್ವ ಪುರಾಣಿಕರು ।
ಚಂದದಿ ವಾತುಲ ಭೀಮ ಮುಖ್ಯ ಸಿದ್ಧಾಗಮ ಸಾರಕರು ॥
ಕುಂದಿಲ್ಲದ ಮಹಾ ವಾಕ್ಯ ಕೌಸ್ತುಭ ಛಂದಶ್ಶಾಸ್ತ್ರಯುತರಾ ।
ನಂದ ವೀರಶೈವರು ಭೂರುದ್ರರ ಅಂದದೊಳೊಪ್ಪಿಹರು ॥ ೧೩ ॥

ಸರ್ವ ಮತವು ನಿಜಧರ್ಮವರ್ತಿಗಳು ಸರ್ವಕಾಲ ಶುಚಿಗಳ್ ।
ಆರುವಾಯದಿ ಹರಿ ಹರರ ಭಜನೆ ಯುಳಿದೋರ್ವರಿಲ್ಲನೋಡಲ್ ॥
ಪರ್ವ ಅತಿಥಿ ಸತ್ಕಾರ ದಯಾಗುಣ ತೋರ್ಪುದಲ್ಲಿ ಈಗಳ್ ।
ಉರ್ವಿಗೆ ಪ್ರೊಸತೆನೆ ಝುಸವಾಂತೆಸೆವುದು ವೀರ್ವಕೀರ್ತಿ ಮುದ
ದೋಳ್ ॥ ೧೪ ॥

ಆ ನಗರದ ನಾರಿಯರೆಲ್ಲರು ಅಭಿಮಾನ ಸುಗುಣಯುತೆಯರ್ ।
ನ್ಯೂನವಿಲ್ಲ ಪತಿಸೇವೆಯೊಳನುದಿನ ನಾಡೆ ಅರುಂಧತಿಯರ್ ॥
ಏನನೆಂಬೆ ರೂಪಾತಿಶಯಕೆ ರತಿಯೇಕೆ ಎಂಬುವರಿರುವರ್ ।
ಸಾನುರಾಗದಲಿ ಬಂಧುವರ್ಗ ಗುರುಸತ್ಯದೊಲುಮೆ ರತಿಯರ್ ॥೧೫॥

ಅರವಟಿಗೆಯು ಪೂದೋಟ ಛತ್ರಬಲ್ಕುರಮೆಸೆದಿಹ ಪೂವಲ್ಲಿ ।
ಪರಿಪರಿ ಭಕ್ಷ್ಯವು ವಾರಿ ಪೂವುಗಳ್ ಕರೆದು ಧಾತ್ರಿಯಲ್ಲಿ ॥
ತಿರುಗುವ ಜನಕುಪಚಾರ ಮಾಳ್ಪುದಾನರಿಯೆನು ಇನ್ನೆಲ್ಲಿ ।
ಅರರೆ ಇದರೊಳಾಶ್ಚರ್ಯವ ಇನ್ನೊಂದೊರೆವೆನು ಅರ್ಥಿಯಲಿ ॥೧೬॥

ಪುಟ ಭೇದನ ಸುದತಿಯ ಮಾಂಗಲ್ಯವೆ ದಿಟವಿದು ಎಂಬಂತೆ ।
ಅಟವಿಯ ಸಿದ್ಧೇಶ್ವರನ ಮಠವು ದಿಕ್ತಟದೊಳು ಘನವಂತೆ ॥
ನಿಟಿಲಾಂಬಕ ಸುಕ್ಷೇತ್ರವಾಗಿ ಪಟುತರದಿ ಕಾಣ್ಬುದಂತೆ ।
ಸಟೆಯಲ್ಲವು ರಜತಾದ್ರಿವೊಲು ಉತ್ಕಟದಿ ತೋರ್ಪುದಿಂತೆ ॥ ೧೭ ॥

ನೆಲ್ಲಿ ಬಿಲ್ವ ಗುಗ್ಗಳ ಗಂಧದ ತರುವೆಲ್ಲ ಕುಸುಮಮಯದಿ ।
ಪಲ್ಲವಿಸುತಲಿಹವಲ್ಲದೆ ಕೊಳಗಳು ಎಲ್ಲ ಕಮಲಮಯದಿ ॥
ಸೊಲ್ಲ ಗಿಳಿಯ ಸ್ವರ ಕೋಗಿಲೆ ಕುಂತಳಗಳನು ಭ್ರಮರವಿಡಿದೀ ।
ನಲ್ಲರ ಹೆದರಿಸಿದವೊ ಎನೆ ಸ್ತ್ರೀಯರು ಅಲ್ಲಿ ಗೈದರ್ ಭಯದಿ ॥ ೧೮ ॥

ಈಶ ಮರ್ತ್ಯರಭಿಲಾಷೆಯನೀಯಲ್ ವಾಸವಾದನೆಂಬೋಲ್ ।
ಭಾಸುರ ಸದ್ಗುರು ಮೂರ್ತಿಮಹಿಮೆ ಬಹು ದೇಶದವರು ಅರಿಯಲ್ ॥
ದೋಷ ಕಳೆವರ್ಸ್ವತರಾಶೆಯಲ್ಕೈಲದರ್ಸೋಹದರಿಕೆಯಾಗಲ್ ।
ನಾಶ ರಹಿತನನು ಓಲೈಸಲು ಬಹರೇ ಸೋಮಂದಿ ನೋಡಲ್ ॥ ೧೯ ॥

ಸಕಲ ವರ್ಣದವರ ಭಕುತಿಯಿಂದ ಸುಖಮಯನ ಸೇವೆಗೈದು ।
ನಿಖಿಳ ದುರಿತ ಕಡೆಗಾಣಿಪ ಶಕ್ತಿಯ ಯುಕುತಿಯೆಲ್ಲ ತಿಳಿದು ॥
ಅಕಳಂಕನ ದರುಶನ ಮಾತ್ರದಿ ಅಹಂಕಾರವೆಲ್ಲವಳಿದು ।
ವಿಕಳತೆತನ ಪೋಗುತಲವರ್ಗತಿ ವಿಶ್ವಾಸ ಸಾತ್ವಿಕಹುದು ॥ ೨೦ ॥

ವ್ಯೋಮದಂತೆ ಬ್ರಾಹ್ಮಣ, ದಿನಮಣಿಯಂಥ ಬಲುಕ್ಷತ್ರಿಯರು ।
ಆ ಮಹಾಸಾಗರದಂತೆ ವೈಶ್ಯ, ವಸುಧಾತೆರ ಶೂದ್ರಕರು ॥

ಸ್ತೋವುನ್ನೈದೆ ಕೊಂಡಾಡುತ ಸೇವಿಪುದೇನೆಂಬೆನು ಇವರ ।
ನೇವಃವಿಡಿದು ನಿಜಸತಿಯರೈದುತಿಹ ರಾಮಣೀಯು ಕವರ ॥ ೨೧ ॥

ಬಡತನದ ಮಧ್ಯದೊಳೆಡೆಗೊಂಡಿತು ವೃಡನಡಿಯು ಅರ್ಚಿಸಿಂದು ।
ಕಡುಬಯುಲಪ್ಪುದ ಮಾಳ್ಪೆವೆಂದು ನಿಡು ಜಡೆಯು ತಾಳಿ ನಿಂದು ॥
ಜಡಜ ಕುಮುದ ಚಂಪಕ ಮಲ್ಲಿಗೆ ಸಡಗರದಿ ಕೇತಕಿಂದು ।
ಮಡದಿಯರಾಂತು ವಲ್ಲಭ ಶಿವಲಿಂಗಕೆ ತಡೆಯುಲೀಯುಲೆಂದು ॥ ೨೨ ॥

ಶಿವಕರುಣಿಸಲಾ ವನಿತೆಯರಧರಕೆ ಸವೆಯುದಮೃತವಾಯ್ತು ।
ಪವಣಿಲ್ಲದ ಗೌರವ ಸುಖಸಾಧ್ಯಕೆ ಗಮನ ಗಜವದಾಯ್ತು ॥
ಕವಲಿಲ್ಲದೆ ಪತಿದೈವವೆಂಬ ಸದ್ಗುಣ ಬಲು ಸ್ಥಿರವಾಯ್ತು ।
ಬವಣೆ ಬೇಡ ನಮಗಿನ್ನೆನುತಿಹ ಸತಿ ನಿವಹ ಕಾಣಲಾಯ್ತು ॥ ೨೩ ॥

ಚರಿಪ ಹಂಸಗಳಸ್ಥಿರ ನಿಲಯವೊ ಸುರುಚಿರದಾಗಸದಿರವೊ ।
ವರಮಂಗಲ ಕವಿ ವಂದಿಪ ಹರಿ ಶೋಭಿತ ಗುರು ಮಂಡಲವೊ ॥
ಪರಮಾಮೃತರಸನೆರಕದ ತೇಜವೊ ಪರಿಕರ ಶೃಂಗಾರವೊ ।
ಕರುಣಿಗಳರಸನ ಯೋಗಶಾಲೆ ಕಣ್ಣಾರಿಯುದ ವೈಭವವೊ ॥ ೨೪ ॥

ವೃಷಭನಂತೆ ಅಡಿನಾಲ್ಕರ ಮೇಲೆ ಮಿಥುನಿಸಿದ ಸಿಂಹಪೀಠ ।
ಅಸಮಕಟಕ ಚಾತುರ್ಬಲ ಕಂಭದ ಮಿಸುಪ ಮೀನಮಾಟ ॥
ಬಿಸಜಚಿತ್ರದನುವಿಲಿ ತೂಲಾಯುದಿ ಮಿಸುನಿಕೆಲಸಕೂಟ ।
ರಸನೆಗಳವೆಮಕರಾಂಕನ ವೈರಿ ಮಂಡಿಸಲತಿಸಗಾಟ ॥ ೨೫ ॥

ಈ ಮಂಟಪದೊಳು ಕನ್ಯಾಕುಲಾಗ್ರಣಿ ಆ ಮಹಾಶಾಂಭವಿಯು ।
ನೇಮಕ ಲಕ್ಷ ತ್ರಿವಿಧ ಅನಿಮೇಷದಿ ಸ್ವಾಮಿಯಿರ್ಪ ಬಗೆಯ ॥
ತಾಮಸರರಿವರೆ ಕುಂಭಕದಲಿ ಚಿನ್ಮಯನ ಸುಖದ ಪರಿಯ ।
ನಾಮ ದೂರನಿಹಸೀಮೇಲಿ ವೃಶ್ಚಿಕ ನೋವದಿಲ್ಲಖರೆಯು । ॥ ೨೬ ॥

ಅಂಗಗುಣಗಳನಲಂಗೆ ಇತ್ತು ಕರಣಂಗಳೆಲ್ಲ ಸತ್ತು ।
ಗಂಗೆಯಮುನೆ ಸಂಗದ ಶಬ್ದದಿ ಬೆಳದಿಂಗಳಲ್ಲಿ ಚಿತ್ತು ॥
ತುಂಗಮನದಹಮ್ಮಳಿದು ನಿಜದೊಳಾ ಲಿಂಗಸೌಖ್ಯವೆತ್ತು ।
ಮಂಗಳಮಯ ಪರಿಪೂರ್ಣವಸ್ತು ಬೆಡಂಗಿಗೀಗ ಗೊತ್ತು ॥ ೨೭ ॥

ಇಂಥ ಮಹಿಮನಾದ್ಯಂತವನು ನಾನೆಂತ್ಹೊಗಳುವೆ ನಮವು ।
ಸಂತಸಗೊಳ್ವರೊ, ಗೊಳ್ವರೊ ವಿಬುಧರು ಚಿಂತೆಯಾಕೆ ಬಿಡುವಾ ॥
ಕಾಂತಕಾಂತ ಶ್ರೀಗುರುವ ಭಜಿಸುವರಿಗಿಂತು ತೋರ್ಪ ನಿಜವಾ ।
ದ್ಯಂತವಿರಲಿ ಶುಭ ಸನ್ನಿಧಿಯೊಳು ಜಗಜಂತುವೆಲ್ಲ ಪರವು ॥ ೨೮ ॥

ಅವನಿಯೆಲ್ಲ ಪಾವನವೈದಿತು ಜನಜವನಗೆಲುವ ವರವ ।
ಲವಲವಿಕೆಯೊಳಾಂತಿಹ ಪುಣ್ಯದ ಬೆಳವಿಗೆಯೊಳು ಪೊರೆವ ॥
ವಿವಿಧ ಕರ್ಮಸ್ಥಂಗಿರದೆ ನಿಜದೊಳಾವಿದಿತರಾದಪದವ ।
ಹವಣನರಿಯೆವರ್ಣಿಪೊಡೆ ತಪೋಧನ ಅವರಿಗಿತ್ತ ವರವ ॥ ೨೯ ॥

ಶಿವನಿಗಧಿಕ ಗುರುವೆಂಬ ಶಾಸ್ತ್ರಸಮ್ಮತಿಶಿರದಂತಿರಲು ।
ಭವವ ಗೆಲಲು ಉದ್ಯೋಗಿಸಿ ಆರ್ಯನ ಭಜಿಸೆ ಇರುಳು ಹಗಲು ॥
ಸುವಿಮಲ ಮೂರ್ತಿಯು ಸೋಮೆಕಟ್ಟೆ ಶುಭಧವನ ಚರಣ ಮಿಗಿಲು ।
ಸವೆಯದ ಸುಖಮಲ್ಲನಪುರಸಿಗೆ ಸಂಭವಿಸಿ ತೋರ್ಪುದೆನಲು ॥ ೩೦ ॥

---

(೩)

ಶಿವನಿಗೆ ಶಿವೆಗೆ ವಂದಿಸುವೆ
ಶಿವಶರಣರೊಳೆಮಗೊಲಿದವರ ವರ್ಣಿಸುವೆ ॥ ಪ ॥

ಹರಿಯಜರರಿಯದ ಉರುತರ ಮೂರ್ತಿಯ
ಕರಮನ ಭಾವದೊಳರ್ಚಿಸುತ
ಸಿರಿಗೊಲ್ಲದರೆ ತನ್ನ ಗುರುತಾನಾವನೆಯೀವ
ಪರಮ ಪರಾತ್ಪರಗೆರಗುವೆನು ॥ ೧ ॥

ಯೋಗಿಣಿಯಾಗಿ ತಾ ಭೋಗಭಾಗ್ಯವನಿತ್ತು
ರಾಗವಿರಾಗ ತೇಜವನಾನುತಿ
ಭೋಗಿಭೂಷನ ವಾಮಭಾಗಿಯೆನಿಸಿ ಭಯ
ನೀಗಿಪ ಮಾತೃಪದಕೆ ಮಣಿವೆ ॥ ೨ ॥

ಗೋತ್ರದ ಕರ್ತರ ಸ್ತೋತ್ರಕೆ ಇಂಬಿಲ್ಲ
ಪಾತ್ರವರಿತುಹುದುಗಿಸಿದಿಲ್ಲಿ

ರಾತ್ರೀಶಧರನಂಶ ರೇಣುಕ ವಂಶದ
ಗಾತ್ರದ್ವಲ್ಲಭನೆಂದು ನಮಿಸುವೆ ॥ ೩ ॥

ಮರುಳಾಚಾರ್ಯರ್ಗೆ ವರಪಂಡಿತಾರ್ಯರ್ಗೆ
ಯುರವಿಲ್ಲದಾತ್ಮೈಕೋರಾಮಯ್ಯಗೆ
ಸುರರರಿಯುದ ಸುರುಚಿರ ವೀರಶೈವೋ
ದ್ಧರರೆಂದು ಧರಣಿಲಿ ಪೊಡಮಡುವೆ ॥ ೪ ॥

ಚತುರ ಸಿಂಹಾಸನ ಪತಿಗಳಿವರು ಪರ
ಗತಿಗೊಡೆಯರು ಎಂದು ಪ್ರಾರ್ಥಿಸುವೆ
ಕ್ಷಿತಿಯೊಳಾರಾಧ್ಯ ಸಂತತಿ ಶುಭವೆನಲೆನ
ಗತಿಶಯವೆಂದು ಭಜನೆಗೊಂಡೆ ॥ ೫ ॥

ಭಕ್ತಿಯುಂಗನೆಯನು ರಕ್ತಿಯಿಂದಲಿಕೂಡಿ
ಮುಕ್ತಿಗೊಡೆಯನಾದ ಬಸವೇಶ
ಚಿತ್ತನ * ದೊಳಗೇ ಚಿನ್ಮಯನಾದ ಷಟ್‌ಸ್ಥಲ *
ವ್ಯಕ್ತಚನ್ನಣ್ಣನಿಗೆ ಶರಣೆಂಬೆ ॥ ೬ ॥

ಅಜಗಣ್ಣನಂಘ್ರಿಗೆ ನಿಜಗುಣದೇವಗೆ
ತ್ರಿಗಜಪೂಜ್ಯ ಪ್ರಭುರಾಯನಿಗೆ
ಸುಜನ ಶಿರೋಮಣಿ ಮಡಿವಾಳಮುಖ್ಯರ
ನಿಜಪಾದಪದ್ಮಕಾನತನಪ್ಪೆ ॥ ೭ ॥

ಅಷ್ಟಾಂಗ ಯೋಗದಿ ದೃಷ್ಟಗಳನು ತಾಳಿ
ಅಷ್ಟಸಿದ್ಧಗಳೆಲ್ಲ ಸಹಾಯವಾಗಿ
ಕಷ್ಟವಳಿದು ಕರಿದಿಷ್ಟದಿ ನೆಲೆಗೊಂಡ
ಶ್ರೇಷ್ಠ ಸಿದ್ಧರಾಮ ಸಲಹಲಿ ॥ ೮ ॥

ಲಕ್ಷದಮೇಲೆ ತೊಂಭತ್ತಾರುಸಾವಿರ
ಮೋಕ್ಷದಾಯಕರಿಗೆ ಮಗನೆಂಬೆ

---

* ಪದ್ಯ ೬ ಚಿತ್ತನ=ಚಿಕ್ಕತನ (ಸಣ್ಣವಯಸ್ಸಿನಲ್ಲಿ)

ಅಕ್ಷಯುಸೊಳು ಅಧಿಕರು ಅರುವತ್ತುಮೂ
ರಕ್ಷರಾತ್ಮಕರಡಿ ಹೊರಳುವೆ ॥ ೯ ॥

ಜಂಗಮು ರೂಪಿಲಿ ಜಗದೊಳು ಚರಿಸಿತಾ
ಜಂಗುಳಿ ದೈವದ ಧವನಾಗಿ
ಅಂಗಜನುರುಹಿದ ಮಂಗಳಮುಯುಸಿದ್ಧ
ಲಿಂಗನ ಬಲಗೊಂಡು ಬದುಕುವೆ ॥ ೧೦ ॥

ಭಾಸುರ ವಿದ್ಯದಿ ಭೂಸುರಾಗ್ರಣಿಸರ್ವ
ದೋಷಗಳೆದು ಸಾಸಿರದಳದ
ಕೇಸರದೊಳು ಪರಮೇಶನ ಬೆರಸಿದ
ಆಸು ನಂಜುಂಡ ಯುನ್ನೊಳಗಿರಲಿ ॥ ೧೧ ॥

ಹರ ತನ್ನ ಶರಣರ್ಗೆ ಸರಿಬಾರೆನೆನ್ನುತ
ಕರೆದು ಬೋಧಿಸಿಕೊಂಡ ಕಲಿಗಣನ
ಇರವೆಂತೊ ಆತನ ಚರಣರಕ್ಷೆಯೊಳೆನ್ನ
ಶಿರವನೊರೆಸಿದರೆ ಸುಖಿಯಾದೆ ॥ ೧೨ ॥

ತರಣಿ ಕಿರಣಗಳಿಗೆರವಿಲ್ಲದಂತೆಯೆ
ಪರಿಪರಿ ಪ್ರಮಥರು ಹರಲೀಲೆ
ಧರಿಸಿ ಲೋಕದೊಳವತರಿಸಿ ಮುಕ್ತಿಯ ಬೀಜ
ಇರಿಸಲ್ಕೆತಂದ ಅಭವರು ಎಂಬೆ ॥ ೧೩ ॥

ಬಗೆಬಗೆಯಿಂದಲಿ ಬಣ್ಣಿಸೆ ಬಗೆದವ
ರುಗುಳಿದ ತಂಬುಲ ಸವಿಯಿಂದ
ಚಿಗುರದು ಭವವಿನ್ನು ಚಿದ್ಘನ ಮಹಿಮರ
ಪೊಗಳುವಂತಾಗಿ ಪಾವನನಾದೆ ॥ ೧೪ ॥

ಎಲ್ಲರ ಕೃಪೆಯಿಂದ ಮಲ್ಲನಪುರದೊಳು
ಸೊಲ್ಲಿಸಿದೆನು ಸೋಮೆಯು ಕಟ್ಟಿ
ನಲ್ಲನೊಲಿದು ಮನದೊಲ್ಮೆಯುನಾಂತಿರೆ
ಇಲ್ಲೆ ಸಾಷ್ಟಂಗ ಪ್ರಣಾಮೆಂದೆ ॥ ೧೫ ॥

---

**ವಚನ:—** ೬೬. ಗುರುಲಿಂಗ ಜಂಗಮವೇ ಶಿವನೆಂದರಿದು ಮರೆ ವನು ಶಿವಭಕ್ತನೇ? ಅಲ್ಲ. ಶಿವಭಕ್ತನು ಅರಿದ ಬಳಿಕ ಮರೆಯನು. ಅರಿದು ಮರೆವನು ಮದ್ದುಗುಣಿಕೆಯ ಮೆದ್ದವನು ಮದ್ಯಮಾಂಸವನು ಸೇವಿಸಿದ ವನು ಅರಿದು ಮರೆದವನು ಅಜ್ಞಾನಿಗಳ ಸಂಗವ ಮಾಡಿದವನು ಶ್ವಾನನ ಮಿತ್ರನು. ಅವಂದಿರುಗಳಿಗೆ ಅರಿವು ಮರವೆಯು ಸಹಜವಾದ ಕಾರಣ, ಅರಿದು ಮರೆವನಲ್ಲ ಶಿವಭಕ್ತನು. ಮರೆದು ಅರಿವನಲ್ಲ ಶಿವಭಕ್ತನು. ನಂಬುವನಲ್ಲ ಶಿವಭಕ್ತನು. ನಂಬುಗೆಗೆಡುವನಲ್ಲ ಶಿವಭಕ್ತನು. ವಿಶ್ವಾಸವ ಮಾಡುವನಲ್ಲ ಶಿವಭಕ್ತನು. ಅವಿಶ್ವಾಸವ ಮಾಡುವನಲ್ಲ ಶಿವಭಕ್ತನು ಮರೆ ದಡೆಯು ಅಮರೆದವರಂತೆ, ಅರಿದಡೆಯು ಶಿವನಂತೆ ಕಾಣಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಶರಣನು ಅರಿದು ಮರೆಯುವವನಲ್ಲ. ಅವನು ಅತ್ಯಂತ ದೃಢಭಾವವುಳ್ಳವನು. ಆದ್ದರಿಂದ ಅವನು ಎಂದೂ ಮರೆಯಲಾರನು. ಅವನ ನಡೆನುಡಿಯಲ್ಲಿ ಸದಾಚಾರವು ಪೂರ್ಣವಾಗಿ ನೆಲೆಗೊಂಡಿರುತ್ತದೆ. ಆದ್ದರಿಂದ ಈ ಸ್ಥಿತಿಯು ಅವನಿಗೆ ಪ್ರಾಪ್ತವಾಗಿರುವದು. ಅವನು ನಂಬಿಗೆ, ಅಪನಂಬಿಗೆ, ವಿಶ್ವಾಸ, ಅವಿಶ್ವಾಸ ಇವುಗಳಿಗೆ ಮೀರಿದವನಾಗಿರುವನು. ಇವನು ಕೇವಲ ಶಿವಸ್ವರೂಪನಾಗಿರುವನು.

**ವಚನಃ—** ೬೭. ಪಂಕವಿಲ್ಲದೆ ಕಮಲಕ್ಕೆ ಸುಗಂಧ ಸುಲಲಿತೆ ವೆಂತಪ್ಪುದಯ್ಯ? ಹೊನ್ನು, ಹೆಣ್ಣು, ಮಣ್ಣು ಇಲ್ಲದೆ ದೇವತಾಯೋಗ್ಯ ವೆಂತಪ್ಪುದಯ್ಯ? ಕಮಲ ಪಂಕದಲ್ಲಿ ವರ್ತಿಸಿದಂತೆ ಇಹರು ನಿಮ್ಮ ಶರ ಣರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಅತ್ಯಂತ ಸುಗಂಧವನ್ನು ಬೀರುವ ಕಮಲವು ರಾಡಿ ಯಲ್ಲಿಯೇ ಹುಟ್ಟಿ ಬೆಳೆಯುತ್ತದೆ. ಹೊನ್ನು, ಹೆಣ್ಣು, ಮಣ್ಣು ಇವು ಗಳ ವೈಭವದಲ್ಲಿಯೇ ದೇವಾಲಯಗಳು ರಮಣೀಯವಾಗಿ ಕಂಗೊಳಿಸು ತ್ತವೆ. ಅದೇ ಪ್ರಕಾರ ಶರಣರು ಲೌಕಿಕದಲ್ಲಿ ಹುಟ್ಟಿ ಬೆಳೆದರೂ ಕೂಡ ಅವರು ತಮ್ಮ ಸದ್ಗುಣಗಳಿಂದ ಶೋಭೆಯುಳ್ಳವರಾಗಿ ಪ್ರಖ್ಯಾತಿಯನ್ನು ಹೊಂದುತ್ತಾರೆ.

**ವಚನ:—** ೬೮ ಮನದಲ್ಲಿ ಹವಣನರಿದು ಮನ ನಿರ್ದೇಶವಾಗಿ ದೇಶಾಂತರಿಯಾಗದೆ ಮನ ವಿಕಳವಾಗಿ ಹೊರವೊಂಟುದು ವೇಷಾಂ

ತರವಯ್ಯಾ. ಕಂಡವರ ಕಾಡಿ ನಿಂದವರ ಬೇಡಿ, ಅಜಾತಿ ಎನ್ನದೆ, ಆಚಾರವೆನ್ನದೆ, ಅನಾಚಾರವೆನ್ನದೆ, ತಿರಿದುಂಡು, ವೇಷಡಂಭಕತ್ವದಿಂದ ಲಾಂಛನವ ಹೊತ್ತು ಕಂಡಲ್ಲಿ ಲಜ್ಜೆಗೆಡುವುದು ತನ್ನ ಮುನ್ನಿನ ದುಷ್ಕೃತ ಪೂರ್ವ ಕರ್ಮದ ಫಲವಯ್ಯಾ. ಮತ್ತಂತೆಂದಡೆ, ಮನ ನಿರ್ವಾಣ ವಾಗಿ ವಿವೇಕ ಜ್ಞಾನ ಪರಮಾರ್ಥದಲ್ಲಿ ಪರಿಣಾಮಿಯಾಗಿ ಸುಳಿದು ಸೂತಕಿಯಲ್ಲದೆ, ನಿಂದು ಬದ್ಧನಲ್ಲದೆ, ಸುಜ್ಞಾನದಲ್ಲಿ ಸುಳಿದು, ನಿರ್ಮಲ ದಲ್ಲಿ ನಿಂದವರು ಅವರು ಪರದೇಶಾಂತರಿಗಳು, ಅವರು ನಿಜನಿವಾಸಿ ಗಳು. ಅವರುಗಳಿಗೆ ನಮೋ ನಮೋ ಎಂಬೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಶರಣರು ಭಿಕ್ಷೆಯನ್ನು ಬೇಡಿ ಹೊಟ್ಟೆ ಹೊರೆದು ಕೊಳ್ಳಬಾರದು. ಇದಕ್ಕೋಸ್ಕರ ಅವರು ದೇಶಾಂತರಿಗಳಾಗಬಾರದು. ಹೀಗೆ ತಿರುಗುತ್ತ ಕಂಡಕಂಡಲ್ಲಿ ಬೇಡುವದು ಲಜ್ಜೆಗೇಡಿತನವು. ಇವರು ಬರೀ ವೇಷ ಡಂಭಕರು. ಹೀಗಿರುವದು ಅವರ ಪೂರ್ವ ಕರ್ಮದ ಫಲ. ಆದರೆ ಶರಣರಾದವರು ಯಾತರಲ್ಲಿಯೂ ಲಪಂಟತ್ವವನ್ನು ಹೊಂದದೆ ವಿವೇಕಜ್ಞಾನದಲ್ಲಿದ್ದುಕೊಂಡು ಸುಜ್ಞಾನದಲ್ಲಿ ಸುಳಿಯುವರು. ಅವರೇ ನಿಜವಾಗಿ ಪರದೇಶಾಂತರಿಗಳು. ಅಂಥವರಿಗೆ ನಾನು ನಮೋ ನಮೋ ಎಂದೆನ್ನುತ್ತೇನೆ ಎಂದು ವಚನಕಾರನು ಹೇಳುತ್ತಾನೆ.

---

# ವೇದಗಳು ದೈವವಲ್ಲ.

**ವಿವರಣೆ:—** ವೇದಗಳು ದೇವರೆಂದು ಭಾವಿಸಿ ಜನರು ಅವುಗಳನ್ನು ಪೂಜಿಸುವದುಂಟು. ಆದರೆ ವೇದಗಳು ಜ್ಞಾನವನ್ನು ಕೊಡತಕ್ಕ ಸಾಧನಗಳು ಮಾತ್ರ ಇರುತ್ತವೆ. ಅವುಗಳಿಗೆ ಜನನವಿದೆ. ಅವು ಅಗಸ್ತ್ಯ ವಿಶ್ವಾಮಿತ್ರ ಮೊದಲಾದ ಋಷಿಗಳಿಂದ ರಚಿತವಾದವು. ಜನರು ಈ ವೇದಗಳನ್ನು ಬರೀ ಅಭ್ಯಾಸ ಮಾಡಿ ಪಠನ ಮಾಡುವದರಿಂದ ಮೋಕ್ಷವು ಎಂದಿಗೂ ಲಭಿಸದು. ಆದರೆ ಅವರು ಗುಣ, ಜ್ಞಾನ, ಆಚಾರ ಶೀಲಗಳನ್ನು ಹೊಂದಿ ಸದಾಚಾರಿಗಳಾಗಿದ್ದರೆ ಅವರಿಗೆ ಮೋಕ್ಷವು ಲಭಿಸುವದು. ವಚನಕಾರರು ಈ ತತ್ವಗಳನ್ನು ಸಮರ್ಥಿಸಿ ವೇದಗಳನ್ನು ತಮ್ಮ ವಚನಗಳಲ್ಲಿ ಟೀಕಿಸುವದುಂಟು.

**ವಚನ:—** ೬೯. ವೇದಂಗಳು ದೈವವೆಂಬ ವಿಪ್ರರಂತಹ ಮರುಳರುಂಟೆ ತ್ರಿಜಗದಲ್ಲಿ? ವೇದವೆಂಬುದೊಂದು ಸಾಧಕ ಸಂಪತ್ತು. ವೇದ ಶೃತಿ ಶ್ವೇತ ಅಗಸ್ತ್ಯ ಮುನಿಗಳಿಂದಾದವು. ಶಬ್ದ ಗಾಂಭೀರ್ಯ ಶೃತಿ ಕೋಟಿಚರಣಕಮಲನೆಂಬ ಲಿಂಗದ ಕೈಯ್ಯಲ್ಲಿ ಕಲಿತ ವೇದಂಗಳು ಅಜ್ಞಾನ ಸಂಗವಾಗಿ ಅಗೋಚರವಾಗಿ ನುಡಿದವು. ಋಗ್ವೇದ "ನಾಹಂಕಾರ ಸಂಭವಂ ಬ್ರಹ್ಮತೇಜಃ" ಎಂದುದಾಗಿ, ಯಜುರ್ವೇದ "ನಾಹಂಕಾರ ಲಕ್ಷ್ಮೀಪತಿರ್ವಿಷ್ಣು ತೇಜಃ" ಎಂದುದಾಗಿ, ಸಾಮವೇದ "ನಾಹಂ ದೇವ ರುದ್ರ ತೇಜಃ" ಎಂದುದಾಗಿ, ಅಥರ್ವಣವೇದ "ನಾಹಂ ದೇವ ಇಂದ್ರ ತೇಜಃ" ಎಂದುದಾಗಿ, ಕುಲಮದದಿಂದ ಬ್ರಹ್ಮ ಕೆಟ್ಟ; ಬಲಮದಿಂದ ವಿಷ್ಣು ಕೆಟ್ಟ; ದೈವ ಮದದಿಂದ ರುದ್ರ ಕೆಟ್ಟ; ಛಲಮದದಿಂದ ಇಂದ್ರ ಕೆಟ್ಟ. ಇಂತೀ ನಾಲ್ಕು ಶೃತಿಗಳು ತಮ್ಮ ಗರ್ವದಿಂದ ನೊಂಕಿಸಿ ಕೊಂಡವು. ಮತ್ತಾ ಚತುರ್ವೇದಂಗಳು ಬಂದು ಲಿಂಗದ ಚತುರ್ದಿಶೆಯಲ್ಲಿ ಓಲೈಸಿ ಕೈಮುಗಿದುಕೊಂಡು ಹೊಗಳುತ್ತಿದ್ದವು. ಅದೆಂತೆಂದಡೆ? ಶೃತಿ "ಓಂ ಜಯ ತತ್ವಾನಾಂ ಪುರುಷಮೇರು ಕಾಮ್ಯಾನಾಂ ಪುಣ್ಯ ಜಪ ಧ್ಯಾನಾನಾಂ ಸರ್ವ ಜನ್ಮ ವಿನಾಶಾನಾಂ ಆದಿ ಅನಾದಿ ಪಿತೃಣಾಂ ಅಜಕೋಟಿ ಸಹಸ್ರ ವಂದ್ಯಾನಾಂ ದೇವಕೋಟಿ ಚರಣ ಕಮಲಾನಾಂ" ಎಂದು ವೇದಂಗಳು ದೇವರ ಚರಣದ ಕುರುಹ ಕಾಣವು.

ಆದಿಯಲ್ಲಿ ನಮ್ಮ ಪುರಾತನರು ವೇದವನೋದಿದರೆ? ಇಲ್ಲ. ಕಲ್ಲಲಿಟ್ಟರು, ಕಾಲಿಲೊದೆದರು. ಬಿಲ್ವಪತ್ರದ ಮರದ ಕೆಳಗೆ ಲಿಂಗವಂ ಪುಟ್ಟಿಸಿ ನಿಷ್ಠೆಯಂ ಪಡೆದರು, ಮನೆಯ ಬಾಗಿಲ ಕಾಯಿಸಿಕೊಂಡರು, ಆಡಿಸಿದರು, ಅಡಗಿಸಿದರು, ಓಡಿದ ಲಿಂಗವಂ ತಂದು ಪ್ರತಿಷ್ಠೆಯಂ ಮಾಡಿದರು, ಇಂತಪ್ಪ ದೃಷ್ಟವ ಸಾಧಿಸಿದವರು ನಮ್ಮ ಪುರಾತನರು. ನಿಮ್ಮವರು ವೇದವನೋದಿದರೆಂಬುದನರಿದು ಅವರನೊಲ್ಲದೆ ಬಿಟ್ಟ ಕಾಣಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ವೇದಗಳು ದೈವವೆಂದು ಭಾವಿಸಿ ಅವುಗಳನ್ನು ಪೂಜಿಸಬಾರದು. ಅವು ಶ್ವೇತ, ಅಗಸ್ತ್ಯ, ವಿಶ್ವಾಮಿತ್ರ ಮೊದಲಾದ ಮುನಿಗಳಿಂದಾಗಿವೆ. ಹೀಗೆ ಹುಟ್ಟಿ ಇದ್ದಂಥವುಗಳು ದೇವರೆಂದು ಭಾವಿಸಬಾರದೆಂದು ವಚನಕಾರನ ಅಭಿಪ್ರಾಯವಿದೆ ಋಗ್ವೇದಕ್ಕೆ ಬ್ರಹ್ಮತೇಜವು, ಯಜುರ್ವೇದಕ್ಕೆ ವಿಷ್ಣುವಿನ ತೇಜವು, ಸಾಮವೇದಕ್ಕೆ ರುದ್ರ ತೇಜವು, ಅಥರ್ವಣ ವೇದಕ್ಕೆ ಇಂದ್ರನ ತೇಜವು ಇರುವುದೆಂಬುದಕ್ಕೆ ವಚನಕಾರನು ಆಧಾರ ಗ್ರಂಥಗಳನ್ನು ಕೊಟ್ಟು ಅನ್ನುವದೇನಂದರೆ— ಈ ನಾಲ್ಕು ದೇವತೆಗಳು ಕುಲ ಮದ, ಬಲ ಮದ, ದೈವ ಮದ, ಛಲ ಮದದಿಂದ ಕೆಟ್ಟು ಹೋದರು. ಇಂಥವರ ತೇಜವಿದ್ದಂಥ ವೇದಗಳು ಹ್ಯಾಗೆ ದೇವತೆಗಳು ಆಗಬಹುದು ಎಂದು ಪ್ರಶ್ನೆ ಮಾಡುತ್ತಾನೆ. ಅವನಭಿಪ್ರಾಯವೇನಂದರೆ ನಿಜವಾದ ದೇವತೆಯು ಲಿಂಗವೇ ಇರುತ್ತದೆ. ಈ ಲಿಂಗವನ್ನೇ ಈ ವೇದಗಳು ಸೇವೆ ಮಾಡುತ್ತಲಿವೆ. ಅವು ಆ ಲಿಂಗದ ಮರ್ಮವನ್ನರಿಯವು ಎಂದು ಹೇಳಿ ಇದಕ್ಕೆ ಒಂದು ಶೃತಿಯ ಆಧಾರವನ್ನು ಕೊಟ್ಟಿರುವನು. ಆದ್ದರಿಂದ ಇಂಥ ವೇದಗಳನ್ನು ಬರೀ ಓದುವದರಿಂದ ಏನೂ ಫಲವಿಲ್ಲ. ಆದರೆ ಪರಮಾತ್ಮನಲ್ಲಿ ನಿಷ್ಠೆಯುಳ್ಳವರು ಮಾತ್ರ ಎಲ್ಲಕ್ಕೂ ಹೆಚ್ಚಿನವರು. ಅವರು ಅಘಟಿತ ಕಾರ್ಯಗಳನ್ನು ಮಾಡುವರು ಎಂದು ಹೇಳಿ ಈ ಬಗ್ಗೆ ಕೆಲವರ ಉದಾಹರಣೆಗಳನ್ನು ಇಲ್ಲಿ ಕೊಟ್ಟಿರುವನು.

**ವಚನಃ—** ೭೦ ವೇದಶಾಸ್ತ್ರ ಪುರಾಣಾಗಮಗ್ರಂಥಗಳನೋದಿದವರೆಲ್ಲರನೂ ಹಿರಿಯರೆಂಬೆನೇ? ಅಲ್ಲಲ್ಲ. ನಿಲ್ಲು ನಿಲ್ಲು. ಅವರೇ ಹಿರಿಯರಾದಡೆ ನಟ್ಟುವ ಪಾಣ ಗಳೆಯಾಟ ಮಿಣಿಯಾಟ ಅದೃಶ್ಯಕರಣ ಅಗ್ನಿಸ್ತಂಭ ಕನ್ಯಾವಾದ ಆಕರ್ಷಣ ಚೌಷಷ್ಟಿಕಳಾ ವಿದ್ಯವ ಸಾಧಿಸಿದ ಡೊಂಬ

ನೇನು ಕಿರಿಯನೇ? ಇದು ಹಿರಿದು ಕಿರಿದಿನ ಪರಿಯಲ್ಲ. ಹಿರಿದು ಕಿರಿದಿನ ಪರಿ ಬೇರೆ ಕಾಣಿರಣ್ಣಾ. ಅದು ಉದರ ಪೋಷಣಾರ್ಥ ವಿದ್ಯೆ ಎನಿಸುವದು. ಅದನೆಂತು ಸರಿ ಎಂಬೆನಯ್ಯಾ ಲಿಂಗವಂತಂಗೆ? ಇದು ಕಾರಣ ಗುಣ, ಜ್ಞಾನ ಧರ್ಮ, ಆಚಾರ, ಶೀಲ ಗುರು, ಲಿಂಗ, ಜಂಗಮ, ಪಾದತೀರ್ಥ, ಪ್ರಸಾದವ ಸಾಧಿಸಿದಾತನೇ ಹಿರಿಯ ಕಾಣಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

**ಭಾವಃ**— ಅನೇಕರು ವೇದ ಶಾಸ್ತ್ರ, ಪುರಾಣಾಗಮಗಳನ್ನು ಓದಿದವರು ಹಿರಿಯರೆಂದು ಭಾವಿಸುವದುಂಟು. ಆದರೆ ಹೀಗೆ ತಿಳಿಯುವದು ಸರಿಯಾದದ್ದಲ್ಲೆಂದು ವಚನಕಾರನ ಅಭಿಪ್ರಾಯವು. ಇಂಥವರ ಯೋಗ್ಯತೆಯು ಅಗ್ನಿಸ್ತಂಭ, ಆಕರ್ಷಣ, ಅದೃಶ್ಯಕರಣ, ಮಿಣಿಯಾಟ, ಇಂಥ ಆಟಗಳನ್ನು ಆಡುವ ಡೊಂಬರಕಿಂತಲೂ ಹೆಚ್ಚಿನದಲ್ಲ. ಬರೇ ವೇದ ಪಠಣ ಮಾಡಲು ಕಲಿತವರು ಒಂದು ಉದರ ಪೋಷಣ ವಿದ್ಯೆಯನ್ನು ಮಾತ್ರ ಕಲಿತಂತಾಯಿತು. ಆದರೆ ಯಾವನು ಗುಣ, ಜ್ಞಾನ, ಧರ್ಮ, ಆಚಾರ, ಶೀಲ, ಮುಂತಾದವುಗಳನ್ನು ಸಾಧಿಸಿ ಆಚರಿಸುತ್ತಾನೋ ಅವನೇ ಹಿರಿಯನೆಂದು ಹೇಳಿರುವನು.

---

# ಮನಸ್ಸು ಶುದ್ಧವಾಗಿರತಕ್ಕದ್ದು.



**ವಿವರಣೆಃ—** ಮನುಷ್ಯನ ಪ್ರಗತಿಗೆ ಅವನ ಮನಸ್ಸು ಶುದ್ಧವಾಗಿರುವದು ಅತ್ಯವಶ್ಯಕವು. ಅವನ ಹೆಚ್ಚಳವು ಅವನ ಐಶ್ವರ್ಯದ ಮೇಲೆ ಅವಲಂಬಿಸಿಲ್ಲ. ಆದರೆ ಪರಮಾತ್ಮನಲ್ಲಿ ಬೆರೆಯಬೇಕೆಂಬ ಅವನ ಉತ್ಕಟ ಇಚ್ಛೆ ಮತ್ತು ಅದಕ್ಕೋಸ್ಕರ ಅವನು ಮಾಡುವ ಪ್ರಯತ್ನ ಇವುಗಳ ಮೇಲೆ ಅವಲಂಬಿಸಿವೆ. ಇದಕ್ಕೆಲ್ಲ ಸಾಧನೀಭೂತವಾದುದು ಮನಸ್ಸು. ಇಂಥ ಮನಸ್ಸನ್ನು ಸಂತೈಸಿ ಅದನ್ನು ಸರಿಯಾದ ಮಾರ್ಗಕ್ಕೆ ಹಚ್ಚುವದರಲ್ಲಿಯೇ ಮನುಷ್ಯನ ಶ್ರೇಷ್ಠತೆಯು ಇದೆ.

**ವಚನಃ—** ೭೧. ಇಚ್ಛಾಜ್ಞಾನ ಕ್ರಿಯಾಶಕ್ತಿ ನಿಮ್ಮಿಚ್ಛೆ ಎಂಬುದನಾ ಬಲ್ಲೆನು. ಸರ್ವವೂ ನಿಮ್ಮಾಜ್ಞೆ ಎಂಬುದ ನಿಮ್ಮಡಿಗಳು ಬೆಸಸಿದ ಶೃತಿಗಳ ಕೇಳಿ ಬಲ್ಲೆನು. ಇದನರಿದಿರ್ದು ಈ ಮನವು ಮರಳಿ ಬಿರ್ದು ಗುರುಲಿಂಗ ಜಂಗಮಕ್ಕೆ ನಾ ಮಾಡಿದೆನೆಂಬ ಅವಿಚಾರದ ಮನದ ಪರಿಯ ನೋಡಾ! ಇದಿರ ಬೇಡಿದರೆ ಕೊಡರೆಂಬ ಮನದ ಗಸಣಿಯ ನೋಡಾ! ಶಿವಶಿವಾ ಅರಿವಿಂಗಿದು ಲಕ್ಷಣವೇ? ಮಹಾದೇವಾ, ಎನ್ನ ಮನವ ನೋಡಾ! ಎನ್ನ ಮನವ ಸಂತವ ಮಾಡಿ, ನಿಮ್ಮಲ್ಲಿ ಬೆರಸಾ. ಬೆರಸದಿರ್ದಡೆ ನಿಮಗೆ ಮಹಾ ಗಣಂಗಳಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಮನಸ್ಸು ಅತ್ಯಂತ ಅಹಂಕಾರಿಯಾಗಿದ್ದರಿಂದ ಅದು ಅನೇಕ ಬಗೆಯಾಗಿ ತಳಮಳಿಸುವದುಂಟು. ಅದರ ಈ ಸ್ಥಿತಿಯನ್ನು ದೂರಮಾಡಿ ಪರಮಾತ್ಮನಲ್ಲಿ ಅದು ಬೆರೆಯುವಂತೆ ಮಾಡೆಂದು ವಚನಕಾರನು ಇಲ್ಲಿ ಹೇಳಿಕೊಳ್ಳುತ್ತಾನೆ. ನಿಜವಾಗಿ ಇಚ್ಛಾಶಕ್ತಿ, ಕ್ರಿಯಾಶಕ್ತಿ ಮೊದಲಾದವುಗಳೆಲ್ಲ ಪರಮಾತ್ಮನ ಅಂಕಿತದಲ್ಲಿವೆ. ಅವನಿಂದಲೇ ಜಗತ್ತಿನ ಎಲ್ಲ ವ್ಯಾಪಾರಗಳು ನಡೆಯುತ್ತವೆ. ಹೀಗಿದ್ದರೂ ಮನಸ್ಸು ನಾ ಮಾಡುತ್ತೇನೆಂಬ ಅಹಂಕಾರದಿಂದ ಪರಮಾತ್ಮನನ್ನು ಲೆಕ್ಕಿಸುವದಿಲ್ಲ. ಅದು ಅನೇಕ ಬಗೆಯಾಗಿ ಅನೇಕ ವಸ್ತುಗಳನ್ನು ಆಶೆಮಾಡುತ್ತದೆ. ಅವು ದೊರಕದಿದ್ದರೆ ಹೆರವರನ್ನು ಹಳಿಯಹತ್ತುತ್ತದೆ. ಇದು ಅರಿವಿನ ಲಕ್ಷಣವಲ್ಲ. ಇದು ಅದರ ತಾಮಸ ಭಾವವು. ಇವನ್ನು ಕೆಡಿಸಿ ಪರ

ಮಾತ್ಮನಲ್ಲಿ ಬೆರೆಯುವಂತೆ ಮಾಡೆಂದು ವಚನಕಾರನು ಇಲ್ಲಿ ಹೇಳಿಕೊಳ್ಳುತ್ತಾನೆ.

**ವಚನ:**— ೭೨. ತನುಮನ ಶುದ್ಧವಾದರೆ ಸ್ವಲ್ಪ ದ್ರವ್ಯ ಘನತರವಾಯಿತ್ತು ನೋಡಿರೇ, ಆ ಮೋಳಿಗೆಯ ಮಾರಿತಂದೆಗೆ ನುಲಿಯ ಚಂದಯ್ಯಂಗೆ ಆ ಢಕ್ಕೆಯ ಮಾರಣ್ಣಗಳಿಗೆ ? ತನುಮನ ಶುದ್ಧವಿಲ್ಲದೊಡೆ ಬಹುಳತರ ಮಹದೈಶ್ವರ್ಯ ಸ್ವಲ್ಪವಾಗಿ ಕರಗಿ ಕೆಟ್ಟು ಹೋಗದೇ ? ರಾವಣಂಗೆ ಇಂಗಿಹೋಗದೇ ? ಉರಿದು ಉರಿದು ಹೋಗದೇ ತ್ರಿಪುರದಾನವರಿಗೆ ? ಇದನರಿತು ತನುಮನ ಶುದ್ಧವಾಗಲು ತೃಣ ಮಹಾಮೇರುವಪ್ಪುದಯ್ಯಾ. ಇಹದಲ್ಲಿ ಪರದಲ್ಲಿ ಮಹಾಮುಕ್ತಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಮನಸ್ಸು ಶುದ್ಧವಾದರೆ ಧನಕನಕ ವಸ್ತುಗಳು ತಾವೇ ಹೆಚ್ಚಾಗುವವು. ಮೋಳಿಗೇಮಾರಯ್ಯ, ನುಲಿಯ ಚಂದಯ್ಯ ಢಕ್ಕೆಯ ಮಾರಯ್ಯ ಇವರೇ ಇದಕ್ಕೆ ಉದಾಹರಣೆಗಳಾಗಿದ್ದಾರೆ. ಆದರೆ ಮಹದೈಶ್ವರ್ಯವುಳ್ಳ ರಾವಣ, ತ್ರಿಪುರದ ದಾನವರು ಅತ್ಯಂತ ಐಶ್ವರ್ಯವಂತರಾದರೂ ಕೂಡ ಅವರ ಮನಸ್ಸಿನ ಮೂಲಕ ಅವರ ಸಂಪತ್ತೆಲ್ಲ ನಾಶವಾಗಿ ಹೋಯಿತು. ಇವನರಿತು ನಡೆದರೆ, ಒಂದು ಹುಲ್ಲು ಸಹ ಮಹಾಮೇರುವಾಗುವದು. ಆದ್ದರಿಂದ ಮನಸ್ಸು ಶುದ್ಧವಾಗಿದ್ದರೆ ಇಹಪರದಲ್ಲಿ ಮಹಾ ಮುಕ್ತಿಯು ಎಂದು ವಚನಕಾರನು ಹೇಳುತ್ತಾನೆ.

---

# ನೈತಿಕ ವಚನಗಳು.

**ವಿವರಣೆ:**— ಪ್ರತಿಯೊಬ್ಬ ವಚನಕಾರನು ನೈತಿಕ ವಿಷಯಗಳನ್ನು ತನ್ನ ವಚನಗಳಲ್ಲಿ ಹೇಳುವದುಂಟು. ಅದೇ ಮೇರೆಗೆ ಉರಿಲಿಂಗಪೆದ್ದಿಯೂ ಕೆಲವು ಉಕ್ತಿಗಳನ್ನು ಹೇಳಿರುವನು. ನೀತಿ ಮತ್ತು ಧರ್ಮ ಇವುಗಳನ್ನು ವಚನಕಾರರು ವಿಂಗಡಿಸಿ ಹೇಳುವದಿಲ್ಲ. ಅವುಗಳು ಪರಸ್ಪರಾವಲಂಬಿಗಳೆಂದು ತಿಳಿದು ಧಾರ್ಮಿಕ ತತ್ವಗಳನ್ನು ನೈತಿಕ ವಚನಗಳಲ್ಲಿ ಅವರು ಹೆಣೆದು ಬಿಟ್ಟಿರುವರು. ಈ ವಿಷಯುವನ್ನು ಹಾಗೂ ಅವರ ನೈತಿಕ ತತ್ವಗಳನ್ನು ವಾಚಕರು ತಾವೇ ಈ ವಚನಗಳಲ್ಲಿ ಸುಲಭವಾಗಿ ಕಂಡುಕೊಳ್ಳಬಹುದಾಗಿದೆ. ಪ್ರತಿಯೊಂದು ವಚನಕ್ಕೆ ಭಾವ ಬರೆಯುವದು ಅನಾವಶ್ಯವಾಗಿರುವದರಿಂದ ಅದನ್ನು ಬರೆದಿಲ್ಲ.

**ವಚನ:**— ೭೩. ಶಿವನೇ ದೈವ, ಶಿವಭಕ್ತನೇ ಕುಲಜ. ಷಡಕ್ಷರಿಯೇ ಮಂತ್ರ, ಕೊಲ್ಲದಿಪ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲದಿಪ್ಪುದೇ ನೇಮ, ಆಶೆ ಇಲ್ಲದಿಪ್ಪುದೇ ತಪ, ರೋಷವಿಲ್ಲದಿಪ್ಪುದೇ ಜಪ, ವಂಚನೆ ಇಲ್ಲದಿಪ್ಪುದೇ ಭಕ್ತಿ, ಹೆಚ್ಚು ಕುಂದಿಲ್ಲದಿಪ್ಪುದೇ ಸಮಯಾಚಾರ. ಇದು ಸತ್ಯ ಶಿವ ಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

ಕುಲಜ = ಉತ್ತಮ ಕುಲದವ; ಸಮಯಾಚಾರ = ಜಾತಿ ಪದ್ಧತಿ

**ವಚನ:**— ೭೪. ಆಶೆಯುಳ್ಳನ್ನರ ಒಬ್ಬರ ಆಶ್ರಯಿಸುವ. ಆಶ್ರಯ ದಾಸೆ ಕರಕಷ್ಟ ಕಾಣಿರೋ ಅಯ್ಯ. ಆಸೆಯೇ ದಾಸ ಕಾಣಿರೋ. ನಿರಾಸೆಯೇ ಈಶ ಕಾಣಿರಣ್ಣಾ. ದಾಸತ್ವದ ಈಶತ್ವದ ಅನುವ ವಿಚಾರಿಸಿ, ಆಸೆಯಡಗಿದರೆ ಅದೇ ಈಶಪದವು. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

ಕರಕಷ್ಟ = ಅತಿಶಯ ಕಷ್ಟಕರವು

**ವಚನ:**— ೭೫ ಶರಣರ ಕೂಡೆ ನುಡಿ ದಿಟವಿಲ್ಲ. ಮೇಲಿನಿ ಮಾತು. ತನು ಸವೆಯದು, ಮನ ಸವೆಯದು, ಧನ ಸವೆಯದು, ಸತ್ಯದ ನುಡಿ ಸಾಧ್ಯವಾಗದು. ಮೇಲೆ ಇನ್ನೇನಾವೀತು? ಅಸತ್ಯಕ್ಕೆ ಲಿಂಗ ಒಲಿ

ಅಂತದಂ ನೋಡಿ ನಗುತಾನಂದದಿಂದಲ್ಲಿ
ಆ ಸಮಯದೊಳು ರಾಮತಂದೆ ತಾನೊಪ್ಪಿದಂ
ಭಾಸುರವೆನಿಪ್ಪ ಭಕ್ತ್ಯಂಗನೆಯನಪ್ಪಿದಂ
ನಳನಳಿಪ ಘುಳುಘುಳಿಪ ಸಿಂಗರಂ ಮಾಡಿದಂ
ಬೆಳಬೆಳಗುತಿರ್ಪ ಪೊಸ ಭಸಿತಮಂ ಪೂಸಿದಂ
ಕರದೊಳುಂ ಕಂತದೊಳು ರುದ್ರಾಕ್ಷಿಯಂ ಧರಿಸಿ
ಶಿರ ಕೊರಲು ತೋಳುಗಳೊಳಂತವಂ ಸಿಂಗರಿಸಿ
ಸುರುಚಿರ ಸುವರ್ಣ ಪಳಿಯಂ ತೆಗೆದು ಬಿಗಿದುಟ್ಟು
ನೆರೆದ ಸವಣರ್ನಡುಗಲು ಬುಬೆಂದು ಬೊಬ್ಬಿಟ್ಟು
ಗಾಳಿಯಂ ಸೀಳ್ವ ಪೊಸ ಕೂರಸಿಯನಳವಡಿಸಿ
ಬಾಲೇಂದುಧರನಣುಗನುಬ್ಬಿನಿಂದಗ್ಗಳಿಸಿ
ಕಾಲ ತೊಡರುಲಿಯೆ ಘುಲುಘುಲುಕೆಂದು ನಡೆತಂದು
ಲೀಲೆ ಪಿಂಗೆ ಭಕ್ತರುಘೆ ಚಾಂಗು ಬೊಲ್ಲೆನಲಂದು
ಬಂದ ಶಿವಭಕ್ತರ್ಗೆ ಮೆಯ್ಯಿಕ್ಕಿ ಹೋ ಎಂದು
ನಿಂದು ನುಡಿದಂ ರಾಮತಂದೆ ಹಿಗ್ಗುತ್ತಂದು
ಈ ಶಿರವನರಿದು ಹತ್ತಿಸಿ ಶಿವನನೊಲಿಸುವೇಂ
ಸಾಸಿರ ಜಿನರನೊಡೆದು ಲಿಂಗವಂ ನಿಲಿಸುವೇಂ
ಇದು ಭಾಷೆ ಇದನಳುಪೆ ಜೈನರೇನೆಂದುದಂ
ಮುದದಿಂದೊಡಂಬಟ್ಟೆನೆಂದಲಗನೆತ್ತಿದಂ

ಆಗಳಾ ಜೈನರೆಲ್ಲಂ ಕೌತುಕಂ ಬಡಲು
ರಾಗದಿಂ ಭಕ್ತರೆಲ್ಲಂ ಸಂತಸಂ ಬಡಲು
ಎಡದ ಕೆಯ್ಯಿಂದ ಜಡೆಯಂಸುತ್ತಿ ಪಿಡಿವಾಗ
ಎಡೆಗುಡದೆಯಲಗಂ ಶಿರಕ್ಕೆ ಮೋಹಿಸುತಾಗ
ಏನೆಂಬೆನೇನೆಂಬೆನೆಲೆಲೆಲೆಲೆ ಕೌತುಕಂ
ಆನರಿಯೆ ನಾನರಿಯೆನಾಹ ಧೀರಾಂತಕಂ
ಘರಿಲೆಂಬ ದನಿ ಪುಟ್ಟುವಲ್ಲಿಂದ ಮುನ್ನರಿದು
ಹರನಿರ್ದ ದೆಸೆಗಟ್ಟೆ ತಲೆವಿಡಿದು ನಲಿನಲಿದು
ಶಿರವನೇರಿಸಿ ಮಲೆದು ಸರಸರನೆ ಹಿಮ್ಮೆಟ್ಟೆ
ಬರುತ ಹಿಂದಣ ನಂದಿಯಂ ಮಲಂಗಿರೆ ಮುಟ್ಟೆ

ಸವಣರೆಲ್ಲಂ ನಡನಡನೆ ನಡುಗಿ ಘೋಳಿಟ್ಟು
ತಮತಮಗೆ ಭೀತಿಗೊಂಡೆಲ್ಲರುಂ ಮರವಟ್ಟು
ಮಾಯವಿದು ಮಂತ್ರವಿದು ಮಾಹೇಂದ್ರಜಾಲವಿದು
ಕಾಯುವೇಳ್ದಿಂತು ಮಾಡುವದು ಕೌಟಿಲ್ಯವಿದು
ಎಮಗಿದರ ಪರಿ ತಿಳಿಯದೆನುತಾರುಹತರಳುಕಿ
ನೆವದಿಂದಲೇಳಲುದ್ಯುತರಾಗಿ ಮನವಳುಕಿ

ಅಂತದಂ ಕಂಡಗ್ಗಣಿಯ ಹೊನ್ನಿತಂದೆಗಳು
ಇಂತಾಗಲಾಗವೆನೆ ನುಡಿದು ಪರವಾದಿಗಳು
ಚನ್ನಾಯಿತೈಯ್ಯ ಕಪಟವಿದೆನಲು ತಮತಮಗೆ
ಬಿನ್ನಾಣವೇಕೆ ಮಾಡುವುದನುಸುರುವುದೆಮಗೆ
ಎನೆ ಸವಣರೇಳ್ವು ತಮ್ಮೊಳ್ವಿಚಾರಿಸಿ ನೋಡಿ
ತನತನಗೆ ನುಡಿವೇಕ ವಾಕ್ಯವಾಗುತೆ ಕೂಡಿ
ಇಂತೆಂದರೇಳು ದಿವಸಕ್ಕೆ ಶಿರವಂ ಕೂಡೆ
ಮುಂತೆ ಶಿರವಂ ಪಡೆವುದೆಮ್ಮ ಮತವೆಂದಾಡೆ

ನುಡಿಯೆ ಕೈಕೊಂಡೆವೆನುತಂ ಹೊನ್ನಿತಂದೆಗಳು
ವೃಡನ ಮೊಗಮಂ ನೋಡಿ ತಲೆದೂಗಿ ತಂದೆಗಳು
ಇಂತು ಮಾಡಿದಿರೀ ಸವಣರಿದಕ್ಕೇನೆಂದು
ಕಂತುಹರಮೂರ್ತಿ ವಿಗೆ ಪೊಸತು ಮಾಡುವೆನೆಂದು
ಏಳು ದಿನವೀ ಶಿರವನಿಂತೀ ತೆರದೊಳಿರಿಸಿ
ಬಾಲೇಂದುಧರನಣುಗನಿಚ್ಚೆಯಿಂದನುಕರಿಸಿ
ನೆರೆಯುವೇಳ್ಕೇಳು ದಿವಸಕ್ಕೆ ಶಿರವಂ ಕೂಡಿ
ನೆರೆ ಲೋಕವರಿಯೆ ಮೆರೆವೇಂ ಪಡೆವೆನೆಳೆ ನೋಡಿ
ಪಡೆಯದೊಡೆ ಬ್ರಹ್ಮಾಂಡವೊಡೆಯದೇಕಿರ್ದಪುದು
ಪಡೆಯದೊಡೆ ಶಿವನ ಕೈಲಾಸವೆಂತಿರ್ದಪುದು
ನುಡಿದು ತೋರದೊಡೆ ಶಿವಭಕ್ತಿಯೆಂತಿರ್ದಪುದು
ವೃಡನ ಸಮ್ಮುಖದಿ ಪಡೆವೇಂ ಪಡೆವೆನೆನುತಿರ್ದು

ಎಂದು ಗರ್ಜಿಸುತೆ ಕಂಕಣದಾರವಂ ಕಟ್ಟಿ
ಅಂದು ಸವಣರ ಮನಂ ನಡುಗಿ ಸರಕಂ ಕಟ್ಟಿ

ಒಡನೆ ನಾನೂರೊಡೆಯರುಂ ಕಂಕಣಂಗಟ್ಟಿ
ಸಡಿಫಡ ಜಿನನ ಬೊಂಬೆಗಳನೆಲ್ಲ ಹುಡಿಗಟ್ಟಿ
ಕಳಿಯಬೇಕೆನುತಾರುತುಂ ಬೊಬ್ಬಿರಿವುತಿರಲು
ಘುಳುಘುಳಿಸಿ ಘೂರ್ಮಿಸುತೆ ಕುಪಿತರಾಗುತ್ತಿರಲು
ಆ ಸಮಯದೊಳು ಹೊನ್ನಿತಂದೆಗಳು ಸಡಗರಿಸಿ
ಲೇಸಪ್ಪ ಹೊನ್ನ ಹೊಸ ಪರಿವಾಣಮಂ ತರಿಸಿ
ಅದರೊಳ್ದಣಿಂಬಮಂ ಪಾಸಿ ಭಸಿತವನಿಟ್ಟು
ಮುದದಿಂದ ಪಾದೋದಕ ಪ್ರಸಾದವನಿಟ್ಟು
ಸುಲಿದ ಪಲ್ಮಿನುಗೆ ಕೆತ್ತುವ ಮೀಸೆಯಿಂದೊಪ್ಪೆ
ಛಲದಿಂದೆ ಗಂಟಿಕ್ಕಿ ಬಿಗಿದ ಪುರ್ಬಿಂ ವೊಪ್ಪೆ
ಘುಳುಘುಳಿಪ ರಾಮತಂದೆಗಳ ಶಿರಮಂ ತಂದು
ಇಳುಪಿದರ್ಪರಿವಾಣದೊಳಗೆ ಬೊಬ್ಬಿಡುತಂದು

ಎತ್ತಿದಂ ಶಿವಭಕ್ತರೆಲ್ಲರುಘೆಯುಘೆ ಯೆನಲು
ಸುತ್ತಿರ್ದ ಸವಣ ಪಡೆ ಕೌತುಕಂಬಡುತಿರಲು
ಶಿವನ ಪ್ರಸಾದಮಂ ನಿಂದು ಹೊರುವಂದದಿಂ
ಭವನ ಕೀರ್ತಿಯನೊಪ್ಪದಿಂ ಧರಿಸುವಂದದಿಂ
ಗಿರಿಶನಭಿಮಾನಮಂ ಪೊತ್ತು ನಿತ್ತರಿಪಂತೆ
ಶರಣ ಸಂಕುಳದ ಹರಣಮನರರೆ ಹೊರುವಂತೆ
ಹೊತ್ತು ಕೊಂಡಂ ಹೊನ್ನಿತಂದೆ ಹರಿವಾಣಮಂ
ಹೊತ್ತುಕೊಂಡರ್ಸವಣರೆಲ್ಲ ದುಮ್ಮಾನಮಂ
ಹಿಂದೆ ದೇಹಕ್ಕೆ ಕಾಪಿಟ್ಟು ನೆರೆ ಧೀರರಂ
ಮುಂದೆ ನಡೆಗೊಂಡನಪ್ರತಿಮನಭಿನವಹರಂ
ಹೊತ್ತ ಬಾಳಿತ್ತಿದ ಕಠಾರಿ ಕಿತ್ತಲಗುಗಳು
ಸುತ್ತಂ ತಳಿರ್ತು ಥಳಥಳಿಪ ಪೊಸಕೈದುಗಳು
ನೋಹಲೆಂದವಸಿಯುಗಲಕ್ಕೆ ನೆರೆದರಸುಗಳು
ಕೂಡೆ ನೆರೆ ತೀವಿತ್ತು ಶಿವಭಕ್ತರಿಕ್ಕೆಗಳು
ಗಗನವೆಡೆಯಿಲ್ಲೆನಿಸಿ ತುರುಗಿದ ವೃಷಧ್ವಜವ
ಜಗವದಿರೆ ಹೊಯ್ಪು ನಿಸ್ಸಾಳದ ಮಹಾರವವ

ದೆಸೆಗೇಳ್ವ ತೆರದಿ ಮೊಳಗುವ ಭೇರಿಗಳ ನಡುವೆ
ಅಸಮಾಕ್ಷನಣುಗನಾ ವೀರವೃಂದದ ನಡುವೆ
ನಡೆತಂದನಾಗಳಿಳೆ ಬೆರಗಾಗಿ ತಲೆದೂಗೆ
ಒಡನೆ ಭಾಷೆಯು ಗಣಂಗಳ್ಸಹಿತ ಒಂದಾಗೆ

ಬಂದು ಹುಲಿಗೆರೆಯ ಪಟ್ಟಣಮನೊಲವಿಂ ಪೊಕ್ಕು
ಸಂದಣಿಸಿ ಮೆರೆವುತ್ತೆ ಬರುತಂ ಮನಂ ಮಿಕ್ಕು
ಸೋಮನಾಥನ ಪದಕ್ಕೆರಿಸುತೆ ಪೊಡಮಟ್ಟು
ಭೂಮಿಗಚ್ಚರಿಯೆನಲ್ಕಲ್ಲಿಂದ ಪೊರಮಟ್ಟು
ಅಣ್ಣಿಗೆರೆಯಮೃತನಾಥನ ಚರಣಮಂ ಕಂಡು
ಬಣ್ಣಿಸುತ್ತಲ್ಲಿ ನೆಲೆವರಕೆಯಂ ಕೈಕೊಂಡು
ಕೆಂಭಾವಿಯೊಳ್ಭೋಗನಾಥನಲ್ಲಿಗೆ ಬಂದು
ಬೆಂಬಳಿಯೊಳುರುಳ್ದಾತನೆ ಕರುಣಿ ಶರಣೆಂದು
ಕಪ್ಪಡಿಯ ಸಂಗಮೇಶ್ವರನಲ್ಲಿಗೈತಂದು
ಒಪ್ಪುವಾ ರಾಮತಂದೆಯ ಶಿರಂ ಶರಣೆಂದು
ಆ ವೃಂದದೊಳು ನಾಗನಾಥನಲ್ಲಿಗೆ ಬಂದು
ದೇವ ನಿಮ್ಮಯ ಕರುಣಮೀಯೆನುತ್ತಂ ನಿಂದು
ಸೊನ್ನಲಿಗೆಯೊಳು ಜಗದ್ಗುರು ಸಿದ್ಧರಾಮಂಗೆ
ನಿನ್ನ ಪ್ರಸಾದಮೀಯೆನುತೆ ಕರುಣಂಬಡುಗೆ
ಹಂಪೆಗೈತಂದು ವಿರುಪಾಕ್ಷಲಿಂಗವ ಕಂಡು
ಹೆಂಪಿಂದೆ ಹೆಚ್ಚುತ್ತೆ ಹಿಗ್ಗುತ್ತೆ ನಡೆಗೊಂಡು
ಇವು ಮೊದಲ್ಗೊಂಡು ಶಿವಪುರವೆಲ್ಲರೊಳ್ಮೆರಿಸಿ
ಭುವನವೆಲ್ಲರಿಯಲೇಳುಂ ದಿವಸವುಂ ಮೆರಿಸಿ
ತಿರುಗಿ ಬರುತಿರ್ದುದಪ್ರತಿಮನಭವನ ಗಣಂ
ನೆರೆದು ಬರುತಿರ್ದುದಹಿಧರನ ನಚ್ಚಿನ ಗಣಂ
ಈ ಬಂದುದರುಹಕುಲವಿಲಯಾಗ್ನಿ ಮುಖವೆಂಬ
ಈ ಬಂದು ದೆಲೆ ಜೈನ ಹರಿಶರಭ ಮುಖವೆಂಬ
ಬಿರುದೆತ್ತಿ ಕರೆವ ಕಹಳೆಯನಲ್ಲಿ ಪಿಡಿಸುತಂ
ಬರುತಿರ್ದರಬ್ಬಲೂರತ್ತಲುರವಣಿಸುತಂ

R. N. B. 2554.

# ಶಿವಾನುಭವ.



ಸಂಪುಟ ೧೦.] ಅಕ್ಟೋಬರ ೧೯೩೫. [ಸಂಚಿಕೆ ೩.

# ವಿಷಯಾನುಕ್ರಮಣಿಕೆ.




ಇವನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರ ಉಪ್ಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೧೦]　　ಅಕ್ಟೋಬರ ೧೯೩೫　　[ಸಂಚಿಕೆ ೩

## ಶೂನ್ಯಸಂಪಾದನೆಯ ರಹಸ್ಯ.

(ಲೇಖಕಃ— ಬ್ಯಾಳಿ ಕಲ್ಯಾಣಪ್ಪನವರು ಬಿ. ಏ)

### ಪ್ರಭುದೇವರ ಪೂಜಾಸ್ತುತಿ.

ಪರಮ ಪ್ರಭುದೇವಂ ಬಸ-
ವರಸನ ಅಂತರ್ನಿವಾಸ ಕೈದಲ್ ಮುದದಿಂ।
ಶರಣಸಮೂಹಂ ಭಜಿಸಿದ
ಪರಿಯಂ ವರ್ಣಿಸುವೆ ಶರಣಜನರಹುದೆನಲು ॥

ಶ್ರೀ ಪ್ರಭುದೇವರು ಬಸವೇಶ್ವರನ ಅರಮನೆಗೆ ದಯಮಾಡಿಸಲು ಬಸವಾದಿ ಪ್ರಮಥರು ಅವರನ್ನು ಆದರ ಸತ್ಕಾರದಿಂದ ಬರಮಾಡಿಕೊಂಡು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಅವರನ್ನು ವಿಧಿವತ್ತಾಗಿ ಪೂಜಿಸಿದರು. ಆದುದರಿಂದ ಈ ಸಂಪಾನೆಗೆ "ಪ್ರಭುದೇವರ ಪೂಜಾಸ್ತುತಿ" ಎಂಬ ಹೆಸರು ಕೊಡಲ್ಪಟ್ಟಿದೆ.

'ಅತಿಥಿ ದೇವೋಭವ' ಎಂಬ ವೇದವಾಕ್ಯಕ್ಕನುಸರಿಸಿ ವೈದಿಕರು ತಮ್ಮ ಮನೆಗೆ ಆಕಾಸ್ಮಾತ್ತಾಗಿ ಬಂದ ಅತಿಥಿಗಳನ್ನು ದೇವರೆಂದು ತಿಳಿದು ಪೂಜಿಸುವಂತೆ ವೀರಶೈವರು ಸುಜ್ಞಾನಿಗಳಾದ ಜಂಗಮಮೂರ್ತಿಗಳು ತಮ್ಮ ಮನೆಗೆ ಬಂದರೆ ಅವರನ್ನು ಸಾಕ್ಷಾತ್ ಪರಶಿವನೆಂದೇ ತಿಳಿದು ಪೂಜಿಸುವರು. ದೇವರೆಂದರೆ ಯಾರು? ಎಂಥವನು? ಎಂಬುದೇ ತಿಳಿಯದ ನಮಗೆ ದಿವ್ಯಜ್ಞಾನಿಗಳು ದೊರೆತರೆ ಅವರೇ ದೇವರೆಂದು ಮೈಯುಬ್ಬಿ ಅವರಡಿಗೆ ಪೊಡಮಡುವೆವು. ಪೂಜಾಪುನಸ್ಕಾರ ಭೋಜನಾದಿಗಳಿಂದ ಅವರನ್ನು ತೃಪ್ತಿಪಡಿಸುವೆವು. ಮಂಗಲಸ್ತುತಿಗಳನ್ನು ಮಾಡಿ ತಣಿಯುವೆವು.

ನಾವು ಪೂಜೆ ಮಾಡುವ ಉದ್ದೇಶವು ಬಂದ ಜಂಗಮಮೂರ್ತಿಗಳನ್ನು ಸಂತೋಷಪಡಿಸಿ ಅವರಿಂದ ವರವನ್ನು ಪಡೆದುಕೊಳ್ಳಬೇಕೆಂದಲ್ಲ. ಆದರೆ ನಮ್ಮ ಸಂತೋಷವನ್ನು ಮಾತ್ರ ಹೆಚ್ಚಿಸಿಕೊಳ್ಳುವದಕ್ಕಾಗಿ. ಒಬ್ಬರನ್ನು ತೃಪ್ತಿಗೊಳಿಸಬೇಕೆಂದು ಮಾಡುವ ಕಾರ್ಯದಲ್ಲಿ ಸ್ವಾರ್ಥವಿರುತ್ತದೆ. ಆ ಸ್ವಾರ್ಥವು ಸಾಧಿಸದಿದ್ದರೆ ನಾವು ದುಃಖಿತರಾಗುತ್ತೇವೆ. ನಮ್ಮ ಆನಂದಕ್ಕಾಗಿಯೇ ನಾವು ಮಾಡುವ ಕಾರ್ಯದಲ್ಲಿ ನಿಸ್ವಾರ್ಥವಿರುತ್ತದೆ. ನಿಸ್ವಾರ್ಥ ಗುಣವು ನಿಜಸುಖದ ನಿಧಾನವು. ಪೂಜೆಗೊಳ್ಳುವ ಮೂರ್ತಿಗಳಾದರೋ ಏನಾದರೊಂದು ಆಶೆಯನ್ನಿಟ್ಟುಕೊಂಡು ಭಕ್ತರ ಬಳಿಗೆ ಬಂದರೆ ಅವರ ಯೋಗ್ಯತೆಯೂ ಕಡಿಮೆ ತರಹದ್ದೆಂದು ತಿಳಿಯುಬೇಕು. ಯಾಕಂದರೆ ಆ ಸ್ವಾರ್ಥವು ಸಾಧಿಸದಿದ್ದ ಪಕ್ಷದಲ್ಲಿ ಅವರು ಅದನ್ನು ಮನಸಿಗೆ ಹಚ್ಚಿಕೊಂಡು ಕೊರಗುವರು. ಆ ಸ್ವಾರ್ಥಸಾಧನೆಗಾಗಿ ಅವರು ಭಕ್ತರ ಸ್ವಾಧೀನರಾಗಬೇಕಾಗುವದು. ಆದರೆ ನಿಸ್ವಾರ್ಥಿಗಳಾದ ಮೂರ್ತಿಗಳು ನಿಸ್ಪೃಹಿಗಳಿರುತ್ತಾರೆ. "ನಿಸ್ಪೃಹಸ್ಯ ತೃಣಂ ಜಗತ್" ಎಂಬಂತೆ ಭಕ್ತರು ಎಂತಹ ಆಶೆ ಹಚ್ಚಿದರೂ ಅವರು ಅದಕ್ಕೆ ಒಳಗಾಗುವದಿಲ್ಲ.

ನಿರಂಜನ ಮೂರ್ತಿಗಳಾದ ಶ್ರೀಪ್ರಭುದೇವರು ನಿಸ್ವಾರ್ಥ ಬುದ್ಧಿಯ ನಿಸ್ಪೃಹಿಗಳು. ಬಸವಣ್ಣನವರು ನಿಷ್ಕಾಮ ಭಕ್ತಿಯ ನಿಜ ನಿವಾಸವು. ಬೇಡಿದ್ದನ್ನು ಇಲ್ಲೆನ್ನದೆ ನೀಡುವ ಬಸವಣ್ಣನಂಥ ಭಕ್ತನು ದೊರಕಿರುವನೆಂದು ತಿಳಿದು ಪ್ರಭುವು ಅವನಿಂದ ಒಂದು ಕಾಸಿಗಾದರೂ ಆಶೆಮಾಡಲಿಲ್ಲ. ಅದರಂತೆ ಬೇಡಿದಿಷ್ಟಾರ್ಥವನ್ನು ತಪ್ಪದೆ ದಯಪಾಲಿಸಲು ಸಮರ್ಥರಾದ ಪ್ರಭುದೇವರಿಂದ ಬಸವಣ್ಣನವರು ಯಾವ ಲೌಕಿಕ ಇಷ್ಟಸಿದ್ಧಿಗೂ ಬಾಯಿಹಾಕಲಿಲ್ಲ. ಬಸವಣ್ಣನವರದು ನಿಷ್ಕಾಮ ಭಕ್ತಿಯು. ಪ್ರಭುದೇವರದು ನಿರ್ವ್ಯಾಜಸ್ವೀಕಾರವು. ಇದ್ದರೆ ಬಸವಣ್ಣನವರಂಥ ಭಕ್ತರಿರಬೇಕು. ಪ್ರಭುದೇವರಂಥ ಜಂಗಮರಿರಬೇಕು.

'ಹ್ಯಾಂಗೆ ಮಾಳ್ಪರೊ ಹಾಗೆ ಸಕಲೋಪಚಾರಗಳ। ಮಂಗಲದ ಶಿಶುವಾಗಿ ಕೈಕೊಳುತಲಿ। ಬಂಗಾರ ಕಬ್ಬಿಣವು ಹಿರಿಕಿರಿದು ಸಮಗೊಂಡು ಲಿಂಗಮಾಂತೇಶ್ವರ ಜಗತ್ಪಿತ್ರಗೆ। ಜಯಮಂಗಲಂ ನಿತ್ಯ ಶುಭಮಂಗಳಂ॥ ಹೀಗೆಂದು ಹಾಡಿದ ಬಾಲಲೀಲಾ ಮಹಾಂತಸ್ವಾಮಿಗಳ ಸ್ತುತಿಗನುರೂಪವಾದ ಆಚರಣೆಯುಳ್ಳ ನಮ್ಮ ಪ್ರಭುದೇವರನ್ನು ನಮ್ಮ ಶರಣರ ಬಳ

ಗವು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಕುಣಿದಾಡಿತು. ಆದರೆ ನಮ್ಮ ಸಮಾಜದಲ್ಲಿ ಈಗ ಪ್ರಭುದೇವರಂತಹ ನಿಸ್ಪೃಹಿಗಳಾದ ಜಂಗಮರಾಗಲಿ ಬಸವಣ್ಣನವರಂಥ ನಿಷ್ಕಾಮ ಭಕ್ತರಾಗಲಿ ದೊರೆಯುವದು ಬಹು ವಿರಳ. ಆದರೆ ಮೊನ್ನೆ ಶಿವೈಕ್ಯರಾದ ನಮ್ಮ ಶ್ರೀ ಅಥಣಿ ಶಿವಯೋಗಿಗಳು ಮಾತ್ರ ಶ್ರೀಪ್ರಭುದೇವರ ಆಚರಣೆಯನ್ನೇ ಬಹು ಮಟ್ಟಿಗೆ ತಮ್ಮ ನಡುವಳಿಕೆಯಲ್ಲಿ ಅಳವಡಿಸಿದ್ದರಿಂದ ಬಹು ಜನರ ಆದರ ಪೂಜ್ಯತೆಗಳಿಗೆ ಪಾತ್ರರಾಗಿದ್ದರು.

ಪ್ರಭುದೇವರು ಬಸವಣ್ಣನವರ ಮನೆಗೆ ದಯಮಾಡಿಸಿದಾಗ ಬಸವಾದಿ ಪ್ರಮಥರೆಲ್ಲರು ಅವರನ್ನು ಅನನ್ಯ ಭಕ್ತಿಯಿಂದ ಪೂಜಿಸಿ ಸ್ತೋತ್ರ ಮಾಡಿದರು. ಪ್ರಭುದೇವರೂ ಅವರ ಸಂಗಡಿಸಿರ್ದ ಸಿದ್ಧರಾಮ ಶಿವಯೋಗಿಗಳೂ ಬಸವಾದಿ ಶಿವಶರಣರನ್ನು ಮನವಾರೆ ಕೊಂಡಾಡಿ ತಣಿದರು. ಒಬ್ಬರನ್ನೊಬ್ಬರು ಎತ್ತಿ ಹಿಡಿಯುವದರಲ್ಲಿಯೂ ಹೊಗಳುವದರಲ್ಲಿಯೂ ಅವರೆದುರಿಗೆ ತಾನು ಕಡಿಮೆಯೆಂದು ಹೇಳುವದರಲ್ಲಿಯೂ ಸುಖವಿದೆ, ಆನಂದವಿದೆ, ಸ್ವಾರಸ್ಯವಿದೆ. ಆದರೆ ಅನ್ಯರನ್ನು ಬಗ್ಗಿಬಡಿಯುವದಾಗಲಿ, ನಿಂದಿಸುವದಾಗಲಿ, ತಾನು ಇನ್ನೊಬ್ಬರಿಗಿಂತ ಹೆಚ್ಚಿನವನೆಂದು ಸಾಧಿಸುವದಾಗಲಿ ಮನುಷ್ಯನನ್ನು ದುಃಖಾಪತ್ತುಗಳಿಗೀಡುಮಾಡುವದು. ಪರಸ್ಪರ ನಮಸ್ಕಾರಗಳಲ್ಲಿ ಸಮರಸ ಭಕ್ತಿಯುಂಟಾಗುತ್ತದೆ. ಇದನ್ನರಿತೇ ನಮ್ಮ ಶಿವಶರಣರು ನಾ ಹೆಚ್ಚು ನೀ ಕಡಿಮೆಯೆಂಬ ಭಾವನೆಯನ್ನು ಮನಸ್ಸಿನಲ್ಲಿ ತಾರದೆ ಒಬ್ಬರನ್ನೊಬ್ಬರು ಸ್ತುತಿಸುತ್ತಲೂ ಒಬ್ಬರ ದೋಷಗಳನ್ನೊಬ್ಬರು ತಿದ್ದುತ್ತಲೂ ಸುಸಂಸ್ಕೃತಿಯ ಕೊನೆಯ ಸೀಮೆಯನ್ನು ಮುಟ್ಟಿದ ನಾಗರಿಕರಂತೆ ಹಿಂದಕ್ಕೆ ಕಾಲಹರಣ ಮಾಡುತ್ತಿದ್ದರು. ಈಗ ನಮ್ಮ ಸಮಾಜದಲ್ಲಿ ಇಂಥ ಬುದ್ಧಿಯು ಲೋಪವಾಗಿರುವದರಿಂದಲೇ ಗುರುವಿರಕ್ತರಲ್ಲಿ ಕಲಹವು ತಲೆಯೆತ್ತಿದೆ.

ಶ್ರೀ ಪ್ರಭುವಿನ ಪೂಜೆಯೆಂದರೆ ಸಾಕ್ಷಾತ್ ನಿರಂಜನ ವಸ್ತುವಿನ ಪೂಜೆಯು. ಬಸವಾದಿ ಪ್ರಮಥರು ಮಾಡಿದ ಪೂಜಾಸ್ತುತಿ ವಿವರನ್ನು ಇಲ್ಲಿ ಕ್ರಮದಿಂದ ಕೊಟ್ಟಿದೆ.

(೧) ಬಸವೇಶ್ವರ— ಮನದೊಡೆಯ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ ಷಡುಸಮ್ಮಾರ್ಜನೆಯ ಮಾಡಿ ರಂಗವೋಲೆಯನಿಕ್ಕಿ

ಉಘೇ, ಚಾಂಗು, ಭಲಾ ಎಂಬೆನು. ಕೂಡಲಸಂಗಮದೇವಾ ನಿಮ್ಮ ಶರಣ ಪ್ರಭುದೇವರು ಬಂದರೆ ಉಬ್ಬಿ ಕೊಬ್ಬಿ ನಲಿದಾಡುವೆ.

ನಮ್ಮ ಪರಮ ನಿರಂಜನ ಮೂರ್ತಿಯು ಎನ್ನ ಮನೆಗೆ ಬಂದಿರಲು ಪರಮಾನಂದ ಜಲದಿಂದ ಪಾದಾರ್ಚನೆಯಂ ಮಾಡಿ ಜ್ಞಾನಸುಗಂಧಮಂ ಲೇಪಿಸಿ ಹೃದಯಕಮಲ ಪುಷ್ಪದಿಂದ ಪೂಜೆಯನ್ನು ಮಾಡಿ ಸುಜ್ಞಾನವೆಂಬ ಧೂಪವ ಬೀಸಿ ಭಕ್ತಿಸಾರಾಯವೆಂಬ ನೈವೇದ್ಯಮಂ ಸಮರ್ಪಿಸಲು ಸಮರಸ ಸಂಗದಿಂದ ಕೂಡಲಸಂಗಮ ದೇವರ ಶರಣ ಪ್ರಭುದೇವರ ಕರುಣವೆನಗಾಯಿತ್ತು.

ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ । ಶರೀರಮರ್ಥಂಚ ಪ್ರಾಣಂಚ ಸದ್ಗುರುಭ್ಯೋನಿವೇದಯೇತ್" ಎಂದುದಾಗಿ ಭವರೋಗ ವೈದ್ಯನೆಂದು ಕೂಡಲಸಂಗನ ಶರಣರಿಗೆ ಶರಣೆಂಬುದೆನ್ನ ಮನವು.

(೨) ಚೆನ್ನಬಸವೇಶ್ವರ— ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂಬ ಭಾವ ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ ನೋಡಾ. ಸುಜ್ಞಾನಿಗಳಾದ ಲಿಂಗ ಶರಣರ ಕಂಡರೆ ಮಾತ್ರ ನಂಬಿ ನಚ್ಚಿ ಅವರ ಪಾದಕ್ಕೆರಗುವದೆನ್ನ ಮನವು. ಅವರ ಕಂಡೊಡೆ ಕರುಣಾಮೃತ ಸುರಿವುದೆನಗೆ. ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡುವದೆನ್ನ ಮನವು. ಕೂಡಲಚೆನ್ನಸಂಗಮ ದೇವಾ ನಿಮ್ಮ ಪ್ರಭುವೆಂಬ ಜಂಗಮವ ಕಂಡು ಪೂಜಿಸಿ ಪೂಜಿಸಿ ದಣಿಯದೆನ್ನ ಮನವು.

(೩) ಮಡಿವಾಳ ಮಾಚಯ್ಯ— ಪರವಸ್ತುವು ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವೆಂಬರು. ನಾನು ಅದ ಹಿಡಿದು ಮಾತಾಡುವವನಲ್ಲ. ಸತ್ತೇಗುರು, ಚಿತ್ತೇಲಿಂಗ, ಆನಂದವೇ ಜಂಗಮ, ನಿತ್ಯವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂಬುದನನುಗ್ರಹಿಸಿ ನಿಮ್ಮ ಜಂಗಮಕ್ಕೆ ಭಕ್ತನಾದೆನಯ್ಯಾ. ನಿತ್ಯನಾಗಿ ನಿಮ್ಮ ಜಂಗಮಕ್ಕೆ ವಂದಿಸುವೆ. ಆನಂದದಿಂದ ನಿಮ್ಮ ಜಂಗಮದ ಪಾದೋದಕವ ಕೊಂಬೆ. ಪರಿಪೂರ್ಣನಾಗಿ ನಿಮ್ಮನರ್ಚಿಸಿ ಪೂಜಿಸಿ ಪರವಶನಪ್ಪೆ. ನಾನು ಭಕ್ತಿಪ್ರಸಾದ, ಮುಕ್ತಿಪ್ರಸಾದ, ನಿತ್ಯಪ್ರಸಾದವ ನಿಮ್ಮ ಜಂಗಮದಿಂದ ಪಡೆದುಕೊಂಡು ಕಲಿದೇವರ ದೇವಾ ನಿಮ್ಮ ಶರಣ ಪ್ರಭುದೇವರ ಶ್ರೀ ಪಾದದಲ್ಲಿ ಮನಮಗ್ನವಾಗಿಪ್ಪೆನಯ್ಯಾ.

(೪) ಸೊಡ್ಡಳಬಾಚರಸ—ಏಕ ಏವ ನದ್ವಿತೀಯ ಬ್ರಹ್ಮವೆಂಬ ಘನ ಮಹಿಮನ ಕಂಡಾಕ್ಷಣದಲ್ಲಿಯೇ ಮನ ಮನ ಬೆರಸಿ ತನು ತನು ಕರಗಿ ಕರಣಂಗಳೆಲ್ಲ ತರಹರವಾದವಯ್ಯ. ಸದ್ಗುರುವಿನ ಶರಣು ಹೊಕ್ಕೆ ನಾನು. ಎನ್ನ ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರ ಕಂಡು ಎನ್ನ ಭವದ ಬಳ್ಳಿಯ ಬೇರು ಹರಿಯಿತ್ತಯ್ಯಾ.

(೫) ಹಡಪದಪ್ಪಣ್ಣಗಳು— ಮನಕ್ಕೆ ಮನವೊಂದಾಗಿ ಭಾವಕ್ಕೆ ಭಾವವೊಂದಾಗಿ ನಚ್ಚಿ ಮೆಚ್ಚಿದ ಶರಣರ ದರುಶನವಾದ ಬಳಿಕ ಲೌಕಿಕವ ಕತ್ತಲೆಯೆಂದರಿಯೆನಯ್ಯಾ. ಬಸವಪ್ರಿಯ ಕೂಡಲಚನ್ನಸಂಗ ನಿಮ್ಮ ಶರಣ ಪ್ರಭುದೇವರಿಗೆ ಶರಣು ಶರಣೆಂಬುದಲ್ಲದೆ ಅನ್ಯವನೇನೆಂದು ಅರಿಯೆನಯ್ಯಾ.

ಈ ಮೇರೆಗೆ ಅನೇಕ ಪ್ರಮಥರು ಪ್ರಭುದೇವರ ಪಾದಪೂಜೆಯನ್ನು ಭಕ್ತಿಪುರಸ್ಸರವಾಗಿ ಸಾಂಗಗೊಳಿಸಿದರು. ಆ ಮೇಲೆ ಪ್ರಭುದೇವರು ತಮ್ಮ ಪಾದಪೂಜೆಯನ್ನು ಮಾಡಿ ಕೊಂಡಾಡಿದ ಶರಣರನ್ನು ತಿರುಗಿ ಬಹು ಪರಿಯಿಂದ ಹೊಗಳಿದರು. 'ಎನ್ನ ಕಾಯವ ಬಸವಣ್ಣನಳವಡಿಸಿಕೊಂಡ. ಎನ್ನ ಭಾವವ ಮಡಿವಾಳಯ್ಯನಳವಡಿಸಿಕೊಂಡ. ಎನ್ನ ಮನವ ಚನ್ನಬಸವಣ್ಣನಳವಡಿಸಿಕೊಂಡ. ಇಂತೀ ಮೂವ್ವರು ಒಂದೊಂದನಳವಡಿಸಿಕೊಂಡ ಕಾರಣ ಗುಹೇಶ್ವರ, ನಿಮ್ಮ ಶರಣರೆಂಬ ತ್ರಿಮೂರ್ತಿಗಳಿಗೆ ನಮೋ ನಮೋ ಎನುತಿರ್ದೆನು.

ಆ ಮೇಲೆ ಪ್ರಭುದೇವರನ್ನನುಸರಿಸಿ ಬಂದ ಶ್ರೀ ಸಿದ್ಧರಾಮ ಶಿವಯೋಗಿಗಳು ಶ್ರೀ ಬಸವನ ಮಹಿಮೆಯನ್ನು ಪ್ರಭುವಿನೆದುರಿಗೆ ಈ ರೀತಿಯಾಗಿ ಕೊಂಡಾಡಿದರು. "ಅಯ್ಯಾ, ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯಾ. ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಹಾಸಿ ಹೊದೆದುಕೊಂಡೆನಯ್ಯಾ. ಅಯ್ಯಾ ನಿಮ್ಮ ಶರಣಬಸವಣ್ಣನಿಂದ ನಿರವಯವಾದೆನು. ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ ನಿಮ್ಮ ಶರಣಬಸವಣ್ಣಂಗೆ ನಮೋ ನಮೋ ಎನುತಿರ್ದೆನು." ಇದಲ್ಲದೆ "ಎಲೆ ಅಯ್ಯಾ ನಿಮ್ಮ ನಚ್ಚಿದ ಮಚ್ಚಿನ ಶರಣರ ಸಂಗದಲ್ಲಿರಿಸಿ ಎನ್ನ ಧನ್ಯನ ಮಾಡಿದಿರಿ. ಆಹಾ ನಿಮ್ಮ ಕರುಣವನೇನೆಂದುಪಮಿಸುವೆನು? ಕಪಿಲಸಿದ್ಧಮಲ್ಲಿನಾಥಯ್ಯಾ ನಿಮ್ಮ ಶರಣ ಪ್ರಭುದೇವರ ಕರುಣದಿಂದ ಲಾನು ಬದುಕಿದೆನು."

ಪೂಜೆಯೆಂದರೆ ಅಂತರಂಗದ ಪ್ರೇಮವನ್ನು ಬಹಿರಂಗದಲ್ಲಿ ತೋರಿಸುವ ಕ್ರಿಯೆಯು. ಅಂತರಂಗದಲ್ಲಿ ಭಕ್ತಿಯಿದ್ದರೆ ಸಾಕೆಂದು ಬಹಿರಂಗದಲ್ಲಿ ಅರ್ಚನಾದಿಗಳನ್ನಾಚರಿಸದಿದ್ದರೆ ಮನುಷ್ಯನು ಪತಿತನಾಗುತ್ತಾನೆ. ತಾಯಿಯು ಮಗನ ಮೇಲೆ ಪ್ರೀತಿಮಾಡುತ್ತಾಳೆಂದರೆ ಅವಳ ಮನಸ್ಸಿನಲ್ಲಷ್ಟೇ ಪ್ರೇಮವಿರುತ್ತದಂತಲ್ಲ. ಅವಳು ಆ ಪ್ರೇಮವನ್ನು ಹಾವಭಾವಕ್ರಿಯೆಗಳಿಂದ ವ್ಯಕ್ತಗೊಳಿಸುವಳು. ಕೂಸನ್ನು ಅಂದಚಂದವಾದ ಉಡುತೊಡಿಗೆಗಳಿಂದ ಶೃಂಗರಿಸಿ, ಒಳ್ಳೆಣಿಸನ್ನುಣಿಸಿ, ಲಟಲಟ ಮುದ್ದನ್ನುಕೊಟ್ಟು, ಅತಿಶಯೋಕ್ತಿಯುಳ್ಳ ವಿಶೇಷಣಗಳಿಂದ ಅವನನ್ನು ಹೊಗಳಿ ಆನಂದಿಸುವಳು. ಅದರಂತೆ ನಿಜವಾದ ಪೂಜೆಯು ಅಂತರಂಗದ ಪ್ರೇಮವನ್ನೂ ಬಹಿರಂಗದ ಕ್ರಿಯೆಯನ್ನೂ ಅವಲಂಬಿಸಿರುತ್ತದೆ. ಪೂಜ್ಯರಾದ ವಿಭೂತಿಗಳಲ್ಲಿ ನಮಗೆ ಭಕ್ತಿಯಿವೆಯೆಂದರೆ ನಡೆಯುವದಿಲ್ಲ. ಅವರನ್ನು ಮನೆಗೆ ಕರೆಯಿಸಿ ಅಷ್ಟವಿಧಾರ್ಚನೆ ಶೋಡಶೋಪಚಾರಗಳಿಂದ ಸತ್ಕರಿಸಬೇಕು.

ವೀರಶೈವರಲ್ಲಿ ಶಿವಪೂಜೆ, ಶಿವಪ್ರಸಾದ, ಶಿವಾನುಭವಗೋಷ್ಠಿ ಎಂಬ ಕ್ರಮಗಳು ಬಹುದಿವಸಗಳಿಂದ ನಡೆಯುತ್ತ ಬಂದಿವೆ. ಈಗ ಜನರು ಶಿವಪೂಜೆ ಶಿವಪ್ರಸಾದಗಳಿಗೆ ಮಾತ್ರ ಇಂಬುಗೊಟ್ಟು ಶಿವಾನುಭವಗೋಷ್ಠಿಯನ್ನೇ ತೆಗೆದುಹಾಕಿದಂತೆ ಕಂಡುಬರುತ್ತದೆ ನಿಜವಾಗಿ ನೋಡಿದರೆ ಶಿವಪೂಜೆ ಶಿವಪ್ರಸಾದಗಳಿಗಿಂತಲೂ ಶಿವಾನುಭವಗೋಷ್ಠಿಯೇ ಹೆಚ್ಚು ಮಹತ್ವವಾದುದು. ಕೇವಲ ಶಿವಪೂಜೆ ಶಿವಪ್ರಸಾದಗಳಿಗಷ್ಟೇ ಮಹತ್ವ ಕೊಡುವದು ಸಾಮಾನ್ಯ ಜನರ ಸ್ವಭಾವವು. ಶಿವಾನುಭವ ಗೋಷ್ಠಿಯು ಸುಶಿಕ್ಷಿತರ ತುತ್ತು. ಪ್ರಭುದೇವರ ಪೂಜೆಯು ಬರೇ ಪ್ರಸಾದದ ಪೂಜೆಯಲ್ಲ. ಆದರೆ ಶಿವಾನುಭವ ಗೋಷ್ಠಿಯು ಪೂಜೆಯು. ಶಿವಾನುಭವ ಗೊಷ್ಠಿಯೊಂದು ನಡೆದರೆ ಸಾಕು ಅದರಲ್ಲಿಯೇ ಶಿವಪೂಜೆ ಶಿವಪ್ರಸಾದಗಳೆರಡೂ ಸಮಾವೇಶವಾಗುತ್ತವೆ. ಇದನ್ನರಿಯದೆ ನಮ್ಮ ಸಮಾಜದ ಎಷ್ಟೋ ಜನಗಳು ಸಿಪ್ಪೆಯನ್ನು ತಿಂದು ಹಣ್ಣನ್ನು ಚಲ್ಲುವ ಹಾಗೆ ಶಿವಪೂಜೆ ಶಿವಪ್ರಸಾದಗಳನ್ನು ಆಡಂಬರದಿಂದ ಬೆಳಸಿ ಶಿವಾನುಭವ ಗೋಷ್ಠಿಯನ್ನೇ ವರ್ಜಿಸಿರುವರು.

ಪಾದೋದಕ ಪ್ರಸಾದದ ತತ್ವವಾದರೂ ಮೊದಲು ಶಿವಾನುಭವ ಗೋಷ್ಠಿಯ ಫಲವಾಗಿಯೇ ನೇರ್ಪಟ್ಟದ್ದಿತು. ಆದರೆ ಈಗ ಬಸವಾದಿ

ಪ್ರಮಥರಂತಹ ಶಿವಾನುಭಾವಿಗಳು ಯಾರೂ ಇಲ್ಲದ್ದರಿಂದ ಬರೇ ಪೂಜಾಡಂಬರವೂ ಆಶನಘಾತಕತನವೂ ಮಾತ್ರ ಹೆಚ್ಚಾಗಿವೆ. ಶಿವಾನುಭಾವಿಗಳಲ್ಲದವರನ್ನು ಮನೆಗೆ ಬರಮಾಡಿಕೊಂಡು ಅವರಿಂದ ಪಾದೋದಕ ಪ್ರಸಾದ ಕ್ರಿಯೆಗಳನ್ನು ನಡೆಯಿಸುವದು ಶುದ್ಧ ತಪ್ಪಾದದ್ದು. ಶ್ರಾವಣ ಮಾಸವೆಂದು ಶಿವಾನುಭವ ಶ್ರವಣಮಾಡದೆ ಮನೆಗೆ ಬಂದ ಅಯ್ಯನವರ ಕಾಲು ತೊಳೆದು, ಅವರಿಗೆ ಅಡ್ಡ ಉದ್ದ ಬಿದ್ದು ಅವರ ಹೊಟ್ಟೆಯನ್ನು ಮಿಷ್ಟಾನ್ನದಿಂದ ತೃಪ್ತಿಪಡಿಸಿದರೆ ಯಾವ ಪುಣ್ಯವೂ ಬರಲಾರದು. ಪ್ರಭುದೇವರೊಡನೆ ಶರಣರು ನಡೆಯಿಸಿದ ಪಾದೋದಕ ಪ್ರಸಾದ ಕ್ರಿಯೆಯು ಶಿವಾನುಭವ ಗೊಷ್ಠಿಯಿಂದ ತುಂಬಿ ತುಳುಕುತ್ತಿದ್ದಿತೆಂದು ಮೇಲಿನ ಪ್ರಸ್ತಾಪದಿಂದ ಸಹಜವಾಗಿ ಹೊಳೆಯುವದು.

ನಮ್ಮ ಸಮಾಜದಲ್ಲಿ ಪಾದೋದಕ ಪ್ರಸಾದ ತತ್ವವನ್ನಾಚರಿಸುವವರು ಈ ಸಂಪಾದನೆಯಿಂದ ತಿಳಿದುಕೊಳ್ಳುವ ಮುಖ್ಯ ಸಂಗತಿಯೆಂದರೆ ಶಿವಾನುಭಾವಿಗಳಾದ ಪೂಜ್ಯರಿಂದ ಲಿಂಗಾಂಗ ಸಾಮರಸ್ಯದ ವಿಷಯಗಳನ್ನರಿತುಕೊಂಡು ಅದರಂತೆ ಆಚರಿಸಬೇಕೇ ವಿನಾ ಏನೋ ಮೂಢ ಸಾಂಪ್ರದಾಯದಂತೆ ಬರೇ ಪಾದೋದಕ ಪ್ರಸಾದದ ಮಬ್ಬಿಗೆ ಬೀಳುವದನುಚಿತವು.

---

# ಪಾಶ್ಚಾತ್ಯರ ತತ್ವಶಾಸ್ತ್ರ.

ಲೇಖಕ:— ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ

(ಮುಂದೆ ಸಾಗಿದ್ದು)



ರೋಮ ಜನರ ತತ್ವ:— ಕ್ರಿ. ಪೂ. ೩೨೨ ರಿಂದ ಕ್ರಿ. ಶ. ೪೭೬ ರ ವರೆಗೆ ಅರಿಸ್ಟಾಟಲನ ಮರಣದ ತರುವಾಯ ರೋಮಜನರ ತತ್ವವು ೮೦೦ ವರ್ಷಗಳ ವರೆಗೆ ಸಾಗಿತು. ಅಲೆಗ್ಝಾಂಡರನು ಮೃತವಾದ ನಂತರ ಗ್ರೀಸದೇಶವು ೨೦೦ ವರ್ಷಗಳ ವರೆಗೆ ದಂಗೆ ಮತ್ತು ರಾಜ್ಯಕ್ರಾಂತಿಗಳ ಆಗರವಾಯಿತು. ಅದರ ರಾಜ್ಯಪದ್ಧತಿಯು ನಾಶವಾಗಿ ಅದು ಕ್ರಿ. ಪೂ. ೧೪೬ ರಲ್ಲಿ ರೋಮ ಚಕ್ರಾಧಿಪತ್ಯಕ್ಕೆ ಅಧೀನವಾಯಿತು. ಆ ಮೇಲೆ ಅದರ ರಾಷ್ಟ್ರೀಯತ್ವವು ಅಡಗಿಹೋಯಿತು. ಆದರೆ ಅದು ತತ್ವಜ್ಞಾನ ವನ್ನು ಜಗತ್ತಿಗೆಲ್ಲ ಕೊಡುವಂತಹದಾಯಿತು. ಅಲೆಗ್ಝಾಂಡರನ ಕಾಲಕ್ಕೆ ಗ್ರೀಸವು ರಾಜ್ಯಘಟನಾಶಕ್ತಿಯಲ್ಲಿ ಶಿಖರವನ್ನೇರಿತು. ಮತ್ತು ವಿಚಾರೋ ತ್ಪಾದಕಶಕ್ತಿಯಲ್ಲಿ ಅರಿಸ್ಟಾಟಲನ ಕಾಲಕ್ಕೆ ಉತ್ತಮ ಸ್ಥಾನವನ್ನು ಅಲಂಕ ರಿಸಿತು. ಅದರ ರಾಜ್ಯವು ನಾಶವಾದರೂ ಅದರ ನಾಗರಿಕತ್ವವು ಜಗ ತ್ತನ್ನೇ ಪಸರಿಸಿತು. ರೋಮ ದೇಶದ ತರುಣರು ಅಥೆನ್ಸ ಪಟ್ಟಣಕ್ಕೆ ವಿದ್ಯಾಭ್ಯಾಸಕ್ಕೆ ಹೋಗಹತ್ತಿದರು. ರೋಮ ಜನರು ಒಕ್ಕಲಿಗರೂ, ವ್ಯಾಪಾರಿಗಳೂ, ಯೋದ್ಧರೂ ಇದ್ದರಲ್ಲದೆ ಅವರಲ್ಲಿ ಯಾವ ಕಲೆಯಾ ಗಲಿ, ತತ್ವಜ್ಞಾನವಾಗಲಿ ಇರಲಿಲ್ಲ. ಅವರು ಗ್ರೀಸದ ವಾಙ್ಮಯವನ್ನೂ ಕಲೆಯನ್ನೂ, ನೀತಿಯನ್ನೂ, ಧರ್ಮವನ್ನೂ ಸ್ವೀಕರಿಸಿದರು. ಗ್ರೀಸದ ತತ್ವ-ಬೆಳವಣಿಗೆಯ ಕಾಲವು ೩೦೦ ವರ್ಷಗಳ ವರೆಗೆ ರೋಮ ದೇಶದ್ದು ೮೦೦ ವರ್ಷ, ಮಧ್ಯವರ್ತಿ ಕಾಲದ ತತ್ವವು ೧೦೦೦ ವರ್ಷ, ಆಧುನಿಕ ಕಾಲವು ೪೭೫ ವರ್ಷ ತತ್ವಪ್ರಚಾರದ ಅವಧಿಯಿರುವದು.

ರೋಮ ಜನರ ತತ್ವಕಾಲದಲ್ಲಿ ಸಂಶಯವಾದವು (*Skepticism*) ಪ್ರಾಮುಖ್ಯವಾಗಿದೆ. ಸತ್ಯಜ್ಞಾನವು ಅಸಂಭವವೆಂದು ಇವರ ಹೇಳಿಕೆ. ಜ್ಞಾನಸಾಧನೆಗೆ ಬುದ್ಧಿಯು ಆಧಾರವಾಗಿರಲಾರದೆಂದು ಇವರ ನಂಬಿಕೆ. ವ್ಯವಹಾರ ಜೀವನಕ್ಕೆ ಆವಶ್ಯವಾದ ಜ್ಞಾನವಾವುದೆಂಬುದೇ ಇವರ ಮುಖ್ಯ ಸಮಸ್ಯೆಯು. ಇವರ ವಿದ್ಯಾಪೀಠಗಳು ಅಥೆನ್ಸ, ಅಲೆಗ್ಝಾಂಡ್ರಿಯ,

ರ್ಹೋಡ್ಸ, ಅಂಟಿಯಾಕ್, ಪೆರಗಾಮುಸ್, ಟಾರ್ಸಸ್ ಮೊದಲಾದ ಕಡೆಗಳಲ್ಲಿದ್ದವು. ಅಲೆಗ್ಝಾಂಡ್ರಿಯಾದಲ್ಲಿ ಪ್ರತಿಯೊಂದು ದೇಶದ ಪಂಡಿತರು ಇರಿಸಲ್ಪಟ್ಟಿದ್ದರು. ಅಲ್ಲಿ ಸಸ್ಯಶಾಸ್ತ್ರೀಯ ತೋಟವು(*Botanical gerden*) ಪ್ರಾಣಿಶಾಸ್ತ್ರಸಂಗ್ರಹವೂ (*Zoological collection*) ಶರೀರ ರಚನಾ ಶಾಲೆಯೂ, (*Anatomical museum*) ಜ್ಯೋತಿಷಶಾಸ್ತ್ರದ ಶಾಲೆಯೂ (*Astronomical observatoy*) ಮತ್ತು ಏಳು ಲಕ್ಷ ಗ್ರಂಥಗಳ ವಾಚನಾಲಯವೂ ಇದ್ದವು. ಇಲ್ಲಿಯೇ ಯುಕ್ಲಿಡನು ತನ್ನ ರೇಖಾಗಣಿತವನ್ನು ಬರೆದನು. ಟೊಲೆಮಿಯು ಜ್ಯೋತಿಷಶಾಸ್ತ್ರವನ್ನು ರಚಿಸಿದನು. ಇಲ್ಲಿಯೇ ಕ್ರೈಸ್ತದೈವಜ್ಞರು ವಿದ್ಯಾಭ್ಯಾಸಂಗಮಾಡಿದರು. ಮತ್ತು ಇಲ್ಲಿಯೇ ಹೊಸ ಪ್ಲೇಟೋನ ಪಂಥವು ಉದ್ಭವಿಸಿತು. ಹಿಬ್ರುಭಾಷೆಯ ಬಾಯಬಲ್ ಗ್ರಂಥವು ಗ್ರೀಕ ಭಾಷೆಯಲ್ಲಿ ಬರೆಯಲ್ಪಟ್ಟಿತು. ಎಲ್ಲ ಧರ್ಮಗಳಿಗೂ ಆಶ್ರಯವು ಕೊಡಲ್ಪಟ್ಟಿತು

ಎಪಿಕ್ಯೂರಿಯನ್‌ಪಂಥಃ— ಕ್ರಿ ಪೂ. ೩೪೧-೨೭೦ ಎಪಿಕ್ಯೂರಸನು ಏಷ್ಯಾಮೈನರದ ಸ್ಯಾಮಾಸ ಎಂಬಲ್ಲಿ ಹುಟ್ಟಿದನು. ಇವನು ಅಥೆನ್ಸದಲ್ಲಿ ಕ್ರಿ. ಪೂ. ೩೦೭ ರಲ್ಲಿ ತನ್ನ ತತ್ವಶಾಲೆಯನ್ನು ಸ್ಥಾಪಿಸಿದನು. ಇವನ ಸುಖವಾದವು ಜನರನ್ನು ಸುಲಭವಾಗಿ ಆಕರ್ಷಿಸಿದ್ದರಿಂದ ಅದು ಬಹು ದೂರ ಪಸರಿಸಿತು. ಇವನ ತಾಯಿಯು ಪೂಜಾರಿ ಇದ್ದದರಿಂದ ಅವಳ ಮೂಢ ನಂಬಿಕೆಯ ಪ್ರತಿಗಾಮಿ ಭೋದವನ್ನು ಇವನು ಪ್ರಚುರಗೊಳಿಸಹತ್ತಿದನು. ಇವನು ಜನರ ಸಂಸಾರ ಬಂಧನದ ಭಾರವನ್ನು ಕಡಿಮೆ ಮಾಡಿ ಶಾಂತಿಜೀವನವನ್ನುಂಟುಮಾಡುವ ಉದ್ದೇಶವುಳ್ಳವನಾಗಿದ್ದನು. ಇವನ ಸುಖವಾದವು ಪ್ರಾಜ್ಞರಾದ ಕೆಲವರ ಮಟ್ಟಿಗೆ ಇತ್ತಲ್ಲದೆ ಅರಿಸ್ಟಿಪಸ್ ಎಂಬವನ ಸುಖವಾದದಂತೆ ಕೀಳುತರದ್ದಾಗಿರಲಿಲ್ಲ. ಅರಿಸ್ಟಿಪಸನ ಸೈರೆನಿಕ್ ಪಂಥದ ಅನುಯಾಯಿಗಳು ಕೇವಲ ಪ್ರಪಂಚಿಕರಾಗಿದ್ದರು. ಎಪಿಕ್ಯೂರಿಯನ್ ಪಂಥದ ಅನುಯಾಯಿಗಳು ಪ್ರಪಂಚದಲ್ಲಿದ್ದರೂ ಪಾರಮಾರ್ಥವನ್ನು ಹಿಡಿದಿದ್ದರು. ಎಪಿಕ್ಯೂರಸನ ಬೋಧೆಗೂ ೧೮ ನೇ ಶತಮಾನದಲ್ಲಿ ಫ್ರೆಂಚಜನರಿಗೆ ಬೋಧಿಸಿದ ರೂಸೋನ ಬೋಧೆಗೂ ಸ್ವಲ್ಪ ಹೋಲಿಕೆಯುಂಟು. ಈರ್ವರೂ ಶಾಶ್ವತ ಸುಖವನ್ನು ಪ್ರತಿಪಾದಿಸಿದರು. ಈರ್ವರೂ ಸಮಾಜದ ಕೃತ್ರಿಮ ಪದ್ಧತಿಗಳನ್ನು ನಿಷೇಧಿಸಿದರು. ರುಸೋನು ರಾಜಕೀಯ ಸುಧಾರಕನಾಗಿದ್ದನು. ಆದರೆ ಎಪಿಕ್ಯೂರಸನ ಧ್ಯೇಯವು

ಶಾಂತಿಯಾಗಿತ್ತೇ ಹೊರತು ಶಸ್ತ್ರಧಾರಣವಾಗಿರಲಿಲ್ಲ. ಸುಖವು ಶ್ರೇಯ ಸ್ಸಾದದ್ದು ದುಃಖವು ಕೆಡಕಾದದ್ದು. ಆದರೆ ಕೆಲವು ವೇಳೆ ಹೆಚ್ಚಿನ ಸುಖಕ್ಕಾಗಿ ದುಃಖವನ್ನು ಸ್ವೀಕರಿಸಬೇಕಾಗುವದು. ಸೈರೆನೆಯಿಕರು ಸುಖವು ಅಲ್ಪಕಾಲದ್ದಾದರೂ ಆಧಿಕ್ಯವಿದ್ದದ್ದಕ್ಕೆ ಪ್ರಾಧಾನ್ಯಕೊಟ್ಟರು. ಆದರೆ ಎಪಿಕ್ಯೂರಸನು ದೀರ್ಘಕಾಲದ ಸುಖಕ್ಕೆ ಪ್ರಾಧಾನ್ಯಕೊಟ್ಟು ಸೈರೆನಿಕರ ತತ್ವಕ್ಕಿಂತ ಮೇಲ್ಮೆಯನ್ನು ತೋರಿಸಿದನು. ಮತ್ತು ಶರೀರಸುಖಕ್ಕಿಂತ ಮನೋಸುಖವು ಮಿಗಿಲಾದದ್ದೆಂದು ಯಥಾರ್ಥವಾಗಿ ಹೇಳಿದನು. ಪ್ರಪಂಚ ದಿಂದ ನಿರ್ಲಿಪ್ತನಾಗಿರುವುದೇ ಧ್ಯೇಯವೆಂದು ಇವನು ಹೇಳಿದನು. ಮನೋ ವಿಕಾರರಹಿತನಾಗಿ ಶಾಂತಿಯಿಂದಿರುವದೇ ಪಾರಮಾರ್ಥಿಕವು. ಜಗತ್ತಿನ ಮೇಲೆ ಮನುಷ್ಯನ ಅಧಿಕಾರ ನಡೆಯದ್ದರಿಂದ ತನ್ನ ಅಂತರಂಗದಲ್ಲಾ ಗುವ ಜಗತ್ತಿನ ಪರಿಣಾಮಗಳನ್ನು ಮನುಷ್ಯನು ನಿಗ್ರಹಿಸಬೇಕು. ಈ ಪರಿಣಾಮಗಳೇ ಮನೋವಿಕಾರಗಳಾಗಿವೆ. ಆಶೆಗಳು ಕೊರತೆಗಳಾಗಿವೆ. ಕೊರತೆಯಿಂದ ದುಃಖವುಂಟಾಗುವದು. ಆಶಾರಹಿತವಾಗಿರುವದೇ ಸುಖವು. ಸುಖವನ್ನು ಶಕ್ಯವಿದ್ದಮಟ್ಟಿಗೆ ಅನುಭವಿಸಬೇಕು. ಎಪಿಕ್ಯೂರಸನು ಸುಖ ವನ್ನು ತ್ಯಾಗಮಾಡಲು ಸಿದ್ಧನಿರಲಿಲ್ಲ. ಯಾಕಂದರೆ ಅವನು ವೈರಾಗಿಯಿದ್ದಿಲ್ಲ.

ಸದ್ಗುಣವು ಮತ್ತು ಸುಖವು ಒಂದನ್ನೊಂದು ಅನುಸರಿಸುವವು. ಸದ್ಗುಣವು ಸುಖದ ಸಾಧನವಿರುವಾಗಲೇ ಅದಕ್ಕೆ ಬೆಲೆಯುಂಟು. ಜ್ಞಾನ ದಿಂದ ಮೋಕ್ಷಸುಖವು ಲಭಿಸುತ್ತದೆ. ಆತ್ಮನಿಗ್ರಹದಿಂದ ಪರಮಾವಧಿ ಸುಖವನ್ನು ಹೊಂದಬಹುದು. ಶಾಶ್ವತವಾದ ಸುಖವನ್ನೇ ಅನುಸರಿಸ ಬೇಕು. ಎಪಿಕ್ಯೂರಸನು ಸ್ಟೋಯಿಕ್‌ರಂತೆ ಎಲ್ಲ ಸುಖಗಳನ್ನು ಅನಾದರ ಮಾಡುವದಿಲ್ಲ. ಆದಾಗ್ಯೂ ಅವುಗಳಿಂದ ನಿರ್ಲಿಪ್ತನಾಗಿರಬಲ್ಲನು. ಅಲ್ಪ ಸುಖದಿಂದ ಅವನು ತೃಪ್ತನಾಗಿರಬಲ್ಲನು. ಅವನು ಜಗತ್ತಿನ ಬಂಧನಗ ಳಿಗೆ ಸಿಲುಕದವನು. ಸರಕಾರವು ಸ್ವಾರ್ಥಮಯವಾದದ್ದೆಂದು ಅವನ ಭಾವನೆ. ವಿವಾಹದ ಭಾರವನ್ನು ಅವನು ವಹಿಸಲು ಒಪ್ಪುವದಿಲ್ಲ. ಆದರೆ ಸ್ನೇಹವು ಪರಸ್ಪರ ಹಿತಕಾರಿ ಇರುವದರಿಂದ ಅದೊಂದನ್ನೇ ಸಾಧಿಸಲು ಒಪ್ಪುತ್ತಾನೆ. ಧರ್ಮವು ಮರಣಭಯವನ್ನುಂಟುಮಾಡುವ ದರಿಂದ ಅದನ್ನು ಅನುಸರಿಸದಿರುವದೇ ಒಳ್ಳೇದು. ದೇವರ ಭಯವಾ ದರೂ ಮನುಷ್ಯನ ಶಾಂತಿಯನ್ನು ನಾಶಗೊಳಿಸುವದು. ಯಾವ ಜ್ಞಾನವು ಸುಖವನ್ನುಂಟುಮಾಡುವದಿಲ್ಲವೋ ಅದು ಅನಾವಶ್ಯಕವು. ಡೆಮಾಕ್ರಿಟ

ಸನ ಅನುವಾದವನ್ನು ಇವನು ಸ್ವೀಕರಿಸಿದನು. ಅಣುಗಳು ಇಚ್ಛಾಶಕ್ತಿಯುಳ್ಳವುಗಳೆಂದು ಹೇಳಿದನು. ಇವನು ಅದೃಷ್ಟ ವಾದವನ್ನು ನಿರಾಕರಿಸಿ ಇಚ್ಛಾಸ್ವಾತಂತ್ರ್ಯವನ್ನು ಪ್ರತಿಪಾದಿಸಿದನು. ಇಚ್ಛಾಶಕ್ತಿಯುತವಾದ ಅಣುಗಳಿಂದ ಜಗತ್ತು ಉತ್ಪತ್ತಿಯಾಗುವದು. ಮರಣಕಾಲಕ್ಕೆ ಆತ್ಮದ ಅಣುಗಳು ದೇಹದಿಂದ ಚದುರಿಹೋಗುವವು.

## ಸ್ಟೋಯಿಕ್ ಪಂಥ.

ಈ ಪಂಥದ ಕಾಲವು ೫೦೦ ವರ್ಷಗಳ ವರೆಗೆ ಸಾಗಿತು. ಇದರ ಅನುಯಾಯಿಗಳು ಪ್ರಸಿದ್ಧ ಮೇಧಾವಿಗಳಾಗಿದ್ದರು. ಇವರು ಮನುಷ್ಯ ಜೀವನವು ಸ್ವಾರಸ್ಯವಿಲ್ಲದ್ದಾಗಿಯೂ ಪರಲೋಕವೇ ಶ್ರೇಷ್ಠವಾಗಿಯೂ ತಿಳಿದರು. ಈ ಪಂಥದ ಸ್ಥಾಪಕನಾದ ಝೀನೋ ಎಂಬವನು ತನ್ನ ಹಣವನ್ನೆಲ್ಲ ವ್ಯಾಪಾರದಲ್ಲಿ ಕಳೆದುಕೊಂಡು ಸಾಕ್ರೆಟಿಸನ ಜೀವನಕ್ಕೆ ಮೆಚ್ಚಿ ತತ್ವಜ್ಞಾನದ ಕಡೆಗೆ ಮನಸು ಹಾಕಿದನು. ಇವನ ಉದಾತ್ತ ಜೀವನದ ಯಶಸ್ಸು ಗ್ರೀಸದಲ್ಲೆಲ್ಲ ಪಸರಿಸಿತು. ಇವನು ಅದೃಷ್ಟದಲ್ಲಿ ನಂಬಿಗೆಯುಳ್ಳವನಿದ್ದನು. ಇವನಿಗೆ ಸ್ವಲ್ಪ ಗಾಯವಾಗಲು ಅದೇ ನೆವದಿಂದ "ಭೂಮಾತೆಯೇ ಬರುತ್ತೇನೆ. ಯಾಕೆ ನನ್ನನ್ನು ಕರೆಯುವಿ" ಎಂದು ಹೇಳುತ್ತ ಆತ್ಮಹತ್ಯ ಮಾಡಿಕೊಂಡನು.

ಕ್ರಿಸಿಪಸ್:— ಕ್ರಿ. ಪೂ. ೨೮೦—೨೦೭ ಇವನು ಸ್ಟೋಯಿಕ್ ಪಂಥದ ತತ್ವಗಳನ್ನು ಸರಿಯಾಗಿ ವ್ಯವಸ್ಥೆಗೊಳಿಸಿದನು. ಇವನು ೫೦೫ ಗ್ರಂಥಗಳನ್ನು ರಚಿಸಿದನು. ಇವನು ಪ್ರತಿದಿನ ೫೦೦ ಪಕ್ತಿಗಳನ್ನು ಬರೆಯದ ಹೊರ್ತು ಯಾವ ದಿವಸವನ್ನೂ ವ್ಯರ್ಥ ಕಳೆಯುತ್ತಿರಲಿಲ್ಲ. ಶ್ರೀಮಂತರನ್ನೂ ಅಧಿಕಾರಸ್ಥರನ್ನೂ ಅನಾದರಮಾಡುತ್ತಿದ್ದನು. ಸ್ಟೋಯಿಕರ ಮುಖ್ಯ ತತ್ವವೇನಂದರೆ ಆತ್ಮವು ಸಂಸಾರ ಬಂಧನದಿಂದ ನಿರ್ಲಿಪ್ತವಾದದ್ದೂ, ಸ್ವತಂತ್ರವಾದದ್ದೂ ಎಂಬದು. ಆತ್ಮವು ಇಂದ್ರಿಯವಿಕಾರಗಳನ್ನು ಜ್ಞಾನರೂಪವಾಗಿ ಮಾಡುವದಲ್ಲದೆ ಭಾವವಿಕಾರಗಳನ್ನು (*Excitations of feelings*) ಇಚ್ಛಾಶಕ್ತಿಯಾಗಿ ರೂಪಾಂತರಿಸುವದು. ಆತ್ಮದ ಈ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದ್ದು ಪಾಶ್ಚಿಮಾತ್ಯರ ಚರಿತ್ರೆಯಲ್ಲಿ ಇದೇ ಮೊದಲನೆಯದು. ಇವರು ಇಂದ್ರಿಯಗಳಿಗಿಂತ ಬುದ್ಧಿಯು ಶ್ರೇಷ್ಠವಾದದ್ದೆಂದು ಗ್ರಹಿಸಿದರು. ಬುದ್ಧಿಯು ಪ್ರಜ್ಞೆಯನ್ನುಂಟುಮಾಡುವ ಶಕ್ತಿಯಾಗಿದೆ. ಸದ್ಗುಣಿಯು ಆತ್ಮಸಂತೋಷಿಯಾಗಿರುವನು. ಅವನು ಸುಖದುಃಖಗಳನ್ನು

ಸಮವಾಗಿ ತಿಳಿಯುವನು. ಬುದ್ಧಿವಂತನೊಬ್ಬನೇ ಸತ್ಯವನ್ನು ಅನುಭವಿಸುತ್ತಾನೆ. ಬುದ್ಧಿಗನುಗುಣವಾಗಿ ನಡೆಯುವದೇ ಶ್ರೇಯವಾದದ್ದು. ಇದೇ ಸದ್ಗುಣವು. ಬುದ್ಧಿಗನುಗುಣವಾಗಿ ನಡೆದದ್ದರ ಪರಿಣಾಮವೇ ಪರಮಸುಖವು. (*Highest good*) ಮನೋವಿಕಾರಕ್ಕನುಗುಣವಾಗಿ ನಡೆದದ್ದರ ಪರಿಣಾಮವು ದುಃಖವಾಗಿದೆ. ಈ ಬುದ್ಧಿಯ ಕಟ್ಟಳೆಗೆ ಸ್ಟೋಯಿಕನು ಆನಂದದಿಂದಲೂ, ಶಾಂತಿಯಿಂದಲೂ, ವಿಶ್ವಾಸದಿಂದಲೂ ಆಧೀನವಾಗಿದ್ದನು.

ಸ್ಟೋಯಿಕರು ಸೃಷ್ಟಿಯಲ್ಲಿಯ ಬುದ್ಧಿ ತತ್ವವನ್ನು (*Logos*) ಜಗತ್ತಿಗೆ ಮೂಲತತ್ವವೆಂದು ತಿಳಿದರು. ಇವರು ಜಗದೀಶ್ವರವಾದಿಗಳು (*Pantheists*). ಸೃಷ್ಟಿಯು ದೇವರಾಗಿದೆ. ದೇವರಲ್ಲಿ ಸೃಷ್ಟಿಸುವ ಶಕ್ತಿಯೂ ನಿಯಾಮಕ ಶಕ್ತಿಯೂ ಇದೆ. ಸೃಷ್ಟಿಯ ನಿಯಮವು ಅನಿವಾರ್ಯವಾಗಿದೆ. ಅದು ಅದೃಷ್ಟ ಸ್ವರೂಪವಾಗಿದೆ. ದೇವರು ಸರ್ವಾಂತರ್ಯಾಮಿಯು, ಪ್ರಕೃತಿಯಲ್ಲಿಯ ಮನಸ್ಸು ಮೂಲ ವಸ್ತುವು. ತನ್ನ ಅಂತರ್ಬುದ್ಧಿಯಿಂದ ಶಕ್ತಿ ಮತ್ತು ಪ್ರಗತಿಗಳಾಗಿ ಪರಿಣಮಿಸುತ್ತದೆ. ಶಕ್ತಿಯು ಜಗತ್ತಿನ ಆತ್ಮವಾಗಿದೆ. ಪ್ರಕೃತಿಯು ಜಗತ್ತಿನ ಶರೀರವಾಗಿದೆ. ಸೃಷ್ಟಿಯು ಚಲನಶಕ್ತಿಯುಳ್ಳದ್ದಾಗಿದೆ. ಮನುಷ್ಯನ ಆತ್ಮವು ದೇವರ ಅಂಶವಾಗಿದೆ ಆತ್ಮದಿಂದಲೇ ಮನುಷ್ಯನ ಚಟುವಟಿಕೆಗಳು ನಡೆಯುತ್ತವೆ. ಸೃಷ್ಟಿನಿಯಮಕ್ಕನುಗುಣವಾಗಿ ನಡೆಯುವದು ಮನುಷ್ಯನ ಸ್ವಭಾವಕ್ಕನುಗುಣವಾಗಿ ನಡೆದಂತೆಯೇ.

ಸಾಮಾಜಿಕ ವಿಚಾರ— ಮನುಷ್ಯರು ಎರಡು ವರ್ಗವಾಗಿರುವರೆಂದು ಸ್ಟೋಯಿಕರು ಹೇಳುತ್ತಾರೆ. ಸದ್ಗುಣಯುತರಾದ ಜ್ಞಾನಿಗಳು ಮತ್ತು ದುರ್ಗುಣಯುತರಾದ ದುಷ್ಟರು. ಸದ್ಗುಣಿಗಳು ಅಲ್ಪ ಸಂಖ್ಯಾಕರಿರುವರು. ಜನರೊಡನೆ ನ್ಯಾಯ, ಪ್ರೇಮ, ಸ್ನೇಹ, ಅನನ್ಯ ಭಾವದಿಂದ ವರ್ತಿಸಬೇಕು. ನ್ಯಾಯವಾದದ್ದಾವದೆಂಬದನ್ನು ವ್ಯಕ್ತಿಯೇ ನಿರ್ಣಯಿಸಿಕೊಳ್ಳಬೇಕು. ಗುಲಾಮಗಿರಿಯನ್ನು ತೆಗೆದುಹಾಕಬೇಕು. ಬಡವರನ್ನೂ ರೋಗಿಗಳನ್ನೂ ಸಂರಕ್ಷಿಸಬೇಕು.

ಪಾಪ ಮತ್ತು ಸ್ವಾತಂತ್ರ್ಯ ವಿಚಾರ— ಮನುಷ್ಯನು ದೇವತಾಂಶನು. ತನ್ನ ನಡತೆಯನ್ನು ಸುಧಾರಿಸಿಕೊಳ್ಳಲು ಮನುಷ್ಯನಿಗೆ ಸ್ವಾತಂತ್ರ್ಯವಿದೆ.

ಸೃಷ್ಟಿ ನಿಯಮವನ್ನು ಆವನು ಉಲ್ಲಂಘಿಸಲಾರನು. ಈ ದೃಷ್ಟಿಯಿಂದ ಅವನಿಗೆ ಸ್ವಾತಂತ್ರ್ಯವಿಲ್ಲ. ಆತ್ಮವು ತನ್ನ ಧ್ಯೇಯವನ್ನು ಸಾಧಿಸಿಕೊಂಡಾಗ ಸ್ವಾತಂತ್ರ್ಯವಾಗುವದು. ದೇವರು ಮನುಷ್ಯನ ಇಚ್ಛಾಶಕ್ತಿ ಮೂಲಕವಾಗಿ ಕಾರ್ಯಮಾಡುವನು. ಸ್ಟೋಯಿಕರು ಮನುಷ್ಯನಿಗೆ ಪೂರ್ಣಸ್ವಾತಂತ್ರ್ಯವಿಲ್ಲವೆಂತಲೂ ಅದೃಷ್ಟದ ಆಧಾರದ ಮೇಲೆ ಭವಿಷ್ಯವು ಹೇಳಲ್ಪಡುವದೆಂತಲೂ ದೇವತೆಗಳಾದರೂ ಅದೃಷ್ಟದ ಆಧಾರದ ಮೇಲೆ ಭವಿಷ್ಯಜ್ಞಾನಿಗಳಾಗಿರುವರೆಂತಲೂ ಹೇಳಿದರು.

ಪಾರಮಾರ್ಥಿಕ ವಿಚಾರ ಬೆಳವಣಿಗೆ— ಕ್ರೈಸ್ತನ ಅಗಾಧ ಜೀವಿತದಿಂದ ಪಾರಮಾರ್ಥಿಕ ಕಲ್ಪನೆಯು ವಿಸ್ತರಿಸಿತು. ಇಂಥ ವಿಭೂತಿಗಳು ತೋರಿಸುವ ಕೃತಿಗಳು ಮನುಷ್ಯ ಕೃತಿಗಳಾಗಿರದೆ ದೈವಿಕವಾಗಿವೆ. *(Revelation)* ಮಾನವ ಬುದ್ಧಿಯು ದೈವಜ್ಞಾನವನ್ನು ಹೊಂದಲು ಅಶಕ್ತವಾಗಿದೆ.

ಫೈಲೋ ಮತ್ತು ಯಹುದೀತತ್ವ (ಜ್ಯೂ)— ಜ್ಯೂ ಜನರ ತತ್ವಜ್ಞಾನವು ಹಳೇ ಬೈಬಲಿನಲ್ಲಿದೆ. ಇವರು ಹಳೇ ಬೈಬಲಿನ ತತ್ವವನ್ನು ವಿವರಿಸುವಾಗ ಗ್ರೀಕ ತತ್ವವನ್ನು ಸಾಧನವಾಗಿ ಉಪಯೋಗಿಸಿದರು. ಫೈಲೋನು ಹಳೇ ಬೈಬಲಿನ ತತ್ವಗಳಿಂದ ಗ್ರೀಕ ತತ್ವ ಜ್ಞಾನವು ಉತ್ಪನ್ನವಾಗಿವೆಯೆಂದು ಹೇಳಿದನು. ಇವನ ಸಿದ್ಧಾಂತವು ಜ್ಯೂ ಮತ್ತು ಕ್ರಿಶ್ಚಿಯನ್ ಸಿದ್ಧಾಂತಗಳ ಮಾಧ್ಯಮಿಕ ಸಿದ್ಧಾಂತವಾಗಿತ್ತು. ದೇವರು ಜಗತ್ತಿನ ಮೂಲಕಾರಣನು. ಅವನು ನಿರಾಕಾರನಿದ್ದು ವಾಚಾತೀತನಾಗಿದ್ದಾನೆ, ಮನಸ್ಸಿಗೆ ನಿಲುಕದವನೂ, ಅವರ್ಣನೀಯನೂ ಆಗಿದ್ದಾನೆ. ಆತ್ಮವು ದೇವರಿಂದ ಬಂದದ್ದು. ದೇಹವು ಪ್ರಕೃತಿಯಿಂದಾಗಿದೆ. ಜಗತ್ತಿನಲ್ಲಿಯ ದೇವರ ಕ್ರಿಯಾಶಕ್ತಿಗೆ ಇವನು (*Logas*) ಎಂದು ಕರೆಯುತ್ತಾನೆ. ಕ್ರಿಯಾಶಕ್ತಿಯು ದೇವರ ಆಜ್ಞೆಯಂತೆ ವರ್ತಿಸುವದು. ಪುನರ್ಜನ್ಮವನ್ನು ಇವನು ನಂಬಿದನು. ಆತ್ಮವು ದೇವರಲ್ಲಿ ಐಕ್ಯವನ್ನು ಹೊಂದಲು ಶಕ್ಯವಿದೆ.

ಹೊಸ ಪ್ಲೇಟೋನ ಪಂಥ— ಈ ಪಂಥವು ವೈರಾಗ್ಯ ಮಾರ್ಗವನ್ನು ಮುಖ್ಯವಾಗಿ ಅವಲಂಬಿಸಿತು. ದೇಹವು ಪಾಪದ ಆಗರವು, ಆತ್ಮವು ದೇಹದ ತುಚ್ಛಸ್ಥಿತಿಯನ್ನು ನಿಂದಿಸುವದು; ಆದ್ದರಿಂದ ದೇಹವನ್ನು ತ್ಯಜಿಸಬೇಕು ಎಂದು ಈ ಪಂಥದ ಮುಖಂಡನಾದ ಪ್ಲೋಟಿನಸ್ ಎಂಬ

ವನು ಹೇಳುತ್ತಾನೆ. ಆತ್ಮದಲ್ಲಿಯ ಈ ನೈತಿಕ ಕಲಹವು ಜಗತ್ತಿನಲ್ಲಿಯೂ ಸಹ ಪ್ರತಿಭಟಿಸುತ್ತದೆ. ದೇವರು ನಿರಾಕಾರನು. ಈ ಪಂಥಕ್ಕೂ ಕ್ರಿಶ್ಚಿಯನ್ ಧರ್ಮಕ್ಕೂ ಒಂದು ವಿಷಯವು ಸಾಮಾನ್ಯವಾಗಿ ಒಪ್ಪಿಗೆಯುಳ್ಳದ್ದಾಗಿದೆ. ಜಗತ್ತನ್ನು ದೈವೀಭೂತವಾಗಿ ಮಾಡುವದೇ ಈ ವಿಷಯವು. ಕ್ರೈಸ್ತ ಧರ್ಮವು ದೇವರನ್ನೂ ಪ್ರಕೃತಿಯನ್ನೂ ಪ್ರೇಮಬಂಧನದಿಂದ ಐಕ್ಯ ಮಾಡಿರುವದು. ಹೊಸ ಪ್ಲೇಟೋನ ಪಂಥವು ಮನುಷ್ಯನು ಆತ್ಮಸಾಕ್ಷಾತ್ಕಾರದಿಂದ ಕ್ರಮವಾಗಿ ದೇವರನ್ನು ಹೊಂದುವನೆಂದು ಹೇಳುತ್ತದೆ.

ಪ್ಲೊಟಿನಸ್— ಕ್ರಿ. ಶ. ೨೦೪-೨೬೯. ಇವನು ಈಜಿಪ್ತದಲ್ಲಿಯ ಲಕೊಪೊಲಿಸ್ ಎಂಬಲ್ಲಿ ಹುಟ್ಟಿದನು. ಅಲೆಗ್ಝಾಂಡ್ರಿಯಾ ಪಟ್ಟಣದಲ್ಲಿ ವಿದ್ಯಾಭ್ಯಾಸ ಮಾಡಿದನು. ಗೋರ್ಡಿಯನ್ ಎಂಬ ಚಕ್ರವರ್ತಿಯು ಪರ್ಶಿಯಾ ದೇಶಕ್ಕೆ ದಂಡೆತ್ತಿಹೋದಾಗ ಶಾಸ್ತ್ರಾಭ್ಯಾಸದ ಸಲುವಾಗಿ ಅವನನ್ನು ಹಿಂಬಾಲಿಸಿದನು. ಕ್ರಿ. ಶ. ೨೪೪ ರಲ್ಲಿ ರೋಮ ಪಟ್ಟಣದಲ್ಲಿ ವಿದ್ಯಾಗುರುವಾಗಿದ್ದನು. ಅವನ ಶಾಲೆಯಲ್ಲಿ ಎಲ್ಲ ಜನಾಂಗದ ಪ್ರತಿನಿಧಿಗಳಿದ್ದರು. ಅವನು ಚಕ್ರವರ್ತಿಯ ಕಡೆಯಿಂದ ತತ್ವಜ್ಞಾನಿಗಳ ಮಂಟಪವನ್ನು ಕ್ಯಾಂಪೇನಿಯಾದಲ್ಲಿ ಕಟ್ಟಿಸಿದನು. ಮನುಷ್ಯನು ಅಹರ್ನಿಶಿಯೂ ದೈವೀ ಚಿಂತನೆಯಲ್ಲಿರುವನೆಂದೂ ಇದು ಅವನ ಸಹಜ ಸ್ವಭಾವವೆಂದೂ, ದೇವರು ಅವರ್ಣನೀಯನೆಂದೂ, ಸರ್ವಾಂತರ್ಯಾಮಿಯೆಂದೂ, ಪ್ರತಿಯೊಂದು ವಸ್ತುವು ಅವನಿಂದ ಜೀವಕಳೆಯನ್ನು ಹೊಂದುತ್ತದೆಂದೂ ಇವನು ಹೇಳುತ್ತಾನೆ. (*Theory of emanations*) ದೇವರು ತನ್ನ ಶಕ್ತಿವಿಶೇಷದಿಂದ ತನಗೆ ಸದೃಶವಾದ ಸೃಷ್ಟಿಯನ್ನು ನಿರ್ಮಿಸುತ್ತಾನೆ. ಈ ನಿರ್ಮಾಣಶಕ್ತಿಯು ಪ್ರತಿಯೊಂದು ಪ್ರಾಣಿಯಲ್ಲಿರುವದು. ಉತ್ಪತ್ತಿಕ್ರಮವು ಮೂರು ವಿಧವಾಗಿದೆ. ಚಿಚ್ಛಕ್ತಿ, ಆತ್ಮ, ಮತ್ತು ಪ್ರಕೃತಿ. ಮೊದಲು ಚಿಚ್ಛಕ್ತಿಯು ದೇವರ ಪ್ರತಿಬಿಂಬವಾಗಿ ಉತ್ಪತ್ತಿಯಾಗುವದು. ಅದು ದೇವರ ಕಡೆಗೆ ತಿರುಗಿದಾಗ ತಾನು ದೇವರ ಪ್ರತಿಬಿಂಬವೆಂದು ಅದಕ್ಕೆ ಪ್ರಜ್ಞೆಯುಂಟಾಗುವದು. ಹೀಗೆ ವಿಚಾರ ಮಾಡುವವನ ಪ್ರಜ್ಞೆ ವಿಚಾರಕ್ಕೆ ವಿಷಯವಾದ ವಸ್ತುವಿನ ಪ್ರಜ್ಞೆ (*Consciousness of the subject and that of object*) ಎಂಬ ಕಲ್ಪನೆಯು ಉಂಟಾದದ್ದು ಇದೇ ಮೊದಲು. ಚಿಚ್ಛಕ್ತಿಯು ಕಾಲ್ಪನಿಕ ವಸ್ತುವಾಗಿರದೆ ನಿಜವಾದ ವಸ್ತುವಾಗಿದೆ. ಆತ್ಮವು ಚಿಚ್ಛಕ್ತಿಯ ಪ್ರತಿಬಿಂಬವಾಗಿದೆ. ಪ್ರಕೃತಿಯು ಆತ್ಮದಿಂದ ಉತ್ಪತ್ತಿಯಾಗು

ವದು. ಜಗತ್ತು ಮಾಯಾರೂಪವಾಗಿದೆ. ದೇವತೆಗಳು ಪ್ರಕೃತಿಯಿಂದ ಕೂಡಿದ ಪರಿಪೂರ್ಣನಾದ ಆತ್ಮಗಳಾಗಿವೆ. ಪ್ರಕೃತಿಯು ಇರುವ ಕಡೆ ಯಲ್ಲೆಲ್ಲ ಅಪರಿಪೂರ್ಣತೆಯುಂಟು.

ಪ್ಲೋಟಿನಸನ ನೈತಿಕಸಿದ್ಧಾಂತಃ— ಮನುಷ್ಯರು ಪ್ರಕೃತಿಯಿಂದಾಚ್ಛಾದಿತವಾಗಿದ್ದರೂ ದೈವಿಕ ಜೀವನದಲ್ಲಿ ಭಾಗಿಗಳಾಗಿದ್ದಾರೆ. ಜಗತ್ತಿನಿಂದ ಬಿಡುಗಡೆ ಹೊಂದುವದು ಮನುಷ್ಯರ ಧ್ಯೇಯವಾಗಿದೆ. ಆತ್ಮವು ಧ್ಯಾನ ಮಗ್ನವಾದಾಗ ತನ್ನ ಮೂಲ ವಸ್ತುವಾದ ದೇವರ ಸಾನ್ನಿಧ್ಯವನ್ನು ಹೊಂದುವದು. ಭಕ್ತಿಯ ಆನಂದಾತಿರೇಕವುಂಟಾದಾಗ ತನ್ನನ್ನು ಮರೆತು ತಾನೇ ಪರಮಾತ್ಮನಾಗುವನು. ಈ ವಿಚಾರವು ವೀರಶೈವರ ಕೇವಲತ್ವವು ಅಥವಾ ಐಕ್ಯಭಾವಕ್ಕೆ ಸದೃಶವಾಗಿದೆ. ಈ ಐಕ್ಯವು ಘಟಿಸಬೇಕಾದರೆ ಆತ್ಮಕ್ಕೆ ದೇವಪ್ರೇರಣೆಯಾಗಬೇಕಾಗುವದೆಂದು ಪ್ಲೋಟಿನಸನು ಹೇಳುತ್ತಾನೆ.

## ಬೈಬಲಿನ ಪ್ರಸಾರವೂ ಕ್ರೈಸ್ತಧರ್ಮವೂ.

ಕ್ರೈಸ್ತ ಮತವು ತತ್ವಪಂಥವಾಗಿರದೆ ಧರ್ಮಪಂಥವಾಗಿತ್ತು. ಈ ಸಮಾಜವು ಜಾತಿಭೇದವಿಲ್ಲದ (*Cosmopolitan*) ಸಮಾಜವಾಗಿತ್ತು. ಈ ಮತವು ಒಬ್ಬ ಪರಮಾತ್ಮನಲ್ಲಿ ನಂಬಿಗೆಯನ್ನೂ ಕ್ರೈಸ್ತನಲ್ಲಿ ಭಕ್ತಿಯನ್ನೂ ಇರಿಸಿತು. ಸತ್ಯದಿಂದ ನಡೆಯುವದು ದೇವರ ಆಜ್ಞೆಯೆಂತಲೂ ಮನುಷ್ಯನ ಕೃತಿಗನುಗುಣವಾಗಿ ದೇವರು ಅಂತ್ಯದಲ್ಲಿ ನಿರ್ಣಯವನ್ನು ಹೇಳುವನೆಂತಲೂ (*Last judgment*) ಇವರ ನಂಬಿಗೆ. ಕ್ರಿ. ಶ. ೩೦ ರಲ್ಲಿ ಈ ಸಮಾಜದ ಸಂಖ್ಯೆಯು ೫೦೦, ಕ್ರಿ. ಶ. ೧೦೦ ರಲ್ಲಿ ೫೦೦೦೦೦ ಕ್ರಿ. ಶ. ೩೧೧ ರಲ್ಲಿ ಮೂರು ಕೋಟಿಯಾಯಿತು. ಇಷ್ಟರಲ್ಲಿ ಅದು ರೋಮ, ಗ್ರೀಸ ದೇಶಗಳಲ್ಲಿ ಪಸರಿಸಿತು. ದೇವವಾಕ್ಯವು ಕ್ರೈಸ್ತನ ಮುಖಾಂತರ ಬೋಧಿಸಲ್ಪಟ್ಟಿತೆಂತಲೂ, ಕ್ರೈಸ್ತನು ಜಗದಾತ್ಮನೆಂತಲೂ ಅವನು ದೇವರ ಪುತ್ರನೆಂತಲೂ ಕ್ರೈಸ್ತಾನುಯಾಯಿಗಳಾದ ಅಪಾಲಾಜಿಷ್ಟರೆಂಬವರು (*Apologists*) ಪ್ರತಿಪಾದಿಸಿದರು.

ಗ್ನೊಸ್ಟಿಕ್ ಎಂಬ ಕ್ರೈಸ್ತ ಪಂಥವು ಕ್ರೈಸ್ತನಿಂದ ಸರ್ವಜೀವಿಗಳ ಮೋಕ್ಷವಾಗುವದೆಂದು ಹೇಳಿತು. ಸೃಷ್ಟಿಯು ಸತ್ಯಾಸತ್ಯಗಳ ಕಲಹ ಕ್ಷೇತ್ರವಾಗಿದ್ದು ಸತ್ಯವು ಕ್ರೈಸ್ತನ ಸಹಾಯದಿಂದ ಜಯವನ್ನು ಹೊಂದು

ವದು. ಇದರಂತೆಯೇ ಆತ್ಮ ಮತ್ತು ಪ್ರಕೃತಿಗಳ ನಡುವೆ ಕಲಹವು ನಡೆದಿಪ್ಪ ಜಗದಾತ್ಮನಾದ ಕ್ರೈಸ್ತನಿಂದ ಆತ್ಮವು ಪ್ರಕೃತಿಯ ಬಲೆಯಿಂದ ಬಿಡುಗಡೆಹೊಂದುವದು.

ಕ್ರೈಸ್ತ ದೈವಜ್ಞರು— (*Theologians*) ಒರಿಜೆನ್ ಕ್ರಿ. ಶ. ೧೮೫—೨೫೪. ದೇವರು ಅನಾದ್ಯನಂತನೂ, ಶಾಶ್ವತನೂ, ಸೃಷ್ಟಿಕರ್ತನೂ ಇದ್ದಾನೆ. ಅವನ ಕ್ರಿಯಾಶಕ್ತಿಯು ಅವನಂತೆಯೇ ಶಾಶ್ವತವಾದದ್ದು. ಕ್ರೈಸ್ತನು ದ್ವಿತೀಯ ಶಂಭುವು. ಪವಿತ್ರ ಆತ್ಮವಾದರೂ ದೇವರ ಪ್ರತಿಬಿಂಬವು. ಈ ಮೂರು ತತ್ವಗಳೂ ಒಂದೇ (*Unity*) ಆಗಿವೆ. (*Spiritual monotheism*) ದೃಶ್ಯ ಜಗತ್ತು ದೇವರಿಂದ ನಿರ್ಮಿತವಾಗಿದ್ದು ಅಂತ್ಯದಲ್ಲಿ ದೇವರಲ್ಲಿಯೇ ಬೆರೆಯುವದು. ಜೀವಿಗಳು ಇಚ್ಛಾಸ್ವಾತಂತ್ರ್ಯವುಳ್ಳವುಗಳಾಗಿದ್ದು ಪ್ರಕೃತಿಮಯವಾದ ಜಗತ್ತಿನಿಂದ ಬಿಡುಗಡೆಹೊಂದಿ ಪರಮಾತ್ಮನನ್ನು ಸೇರುವವು. ದೇವರ ಇಚ್ಛಾಶಕ್ತಿಯು ದೃಢವಾದದ್ದೂ, ನಿಜವಾದದ್ದೂ ಇರುವದು. ಆತ್ಮದ ಇಚ್ಛಾಶಕ್ತಿಯು ಚಂಚಲವಾದದ್ದು. ಇದರಿಂದಲೇ ಜೀವಿಗಳು ಪಾಪ ಮಾಡುವರು. ಇವರ ಪಾಪಕೃತ್ಯಕ್ಕೆ ದೇವರು ಕಾರಣನಲ್ಲವೆಂದು ಒರಿಜೆನ್ನನು ಸಯುಕ್ತಿಕವಾಗಿ ಹೇಳಿದ್ದಾನೆ. ಇವನು ದೇವರ ಸರ್ವಶಕ್ತಿ ಕಲ್ಪನೆಯ ಮತ್ತು ಪಾಪಕಲ್ಪನೆಯ ನಡುವಿನ ವಿರೋಧವನ್ನು ಇಚ್ಛಾಸ್ವಾತಂತ್ರ್ಯ ಕಲ್ಪನೆಯ ಸಾಧನದಿಂದ ಹೋಗಲಾಡಿಸಿದನು. ದೇವರಲ್ಲಿ ಭಕ್ತಿ ಕ್ರೈಸ್ತನಲ್ಲಿ ನಂಬಿಕೆ ಇಡುವದರಿಂದ ಜೀವಿಗಳು ದೇವರ ಸಾನ್ನಿಧ್ಯವನ್ನು ಅವನ ಕೃಪೆಯಿಂದ (*Grace*) ಹೊಂದುವರು. ಜೀವಿಗಳ ಮೋಕ್ಷಕ್ಕಾಗಿ ಕ್ರೈಸ್ತನು ಭೌತಿಕ ಹಿಂಸೆಯನ್ನನುಭವಿಸಿ ಅವರನ್ನು ಪಾರುಮಾಡುವನು.

## ಮಧ್ಯವರ್ತಿಕಾಲ ಕ್ರಿ. ಶ. ೪೭೬—೧೪೫೩.

ಈ ಕಾಲವು ಸುಮಾರು ೧೦೦೦ ವರ್ಷಗಳ ವರೆಗೆ ಸಾಗಿತು. ಈ ಕಾಲದ ಪ್ರಸಿದ್ಧ ತತ್ವಜ್ಞಾನಿಯು ಅಗಸ್ಟಾಯಿನನು. ಸೇಂಟಪಾಲ್ ಮತ್ತು ಪ್ಲೋಟಿನಸ್ ಇವರ ಪ್ರೇರಣೆಯು ಇವನ ಮೇಲೆ ವಿಶೇಷವಾಗಿ ಆಯಿತು. ದೇವರಲ್ಲಿಯ ಪೂರ್ಣ ನಂಬಿಗೆಯು ದೇವಮನುಷ್ಯರ ಸಂಬಂಧವನ್ನು ತೋರಿಸುವುದಕ್ಕೆ ಆಧಾರವಾಗಿದೆ ಎಂದು ಇವನು ಹೇಳಿದನು. ಇವನಿಗೆ ಕ್ರೈಸ್ತ ಧರ್ಮದ ಪ್ಲೇಟೋ ಎಂದು ಹೆಸರಾಯಿತು. ಇವನು

ಕಾರ್ಥೇಜದಲ್ಲಿ ಶಿಕ್ಷಣ ಹೊಂದಿದನು. ಇವನು ಅಗಾಧವಾದ ಮೇಧಾವಿಯು. ಇವನು ಕ್ರಿ. ಶ. ೩೫೪ ರಿಂದ ೪೩೦ ರ ವರೆಗೆ ಜೀವಿಸಿದನು. ತಾರುಣ್ಯದಲ್ಲಿ ದುರ್ವ್ಯಸನಿಯಾಗಿದ್ದನು. ಆಮೇಲೆ ಪಶ್ಚಾತ್ತಾಪ ಪಟ್ಟು ತನ್ನ ಪಾಪಕೃತ್ಯಗಳ ದೂಷಣೆಯನ್ನು ತನ್ನ ಆತ್ಮನಿರೂಪಣೆ (*Confessions*) ಎಂಬ ಗ್ರಂಥದಲ್ಲಿ ವಿವರಿಸಿದ್ದಾನೆ. ತನ್ನ ತಾಯಿಯ ಮತ್ತು ಸೇಂಟ ಆ್ಯಂದ್ರೋಸ ಎಂಬವರ ಪ್ರೇರಣೆಯಿಂದ ಕ್ರೈಸ್ತಧರ್ಮದಲ್ಲಿ ಶ್ರದ್ಧೆವಹಿಸಿದನು. ಪಾದ್ರಿಯ ಸ್ಥಾನವನ್ನು ಸ್ವೀಕರಿಸಿದನು. ಅವನು (*City of God*) ದೇವನಗರ ಎಂಬ ಗ್ರಂಥವನ್ನು ಬರೆದನು. ಅದರಲ್ಲಿ ಪರಮಾತ್ಮನು ಭೂಮಿಯಲ್ಲಿರದೆ ಸ್ವರ್ಗದಲ್ಲಿದ್ದಾನೆಂದು ಹೇಳಿದ್ದಾನೆ. ಇವನ ಬೋಧೆಯಲ್ಲಿ ಚರ್ಚದ ಅಧಿಕಾರ ಮತ್ತು ವ್ಯಕ್ತಿಯ ಪ್ರಜ್ಞೆಯ ಅಧಿಕಾರ ಇವೆರಡು ವಿಚಾರಗಳು ಪ್ರಾಮುಖ್ಯವಾಗಿವೆ. ಇವನು ಬುದ್ಧಿ ಮತ್ತು ಅವತಾರೋಕ್ತಿಗಳಲ್ಲಿ ಯಾವದು ಹೆಚ್ಚು ಆಧಾರವಾದದ್ದೆಂದು ಹೇಳಿರುವದಿಲ್ಲ. ಆದಾಗ್ಯೂ ಇವನು ಶ್ರದ್ಧೆಗೆ ಜ್ಞಾನವೇ ಆಧಾರವಾದದ್ದೆಂದು (*Knowledge as basis of faith*) ಹೇಳಿ ತತ್ವಮಾರ್ಗವನ್ನವಲಂಬಿಸಿದನು. ಇವನ ಬಾಹ್ಯ ಜಗತ್ತಿನ ಅನುಭವದಿಂದ ತೃಪ್ತನಾಗದೆ ಆತ್ಮನಿರೀಕ್ಷಣೆಯ ಅನುಭವದಲ್ಲಿ ಆಸಕ್ತನಾದನು. ಹೀಗೆ ಇವನು ಆಧುನಿಕ ಮಾನಸಶಾಸ್ತ್ರದ ತಳಹದಿಯನ್ನು ಹಾಕಿದನು. ಭೌತಿಕ ಜಗತ್ತು ಅಸ್ಥಿರವಾಗಿದ್ದು ನಾಶವಾಗಬಹುದು. ಆದರೆ ಆತ್ಮವು ಶಾಶ್ವತವಾದದ್ದೂ ಸತ್ಯನಾದದ್ದೂ ಇದೆ. ಈ ನಿತ್ಯ ವಸ್ತುವು ನನ್ನಲ್ಲಿಯೇ ಇದೆ. ಇದಕ್ಕೆ ಸಂಶಯಪಡುವದಾದರೆ ಇದರ ನಿತ್ಯತ್ವವನ್ನು ಸಿದ್ಧಗೊಳಿಸಿದಂತೆಯೇ. ಜಗತ್ತಿಗೆ ಆಧಾರವಾದ ವಸ್ತುವು ಇರಲೇಬೇಕು. ಈ ವಸ್ತುವೇ ದೇವರು.

ದೇವರ ಪ್ರೇಮವೇ ನೀತಿಯು. ಸೃಷ್ಟಿಸೌಂದರ್ಯವು ದೇವರ ನಿರ್ಮಾಣವೇ ಆಗಿದೆ. ಭಕ್ತಿ ಪ್ರೇಮಗಳಿಂದ ದೇವರ ಕಾರುಣ್ಯವುಂಟಾಗುವದು. ದೇವರ ಕಾರುಣ್ಯದಿಂದಲೇ ಸತ್ಯದ ಜ್ಞಾನವುಂಟಾಗುವದು. ಸದಿಚ್ಛೆಯೊಂದೇ ಸ್ವತಂತ್ರವಾದದ್ದೆಂದು ಇವನು ಹೇಳುತ್ತಾನೆ. ಪಾಪವು ಎಲ್ಲರಲ್ಲಿಯೂ ಆದಿಯಿಂದ ಇರುವದು. ದೇವರ ಕಾರುಣ್ಯವಿಲ್ಲದೆ ಮನುಷ್ಯನು ತನ್ನ ಪ್ರಯತ್ನದಿಂದಲೇ ಮೋಕ್ಷ ಸಂಪಾದಿಸಲಾರನು. ಹಳೇ ಬೈಬಲಿನಲ್ಲಿ ಹೇಳಿದ ಆದಿಮನುಷ್ಯನಾದ ಆ್ಯಡಮ್ಮನ ಪಾಪದಿಂದ ಮನುಷ್ಯವರ್ಗವೆಲ್ಲ ಪಾಪಭಾಗಿಗಳಾಗುತ್ತಿದ್ದರು. ಆದರೆ ದೇವರ ಕರುಣೆ

ಯಿಂದ ಪಾರಾದರು. ದೇವತಾವತಾರನಾದ ಕ್ರೈಸ್ತನು ಮರಣಯಾತನೆ ಯಿಂದ ದೇವಪ್ರೇಮವನ್ನು ಮನುಷ್ಯರ ಹೃದಯದಲ್ಲಿ ತುಂಬಿದನು. ಕ್ರೈಸ್ತನಲ್ಲಿಯ ನಂಬಿಗೆಯು ಮೋಕ್ಷಸಾಧನವು. ಈ ನಂಬಿಗೆಯಾದರೂ ದೇವರ ಕೃಪೆಯಿಂದಲೇ ಉಂಟಾಗುವದು. ಆ್ಯಡಮ್ಮನ ಪಾಪಕ್ಕೆ ನಿರಂ ತರ ಶಾಸನವನ್ನನುಭೋಗಿಸಲು ಕೆಲವು ಜನರಾದರೂ ಮೋಕ್ಷಭಾಗಿಗ ಳಾಗದೆ ಇರಬೇಕಾಗುವದು.

ಕಪ್ಪುಯುಗ (*Dark ages*) ಕ್ರಿ. ಶ. ೪೭೬—೮೦೦ ಈ ಕಾಲದಲ್ಲಿ ಕಲಹ, ರಕ್ತಪಾತಗಳು ನಡೆದದ್ದರಿಂದ ತತ್ವಜ್ಞಾನದ ಪ್ರಗತಿಯಾಗಲಿಲ್ಲ. ಮುಂದೆ ಚಾರ್ಲೆಮೇನನು ಕ್ರಿ. ಶ. ೮೦೦ ರಿಂದ ತತ್ವದ ಪ್ರಸಾರವನ್ನು ಕೈಕೊಂಡನು. ಅದು ಕ್ರಿ. ಶ. ೯೦೦ ರ ವರೆಗೆ ಸಾಗಿತು. ಈ ಕಾಲದಲ್ಲಿ ತತ್ವಪ್ರಸಾರದ ಮೂರು ಸ್ಥಳಗಳು ಮಾತ್ರ ಇದ್ದವು. ಪೂರ್ವದೇಶದಲ್ಲಿ ಅರೇಬಿಯಾ ಮತ್ತು ಕಾನ್‌ಸ್ಟಾಂಟಿನೋಪಲ್ ಪಶ್ಚಿಮಭಾಗದಲ್ಲಿ ಬ್ರಿಟನ್.

ಜಾನ್‌ಸ್ಕೋಟಸ್ ಎರಿಜೆನಾಃ— ಕ್ರಿ. ಶ. ೮೧೦—೮೮೦ ಇವನು ಐರ್ಲಂಡದಲ್ಲಿ ಜನಿಸಿದನು. ಇವನು ಮಧ್ಯವರ್ತಿ ಕಾಲದ ಪ್ರಖ್ಯಾತ ಪುರುಷನು. ಇವನು ಮನುಷ್ಯನ ಅದೃಷ್ಟವು ದೇವರಿಂದ ಮೊದಲೇ ನಿಶ್ಚಯಿಸಲ್ಪಟ್ಟಿರುವದೆಂದೂ, ರೊಟ್ಟಿಯೂ ಸುರೆಯೂ ಶುದ್ಧಮಾಡಿದ ಮೇಲೆ ಕ್ರೈಸ್ತನ ರಕ್ತ, ದೇಹಗಳಾಗುವವೆಂತಲೂ (*Transubstan-tiation*) ಬೋಧಿಸಿದ್ದರಿಂದ ಇವನು ತೀರಿದ ಮುನ್ನೂರು ವರ್ಷಗಳ ವರೆಗೆ ಇವನನ್ನು ಧರ್ಮಲಂಡನೆಂದು ಕರೆದರು. ಇವನ ವಿದ್ವತ್ತು ಶ್ರೇಷ್ಠ ವಾಗಿದ್ದರಿಂದ ಇವನಿಗೆ ಉತ್ತರದೇಶದ ಉತ್ಪಾದಕನೆಂದು ಹೆಸರಾಯಿತು. ಇವನಿಗೆ ಗ್ರೀಕ ಭಾಷೆಯ ಜ್ಞಾನವಿದ್ದದ್ದು ಆ ಕಾಲದಲ್ಲಿ ವಿಶೇಷ ಸಂಗ ತಿಯಾಗಿತ್ತು. ಹೊಸ ಪ್ಲೇಟೋಪಂಥದ ತತ್ವದ ಮೇಲೆ ಪ್ರಖ್ಯಾತವಾದ ಗ್ರಂಥವನ್ನು ಬರೆದನು. ದೇವರು ಅಗಮ್ಯನು ಆದ್ದರಿಂದ ಅವನು ವಾಚಾ ತೀತನು. ದೇವರೇ ಸೃಷ್ಟಿರೂಪದಲ್ಲಿದ್ದಾನೆ. ದೇವರು ನಾಲ್ಕು ಸ್ವರೂಪ ದಲ್ಲಿ ಕಾಣಿಸಿಕೊಳ್ಳುತ್ತಾನೆ. (೧) ಕೇವಲಸ್ವರೂಪ, (೨) ದೇವರಲ್ಲಿದ್ದ ಜಗತ್ತು, (೩) ದೇವರಿಂದ ವಿಭಕ್ತವಾದ ಬಹಿರಂಗದ ಜಗತ್ತು, (೪) ಜಗತ್ತು ದೇವರಲ್ಲಿ ಬೆರೆತ ನಂತರ ಇರುವ ದೇವರು. ಸೃಷ್ಟಿಯು ದೇವ ರಿಂದಲೇ ಪ್ರಾದುರ್ಭವಿಸುವದು. ಸೃಷ್ಟ ಜೀವವು ದೇವರಲ್ಲಿ ಪುನಃ ಸೇರಿ ಕೊಳ್ಳುವದೇ ಮೋಕ್ಷವಾಗಿದೆ. ಸೃಷ್ಟಿಯಲ್ಲಿ ಇದೇ ಪ್ರಕಾರ ಪ್ರತಿಯೊಂದು

ವಸ್ತುವು ಮತ್ತೊಂದು ವಸ್ತುವಿನಲ್ಲಿ ಬೆರೆಯುವದೆಂದು ಇವನು ಹೇಳಿದನು. ಸತ್ಯ ವಸ್ತುವು ಸಾರ್ವತ್ರಿಕವಾದದ್ದು (*Universal*) ದೇವರ ಕಲ್ಪನೆಯು ಸಾರ್ವತ್ರಿಕವಾದ್ದರಿಂದ ದೇವರು ಇದ್ದಾನೆ. ಜಗತ್ತಿನ ಕಲ್ಪನೆಯು ದೇವರ ಕಲ್ಪನೆಯಷ್ಟು ಸಾರ್ವತ್ರಿಕವಾದದ್ದಿರುವದಿಲ್ಲ ಮತ್ತು ಅಷ್ಟು ಪರಿಪೂರ್ಣವಾದದ್ದಿರುವದಿಲ್ಲ. ಮತ್ತು ಜಗತ್ತಿನ ಅಸ್ತಿತ್ವವು ದೇವರ ಅಸ್ತಿತ್ವದಂತೆ ನಿಶ್ಚಿತವಾದದ್ದಲ್ಲ.

ಇವನ ತರುವಾಯ ಕ್ರಿ. ಶ. ೯೦೦—೧೦೦೦ ದ ವರೆಗೆ ಜ್ಞಾನಾರ್ಜನೆಯು ಕುಂದಿತು. ಚಾರ್ಲೆಮೋನನ ಚಕ್ರಾಧಿಪತ್ಯವು ವಿಚ್ಛಿನ್ನವಾಯಿತು. ಪೋಪನ (ಕ್ರಿಸ್ತರ ಜಗದ್ಗುರು) ಅಧಿಕಾರವು ಕೆಲವು ಕಾಲ ಅದೃಶ್ಯವಾಯಿತು.

ಸ್ಕೊಲಾಸ್ಟಿಕ್ ಪಂಥಃ— ಕ್ರಿ. ಶ. ೧೦೦೦-೧೨೮೦ ಇವರು ಮಧ್ಯವರ್ತಿ ಕಾಲದಲ್ಲಿ ಬ್ರಹ್ಮಜ್ಞಾನವಾದದಲ್ಲಿ ತರ್ಕಪದ್ಧತಿಯನ್ನು ಅನುಸರಿಸಿದರು. ಇವರು ಕ್ರೈಸ್ತಮತದ ಸಿದ್ಧಾಂತವು ಪ್ರಮಾಣವೆಂದೂ ಅದು ತರ್ಕಪದ್ಧತಿಗೆ ಅನುಗುಣವಾಗಿರುವದೆಂದೂ ಪ್ರತಿಪಾದಿಸಿದರು. ಈ ಕಾಲದ ತತ್ವವೇತ್ತರನ್ನು ಮೂರು ವಿಧವಾಗಿ ವಿಂಗಡಿಸಬಹುದು. (೧) ನೈಜವಾದಿಗಳು (*Realists*). ಇವರು ಸಮಷ್ಟಿ ಭಾವನೆಯು ನಿಜವಾದದ್ದೆಂತಲೂ ವ್ಯಷ್ಟಿಯು ಸಮಷ್ಟಿಯ ಛಾಯೆಯೆಂತಲೂ ಪ್ರತಿಪಾದಿಸಿದರು. (೨) ನಾಮವಾದಿಗಳು (*Nominalists*). ಇವರು ಸಮಷ್ಟಿಯು ನಾಮಮಾತ್ರ ಉಳ್ಳದೆಂತಲೂ ಅದು ವ್ಯಷ್ಟಿವಸ್ತುವಿನಿಂದ ಉತ್ಪನ್ನವಾದ ಛಾಯೆಯೆಂತಲೂ ಗ್ರಹಿಸಿದರು. (೩) ಭಾವನಾವಾದಿಗಳು (*Conceptualists*) ಇವರು ಸತ್ಯ ವಸ್ತುವು ವ್ಯಷ್ಟಿಯಲ್ಲಿಯೇ ಇರುವದೆಂದೂ ಹೇಳಿದರು. ಕ್ರೈಸ್ತ ಚರ್ಚದ ಪುರಸ್ಕರ್ತರು ಸಮಷ್ಟಿ ಭಾವನೆಯೇ ನಿಜವಾದದ್ದೆಂದು ಹೇಳಿ ಆಪ್ತವಾಕ್ಯವನ್ನೇ ಪ್ರಾಧಾನ್ಯವಾಗಿಟ್ಟುಕೊಂಡರು.

ಆ್ಯನ್‌ಸೆಲ್ಮ:— ೧೦೩೩-೧೧೧೯ ಇವನು ಲೊಂಬಾರ್ಡಿಯಲ್ಲಿ ದೊಡ್ಡ ಮನೆತನದಲ್ಲಿ ಜನಿಸಿದನು. ಚಿಕ್ಕ ವಯಸ್ಸಿನಲ್ಲಿಯೇ ಬೆಕ್ ಎಂಬಲ್ಲಿ ಸನ್ಯಾಸಿಮಠವನ್ನು ಪ್ರವೇಶಿಸಿದನು. ಮುಂದೆ ಕ್ಯಾಂಟರ್ಬರಿ ಚರ್ಚದ ಮಠಾಧಿಕಾರಿಯಾದನು. ಇವನು ನೈಜವಾದಿಯಾಗಿದ್ದು ಕ್ರೈಸ್ತ ಚರ್ಚದ ಸಿದ್ಧಾಂತಗಳನ್ನು ತಾತ್ವಿಕರೀತಿಯಿಂದ ಸಿದ್ಧಮಾಡಲೆಣಿಸಿದನು. ಸ್ವಯಂಸಿದ್ಧವಾದ ಮತ್ತು ಸರ್ವಾಂತರ್ಯಾಮಿಯಾದ ಒಬ್ಬ ಪರಮಾತ್ಮನು ಎಲ್ಲ ವಸ್ತು

ಗಳ ಕರ್ತನೆಂದು ಇವನು ಗ್ರಹಿಸಿದನು. ಸೃಷ್ಟಿಗೆ ಕಾರಣನಾದ ಒಬ್ಬ ಪರಮಾತ್ಮನ ಅಸ್ತಿತ್ವವು ಇರಲೇಬೇಕು. ಪರಮಾತ್ಮನು ಸ್ವಯಂಭು ವಿದ್ದಾನೆ. ಅವನು ಪರಿಪೂರ್ಣನಿರುವದರಿಂದ ಅವನ ಅಸ್ತಿತ್ವವಿರುವದು.

ರಾಸೆಲಿನಸ್:— ೧೧೦೦. ಇವನು ಕ್ರೈಸ್ತ ತ್ರೈಮೂರ್ತಿಗಳ ಸಿದ್ಧಾಂತ ವನ್ನು ಪ್ರತಿಭಟಿಸಿದನು. ತ್ರೈಮೂರ್ತಿಗಳು ಪ್ರತ್ಯೇಕಪುರುಷರಾಗಿದ್ದಾರೆ. ಕೆಲವು ಗುಣಗಳಿಂದ ಮಾತ್ರ ಅವರಲ್ಲಿ ಸಾಮ್ಯವುಂಟು. ಇವನು ನಾಮ ವಾದಿಯಾದ್ದರಿಂದ ಸಮಷ್ಟಿಯು ನಾಮಮಾತ್ರವಾಗಿದ್ದು ಮನುಷ್ಯರ ಮನಸ್ಸಿನಲ್ಲಿ ಮಾತ್ರ ಇರುವದೆಂದೂ ವ್ಯಕ್ತಿಯೇ ನಿಜವಾದ ವಸ್ತುವೆಂದೂ ಹೇಳಿದನು. ಚರ್ಚದ ಅಧಿಕಾರಿಗಳು ಇವನನ್ನು ಬಲವಾಗಿ ಖಂಡಿಸಿ ದರು. ಇವನು ಇಂಗ್ಲಂಡಕ್ಕೆ ಪಲಾಯನ ಮಾಡಿದನು. ಪುನಃ ಫ್ರಾನ್ಸ ದೇಶಕ್ಕೆ ಬಂದು ಯಥಾಪ್ರಕಾರ ತನ್ನ ಸಿದ್ಧಾಂತವನ್ನು ಬೋಧಿಸ ತೊಡಗಿದನು.

ಅಬೆಲಾರ್ಡ:— ೧೦೭೯–೧೧೪೨. ಇವನು ರಾಸೆಲಿನಸನ ಶಿಷ್ಯನು. ಇವನು ಪಾರಿಸ ಮೊದಲಾದ ಪಟ್ಟಣಗಳಲ್ಲಿ ವಿದ್ಯಾಲಯಗಳನ್ನು ಸ್ಥಾಪಿ ಸಿದನು. ವಿಶ್ವವಿದ್ಯಾಲಯಗಳ ನಿಜವಾದ ಉತ್ಪಾದಕತ್ವವು ಇವನಿಗೆ ಸಲ್ಲುವದು. ಫ್ರೆಂಚ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಇವನಿಗೆ ಪರಿಶ್ರಮ ವಿತ್ತು. ಸ್ಕೊಲಾಸ್ಟಿಕ್ ಪಂಥದವರಲ್ಲಿ ಇವನೇ ಪ್ರಸಿದ್ಧ ಮೇಧಾವಿಯು. ಇವನು ಭಾವನಾವಾದಿಯಿದ್ದದರಿಂದ ಸಮಷ್ಟಿಯು ವ್ಯಷ್ಟಿಯಲ್ಲಿರುವ ದೆಂದು ಹೇಳಿದನು. ಸಮಷ್ಟಿ ಭಾವನೆಗಳು ಜ್ಞಾನಸಾಧನೆಗೆ ಅವಶ್ಯ ವಾಗಿರುವದರಿಂದ ನಮಗೆ ಗೋಚರವಾದ ವಸ್ತುಗಳಲ್ಲಿ ಅವು ಅಡಗಿರಲೇ ಬೇಕು. ವಸ್ತುಗಳ ಮುಖ್ಯ ಗುಣಗಳ ಸಾಮ್ಯವೇ ಈ ಸಮಷ್ಟಿ ಭಾವ ನೆಗಳಾಗಿವೆ. ಸಮಷ್ಟಿ ಭಾವನೆಗಳು ಮೂರು ವಿಧವಾಗಿರುವವು. (೧) ವಸ್ತುಗಳು ಅಸ್ತಿತ್ವಕ್ಕೆ ಬರುವ ಮೊದಲು ಸಮಷ್ಟಿ ಭಾವನೆಗಳು ದೇವರ ಮನಸ್ಸಿನಲ್ಲಿ ಭಾವನಾರೂಪದಿಂದಿರುವವು. (೨) ಸಮಷ್ಟಿ ಭಾವನೆಗಳು ವಸ್ತುಗಳ ಸಾರರೂಪದಿಂದ ವಸ್ತುಗಳಲ್ಲಿ ಕೂಡಿರುವವು. (೩) ಇವು ಮನುಷ್ಯನ ಮನಸ್ಸಿನಲ್ಲಿ ವಸ್ತುಗಳ ಜ್ಞಾನವಾದಾಗ ವಸ್ತುಗಳ ರೂಪ ದಲ್ಲಿರುವವು.

ಅಬೆಲಾರ್ಡನ ಬುದ್ಧಿ ಪ್ರಾಮಾಣ್ಯವಾದ (*Rationalism*) ಆಪ್ತ ವಾಕ್ಯ ಅಥವಾ ಅಧಿಕಾರವಾಣಿಯನ್ನು ಇವನು ನಿರಾಕರಿಸಿದನು. ಆ್ಯನ್

ಸೆಲ್ಮನು ಬುದ್ಧಿಯು ನಂಬಿಕೆಗೆ ಆಧೀನವಾದದ್ದೆಂದು ಹೇಳಿದನು. ಅಬೆಲಾರ್ಡನು ನಂಬಿಕೆಯು ಬುದ್ಧಿಗೆ ಆಧೀನವಾದದ್ದೆಂದು ಹೇಳಿದನು. ನಂಬಿಕೆಯು ಬುದ್ಧಿಯಿಂದ ಪರೀಕ್ಷಿಸಲ್ಪಟ್ಟಾಗ ಮಾತ್ರ ಅದು ಸತ್ಯವಾದದ್ದೆಂದು ನಂಬತಕ್ಕದ್ದು. ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯವುಂಟೆಂತಲೂ ಅದರಿಂದ ಅವನು ತನ್ನ ಪುಣ್ಯಪಾಪಗಳಿಗೆ ಹೊಣೆಗಾರನಿರುವನೆಂತಲೂ ಇವನು ಹೇಳಿದನು. ಕ್ರೈಸ್ತಧರ್ಮವು ಹೊಸ ವಿಷಯವನ್ನು ಬೋಧಿಸದೆ ಇತರ ಧರ್ಮಗಳ ತತ್ವವನ್ನೇ ಬೋಧಿಸುವದೆಂದು ಇವನು ಹೇಳಿದನು.

ಮುಹಮ್ಮದೀ ಧರ್ಮದ ಪ್ರಾಬಲ್ಯ— ಮುಹಮ್ಮದನು (೫೭೦-೬೩೨) ಅರೇಬಿಯಾ ಪ್ರಾಂತದ ಜನರನ್ನೆಲ್ಲ ಹತ್ತು ವರ್ಷಗಳಲ್ಲಿ ತನ್ನ ಮತಕ್ಕೆ ಸೇರಿಸಿಕೊಂಡನು. ಅವನ ಅನುಯಾಯಿಗಳು ಪಾಲೆಸ್ಟಾಯಿನ್, ಸಿರಿಯಾ, ಈಜಿಪ್ತ, ಪರ್ಶಿಯಾ ದೇಶಗಳನ್ನು ವಶಪಡಿಸಿಕೊಂಡರು. ಸ್ಪೇನ್ ದೇಶಕ್ಕೆ ದಂಡೆತ್ತಿ ಹೋದರು. ಆದರೆ ಟೂರ್ಸ ಎಂಬ ಯುದ್ಧದಲ್ಲಿ ಅಪಜಯ ಹೊಂದಿದರು. ಕ್ರೈಸ್ತರ ಪುಣ್ಯಭೂಮಿಯಾದ ಝೆರೂಸಲೆಮ್ ಸಹ ಇವರ ಕೈವಶವಾಯಿತು. ಬಗದಾದ, ಬಸರಾ ಮೊದಲಾದ ಪಟ್ಟಣಗಳಲ್ಲಿ ಅರಬೀ ಜನರ ವಿದ್ಯಾನಿಲಯಗಳು ಸ್ಥಾಪಿತವಾಗಿದ್ದವು. ಕ್ರಿ. ಶ. ೧೨೦೦ ರಲ್ಲಿ ಸ್ಪೇನದಲ್ಲಿ ಸಹ ಇವರು ವಿದ್ಯಾ ಪ್ರಸಾರ ಮಾಡಿದರು. ಗ್ರೀಕ ತತ್ವಜ್ಞಾನವು ಅರೇಬಿಯಾ ಭಾಷೆಯಲ್ಲಿ ಪರಿವರ್ತನೆಯಾಯಿತು. ಹಿಂದೂ ಜನರ ತತ್ವವನ್ನು ಸಹ ಪಾಶ್ಚಿಮಾತ್ಯರಲ್ಲಿ ಇವರು ಪ್ರಸಾರ ಮಾಡಿದರು. ಕ್ರಿ. ಶ. ೧೧ ನೇ ಶತಮಾನದಲ್ಲಿ ತುರ್ಕೀ ಜನರು ಅರಬೀ ಜನರನ್ನು ಸೋಲಿಸಿದ್ದರಿಂದ ಜೆರೂಸಲೆಮಿಗೆ ಬರುತ್ತಿದ್ದ ಕ್ರೈಸ್ತ ಯಾತ್ರಿಕರನ್ನು ತುರ್ಕರು ಆತಂಕಮಾಡಹತ್ತಿದರು. ಆ ಮೇಲೆ ಕ್ರಿಸ್ತರು ತುರ್ಕರ ವಿರೋಧವಾಗಿ ಕ್ರೂಸೇಡ ಎಂಬ ಅನೇಕ ಸಾರೆ ಯುದ್ಧಗಳನ್ನು ಪ್ರಾರಂಭಿಸಿದರು. ಆದಾಗ್ಯೂ ಜೆರೂಸಲೆಮ್ ಪಟ್ಟಣವನ್ನು ಇವರು ಕೈವಶ ಮಾಡಿಕೊಳ್ಳುವದಾಗಲಿಲ್ಲ. ಆದರೆ ಕಾನ'ಸ್ಟಾಂಟನೋಪಲ್ ಪಟ್ಟಣವನ್ನು ವಶಪಡಿಸಿಕೊಂಡರು ಈ ಯುದ್ಧಗಳಿಂದ ಯುರೋಪ್‌ವಾಸಿಗಳಲ್ಲಿ ಅಭಿಮಾನವೂ, ಜ್ಞಾನಜಾಗ್ರತೆಯೂ, ವ್ಯಾಪಾರ ಚಟುವಟಿಕೆಯೂ ಉಂಟಾಯಿತು. ಗ್ರೀಕರ ತತ್ವಗ್ರಂಥಗಳು ಯುರೋಪ್ ಜನಗಳಿಗೆ ಲಭಿಸಿದವು.

ಥಾಮಸ್ ಅಕ್ವಿನಾಸ್— ೧೨೨೪-೧೨೭೪. ಇವನು ಆರಸು ಮನೆತನಕ್ಕೆ ಸಂಬಂಧಪಟ್ಟವನು. ಇವನು ನೇಪಲ್ಸ ವಿಶ್ವವಿದ್ಯಾಲಯದಲ್ಲಿ

ಅಭ್ಯಾಸ ಮಾಡಿದನು. ತನ್ನ ಹತ್ತೊಂಭತ್ತನೆಯ ವಯಸ್ಸಿನಲ್ಲಿ ಡೊಮಿನಿಕನ್ ಎಂಬ ಕ್ರೈಸ್ತ ಸನ್ಯಾಸಿ ಪಂಥವನ್ನು ಸೇರಬೇಕೆಂದು ನಿರ್ಧರಿಸಿದಾಗ ಇವನ ಸಹೋದರರು ಇವನನ್ನು ಬಂಧನದಲ್ಲಿಟ್ಟರು. ಎರಡು ವರ್ಷಗಳ ಮೇಲೆ ಬಂಧನದಿಂದ ಪಾರಾಗಿ ಹೋದನು. ೧೨೫೭ ರಲ್ಲಿ ಪಾರಿಸ ವಿದ್ಯಾಲಯದಲ್ಲಿ ಪ್ರಶಸ್ತಿಯನ್ನು ಪಡೆದನು. ೧೨೬೧ ರಲ್ಲಿ ಪೋಪನು ರೋಮದಲ್ಲಿ ತತ್ವಜ್ಞಾನವನ್ನು ಬೋಧಿಸಲು ಕರಿಸಿಕೊಂಡನು. ಕ್ರೈಸ್ತಧರ್ಮಬೋಧಕರಲ್ಲಿ ಇವನು ಮಾನ್ಯವಾಗಿದ್ದನು. ಇವನ ಉದ್ದೇಶವು ಕ್ರೈಸ್ತಧರ್ಮವನ್ನು ಭೌತಿಕ ಶಾಸ್ತ್ರಕ್ಕೆ ಸಮಂಜಸವಾಗಿ ನಿರೂಪಿಸಬೇಕೆಂಬದಾಗಿತ್ತು. ಪ್ರಕೃತಿಯು ಅನೇಕ ರೂಪದಲ್ಲಿ ಪ್ರಾದುರ್ಭವಿಸತಕ್ಕದ್ದೆಂದು ಅರಿಸ್ಟಾಟಲನ ವಿಚಾರವಿತ್ತು. ಇದರ ಆಧಾರದಿಂದಲೇ ಅಕ್ವಿನಾಸನು ಪ್ರಕೃತಿಮಯವಾದ ಸೃಷ್ಟಿಯು ದೇವಸೃಷ್ಟಿಯ ಬಹಿರಂಗರೂಪವೆಂದು ಹೇಳಿದನು. ಮನುಷ್ಯನ ಆತ್ಮವು ಇವೆರಡರ ನಡುವಿನ ಸ್ಥಾನದಲ್ಲಿರುವದು. ಧರ್ಮ ಮತ್ತು ತತ್ವಜ್ಞಾನಗಳ ಕ್ಷೇತ್ರಗಳು ಬೇರೆ ಬೇರೆ ಇದ್ದಾಗ್ಯೂ ಅವು ಪರಸ್ಪರ ವಿರೋಧಾತ್ಮಕಗಳಾಗಿಲ್ಲ. ದೇವರು ಪ್ರಕೃತಿಯನ್ನು ನಾಶಗೊಳಿಸದೆ ಪರಿಪೂರ್ಣವಾಗಿ ಮಾಡುತ್ತಾನೆ. ಬ್ರಹ್ಮಜ್ಞಾನವು ಸತ್ಯವು ದೇವರಿಂದ ಪ್ರಕಟವಾದದ್ದೆಂದು ಹೇಳುತ್ತದೆ. ಆದರೆ ತತ್ವಜ್ಞಾನವು ಬುದ್ಧಿಯಿಂದ ಸತ್ಯವು ಪ್ರಕಟವಾಗುವದೆಂದು ಹೇಳುತ್ತದೆ. ದೇವರ ಅಸ್ತಿತ್ವ ಆತ್ಮದ ಅಮರತ್ವ, ಮತ್ತು ಈಶ್ವರ ಜಗತ್ತುಗಳ ಸಂಬಂಧವಾದ ಸಮಸ್ಯೆಗಳು ಬ್ರಹ್ಮಜ್ಞಾನ(*Theology*) ತತ್ವಜ್ಞಾನಗಳಿಗೆ(*Philosophy*) ಸಾಮಾನ್ಯವಾಗಿವೆ. ಆದರೆ ಜಗದುತ್ಪತ್ತಿಕ್ರಮ, ಅವತಾರ ಕಾರ್ಯ ಮತ್ತು ತ್ರಿಮೂರ್ತಿಗಳ ಸಿದ್ಧಾಂತಗಳು ಬ್ರಹ್ಮಜ್ಞಾನ ಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿವೆ. ಪ್ಲೇಟೋನಂತೆಯೇ ಇವನು ಪರಲೋಕವಿದೆಯೆಂದು ನಂಬಿದನು. ಮನುಷ್ಯನು ದೇವಧ್ಯಾನದಲ್ಲಿ ಮಗ್ನವಾದಾಗ ಪರಲೋಕಾನುಭವವುಂಟಾಗುವದು. ಆದರೆ ಗುರುವಿನ ಸಹಾಯವಿಲ್ಲದೆ ಈ ಅನುಭವವು ಲಭಿಸದು.

ಸಮಷ್ಟಿ ಭಾವನೆಗಳು ಎಲ್ಲ ವಸ್ತುಗಳಲ್ಲಿ ಸಾರಭೂತವಾಗಿರಬೇಕು. ವಸ್ತುಗಳನ್ನಗಲಿ ಅವು ಛಾಯಾರೂಪವಾಗಿ ಬೇರೆ ಇರಲಾರವು. ವ್ಯಕ್ತಿಯ ವಿಶಿಷ್ಟತ್ವವು ಪ್ರಕೃತಿಯಲ್ಲಿರುವದು. ವಸ್ತುಗಳ ರೂಪವು ನಿತ್ಯದಲ್ಲಿ ಬದಲಾವಣೆಯಾಗುತ್ತಿರುವದು. ಆತ್ಮ, ಪರಮಾತ್ಮ ಮತ್ತು ದೇವತೆಗಳು

ಪ್ರಕೃತಿಯಿಂದ ಬದ್ಧವಾಗಿಲ್ಲ. ಪ್ರಕೃತಿಯಿಲ್ಲದೆ ರೂಪಮಾತ್ರವಾಗಿ ಇವು ಇರುವವು. ಇವುಗಳಿಗೆ ಪ್ರಕೃತಿಯ ಅವಶ್ಯಕತೆಯಿಲ್ಲದೆ ಸ್ವಯಂಸಿದ್ಧವಾಗಿರುವವು. ದೇವರಲ್ಲಿ ಅನೇಕತ್ವವು ಅಡಗಿದೆ. ಆತ್ಮಗಳು ತಾವು ಪ್ರವೇಶಿಸಿದ ದೇಹಗಳ ವಾಸನೆಗಳಿಂದ ಲಿಪ್ತವಾಗಿರುವದರಿಂದ ಆತ್ಮಗಳು ವಾಸನಾದೃಷ್ಟಿಯಿಂದ ಪರಸ್ಪರ ಭಿನ್ನವಾಗಿ ತೋರುವವು. ಮನುಷ್ಯನು ತನ್ನ ಶ್ರೇಯದ ಜ್ಞಾನವನ್ನು ಅನುಸರಿಸುವ ಮಟ್ಟಿಗೆ ಸ್ವತಂತ್ರನಿರುವನು. ಇಚ್ಛೆಗೆ ಶ್ರೇಯವಾದದ್ದಾವದೆಂದು ತೋರಿಸಿಕೊಟ್ಟು ಬುದ್ಧಿಯು ಇಚ್ಛೆಯ *(Will)* ಕಾರ್ಯವನ್ನು ನಿರ್ಧರಿಸಿರುತ್ತದೆ. ದೇವರಲ್ಲಿ ಸಹ ಆತನ ಸರ್ವಜ್ಞತ್ವವೇ ಅಧಿಕವಾಗಿದೆ. ಆತನ ಇಚ್ಛೆಯು ಸರ್ವಜ್ಞತ್ವಕ್ಕೆ ಅಧೀನವಾಗಿದೆ. ಮನುಷ್ಯನ ಇಂದ್ರಿಯಗಳು ಇಚ್ಛಾಶಕ್ತಿಯನ್ನು ಸೋಲಿಸಿದಾಗ ಪಾಪವು ಘಟಿಸುವದು.

ಡನ್ಸಸ್ಕೋಟಸ್— ೧೨೭೦-೧೩೦೮. ಇವನು ಆಯರ್ಲಂಡದಲ್ಲಿ ಜನಿಸಿದನು. ಚಿಕ್ಕ ವಯಸ್ಸಿನಲ್ಲಿಯೇ ಫ್ರಾನ್ಸಿಸ್ಕನ್ ಪಂಥಕ್ಕೆ ಸೇರಿದನು. ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಪ್ರಶಸ್ತಿಯನ್ನು ಹೊಂದಿದನು. ಅಲ್ಲಿ ಅವನು ಹತ್ತು ವರ್ಷಗಳವರೆಗೆ ಬ್ರಹ್ಮಜ್ಞಾನ, ತತ್ವಜ್ಞಾನ ವಿಷಯಗಳನ್ನು ಬೋಧಿಸಿದನು. ಅವನ ಉಪನ್ಯಾಸಗಳನ್ನು ಅನೇಕರು ಕೇಳುತ್ತಿದ್ದರು. ಇದರಿಂದ ಇವನ ಕೀರ್ತಿಯು ಯುರೋಪಖಂಡದಲ್ಲಿ ಹರಡಿತು. ಇವನು ೧೩೦೪ ರಲ್ಲಿ ಪಾರಿಸ್ ಪಟ್ಟಣಕ್ಕೆ ಹೋಗಿ ನಾಲ್ಕು ವರ್ಷಗಳ ವರೆಗೆ ಬೋಧಿಸಿದನು. ಇವನು ಯಾವ ಸಿದ್ಧಾಂತವನ್ನಾಗಲಿ ತರ್ಕಶಾಸ್ತ್ರಕ್ಕೆ ವರೆ ಹಚ್ಚದೆ ಸ್ವೀಕಾರ ಮಾಡಲಿಲ್ಲ. ತತ್ವಜ್ಞಾನವು ತರ್ಕದಿಂದ ಕೂಡಿದ ಶಾಸ್ತ್ರವೆಂದು ಇವನು ಹೇಳಿದನು. ಇದು ತಪ್ಪಿಲ್ಲದ್ದೂ, ನಿಜವಾದದ್ದೂ ಇದೆ. ನಂಬಿಕೆಯ ವಿಷಯದಲ್ಲಿ ತರ್ಕದ ಸಂಬಂಧವೇ ಇಲ್ಲ. ನಂಬಿಕೆಗೆ ದೇವವಾಣಿಯೇ ಆಧಾರವು. ಇವನ ವಿಚಾರದಲ್ಲಿ ಬ್ರಹ್ಮಜ್ಞಾನ ಶಾಸ್ತ್ರವು ತತ್ವಶಾಸ್ತ್ರ ಅಥವಾ ದೇವವಾಣಿಗಳಂತೆ ಆಧಾರವಾಗಿಲ್ಲ. ಇದು ತ್ರಿಮೂರ್ತಿಗಳ, ಅವತಾರದ, ಸೃಷ್ಟಿ ನಿರ್ಮಾಣದ ಮತ್ತು ಅಮರತ್ವದ ಸಿದ್ಧಾಂತಗಳನ್ನು ಸಿದ್ಧಮಾಡಲಾರದು.

ದೇವರ ಇಚ್ಛೆಯು ಅಗಮ್ಯವಾದದ್ದು. ದೇವವಾಣಿಯು ಮನುಷ್ಯ ಬುದ್ಧಿಗೆ ನಿಲುಕದ್ದಾಗಿದೆ. ದೇವರು ಸರ್ವಸ್ವತಂತ್ರನು. ಥಾಮಸ್ ಅಕ್ವಿನಾಸನು ಹೇಳುವಂತೆ ದೇವರ ಇಚ್ಛೆಯು ಆತನ ಬುದ್ಧಿಗೆ ಅಧೀನವಾ

ಗಿರುವದಾದರೆ ದೇವರು ಸ್ವತಂತ್ರನಾಗಿರಲಾರನು. ಮನುಷ್ಯನಲ್ಲಿ ಪ್ರಜ್ಞೆಯು ಮೊದಲು ಕೆಲವು ಅಸ್ಪಷ್ಟವಾದ ಮತ್ತು ಅಪೂರ್ಣವಾದ ಭಾವನೆಗಳನ್ನು ಹುಟ್ಟಿಸುವದು. ಯಾವ ಭಾವನೆಗಳ ಮೇಲೆ ಇಚ್ಛೆಯು ತನ್ನ ಲಕ್ಷವನ್ನಿಡುವದೋ ಅಂತಹ ಭಾವನೆಗಳು ಸ್ಪಷ್ಟವಾಗಿಯೂ ಪೂರ್ಣವಾಗಿಯೂ ಪ್ರಾದುರ್ಭವಿಸುವವು. ಉಳಿದವು ಅದೃಶ್ಯವಾಗುವವು. ಶ್ರೇಯವು ದೇವರ ಕೃತಿಯಿಂದಾದದ್ದು. ಅಕ್ವಿನಾಸ ಮತ್ತು ಸ್ಕೋಟಸ್ ಇವರೀರ್ವರೂ ನೈತಿಕ ನಿಯಮವು ದೇವರ ಆಜ್ಞೆಯೆಂದು ಹೇಳುತ್ತಾರೆ. ದೇವರು ತನ್ನ ಇಚ್ಛಾನುಸಾರವಾಗಿ ಸೃಷ್ಟಿಯನ್ನುಂಟುಮಾಡುತ್ತಾನೆ. ತನ್ನ ಕೃಪೆಯಿಂದ ದೇವರು ಮನುಷ್ಯನನ್ನು ಪಾಪದಿಂದ ಮುಕ್ತಮಾಡಬಲ್ಲನು. ಇದರಂತೆಯೇ ಕ್ರೈಸ್ತ ಚರ್ಚಿಗೂ ಅಧಿಕಾರವುಂಟು. ದೇವರು ನೈತಿಕ ನಿಯಮವನ್ನು ಬದಲಾಯಿಸಿ ಮತ್ತೊಂದು ವಿಧವಾಗಿ ಮಾಡಬಲ್ಲನು. ಈ ಕಾರಣದಿಂದ ಬುದ್ಧಿಪುರಸ್ಸರವಾದ ಬ್ರಹ್ಮಜ್ಞಾನ ಶಾಸ್ತ್ರವು ಇರಲಾರದು. ದೇವರ ಇಚ್ಛೆಯೇ ನಂಬಿಕೆಯ ವಿಷಯವಾಗಿದೆ. ಅದರಲ್ಲಿ ನಂಬಿಕೆಯನ್ನಿಡುವದೇ ಮನುಷ್ಯನ ಇಚ್ಛೆಯು. ದೈವಿಕ ಕೃಪೆಯೊಂದಿಗೆ ಸಹಕಾರ ಮಾಡುವದೇ ಮನುಷ್ಯಸ್ವಾತಂತ್ರ್ಯದ ಕಾರ್ಯವು.

ವಿಲಿಯಮ್ ಓಕ್ಯಾಮ್— ೧೨೮೦-೧೩೪೯. ಇವನು ಇಂಗ್ಲಂಡದ ಓಕಾಮ್ ಎಂಬಲ್ಲಿ ಜನಿಸಿ ಆಕ್ಸಫರ್ಡದಲ್ಲಿ ವಿದ್ಯಾವ್ಯಾಸಂಗಮಾಡಿದನು. ಇವನು ಪಾರಿಸದಲ್ಲಿ ಬೋಧಿಸಿದನು. ಪೋಪನ ಅಧಿಕಾರಕ್ಕೆ ವಿರೋಧಿಸಿದನು. ಸಮಷ್ಟಿಯು ನಿಜವಾಗಿರದೆ ನಾಮಮಾತ್ರವಾಗಿದೆ. ವ್ಯಷ್ಟಿಯೇ ನಿಜವಾದದ್ದೆಂದು ಹೇಳಿದನು.

# ಶ್ರೀ ದ್ರಾಕ್ಷಾರಾಮ ಕ್ಷೇತ್ರವು.

ಲೇಖಕ:— ಶಿವಸುತ.



ಶೈವಮತ ಪ್ರದೇಶ ಸುತ್ತಲೂ ಲಿಂಗಮುದ್ರೆಯ ಕಲ್ಲುಗಳಿರುವಂತೆ ತೆಲುಗುದೇಶದ ಮೂರುಕಡೆ ಮೂರು ಮಹಾಲಿಂಗಗಳು ಇರುವುವು. ಒಂದುಕಡೆ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವು, ಇನ್ನೊಂದು ಕಡೆ ಶ್ರೀ ಕಾಳಹಸ್ತೀಶ್ವರ ಲಿಂಗವು, ಮತ್ತೊಂದುಕಡೆ ಶ್ರೀ ದ್ರಾಕ್ಷಾರಾಮೇಶ್ವರ ಲಿಂಗವು. ಈ ಮೂರು ಲಿಂಗಗಳ ಮಧ್ಯದಲ್ಲಿರುವ ಪ್ರಾಂತವೇ ತ್ರಿಲಿಂಗ ಅಥವಾ ತೆಲುಂಗು (ತೆಲುಗು) ದೇಶವೆಂದು ರೂಢಿಯಲ್ಲಿ ಬಂದಿದೆ. ಈ ಮೂರು ಶಿವಕ್ಷೇತ್ರಗಳು ಬರೀ ಆಂಧ್ರವೇಕೆ, ಇಡೀ ಭಾರತೀಯರಿಗೇನೆ ಅತ್ಯಂತ ಗಣ್ಯವಾದವುಗಳು, ಪುರಾತನವಾದವುಗಳು, ಸಾಂಸ್ಕೃತಿಕ ಮತ್ತು ಐತಿಹಾಸಿಕ ದೃಷ್ಟಿಗಳಿಂದ ಬಹು ಮಹತ್ವದವುಳ್ಳ ಸ್ಥಳಗಳು.

## ಕ್ಷೇತ್ರಪರಿಚಯ.

ದ್ರಾಕ್ಷಾರಾಮ ಕ್ಷೇತ್ರವು ಗೋದಾವರೀ ನದಿಯ ಮುಖದ್ವಾರಪ್ರದೇಶದಲ್ಲಿ (*Delta area*) ಕಾಕಿನಾಡ ಕೋಟಿಪಲ್ಲೆ ರಸ್ತೆಯಲ್ಲಿರುವುದು. ಈ ಪ್ರಾಂತವು ಮೂರುಕಡೆ ಗೋದಾವರೀ ನದಿಯಿಂದಲೂ, ಒಂದು ಕಡೆ ಸಮುದ್ರದಿಂದಲೂ ಆವರಿಸಿಕೊಳ್ಳಲ್ಪಟ್ಟಿದ್ದು ತ್ರಿಕೋಣಾಕೃತಿಯುಳ್ಳದ್ದಾಗಿರುವದರಿಂದ ಇದಕ್ಕೆ "ಕೋಣಶೀಮ" ಎಂದು ಸಹ ಕರೆಯುವರು. ಗೋದಾವರಿಯು ಇಡೀ ದೇಶದ ಸಾರವನ್ನೆಲ್ಲಾ ತಂದು ಇಲ್ಲಿ ಬಿಟ್ಟಿರುವದರಿಂದ ಈ ಪ್ರದೇಶವು ಅತ್ಯಂತ ಸಾರವಂತವಾದುದು. ಗಂಡನಮನೆ ಎಂಬ ಅಭಿಮಾನದಿಂದ ಗೋದಾವರಿಯು ಈ ಪ್ರದೇಶದ ಮೇಲೆ ಬಹು ಪಕ್ಷಪಾತ ಉಳ್ಳವಳಾಗಿದ್ದು ಸಮುದ್ರದ ಮರಳು ಭೂಮಿಯನ್ನು ನಂದನ ವನವನ್ನಾಗಿ ಮಾರ್ಪಡಿಸಿರುವಳು. ಈ ಪ್ರದೇಶದಲ್ಲಿ ಎಲ್ಲಿ ನೋಡಿದರೂ ತೆಂಗು, ಬಾಳೆ, ಅಡಿಕೆ, ಭತ್ತ ಮುಂತಾದವುಗಳೇ ಕಂಗೊಳಿಸುವುವು. ಈ ಭವ್ಯಾರಾಮಪ್ರದೇಶ ಮಧ್ಯಭಾಗದಲ್ಲಿ ದ್ರಾಕ್ಷಾರಾಮವು ಸರೋವರ ನೀಲ ಜಲ ಮಧ್ಯಸ್ಥಿತ ಶ್ವೇತಕಮಲದಂತೆ ಕಂಗೊಳಿಸುವುದು.

ದೇವಸ್ಥಾನದ ಮುಂದುಗಡೆ ಸಪ್ತಗೋದಾವರಿ ತೀರ್ಥವಿರುವುದು. ಗೋದಾವರಿಯು ಸಮುದ್ರವನ್ನು ಸೇರುವ ಮುನ್ನ ೭ ಶಾಖೆಗಳಾಗಿ

ಒಡೆಯುತ್ತದೆ. ಒಂದೊಂದು ಶಾಖೆಗೆ ಸಪ್ತರ್ಷಿಗಳಲ್ಲಿ ಒಬ್ಬೊಬ್ಬರ ಹೆಸರನ್ನು ಇಟ್ಟಿರುವರು. ೭ ಶಾಖೆಗಳ ನೀರು ಈ ತೀರ್ಥದಲ್ಲಿ ಮಿಳಿತವಾಗಿರುವುದರಿಂದ ಈ ತೀರ್ಥಕ್ಕೆ ಸಪ್ತಗೋದಾವರಿ ಎಂದು ಕರೆಯುವರು. ಸಾಧಾರಣವಾಗಿ ಕಾಶೀ ರಾಮೇಶ್ವರ ಯಾತ್ರಿಕರು ಈ ತೀರ್ಥದಲ್ಲಿ ಮೀಯಲು ಪ್ರತಿನಿತ್ಯ ತಂಡತಂಡವಾಗಿ ಬರುವರು. ದೇವಸ್ಥಾನವು ಪುರಾತನ ಕಟ್ಟಡವು. ಸುತ್ತಲೂ ದೊಡ್ಡದಾದ ಪೌಳಿಯು. ಒಂದುಕಡೆ ದೇವಿಯ ದೇವಳವು. ಮಧ್ಯದಲ್ಲಿ ಶ್ರೀ ಭೀಮೇಶ್ವರ ದೇವಾಲಯವು. ಶ್ರೀ ಭೀಮೇಶ್ವರ ಲಿಂಗವು ಸುಮಾರು ೬೦ ಅಡಿ ಉದ್ದವಿರಬಹುದು. ಲಿಂಗದರ್ಶನವಾಗಬೇಕಾದರೆ ಮೇಲುಪ್ಪರಿಗೆಯನ್ನು ಏರಬೇಕು. ಲಿಂಗವು ಇನ್ನೂ ಬೆಳೆಯುತ್ತಲೇ ಇರುವುದೆಂದು ಹೇಳುವರು. ಹಾಗೆ ಬೆಳೆಯುಗೊಡದಂತೆ ಮಸ್ತಕಕ್ಕೆ ಭಂಗಾರದ ಕಟ್ಟನ್ನು ಹಾಕಿರುವರು. ಮಸ್ತಕವನ್ನು ದರ್ಶನಮಾಡಿಕೊಂಡು ದೇವಸ್ಥಾನದ ಕೆಳಭಾಗಕ್ಕೆ ಒಂದು ಪೀಠವನ್ನು ಪ್ರದಕ್ಷಿಣೆ ಮಾಡಬೇಕು. ಈ ಅದ್ಭುತ ಲಿಂಗವನ್ನು ನೋಡಿ ನಾನು ಸ್ತಂಬೀಭೂತನಾದೆನು. ಮನಸ್ಸಿನಲ್ಲಿ ಭಾವನಾ ತರಂಗಗಳು ಉಕ್ಕೇರ ಹತ್ತಿದವು. ಪುರಾತನ ಶಿವಲಿಂಗಗಳೆಲ್ಲವೂ ಇದೇ ರೀತಿ ಇದ್ದಿರಬಹುದೆಂದು ಊಹಿಸಿದೆನು.

## ಯಜ್ಞವಾಟಿಕೆಯೋ ?

ದ್ರಾಕ್ಷಾರಾಮಕ್ಕೆ 'ದಕ್ಷಿಣ ಯಜ್ಞವಾಟಿಕೆ' ಎಂದು ಸಹ ಕರೆಯುವುದುಂಟು. ದಕ್ಷಬ್ರಹ್ಮನು ಪುರಾಣ ಸುಪ್ರಸಿದ್ಧವಾದ ಯಜ್ಞವನ್ನು ಆಚರಿಸಿದುದೂ, ಶ್ರೀ ದಾಕ್ಷಾಯಣಿಯು ಪತಿನಿಂದೆಯನ್ನು ಕೇಳಿದ ಪಾಪ ವಿಮೋಚನೆಗಾಗಿ ದೇಹವಿಟ್ಟುದುದೂ ಇದೇ ಸ್ಥಳದಲ್ಲೆಂದು ಹೇಳುವರು. ಪುರಾಣದ ಮಾತು ಏನೆ ಇರಲಿ, ಈ ಪುರಾತನ ದೇವಸ್ಥಾನವು ಪೂರ್ವ ವೈದಿಕ ಯುಗದ ಯಜ್ಞ ಶಾಲೆಯನ್ನು ಜ್ಞಪ್ತಿಗೆ ತರುವುದು. ವೈದಿಕ, ತಾಂತ್ರಿಕ ಸಂಸ್ಕೃತಿಗಳ ಹೋರಾಟದ ಚಿತ್ರವನ್ನು ಇಲ್ಲಿ ಸುಸ್ಪಷ್ಟವಾಗಿ ಕಾಣಬಹುದು. ವೇದ ಯುಗದಲ್ಲಿ ದೇವರನ್ನು ಪ್ರಿತಿಸುವ ನೆವದಿಂದ ಆಡು ಕುದುರೆ ಮುಂತಾದ ಪ್ರಾಣಿಗಳನ್ನು ಕೊಂದು ಹವನ ಮಾಡಿ ದೇವರ ಹೆಸರಿನಿಂದ ತಿನ್ನುತ್ತಿದ್ದರು. ಇದಕ್ಕೆ 'ಯಜ್ಞ'ವೆಂದು ಹೆಸರು. ಹವನ ಮಾಡಲು ತಂದಿದ್ದ ಬಡಪ್ರಾಣಿಗಳನ್ನು ಯಜ್ಞ ಮಂಟಪದ ಮಧ್ಯಭಾಗದಲ್ಲಿ ಒಂದು ಸ್ತಂಭಕ್ಕೆ ಕಟ್ಟುವ ಪದ್ಧತಿ ಇದ್ದಿತು. ಆ ಸ್ತಂಭಕ್ಕೆ

ಯಜ್ಞಸ್ತಂಭವೆಂದು ಹೆಸರು. ಬರ ಬರುತ್ತಾ ಆ ಸ್ತಂಭವೇ "ಯೂಪ ಸ್ತಂಭ"ವೆಂದೆನಿಸಿಕೊಂಡು ಅನಾದಿ ಮಧ್ಯಾಂತನಾದ ಮತ್ತು ಆಯುವ್ಯಯ ಕರ್ತನಾದ ಪರಮಾತ್ಮನ ಸಂಜ್ಞೆಯಾಗಿ ಗ್ರಹಿಸಲ್ಪಟ್ಟು ಪೂಜ್ಯವಾಯಿತು.

## ಯೂಪಸ್ತಂಭವೇ ಲಿಂಗವು.

ಕಾಲಗಳಿತವಾದಂತೆ ಮಾನವನ ಬುದ್ಧಿಯು ವಿಕಾಸವಾಯಿತು. "ದೃಷ್ಟಿಯೂ ವಿಶಾಲವಾಯಿತು. ಸಂಕುಚಿತ ಬುದ್ಧಿಯು ನಾಶವಾಯಿತು." ಅಯ್ಯೋ! ಪಾಪ! ನಮ್ಮ ಸುಖಕ್ಕೆಂದು ನಿರಾಪರಾಧಿಗಳಾದ ಸಾಧು ಪ್ರಾಣಿಗಳನ್ನು ಕೊಲ್ಲುವದು ನ್ಯಾಯವೇ? ಎಂಬುವ ಪ್ರಶ್ನೆಯು ಮಾನ ವನ ಹೃದಯದಲ್ಲಿ ಮನೆಮಾಡಿಕೊಂಡು ಸಮಾಜದಲ್ಲಿ ದೊಡ್ಡ ವಿಪ್ಲ ವವನ್ನೆಬ್ಬಿಸಿತು. "ಧರ್ಮದ ಹೆಸರಿನಿಂದ ಪ್ರಾಣಿಗಳನ್ನು ಕೊಲ್ಲುವದು ಕೂಡ ದೆ"ಂಬ ಸಂದೇಶವನ್ನು ವಿಪ್ಲವಕಾರಕರು ಸರ್ವತ್ರ ಪ್ರಸಾರ ಮಾಡಿದರು. ವೈದಿಕ ಯುಗದ ಸಂಕುಚಿತ ಕರ್ಮವಾದವನ್ನು ಖಂಡಿಸಿದ ಈ ವಿಪ್ಲವ ಕಾರಕವೇ ಉಪನಿಷತ್ತುಗಳನ್ನೂ ಆಗಮನಗಳನ್ನೂ ಪ್ರಚಾರಗೊಳಿಸಿದ ಧರ್ಮವೀರರು. ಆದರೆ ಪ್ರಾಚೀನ ಪದ್ಧತಿಯು ದೆವ್ವವು ಈ ಚಳವಳಿ ಕೋರರನ್ನು ಸಹ ಬಿಡಲಿಲ್ಲ. ಇವರು ಯಜ್ಞ ಕರ್ಮಾಚರಣೆಯನ್ನು ಖಂಡಿಸಿದರೂ ಅದರ ತತ್ವವನ್ನು ಮಾತ್ರ ಬಿಡಲಿಲ್ಲ. ದೇವರಿಗಾಗಿ ನಾವು ಯಜ್ಞಮಾಡಬೇಕಾದುದು ಸಾಧು ಪ್ರಾಣಿಗಳನ್ನಲ್ಲ, ನಮ್ಮ ಆತ್ಮವನ್ನು ಜೀವಾ ತ್ಮನ ಸ್ವತಂತ್ರ ವ್ಯಕ್ತಿತ್ವವನ್ನು ಸುಟ್ಟು ಏಕಮೇವಾದ್ವಿತಯನಾದ ಪರ ಮಾತ್ಮನಲ್ಲಿ ಐಕ್ಯವಾಗುವದೇ ನಿಜವಾದ ಯಜ್ಞವೆಂಬ ನವಸಂದೇಶವೇ ಈ ವಿಪ್ಲವಕಾರಕರ ಸಂದೇಶವಾಯಿತು. "ಉಪನಿಷತ್ತು" ಮತ್ತು "ಆಗಮ" ಈ ಶಬ್ದಗಳು ಇದೇ ಅರ್ಥವನ್ನು ಸೂಚಿಸುವವು. ವೈದಿಕ ಯಜ್ಞ ಶಾಲೆಯ ಮಧ್ಯಭಾಗದಲ್ಲಿ ವೇಧಾಧಿಪತಿಯಾದ ಪರಮಾತ್ಮ ಸೂಚಕವಾಗಿ ನಿಲ್ಲಿಸಲ್ಪಡುವ "ಯೂಪಸ್ತಂಭ"ವೇ ಪರಬ್ರಹ್ಮ ಸ್ವರೂಪ ನಾದ ಲಿಂಗ ಅಥವಾ "**ಪತಿ**" ವಾಚಕವಾಯಿತು. ಅದಕ್ಕೋಸ್ಕರ ಯಜ್ಞಮಾಡಲ್ಪಡುವ ಜೀವಾತ್ಮನೇ ಯಜ್ಞ ಫಲ ಅಥವಾ "ಪಶು" ವಾಚ ಕವಾಯಿತು. "ಪಶು" "ಪತಿ"ಗಳ ಸಂಬಂಧವೇ ಪಾಶವಾಯಿತು. ತನ್ನನ್ನು ಅಳಿದುಕೊಂಡು ಪರವನ್ನು ಸೇರುವದೇ ಅರ್ಥಾತ್ "**ತ್ಯಾಗ**"ವೇ ಉಪ ನಿಷತ್ತುಗಳ ಮತ್ತು ಆಗಮಗಳ ಮೂಲ ತತ್ವವಾಯಿತು.

"**ನಕರ್ಮಣಾನಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ತ್ವ ಮಾನಶುಃ**" ಎಂಬ ಘನತತ್ತ್ವವೇ ಆಗಮಗಳ ದಿವ್ಯಸಂದೇಶವಾಯಿತು.

ದೇವಾಲಯ ನಿರ್ಮಾಣವು ಆಗಮಿಕ ಪದ್ಧತಿಯಾದರೂ ವೈದಿಕ ಧರ್ಮದ ಯಜ್ಞ ಪದ್ಧತಿಯ ಅನುಕರಣವೆಂದು ನಿಸ್ಸಂದೇಹವಾಗಿ ಹೇಳಬಹುದು. ಆಗಮಶಾಸ್ತ್ರದ ಪ್ರಕಾರ ನಿರ್ಮಿಸಲ್ಪಟ್ಟಿರುವ ದೇವಾಲಯಗಳೆಲ್ಲವೂ ಯಜ್ಞ ಶಾಲೆಗಳನ್ನು ಹೋಲುವವು. ಯೂಪ ಸ್ತಂಭದ ಬದಲು ಶಿವಲಿಂಗವು ವಿರಾಜಿಸುತ್ತಲಿದ್ದು ಲಿಂಗಕ್ಕೆ ಆತ್ಮವನ್ನು ಹವನಮಾಡಿ ಅರ್ಪಿಸುವದೇ ಅರ್ಥಾತ್ ಆತ್ಮತ್ಯಾಗವೇ ಯಜ್ಞವೆಂದು ಗ್ರಹಿಸಲ್ಪಡುವುದು. ದ್ರಾಕ್ಷಾರಾಮದೇವಾಲಯವನ್ನು ನೋಡಿದವರಿಗೆಲ್ಲ ಈ ವಿಷಯವು ಚೆನ್ನಾಗಿ ಮನವರಿಕೆಯಾಗದೇ ಇರಲಾರದು.

ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ಪಂಡಿತಾರಾಧ್ಯರ ಚರಿತ್ರೆಗೆ ಸಂಬಂಧ ಪಟ್ಟಿರುವ ಈ ದ್ರಾಕ್ಷಾರಾಮ ಕ್ಷೇತ್ರವು ವೀರಶೈವರಿಗೆ ಬಹು ಮುಖ್ಯವಾದುದು. ಅಮರಗುಂಡವು ಇಲ್ಲಿಯೇ ಇರುವುದೆಂದು ಕೇಳಿದೆನಾಗಲಿ ನೋಡಲೂ ಸಮಯವು ಶಿಕ್ಕಲಿಲ್ಲ. ಈ ಕ್ಷೇತ್ರದ ಸ್ಥಳ ಪುರಾಣವನ್ನು ವೇಮುಲವಾಡ ಭೀಮಕವಿ ಎಂಬ ಕವೀಶ್ವರನು ಭೀಮೇಶ್ವರ ಪುರಾಣವೆಂಬ ಆಂಧ್ರ ಪ್ರೌಢ ಚಂಪೂಕಾವ್ಯದಲ್ಲಿ ಬರೆದಿರುವನು. ಆಂಧ್ರ ಬಸವ ಪುರಾಣವನ್ನು ಕನ್ನಡ ಷಟ್ಪದಿಯಲ್ಲಿ ಬರೆದ ಭೀಮಕವಿಯೇ ಈತನೆಂದು ಕೆಲವರ ವಾದವು. ಈ ವಾದದ ಬಗ್ಗೆ ಚರ್ಚಿಸುವದು ಇಲ್ಲಿ ಅಪ್ರಾಸಂಗಿಕವು.

ದೇವಾಲಯದ ಪೌಳಿಯಲ್ಲಿ ಒಂದು ಕಡೆ ಶ್ರೀ ಮಾಣಿಕ್ಯಾಂಬ ದೇವಿಯ ಗುಡಿ ಇರುವುದು. ಈ ದೇವಿಯು ನವಶಕ್ತಿಯಲ್ಲಿ ಒಂದು ಶಕ್ತಿಯೆಂದು ಹೇಳುವರು. ಈ ದೇವಾಲಯದ ಸುತ್ತಲೂ ಅನೇಕ ಪುರಾತನ ಲಿಪಿಗಳಿವೆ. ವೇಳೆಯ ಅಭಾವದಿಂದ ಅವುಗಳೇನೆಂಬುದನ್ನು ಸಹ ನೋಡಲಿಕ್ಕಾಗಲಿಲ್ಲ. ಅಂತೂ ದ್ರಾಕ್ಷಾರಾಮವು ಅತ್ಯಂತ ದರ್ಶನೀಯವಾದ ಸ್ಥಳವು.

---

# ಯೋಗೀಶ್ವರ ಅರವಿಂದಘೋಷರ "ಯೋಗ ಮತ್ತು ಅದರ ಉದ್ದೇಶ" ×

(ಮಧುರಚೆನ್ನ—ಹಲಸಂಗಿ)

---

ಪೂರ್ಣ ಯೋಗದ ಗುರಿಯು ವೈಯಕ್ತಿಕ ಮೋಕ್ಷವಾಗಿರದೆ ಸಮಸ್ತ ಮಾನವ ಕೋಟಿಯ ದಿವ್ಯಜೀವನದ ಉದಯವೇ ಅದರ ಉದ್ದೇಶವಾಗಿದೆ.

ಅಜ್ಞಾನದ ಆನಂದವನ್ನು ಭೋಗಿಸುವ ಇಚ್ಛೆಯುಂಟಾದಾಗ ದೇವನು ಜಗತ್ತಿನಲ್ಲಿ ವಿಷಮ ಪರಿಸ್ಥಿತಿಯನ್ನುಂಟುಮಾಡುತ್ತಾನೆ.

ಅಂಥ ಕಾಲದಲ್ಲಿಯೂ ದಿವ್ಯ ಜೀವನದ ಮೂಲಸೂತ್ರವನ್ನು ಎಲ್ಲಿಯಾದರೂ ಒಂದು ದೇಶದಲ್ಲಿ ಕಾಯ್ದಿಡುತ್ತಾನೆ. ನಿಕೃಷ್ಟಪಕ್ಷಕ್ಕೆ ಈ ಚತುರ್ಯುಗಗಳಿಂದಲೂ ಹಿಂದುಸ್ತಾನಕ್ಕೆ ಆ ಪಟ್ಟವು ಬಂದದೆ.

ಸತ್ಯಸ್ಥಿತಿಯ ಅಭಿವೃದ್ಧಿಯು ಜಗತ್ತಿನಲ್ಲಿ ಉಂಟಾಗಬೇಕಾದಾಗ ಹಿಂದುಸ್ತಾನದ ಯೋಗಿಗಳು ಮಾನವಕೋಟಿಯ ಜೀವನ ಕ್ಷೇತ್ರದಲ್ಲಿ ಕಾಲಿಡುವರು. ಆದರೆ ಅದರ ಹ್ರಾಸಕಾಲದಲ್ಲಿ ಅವರು ಜೀವನಕ್ಕೆ ವಿಮುಖರಾಗುವರು.

ಸತ್ಯಸ್ಥಿತಿಯು ಚತುರ್ಯುಗ ಕ್ರಮದಿಂದ ಹ್ರಾಸವೃದ್ಧಿಗಳನ್ನು ಹೊಂದುವದು. ಕಲಿಯುಗವು ಪರಮಹ್ರಾಸದ ಕಾಲವಾಗಿದ್ದರೂ ಸತ್ಯಯುಗದ ಪೂರ್ವ ಸಿದ್ಧತೆಯ ಕಾಲವು ಇದೇ ಆಗಿದೆ.

ದಿವ್ಯಸತ್ಯ ಹಾಗು ನಿಜಸಾಮರಸ್ಯಗಳ ಪುನಃ ಪ್ರತಿಷ್ಠೆಯನ್ನು ಹಿಂದುಸ್ತಾನವೇ ಮಾತ್ರ ಮಾಡಬಲ್ಲದಾಗಿದೆ. ಮನುಷ್ಯನ ಹೊರಗಿನ ಯಾವ ಬದಲಾವಣೆಗಳಿಂದಲೂ ಅದು ಶಕ್ಯವಿರದೆ ಮಾನವನ ಸಂಪೂರ್ಣ ಜೀವಸತ್ತೆಯು ಒಳಗಿನಿಂದ ಬದಲಾದರೆ ಮಾತ್ರ ಅದು ಸಾಧ್ಯವದೆ.

---

× ಶ್ರೀ ಅರವಿಂದ ಯೋಗಿಗಳ "*Yoga and its objects*" ಎಂಬ ಅತ್ಯಂತ ಮಹತ್ವದ ಸೂತ್ರಾತ್ಮಕ ಗ್ರಂಥದ ಸಾರಾಂಶವಿದು. ಶ್ರೀ ಅರವಿಂದರ ವಿಚಾರಗಳು ತೀರ ಹೊಸವಾಗಿರುವದರಿಂದ ತಿಳಿದುಕೊಳ್ಳಬೇಕೆನ್ನುವವರು ಬಹಳೇ ಲಕ್ಷಪೂರ್ವಕವಾಗಿ ಮನನ ಮಾಡಬೇಕಾಗುವದು.— ಮಧುರಚೆನ್ನ.

ಇದಕ್ಕೆ ಆತ್ಮಸಮರ್ಪಣ ಯೋಗವೇ ಪರಮೋಪಾಯವು. ಇನ್ನುಳಿದ ಯಾವ ಯೋಗಗಳಿಂದಲೂ ಆ ಧ್ಯೇಯವು ಸಾಧಿಸದು.

ಪೂರ್ಣಯೋಗದ ಮೂಲಸೂತ್ರವುಃ— ಸಗುಣ ನಿರ್ಗುಣ ಪರ ಬ್ರಹ್ಮನ ಸರ್ವಾಂತರ್ಯಾಮಿತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವದು.

ಆತ್ಮಸಮರ್ಪಣವು ಸರ್ವಾಂಗೀಣವಾಗಿರಬೇಕಾದದ್ದೇ ಈ ಯೋಗದ ಮುಖ್ಯ ಸಾಧನವು.

ಮಾನವನು ಈ ಯೋಗದಲ್ಲಿ ತನ್ನ ಅಳವಿನಿಂದ ನಡೆಯಬೇಕಾಗಿಲ್ಲ. ದೇವನ ಸರ್ವಸಮರ್ಥ ಸ್ವಾಭಾವಿಕ ಶಕ್ತಿಯೇ ಇಲ್ಲಿ ಕಾರ್ಯ ಮಾಡುತ್ತದೆ. ಆದ್ದರಿಂದ ರಾಜಯೋಗದ ಸಂಯಮ, ಹಠಯೋಗದ ಪ್ರಾಣಾಯಾಮ, ಸಾನುರಾಗದ ಭಕ್ತಿ, ನಿಸ್ವಾರ್ಥಕ್ರಿಯಾರ್ಪಣ ಮೊದಲಾದ ಬಹುವಿಧದ ಯೋಗ ಪದ್ಧತಿಗಳು ಪರಿಣಾಮದಲ್ಲಿ ಇದಕ್ಕೆ ಸರಿಗಟ್ಟಲಾರವು.

ಪೂರ್ಣ ಯೋಗದ ಮೆಟ್ಟಲುಗಳು— (೧) ಆತ್ಮಸಮರ್ಪಣದ ಸಂಕಲ್ಪವು ಪ್ರಥಮ ಸಾಧನವಾಗಿದೆ. ಮಾನವನು ತನ್ನ ಸಮಸ್ತಸತ್ತಾ ವಿಭಾಗಗಳನ್ನು ಸಂಪೂರ್ಣವಾಗಿ ಸಮರ್ಪಿಸಲಿಕ್ಕೆಬೇಕು. ದೇವನ ಚಿತ್ತವು ತನ್ನಲ್ಲಿ ಅಪರೋಕ್ಷವಾಗಿ ಪ್ರಕಟವಾಗಬೇಕೆಂಬುದೊಂದೇ ಆತನ ಆಕಾಂಕ್ಷೆಯಾಗಿರಬೇಕು.

(೨) ಸಾಧಕನ ಒಳಗಿನ ಒಳಗಿನ ಅನಿರೀಕ್ಷಿತ ಅಸಂಖ್ಯ ಅಶುದ್ಧಿಗಳನ್ನು ವಿಶ್ವಶಕ್ತಿಯು ಹೊಡೆದೆಬ್ಬಿಸಿ ಹೊರದೂಡಹತ್ತುವದರಿಂದ ಬಹುವಿಧದ ದೈಹಿಕ ಮಾನಸಿಕ ಅಸ್ತವ್ಯಸ್ತತೆಗಳು ಆ ಕಾಲದಲ್ಲಿ ಉಂಟಾಗುವದು ಅನಿವಾರ್ಯವಾಗಿರುವದರಿಂದ ಆಗ ಸಾಧಕನು ಗಾಬರಿಗೊಳ್ಳದೆ ಸಾಕ್ಷೀಭಾವದಿಂದ ಇರಬೇಕಾಗುವದು. ಇದೇ ಎರಡನೇ ಮೆಟ್ಟಲು. ಮತ್ತು ಸಂದೇಹವೇ ಈ ಯುಗದ ಮುಖ್ಯ ಅಶುದ್ಧಿಯಾಗಿರುವದರಿಂದ ಅದು ಹಣಿಕೆ ಹಾಕಿದ ಕಾಲದಲ್ಲಿ ಧೀರತನವೂ ಸತ್ಸಂಗವೂ ಸಮರ್ಪಣಕ್ಕೆ ಸಹಾಯಕಗಳಾಗಿವೆ. ಗೀತೆಯಲ್ಲಿ ಹೇಳಿದ-"ಮಾಮೇಕಂ ಶರಣಂ ವ್ರಜ ಅಹಂತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿಮಾಶುಚ" ಎಂಬ ಮಾತನ್ನು ಮರೆಯದಿರು.

ಸಾಕ್ಷೀಭಾವಕ್ಕೆ ತನ್ನನ್ನು ತಾನು ಅರಿಯುವ ಅಗತ್ಯವಿದೆ. ಚಿತ್ತವೂ, ಮನಸ್ಸೂ, ಬುದ್ಧಿಯೂ, ಅಹಂಕಾರವೂ ಪುರುಷನ ಆಧಾರಗಳ ಪರಿ

ಚಿತ ವಿಭಾಗಗಳಾಗಿವೆ. ಬುದ್ಧಿಯ ಮೇಲೆ ಇನ್ನೂ ದಿವ್ಯಬುದ್ಧಿ ಅಥವಾ ವಿಜ್ಞಾನ ಮತ್ತು ಆನಂದ ಮುಂತಾದ ಅಪರಿಚಿತ ವಿಭಾಗಗಳೂ ಇವೆ. ಅವುಗಳಲ್ಲಿ ನಮಗೆ ಜಾಗ್ರತಿಯುಂಟಾಗಬೇಕು. ನಮ್ಮ ಜೀವನವೆಲ್ಲ ಆ ಕೇಂದ್ರಗಳಿಂದ ನಡೆಯಬೇಕು. ಇದೇ ಆ ಪೂರ್ಣಯೋಗದ ಪರಮಾವಸ್ಥೆ.

(೩) ಈ ಯೋಗದ ಮೂರನೇ ಮೆಟ್ಟಲೆಂದರೆ ಸರ್ವ ವಸ್ತುಗಳನ್ನು ದೇವರೆಂದು ಗ್ರಹಿಸುವದು. ಮೊದಲಿಗೆ ನಾಮರೂಪಗಳಿಂದ ಅತೀತವಾದ ಒಂದು ಸರ್ವಾಂತರ್ಯಾಮಿ ತತ್ವವು ಗೋಚರವಾಗುವದು. ಆಗ "ಬ್ರಹ್ಮಸತ್ಯ ಜಗನ್ಮಿಥ್ಯ" ವೆಂಬ ಅನುಭವವು ಬರುವದು. ಅನಂತರ ನಮ್ಮ ಆತ್ಮವಿಕಾಸದ ಪ್ರಗತಿಯು ಮುಂದುವರಿದ ಹಾಗೆ ಜಗತ್ತೂ ಕೂಡ ಪರಬ್ರಹ್ಮನ ಸತ್ಯಪ್ರಕಟನೆಯೆ ಆಗಿದೆಯೆಂಬ ಅನುಭವವಾಗುವದರಿಂದ "ಸರ್ವಂಖಲ್ವಿದಂಬ್ರಹ್ಮ" ಎಂಬ ತತ್ವಕ್ಕೆ ಮುಟ್ಟುವೆವು. ಆಗ "ಆತ್ಮಾನಂ ಸರ್ವಭೂತೇಷು ಸರ್ವಭೂತಾನಿಚಾತ್ಮನಿ" ಎಂಬ ಅನುಭವವು ನಮಗೆ ಸ್ವಾಭಾವಿಕವಾಗುವದು. ಆದರೆ ಇಷ್ಟಕ್ಕೇ ಮುಗಿಯಲಿಲ್ಲ. ಸಮಸ್ತವೂ ಸಜ್ಞ ಈಶ್ವರನ ದಿವ್ಯಲೀಲೆಯೆಂದು ಅನುಭವವಾಗುವುದು ಈ ಯೋಗದ ಚರಮಾವಸ್ಥೆಯಾಗಿದೆ.

ಆದರೆ 'ಬ್ರಹ್ಮಸತ್ಯ ಜಗನ್ಮಿಥ್ಯ' ದ ಜಾತಿಯ ಅನುಭವಕ್ಕೆ ನಿಂತುಬಿಟ್ಟರೆ ಕೊನೆಗೆ ಬೌದ್ಧರ ಮಹಾಶೂನ್ಯದ ಸ್ಥಲವು ಹತ್ತುವದು. ಆದರೆ ನಮಗೆ ಇವೆರಡನ್ನೂ ಮೀರಿರುವ ಅಗಾಧ ಈಶ್ವರನನ್ನು ಸಾಕ್ಷಾತ್ಕರಿಸಿಕೊಳ್ಳುವುದು ಅಗತ್ಯವಾಗಿದೆ.

ಮೂರನೇ ಮೆಟ್ಟಲಲ್ಲಿ ನಡೆಯತಕ್ಕ ಸಾಧನ ಕ್ರಮದಲ್ಲಿ, ಸರ್ವ ವಸ್ತುಗಳಲ್ಲಿ ಸರ್ವಾಂತರ್ಯಾಮಿತ್ವವನ್ನು ಅನುಭವಿಸುವುದು. ಆ ಸರ್ವ ವಸ್ತುಗಳೆಂದರೆ ಮೊದಲಿಗೆ ಚರಾಚರಸಜೀವ ವಸ್ತುಗಳಾಗಿದ್ದು ಮುಂದೆ ನಿರ್ಜೀವ ವಸ್ತುಗಳಲ್ಲಿಯೂ ನಾವು ಸರ್ವಾಂತರ್ಯಾಮಿತ್ವವನ್ನು ಅನುಭವಿಸುವೆವು. ಅಷ್ಟಕ್ಕೆ ಸಾಲದು.—ಸರ್ವ ಆಗುಹೋಗುಗಳಲ್ಲಿಯೂ ಆತನನ್ನು ಅನುಭವಿಸಬೇಕಾಗಿದ್ದು ಈ ತೃತೀಯ ಸಾಧನದ ಪರಮಾವಸ್ಥೆಯು.

ಇವುಗಳಲ್ಲಿ ಜಡವಾಗಿದೆಯೆಂದು ಕಾಣುವ ವಿಶ್ವವು ನಿಜವಾಗಿಯೂ ಜಡವಾಗಿರದೆ ಅದು ಚೈತನ್ಯಮಯವಾಗಿದೆಯೆಂಬ ಅನುಭವವು ನಮಗೆ ಬಂದರೆ "ಕೋಮೋಹಃ ಕಃಶೋಕಃ" ಎಂಬ ಅವಸ್ಥೆಯು ಸಹಜವಾಗಿಬಿಡುವದರಿಂದ ನಾವಾಗ ಬ್ರಾಹ್ಮೀ ಸ್ಥಿತಿಗೆ ಬರುವೆವು.

ನಮ್ಮ ಆತ್ಮದ ಏಕತ್ವವೂ ದೇವನ ಸರ್ವಾಂತರ್ಯಾಮಿತ್ವವೂ ನಮಗೆ ಸಜೀವ ವಸ್ತುಗಳಲ್ಲಿಯಷ್ಟೇ ಅಲ್ಲದೆ ನಿರ್ಜೀವ ವಸ್ತುಗಳಲ್ಲಿಯೂ ಉಂಟಾಗಬೇಕಷ್ಟೇ? ಆದರೆ ಅದು ಈಗಿನ ಸಂಸ್ಕಾರಮಯ ಜಡದೃಷ್ಟಿಗೆ ಆಗದೆ ಆತ್ಮದ ಪ್ರಕಾಶಮಯವಾದ ಒಳದೃಷ್ಟಿಗಾಗುತ್ತದೆ. ಆಗ 'ಈಶಾವಾಸ್ಯಂ ಇದಂ ಸರ್ವಂ' ಎಂಬ ಅನುಭವಕ್ಕೆ ಬರುವೆವು.

ದೇವನನ್ನು ಸರ್ವ ವಸ್ತುಗಳಲ್ಲಿ ಮತ್ತು ಸರ್ವ ಪ್ರಾಣಿಗಳಲ್ಲಿ ಕಂಡಷ್ಟಕ್ಕೆ ಸಾಲದು. ಈ ಜಗತ್ತಿನಲ್ಲಿ ಸ್ವತಃ ನಿನ್ನೊಳಗೆ ಹಾಗು ಅನ್ಯರೊಳಗೆ ನಡೆಯುವ ಸರ್ವ ಘಟನೆಗಳು, ಕೃತಿಗಳು, ವಿಚಾರಗಳು, ಅನಿಸಿಕೆಗಳು ಇವುಗಳಲ್ಲೆಲ್ಲ ಆತನನ್ನು ಕಾಣಲಿಕ್ಕೆ ಬೇಕು. ಇದಕ್ಕೆ ಎರಡು ಮಾತಿನ ಅಗತ್ಯವಿದೆ. ನಿನ್ನ ಸರ್ವ ಕೃತಿಗಳ ಫಲವನ್ನು ಆತನಿಗೆ ಬಿಟ್ಟುಕೊಡುವುದು ಒಂದು; ನಿನ್ನ ಸರ್ವ ಕೃತಿಗಳ ಹೊಣೆಯನ್ನು ಆತನಿಗೆ ಬಿಟ್ಟುಕೊಡುವುದು ಎರಡನೇದು. ಹೀಗೆಂದರೆ ಫಲದ ವಿಷಯದಲ್ಲಿ ವೈರಾಗ್ಯವುಂಟಾಗಬೇಕೆಂದಲ್ಲ. ಆದರೆ ಹಾಗೆ ಹೀಗೆ ಅನ್ನದೆ ನಿನ್ನ ಜೀವನದೊಡೆಯನ ಅಪ್ಪಣೆಯಿಂದ ಕರ್ತವ್ಯವೆಂದು ಕಾರ್ಯವನ್ನೆಸಗುತ್ತ ದೇವನಿಚ್ಛೆಯಿಂದ ಬಂದ ಫಲಕ್ಕೆ ಸಮ್ಮತಿಸುತ್ತ ಇರಬೇಕು. ನಿನ್ನ ಇಚ್ಛೆಯೇನೆಂಬುದನ್ನು ಬದಿಗೊತ್ತಿ ದೇವನಿಚ್ಛೆಯೇನೆಂಬುದನ್ನು ಅರಿತುಕೊಳ್ಳಲಿಕ್ಕೆ ಇಚ್ಛಿಸು. ನಿನ್ನ ಕರ್ತವ್ಯಕರ್ಮಕ್ಕನುಸಾರವಾಗಿ ಯಾವುದು ಅಗತ್ಯವಾದದ್ದೋ ಯಾವುದು ಸರಿಯಯದದ್ದೋ ಅದು ತಾನಾಗಿಯೇ ಆಗಿಬಿಡುವದು. ಜಗತ್ತನ್ನೆಲ್ಲ ಆಳುವ ಮಹಾ ಶಕ್ತಿಗೆ ಕನಿಷ್ಠಪಕ್ಷಕ್ಕೆ ನಿನ್ನಷ್ಟಾದರೂ ಬುದ್ಧಿ ಇದೆ. ನಿನ್ನ ನಿರ್ದೇಶದ ಅಗತ್ಯವಿಲ್ಲ.

ಆದರೆ ಕರ್ತವ್ಯಕರ್ಮವೆಂದರೇನದು? ಡ್ಯೂಟಿ ಎಂದು ಕೆಲವರು ಹೇಳುವರು. ಆದರೆ 'ಡ್ಯೂಟಿ' ಯೆಂದರೆ ಜನಗಳು ಯಾವುದಕ್ಕೆ ಸರಿಯಾದದ್ದೆಂದೂ, ಸ್ನೀತಿಕರವಾದದ್ದೆಂದೂ ತಿಳಿದಿದ್ದಾರೆಯೋ, ಅಥವಾ ಜನಾಂಗಕ್ಕೆ ರಾಷ್ಟ್ರಕ್ಕೆ ಅಥವಾ ಮಾನವಕೋಟಿಗೆ ಹಿತಕರವಾದದ್ದೆಂದೂ ಸರಿಯಾದದ್ದೆಂದೂ ಭಾವಿಸುವರೋ ಅಂಥಾದ್ದನ್ನು ಮಾಡುವುದಕ್ಕೇ ಡ್ಯೂಟಿ ಎಂಬ ಹೆಸರು. ಇವರಿಂದ ಮನುಷ್ಯನ ಸ್ವೇಚ್ಛಾವೃತ್ತಿಗೆ ಪ್ರತಿಬಂಧವುಂಟಾಗಿ ಆತನು ಸದ್ಗೃಹಸ್ಥನಾಗಬಹುದೇ ಹೊರತು ಯೋಗದ ಪೂರ್ಣತೆಗೆ ಅವನು ಮುಟ್ಟಲಾರನು. ಯಾಕೆಂದರೆ ಇಲ್ಲಿ ಮನುಷ್ಯನು ಗುಣಗಳಿಗೆ ಅಧೀನನಾಗಿ ಉಳಿಯುವನೇ ಹೊರತು ತ್ರಿಗುಣಾತೀತನಾ

ಗುವದಿಲ್ಲ. ಅರ್ಜುನನು ಇಂಥ ಸದ್ಗುಣದ ಮೂಲಕವಾಗಿಯೇ ಯುದ್ಧ ಮಾಡುವದಕ್ಕೆ ನಿರಾಕರಿಸಿದನು. ಆದರೆ ಅವನ ಯುಕ್ತಿಗೆ ವಿರೋಧವಾಗಿ ಶ್ರೀಕೃಷ್ಣನು ಎರಡು ವಿಚಾರಗಳನ್ನಿಟ್ಟನು. ಒಂದು ಕಡಿಮೆಯದು, ಒಂದು ಹೆಚ್ಚಿನದು. ಬದ್ಧರಾಗಿದ್ದರೂ ಮೋಕ್ಷವನ್ನು ಅಪೇಕ್ಷಿಸುವವರಾಗಿ ಮೊದಲನೇದು; ಸಂಪೂರ್ಣ ಮುಕ್ತರಿಗಾಗಿ ಎರಡನೇದು. ಮೊದಲನೇದು ಶಾಸ್ತ್ರ. ಎರಡನೇದು ಸಂಪೂರ್ಣ ಸಮರ್ಪಣ (ಕರ್ಮ ಹಾಗು ಕರ್ಮಫಲಗಳ ಸಮರ್ಪಣ).

ಶಾಸ್ತ್ರವು ಮನುಷ್ಯನನ್ನು ಸ್ವೇಚ್ಛಾಚಾರದಿಂದ ದೂರ ನಿಲ್ಲಿಸಿ ಕೆಲ ಮಟ್ಟಿಗೆ ಮೋಕ್ಷಾಧಿಕಾರಿಗಳನ್ನಾಗಿ ಮಾಡುವದು. ಪೂರ್ವಕಾಲದಲ್ಲಿ ಮಾನವನ ಮನೋಧರ್ಮವನ್ನೂ ಜಗತ್ತಿನ ನಿಯಮಗಳನ್ನೂ ಅವಲಂಬಿಸಿದ ವೇದಧರ್ಮವು ಶಾಸ್ತ್ರವಾಗಿತ್ತು. ಆದರೆ ಮುಂದೆ ಅದು ಸ್ಥೂಲ ಸ್ವರೂಪದ ಸ್ಮೃತಿಧರ್ಮವಾಯ್ತು. ಮಧ್ಯಕಾಲದ ಚಾತುರ್ವರ್ಣರಚನೆಯು ಈಗ ಅಂಧಚಕ್ರವಾಗಿ ಮೋಕ್ಷಕ್ಕೆ ಬದಲು ಮಾನವನ ತಮೋಭಾವಕ್ಕೆ ಕಾರಣವಾಗಿದೆ. ಶಾಸ್ತ್ರವು ಮನುಷ್ಯನಿಗೆ ಮುಕ್ತಾವಸ್ಥೆಯ ಪೂರ್ವಸಿದ್ಧತೆಯನ್ನು ಮಾತ್ರ ಮಾಡಿಬಿಡುತ್ತದೆ. ಶಾಸ್ತ್ರವು ಶಬ್ದಬ್ರಹ್ಮವಾಗಿದೆ. ಆದರೆ ನಮಗೆ ಮುಕ್ತತೆಯ ಪೂರ್ವಸಿದ್ಧತೆಯಷ್ಟಕ್ಕೇ ತೃಪ್ತಿಯಾಗಬೇಕಾಗಿಲ್ಲ. ಪ್ರತ್ಯಕ್ಷ ಮುಕ್ತತೆ ಬೇಕು. ಇಂಥ ಅವಸ್ಥೆಯಲ್ಲಿ ಸಾಧಕನು ಸಮರ್ಪಣವನ್ನು ಸ್ವೀಕರಿಸಿ ಶಾಸ್ತ್ರವನ್ನು ದಾಟುತ್ತಾನೆ. "ಜಿಜ್ಞಾಸುರಪಿ ಯೋಗಸ್ಯ ಶಬ್ದ ಬ್ರಹ್ಮಾತಿವರ್ತತೇ" ಇದೇ ಶ್ರೀಕೃಷ್ಣನ ಕೊನೆಯ ವಿಚಾರವಾದ ಸಮರ್ಪಣವು.

ಕರ್ಮದ ಸಂಪೂರ್ಣ ಸಮರ್ಪಣವು ನೆಲೆಗೊಳ್ಳಬೇಕಾದರೆ ನಮ್ಮ ಕರ್ಮಗಳನ್ನೆಲ್ಲ ದೇವನಾಜ್ಞೆಯಿಂದ ಪ್ರಕೃತಿಯೇ ಮಾಡುತ್ತಾಳೆಂಬ ಅನುಭವವು ಬರಬೇಕಾಗುವದು. ಆಗ ನಮ್ಮ ಕರ್ಮಗಳೆಲ್ಲ ಆ ದೇವನಿಗೆ ಸಂಬಂಧಿಸಿಬಿಡುವವು. ಆಗ ನಮಗೆ ಕರ್ಮದ ಬಂಧನವಿಲ್ಲ. ಈ ಅವಸ್ಥೆಗೆ ಬರುವುದಕ್ಕೆ ಮೂರು ಮೆಟ್ಟಲುಗಳಿವೆ.

(೧) "ತ್ವಯಾ ಹೃಷೀಕೇಶ ಹೃದಿ ಸ್ಥಿತೇನ ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ!" 'ದೇವಾ, ನನ್ನ ಹೃದಯದಲ್ಲಿದ್ದುಕೊಂಡು ನೀನು ನನ್ನನ್ನು ಹೇಗೆ ಹೇಗೆ ಪ್ರೇರಿಸುವಿಯೋ ಹಾಗೆ ಹಾಗೆ ನಾನು ಆಚರಿ

ಸುವೆನು' ಎಂಬ ಮಾತು ನಮ್ಮ ದೈನಂದಿನ ಜೀವನದಲ್ಲಿ ಯಾವಾಗ ಒಡಮೂಡುವದೋ ಆಗ ಈ ಮೊದಲಿನದು ಮುಗಿದು ಎರಡನೇ ಮೆಟ್ಟಲು ಆರಂಭವಾಗುವದು.

(೨) "ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥" ದೇವನು ಸರ್ವ ಪ್ರಾಣಿಗಳ ಹೃದಯದಲ್ಲಿ ನಿಂತು ತನ್ನ ತ್ರಿಗುಣಮಯಿ ಮಾಯೆಯಿಂದ ಅವುಗಳನ್ನು ಯಂತ್ರಾರೂಢವಾದವುಗಳಂತೆ ತಿರುಗಿಸುವನು ಎಂಬ ಜ್ಞಾನವೇ ಎರಡನೇ ಮೆಟ್ಟಲು. ಆಗ ನೀವು ನಿಮ್ಮಲ್ಲಿ ತ್ರಿಗುಣಗಳ ಕ್ರಿಯೆಗಳನ್ನು ಕಂಡುಕೊಳ್ಳುವಿರಿ. ಆಗ 'ತಥಾಕರೋಮಿ' ಎಂಬದಕ್ಕೆ ಬದಲು 'ಗುಣಾವರ್ತಂತ ಏವ' ಎಂದು ಅನ್ನುವಿರಿ. ಈ ಮೆಟ್ಟಲಿನಲ್ಲಿ ಒಂದು ದೊಡ್ಡ ವಿಘ್ನವೇನಂದರೆ— ಪಾಪಪುಣ್ಯಗಳ ದ್ವಂದ್ವದಲ್ಲಿ ನೀವು ದಿಕ್ಕುಗೆಡುವಿರಿ. ಆದರೆ ಒಂದು ಮಾತು ನೆನಪಿರಲಿ. ಅದೇನೆಂದರೆ— ನಿಮ್ಮನ್ನು ನೀವು ಸಂಪೂರ್ಣವಾಗಿ ದೇವನ ಹಸ್ತದಲ್ಲಿ ಸಮರ್ಪಿಸಿದ ಮೇಲೆ ಪಾಪಪುಣ್ಯಗಳ ಪೀಕಲಾಟವು ನಿಮಗೆ ಬೇಡ. ಭಗವಂತನು ಗೀತೆಯಲ್ಲಿ ಮಾಡಿದ ಪ್ರತಿಜ್ಞೆಯನ್ನು ನೆನೆ— "ನ ಮೇ ಭಕ್ತಃ ಪ್ರಣಶ್ಯತಿ" (ನನ್ನ ಭಕ್ತನಿಗೆ ನಾಶವಿಲ್ಲ.) (೩) ಎರಡನೆಯ ಮೆಟ್ಟಲಿನ ನಂತರ— ದೇವನನ್ನು ಸಂಪೂರ್ಣ ಅನುಭವಿಸುವದರಿಂದ ಅಥವಾ ದೇವನ ಅನುಗ್ರಹದಿಂದ ತನ್ನಿಂದ ತಾನೆ ಮೂರನೇ ಮೆಟ್ಟಲು ಬರುವದು. ಆಗ ಪುರುಷನು ಗುಣಗಳಿಂದ ಭಿನ್ನವಾಗಿ ಬರೇ ತ್ರಿಗುಣಾತೀತನಾಗುತ್ತಾನೆಂತಲ್ಲ. ಆದರೆ ಪ್ರಕೃತಿಯು ಗುಣಗಳನ್ನೆಲ್ಲ ಬಳಸುತ್ತಿದ್ದರೂ ಅವುಗಳ ಬಂಧನದಿಂದ ದೂರವಾಗಿ ಉಳಿಯುತ್ತದೆ. ಈಗಿನ ಸತ್ತ್ವವು ಆಗ ಜ್ಯೋತಿರ್ಮಯವಾದ ಜ್ಞಾನವಾಗುವದು, ಈಗಿನ ತಮಸ್ಸು ಆಗ ಅನಂತ ಶಾಂತಿಯಾಗುವದು; ಈಗಿನ ರಜಸ್ಸು ಆಗ ದೈವೀ ತೇಜದ ತಪೋಬಲವಾಗುವದು. ಆಗ ಕರ್ಮವು ದೇವನ ಜ್ಞಾನ ಹಾಗು ದೇವನ ಇಚ್ಛೆ ಇವುಗಳನ್ನು ಅನುಸರಿಸಿದ್ದಾಗುವದು. ಈ ಅವಸ್ಥೆಗೆ ಮುಟ್ಟುವ ಮುಂಚೆ ಮಾರ್ಗದಲ್ಲಿ ನಿಮಗೆ ಒಂದು ಅನುಭವ ಬರುವದು. ಅದೇನಂದರೆ— ನಿಮ್ಮದಲ್ಲದ ಮತ್ತು ನಿಮ್ಮ ದೇಹದಲ್ಲಿಲ್ಲದ ಒಂದು ಶಕ್ತಿಯು (ಆದರೂ ನಿಮ್ಮನ್ನು ನಿಮ್ಮ ದೇಹವನ್ನು ಆಕ್ರಮಿಸಿದ್ದು) ನಿಮಗಾಗಿ ವಿಚಾರಮಾಡುವದು; ಕರ್ಮಮಾಡುವದು; ಇಷ್ಟೇ ಅಲ್ಲ. ನಿಮ್ಮ

ದೇಹ, ಮನಸ್ಸು ಮತ್ತು ಹೃದಯ ಮೊದಲಾದವುಗಳು ಆ ಶಕ್ತಿಯಿಂದಲೇ ಮಿಸುಕುವವು. ಆ ಶಕ್ತಿಯ ಈ ಕ್ರಿಯೆಗಳಲ್ಲೆಲ್ಲ ನೀವು ಆನಂದಪಡುವಿ ಇಷ್ಟೆ. ಆದರೆ ಅದರ ಮೇಲೆ ನಿನ್ನ ಬಾಧ್ಯತೆಯಾಗಲಿ, ನಿನ್ನ ಮೇಲೆ ಅದರ ಬಾಧ್ಯತೆಯಾಗಲಿ ಇರಲಾರದು. ನಿನ್ನ ಕರ್ಮಗಳೆಲ್ಲ ಇಲ್ಲಿಗೆ ಕರಗುವವು. "ಕರ್ಮಾಣಿ ಪ್ರವಿಲೀಯಂತೇ ಪದ್ಮಪತ್ರಮಿವಾಂಭಸಾ.

ನಿನ್ನ ಮನಸ್ಸು, ಹೃದಯ, ಶರೀರ ಮುಂತಾದವುಗಳು ನಿನ್ನವಾಗಿ ಉಳಿಯಲಾರವು. ಆಗ ಅವು ಕೇವಲ ದೇವನವು. ನೀನು ದೇವನ ಕಾರ್ಯದ ಒಂದು ಜ್ಞಾನಮಯವಾದ ಆನಂದಮಯವಾದ ಸಜೀವ ಆಧಾರ ಕೇಂದ್ರವು ಮಾತ್ರ. ಇದೇ ತಚ್ಚಿತ್ತ ಅವಸ್ಥೆ; ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯನಲಿಪ್ಯತೇ. "ಯಾವನ ಸತ್ತೆಯು ಅಹಂಕಾರದಿಂದ ಸ್ವತಂತ್ರವಾಗಿದೆಯೋ, ಯಾವನ ತಿಳುವಳಿಕೆಯು ಅಲಿಪ್ತವಾಗಿದೆಯೋ" ಎಂದು ವರ್ಣಿಸಲ್ಪಟ್ಟಿದ್ದೇ ತಚ್ಚಿತ್ತಾವಸ್ಥೆ. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಯಾವುದಕ್ಕೆ ಬಹಳ ಮಹತ್ವಕೊಟ್ಟಿದ್ದಾನೆಯೋ ಅಂಥ ಕರ್ಮಸಮರ್ಪಣವೆಂಬುದು ಇದೇ. ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮ ಚೇತಸಾ। ನಿರಾಶೀ ನಿರ್ಮಮೋ ಭೂತ್ವಾ ಯುದ್ಧ್ಯಸ್ವ ವಿಗತಜ್ವರಃ ॥

ಅತ್ಯಂತ ಮಹತ್ವದ ಹಾಗು ಅತ್ಯಂತ ಸಂಪೂರ್ಣವಾದ ಈ ಮುಕ್ತತೆಗೆ ಮೂರು ಮಾತುಗಳ ಆಗತ್ಯವದೆ.— ನಿಸ್ಪೃಹತೆ, ನಿರ್ದ್ವಂದ್ವತೆ, ನಿರಹಂಕಾರಿತೆ. ಆತ್ಮಸಮರ್ಪಣದ ಪ್ರಧಾನ ಶತ್ರುಗಳು ಮೂರು; ಅವು ಯಾವವೆಂದರೆ— ಸ್ಪೃಹಾ, ದ್ವಂದ್ವ, ಅಹಂಕಾರ.

ಸ್ಪೃಹಾ ಅಂದರೆ ವಿಷಯಗಳ ಮೇಲೆ ಆಶೆ. ದ್ವಂದ್ವವೆಂದರೆ ಸುಖಕರ-ದುಃಖಕರ ಇತ್ಯಾದಿ ತಾರತಮ್ಯಗಳ ಸಂಸ್ಕಾರ. ಅಹಂಕಾರವೆಂದರೆ— 'ನಾನು ಕರ್ತಾ' ಎಂಬಭಾವ. ನೀನು ನಿರ್ದ್ವಂದ್ವನಾದರೆ ನಿಸ್ಪೃಹನಾಗಬಲ್ಲಿ. ಆದರೆ ಇದು ಬಿಗಿಯಾದದ್ದೇನೊ ನಿಜವೆ. ಯಾಕಂದರೆ ಪ್ರತಿಯೊಂದು ದ್ವಂದ್ವವು ನಮ್ಮ ಮನಸ್ಸಿನಲ್ಲಿ ಒಂದು ಬಗೆಯ ರಾಗದ್ವೇಷಗಳನ್ನು ಹುಟ್ಟಿಸುತ್ತದೆ. ನಮ್ಮ ಮನೋಧರ್ಮವು ಈ ದ್ವಂದ್ವಗಳಿಗೆ ಬಹಳ ಅನುಕೂಲವಾಗಿದೆ. ದ್ವಂದ್ವಗಳ ಪ್ರಕಾರಗಳು:— (೧) ಹಸಿವು-ನೀರಡಿಕೆ, ಶೀತ-ಉಷ್ಣ, ಬಾಹ್ಯಿಕವೇದನೆ ಮತ್ತು ಸುಖ ಇವು ದೇಹದ

ಮೂಲಕವಾಗಿ ಮನಸ್ಸಿನಲ್ಲಿ ಮೂಡುವವು. (೨) ಜಯ-ಪರಾಜಯ, ಸಾಫಲ್ಯ-ನಿಷ್ಫಲತೆ, ಸುದೈವ-ದುರ್ದೈವ, ಹರುಷ-ದುಃಖ, ಪ್ರೇಮ-ತಿರಸ್ಕಾರ ಮುಂತಾದವುಗಳು ವಾಸನೆ ಮತ್ತು ಅನಿಸಿಕೆಗಳ ಮುಖಾಂತರ ಮನಸ್ಸನ್ನು ಸ್ಪರ್ಶಿಸುವವು. ಪಾಪ-ಪುಣ್ಯ, ಸಯುಕ್ತಿಕ-ಅಯುಕ್ತಿಕ, ಸರಿ-ತಪ್ಪು ಇವು ನಿರ್ಣಯಾತ್ಮಕ ಬುದ್ಧಿಯ ಮೂಲಕವಾಗಿ ಮನಸಿಗೆ ಗೋಚರವಾಗುವವು.

ದೇವನು ಸರ್ವಾಂತರ್ಯಾಮಿಯಾಗಿದ್ದಾನೆಂಬ ಜ್ಞಾನದಿಂದಲೂ, ಈಶ್ವರನ ಜಾಗತಿಕಕಾರ್ಯೋದ್ದೇಶದಲ್ಲಿ ಇವೆಲ್ಲವುಗಳ ಅಗತ್ಯವಿದೆ ಎಂಬ ಜ್ಞಾನದಿಂದಲೂ ನಾವು ಇವುಗಳನ್ನು ಮೆಟ್ಟಿನಿಲ್ಲಬಲ್ಲೆವು. ಭಕ್ತಿಯಿಂದಲೂ ಗೆದೆಯಬಲ್ಲೆವು. ಆದರೆ ಇಂಥ ಜ್ಞಾನ, ಇಂಥ ಭಕ್ತಿ, ಇಂಥ ಕರ್ಮ ಇವು ಆತ್ಮಸಮರ್ಪಣದ ಸಂಕಲ್ಪದಿಂದಲೂ ಅದರ ಆಚರಣೆಯಿಂದಲೂ ತಪ್ಪದೆ ನೆಲೆಗೊಳ್ಳುವವು.

ದ್ವಂದ್ವಗಳಿಗೆ ನಮ್ಮ ಅಹಂಬೋಧವು ತಳಬೇರಾಗಿದೆ. ಈ ಅಹಂಕಾರವು ನಮ್ಮ ಜೀವನದಲ್ಲಿ ಹಾಗು ಸಾಧನದಲ್ಲಿ ಮೂರು ಪ್ರಕಾರದಿಂದ ಕಾಣಿಸಿಕೊಳ್ಳುವದು. ರಾಜಸಿಕ, ತಾಮಸಿಕ, ಸಾತ್ವಿಕ. ರಜಸ್ಸಿಗೆ ವಾಸನೆಯೇ ಮೂಲ. ಫಲಾಕಾಂಕ್ಷೆಯೇ ಅದರ ಗುರಿ. ನಾವು ಇದರಿಂದ ಮುಕ್ತರಾಗಲಿಕ್ಕೆ ಬೇಕು. ಮಾಕರ್ಮಫಲಹೇತುರ್ಭೂಃ ತಮಸ್ಸಿನ ಮೂಲವು ದೌರ್ಬಲ್ಯ. ಸೌಲಭ್ಯ-ನಿಷ್ಕ್ರಿಯತೆಗಳೇ ಅದರ ಗುರಿ. ನಾವಿದನ್ನು ದಾಟಲಿಕ್ಕೇಬೇಕು. ಮಾತೆ ಸಂಗೋಸ್ತ್ವಕರ್ಮಣಿ. ಸತ್ತ್ವಕ್ಕೆ ಸುಖ ಮತ್ತು ತಿಳುವಳಿಕೆಗಳೇ ಮೂಲ. ಆದರೆ ಆ ತಿಳುವಳಿಕೆಗೆ ಅಪೂರ್ಣ ಮತ್ತು ಏಕದೇಶೀಯ ಅನುಭವಗಳೇ ಮೂಲವಾಗಿರುತ್ತವೆ. ಆದರೆ ಇವು ಮಾನವೀಯ ಉಚ್ಚಾಭಿಪ್ರಾಯಗಳೇನೋ ಅಹುದು. ಆದರೂ ದೇವನು ಆಜ್ಞೆ ಮಾಡಿದ ಆತ್ಮಸಮರ್ಪಣದ ತತ್ತ್ವಕ್ಕೆ ಇವು ಭಾದಕಗಳಾಗಿವೆ. ಗೀತೆಯಲ್ಲಿ ಅರ್ಜುನನು ಕೃಷ್ಣನ ಆಜ್ಞೆಗೆ ಭಿನ್ನಾಭಿಪ್ರಾಯಗಳನ್ನು ತೋರಿಸಿದ್ದು ಈ ಸಾತ್ವಿಕತೆಯ ಫಲದಿಂದಲೇ. ಇದು ಮಾನವೀಯ ರೀತಿಯಿಂದ ಎಷ್ಟೋ ಉಚ್ಚತರದ್ದಾಗಿದ್ದರೂ ಪೂರ್ಣಯೋಗದ ಸಾಧಕರು ಇದನ್ನು ದಾಟಲಿಕ್ಕೆ ಬೇಕು. ಬುದ್ಧಿಯುಕ್ತೋ ಜಹಾತೀಹ ಉಭೇಸುಕೃತದುಷ್ಕೃತೇ.

ಸಾಧಕ ಜೀವನದಲ್ಲಿ ರಾಜಸಿಕ ಅಹಂಕಾರವು ತಲೆದೋರಿದಾಗ ಗರ್ವದಿಂದ ಸಾಧಕನು ವಿಚಾರಮಾಡುವ ರೀತಿ ಹೇಗಂದರೆ— ನಾನೊಬ್ಬ

ದೊಡ್ಡ ಸಾಧಕನು. ನಾನು ಇಷ್ಟು ದೂರದವರೆಗೆ ಮುಂದುವರಿದಿದ್ದೇನೆ. ನಾನು ದೇವನ ಕೈಯೊಳಗಿನ ಮಹತ್ತ್ವದ ಯಂತ್ರವಾಗಿದ್ದೇನೆ.

ಈ ತರದ ವಿಚಾರಗಳಿಂದ ಯಾವದಾದರೂ ಒಂದು ಕಾರ್ಯವನ್ನು ದೇವನ ಕಾರ್ಯವೆಂದು ಕೈಕೊಂಡು ಸ್ವತಃ ದೇವನಿಗಿಂತ ತಾನೇ ಅದರಲ್ಲಿ ಹೆಚ್ಚು ಅಭಿರುಚಿಯುಳ್ಳವನಾಗಿ, ಹೆಚ್ಚು ತೊಂದರೆಗಳನ್ನು ಸಹಿಸಿಯೂ ಕೂಡ ಅದನ್ನು ಎಳೆದುಕೊಂಡು ಹೊರಡುವನು. ಆದರೆ ಈ ತರದ ರೀತಿಯು ನಮಗೆ ಬೇಕಾಗಿಲ್ಲ. ಸರ್ವರಲ್ಲಿ ಪರಮಾತ್ಮನಿದ್ದಾನೆಂಬ ಮಾತನ್ನು ಸದಾ ನೆನಪಿನಲ್ಲಿಟ್ಟು ವೈಯಕ್ತಿಕ ಆತುರತೆಗಳನ್ನು ಮೂಲೆಗೊತ್ತಿ ದೈವೀಪ್ರಕಾಶದ ಪೂರ್ಣ ಪ್ರಕಟನೆಗೆ ಸ್ಥಳ ಕೊಡಬೇಕು.

ತಮೋಗುಣದ ಕೇಡು ಎರಡು ಪ್ರಕಾರದ್ದು. ಸಾಧಕನು ಯಾವಾಗ್ಗೆ ತನ್ನೊಳಗಿನ ತಮಸ್ಸಿನಲ್ಲಿ ತನ್ಮಯನಾಗಿ —"ನಾನು ದುರ್ಬಲನು ಪಾಪಿಯು, ದುಃಖಿಯು, ಅಜ್ಞನು, ಕೆಲಸಕ್ಕೆ ಬಾರದವನು, ಅವನಿಗಿಂತ ಕಡಿಮೆ, ಇವನಿಗಿಂತ ಕಡಿಮೆ, ಅಧಮಾಧಮ ದೇವರು ನನ್ನನ್ನು ತೆಗೆದುಕೊಂಡು ಏನು ಮಾಡಿಯಾನು" ಮುಂತಾದುದಾಗಿ ವಿಚಾರ ಮಾಡುತ್ತಾನೆ ಆದರೆ ದೇವರು ತನ್ನ ಯಂತ್ರಗಳ ತಾತ್ಪೂರ್ತಿಕ ಶಕ್ತಿ ಅಥವಾ ಅಶಕ್ತಿಗಳನ್ನು ಅವಲಂಬಿಸಿ ಕುಳಿತಿದ್ದರೆ, ಆತನಿಗೆ ಅಘಟಿತಘಟನೆಪಟುವೆಂದು ಹೇಗೆ ಹೇಳಲಿಕ್ಕೆ ಬಂದೀತು? ಮೂಕಂಕರೋತಿವಾಚಾಲಂ—

ತಮೋಗುಣದ ಇನ್ನೊಂದು ತೊಡಕೇನಂದರೆ— ಸಾಧಕನು ನಿಷ್ಕ್ರಿಯಶಾಂತಿಯ ಸವಿಯನ್ನು ಒಮ್ಮೆ ನೋಡಿದನೆಂದರೆ ಅದನ್ನು ಕಳಕೊಳ್ಳುವದಕ್ಕೇ ಇಚ್ಛಿಸುವದಿಲ್ಲ. ಯಾವಾಗಲೂ ನಿಷ್ಕ್ರಿಯನಾಗಿ ಇರಬೇಕೆಂದು ಇಚ್ಛಿಸುತ್ತಾನೆ. ಆದರೆ ಸದಾ ನಿನ್ನ ನೆನಪಿನಲ್ಲಿರಬೇಕಾದದ್ದೇನಂದರೆ— ನೀನೂ ಕೂಡ ಬ್ರಹ್ಮನಿದ್ದೀ. ದೈವೀಶಕ್ತಿಯು ನಿನ್ನಲ್ಲಿ ಕೆಲಸ ಮಾಡುತ್ತ ಇದೆ. ಈಶ್ವರನ ಲೀಲೆಯಲ್ಲಿ ಕಂಡು ಬರುವ ಸರ್ವ ಸಮರ್ಥತೆ ಮತ್ತು ದಿವ್ಯಾನಂದಗಳನ್ನು ಪಡೆದುಕೊ. ದೇವನಿಗೆ ತಾನಾಗಲಿ, ನೀನಾಗಲಿ ನಿಷ್ಕ್ರಿಯನಾಗಿರಬೇಕೆಂಬ ಇಚ್ಛೆಯಿಲ್ಲ. ಉಚ್ಛೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮಚೇದಹಂ ।

ಸತ್ವಗುಣದಿಂದ ಸಾಧಕ ಜೀವನದಲ್ಲಿ ಆಗುವ ಕೇಡು ಏನಂದರೆ— ಖಂಡಾನುಭವಗಳು, ಯೋಗಶಕ್ತಿಗಳು, ದೇವನ ಸದಾ ಸಾನ್ನಿಧ್ಯದ

ಆನಂದ ಮುಂತಾದವುಗಳ ಮೇಲೆ ಲುಬ್ಧನಾಗಿ ಸಾಧಕನು ಮತ್ತಾವುದನ್ನೂ ಲಕ್ಷಿಸದೆ ಹೋಗುವನು. ಆದರೆ ನೆನಪಿನಲ್ಲಿರಲಿ— ಈ ಯೋಗವು ನಿನ್ನ ಸಲುವಾಗಿ ಅಲ್ಲ. ಮೇಲೆ ಹೇಳಿದ ವಸ್ತುಗಳೆಲ್ಲ ಸಿದ್ಧಿಯ ಭಾಗಗಳಾಗಿದ್ದರೂ ಅವೇ ನಿನ್ನ ಸಿದ್ಧಿಯ ಉದ್ದೇಶಗಳಲ್ಲ. ಆದರೆ ನೀನು ಮೊದಲೇ ನಿಶ್ಚಯಿಸಿರುವದೇನಂದರೆ— ದೇವನ ಮೇಲೆ ನೀನು ಯಾವ ಬಾಧ್ಯತೆಯನ್ನೂ ತೋರಿಸದೆ, ಆತನು ಸಹಜವಾಗಿ ಕೊಟ್ಟದ್ದನ್ನು ಮಾತ್ರ ಸ್ವೀಕರಿಸುವದಕ್ಕೆ ಕೃತಸಂಕಲ್ಪನಾಗಿರುವಿ.

ಇನ್ನು ಆನಂದದ ವಿಷಯವನ್ನು ತೆಗೆದುಕೊಂಡರೆ ನಿಸ್ವಾರ್ಥ ಆತ್ಮವು ದೇವನ ಇಚ್ಛೆಯ ಪ್ರಕಾರ ದೈವೀಸಾನ್ನಿಧ್ಯದ ಆನಂದವನ್ನು ಕೂಡ ಪರಿತ್ಯಜಿಸುವದು. ನೀನು ಅತ್ಯಂತ ಉನ್ನತವಾದ ಸಾತ್ವಿಕ ಅಹಂಕಾರದಿಂದಲೂ ಕೂಡ ಸ್ವತಂತ್ರನಾಗಬೇಕು. ಮುಮುಕ್ಷುತ್ವದ ಸೂಕ್ಷ್ಮ ಅಜ್ಞಾನದಿಂದಲೂ ಕೂಡ ಸ್ವತಂತ್ರನಾಗಬೇಕು. ಯಾವ ಆಸಕ್ತಿಯಿಲ್ಲದೆ ಸರ್ವಾನಂದಗಳನ್ನು ಸ್ವೀಕರಿಸಬೇಕು. ಆಗ ನೀನು ಗೀತೆಯಲ್ಲಿ ಹೇಳಿದ ಸಿದ್ಧಪುರುಷನಾಗುವಿ, ಪರಿಪೂರ್ಣ ಮಾನವನಾಗುವಿ. ಒಟ್ಟಿಗೆ ಈ ಯೋಗದಲ್ಲಿ ಮೂರು ಮೆಟ್ಟಲುಗಳು.— (೧) ಆತ್ಮಸಮರ್ಪಣದ ಸಂಕಲ್ಪವು (೨) ಆತ್ಮಜ್ಞಾನದ ಮೂಲಕವಾಗಿ ಆಧಾರಗಳಿಂದ ಬೇರ್ಪಟ್ಟು ನಿಲ್ಲುವದು. (೩) ದೇವನನ್ನು ಸರ್ವತ್ರದಲ್ಲಿ ಸರ್ವಚರಾಚರ ವಸ್ತುಗಳಲ್ಲಿ, ಸರ್ವಘಟನೆಗಳಲ್ಲಿ ಅನುಭವಿಸುವುದು. ಮತ್ತು ಕರ್ಮಫಲವನ್ನೂ ಕರ್ಮವನ್ನೂ ಕೂಡಿಯೇ ಅರ್ಪಿಸುವುದು. ಮತ್ತು ಅಹಂಕಾರದಿಂದಲೂ, ಆಸಕ್ತಿ ಮತ್ತು ದ್ವಂದ್ವಗಳಿಂದಲೂ ನೀವು ಸ್ವತಂತ್ರರಾಗುವುದು. ಇಷ್ಟಾದರೆ ನೀವು ನಿಮ್ಮ ಸತ್ತಾದಲ್ಲಿ ಶುದ್ಧರೂ, ಮುಕ್ತರೂ, ಸಿದ್ಧರೂ, ಆನಂದವುಳ್ಳವರೂ ಆಗುವಿರಿ. ಆದರೆ ನೀವು ಸಂಕಲ್ಪವನ್ನು ಮಾಡಿಬಿಟ್ಟೊಡನೆ ದೇವನ ಸರ್ವಸಮರ್ಥಸ್ವಾಭಾವಿಕಶಕ್ತಿಯು ಈ ಸಾಧನ ಸೋಪಾನಕ್ರಮವನ್ನು ತನ್ನಿಂದ ತಾನೆ ಮುಂದರಿಸುವದು. ಇಲ್ಲಿ ನಿಮ್ಮ ಮಟ್ಟಿಗೆ ಅಗತ್ಯವಾದ ಮಾತೆಂದರೆ ಇಷ್ಟೇ— ಅನುಮತಿ ಮತ್ತು ಸ್ಮೃತಿ.

ನಿಮ್ಮ ಒಳಗೆ ಮತ್ತು ಹೊರಗೆ ನಡೆಯುವ ಸರ್ವಸಂಗತಿಗಳನ್ನು ನಿಮ್ಮ ಸಾಧನದ್ದೇ ಒಂದು ಭಾಗವೆಂದು ತಿಳಿದು ಒಳ್ಳೆಯವರ ಸಲುವಾಗಿ ಆತುರಪಡದೆ, ಕೆಟ್ಟದರ ಸಲುವಾಗಿ ಎದೆಗೆಡದೆ ಒಂದನ್ನು ಪಡೆಯಲಿಕ್ಕೂ, ಇನ್ನೊಂದನ್ನು ಹೊರದೂಡಲಿಕ್ಕೂ ಪ್ರಯತ್ನಿಸದೆ ಸಾವಧಾ

ನದಿಂದ ಇರುವದೇ ಅನುಮತಿಯು. ಇದನ್ನು ಸಾಧಿಸುವದಕ್ಕೆ ನಿಮಗೆ ಸದಾ ನಿಮ್ಮ ಗುರಿಯು ಸ್ಮೃತಿಪಥದಲ್ಲಿ ಉಳಿಯಬೇಕಾಗುವದು. ಇದಕ್ಕೆ ಧೀರತನವೂ, ಉತ್ಸಾಹವೂ ಅವಶ್ಯಬೇಕು. ವ್ಯಾಕುಲತೆಯು ಎಷ್ಟೇ ಸಮರ್ಥವಾಗಿರಬಹುದಾದರೂ ಈ ಯೋಗದಲ್ಲಿ ಅದು ಉಪಯೋಗದ್ದಲ್ಲ. ಉಪನಿಷತ್ತಿನಲ್ಲಿ ಬಣ್ಣಿಸಲ್ಪಟ್ಟ 'ಧೀರ' ರಾಗಲಿಕ್ಕೆಬೇಕು.

ಸ್ಮೃತಿಗೆ ಅಪ್ರಮತ್ತತೆಯು ಅಗತ್ಯವದೆ. ಅಲಕ್ಷ್ಯವುಂಟಾದರೆ ಗುಣಗಳ ದಾಳಿಯು ಆರಂಭವಾಗುವದರಿಂದ ಯೋಗಭ್ರಷ್ಟನಾಗಿ ಬಿಡುತ್ತಾನೆ. ಆದರೆ ಈ ಪ್ರಮಾದಗಳಿಗೆ ನೀನೇನು ಹೆದರಬೇಕಾಗಿಲ್ಲ. ನಡೆದಾಡುವ ಕೂಸು ಏಳುಬೀಳದೆ ನಿರ್ವಾಹವಿಲ್ಲ. ನಿತ್ಯ ಅನುಸ್ಮರಣದಿಂದ ಸರ್ವ ವಸ್ತುಗಳಲ್ಲಿಯೂ, ಸರ್ವಘಟನೆಗಳಲ್ಲಿಯೂ ದೇವನನ್ನು ಮರೆಯಲಾರದವನಾದರೆ ಆಗ ಅಪ್ರಮತ್ತತೆಯ ಅಗತ್ಯವು ತಪ್ಪಿಹೋಗುವದು. ಆದರೆ ಮೂಲದಲ್ಲಿಯೇ ಸಂಪೂರ್ಣಸಮರ್ಪಣದಿಂದ ಆರಂಭಿಸಿದ್ದರೆ ನಿನ್ನ ದಾರಿಯು ನಿಶ್ಚಿತವೂ, ಸುಲಭವೂ, ವೇಗವುಳ್ಳದ್ದೂ ಆಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಸನತ್ ಸುಜಾತೀಯವೆಂಬ ಪ್ರಾಚೀನ ಗ್ರಂಥದಲ್ಲಿ ಸಿದ್ಧಿಗೆ ನಾಲ್ಕು ಮಾತುಗಳ ಅವಶ್ಯಕತೆಯಿದೆಯೆಂದು ಹೇಳಿದೆ. ಅವು ಯಾವವೆಂದರೆ— ಶಾಸ್ತ್ರ, ಉತ್ಸಾಹ, ಗುರು, ಕಾಲ.

ಇವುಗಳಲ್ಲಿ ಶಾಸ್ತ್ರವೋ? ಇದು ವರೆಗೆ ನಾನು ಹೇಳಿದ್ದೇ ಶಾಸ್ತ್ರ. ಉತ್ಸಾಹವೋ? ಅದು ನಿನ್ನೊಳಗೇ ಇದೆ. ಹೊರಗೆ ಹುಡುಕಬೇಕಾಗಿಲ್ಲ. ಅನುಮತಿಯೂ, ನಿತ್ಯ ಅನುಸ್ಮರಣವೂ ಆದರೆ ಅದಕ್ಕೆ ಸಾಕು. ಗುರುವೋ? ಸ್ವಯಂ ಭಗವಂತನು. ಕಾಲವೋ? ಅದು ನಿನ್ನ ಇದಿರಿಗೆ ಎಷ್ಟು ಬೇಕೋ ಅಷ್ಟು ಬಿದ್ದುಕೊಂಡಿದೆ. ಇನ್ನೇನು? ದೇವನು ಹೇಗೆ ಗುರುವಾಗುವನೆಂಬದು ನಿನಗೆ ಮೊದಲಿಗೆ ತಿಳಿಯಲಿಕ್ಕಿಲ್ಲ. ಆದರೆ ನಿನ್ನ ಸಮರ್ಪಣವು ಬೆಳೆಬೆಳೆದಂತೆ ನಿನ್ನ ಜೀವನದಲ್ಲಿ ನಡೆಯುವ ಸಣ್ಣಪುಟ್ಟ ಸಂಗತಿಗಳೆಲ್ಲಾ ನಿನ್ನ ಸಾಧನಕ್ಕೇ ಹೇಗೆ ಸಹಾಯಕವಾಗಿವೆ ಎಂಬದು ಗೊತ್ತಾಗುವದರಿಂದ ಈಶ್ವರನೇ ನಿನ್ನ ಗುರುಸ್ಥಾನವನ್ನು ಸ್ವೀಕರಿಸಿದ್ದಾನೆಂಬ ಮಾತು ನಿನಗೆ ಸ್ಪಷ್ಟವಾಗಿ ಗೋಚರಿಸುವದು. ನಿನ್ನ ಪೂರ್ಣತೆಗಳನ್ನೆಲ್ಲಾ ನೀಗಿಸಿ ಪರಿಪೂರ್ಣತೆಯನ್ನು ನೆಲೆಗೊಳಿಸುವದಕ್ಕೆ ದೇವಾದಿದೇವನ ಸರ್ವ ಸಮರ್ಥವಾದ ಮಹಾ ಪ್ರೇಮವೂ, ಮಹಾ

ಜ್ಞಾನವೂ ನಿನಗಾಗಿ ದುಡಿದು ನಿನ್ನ ಉನ್ನತಿಗೆ ಏರಿಸುತ್ತವೆಂಬುದು ಕಂಡುಬರುವದು ಈ ಕಾರ್ಯಕ್ಕಾಗಿ ಬೇಕಾಗುವ ಕಾಲವು ನಿನಗೆ ಬಹಳ ದೊಡ್ಡದಾಗಿ ಕಂಡರೂ ನೀನು ನಿರುತ್ಸಾಹಿಯಾಗಬೇಡ. ಯಾಕಂದರೆ ಸಹಜಕ್ರಮು ವಿಕಾಸದಿಂದ ಬಹು ಶತಮಾನಗಳಲ್ಲಿ ಸಾಧಿಸಬೇಕಾದ ಮಾತು ಕೆಲವೇ ವರ್ಷಗಳಲ್ಲಿ ಸಿದ್ಧಿಗೆ ಬರಬೇಕಾಗಿರುವದರಿಂದ ಕಾಲವಿಲಂಬಕ್ಕೆ ಅಧೀರನಾದರೆ ಹೇಗೆ ಸಾಗೀತು? ನಿನ್ನಲ್ಲಿ ಆಗಬೇಕಾದ ಬದಲಾವಣೆಯೇನು ಸಣ್ಣಪುಟ್ಟದಲ್ಲ. ಸಮಸ್ತ ಮಾನವ ಪ್ರಕೃತಿಯು ಬದಲಾಗಿ ದೇವ ಪ್ರಕೃತಿಯಾಗಬೇಕಾಗಿದೆ. ಅಲ್ಪ ಕಾಲದಲ್ಲಿಯೇ ಫಲವನ್ನು ಕೊಡುವ ಮಾನವ ಕಲ್ಪಿತ ಸಾಧನ ಮಾರ್ಗಗಳೆಷ್ಟೋ ಉಂಟು. ಆದರೆ ಅವು ಪೂರ್ಣ ಯೋಗಿಗೆ ಬೇಕಾಗಿರುವ ಸ್ಥಿತಿಯನ್ನು ತಂದುಕೊಡುವದಕ್ಕೆ ಸಮರ್ಥವಾದವುಗಳಲ್ಲ. ಅವು ಗೊತ್ತುಪಡಿಸಿದ ಒಂದು ಸ್ಥಾನದಿಂದ ಗೊತ್ತುಪಡಿಸಿದ ಮತ್ತೊಂದು ಸ್ಥಾನಕ್ಕೆ ನಿಶ್ಚಿತವಾಗಿ ಮುಟ್ಟುವ ಮಾರ್ಗಗಳಾಗಿವೆ. ಇವುಗಳ ಪ್ರಗತಿಯು ಸ್ಪಷ್ಟ ನಿಶ್ಚಿತವೆಂದು ಕಂಡುಬರುವುದು ನಿಜವೇ. ಪೂರ್ಣ ಯೋಗದ ಸಾಧನ ಕ್ರಮದಲ್ಲಿ ಪ್ರಗತಿಯು ಒಮ್ಮೊಮ್ಮೆ ಗತಿಯುಲ್ಲಿದ್ದಂತೆಯೂ, ಒಮ್ಮೊಮ್ಮೆ ಕುಂಠಿತವಾದಂತೆಯೂ, ಒಮ್ಮೊಮ್ಮೆ ಸಂಪೂರ್ಣವಾಗಿ ಲುಪ್ತವಾಗಿಯೇ ಹೋದಂತೆಯೂ ಕಂಡುಬರಬಹುದಾದರೂ ಕೊನೆಗೆ ಸಂಪೂರ್ಣ ಸಿದ್ಧಿಗೆ ಬಂದು ಮುಟ್ಟುವುದು ನಿಶ್ಚಿತವೇ ಇದೆ. ಪೂರ್ಣ ಯೋಗದ ಸಾಧನವು ಮಹಾಸಾಗರದ ಪರ್ಯಟನವಿದ್ದಂತೆ. ಉಳಿದವುಗಳು ಕಾಲುವೆಯ ಮಾರ್ಗಗಳಿದ್ದಂತೆ. ಉಳಿದವುಗಳಲ್ಲಿ ಕಟ್ಟಿಟ್ಟ ಕೆಲವೇ ಫಲಗಳಿವೆ. ಆದರೆ ಇದರಲ್ಲಿ ಅನಂತ ಸಿದ್ಧಿಯಿದೆ. ಈ ಮಹಾಸಾಗರದಲ್ಲಿ ಹೋಗುವದಕ್ಕೆ ನಿನಗೆ ಏನೇನು ಬೇಕೆಂದರೆ ಒಂದು ಹಡಗ, ನೀರು ಕಡಿಯುವ ಗಾಲಿ, ದಿಕ್ಕು ತೋರಿಸುವ ಹೋಕಾಯಂತ್ರ, ಎಳೆದುಕೊಂಡು ಹೋಗುವ ಶಕ್ತಿ, ತಜ್ಞನಾದ ಒಬ್ಬ ಕಪ್ತಾನನು. ಬ್ರಹ್ಮವಿದ್ಯೆಯೇ ನಿನ್ನ ಹಡಗವು. ಶ್ರದ್ಧೆಯೇ ನೀರು ಕಡಿಯುವ ಚಕ್ರವು. ಆತ್ಮಸಮರ್ಪಣವೇ ಹೋಕಾಯಂತ್ರವು. ಅನಂತ ಕೋಟಿ ಬ್ರಹ್ಮಾಂಡಗಳನ್ನು ಹುಟ್ಟಿಸಿ ಆಳುವ ಮಹಾಶಕ್ತಿಯೇ ನಿನ್ನ ಹಡಗವನ್ನೆಳೆಯುವ ಪಾವರ್. ದೇವನೇ ನಿನ್ನ ಕಪ್ತಾನನು.

ಆದರೆ ದೇವನು ತನ್ನ ಕಾರ್ಯವನ್ನು ತನ್ನ ಸ್ವಕೀಯ ಮಾರ್ಗಗಳಿಂದ ಸ್ವಕೀಯ ಕಾಲಾನುಕ್ರಮದಲ್ಲಿ ಮಾಡುತ್ತಾನೆ. ಅವನ ದಾರಿ

ಯನ್ನು ನೋಡುತ್ತ ನಡೆ. ಅವನ ಕಾಲವನ್ನು ಕಾದುಕೊಂಡಿರು. ಶಾಸ್ತ್ರದ
ಅಗತ್ಯವನ್ನು ಅರಿತುಕೋ. ಗುರುವಿನ ಗುರುತ್ವವನ್ನು ಸ್ವೀಕರಿಸುವ ಅಗ
ತ್ಯವನ್ನು ಅರಿತುಕೋ. ಬರಿ ತರ್ಕಕ್ಕೆ ಮಹತ್ವ ಕೊಟ್ಟು ಮಾಯಾವಾದ
ಅದ್ವೈತ ವಾದಗಳ ಮೇಲೆ ಸುಳ್ಳು ಜಂಬವನ್ನು ಕೊಚ್ಚುತ್ತ ಕುಳ್ಳಿರದೆ,
ಅನುಭವದ ಕಡೆಗೆ ಲಕ್ಷ್ಯವಿರಲಿ. ಪಾಂಡಿತ್ಯವು ಶುಷ್ಕವಾದದ್ದು. ಅದರಿಂದ
ಸಹಾಯಕ್ಕೆ ಬದಲು ವಿಘ್ನವೇ ಹೆಚ್ಚು. ನೀನು ಪೂರ್ಣ ಯೋಗದ
ಮಾರ್ಗವನ್ನು ಸ್ವೀಕರಿಸಿದ ಮೇಲೆ ವ್ಯರ್ಥ ಪ್ರಶ್ನಜಾಲದಲ್ಲಿ ಕಾಲವನ್ನು
ಕಳೆಯುವದಕ್ಕಿಂತ ಅನುಭವಕ್ಕೆ ನಿನ್ನ ಚಿತ್ತದ್ವಾರವನ್ನು ಮುಕ್ತರೀತಿಯಿಂದ
ತೆರೆದಿಟ್ಟು ಧೀರನಾಗಿ ನಡೆ. ಈ ಮಾರ್ಗದಲ್ಲಿ ಮುಂದುವರಿದ ಮಾನ
ವೀಯ ಸಹಾಯಕರಿಂದ ಸಹಾಯವನ್ನು ತೆಗೆದುಕೊಳ್ಳುವದಕ್ಕೂ ನೀ
ನೇನು ಗರ್ವ ಪಡಬೇಡ. ಅಲ್ಪಸ್ವಲ್ಪ ತಿಳಿದದ್ದಕ್ಕೆ ಹೆಚ್ಚು ಮಹತ್ವ
ಕೊಡದೆ ಪೂರ್ಣ ಪ್ರಕಾಶದ ಸಂಪೂರ್ಣ ಅನುಭವಕ್ಕಾಗಿ ನಿರೀಕ್ಷಿಸು.
ನಿನ್ನ ಒಳಗಿನಿಂದ ನಿನಗೆ ಸಹಾಯ ಮಾಡಬಲ್ಲ ಜಗದ್ಗುರುವಿನ ಮೇಲೆ
ನಿನ್ನ ಭರವಸವಿರಲಿ.

ಇದೀಗಿನ ಅಧುನಿಕ ವಿಚಾರವಾತಾವರಣದಲ್ಲಿ ಬಹಳವಾಗಿ ಪ್ರಾಮು
ಖ್ಯತೆಗೆ ಬಂದಿರುವ ಅದ್ವೈತವಾದ ಮತ್ತು ಮಾಯಾವಾದಗಳ ನೂತನ
ವ್ಯಾಖ್ಯೆಯನ್ನು ಕುರಿತು ಸ್ವಲ್ಪಮಟ್ಟಿಗೆ ಹೇಳಬೇಕಾದ ಅಗತ್ಯವಿದೆ.
ಯುರೋಪದ ತರ್ಕವಾದಿಗಳ ಅಜ್ಞೇಯವಾದದಲ್ಲಿ ಇಂದು ಅದ್ವೈತವಾ
ದವೂ ಮಾಯಾವಾದವೂ ಬೆರೆತು ಹೋಗಿರುವುದು ಗೊತ್ತಾದರೆ ಸ್ವಯಂ
ಶಂಕರಾಚಾರ್ಯರು ಕೂಡ ಆಶ್ಚರ್ಯಪಡುವಂತೆ ಇದೆ. ಏಕದೇಶೀಯ
ತೆಯ ತತ್ತ್ವಜ್ಞಾನಿಗಳು ಸತ್ಯದ ಅಂಶವನ್ನು ಮಾತ್ರ ಹೇಳುವರೆಂಬುದು
ಮಾತ್ರ ನೆನಪಿನಲ್ಲಿರಲಿ. ದೇವನು ಜಗತ್ತನ್ನು ನಿರ್ಮಿಸಿದನೆಂಬುದು ತರ್ಕ
ಶಾಸ್ತ್ರದ ಕಟುನಿಟ್ಟಿನ ಅನುಮಾನ ಮತ್ತು ಸಿದ್ಧಾಂತಗಳಂತೆ ಇಲ್ಲ.
ಸಂಗೀತದೊಳಗಿನ ಸ್ವರಸಂಯೋಜನದಂತೆ ಇದೆ. ಅನೇಕತ್ವದಲ್ಲಿ ಅಪಾರ
ವಾದ ಸಮರಸತೆ ಇದೆ. ಆತನ ಸತ್ತೆಯು ಸರ್ವಸ್ವತಂತ್ರವಾಗಿದ್ದರೂ ಬಹು
ತ್ವದಲ್ಲಿಯೇ ಏಕತ್ವವಿದೆ. ಈ ಮಾತನ್ನು ತರ್ಕದಿಂದ ಸಿದ್ಧ ಮಾಡಿಕೊಡಲು
ಶಕ್ಯವಿಲ್ಲ. ಸರ್ವಧರ್ಮಗಳ ಸತ್ಯವನ್ನು ಅಂಗೀಕರಿಸುವ ಧರ್ಮವು ಸರ್ವೋ
ತ್ತಮ ಧರ್ಮವಾಗಿರುವಂತೆ ಸರ್ವತತ್ವಜ್ಞಾನಗಳ ಸತ್ಯವನ್ನು ಅಂಗೀಕರಿ
ಸುವ ತತ್ವಜ್ಞಾನವೇ ಸರ್ವೋತ್ತಮ ತತ್ವಜ್ಞಾನವಾಗಿದೆ. ಅಂಥ ತತ್ವ
ಜ್ಞಾನವು ಉಳಿದವುಗಳಿಗೆಲ್ಲ ತಕ್ಕ ತಕ್ಕ ಸ್ಥಾನವನ್ನು ಕೊಡುತ್ತದೆ. ಮಾಯಾ

ಎಂಬುದು ಕೂಡ ಒಂದು ಅನುಭವವಿದೆ. ಶಂಕರಾಚಾರ್ಯರು ತಮ್ಮ ಸ್ವಾನುಭವದಲ್ಲಿ ಅದನ್ನು ಅನುಭವಿಸಿದ್ದರಿಂದಲೇ ಅದಕ್ಕೆ ಅವರು ಅಷ್ಟೊಂದು ಮಹತ್ವವನ್ನು ಕೊಟ್ಟಿದ್ದಾರೆ. ಆದರೆ ಈಗ ನಾನು ಈ ಮಾಯಾ ಎಂಬುದರ ಸತ್ಯವಾದ ಅರ್ಥವನ್ನು ಒಳಗೊಂಡಿರುವಂಥ ಹೆಚ್ಚು ಆಳವಾದ ಅರ್ಥವನ್ನು ಕೊಡುವಂಥ 'ಲೀಲಾ' ಎಂಬ ಬೇರೊಂದು ಶಬ್ದವನ್ನು ಹೇಳುತ್ತೇನೆ. ಲೀಲಾ ಎಂಬುದು ಜಗತ್ತನ್ನು ಕೆಲಸಕ್ಕೆ ಬಾರದ ವ್ಯರ್ಥ ವಸ್ತುವೆಂದು ಹಾರಿಸಿ ಬಿಡುವದಿಲ್ಲ. ನೀವು ಶ್ರೀಕೃಷ್ಣನ ಮಥುರಾ ವೃಂದಾವನದ ಆಟಪಾಟಕ್ಕೆ ಆರಿಸಲ್ಪಟ್ಟವರಿದ್ದೀರಿ.

ದೇವನು ಒಬ್ಬನೇ ಇದ್ದರೂ ಅವನು ಆ ಏಕತ್ವದಲ್ಲಿಯೇ ಬದ್ಧನಾಗಿಲ್ಲ. ಏಕನಾಗಿದ್ದರೂ ಬಹುತ್ವವನ್ನು ಧಾರಣ ಮಾಡುತ್ತಿರುವದನ್ನು ನಾವಿಲ್ಲಿ ಕಾಣುತ್ತಿದ್ದೇವೆ. ಅವುಗಳಿಗೆ ಸಹಾಯ ಮಾಡುವದಕ್ಕೆಂದು ಅವನು ಹಾಗೆ ಮಾಡುತ್ತಾನಂತಲ್ಲ. ಆವನ ಸಂಕಲ್ಪಕ್ಕೇ ಹಾಗೆ ಬಂದಿದೆಯೆಂದು ಅವನು ಮಾಡುತ್ತಾನೆ. ಬಹುವಾಗಿರುವದೆಲ್ಲ ಆ ಏಕಮಾತ್ರನ ವಿಕಾಸವೇ ಆಗಿದ್ದರೂ ಅವನು ಬರೀ ಬಹುತ್ವದಲ್ಲಿಯೇ ಬದ್ಧನಾಗಿಲ್ಲ. ಅವನು ಏಕಮೇವನೂ, ಬಹುತ್ವವುಳ್ಳವನೂ ಎರಡೂ ಆಗಿದ್ದಾನೆಂಬ ಮಾತು ವಿವರಿಸಿ ಹೇಳಲಿಕ್ಕೆ ಬಾರದ್ದಾಗಿದೆ. ಅಂತೇ ಉಪನಿಷತ್ತುಗಳು— ಆತನು ಸಾಂತನೂ ಇದ್ದಾನೆ. ಅನಂತನೂ ಇದ್ದಾನೆ. ಜೀವವೂ ಆತನೇ ಎಂದು ಹೇಳುತ್ತವೆ. ಎಲ್ಲವೂ ಆತನ ಅನಂತ ಅಸ್ತಿತ್ವದ ಚೈತನ್ಯದ ಆಟವಾಗಿದೆ. ಎಲ್ಲವೂ ಆತನ ವಿಕಾಸವಾಗಿದೆ. ಆದ್ದರಿಂದ ಎಲ್ಲವೂ ಸತ್ಯ. ಮಾಯಾ ಎಂಬುದು "ಬ್ರಹ್ಮನು ತನ್ನದೇ ವಿಕಾಸವಾದ ಜಾಗತಿಕ ಸ್ವರೂಪದಿಂದ ಸ್ವತಂತ್ರನಾಗಿದ್ದಾನೆ" ಎಂಬುದಕ್ಕಿಂತ ಹೆಚ್ಚಿಗೇನೂ ಹೇಳುವದಿಲ್ಲ. ನಾವು ಆತನನ್ನು ಎಷ್ಟು ಕಂಡಿದ್ದೇವೆಯೋ, ಆತನ ವಿಷಯದಲ್ಲಿ ಏನೆಂದು ವಿಚಾರ ಮಾಡಿದ್ದೇವೆಯೋ ಅಷ್ಟಕ್ಕೇ ಆತನೇನೂ ಬದ್ಧನಿಲ್ಲ. ನಾವು ಯಾವುದರ ಕೈಯಿಂದ ತಪ್ಪಿಸಿಕೊಳ್ಳಬೇಕಾಗಿದೆಯೋ ಆ ಮಾಯೆಯು ಯಾವುದೆಂದು ಹೇಳಲಿಯಾ? ಅಜ್ಞಾನದ ಮೂಲಕ ಸರ್ವ ವಸ್ತುಗಳೂ, ದೇವನೂ ಭಿನ್ನವೆಂದು ತಿಳಿಯುತ್ತೇವಲ್ಲ-ಅದು ಮಾಯೆ. ಅವು ಅಚೇತನವೆಂದು ತಿಳಿಯುತ್ತೇವಲ್ಲಾ ಅದು ಮಾಯೆ. ಇದನ್ನು ಮಾತ್ರ ಮಾಯೆಯೆಂದು ಹೇಳಬಹುದು. ಇದರಿಂದ ನಾವು ದೂರಾಗಲಿಕ್ಕೆ ಬೇಕಾದದ್ದು ನಿಜ. ನಿಮಗೆ

ನಾರದ ಮತ್ತು ಗೋಪಿಯರ ಕಥೆಯು ಗೊತ್ತಿಲ್ಲವೇ? ಒಬ್ಬೊಬ್ಬ ಗೋಪಿಯ ಬಳಿಯಲ್ಲಿಯೂ ಒಂದೊಂದು ರೂಪದಿಂದ ಅದೇ ಕೃಷ್ಣನು ನಾರದನಿಗೆ ಕಾಣಿಸಿದನೆಂದು ಕಥೆ ಉಂಟಲ್ಲಾ. ಅದರ ಭಕ್ತಿಪರವಾದ ಅರ್ಥವು ಏನೇ ಇರಲೊಲ್ಲದೇಕೆ, ಚರಾಚರ ಸೃಷ್ಟಿಯೆಲ್ಲ ಆತನದೇ ದಿವ್ಯ ಲೀಲೆಯೆಂಬ ಮಾತಿಗೆ ಅದು ತಕ್ಕ ರೂಪಕ. ಪ್ರತಿಯೊಂದೆ ಜೀವವೂ ಆತನೇ. ಪ್ರತಿಒಬ್ಬ ಪುರುಷನು ತನ್ನ ಭಿನ್ನ ಭಿನ್ನ ಪ್ರಕೃತಿ ಮತ್ತು ಕೃತಿಗಳಿಂದ ಕೂಡದವನಾಗಿದ್ದರೂ ಕೂಡ ಆತನು ಆ ದೇವನೇ ಆಗಿದ್ದಾನೆ. ಅದೇ ಕಾಲಕ್ಕೆ ಆತನು ರಾಧೆ ಅಥವಾ ಪರಾಪ್ರಕೃತಿಯಿಂದ ಯುಕ್ತನಾದ ಪುರುಷೋತ್ತಮನೂ ಆಗಿದ್ದಾನೆ. ಒಂದು ದೃಷ್ಟಿಯಿಂದ ಎಲ್ಲ ಪುರುಷರೂ ಆತನೊಡನೆ ಅಭಿನ್ನವಾಗಿದ್ದಾರೆ. ಇನ್ನೊಂದು ದೃಷ್ಟಿಯಿಂದ ಆ ಪುರುಷರು ಆತನಿಂದ ಭಿನ್ನರೂ ಅಹುದು. ಯಾಕಂದರೆ ಅವರು ಸದಾ ಇದ್ದೇ ಇರುತ್ತಾರೆ. ಈ ವಿಷಯದಲ್ಲಿ ಹೆಚ್ಚು ಗದ್ದಲ ಮಾಡುವದರಲ್ಲಿ ಫಲವಿಲ್ಲ. ಬರಿ ಕಾದುಕೊಂಡಿರು. ಎಲ್ಲಿಯ ವರೆಗೆಂದರೆ-ದೇವನನ್ನು ಕಾಣುವ ವರೆಗೆ, ಮತ್ತು ನಿನ್ನನ್ನೂ ಆತನನ್ನೂ ಅರಿಯುವ ವರೆಗೆ. ಆಗ ವಿವಾದಗಳೂ, ತರ್ಕ-ವಿವೇಚನಗಳೂ ಅಗತ್ಯವಿಲ್ಲದ ವಸ್ತುಗಳಾಗಿ ಬಿಡುವವು.

ನಮ್ಮ ಧ್ಯೇಯವೆಂದರೆ ಇವೆಲ್ಲ ವಸ್ತುಗಳನ್ನು ಕುರಿತು ನಾವು ಅನುಭವ ತೆಗೆದುಕೊಳ್ಳಬೇಕಾಗಿದೆಯೇ ವಿನಾ ಗೊಡ್ಡು ತರ್ಕ ಮಾಡಬೇಕಾದುದಿಲ್ಲ. ನಮಗೆ ನವಯುಗದ ಕರೆಯು ದೇವನ ಸ್ವರೂಪಕ್ಕೆ ಮುಟ್ಟಿರೆಂದು ಹೇಳುತ್ತಿದೆ. ದೇವನೊಡನೆ ದೇವನಲ್ಲೆ ಇದ್ದು, ದೇವನ ಆನಂದದ ಝುರಿಯಾಗಿ ಆತನ ಕಾರ್ಯಕ್ಕಾಗಿ ಆತನ ಸಮರ್ಥ ಯಂತ್ರವಾಗಿರೆನ್ನುತ್ತಿದೆ. ಸರ್ವ ಅಶುಭಗಳಿಂದ ಶುದ್ಧರಾಗಿ ಆತನ ಸ್ಪರ್ಶದಿಂದ ಆತ್ಮದಲ್ಲಿ ರೂಪಾಂತರ ಹೊಂದಿ ವಿದ್ಯುದ್ಯಂತ್ರದ ಮೂಲ ಸಂಚಯದಂತೆ ಮಾನವ ಕೋಟಿಯಲ್ಲಿ ಸರ್ವ ದಿಕ್ಕಿಗೆ ದೈವೀ ವಿದ್ಯುತ್ತನ್ನು ಹರಡಿಸುವ ಮಹಾಕಾರ್ಯವನ್ನು ಜಗತ್ತಿನಲ್ಲಿ ಮಾಡುವವರಾಗಿರೆಂದು ನಮಗೆ ಹೇಳುತ್ತಿದೆ. ನಮ್ಮಲ್ಲಿ ಇಂಥವನೊಬ್ಬನು ಎಲ್ಲಿಯಾದರೂ ನಿಂತರೆ ಆತನ ಸುತ್ತುಮುತ್ತಿನ ಶತಶತ ವ್ಯಕ್ತಿಗಳು ದೇವನ ಪ್ರಕಾಶದಿಂದಲೂ ಶಕ್ತಿಯಿಂದಲೂ ತುಂಬಿದವರಾಗಿ, ದೇವನನ್ನೇ ಹೊಂದಿದವರಾಗಿ ಮಹಾನಂದವನ್ನು ಪಡೆಯಬೇಕೆಂದು ಹೇಳುತ್ತಿದೆ. ಗುಡಿ-ಗುಂಡಾರಗಳೂ, ಪುರಾಣ-ಪುಸ್ತಕಗಳೂ, ಕ್ರಿಯಾ-ಕರ್ಮಗಳೂ, ವಿವಿಧ ತತ್ವಜ್ಞಾನಗಳೂ

ಮಾನವ ಕೋಟಿಯನ್ನು ಸಂರಕ್ಷಿಸುವದಕ್ಕೆ ಕೈಲಾಗದವುಗಳಾಗಿ ಸೋತು ಹೋದವು. ಅವು ಬುದ್ಧಿ ಬಲದ ಮೇಲೆ ನಿಂತುಕೊಂಡು ಆಚಾರ, ಶುದ್ಧಿ, ದರ್ಶನ ಇವುಗಳಿಗೆ ಮಹತ್ವ ಕೊಟ್ಟು ಕಾರ್ಯವನ್ನು ಸಾಧಿಸುವದಕ್ಕೆ ಪ್ರಯತ್ನಿಸಿದವು. ಆದರೆ ಇವು ಅತ್ಯಂತ ಮಹತ್ವದ ಒಂದು ಮಾತನ್ನು ಸಂಪೂರ್ಣವಾಗಿ ಅಲಕ್ಷಿಸಿ ಬಿಟ್ಟವು. ಆತ್ಮದ ಶುದ್ಧಿ, ಪರಿಪೂರ್ಣತೆ ಮತ್ತು ಶಕ್ತಿ ಇವುಗಳನ್ನು ಲೆಕ್ಕಿಸಲಿಲ್ಲ. ನಾವೀಗ ಕ್ರಿಸ್ತನು ಹೇಳಿದ ಮಾನವಕೋಟಿಯ ಪರಿಪೂರ್ಣತೆ ಮತ್ತು ಶುದ್ಧತೆಗಳೂ, ಮಹಮ್ಮದನು ಹೇಳಿದ ಸಮರ್ಪಣ ಮತ್ತು ಸಖ್ಯವೂ, ಚೈತನ್ಯನು ಸಾರಿದ ಮಾನವನೊಳಗಿನ ದೇವತ್ವದ ಸಂಪೂರ್ಣ ಆನಂದ ಮತ್ತು ಪ್ರೇಮವೂ, ರಾಮಕೃಷ್ಣರು ಹೇಳಿದ ಸರ್ವಧರ್ಮಗಳ ಸಮನ್ವಯ ಮತ್ತು ಮಾನವನೊಳಗಿನ ದೈವೀ ತೇಜವೂ ಈ ಎಲ್ಲ ಪ್ರವಾಹಗಳು ಯಾವ ಮಹಾನದಿಯಲ್ಲಿ ಏಕೀಕೃತವಾಗುವವೋ ಆ ದಿವ್ಯ ಗಂಗೆಗೆ ಮುಟ್ಟಿ, ಅವಳನ್ನು ಭೌತಿಕವಾದದ ಸತ್ತು ಹೋದ ಮಾನವಕೋಟಿಯ ಮೇಲೆ- ಭಗೀರಥನು ತನ್ನ ಪೂರ್ವ ಪಿತೃಗಳ ಸ್ಮಶಾನ ಭಸ್ಮದ ಮೇಲೆ ಹರಿಸಿದಂತೆ-ಹರಿಸಬೇಕಾಗಿದೆ. ಆಗ ಮಾನವಕೋಟಿಯೊಳಗಿನ ಆತ್ಮದ ಪುನರುಜ್ಜೀವನವಾಗಿ ಭೂಮಂಡಲದ ಮೇಲೆ ಸತ್ಯಯುಗವು ಮರಳಿ ಬರುವದು. ಆ ದೇವಲೀಲೆಯ ಪರಮಾವಧಿ ಉದ್ದೇಶವು ಇಷ್ಟೇ ಇದೆ, ಎಂತಲ್ಲ. ಯಾಕಂದರೆ ಮೇಲಿಂದ ಮೇಲೆ ಅವತಾರಗಳು ಬಂದು ಮಾನವಕೋಟಿಯನ್ನು ಮತ್ತಿಷ್ಟು ಹೆಚ್ಚಿನ ಮಾನವ್ಯಕ್ಕೆ ಮುಟ್ಟಿಸಿ ಬಲು ಬಲು ಹೆಚ್ಚಿನ ದೇವ ಸ್ಥಿತಿಯ ವರೆಗೆ ವಿಕಾಸಗೊಳಿಸಿ, ಭೂಮಂಡಲದ ಮೇಲೆ ಸ್ವರ್ಗವನ್ನು ಹೆಚ್ಚುಹೆಚ್ಚಿಗೆ ಇಳಿಸಿ, ಭೌತಿಕ ವಿಶ್ವವು ಸಂಪೂರ್ಣ ಸಚ್ಚಿದಾನಂದದಿಂದ ತುಂಬಿ ಹೋಗುವ ವರೆಗೂ ಕೆಲಸ ಮಾಡುತ್ತಲೇ ಬರುವುದರಲ್ಲಿ ಸಂದೇಹವೇನು? ಸಮಸ್ತ ಮಾನವಕೋಟಿಯಲ್ಲಿ ಆತ್ಮದ ಸಂಪೂರ್ಣ ಶಾಂತಿಯನ್ನೂ, ಆನಂದವನ್ನೂ, ಶುದ್ಧತೆಯನ್ನೂ, ಪರಿಪೂರ್ಣತೆಯನ್ನೂ ತರುವದಕ್ಕಾಗಿ ಜೀವಿಸುವವನ ಕಾರ್ಯವು ಅಲ್ಪಸ್ವಲ್ಪವೇ ಸಾಧಿಸಿದರೂ, ಅಥವಾ ಗೆದೆಯದೇನೇ ಹೋದರೂ ಕೂಡ ಅದು ಕೇವಲ ತನ್ನ ಅಥವಾ ತನ್ನ ಕೆಲವೇ ಜನರ ಮೋಕ್ಷಕ್ಕಾಗಿ ದುಡಿಯುವವನ ಸಮೃದ್ಧ ವಿಜಯ ಕಾರ್ಯಕ್ಕಿಂತ ಸರ್ವತೋಮುಖಿಯಾಗಿ ಶ್ರೇಷ್ಠವಾಗಿದೆ.

---

# ಇಷ್ಟಲಿಂಗೋಪದೇಶ.

(ಲೇಖಕ:—ಶರಣಸೇವಕ ಬಸವನ ಬಳಗ ಕೊಲ್ಲಾಪೂರ.)

---

(ಶ್ರೀ ಬಸವೇಶ್ವರನು ಚನ್ನಬಸವಣ್ಣನಿಗೆ ಇಷ್ಟಲಿಂಗ ಧಾರಣ ಮಾಡಿದನೆಂದು ಪುರಾಣಾದಿಗಳಿಂದ ತಿಳಿದುಬರುವದಷ್ಟೇ. ಆದರೆ ಇಷ್ಟಲಿಂಗ ಧಾರಣಮಾಡಿದಾಗ ಆ ಬಸವೇಶನು ಚನ್ನಬಸವೇಶನಿಗೆ ಯಾವ ಉಪದೇಶವನ್ನು ಮಾಡಿರಬಹುದೆಂದು ನಾನು ಆಲೋಚಿಸುತ್ತಿರುವಾಗ ನನ್ನ ಮನಸ್ಸಿನಲ್ಲಿ ಲಲಿತ ರಗಳೆಯ ರೂಪದಿಂದ ಕೆಲವು ವಿಚಾರಗಳು ಸ್ಫುರಿಸಿದವು. ಅವುಗಳನ್ನು ತನ್ನ ಬಾಂಧವರ ಅವಗಾಹನೆಗಾಗಿ ಇದರಡಿಯಲ್ಲಿ ಕೊಟ್ಟಿದ್ದೇನೆ.)

ಆಲಿಸೈ ಶ್ರೀ ಚೆನ್ನಬಸವೇಶ ನಾನಿನ್ನು ।
ಲೀಲೆಯಿಂದಿಷ್ಟ ಲಿಂಗದ ಕುರುಪನೆಸಗುವೆನು ॥
ನಿನ್ನದೇಹದ ಮೇಲೆ ಧರಿಸಿರ್ಪಲಿಂಗವನು ।
ಇನ್ನೆಂದಿಗೂ ಬಿಡದೆ ಪೂಜಿಸೈ ಮಗು ನೀನು ॥
ದೇಹವೆಂಬುದು ಶಿವನ ದೇಗುಲವು ನೋಡಯ್ಯ ।
ದೇಹದೊಳಗಣ ಜೀವ ಶಿವನೆಂದು ಕಾಣಯ್ಯಾ ॥
ಜೀವನೇ ಶಿವನಾಗಿ ಬಹಿರಂಗದೋಳ್ಬಂದು ।
ಆವಗಂ ತಾನಿಷ್ಟಲಿಂಗ ರೂಪದಿ ನಿಂದು ॥
ಕಾವನೈ ನಿನ್ನನ್ನು ಪ್ರೇಮದೃಷ್ಟಿಯನಿಟ್ಟು ।
ಭಾವದಿಂ ಶಿವಕಾರ್ಯಮಂ ಮಾಡು ಎದೆಗೊಟ್ಟು ॥
ಲಿಂಗ ಪೋದೊಡೆ ಪ್ರಾಣ ಹೋದಂತೆ ತಿಳಿಯಯ್ಯಾ ।
ಲಿಂಗ ಪ್ರಾಣಗಳೆರಡು ಒಂದೆಂದು ಕಾಣಯ್ಯ ॥
ಲಿಂಗ ಹೋಯಿತ್ತೆಂದು ಮರುಳ ಮನುಜರು ಜಗದಿ ।
ಹಿಂಗಿ ಬಿಡುವರು ತಮ್ಮ ಪ್ರಾಣಮಂ ತತ್‌ಕ್ಷಣದಿ ॥
ಆತ್ಮಘಾತಕಿಗಳ್ಗೆ ಶಿವನೆಂತು ಮೆಚ್ಚುವನು ।
ಆತ್ಮಾನುಭಾವದಿಂದರಿಯೆ ತಾ ಮೆಚ್ಚುವನು ॥

ಲಿಂಗ ಹೋದೊಡೆ ತನ್ನ ಪ್ರಾಣವೆಂತುಳಿಯುವವು ।
ಲಿಂಗ ಬಿದ್ದೊಡೆ ಭೂಮಿ ತಾನೆಂತು ತಾಳುವದು ॥

ಲಿಂಗ ತಾ ನಿನ್ನಂಗದಲ್ಲಿರಲಿಯನವರತ ।
ಭೃಂಗಕೀಟನ್ಯಾಯದಂದದೊಳ್ ನೀನಿರುತ ॥

ಲಿಂಗ ಸಂಗದಿ ಕೊನೆಗೆ ಲಿಂಗವೇ ನೀನಾಗಿ ।
ಮಂಗಲಾನಂದದಲಿ ಮೆರೆಯಯ್ಯ ಸುಖಿಯಾಗಿ ॥

ಲಿಂಗವೇಕಾಗ್ರತೆಯ ಚಿಹ್ನವೆಂದರಿ ಚೆನ್ನ ।
ಲಿಂಗದಿಂ ಶಿವಯೋಗ ವಶವಹುದು ತಾ ನಿನ್ನ ॥

ಲಿಂಗವೆಂಬುದು ನೀಲಮಣಿ ಕರಾಬ್ಜದ ಭೃಂಗ ॥
ಕಂಗಳಂ ನೆರೆ ಪೀರಿ ಹರ್ಷವೀವುದು ಸಂಗ ॥

ಅನಿಮಿಷಂ ಶಿವಲಿಂಗದೊಳ್ ದೃಷ್ಟಿಯನ್ನಿಟ್ಟು ।
ಅನವರತ ಸಾನಂದ ಶಿಖರಮಂ ನೀ ಮುಟ್ಟು ॥

ಪಾಪಿ ಕಂಗಳು ಚನ್ನಬಸವೇಶ ನಿನ್ನನ್ನು ।
ಪಾಪಕ್ಕೆ ತಾವೆಳಸಿ ಗಾಸಿಸವು ಮನವನ್ನು ॥

ಕಣ್ಣು ನನ್ನವುಯೆಂದು ನೆಚ್ಚಿ ನೀ ಕೆಡಬೇಡ ।
ಮಣ್ಣುಗೂಡಿಸಿ ನಿನ್ನ ಕಾಡುವವು ನೆರೆ ನೋಡು ॥

ಹೊನ್ನು ಹೆಣ್ಣುಗಳಿಂಗೆ ಮಣ್ಣಿಂಗೆ ಎಲೆ ಚನ್ನ ।
ಕಣ್ಣೆ ತಾ ಹೊಣೆಯೆಂಬುದಂ ಕಾಣೋ ನೀ ನಿನ್ನ ॥

ಕಣ್ಣಿಂಗೆ ಕಂಡ ಕಂಡುದ ತೋರದಂದದೊಳು ।
ಎನ್ನಯ್ಯ ಸುಜ್ಞಾನಿ ನಡೆ ನೀನು ಚಂದದೊಳು ॥

ಹೆಣ್ಣಿಂಗೆ ತನ್ನ ಪತಿಯೊಡನಾಟ ಬಹು ಚಂದ ।
ಕಣ್ಣಿಂಗೆ ಶಿವಲಿಂಗ ಕೂಟವೇ ಬಹು ಚಂದ ॥

ಕಣ್ಣೊಂದು ಪರಿಶುದ್ಧವಾಗಿರ್ದೊಡಲಿ ಚನ್ನ ।
ಇನ್ನೇತರಂಜಿಕೆಯು ಜಗದಲ್ಲಿ ನಿನಗಿನ್ನು ॥

ಕಣ್ಣಿಂಗೆ ಕಿವಿ ಮೂಗು ನಾಲಿಗೆಯು ಮೈದೊಗಲು ।
ಸಣ್ಣವಾಗಿಹವಯ್ಯ ಮನವು ತಾನಾದರೆಯು ॥

ಕಂಗಳ್ಗೆ ವಶವರ್ತಿಯಾಗಿಹುದು ಪ್ರುಪಿಯಲ್ಲ ।
ಕಂಗಳೇ ಸುಖದುಃಖ ಕಾರಣಂ ಸುಳ್ಳಲ್ಲ ॥

ನಿನ್ನ ಕಂಗಳು ತಪ್ಪಿ ನೋಡಿದರೆ ನೀ ಮಂಗ ।
ನಿನ್ನ ಕಂಗಳು ನೆಟ್ಟಗಿರ್ದೊಡೆಲೆ ನೀ ಸಂಗ ॥

ಮಂಗ ಮಾನವಮೊಹವಿ ತರವಲ್ಲ ನೋಡಯ್ಯ ।
ಲಿಂಗ ಶರಣರ ಸಂಗ ಬಹು ಲೇಸು ಕಾಣಯ್ಯ ॥

ಕಂಗಳ್ಗೆ ಲಿಂಗಯ್ಯ ಶೃಂಗಾರದಾಗರವು ।
ಲಿಂಗದೋಳ್ ಕಣ್ಣಿರಿಸೆ ಸಂತೋಷಸಾಗರವು ॥

ಭಂಗಗೆಟ್ಟಳಿ ಮನದಿ ಕೆಡಕ ನೋಡಲುಬೇಡ ।
ಲಿಂಗಬಿಟ್ಟನ್ಯಸಂಗದ ಸೌಖ್ಯವೇ ಬೇಡ ॥

ಲಿಂಗದೋಳ್ ಮನದೃಷ್ಟಿಯನ್ನಿಟ್ಟು ಭಕ್ತಿಯಲಿ ।
ಲಿಂಗವೇ ನೀನಾಗಿ ಮೆರೆಯಯ್ಯ ಧರಣಿಯಲಿ ।

ಇನ್ನೊರೆವೆನಾಲಿಸೈ ಶ್ರೀ ಚೆನ್ನಬಸವೇಶ ।
ಮುನ್ನ ಮಾಡಿದ ಪುಣ್ಯ ಕರ್ಮದಿಂ ಚೆನ್ನೇಶ ॥

ನಿನ್ನ ಕರಕಂಜದಲಿ ಪರಶಿವನ ಚಿತ್ಕಳೆಯು ।
ಸನ್ನುತಾತ್ಮಸುಲಿಂಗರೂಪದಿಂ ನೆಲೆಸಿಹುದು ॥

ನಿನ್ನಂತರಂಗ ರಸಗಟ್ಟಿ ಕಾಂತಿಯುಗೂಡಿ ।
ಚಿನ್ಮಯಾತ್ಮಕ ಲಿಂಗ ಬೆಳಗುತಿದೆ ನಲಿದಾಡಿ ॥

ಕಣ್ಣಿಟ್ಟು ನೋಡಿ ಮನವಿಟ್ಟು ಪೂಜೆಯ ಮಾಡಿ ।
ಅಣ್ಣಯ್ಯ ನೆರೆಗೂಡಿ ಸುಖಿಸು ಸಂತಸಗೂಡಿ ॥

ಪ್ರತಿನಿಮಿಷ ಕಂಬನಿಯ ಸುರಿಸುತ್ತ ಮುದದಿಂದ ।
ನುತಿಸುತ್ತ ಲಿಂಗಮೂರುತಿಯ ಹಂಬಲದಿಂದ ॥

ಲಿಂಗ ಸೋಂಕಿದ ತನುವು ಪುಲಕದಿಂದುಬ್ಬಿರಲಿ ।
ಲಿಂಗಮಂ ನೆನೆವ ಮನ ಸಂಗೀತಗೊಂಡಿರಲಿ ॥

ಲಿಂಗ ನಂಬಿದ ಭಾವ ತಲ್ಲೀನವಾಗಿರಲಿ ।
ಲಿಂಗದಾ ಕಳೆ ನಿನ್ನ ಹೃದಯಮಂ ಬೆಳಗಿರಲಿ ॥

ಲಿಂಗಗೀತಿಯು ಸುರಿದು ನಿನ್ನ ರಸನೆಯು ಸುಖಿಸಿ ।
ಲಿಂಗಶ್ರವಣದಿ ನಿನ್ನ ಕರ್ಣವುಂ ಸಂತೈಸಿ ॥

ಲಿಂಗಾರ್ಪಿತದ ಗಂಧದಿಂ ಘ್ರಾಣವುಂ ತಣಿಸಿ ।
ಲಿಂಗಪ್ರಸಾದವನ್ನಂಗಕ್ಕೆಯುಣಬಡಿಸಿ ॥

ಲಿಂಗಸೂತ್ರವ ಜೀವರಾಟೆಯಿಂ ನೀ ತೆಗೆದು ।
ಲಿಂಗಚಿತ್ರವ ಹೃದಯಭಿತ್ತಿಯೊಳ್ ನೀ ಬರೆದು ॥

ಲಿಂಗಮೂರುತಿ ಚೆನ್ನಬಸವೇಶ ನಲಿಯುಯ್ಯ ।
ಮಂಗಲಾತ್ಮಕ ಲಿಂಗದಲ್ಲಿ ನೀ ಬೆರೆಯುಯ್ಯ ॥

ಮನ್ಮಥಲಿಂಗಯ್ಯ ಎನ್ನ ಸಲುಹೈ ತಂದೆ ।
ನಿನ್ನ ಪಾದಂಗಳ್ಗೆ ಪೊಡಮಡುವೆ ನಾ ತಂದೆ ॥

ನಾ ನಿನ್ನ ಬಾಲಕನು ನೀನೆನ್ನ ಪಾಲಕನು ।
ನಾನು ಮರೆಹೊಕ್ಕಿಹೆನು ನೀನಾಗು ರಕ್ಷಕನು ॥

ತಾಯಿತಂದೆಯು ನೀನೆ ಬಂಧುಬಳಗವು ನೀನೆ ।
ಮಾಯಮುರುಗುಗಳಿಂದ ಕಾವ ಶಂಕರ ನೀನೆ ॥

ಎನಗಾರು ಗತಿಯಿಲ್ಲ ನಿನಗೆ ಶರಣಾಗಿರುವೆ ।
ತನಯನಂ ಕಾಪಾಡು ತಂದೆ ನೀನಾಗಿರುವೆ ॥

ಎಂದೆಂದು ಮನವುಕ್ಕಿ ಬೇಡಿಕೊಳ್ಳೈ ಚೆನ್ನ ।
ಚಂದದಿಂ ಅಂಗಯ್ಯ ರಕ್ಷಿಸನು ತಾ ನಿನ್ನ ॥

ಲಿಂಗದೊಳ್ ನೆನವಾಗಿ ಲಿಂಗದೊಳ್ ಮನವಾಗಿ ।
ಲಿಂಗದೊಳ್ ನಲಿದಾಡಿ ಲಿಂಗವೇ ನೀನಾಗಿ ॥

ಸಿಂಗರದಿ ಮೆರೆಯುಯ್ಯ ಶ್ರೀ ಚೆನ್ನಬಸವಯ್ಯ ।
ಲಿಂಗಭಕ್ತಿಯುಗಿಂತ ಮಿಗಿಲಿಲ್ಲ ಕಾಣಯ್ಯ ॥

ಮನುಜಂಗೆ ಜಡ ಸೂಕ್ಷ್ಮ ಕಾರಣಂಗಳುಯೆಂಬ ।
ತನುತ್ರಯಂಗಳ ಶಿವನು ಕೊಟ್ಟಿಹನು ನೆರೆ ನಂಬಿ ॥

ಜಡದೇಹದೊಳಿಷ್ಟಲಿಂಗವುಂ ಧರಿಸಿರ್ಪೆ ।
ಸಡಗರದಿ ನೀ ದಹಿಸು ತನುಗುಣಂಗಳ ನಿನ್ನ ॥

ಸತ್ಯಶರಣನೆ ಜಗಕೆ ಸನ್ಮಾರ್ಗವಂ ತೋರು।
ಮರ್ತ್ಯರ್ಗೆ ಇಷ್ಟಲಿಂಗದ ಮಹಿಮೆಯಂ ತೋರು॥
ಪಂಡಿತರು ಪಾಮರರು ಇಷ್ಟಲಿಂಗದ ಭಕುತಿ।
ಯಿಂದಃ ಸುಖಿಸಲಿ ಚೆನ್ನ ನಿನ್ನ ಸತ್ಕೃಪೆಯಿಂದ॥

---

# ಶ್ರೀ ಪ್ರಭುದೇವರ ಕಾಲ.

ಲೇಖಕ— ಬುದ್ಧಯ್ಯಾಸ್ವಾಮಿ ಪುರಾಣಿಕ.

---

## ೨ ನೆಯ ಪ್ರಕರಣ.

### ಶ್ರೀ ಪ್ರಭುದೇವರು ಶೇರದಾಳಕ್ಕೆ ಬಂದದ್ದು.

ಪರಮಪಾವನ ಚರಿತ್ರನೂ ಚಾರುತರ ಸನ್ಮೋಹನಾಂಗನೂ ಆದ ಶ್ರೀಮದನಾದಿ ಅಲ್ಲಮ ಪ್ರಭುದೇವರು ಕಲಿಯುಗದಲ್ಲಿ ತನ್ನ ಸಂಚಾರ ದಿಂದ ಈ ಕರ್ಮಭೂಮಿಯನ್ನು ಪಾವನಗೊಳಿಸಿ, ಕೆಲವು ಕಾಲದ ವರೆಗೆ ಕಲ್ಯಾಣ ನಗರದಲ್ಲಿ ವಾಸ ಮಾಡಿ ಶ್ರೀಬಸವೇಶ ಚನ್ನಬಸ ವೇಶ ಮೊದಲಾದ ಶಿವಶರಣರಿಗೆ ದರ್ಶನಾಶೀರ್ವಾದವನ್ನಿತ್ತು, ಗೋರಕ್ಷ, ಮುಕ್ತಾಯಿ, ಸಿದ್ಧರಾಮಾದಿಗಳಿಗೆ ಷಟ್ಸ್ಥಲ ಜ್ಞಾನೋಪದೇಶವನ್ನು ಮಾಡಿ, ವೀರಶೈವ ಧರ್ಮದ ಪ್ರಸಾರ ಮಾಡುವಗೋಸುಗವೆಂದು ಹಿಂದುಸ್ಥಾನದೊಳಗಿನ ಸಾಂಪ್ರತದ ಮುಂಬಯಿ, ಮದ್ರಾಸ ಇಲಾಖೆ ಗಳೊಳಗಿನ ಕರ್ನಾಟಕ, ನಿಜಾಮನ ರಾಜ್ಯ, ಮೈಸೂರ ಸಂಸ್ಥಾನ ಮತ್ತು ಮಹಾರಾಷ್ಟ್ರ ಮುಂತಾದ ಪ್ರಾಂತಗಳಲ್ಲಿ ೨೦೦೦೦ ಮಠಗಳನ್ನು ಸ್ಥಾಪಿಸಿ ಅವುಗಳ ವ್ಯವಸ್ಥೆಯ ಸಲುವಾಗಿ ಮಠಾಧಿಕಾರಿಗಳನ್ನು ನೇಮಿಸಿ, ಅನೇಕ ಪ್ರಮಥಗಣರೊಡನೆ ( ಅವರಲ್ಲಿ ನಿಡುಮಾಮಿಡಿಪಲ್ಲಿ ಕರಿಬಸವ ದೇಶ ಕೇಂದ್ರರು, ಆದಿಲಿಂಗೇಶ, ಚನ್ನಪ್ಪದೇವರು ಮತ್ತು ಆತನ ಇಬ್ಬರು ಗಂಡು ಮಕ್ಕಳು ಹಾಗು ಒಬ್ಬ ಹೆಣ್ಣು ಮಗಳು ಮುಖ್ಯವಾಗಿದ್ದರು. ) ಶೇರ ದಾಳಕ್ಕೆ ಬಂದನು. ಶ್ರೀಪ್ರಭುದೇವನು ದೇಶದ ಬೇರೆ ಬೇರೆ ಭಾಗ ಗಳಲ್ಲಿ ೨೦೦೦೦ ಮಠಗಳ ಸ್ಥಾಪನೆಯನ್ನು ಮಾಡಿದ ಸಂಗತಿಯು ಚಿತ್ರ ಕಲ್ಲದುರ್ಗದ ಶ್ರೀಮನ್ನಿರಂಜನ ಜಯದೇವ ಮುರುಘರಾಜೇಂದ್ರ ಮಹಾ

ಸ್ವಾಮಿಗಳು ಸಂಚಾರದಲ್ಲಿ ಇರುವಾಗ್ಗೆ ಇವರಿಗೆ ಕ್ರಿ. ಶ. ೧೯೧೨ ನೆಯ ದಿಶಂಬರ ತಿಂಗಳಲ್ಲಿ ಸಾತಾರೆಯ ಪ್ರಮುಖ ಬ್ರಾಹ್ಮಣರು, ಬ್ರಾಹ್ಮಣೇತರ ಹಿಂದುಗಳು ಹಾಗು ಮುಸಲ್ಮಾನ ನಾಗರಿಕರು ಕೊಟ್ಟ ಮಾನ ಪತ್ರದಲ್ಲಿ ಹೇಳಿದೆ.

ಶ್ರೀಪ್ರಭುದೇವನು ನಡೆಯುವಾಗ್ಗೆ ಆತನ ನೆರಳು ಭೂಮಿಯ ಮೇಲೆ ಬೀಳುತ್ತಿದ್ದಿಲ್ಲವೆಂದೂ ಆತನ ಹೆಜ್ಜೆಗಳು ಮೂಡುತ್ತಿದ್ದಿಲ್ಲವೆಂದೂ ಶ್ರೀಚಿಕ್ಕನಂಜಾಚಾರ್ಯನು ತನ್ನ ಗ್ರಂಥದಲ್ಲಿ ಆತನನ್ನು ಹೊಗಳಿದ್ದಾನೆ. ಇದು ಶ್ರೀಪ್ರಭುದೇವನು ಸಮಾಜೋದ್ಧಾರ ಕಾರ್ಯವನ್ನು ಅತಿ ತ್ವರೆಯಿಂದ ಮಾಡುತ್ತಿದ್ದುದರ ದ್ಯೋತಕವಾಗಿದೆ. ಪ್ರಭುದೇವನು ಮಾಡಿದ ಮಹತ್ಕೃತ್ಯಗಳ ಮೇಲಿಂದ ಆತನು ಭಕ್ತೋದ್ಧಾರದ ಕೆಲಸವನ್ನು ಅತಿಶಯ ಆತುರತೆಯಿಂದ ಮಾಡುತ್ತ ಸಂಚರಿಸುತ್ತಿದ್ದ ಬಗ್ಗೆ ವಾಚಕ ವೃಂದವು ಮನಗಾಣಬಹುದು.

ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೨ ನೆಯ ಪುಷ್ಪವಾದ ಸ್ತೋತ್ರ ಸಂಗ್ರಹದ ಅವತರಣಿಕೆಯಲ್ಲಿ ನಿರಂಜನ ವಂಶ ರತ್ನಾಕರ ನಾಮಕ ಗ್ರಂಥದೊಳಗಿನ ತೇರದಾಳದ ವಿಷಯುಕವಾದ ಕೆಲ ವಂಶವನ್ನು ಪ್ರಸಿದ್ಧ ಮಾಡಿದೆ. ಅದರಲ್ಲಿ " ಶಿವಾನುಭವ ಚರಂತಿಗೆ ಪಟ್ಟದ ಬಸವಪ್ರಭು ಸ್ವಾಮಿಗಳು ೭೨ ಬಿರುದುಗಳು ಮುಂತಾದ ಗಣ ಸಂದಣಿಯಿಂದ ಕೆಳದಿ ದೇಶ ಮುಂತಾದ ಸಕಲ ದೇಶಂಗಳಂ ಸಂಚರಿಸುತ್ತ ತಿರುಗಿ ಬಿದ್ದ ಭಕ್ತರಿಗೆ ಬಹಿಷ್ಕಾರವಂ ಕೊಡಿಸುತ್ತ ಮತ್ತವರು ಶರಣಾಗತರಾದಲ್ಲಿ ಅಪರಾಧಗಾಣಿಕೆಯುಂ ತಕ್ಕೊಳ್ಳುತ್ತ ಶಿವಭಕ್ತರು ಮುಂತಾದ ಗಣಂಗಳಿಗೆ ಸದಾಚಾರವಂ ನೆಲಿಗೊಳಿಸಿ ಷಟ್ಸ್ಥಲ ಜ್ಞಾನೋಪದೇಶವಂ ಮಾಡಿ ಮೋಕ್ಷ ಮಾರ್ಗವನೀವುತ್ತ ಅನೇಕ ಮಹಿಮೆಗಳಂ ತೋರಿ ಹಿರೆಹೂರ ಕಿರಿಹೂರಿಗೆ ಚಿತ್ತೈಸಿ ಅಲ್ಲಿ ತಮ್ಮ ಕುರುಹುಗಳಂ ಇಟ್ಟು ಅಲ್ಲಿಂದ ಹುಕ್ಕೇರಿ ನಾಡಿಗೆ ದಯಮಾಡಿಸಿ ಅಲ್ಲಿರುವ ಜೈನ ಮತಸ್ಥರಿಗೆ ಶಾಸ್ತ್ರ ಮುಖದಿಂ ಶಿವಮತವೇ ವಿಶೇಷವೆಂದು ಒಡಂಬಡಿಸಿ ಅವರುಗಳ ಭಕ್ತರಂ ಮಾಡಿಕೊಂಡು ಅಲ್ಲಿಂದ ಹನಗಂಡಿಯೆಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿರುವ ಜೈನ ಅರಸನಿಗೆ ಲಿಂಗಧಾರಣವಂ ಮಾಡಿಸಿ ಆ ಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳನ್ನು ಕರೆಯಿಸಿಕೊಂಡು ತಮ್ಮಯ ಶಿವಾನುಭವ

ಚರಂತಿಗೆಯನ್ನು ಆದಿಲಿಂಗೇಶನೆಂಬ ಗಣವರರಿಗೆ ಮಾಡಿ ಅವರಿಗೆ ತಮ್ಮಯ ೭೨ ಬಿರುದುಗಳು ಗಣಸಮೂಹವಂ ಕೊಟ್ಟು ಕಳುಹಿಸಿ ಅನಂತರ ಅಲ್ಲಿಯ ಭಕ್ತರ ಭಕ್ತಿಯೊಳು ಸ್ವಲ್ಪ ದಿವಸವಿರ್ದು ಆ ಬಳಿಕ ಅಲ್ಲಿಯ ದೇವ ಭಕ್ತರ ಕರೆಯಿಸಿಕೊಂಡು ಅವರಿಗೆ ತಾವು ಕಾಯ ಸಹಿತವಾಗಿ ಈ ಸ್ಥಳದಿ ನಿರ್ವಯಲಾಗುವೆವು. ನಾಳಿನ ಉದಯಕ್ಕೆ ನೀವು ಸರ್ವರೂ ಬಾಹುದು ಎಂದು ನಿರೂಪವಾಗಲು ಆ ಕೂಡಲೆ ಸಮಸ್ತರು ಸಾಷ್ಟಾಂಗವೆರಗಿ ಕಾಯ ಸಹಿತವಾಗಿ ನಾಳಿನ ಉದಯಕ್ಕೆ ಸಾಂಬಲೋಕಕ್ಕೆ ದಯಮಾಡಿಸಿದರೆ ತಮ್ಮಯ ಕುರುಹು ಏನಾದರೂ ಒಂದು ದಯಪಾಲಿಸಿದರೆ ಅದನ್ನು ನಾವು ಪೂಜಿಸಿಕೊಂಡು ನಮ್ಮ ವಂಶ ಪರಂಪರೆಯಾಗಿ ಕೃತಾರ್ಥರಾಗುವೆವು ಎಂದು ಬಿನ್ನೈಸಿಕೊಳ್ಳಲು ನಿರ್ವಯಲಾಗುವ ಸಮಯದಿ ತಮ್ಮಯ ಕಮಂಡಲವಾದ ಮಗಿಯನ್ನು ಪಾವುಗೆ ಬೆತ್ತವ ಸಹಿತವಾಗಿ ಕೊಟ್ಟು ಸಮಸ್ತರಿಗೆ ಆಶೀರ್ವಾದವಂ ಮಾಡಿ ಉರಿಕರ್ಪುರದಂತೆ ನಿರ್ವಯಲಾದರು. ಅದೇ ಸ್ಥಳದಿ ಮಠವಂ ಕಟ್ಟಿ ಶೂನ್ಯಪೀಠವೆಂಬ ಗದ್ದುಗೆಯ ನಿರ್ಮಿಸಿ ಅದರ ಮೇಲೆ ಮಗಿಯಂ ಬೆತ್ತ ಪಾವುಗೆಯಂ ನಿರಿಸಿ ಇವತ್ತಿಗೂ ಪೂಜಿಸುವರು. ಆ ಸ್ಥಳದಲ್ಲಿ ಇವತ್ತಿಗೂ ಅನೇಕ ಪೂಜೋತ್ಸಾಹಂಗಳು ನಡೆಯುವವು. ಇವರ ತೋರಗದ್ದುಗೆ ತೇರದಾಳದಲ್ಲಿರುತ್ತದೆ. ಆ ಮಠದಲ್ಲಿ ಪ್ರಭುಸ್ವಾಮಿಗಳವರ ಹೆಸರಿನಿಂದ ಮಗಿಯನ್ನಿಟ್ಟು ಪೂಜಿಸುವದರಿಂ ಮಗಿ ಪ್ರಭುವೆಂಬ ರೂಢನಾಮವಾಗಿದೆ. ಇದಕ್ಕೆ ಇವರ ಸ್ಥಲ ಪುರಾಣವೇ ಸಾಕ್ಷಿಯು" ಎಂದು ಹೇಳಿದೆ. ಈ ನಿರಂಜನ ವಂಶ ರತ್ನಾಕರವೆಂಬ ಗ್ರಂಥವು ಕ್ರಿ. ಶ. ೧೯೩೨, ಅಕ್ಟೋಬರ, ಶಿವಾನುಭವ ಸಂಪುಟ ೭, ಸಂಚಿಕೆ ೪ ನೆಯದರಲ್ಲಿ ಸಿಕ್ಕಷ್ಟು ಪ್ರಸಿದ್ಧವಾಗಿದೆ. ಈ ಗ್ರಂಥವು ಸಂಪೂರ್ಣವಾಗಿ ಪ್ರಮಾಣಕ್ಕೆ ಗ್ರಾಹ್ಯವಲ್ಲದಿದ್ದರೂ ಶ್ರೀಮದನಾದಿ ಅಲ್ಲಮಪ್ರಭುದೇವನು ತೇರದಾಳಕ್ಕೆ ಬಂದದ್ದು ನಿಜವೆಂದು ಮೇಲಿನ ಅವತರಣಿಕೆಯಿಂದ ಕಂಡು ಬರುತ್ತದೆ. ಕೇದೀಪ್ರಾಂತದಿಂದ ತೇರದಾಳದ ಕಡೆಗೆ ಪ್ರಭುದೇವನು ಯಾವ ಮಾರ್ಗವಾಗಿ ಬಂದನೆಂಬದು ನಡುಮಧ್ಯದಲ್ಲಿರುವ ಆತನ ಹೆಸರಿನ ಸ್ಥಾನಗಳ ಮೇಲಿಂದಲೇ ತಿಳಿಯುವಂತಿದೆ. ಅವುಗಳ ವಿವರಃ— (೧) ಕಾರವಾರ ಜಿಲ್ಹೆಯೊಳಗಿನ ಬನವಾಸಿಯೆಂಬ ಗ್ರಾಮದ ಕಿಲ್ಲೆಯ ಹೊರಗೆ ಪೇಟೆಗೆ ಹತ್ತಿ ಶ್ರೀ ಪ್ರಭುದೇವನದೊಂದು ಸ್ಥಾನವದೆ. ಅದಕ್ಕೆ ವಾರ್ಷಿಕ ಉತ್ಪನ್ನವದೆ. ಮಾಯೆಯನ್ನು ಗೆದ್ದವನು ಇವನೇ ಪ್ರಭುದೇವನೆಂದು ಆ ಸ್ಥಾನವನ್ನು ಕುರಿತು

ಜನರು ಹೇಳುವರು. (೨) ಮೈಸೂರ ಸಂಸ್ಥಾನದ ಶಿವಮೊಗ್ಗಾ ಜಿಲ್ಹೆಯೊಳಗಿನ ಶಿಕಾರಪೂರ ತಾಲೂಕಿನಲ್ಲಿ ಬಳ್ಳಿಗಾಂವಿಯೆಂಬ ಗ್ರಾಮದ ಕೆರೆಯ ದಂಡೆಯ ಮೇಲೆ ಅವನದೊಂದು ಸ್ಥಾನವದೆ. ಈ ಗ್ರಾಮವು ಇತಿಹಾಸ ಪ್ರಸಿದ್ಧವಿದ್ದು ಪುರಾಣಾದಿಗಳಲ್ಲಿ ಇದು ಶ್ರೀ ಪ್ರಭುದೇವನ ಜನ್ಮಸ್ಥಲವೆಂದು ವರ್ಣನೆಯದೆ. (೩) ಇದೇ ಶಿಕಾರಪೂರ ತಾಲೂಕಿನ ತೊಗರಸಿಯೆಂಬ ಗ್ರಾಮದಲ್ಲಿ ಪ್ರಭುವಿನದೊಂದು ಸ್ಥಾನವಿದ್ದು ಅದರ ವಿಷಯವಾಗಿ ಕೆಳಗಿನಂತೆ ಒಂದು ಕಥೆಯನ್ನು ಹೇಳುವರು. ಬನವಾಸಿಯಿಂದ ಶ್ರೀ ಮಧುಕೇಶ್ವರನ ಪೂಜಾದಿಗಳನ್ನು ಬಿಟ್ಟುಕೊಟ್ಟು ಕಾಮಾತುರಳಾಗಿ ಪ್ರಭುದೇವನ ಬೆನ್ನಟ್ಟಿ ಮಾಯಾ ದೇವಿಯು ಅಲ್ಲಿಯ ವರೆಗೆ ಬಂದಳು. ಆಗ್ಗೆ ಪ್ರಭುದೇವನು ಹೊರಳಿ "ಇನ್ನು ತೊಗಲಿನ ಮೇಲಿನ ನಿನ್ನ ಆಶೆಯು ಬಿಟ್ಟಿಲ್ಲವೋ" ಎಂದು ಮಾಯೆಗೆ ಕೇಳಿದನು. ಇದರಿಂದ ಆ ಊರಿಗೆ ತೊಗಲಾಶೆ (ತೊಗರಸಿ) ಎಂದು ಹೆಸರು ಬಂದಿರುವದು. (೪) ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ಪುಷ್ಪ ೧೧, ಪುಟ ೫ ಪದ ೧೪ನೆಯ ಕಡೆಯ ಚರಣದಲ್ಲಿ ಪ್ರಭುದೇವನು ಶ್ರೀಷ್ಮವಾದ ಹೊನ್ನತ್ತಿಯೊಳು ಮೆರೆದನೆಂದು ಹೇಳಿದೆ. ಈ ಸ್ಥಳವು ಧಾರವಾಡ ಜಿಲ್ಹಾ ರಾಣೆಬೆನ್ನೂರ ತಾಲೂಕಿನೊಳಗಿನ ದೇವರಹೊನ್ನತ್ತಿ ಇರಬಹುದು. (೫) ಮುಳಗುಂದವೆಂಬುವದು ೭೦೦೦ ವಸ್ತಿಯುಳ್ಳ ಒಂದು ಗ್ರಾಮವು ಗದಿಗಿನಿಂದ ೧೨ ಮೈಲಿನ ಮೇಲೆ ಅದೇ ತಾಲೂಕಿನಲ್ಲಿ ಇರ್ತುವದು. ಊರ ಹೊರಗೆ ಒಂದು ದೊಡ್ಡ ಕೆರೆಯು ಇದ್ದು ಅಲ್ಲಿಂದ ಅರ್ಧ ಮೈಲಿನ ಮೇಲೆ ಒಂದು ಹಳ್ಳವದೆ. ಅದರ ದಡದಲ್ಲಿ ವಿಸ್ತಾರವಾದ ಒಂದು ಹುಣಿಶಿ ಬನವದೆ. ಆ ಬನದ ಮಧ್ಯದಲ್ಲಿ ಶ್ರೀ ಪ್ರಭುದೇವನದೊಂದು ಮಠವದೆ. ಆ ಮಠದಲ್ಲಿ ಶ್ರೀಗಳವರ ಹೆಸರಿನಿಂದ ಒಂದು ಗದ್ದಿಗೆಯು ಇರುವದು. ವಿಜಾಪುರ ಬಾದಶಹರ ಕಾಲಕ್ಕೆ ಶಿರಹಟ್ಟಿಯ ಶ್ರೀ ಫಕೀರಸ್ವಾಮಿಗಳು ಈ ಮಠದ ಜೀರ್ಣೋದ್ಧಾರ ಮಾಡಿದರೆಂದು ಹೇಳುವರು. ಈ ಮಠಕ್ಕೆ ೭ ಎಕರೆಯ ಹಾಗು ೨೧ ಎಕರೆಯ ಎರಡು ಹೊಲಗಳು ಇನಾಮುವಾಗಿರುವವು. ೭ ಎಕರೆಯ ಹೊಲದಲ್ಲಿ ಶ್ರೀಗಳವರ ಮಠವದೆ. ದಿನಾಲು ಎರಡು ವೇಳೆ ಗದ್ದುಗೆಯ ಪೂಜೆಯಾಗುತ್ತದೆ. ಪೂಜಾರಿಗಳು ಜಂಗಮರಿರುವರು. ಮೂಲ ವತನದಾರ ಪೂಜಾರ ಮನೆತನವು ನಷ್ಟಂಶವಾಗಿ ಈಗ್ಗೆ ಅದರ ಉತ್ಪನ್ನವು ಮತ್ತು ಪೂಜೆಯು ವಾರಸದಾರ ಹಕ್ಕಿನಿಂದ ಮುಳಗುಂದದ ಸಿದ್ದಲಿಂಗಯ್ಯಾ ಷಡದಯ್ಯಾ ಹಿರೇಮಠ ಇವರ ಕಡೆಗೆ

ಬಂದಿದೆ. ಆದರ ಪೂಜೆಯನ್ನು ಆ ಹಿರೇಮಠದವರೇ ಮಾಡಿ ಅದರ ಯಾವತ್ತು ಉತ್ಪನ್ನವನ್ನು ಅವರೇ ಉಪಭೋಗಿಸುವರು. (೬) ಗದಗ ತಾಲೂಕಿನಲ್ಲಿ ಕಣವಿಯೆಂಬ ಗ್ರಾಮದೊಳಗೆ ಪ್ರಭುದೇವನ ಮಠವದೆ. ಇದು ಗಚ್ಚಿನ ಕಟ್ಟಡವಿರುವದು. ಈ ಮಠದ ಇನ್ನೆರಡು ಶಾಖೆಗಳು ಅದೇ ಗ್ರಾಮದಲ್ಲಿರುವವು. ಆ ಮೂರೂ ಮಠಗಳಲ್ಲಿರುವ ಗದ್ದುಗೆಗಳ ಪೂಜೆಯನ್ನು ಜಂಗಮರೇ ಮಾಡುವರು. ಈ ಬಗ್ಗೆ ಇವರಿಗೆ ಇನಾಮು ಜಮೀನುಗಳೇನೂ ಇಲ್ಲ. ಚೈತ್ರ ಶುದ್ಧ ನವಮಿಯ ದಿವಸ ಜಾತ್ರೆಯಾಗುತ್ತಿದ್ದು ರಥೋತ್ಸವವಾಗುತ್ತದೆ. (೭) ಕಣವಿಯಿಂದ ೮ ಹಾಗು ಗದಗಿನಿಂದ ೮ ಮೈಲುಗಳ ಮೇಲೆ ೬೦೦೦ ಜನವಸ್ತಿಯುಳ್ಳ ಕುರ್ತಕೋಟಿಯೆಂಬದೊಂದು ಗ್ರಾಮವದೆ. ಆ ಊರ ಹೊರಗಿನ ಒಂದು ಅಂಗಡಿಯ ಬೇವಿನ ಕಂಬಕ್ಕೆ ಆನಿಸಿ ಪ್ರಭುದೇವನು ದಿನಂಪ್ರತಿ ಬಂದು ಕೂಡ್ರುತ್ತಿದ್ದನೆಂದೂ ಮತ್ತು ಕೆಲವು ದಿವಸಗಳ ಮೇಲೆ ಆ ಕಂಬವು ಚಿಗಿತದ್ದರಿಂದಲೂ ಊರಲ್ಲಿ ಬೊಬ್ಬಾಟವಾಗಿ ಪ್ರಭುದೇವನು ಅದೃಶ್ಯನಾದನೆಂದು ಹೇಳುವರು. ಅದರ ಕೆಳಗೆ ಒಂದು ಗದ್ದುಗೆಯನ್ನು ಸ್ಥಾಪಿಸಿ ಅದರ ಹಾಗೂ ಆ ಗಿಡದ ಪೂಜೆಯನ್ನು ಈವತ್ತಿಗೂ ಜಂಗಮರು ಮಾಡುತ್ತಿರುವರು. ಆ ಗಿಡದ ಸುತ್ತಲು ಮಠವನ್ನು ಕಟ್ಟಿರುವರು. ಈಗ್ಗೆ ಆ ಗಿಡದ ಸುತ್ತಳತೆಯು ೧೬ ಅಡಿಯದೆ. ಅದೇ ಗ್ರಾಮದ ವಿರೂಪಾಕ್ಷಲಿಂಗನ ಗುಡಿಯೊಳಗೊಂದು, ಹಾಗು ಅಲ್ಲಿಯ ಗೌಡರ ಇನಾಮು ಭೂಮಿಯೊಳಗೊಂದು ಹೀಗೆ ಆ ಪ್ರಭುದೇವರ ಮಠದ ಎರಡು ಶಾಖೆಗಳಿರುವವು. ಈ ಯಾವತ್ತು ಮಠಗಳಿಗೆ ಇನಾಮು ಭೂಮಿಗಳಿಲ್ಲವು. ಪೂಜಕರು ಜಂಗಮರಿರುವರು. ವೈಶಾಖ ಮಾಸದೊಳಗಿನ ಮೊದಲನೆಯ ಸೋಮವಾರ ರಥೋತ್ಸವವಾಗುತ್ತಿದ್ದು ಜಾತ್ರೆಯು ಬಹು ವಿಜೃಂಭಣೆಯಿಂದ ನೆರವೇರುತ್ತದೆ. ೧೯ ನೇ ಶತಮಾನದ ಪ್ರಾರಂಭಕ್ಕೆ ಕಿತ್ತೂರ ಸಂಸ್ಥಾನದ ಶ್ರೀಮಲಸರ್ಜನ ಆಳಿಕೆಯಲ್ಲಿ ಮುಳಗುಂದದ ಸೆಟ್ಟರ ಚನ್ನಬಸವಪ್ಪನೆಂಬವರು ಆ ಸಂಸ್ಥಾನದ ಆಸ್ಥಾನ ಪಂಡಿತರಾಗಿದ್ದರು. ಅವರು ಒಂದು ಮಂಗಳಾರತಿಯ ಪದ್ಯವನ್ನು ಮಾಡಿರುವರು. ಅದು ಕೆಳಗಿನಂತೆ:—

ಆರತಿಯ ಪ್ರಭುವರಗೆ ಬೆಳಗಿರಿ। ತೇರದಾಳ ನಿವಾಸಗೆ ॥ಪಲ್ಲ॥
ಪಾವನಾತ್ಮಕ ದೇವ ಶಂಕರ। ಭೂವಲಯವನು ಸಲುಹಲೂ। ಶ್ರೀ
ವಿರಕ್ತಿಯನಾವರಿಸಿದ। ನಿರಾವಲಂಬಗೆ ನಿತ್ಯಗೆ ॥೧॥ ಕರ ಕಮಂಡಲು

ವೆರಸಿ ಕಾಮಿತ। ಸಲಿಸೆ ಕೆರೆಯೊಳ್ ಮಗಿಯೊಳು। ಚರಸಿ ಭೃಂಗಕೆ ಧರಿಸಿ ಅಲ್ಲಿಂ। ಸರಿದ ಸದ್ಗುರುರಾಯಗೆ ॥೨॥ ಕುರುತಕೋಟಿಯೊಳಿರುವ ವಿಪಣಿಯ। ಪರಿಯ ಬೇವಿನ ಕಂಬವ। ಶರಣ ಜಲದಿಂ ತರುವೆನಿಸಿ ಸ। ದ್ವರವ ಪಾಲಿಸಿದಾತಗೆ ॥೩॥ ಹೊಂಡದೆಡೆಯೊಳು ತುಂಡ್ರಿಸಿದ ವೇ। ತಂಡ ರಿಪು ಮುನಿಪುರದೊಳು। ಕಂಡುರುಂಡವ ಮುಂಡಗೂಡಿಸಿ। ಮಂಡಿ ಸಿದ ಮಹಿಮಾಬ್ಧಿಗೆ ॥೪॥ ಸಾಸಿರಾನನ ವೇಷದಿಂದ ಫ। ಣೀಶ ವರ್ಣಿಪ ಮಹಿಮೆಯ। ಶ್ರೀ ಸಮರ್ಥ ಮಹೇಶಶ್ರಿತ ಜನ। ಪೋಷಶುಭ ಸಿದ್ಧೇ ಶಗೆ ॥೫॥ ಈ ಆರತಿಯ ಪದ್ಯದಲ್ಲಿ ಕಣಪಿ, ಮುಳಗುಂದ, ಕುರ್ತಕೋಟಿ, ತೇರದಾಳ ಮುಂತಾದ ಸ್ಥಲಗಳ ವರ್ಣನೆಯಿದ್ದು ಈ ಯಾವತ್ತೂ ಸ್ಥಾನದೊಳಗಿನ ಶ್ರೀ ಪ್ರಭುದೇವರ ಮಠಗಳು ಶ್ರೀ ಮದನಾದಿ ಅಲ್ಲಮ ಪ್ರಭುವಿನವೆಂದು ಹೇಳಿ ಆತನಿಗೆ ಮಗಿಪ್ರಭುವೆಂಬ ರೂಢನಾಮವಿದ್ದದ್ದು ಹೇಳಿದೆ. ಇದರಲ್ಲಿ ಮುಳುಗುಂದಕ್ಕೆ ಮುನಿಪುರವೆಂದು ಹೇಳಿದೆ. (೮) ಹುಬ್ಬಳ್ಳಿ ತಾಲೂಕಿನಲ್ಲಿ ಅಲ್ಲಿಂದ ೮—೧೦ ಮೈಲುಗಳ ಅಂತರದ ಮೇಲೆ ಹಿರೇಸೂರು (ಹೆಬಸೂರು) ಮತ್ತು ಕಿರೆಸೂರು ಎಂಬ ಎರಡು ಸಣ್ಣ ಹಳ್ಳಿಗಳವೆ. ಅಲ್ಲಿ ಶ್ರೀಗಳ ಆಗಮವು ಆದದ್ದು ಕಂಡುಬರುತ್ತದೆ. ಕಿರೇಸೂರದಲ್ಲಿ ಊರಹೊರಗೆ ಪ್ರಭುಸ್ವಾಮಿಗಳ ಒಂದು ಮಠವಿದೆ. ಆ ಮಠಕ್ಕೆ ಇನಾಮು ಭೂಮಿಯೂ ಇರುವದು. ಪ್ರಭುವಿನ ಪೂಜೆಯನ್ನು ಆ ಮಠದ ಜಂಗಮರೇ ಮಾಡುವರು. ಅವರ ಮನೆತನಗಳು ಎಂಟು ಇರುವವು. ವೈಶಾಖ ಶುದ್ಧ ಪೌರ್ಣಿಮೆಯ ದಿನ ಜಾತ್ರೆಯಾಗುತ್ತಿದ್ದು ಸಾಯಂಕಾಲಕ್ಕೆ ರಥೋತ್ಸವವಾಗುತ್ತದೆ. (೯) ಬೆಳಗಾಂವ ಜಿಲ್ಹೆಯೊ ಳಗಿನ ಸವದತ್ತಿಯಲ್ಲಿ 'ಪ್ರಭೂನವರ' ಈ ಉಪನಾಮದ ಒಬ್ಬ ಪಂಚ ಮನ ಮನೆಯಲ್ಲಿ ಪ್ರಭುದೇವನ ಪುರಾತನ ಹಾಗು ಜಾಗ್ರತ ಸ್ಥಾನವದೆ. ಆ ಊರಲ್ಲಿ ಪ್ರಭೂನವರ ಳ, ಮಗ್ಗೆಣ್ಣವರ ಳ, ಮಣಗೂಳಿಯವರು, ಸಾವನೂರವರ ಳ, ಮತ್ತು ಗಾಣಿಗರ ಳ, ಹೀಗೆ ಒಟ್ಟು ೨೪ ಮನೆತನ ಗಳಲ್ಲಿ ಶ್ರೀ ಪ್ರಭುಸ್ವಾಮಿಯು ಕುಲಸ್ವಾಮಿಯಾಗಿರುವನು. ಸವದತ್ತಿಯ ಶ್ರೀ ಎಲ್ಲಮ್ಮನ ಗುಡಿಯೊಳಗಿನ ಶಿಲಾಶಾಸನದಲ್ಲಿ ಆಕೆಗೆ ಮಹಾಮಾ ಯೆಯೆಂದು ಅಂದಿರುವರು. ಇದರ ಮೇಲಿಂದ ಮಾಯಾಕೋಳಾಹಳ ನಾದ ಪ್ರಭುದೇವನು ಸವದತ್ತಿಗೆ ಬಂದದ್ದು ನಿಜವೆಂದು ತೋರುತ್ತದೆ. (೧೦) ಬೆಳಗಾಂವ ಜಿಲ್ಹಾ ಖಾನಾಪೂರ ತಾಲೂಕದೊಳಗಿನ ಹಲಸಿ ಹತ್ತರಿರುವ ಬೀಡಿಗುಂಡ್ಯಾನಹಟ್ಟಿ ಮತ್ತು ಗೋಶ್ಯಾನಹಟ್ಟಿ ಮುಂತಾದ

ಗ್ರಾಮಗಳ ಬ್ರಾಹ್ಮಣ ಜಾತಿಯ ವತನದಾರ ಕುಲಕರ್ಣಿಯವರ ಮನೆಗಳಲ್ಲಿ ಪ್ರಭುಸ್ವಾಮಿಯು ಕುಲಸ್ವಾಮಿಯಾಗಿ ಪೂಜಿಸಲ್ಪಡುತ್ತಿರುವನು. (೧೧) ಬೆಳಗಾವಿಯಿಂದ ೫ ಮೈಲುಗಳ ಅಂತರದ ಮೇಲೆ ಇರುವ ಕ್ಯಾದನೂರ ಗ್ರಾಮದ ಸೀಮೆಯಲ್ಲಿ "ಶ್ರೀ ಪ್ರಭುದೇವರಗುಡ್ಡ" ಎಂಬುದೊಂದು ಸಣ್ಣ ಗುಡ್ಡವಿರುವದು. ಆದರ ತುದಿಯ ಮೇಲೆ ಪ್ರಭುದೇವರ ಸ್ಥಾನವಿರುವದು. (೧೨) ಸಾಂಗಲೀ ಸಂಸ್ಥಾನದ ಶಹಪೂರ ತಾಲೂಕದೊಳಗಿನ ಮಾರಿಹಾಳವೆಂಬ ಗ್ರಾಮದ ಹಿರೇಮಠದಲ್ಲಿ ಒಂದು ಪ್ರಭುದೇವರ ಸ್ಥಾನವಿರುವದು. ಆದರ ಪೂಜೆಯನ್ನು ಅದೇ ಹಿರೇಮಠದವರೇ ಮಾಡುತ್ತಿದ್ದು ಅದಕ್ಕೆ ಇರುವ ಇನಾಮು ಭೂಮಿಯ ಉತ್ಪನ್ನವನ್ನೂ ಇತರ ಹಕ್ಕಬಾಬಗಳನ್ನೂ ಅವರೇ ಉಪಭೋಗ ಮಾಡುತ್ತಿರುವರು. (೧೩) ಹುಕ್ಕೇರಿ ತಾಲೂಕದಲ್ಲಿಯ ಉಳ್ಳೇಗಡ್ಡಿ ಖಾನಾಪೂರದಲ್ಲಿ ಒಂದು ಪ್ರಭುದೇವರ ಸ್ಥಾನವಿರುವದು. (೧೪) ಅದೇ ತಾಲೂಕದಲ್ಲಿ ಘಟಪ್ರಭೆಯ ದಂಡೆಯ ಮೇಲೆ ಬೆಣವಾಡವೆಂಬ ಗ್ರಾಮದ ಹಿರೇಮಠದಲ್ಲಿ ಪ್ರಭುದೇವರ ಸ್ಥಾನವಿದ್ದು ಅದರ ಇನಾಮು ಭೂಮಿಗಳ ಉತ್ಪನ್ನವನ್ನು ಉಪಭೋಗ ಮಾಡಿಕೊಂಡು ಅದರ ಪೂಜೆಯನ್ನು ಅದೇ ಹಿರೇಮಠದವರೇ ಮಾಡುತ್ತಿರುವರು. (೧೫) ಅದೇ ತಾಲೂಕದೊಳಗಿನ ಶಿಡ್ಲಿಹಾಳವೆಂಬ ಗ್ರಾಮದಲ್ಲಿ ಘಟಪ್ರಭಾನದಿಯ ದಂಡೆಯ ಮೇಲೆ ಒಂದು ಪ್ರಭುದೇವರ ಸ್ಥಾನವಿದ್ದು ಅದರ ಪೂಜಕರು ಜಂಗಮರಿರುವರು. ಆದಕ್ಕಾದರೂ ಅನೇಕ ಇನಾಮು ಭೂಮಿಗಳಿರುವವು. (೧೬) ಚಿಕ್ಕೋಡಿ ತಾಲೂಕದೊಳಗಿನ ಚಿಂಚಣಿಯೆಂಬ ಊರಲ್ಲಿ ಒಂದು ಗುಹೆಯಲ್ಲಿ ಒಂದು ಪ್ರಭುದೇವರ ಸ್ಥಾನವಿದ್ದು ಮೇಲೆ ವಿಶಾಲವಾದ ಮಠವಿರುವದು. ಆದರ ಇನಾಮು ಭೂಮಿಗಳ ಉಪಭೋಗವನ್ನು ಮಾಡಿಕೊಂಡು ಅದರ ನಿತ್ಯ ತ್ರಿಕಾಲ ಪೂಜೆಯನ್ನು ಒಬ್ಬ ಬ್ರಹ್ಮಚಾರಿ ಜಂಗಮನು ಮಾಡುತ್ತಿರುವನು. (೧೭) ಚಿಕ್ಕೋಡಿಯ ನೈಋತ್ಯಕ್ಕೆ ಅದಕ್ಕೆ ಹೊಂದಿ "ಪ್ರಭುವಿನಹಟ್ಟಿ" ಎಂಬದೊಂದು ಹಳ್ಳಿ ಇದ್ದು ಅಲ್ಲಿಯೂ ಒಂದು ಪ್ರಭುದೇವರ ಸ್ಥಾನವದೆ. (೧೮) ಚಿಕ್ಕೋಡಿಯಲ್ಲಿ ಒಂದು ಪ್ರಭುದೇವರ ಸ್ಥಾನವಿದ್ದು ಅದರ ಪೂಜೆಯನ್ನು ಜಂಗಮರು ಮಾಡುತ್ತಿದ್ದು ಆದರ ಇನಾಮು ಭೂಮಿಗಳ ಉಪಭೋಗವನ್ನು ಅವರೇ ಮಾಡುತ್ತಾರೆ. ಚಿಕ್ಕೋಡಿಯಲ್ಲಿ ಪ್ರಭುದೇವನೇ ಗ್ರಾಮದೈವತವೆಂದು ಎಣಿಸಲ್ಪಡುವನು. (೧೯) ಅಥಣಿ ತಾಲೂಕದಲ್ಲಿಯ ಮಂಗಸೂಳಿಯೆಂಬ ಗ್ರಾಮದಲ್ಲಿ ಧೂಳಶೆಟ್ಟಿಯೆಂಬವರ ಮನೆಗೆ

ಪ್ರಭುದೇವರು ಒಂದು ಕಟ್ಟಿಗೆಯ ಮಂಚದ ಮೇಲೆ ಕೆಲವು ಕಾಲ ಮುಹೂರ್ತ ಮಾಡಿದ್ದನೆಂದು ಆಸ್ಥಾನವನ್ನು ಇಹೊತ್ತಿಗೂ ಪೂಜಿಸು ತ್ತಾರೆ. (೨೦) ಅದೇ ತಾಲೂಕದೊಳಗಿನ ಸಪ್ತಸಾಗರವೆಂಬ ಗ್ರಾಮದ ಹತ್ತರ ಕೃಷ್ಣಾನದಿಯಲ್ಲಿ ಒಂದು ಮಡುವು ಅದೆ. ಅದಕ್ಕೆ ಪ್ರಭುದೇವರ ಮಡವೆಂದು ಈ ಹೊತ್ತಿಗೂ ಜನರು ಅನ್ನುತ್ತಿರುವರು. ಆ ಮಡುವಿ ನಲ್ಲಿ ಪ್ರಭುದೇವನು ಸ್ನಾನಮಾಡಿದನೆಂದು ಆಖ್ಯಾಯಿಕೆಯು ಇರುವದು. ಅದೇ ನದಿಯ ದಂಡೆಯ ಮೇಲೆ ಒಂದು ಗಡ್ಡೆಯು ಇದ್ದು ಅದರಲ್ಲಿ ಪ್ರಭುದೇವರ ಸ್ಥಾನವದೆ. ಆ ಸ್ಥಳದಲ್ಲಿ ಸ್ನಾನೋತ್ತರ ಶ್ರೀ ಪ್ರಭುದೇ ವನು ಶಿವಾರ್ಚನೆಯನ್ನು ಮಾಡಿಕೊಂಡನೆಂದು ಅನ್ನುವರು. ಆ ಮಡು ವಿನಲ್ಲಿ ಶ್ರೀ ಪ್ರಭುದೇವನು ಸ್ನಾನಮಾಡಿಕೊಂಡಿರುವದರಿಂದ ಅದಕ್ಕೆ ಈ ಹೆಸರು ಬಂದದ್ದು ಕಂಡುಬರುತ್ತದೆ. (೨೧) ಅದೇ ತಾಲೂಕದೊಳಗಿನ ಶಂಕರಹಟ್ಟಿ ಎಂಬ ಗ್ರಾಮದೊಳಗೆ ಒಂದು ಪ್ರಭುದೇವರ ಸ್ಥಾನವದೆ. (೨೨) ಅದೇ ತಾಲೂಕಿನಲ್ಲಿ ಸವದಿ ಗ್ರಾಮದೊಳಗೆ ಗುಹೇಶ್ವರನ ಗವಿ ಯೆಂಬದೊಂದು ಪ್ರಭುದೇವನ ಸ್ಥಾನವದೆ. ಪ್ರಭುವು ಸಿದ್ಧಪುರುಷನಾದ ದರಿಂದ ಅದಕ್ಕೆ ಸಿದ್ಧನ ಗವಿಯೆಂತಲೂ ಅನ್ನುತ್ತಾರೆ. (೨೩) ಜಮುಖಂಡಿ ಸಂಸ್ಥಾನದ ಸೀಮೆಯೊಳಗಿನ ಕೃಷ್ಣಾನದಿಯ ದಂಡೆಯ ಮೇಲೆ ಜಂಬಿಗಿ ಎಂಬ ಗ್ರಾಮದಲ್ಲಿ "ಗುಹೇಶ್ವರನ ಗುಡ್ಡ" ಎಂಬದೊಂದು ಪ್ರಭುವಿನ ಸ್ಥಾನವದೆ. ಅಲ್ಲಿ ಗಿಡದ ಗುಂಪು ವಿಶೇಷವಾಗಿದ್ದು ಕೃಷ್ಣಾನದಿಯು ಅದನ್ನು ಸುತ್ತುಗಟ್ಟಿರುತ್ತದೆ. ಅದರ ನಡುವೆ ಪ್ರಭುದೇವನ ಹೆಸರಿನಿಂದ ಒಂದು ಲಿಂಗಸ್ಥಾಪನೆಯಾಗಿದ್ದು ಆ ಲಿಂಗದ ಹೆಸರಿನಿಂದ ಅನೇಕ ಇನಾಮು ಭೂಮಿಗಳಿವೆ. ಅವುಗಳ ಉಪಭೋಗವನ್ನು ಮಾಡಿಕೊಂಡು ಜಂಗಮರು ಅದರ ಪೂಜೆಯನ್ನು ಮಾಡುತ್ತಿರುವರು. (೨೪) ಜಮುಖಂಡಿ ಊರಲ್ಲಿ ಹೊಕ್ಕಳಬಾವಿಯ ಹತ್ತರ ಒಂದು ಗುಹೆಯಲ್ಲಿ ಪ್ರಭುದೇವನ ಪುರಾತನ ಸ್ಥಾನವದೆ. ಅದು ಜೈನರ ಬಸ್ತಿಯಂತಿರುವದು. ಅದರ ಇನಾಮು ಭೂಮಿಗಳ ಉಪಭೋಗವನ್ನು ಮಾಡಿಕೊಂಡು ಅದರ ನಿತ್ಯ ಪೂಜೆಯನ್ನು ಒಬ್ಬ ಬ್ರಾಹ್ಮಣನು ಮಾಡುತ್ತಿರುವನು. (೨೫) ಅದೇ ಸಂಸ್ಥಾ ನದೊಳಗಿನ ಚಿಮ್ಮಡವೆಂಬ ಗ್ರಾಮದ ಹೊರಗಿನ ಮರಡಿಯ ಮೇಲೆ ಒಂದು ಪ್ರಭುದೇವರ ಸ್ಥಾನವಿರುವದು. (೨೬) ಚಿಮ್ಮಡ ಊರಲ್ಲಿ ಪ್ರಭು ದೇವರದೊಂದು ಪುರಾತನ ಸ್ಥಾನವಿದ್ದು ಅದರ ಪೂಜೆಯನ್ನು ಜಂಗ ಮರು ಮಾಡುತ್ತಿರುವರು. (೨೭) ಅದೇ ಗ್ರಾಮದೊಳಗಿನ ಒಬ್ಬ ಕುಂಬಾ

ರನ ಮನೆಯಲ್ಲಿ ಪ್ರಭುವಿನ ಕೈಯೊಳಗಿನ ಒಂದು ಬೆತ್ತವಿರುವದು. ಅದರ ನಿತ್ಯಪೂಜೆಯನ್ನು ಆ ಕುಂಬಾರರೇ ಮಾಡುತ್ತಿರುವರು. ಬೆತ್ತವು ಸವೆದಿರುವದು. ನಿರಂಜನ ವಂಶರತ್ನಾಕರವೆಂಬ ಗ್ರಂಥದಲ್ಲಿ ಹೇಳಿದ ಬೆತ್ತವು ಇದೇ ಏನೋ ತಿಳಿಯದು. (೨೮) ತೇರದಾಳದ ಹತ್ತರ ಗೊಲ ಬಾವಿಯೆಂಬ ಗ್ರಾಮದ ಹದ್ದಿಯಲ್ಲಿ "ಮೆಟ್ಟಿಮರಡಿ" ಎಂಬದೊಂದು ದಿಬ್ಬವದೆ. ಆ ಸ್ಥಾನದ ಹತ್ತರ ಬಂದ ಕೂಡಲೆ ಭಾವಿಕ ಜನರು ತೇರದಾಳದ ಕಡೆ ಮೋರೆಮಾಡಿ ಕೈಮುಗಿದು ಪ್ರಭುವಿಗೆ ನಮಸ್ಕಾರ ಮಾಡುತ್ತಾರೆ. ಈ ಮೇಲಿನ ವರ್ಣನೆಯಿಂದ ಪ್ರಭುದೇವನು ಅನೇಕ ಪ್ರಾಂತಗಳೊಳಗಿಂದ ಹಾಯ್ದು ತೇರದಾಳಕ್ಕೆ ಬಂದದ್ದು ನಿಜವೆಂದು ವಾಚಕರಿಗೆ ಕಂಡುಬರುವದು. ಮಧ್ಯದಲ್ಲಿ ಪ್ರಭುದೇವನು ಯಾವ ಯಾವ ಸ್ಥಳಗಳಲ್ಲಿ ಉಳಿದನೋ ಆ ಆ ಸ್ಥಳಗಳಿಗೆ ಅವನ ಹೆಸರು ಬಂದಿರಬ ಹುದು. ಮೇಲೆ ನಿರ್ದಿಷ್ಟಮಾಡಿದ ಮಾರ್ಗದೊಳಗಿನ ಮುಳುಗುಂದ, ಸವದತ್ತಿ ಬೆಳಗಾಂವ ಮುಂತಾದ ಮುಖ್ಯ ಸ್ಥಳಗಳಲ್ಲಿ ಆ ಕಾಲದಲ್ಲಿ ಜೈನ ಅರಸರು ರಾಜ್ಯವಾಳುತ್ತಿದ್ದರು. ತೇರದಾಳದಲ್ಲಿಯೂ ಕೂಡ ಜೈನ ರಾಜನು ಆಳುತ್ತಿದ್ದು ಅವನ ಆಶ್ರಯದಲ್ಲಿ ೭೭೦ ಜೈನ ಮುನಿಗಳ ಒಂದು ಗುಂಪು ಇತ್ತು. ಆ ಮುನಿಗಳು ಇರುವ ಸ್ಥಾನಕ್ಕೆ ಈಗ್ಗೂ ಮುನಾಸ (ಮುನಿವಾಸ) ವೆಂದು ಅನ್ನುತ್ತಾರೆ. ಪ್ರಭುದೇವನ ಸಂಚಾರವು ವಿಶೇ ಷವಾಗಿ ಜೈನರ ವಸತಿಯುಳ್ಳ ಪ್ರದೇಶದಲ್ಲಿದ್ದಂತೆ ಕಂಡುಬರುತ್ತದೆ.

'ನಿರಂಜನ ವಂಶ ರತ್ನಾಕರ' ದಲ್ಲಿ ಪ್ರಭುದೇವನಿಗೆ ಪಟ್ಟಾಭಿಷಕ್ತ ಶ್ರೀಬಸವಪ್ರಭುಸ್ವಾಮಿಯೆಂದು ಉಲ್ಲೇಖವದೆ. ಆದರೆ ಈಗ 'ಶಿವಾನುಭವ' ದಲ್ಲಿ ಪ್ರಸಿದ್ಧವಾಗಿರುವ 'ನಿರಂಜನ ವಂಶ ರತ್ನಾಕರ' ದಲ್ಲಿ ಪ್ರಭು ದೇವನು ಹಾಗು ಶ್ರೀಬಸವಪ್ರಭುಸ್ವಾಮಿಯು ಬೇರೆ ಬೇರೆ ವ್ಯಕ್ತಿಗಳೆಂದು ಹೇಳಿದೆ. ಆದರೆ ಶ್ರೀಬಸವಪ್ರಭುಸ್ವಾಮಿಯೆಂಬುವದು ಪ್ರಭುದೇವನ ಮತ್ತೊಂದು ಹೆಸರಿರುವದು. ಅದು ಹೇಗಂದರೆ— ಮಾಯಾದೇವಿ ಯನ್ನು ಗೆದ್ದುದರಿಂದ ಹೇಗೆ "ಅಲಂಮಾಮ್" ಎಂದರೆ ಅಲ್ಲಮನೆಂ ತಲೂ, ಚನ್ನನಿಗೆ ವಶವಾದದ್ದರಿಂದ ಚನ್ನಪ್ರಭುವೆಂತಲೂ, ನಿರ್ವಾಣಯು ವಾಗುವ ಸಮಯದಲ್ಲಿ ತೇರದಾಳದಲ್ಲಿ ಕೈಯೊಳಗಿನ ಕಮಂಡಲುವಾದ ಮಗಿಯನ್ನು ಇಟ್ಟದ್ದರಿಂದ ಮಗಿಪ್ರಭುವೆಂತಲೂ ರೂಢನಾಮಗಳು ಬಂದಿರುವವೋ ಅದರಂತೆ ಪ್ರಭುದೇವನು ಕಲ್ಯಾಣದಲ್ಲಿ ಶ್ರೀಬಸವೇಶ

ನಿಗೆ ತತ್ತ್ವೋಪದೇಶ ಮಾಡಿರುವದರಿಂದ ಬಸವಪ್ರಭುಸ್ವಾಮಿಯೆಂದೂ ಆತನಿಗೆ ಹೆಸರು ಬಂದಿದೆ. ಈ ಮುಂದಿನ ಎಲ್ಲ ಲೀಲೆಗಳು ಶ್ರೀಬಸವಪ್ರಭುಸ್ವಾಮಿಯ ಹೆಸರಿನಿಂದಲೇ ವರ್ಣಿಸಲ್ಪಟ್ಟಿರುವವು. ಹಾಗು ಅನೇಕ ವೀರಶೈವ ಗ್ರಂಥಗಳಲ್ಲಿ ಅಲ್ಲಪ್ರಭು ಎಂಬ ಹೆಸರಿನ ಬದಲು ಬಸವಪ್ರಭು ಎಂಬ ಹೆಸರು ಬಂದದ್ದು ಕಂಡುಬರುತ್ತದೆ. ಉದಾಹರಣಾರ್ಥವಾಗಿ— ಕ್ರಿ. ಶ. ೧೩೨೫ ರ ಸುಮಾರಿನಲ್ಲಿ ಜಟಾಶಂಕರದೇವನೆಂಬವನು ತನ್ನ 'ಶ್ರೀಪ್ರಭುದೇವರ ತ್ರಿವಿಧಿ' ನಾಮಕ ಗ್ರಂಥದಲ್ಲಿ ಅಲ್ಲಮಪ್ರಭುದೇವನಿಗೆ ಶ್ರೀಬಸವಪ್ರಭುದೇವನೆಂದು ಸಂಬೋಧಿಸಿ ಹೊಗಳಿದ್ದು ಕಂಡುಬರುವದು. ಈ ಜಟಾಶಂಕರದೇವನು ಕ್ರಿ. ಶ. ೧೪೭೦ ರ ಸುಮಾರಿನಲ್ಲಿ ಆಗಿಹೋದ ತೋಂಟದಾರ್ಯನ ಮುತ್ತ್ಯಾ ಗುರುವಾಗುವನು. ಕ್ರಿ. ಶ. ೧೨೦೦ ರ ಸುಮಾರಿನಲ್ಲಿ ಆಗಿಹೋದ ಹರೀಶ್ವರ ಕವಿಯ ಗುರುವು ಮಗ್ಗೆಯ ಮಾಯಿದೇವ ಪ್ರಭುಯೆಂಬುವನು. ಇವನು ತನ್ನ ಶತಕ ತ್ರಯದೊಳಗಿನ ಶಿವಾವಲ್ಲಭ ಶತಕದ ನೂರನೇ ಶ್ಲೋಕದಲ್ಲಿ ಪ್ರಭುದೇವರನ್ನು ಕೊಂಡಾಡಿರುವನು. ಆ ಶ್ಲೋಕದ ಭಾವಾರ್ಥವೇನಂದರೆ- ಶ್ರೀಬಸವೇಶ್ವರನಿಗೆ ಸ್ವಾಮಿಯೂ, ಚನ್ನಬಸವನಿಗೆ ಆಚಾರ್ಯನೂ, ಗುಹೇಶ್ವರ ನಾಮಕ ಅಂತರ್ಲಿಂಗದ ಅನುಸಂಧಾನದಲ್ಲಿ ಸಮರ್ಥನೂ ಮಂತ್ರಾರ್ಥ ವಿಸ್ತಾರಕಾರಕ ೨೮ ಶಿವಾಗಮಗಳಲ್ಲಿ ನಿಷ್ಣಾತನೂ ಆದ ಶ್ರೀಬಸವಪ್ರಭುಸ್ವಾಮಿಯು ನಮ್ಮ ಇಷ್ಟಾರ್ಥವಾದ ಲಿಂಗಾಂಗ ಸಾಮರಸ್ಯ-ಸಿದ್ಧಿಯ ಜ್ಞಾನವನ್ನು ಪರಿಪೂರ್ಣ ಮಾಡುವ ಅನುಗ್ರಹ ಸೌಖ್ಯವನ್ನು ಸದಾ ನಮಗೆ ಕೊಡಲಿ" ಈ ರೀತಿಯಿಂದ ಮಗ್ಗೆಯ ಮಾಯಿದೇವಪ್ರಭುವು ತನ್ನ ವಿರಕ್ತ ಸಾಂಪ್ರದಾಯಕ್ಕೆ ಅನುಸರಿಸಿ ಪ್ರಭೂಸ್ವಾಮಿಯನ್ನು ಸ್ತುತಿಸಿರುವನು.

ಕ್ರಿ. ಶ. ೧೪೩೦ ರ ಸುಮಾರಿನಲ್ಲಿದ್ದ ಚಾಮರಸನು ತನ್ನ ಪ್ರಭುಲಿಂಗಲೀಲೆಯೊಳಗಿನ ೨೫ ನೆಯ ಸಂಧಿಯ ಪ್ರಾರಂಭದ ವಚನಗಳಲ್ಲಿ ಶ್ರೀಅಲ್ಲಮಪ್ರಭುದೇವನಿಗೆ ಶ್ರೀಬಸವಪ್ರಭುದೇವನೆಂದು ಸಂಬೋಧಿಸಿ ಸ್ತುತಿಸಿರುವನು. ಈ ವಚನವು ಅಚ್ಚಾದ ಮತ್ತು ಕೆಲವು ಕೈಬರಹದ ಪ್ರಭುಲಿಂಗ ಲೀಲೆಯ ಪ್ರತಿಗಳಲ್ಲಿಯೂ ದೊರೆಯುವದಿಲ್ಲವು. ಆದರೆ ಶಾಲಿವಾಹನ ಶಕೆ ೧೬೩೩ ಖರನಾಮ ಸಂವತ್ಸರ, ಮಾರ್ಗಶೀರ್ಷ ಮಾಸ, ಶುದ್ಧ ತ್ರಯೋದಶಿ, ಕುಜವಾರ, ರೋಹಿಣೀ ನಕ್ಷತ್ರ, ಸಾಧ್ಯ

ನಾಮಯೋಗ, ಕೌಲವಾಕರಣದಲ್ಲಿ ನಮ್ಮ ಪೂರ್ವಿಕರು ಬರೆದಿಟ್ಟ ಚಾಮರಸನ ಪ್ರಭುಲಿಂಗ ಲೀಲೆಯ ಪ್ರತಿಯಲ್ಲಿ ಮಾತ್ರ ಈ ವಚನವದೆ.

ಕ್ರಿ. ಶ. ೧೪೩೦ ರ ಸುಮಾರಿನಲ್ಲಿ ಮಗಿಯ ನರೇಂದ್ರ ಎಂಬವನೊಬ್ಬ ವೀರಶೈವ ಕವಿಯು ಅಲ್ಲಮಪ್ರಭುದೇವನಿಗೆ ಶ್ರೀಬಸವಪ್ರಭುದೇವನೆಂದು ಒಂದು ಪದ್ಯದಲ್ಲಿ ಸಂಬೋಧಿಸಿರುವನು. ಆ ಪದ್ಯವು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ ಪುಷ್ಪದ ೨೦ ನೆಯ ಪುಟದಲ್ಲಿ ಪ್ರಸಿದ್ಧವಾಗಿದೆ. ಈ ಕವಿಯು ಯಾರು, ಇವನ ಸ್ಥಲವಾವುದು ಮುಂತಾದ್ದರ ಬಗ್ಗೆ ವಿಸ್ತಾರವಾಗಿ ಪ್ರಸಂಗಾನುಸಾರ ಮುಂದೆ ನಾವು ಬರೆಯುವೆವು. ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ ಪುಷ್ಪದ ೪೧ ನೆಯ ಪುಟದೊಳಗಿನ ೩ ನೆಯ ಪದ್ಯದ ಕಡೆಯ ಚರಣದಲ್ಲಿಯೂ ಹಾಗು ಅದೇ ಪುಷ್ಪದ ೪೩ ನೆಯ ಪುಟದೊಳಗಿನ ೭ ನೆಯ ಪದ್ಯದ ಕಡೆಯ ಚರಣದಲ್ಲಿಯೂ ಮತ್ತು ೬೦ ನೆಯ ಪದ್ಯದ ಒಂದನೆಯ ಚರಣದಲ್ಲಿಯೂ ಮತ್ತು ೩ ನೆಯ ಪುಷ್ಪದ ೮ ನೆಯ ಪದ್ಯದ ಮೂರನೆಯ ಚರಣದಲ್ಲಿಯೂ ಶ್ರೀಅಲ್ಲಮಪ್ರಭುದೇವನಿಗೆ ಬಸವಪ್ರಭುದೇವನೆಂದು ಬೇರೆ ಕವಿಗಳು ಸಂಬೋಧಿಸಿದ್ದು ಪ್ರಸಿದ್ಧವಾಗಿದೆ. ಇದರ ಮೇಲಿಂದ ಬಸವಪ್ರಭುವೆಂಬುವದು ಅಲ್ಲಮಪ್ರಭುದೇವನ ಇನ್ನೊಂದು ಹೆಸರು ಇದ್ದದ್ದು ಸಹಜವಾಗಿ ಸಿದ್ಧವಾಗುತ್ತದೆ. ಈ ಬಸವಪ್ರಭು ಎಂಬ ಹೆಸರಿನ ಅರ್ಥವುಳ್ಳ ಅಲ್ಲಮಪ್ರಭುವಿನ ಪರ್ಯಾಯ ಹೆಸರುಗಳು ಬಸವ ಪ್ರಾಣೇಶ, ಬಸವ ಸಂಪ್ರೀತ ಮತ್ತು ಬಸವರತ್ನ ಎಂದಿರುವವು. ಮೊದಲನೆಯದು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೪ ನೆಯ ಪುಷ್ಪದ ೧ ನೆಯ ಪದ್ಯದ ಆರನೆಯ ಚರಣದಲ್ಲಿ, ಬಸವ ಸಂಪ್ರೀತ ಎಂಬುವದು ಅದೇ ಮಾಲೆಯ ೧೧ ನೆಯ ಪುಷ್ಪದ ೩೦ ನೆಯ ಪದ್ಯದ ಮೂರನೆಯ ಚರಣದಲ್ಲಿ ಮತ್ತು ಬಸವಪಕ್ಷ ಎಂಬದು ಎಳಿಂದೂರ ಹರೀಶ್ವರ ಕೃತ ಪ್ರಭುದೇವರ ಪುರಾಣದ ೪ ನೆಯ ಅಧ್ಯಾಯದ ೨೮ ನೆಯ ಪದ್ಯದಲ್ಲಿ ಬಂದಿರುವವು.

ಕ್ರಿ ಶ. ೧೪೭೦ ರ ಸುಮಾರಿನಲ್ಲಿ ಶ್ರೀತೋಂಟದಾರ್ಯನು ಸಿದ್ಧೇಶ್ವರ ವಚನದ ೮ ನೇ ವಚನದಲ್ಲಿ ತನ್ನ ವಂಶಾವಳಿ (ಗುರುಪರಂಪರೆ) ಯನ್ನು ಕೆಳಗಿನಂತೆ ಕೊಟ್ಟಿರುವನು:— (೧) ಅನಾದಿ ಗಣೇಶ, (೨) ಆದಿ ಗಣೇಶ, (೩) ಶಿವಾರ್ಯ, (೪) ನಿರಂಜನ, (೫) ಜ್ಞಾನಾನಂದ,

(೬) ಆತ್ಮಗಣೇಶ, (೭) ಅಧ್ಯಾತ್ಮ ಗಣೇಶ, (೮) ರುದ್ರ ಗಣೇಶ, (೯) ಬಸವಪ್ರಭು, (೧೦) ಆದಿಲಿಂಗೇಶ, (೧೧) ಚನ್ನವೀರೇಶ, (೧೨) ಹರದನಹಳ್ಳಿ ಗೋಸಲದೇವ, (೧೩) ಶಂಕರದೇವ, (೧೪) ದಿವ್ಯ ಲಿಂಗೇಶ, (೧೫) ಹರದನಹಳ್ಳಿ ಗೋಸಲ ಚನ್ನಬಸವೇಶ, (೧೬) ಸಿದ್ಧಲಿಂಗೇಶ [ತೋಂಟದಾರ್ಯ] ಈ ಗುರುಪರಂಪರೆಯು ಹಾಗು ನಿಜಾಚರಣೆ ಎಂಬ ಗ್ರಂಥದೊಳಗಿನ ಗುರುಪರಂಪರೆಯು ಒಂದೇ ಇರುವವು. ಈ ಎರಡರೊಳಗಿನ ತೋಂಟದಾರ್ಯನು ತನ್ನ ಗುರುವು ಹರದನಹಳ್ಳಿ ಗೋಸಲ ಚನ್ನಬಸವೇಶನೆಂದು ಹೇಳಿಕೊಂಡಿರುವನು. ಹಾಗು ಕರ್ನಾಟಕ ಕವಿ ಚರಿತೆಕಾರರು ಕೂಡ ಹರದನಹಳ್ಳಿ ಗೋಸಲ ಚನ್ನಬಸವೇಶನೆಂಬವನು ತೋಂಟದಾರ್ಯನ ಉಪದೇಶ ಗುರುವಿದ್ದನೆಂದು ಸಿದ್ಧ ಮಾಡಿರುವರು. ಅದೇ ಆದಿ ತೋಂಟದಾರ್ಯನೇ ತನ್ನ ವಂಶವೃಕ್ಷದೊಳಗಿನ ೯ ನೆಯ ಪುರುಷನು ಬಸವಪ್ರಭು ಎಂದು ಒಪ್ಪಿರುವನು. ಮತ್ತು ಕಲಿಯುಗದಲ್ಲಿ ಶ್ರೀಪ್ರಭುದೇವನು ವಿರಕ್ತ ಸಾಂಪ್ರದಾಯದವರಿಗೆ ಮುಖ್ಯ ಗುರುವೆಂಬುದು ನಾವು ಹಿಂದೆಯೇ ಹೇಳಿದ್ದು ಪುರಾಣ ಪ್ರಸಿದ್ಧವದೆ. ಮತ್ತು ಅದು ಯಾವತ್ತು ವಿರಕ್ತರಿಗೂ ಮಾನ್ಯವದೆ. ತೋಂಟದಾರ್ಯನು ಕೊಟ್ಟ ಗುರುಪರಂಪರೆಯಲ್ಲಿ ಅಲ್ಲಮಪ್ರಭುದೇವ ಇಲ್ಲವೆ ಪ್ರಭುದೇವನೆಂಬುವ ಹೆಸರಿರದೆ ಅದರ ಬದಲು ಬಸವಪ್ರಭುದೇವನೆಂದು ಹೆಸರು ಅದೆ. ಬಸವಪ್ರಭುದೇವನ ಹೆಸರಿನ ತರುವಾಯ ಇದ್ದ ಹೆಸರುಗಳು ವ್ಯವಹಾರದಲ್ಲಿ ಇದ್ದಂತೆ ಬಸವಪ್ರಭುದೇವನ ಹಿಂದಿನ ಹೆಸರುಗಳು ವಿಶೇಷ ವ್ಯವಹಾರದಲ್ಲಿ ಇದ್ದಂತೆ ಕಂಡುಬರುವದಿಲ್ಲವು. ಅದುದರಿಂದ ಅಲ್ಲಮ ಪ್ರಭುದೇವನಿಗೇ ಬಸವಪ್ರಭುದೇವನೆಂಬ ಇನ್ನೊಂದು ಹೆಸರು ಇದ್ದದ್ದರಲ್ಲಿ ತಿಲಮಾತ್ರ ಸಂಶಯವಿಲ್ಲವು. ಈ ಬಸವಪ್ರಭುದೇವನೆಂಬುವ ಹೆಸರು ಪ್ರಭುದೇವನಿಗೆ ಕಲ್ಯಾಣ ನಗರದಲ್ಲಿ ಬಸವನಿಗೆ ತತ್ವೋಪದೇಶ ಮಾಡಿದ ನಂತರ ಪ್ರಾಪ್ತವಾದದ್ದೆಂದು ನಿರ್ವಿವಾದವಾಗಿ ಸಿದ್ಧನಾಗುತ್ತದೆ. ಮೈಸೂರ ಸೀಮೆಯೊಳಗಿನ ಎಡೆಯೂರಲ್ಲಿ ತೋಂಟದ ಸಿದ್ಧಲಿಂಗೇಶನ ಸ್ಥಾನವದೆ. ಅದರ ಪ್ರಾಕಾರದೊಳಗೆ ಕ್ರಿ. ಶ. ೧೫೦೦ ರ ಸುಮಾರಿನಲ್ಲಿ ಬರೆದ ಒಂದು ಶಿಲಾಲೇಖವದೆ. ಅದರಲ್ಲಿ ತೋಂಟದಾರ್ಯನ ಶಿಷ್ಯಪರಂಪರೆಯನ್ನು ಕೆಳಗಿನಂತೆ ಹೇಳಿರುವದು. ೧. ಸಪ್ಪೆದೇವ, ೨. ಉಪ್ಪಿನಹಳ್ಳಿ ಸ್ವಾಮಿ ಸಿದ್ಧದೇವ, ೩. ನಂಜದೇವ, ೪. ಬೋಳಬಸವರಾಜದೇವ, ೫. ಗುಮ್ಮಳಾಪುರದ ಸಿದ್ಧಲಿಂಗದೇವ, ೬.

ಪಟ್ಟಣದೇವ, ೭. ರೇವಣಸಿದ್ಧದೇವ, ೮. ಶೀಲವಂತದೇವ, ೯. ಚಟ್ಟಿಗ ದೇವ.

ಕ್ರಿ. ಶ. ೧೫೮೪ ಸುಮಾರಿನಲ್ಲಿ ವಿರುಪಾಕ್ಷ ಪಂಡಿತನು ತನ್ನ ಚೆನ್ನ ಬಸವ ಪುರಾಣದಲ್ಲಿ "(೧) ಸಿದ್ಧಲಿಂಗೇಶ್ವರ (೨) ಕಂಬಳಿಯದೇವ (೩) ಸಿದ್ಧನಂಜೇಶ್ವರ (೪) ಚನ್ನದೇವ (೫) ದೊಡ್ಡಶಿದ್ಧಲಿಂಗೇಶ್ವರದೇವ (೬) ಕಂಕಣದೇವ (೭) ಲಂಬಕರ್ಣದೇವ (೮) ಸಿದ್ಧಮಲ್ಲೇಶ್ವರ (೯) ಗುಮ್ಮಳಾಪುರ ಸಿದ್ಧಲಿಂಗೇಶ್ವರ (೧೦) ಎಡತೊರೆಯ ಗುರುಸಿದ್ಧವೀರಣ್ಣೊಡೆಯ (೧೧) ಘನಲಿಂಗದೇವ (೧೨) ಚಿಕ್ಕಮಲ್ಲೇಶ (೧೩) ಮರುಳ ಸಿದ್ಧೇಶ್ವರ (೧೪) ಚಂದ್ರಶೇಖರ (೧೫) ಸುರಗಿಯಾರ್ಯ (೧೬) ಶಾಂತಮಲ್ಲಿಕಾರ್ಜುನದೇವ (೧೭) ಬೆಡಗಿನ ಪರ್ವತೇಶ್ವರ (೧೮) ಪಟ್ಟಣದೇವ (೧೯) ಜುಗುನಿಯ ಮರುಳದೇವ (೨೦) ಮಳೆಯದೇವ (೨೧) ಬತ್ತಲೆಯದೇವ (೨೨) ಸಂಪಿಗೆಯ ರಾಚವಟ್ಟಿದೇವ (೨೩) ಸಪ್ಪೆಯಾರ್ಯ (೨೪) ಉಪ್ಪಿನ ಹಳ್ಳಿಯಾರ್ಯ (೨೫) ಶೀಲವಂತಾರ್ಯ (೨೬) ಕೊಡಗಿಯಹಳ್ಳಿಯಾರ್ಯ (೨೭) ಜೋತಿಯ ಬಸವೇಶ್ವರ (೨೮) ರಾಚವಟ್ಟಿ ಕೋರಿಯ ಸಿದ್ಧಬಸವೇಶ್ವರ (೨೯) ಹಿರಣ್ಯಾರ್ಯ (೩೦) ಶಿವಪೂಜಾರ್ಯ ಅಥವಾ ಬೋಳಬಸವೇಶ್ವರ [೩೧] ಕಿತ್ತಾವರದ ಚನ್ನಮಲ್ಲೇಶ್ವರ" ಎಂದು ತೋಂಟದಾರ್ಯನ ಶಿಷ್ಯಪರಂಪರೆಯನ್ನು ಕೊಟ್ಟಿರುವನು.

ಕ್ರಿ. ಶ. ೧೫೬೦ ಸುಮಾರಿನಲ್ಲಿ ವಿರಕ್ತ ತೋಂಟದಾರ್ಯನು ಈ ಶಿಷ್ಯ ಪರಂಪರೆಯನ್ನು ತನ್ನ ಸಿದ್ಧೇಶ್ವರ ಪುರಾಣದಲ್ಲಿ "(೧) ಪಟ್ಟಣದೇವ (೨) ಬೋಳಬಸವ (೩) ಸಪ್ಪೆಯ ಯತಿ (೪) ಸಿದ್ಧಮಲ್ಲೇಶ (೫) ಘಟ್ಟಿಸಿದ್ದಯ್ಯ (೬) ಉಪ್ಪಿನಹಳ್ಳಿಯೈಯ್ಯ (೭) ರಾಚೋಟಿಯದೇವ (೮) ಚಟ್ಟಿಗಯಲೇಶ್ವರ (೯) ಚಂದ್ರಶೇಖರ (೧೦ ಕಟ್ಟಿಯಪುರದ ನಂಜೆಯದೇವ (೧೧) ಘನಲಿಂಗದೇವ (೧೨) ಗುಮ್ಮಳಾಪುರ ಸಿದ್ಧಲಿಂಗೇಶ (೧೩) ಶೀಲವಂತೇಶ್ವರ (೧೪) ಹುಚ್ಚಪರ್ವತದೇವ (೧೫) ಕಂಕಣದೇವ (೧೬) ದೊಡ್ಡಸಿದ್ಧಯ್ಯ" ಎಂದು ಈ ಪ್ರಕಾರವಾಗಿ ಕೊಟ್ಟಿರುವನು.

ಕ್ರಿ. ಶ. ೧೪೮೦ ರ ಸುಮಾರಿನಲ್ಲಿ ತೋಂಟದಾರ್ಯನ ಶಿಷ್ಯರಲ್ಲಿ ಸಿದ್ಧಲಿಂಗೇಶನೊಬ್ಬನು ಕೆಲವು ವಚನಗಳನ್ನು ಬರೆದಿದ್ದಾನೆ. ಪ್ರತಿಯೊಂದು ವಚನದ ಅಂತ್ಯದಲ್ಲಿ 'ಸ್ವತಂತ್ರ ಸಿದ್ಧಲಿಂಗೇಶ' ನೆಂದು ಆತನ ಮುದ್ರಿಕೆಯು ಇರುವದು. ಈ ಸಿದ್ಧಲಿಂಗೇಶನ ಹೆಸರು ನಾವು ಮೇಲೆ

ಕೊಟ್ಟ ಮೂರೂ ಶಿಷ್ಯಪರಂಪರೆಗಳಲ್ಲಿ ಇರುವದು. ಇವನು ತನ್ನದೊಂದು ವಚನದಲ್ಲಿ ಬಸವಪ್ರಭು ಇತ್ಯಾದಿ ಗಣಸಮೂಹವೆಂದು ಅಲ್ಲಮಪ್ರಭುದೇವನ ಹೆಸರನ್ನು ತೆಗೆದುಕೊಂಡಿರುವನು. ಇದರಿಂದ ಬಸವಪ್ರಭು ಎಂಬ ಹೆಸರು ಅಲ್ಲಮಪ್ರಭುವಿನ ಇನ್ನೊಂದು ಹೆಸರು ಇದ್ದದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲವು. ಶೂನ್ಯಸಂಪಾದನೆಯೊಳಗಿನ ಪ್ರಭುಪರ್ಯಟಣ ಸಂಪಾದನೆ ೨೮ ನೆಯ ವಚನದಲ್ಲಿ "ಬಸವಪ್ರಿಯ" ಎಂದೂ, ಚನ್ನಬಸವರಾಜದೇವರ ಸಂಪಾದನೆಯ ೪೫ ನೆಯ ವಚನದಲ್ಲಿ "ಬಸವಪ್ರಭು" ಎಂದೂ, ಪ್ರಭು ಆರೋಗಣೆಯ ಸಂಪಾದನೆಯ ೧೪೪—೧೪೫ ನೆಯ ವಚನಗಳಲ್ಲಿ " ಬಸವಣ್ಣಪ್ರಿಯ " ಎಂದೂ ಶ್ರೀ ಅಲ್ಲಮಪ್ರಭುದೇವನ ಪರ್ಯಾಯನಾಮಗಳು ಬಂದಿವೆ.

ನಿರಂಜನ ವಂಶರತ್ನಾಕರದಲ್ಲಿ ಬಸವಪ್ರಭುಸ್ವಾಮಿಯ ವಿಷಯವಾಗಿ ಇದ್ದ ಅನೇಕ ಮಹತ್ವದ ಸಂಗತಿಗಳ ಹೊರತು ಬಸವಪ್ರಭುದೇವನು ಕೆಳದಿ ಮುಂತಾದ ಪ್ರಾಂತದೊಳಗಿಂದ ಹುಕ್ಕೇರಿ ಪ್ರಾಂತದೊಳಗೆ ಬಂದು ಅಲ್ಲಿರುವ ಅನೇಕ ವೀರಶೈವ ಹಾಗು ಜೈನ ಮನೆತನಗಳ ಉದ್ಧಾರ ಮಾಡಿದ ಸಂಗತಿಗಳು ಹೇಳಿವೆ. ಉದಾಹರಣಾರ್ಥವಾಗಿ ಒಂದೆರಡು ಐತಿಹಾಸಿಕ ಮನೆತನಗಳ ಸಂಕ್ಷಿಪ್ತ ಇತಿಹಾಸವನ್ನು ಇವರಡಿಯಲ್ಲಿ ಕೊಡುತ್ತೇವೆ.

ಒಂದು ದಿವಸ ರಾತ್ರಿ ಚಿಕ್ಕೋಡಿಯೊಳಗಿನ ಒಬ್ಬ ಲಿಂಗಾಯತ ಮನುಷ್ಯನ [ಹೆಸರು ಗೊತ್ತಿಲ್ಲ] ಸ್ವಪ್ನದಲ್ಲಿ ಯೋಗದಂಡ, ಕೌಪೀನು, ಕಾಷಾಯಾಂಬರಗಳು, ಜಟಾ, ಕರಕಮಂಡಲು ಮುಂತಾದ ಚಿನ್ಹಗಳಿಂದ ಕೂಡಿದ ಒಂದು ದಿವ್ಯ ಮೂರ್ತಿಯು ಬಂದದ್ದರ ಭಾಸವಾಯಿತು. ಎಚ್ಚತ್ತು ನೋಡಲಾಗಿ ಅಲ್ಲಿ ಏನೂ ಇದ್ದಿಲ್ಲ. ಆ ಮೇಲೆ ಅವನು ತನ್ನ ಸ್ವಪ್ನದ ಸವಿಸ್ತಾರ ವರ್ತಮಾನವನ್ನು ತನ್ನ ಹೆಂಡತಿಗೆ ಹೇಳಿದನು. ಆ ಮೇಲೆ ಆ ಉಭಯ ಸ್ತ್ರೀಪುರುಷರು ಆ ಸ್ವಪ್ನದೊಳಗಿನ ದಿವ್ಯ ಮೂರ್ತಿಯ ಶೋಧ ಮಾಡುತ್ತ ಸುತ್ತಲು ಸಂಚಾರಮಾಡುತ್ತಿರುವಷ್ಟರಲ್ಲಿ ಆ ಮೂರ್ತಿಯು ತೀರದಾಳಕ್ಕೆ ಬಂದದ್ದರ ಸುದ್ದಿಯು ಕರ್ಣೋಪಕರ್ಣದಿಂದ ಅವರಿಗೆ ತಿಳಿದ ಕೂಡಲೆ ಅವರು ತೀರದಾಳದ ಕಡೆಗೆ ಹೊರಟರು. ಅವರು ಅಲ್ಲಿಗೆ ಬಂದು ನೋಡುವಷ್ಟರಲ್ಲಿ ಸ್ವಪ್ನದ ಮಾತು ಮನಗಂಡರು. ತದನಂತರ ಅವರು ಬದ್ಧಾಂಜ

ಲಿಯುಕ್ತರಾಗಿ ಪ್ರಭುದೇವನಿಗೆ ಶಿರಸಾಷ್ಟಾಂಗ ಪ್ರಣಿಪಾತಂಗಳಂ ಮಾಡಿ ಅವನ ಎದುರಿನಲ್ಲಿ ಕಿಂಕರತ್ವದಿಂದ ನಿಂತರು. ಪ್ರಭುದೇವನ ಕೃಪಾ ದೃಷ್ಟಿಯು ಅವರ ಮೇಲೆ ಬಿದ್ದ ಕೂಡಲೆ ಅವರು ಕೃತಕೃತ್ಯರಾದೆವೆಂದು ಬಗೆದು ಪ್ರಭುದೇವನ ಶುಶ್ರೂಷೆಯನ್ನು ಏಕೋಭಾವದಿಂದ ಮಾಡಹತ್ತಿದರು. ಮುಂದೆ ಅವರಿಗೆ ಪುತ್ರಸಂತಾನವಾಗಲು ಅವನಿಗೆ ಅವರು ಪ್ರಭು ಬಸವಂತರಾಯನೆಂದು ಹೆಸರಿಟ್ಟರು. ಪ್ರಭುದೇವರ ಆಶೀರ್ವಾದದಿಂದ ಹುಟ್ಟಿದ ಆ ಪ್ರಭು ಬಸವಂತರಾಯನು ತೀವ್ರವೇ ಘನತೆಗೇರಿ ಮುಂದೆ ಆತನಿಗೆ ಚಿಕ್ಕೋಡಿ ತಾಲೂಕದೊಳಗಿನ ೧೪॥ ಕರ್ಯಾತ ಮೂರುಲಕ್ಷ ವಸೂಲಿಯ ಜಾಹಗೀರಿಯು ಮತ್ತು ೩ ಲಕ್ಷ ಮುಂಡೀ ಪಾಚ್ಛಾ ಎಂಬ ಬಿರುದು ದೊರಕಿದವು. ಆ ಕರ್ಯಾತದ ವಿವರವು ಕೆಳಗಿನಂತೆಃ— ಮನವಳ್ಳಿ, ರಾಜಿಗಿ, ಸದಲಗಿ, ನೇಜ, ಜೂಗಳ, ಸಾವಗಾಂವ, ಕಾಪಸಿ, ಕಬ್ಬೂರ, ಸೊಲ್ಲಾಪೂರ, ಜುಲೆ, ನೇಸರಿ, ಲಾಟ, ಅನಂತಪುರ, ದುದಗಾವ ಅರ್ಧ ಸಾವಲ ಮತ್ತು ಮೊಗಲಾಯಿ ಕಡೆಯ ಬೇದರಾಬಾದ ಖುದ್ದ ಹೀಗೆ ಹದಿನಾಲ್ಕುವರೆ. ಆದಿನಿಂದಲೂ ಶ್ರೀ ಪ್ರಭುದೇವನು ಆ ಮನೆತನದಲ್ಲಿ ಕುಲಸ್ವಾಮಿಯಾಗಿ ಶೋಭಿಸಹತ್ತಿದನು. ಮುಂದೆ ಕೆಲವು ಕಾಲದ ಮೇಲೆ ಎಂದರೆ ಸುಮಾರು ಎರಡ ನೂರಾಐವತ್ತು ವರ್ಷಗಳ ಹಿಂದೆ, ಈ ಸಂಸ್ಥಾನಿಕರಲ್ಲೊಬ್ಬನು ಹುಕ್ಕೇರಿಯಿಂದ ಕುಸು ಅಂತರದ ಮೇಲೆ ಗುಡ್ಡಗಾಡ ಪ್ರದೇಶದಲ್ಲಿ ಒಂಟಮೂರಿ ಎಂಬ ಒಂದು ಊರನ್ನು ಸ್ಥಾಪಿಸಿ ಅದಕ್ಕೆ ಭದ್ರವಾದ ಕಿಲ್ಲೆಯನ್ನು ಕಟ್ಟಿ ಅದರಲ್ಲಿಯೇ ವಾಸಮಾಡತೊಡಗಿದನು. ಆ ಊರಲ್ಲಿ ಶ್ರೀ ಪ್ರಭುದೇವರ ಹೆಸರಿನಿಂದ "ಮಗಿಮಠ" ಎಂಬುದೊಂದು ಮಠವನ್ನು ಕಟ್ಟಿಸಿ ಅದರಲ್ಲಿ ತೇರದಾಳ ಬೃಹನ್ಮಠದ "ಉಗ್ಗದಮಗಿ ಮರಿದೇವರು" ಎಂಬ ಹೆಸರಿನವನೊಬ್ಬನು ತೇರದಾಳದಿಂದ ತಂದ ಒಂದು ಸಿದ್ಧೇಶ್ವರ ಘಟ್ಟಿ ಹಾಗು ಒಂದು ಮಗಿಯನ್ನು ಸ್ಥಾಪಿಸಿ ಅದರ ಪೂಜೆಯನ್ನು ಮಾಡಹತ್ತಿದನು. ಉಗ್ಗದಮಗಿ ಮರಿದೇವರು ಲಿಂಗೈಕ್ಯರಾದ ಮೇಲೆ ತೇರದಾಳ ಮಠದ ಶ್ರೀ ಚನ್ನಪ್ಪದೇವರು ಹಾಗು ಮಗೆಪ್ಪದೇವರು ಎಂಬವರ ಹೆಸರಿನಿಂದ ಶ್ರೀಮಂತ ಬಸವಪ್ರಭು ಲಖಮಗೌಡಾ ಸರದೇಸಾಯಿ ಇವರು ಕ್ರಿ. ಶ. ೧೭೦೩ ರಲ್ಲಿ ಒಂದು ಬಿನ್ನಹ ಪತ್ರವನ್ನು ಬರಕೊಂಡಿರುವರು. ಅದರಲ್ಲಿ ನಿಮ್ಮ ಮಗಿಮಠವನ್ನು ನೀವೇ ತೆಗೆದುಕೊ

ಕ್ಷರಿ ಎಂಬ ಸಂಗತಿಯು ಇರುವದು. ಅದೇ ಮನೆತನದವರಾದ ಶ್ರೀಮಂತ ಒಂಟಮುರಿ ಸರದೇಸಾಯಿಯವರು ಅಂದಿನಿಂದ ಅದೇ ಊರಲ್ಲಿ ಇರಹತ್ತಿದರು. ಒಂಟಮುರಿಗೆ ನಿರಂಜನಪುರ ಎಂಬ ಇನ್ನೊಂದು ಹೆಸರಿರುವದು. ಮೂಲ ಪುರುಷನಾದ ಪ್ರಭು ಬಸವಂತರಾಯನಿಗೆ ಶ್ರೀ ಪ್ರಭುದೇವನು ತನ್ನ ಕಾವಿಯ ಜೋಳಿಗೆಯನ್ನು ಆಶೀರ್ವದಿಸಿದ್ದನು. ಆತನು ಅದರ ನಿಶಾನಿಯನ್ನು ಮಾಡಿದನು. ಅಂದಿನಿಂದ ಈ ವರೆಗೂ ಆ ಸಂಸ್ಥಾನದಲ್ಲಿ ಆ ಕಾವಿಯ ನಿಶಾನಿಯು ಇರುವದು. ಅಲ್ಲಿಯ ಪ್ರತಿಯೊಂದು ಉತ್ಸವವು ಹಾಗು ಮಂಗಲಕಾರ್ಯವು ಆ ಕಾವಿ ನಿಶಾನಿ ಹೊರ್ತು ನಡೆಯುವದಿಲ್ಲ. ಶ್ರೀ ರಾಮದಾಸನು ಶಿವಾಜಿ ಮಹಾರಾಜನಿಗೆ ೧೭ ನೆಯ ಶತಮಾನದಲ್ಲಿ ತನ್ನ ಕಾವಿಯ ಜೋಳಿಗೆಯನ್ನು ಕೊಟ್ಟಿದ್ದು ಅದರಿಂದ ಭಗವಾಝೇಂಡಾ ನಿಶಾನಿಯನ್ನು ಶಿವಾಜಿಯು ಮಾಡಿದ್ದು ಮೇಲೆ ಬರೆದ ಉದಾಹರಣೆಯ ಅನುಕರಣವಿರಬಹುದು. ಶ್ರೀ ರಾಮದಾಸನಕ್ಕಿಂತಲು ಎಷ್ಟೋ ಶತಕಗಳ ಹಿಂದೆಯೇ ಈ ಮಾತು ಆಗಿಹೋಗಿತ್ತು. ಇದರ ಹೊರ್ತಾಗಿ ಒಂಟಮುರಿ ಸಂಸ್ಥಾನದಲ್ಲಿ ಅಲ್ಲಮ ಎಂಬ ಹೆಸರಿನದೊಂದು ಡಂಕೆಯ ಕುದುರೆಯು ಇರುತ್ತದೆ. ಆ ಸಂಸ್ಥಾನದಲ್ಲಿ "ಶ್ರೀ ಪ್ರಭೂಚರಣಿ ತತ್ಪರ ನಿರಂತರ" ಎಂಬ ಶಿಕ್ಕೆಯ ಮೋಹರು ಅದೆ. ಶ್ರೀಮಂತ ಒಂಟಮುರಿ ಸರದೇಸಾಯಿಯವರ ಮನೆತನವು ೧೮ ನೆಯ ಶತಮಾನದಲ್ಲಿ ಕರವೀರ [ಕೊಲ್ಹಾಪೂರ] ಸರಕಾರಕ್ಕೆ ಮಾಂಡಲಿಕವಾಗಿತ್ತು. ಅಂದಿನಿಂದ 'ಭಗವಾಝೇಂಡಾ ಎಂಬ ಈ ಕಾವೀ ನಿಶಾನಿಯು ಈ ಮನೆತನದಲ್ಲಿ ಯಾಕೆ ಬಂದಿರಬಾರದು ಎಂದು ಯಾರಾದರೂ ಕೇಳಬಹುದು. ಆದರೆ ಯಾವ ಸಾರ್ವಭೌಮರಾಜನೂ ತನ್ನ ಮುಖ್ಯ ಮಾನಮರಾತಬಗಳನ್ನು ತನ್ನ ಮಾಂಡಲಿಕರಿಗೆ ಕೊಟ್ಟ ಸಂಗತಿಯು ಯಾವ ಇತಿಹಾಸದಲ್ಲಿಯೂ ಇಲ್ಲವು. ಇದು ಅಲ್ಲದೆ ಇದೇ ಕೊಲ್ಹಾಪುರ ಸರಕಾರದವರು ಜಗ್ಯಾಮೊರ್ಚೇಲ ಹಾರಿಸಿಕೊಳ್ಳುವ ಮರ್ಯಾದೆಯನ್ನು ತಮ್ಮ ಹೊರ್ತಾಗಿ ಎರಡನೆಯವರಿಗೆ ತಮ್ಮ ಸಂಸ್ಥಾನದ ಸೀಮೆಯಲ್ಲಿ ಕೊಡುವದಿಲ್ಲ. ಅಂದಮೇಲೆ ಆಕಾಲಕ್ಕೆ ವರಿಷ್ಠ ಸರಕಾರದವರು ಮಾಂಡಲಿಕರಿಗೆ ತಮಗಿದ್ದ ಮರ್ಯಾದೆಯನ್ನು ಕೊಟ್ಟಿರಲಿಕ್ಕಿಲ್ಲವೆಂದು ಸಹಜವಾಗುತ್ತದೆ. ಇದಲ್ಲದೆ ಲಖಮಗೌಡಾ ಹಾಗು ಬಸವಪ್ರಭು ಈ ಹೆಸರಿನ ತಂದೆ ಮಕ್ಕಳು ಸೂರಸನ್ ೧೧೨೩ ಫಸಲಿಯಿಂದ ೧೧೬೩ ಫಸಲಿಯವರೆಗೆ ಯಮಾಜಿರುದ್ರ,

ವಿರುಪಾಕ್ಷಯಮುಂಜಿ, ಶಾಮಜಿರುದ್ರ, ಅಬಾಜಿನಾಗನಾಥ ಹಾಗು ವಿರೂಪಾಕ್ಷ ಶಾಮರಾವ ನಿಪ್ಪತದೇಸಾಯಿ ಇವರ ಸಹಾಯದಿಂದ ಹುಕ್ಕೇರಿ ಪರಗಣೆಯನ್ನು ಸ್ವತಂತ್ರವಾಗಿ ಆಳಿದರು. (ಮೆ॥ ಬಂಟಸನ್ ಷಂಡ ಸಾಹೇಬ ಬಹಾದ್ದೂರ ಆಕ್ಟಿಂಗ ಕಲೇಕ್ಟರ ಇವರ ಕಡೆಗೆ ತಾಲೂಕ ಚಿಕ್ಕೋಡಿಯೊಳಗಿನ ಪರಶರಾಮ ರಘುನಾಥ ದೇಶಪಾಂಡೆ ಹಾಗು ನಾರಾಯಣ ರಘುನಾಥ ದೇಸಾಯಿ ಇವರು ತಾರೀಖು ೧೪ ಮಾಹೆ ಡಿಶೆಂಬರ ಸನ್ ೧೮೩೯ ಇಸ್ವಿ ಶನಿವಾರ ದಿವಸ ಮಾಡಿದ ರಿಪೋರ್ಟಿನಲ್ಲಿ ಅದೆ.) ಇದರಲ್ಲಿ "ಮೊದಲು ಹುಕ್ಕೇರಿಗೆ ವಸ್ತಿ ಇದ್ದಿಲ್ಲವು. ಘೋರಾರಣ್ಯವಾಗಿತ್ತು. ಹೂವಿನಕೆರೆ ಎಂಬುದೊಂದು ಕೆರೆ ಇತ್ತು. ಆಗ್ಗೆ ಆ ಮುಲುಖದಲ್ಲಿ ಬೇಡರ ರಾಯಾ ಎಂಬವನು ಕಾಟಕ ಜನರನ್ನು ಕೂಡಿಸಿ ಬಂಡಾಯ ಎಬ್ಬಿಸಿದನು. ಆಗ್ಗೆ ಬೇದರದ ಸುಲ್ತಾನನ ಮಗಳ ಮಗನಾದ ಗಜಬರಸಾಹೇಬನು ೮೦೪ ನೇ ಫಸಲಿಯಲ್ಲಿ ೪-೫ ಸಾರೆ ದಂಡಾಳುಗಳೊಡನೆ ಬಂದು ಹೂವಿನಕೆರಿ ಮೇಲೆ ಪಾಳೆಯನ್ನಿಟ್ಟು ರಾಯಾ ಬೇಡನ ಪಾರಿಪತ್ಯವನ್ನು ಮಾಡಿ ಅಲ್ಲಿ ಹವೆಯು ನೆಟ್ಟಗಿದ್ದದ್ದರಿಂದ ಕೆರೆಯನ್ನು ಮುರಿದು ಕೋಟಿಕೊತ್ತಳಗಳನ್ನು ಕಟ್ಟಿ ವಸಾಹತುಮಾಡಿ ಅದಕ್ಕೆ ಹುಕ್ಕೇರಿಯೆಂದು ಹೆಸರಿಟ್ಟು ಅದಕ್ಕೆ ೧೪ತ್ತಿ ಕರಿಯಾತುಗಳನ್ನು ಕೊಟ್ಟು ಹುಕ್ಕೇರಿ ಪರಿಗಣೆಯೆಂದು ಹೆಸರಿಟ್ಟನು." ಎಂದು ಉಲ್ಲೇಖವದೆ. ಇದರ ಮೇಲಿಂದ ಒಂಟಮುರಿ ಸರದೇಸಾಯಿ ಮನೆತನದವರು ಹುಕ್ಕೇರಿ ಊರು ವಸಹಾತವಾಗುವದಕ್ಕಿಂತ ಪೂರ್ವದಿಂದಲೂ ಮತ್ತು ಹುಕ್ಕೇರಿ ಪರಗಣೆಯೆಂದು ಮುಖ್ಯ ಸ್ಥಾನವಾದಂದಿನಿಂದಲೂ ಆ ಪ್ರಾಂತದೊಳಗೆ ಪರಗಣಾ ವತನದಾರರಿದ್ದರೆಂದು ತಿಳಿದುಬರುತ್ತದೆ. ಆದರೆ ಸೂರುಸನ್ ೧೧೨೩ ಫಸಲಿಯಿಂದ ೧೧೬೩ ಫಸಲಿಯ ವರೆಗೆ ೫೧ ವರ್ಷ ಮಾತ್ರ ಒಂಟಮುರಿಯವರು ಸ್ವತಂತ್ರ ರಾಜ್ಯವಾಳಿದಂತೆ ಕಂಡುಬರುತ್ತದೆ. ಅಂದ ಮೇಲೆ ಈ ನಿಶಾನಿಯು ಮರ್ಯಾದೆಯು ಪೂರ್ವದಿಂದಲೂ ಈ ಮನೆತನದಲ್ಲಿ ಇದ್ದಿರಬೇಕು. ಮತ್ತು ಅದು ಶ್ರೀ ಪ್ರಭುದೇವರಿಂದಲೇ ಪ್ರಾರಂಭವಾಗಿರಬೇಕೆಂದು ಸಹಜ ಸಿದ್ಧವಾಗುತ್ತದೆ. ಈ ಸಂಸ್ಥಾನದಿಂದ ತೇರದಾಳದೊಳಗಿನ ಶ್ರೀ ಪ್ರಭುಸ್ವಾಮಿಯ ಬೃಹನ್ಮಠಕ್ಕೆ ಎಷ್ಟೋ ಸ್ಥಾವರ ಉತ್ಪನ್ನವು ಈಗ್ಗೂ ನಡೆಯುತ್ತಿದ್ದು ಪ್ರತಿ ವರ್ಷ ನಕ್ತ ನೇಮಣೂಕವಾದರೂ ದೊರೆಯುತ್ತದೆ. ಶ್ರೀಮಂತ ಒಂಟಮುರಿ ಸರದೇಸಾಯರು ಮೇಲಿಂದ ಮೇಲೆ ತಮ್ಮ ಎಷ್ಟು ಸರಂಜಾಮದಿಂದ ತೇರದಾಳದಲ್ಲಿಯ ಶ್ರೀ ಪ್ರಭುಸ್ವಾಮಿಯ

ಮಠಕ್ಕೆ ಬಂದು ದಂಡಖಂಡನಾದಿಗಳನ್ನು ಕೊಟ್ಟು ದರ್ಶನಾಶೀರ್ವಾದ ಗಳನ್ನು ತೆಗೆದುಕೊಂಡು ಹೋಗುತ್ತಿರುವರು. ಈ ಸಂಸ್ಥಾನದ ವಂಶಾ ವಳಿಯನ್ನೇ ಕೊಟ್ಟರೆ ಶ್ರೀ ಪ್ರಭುದೇವನು ತೇರದಾಳಕ್ಕೆ ಯಾವಾಗ್ಗೆ ಬಂದಿ ದ್ದನೆಂಬುವದು ಸಹಜವಾಗಿ ತಿಳಿಯುವಂತಿದೆ. ಆದುದರಿಂದ ಆ ವಂಶಾ ವಳಿಯನ್ನೇ ಇಲ್ಲಿ ಕೊಡುತ್ತೇವೆ. ಶ್ರೀಮಂತ ರಾಜಾ ಲಖಮುಗೌಡಾ ಊರ್ಫ ಅಪ್ಪಾಸಾಹೇಬ ಬಸವಪ್ರಭು ಸರದೇಸಾಯಿ, ಸಿ. ಆಯ್. ಇ. ಬಾರ, ಆ್ಯಟ, ಲಾ, ಸಂಸ್ಥಾನ ಒಂಟಿಮುರಿ, ಇವರ ಮೂಲ ಪುರು ಷನು ಪ್ರಭು ಬಸವಂತರಾವನು ಆತನ ತಂದೆ ಹಾಗು ಅಜ್ಜನ ಹೆಸರು ಗಳು ಗೊತ್ತಿಲ್ಲವು. ಮೂಲ ಪುರುಷ ಪ್ರಭು ಬಸವಂತರಾಯನಿಂದ ಇಮು ಗೌಡನ ವರಿಗೆ ಎಷ್ಟು ತಲೆಗಳಾದವು ಇದರ ಮಾಹಿತಿಯು ದೊರೆಯು ವದಿಲ್ಲವು. ಆದುದರಿಂದ ಇಮುಗೌಡನಿಂದ ಮುಂದಿನ ವಂಶಾವಳಿಯನ್ನು ಕೊಡುತ್ತೇವೆ. ೧ ಪ್ರಭುಬಸವಂತರಾವ, ೨ ಇಮುಗೌಡ, ೩ ಧೂಳಗೌಡ, ೪ ಯಾದಗೌಡ ಉರ್ಫ ಮಹಾದಗೌಡ ಈ ಪುರುಷನಿಂದ ದೇಸಗತಿಯು ಆರು ಮನೆತನಗಳು ಆದವು. ಅವುಗಳ ವಿವರಃ— (ಅ) ದೇಸಗತಿಯು ಹಿರೇಮನೆತನ, (ಬ) ಅಮ್ಮಣಿಗೆಯ ಮನೆತನ, (ಕ) ಸದ್ದಲಿಗೆಯ ಮನೆ ತನ, (ಡ) ಕರಜಿಗೆ ಹಾಗು ರಾಂಗೋಳಿ ಮನೆತನ, (ಇ) ಗೌಡವಾಡ ಹಾಗು ಅಮ್ಮಿನಭಾವಿ ಮನೆತನ, (ಫ) ಮುಜತಿಮನೆತನ. ೫ ಮಲಗೌಡ, ೬ ಸಾಯಿಗೌಡ ಊರ್ಫ ಸಾತಗೌಡ, ೭ ಧೂಳಗೌಡ, ೮ ಅಲಗೌಡ ಊರ್ಫ ಸಿದಗೌಡ, ೯ ಹಿರೇಲಖಮುಗೌಡ, ೧೦ ಹಿರೇಮುಗೆಪ್ಪ, ೧೧ ಅಲಗೌಡ, ೧೨ ಬಸವಪ್ರಭು, ೧೩ ಸವಾಯಿ ಲಖಮುಗೌಡ, ೧೪ ಬಸವಪ್ರಭು, ೧೫ ಲಖಮುಗೌಡ ಈತನು ಫ ಮನೆತನದಿಂದ ದತ್ತಕ ಬಂದವನು. ೧೬ ಬಸವಪ್ರಭು, ೧೭ ಲಖಮುಗೌಡ, ಬ ಮನೆತನ ದಿಂದ ೧೮೧೫ ರಲ್ಲಿ ದತ್ತಕ ಬಂದವನು. ೧೮ ಬಸವಪ್ರಭು ಊರ್ಫ ಬಾಬಾ ಸಾಹೇಬ, ೧೯ ರಾವಸಾಹೇಬ. ಇದರೊಳಗಿನ ೧೭ ನೆಯ ಲಖಮುಗೌಡನು ಮೇಲಿನ ವಂಶಾವಳಿಯನ್ನು ಸೂರುಸನ್ ೧೨೬೦ ಫಸಲಿ, ಕ್ರಿ. ಶ. ೧೮೫೦ ತಾರೀಖು ೬ ಮಾಹೆ ಸಪ್ಟಂಬರದಲ್ಲಿ ಇನಾಮು ಕಮೀಟಿಗೆ ಹಜರ ಮಾಡಿ ರುವನು. ಅದರಲ್ಲಿ "೧೮ ನೆಯ ಬಸವಪ್ರಭು ಊರ್ಫ ಬಾಬಾಸಾಹೇಬ ಔರಸ ಹಾಗು ೧೯ ನೆಯ ರಾವಸಾಹೇಬ ಔರಸ ಹೀಗೆ ಇಬ್ಬರು ಗಾದಿಯು ಮೇಲೆ ಕೂಡ್ರದೆ ಮೃತವಾದರು. ಆ ಮೇಲೆ ಫ ಮನೆತನದ ೧೭ ನೆಯ ಲಖಮುಗೌಡನಿಗೆ ಫ ಮನೆತನದ ಬಸವಪ್ರಭು ಊರ್ಫ ಬಾಬಾಸಾಹೇಬ

ಎಂಬವನು ದತ್ತಕಬಂದನು. ಅವನಿಗೆ ಬ ಮನೆತನದ ಸದ್ಯದ ಲಖಮಗೌಡರು ದತ್ತಕಬಂದರು. ಅವರಿಗೆ ಬಸವಪ್ರಭು ಊರ್ಫ ಬಾಬಾಸಾಹೇಬ ಎಂಬುವ ಸುಮಾರು ೫೦ ವರ್ಷದ ಒಬ್ಬ ಔರಸ ಮಗನಿರುವನು. ಒಟ್ಟಿಗೆ ಈಗಿನ ಗಾದಿಯ ಮಾಲಿಕನನ್ನು ಹಿಡಿದು ಸಂಸ್ಥಾನವನ್ನು ೧೯ ಜನರು ಆಳಿದರು. ೧೭ ನೆಯ ಲಖಮಗೌಡನು ದತ್ತಕ ಬಂದು ಈ ಹೊತ್ತಿಗೆ ೧೧೭ ವರ್ಷಗಳಾದವು. ಮತ್ತು ಅವನ ಹಿಂದಿನ ೧೬ ಜನರಲ್ಲಿ ಪ್ರತಿಯೊಬ್ಬರಿಗೆ ೨೫ ವರ್ಷ ಹಿಡಿದರೆ ಒಟ್ಟು ೪೦೦ ವರ್ಷಗಳು ಆಗುವವು. ಆದರಲ್ಲಿ ಮೇಲಿನ ೧೧೭ ವರ್ಷಗಳನ್ನು ಕೂಡಿಸಲಾಗಿ ೫೧೭ ವರ್ಷಗಳಾಗುವವು. ಆದರೆ ಮೂಲ ಪುರುಷನಿಂದ ಪ್ರಭುಬಸವಂತರಾಯನಿಂದ ಎರಡನೇಯವನಾದ ಇವ. ಗೌಡನ ವರೆಗೆ ಎಷ್ಟು ತಲೆಗಳಾದವು, ಎಂಬದರ ಮಾಹಿತಿಯು ಸಿಗುವದಿಲ್ಲೆಂದು ವಂಶಾವಳಿಯಲ್ಲಿಯೇ ಸ್ಪಷ್ಟವಾಗಿ ಹೇಳಿದೆ. ಈ ಎಲ್ಲ ಸಂಗತಿಗಳ ಮೇಲಿಂದ ಶ್ರೀ ಪ್ರಭುದೇವನು ತೇರದಾಳಕ್ಕೆ ಬಂದಕಾಲಕ್ಕೂ ಹಾಗು ಒಂಟಮುರಿ ಸಂಸ್ಥಾನದ ಸ್ಥಾಪನೆಯ ಕಾಲಕ್ಕೂ ವಿಶೇಷವಾಗಿ ಮೇಳ ಇದ್ದದ್ದು ಕಂಡು ಬರುತ್ತದೆ.

ಹುಕ್ಕೇರಿ ಪ್ರಾಂತದೊಳಗಿನ ಜನರನ್ನು ಉದ್ಧಾರ ಮಾಡಿದ ಮೇಲೆ ಪ್ರಭುದೇವನು ಹನಗಂಡಿ ಎಂಬ ಗ್ರಾಮಕ್ಕೆ ಬಂದು ಅಲ್ಲಿಯ ಜೈನ ಆರಸನಿಗೆ ಲಿಂಗಧಾರಣ ಮಾಡಿದ್ದರ ಮಾಹಿತಿಯು ನಿರಂಜನ ವಂಶರತ್ನಾಕರ ನಾಮಕ ಗ್ರಂಥದಲ್ಲಿ ಹೇಳಿದೆಯೆಂದು ಈ ಮೊದಲೇ ಹೇಳಿರುವೆವು. ಹನಗಂಡಿಯು ಸಾಂಗಲಿ ಸಂಸ್ಥಾನದೊಳಗಿನ ತೇರದಾಳ ತಾಲೂಕಿನಲ್ಲಿಯ ಒಂದು ಹಳ್ಳಿಯು. ಅಲ್ಲಿ ಈಗ್ಗೆ ಅರಸನ ಬದಲು ದಿಗಂಬರ ಜೈನ ಪಂಥದ ಒಬ್ಬ ದೇಸಾಯಿಯು ಇರುವನು. ಅವನ ವರ್ಷದ ಉತ್ಪನ್ನವು ಸುಮಾರು ೫೦ ಸಾವಿರವದೆ. ಶ್ರೀಮಂತ ಒಂಟಮುರಿ ಸರದೇಸಾಯಿಯರ ಮನೆತನಕ್ಕಿದ್ದಂತೆ ಶ್ರೀಮಂತ ಹನಗಂಡಿ ದೇಸಾಯರ ಮನೆತನಕ್ಕೂ ಈಗ್ಯೂ ಪ್ರಭುದೇವರ ಸಂಬಂಧವಿದ್ದದ್ದರಿಂದ ಆ ಮನೆತನದ ಆದ್ಯಂತವಾದ ಮಾಹಿತಿಯನ್ನು ಕೊಡುವದು ಬಹಳೇ ಅವಶ್ಯವದೆ. ನಿರಂಜನವಂಶರತ್ನಾಕರವೆಂಬ ಗ್ರಂಥದಲ್ಲಿ ಹೇಳಿದಂತೆ ಶ್ರೀಪ್ರಭುದೇವನಿಂದ ಯಾವ ಜೈನ ಅರಸನಿಗೆ ಹಿಂದಕ್ಕೆ ಲಿಂಗಧಾರಣವಾಯಿತೋ ಅವನ ಬಗ್ಗೆ ಮೊದಲು ವಿಚಾರ ಮಾಡುವದು ಆವಶ್ಯವದೆ. ಶಾಲಿವಾಹನ ಶಕದ ೪ ನೆಯ ಶತಮಾನದಿಂದ ಚಾಲುಕ್ಯ ವಂಶದ

ಅರಸರು ಮಹಾರಾಷ್ಟ್ರ ಹಾಗು ಕರ್ನಾಟಕ ಪ್ರಾಂತಗಳಲ್ಲಿ ರಾಜ್ಯವಾ ಳುತ್ತಿದ್ದರು. ಆ ಪ್ರಾಂತದೊಳಗೆ ಅವರ ಆಳಿಕೆಯು ಶಾಲಿವಾಹನ ಶಕದ ೧೧ ನೆಯ ಶತಮಾನದ ಅಂತ್ಯದ ವರೆಗೆ ಇತ್ತು. ಅವರ ರಾಜಧಾನಿಯು ವಾತಾಪಿಪುರ (ಬದಾಮಿ) ವಾಗಿತ್ತು. ಅದರಲ್ಲಿಯ ಪುಲಿಕೇಶಿಯೆಂಬ ಅರ ಸನು ಅಶೋಕನಂತೆ ಏಕಛತ್ರಾಧಿಪತಿಯಾಗಿದ್ದನು. ಅವನ ರಾಜ್ಯಭಾ ಷೆಯು ಕನ್ನಡವಾಗಿತ್ತು; (ಇಂಡಿಯನ್ ಆ್ಯಂಟಿ ಕ್ವಾಲ್ಯುಯಾವ್ ೫, ನಂಬರ ಎಲ್ ೧೧, ಪುಟಗಳು ೬೪ರಿಂದ ೭೧ ರ ವರೆಗೆ.) ಗಂಗೆಯಿಂದ ಸೇತು ವಿನ ವರೆಗೆ ಇವನ ರಾಜ್ಯದ ವಿಸ್ತಾರವಿದ್ದು ಇವನ ಧ್ವಜವು ಗಂಗಾ ಹಾಗು ಯಮುನಾ ನದಿಗಳ ವರೆಗೆ ಮೆರೆಯುತ್ತಿತ್ತು. ಚಾಲುಕ್ಯ ಅರ ಸರು ಶಿವೋಪಾಸಕರಿದ್ದರು; (ಸರ್ ವಾಲ್ಟರ ಇಲಿಯಟ್ಟನ ಪೇಪರ) ಬೇಕಾ ದವರಿಗೆ ಬೇಕಾದ ಧರ್ಮವನ್ನು ಸ್ವೀಕಾರ ಮಾಡಲಿಕ್ಕೆ ರಾಜರ ನಿರ್ಬಂ ಧವಿದ್ದಿದ್ದಿಲ್ಲ. ಕಲ್ಯಾಣ (ನಿಜಾಮ ಇಲಾಖಾ) ದ ಪಶ್ಚಿಮ ಚಾಲುಕ್ಯರ ಆಳಿಕೆಯು ಈಗಿನ ಎಲ್ಲ ಮಹಾರಾಷ್ಟ್ರದ ಮೇಲೆ ಮಾತ್ರ ಇತ್ತು. ಅದರ ಮೇರೆಗಳು ಉತ್ತರಕ್ಕೆ ನರ್ಮದಾನದಿ, ಪಶ್ಚಿಮಕ್ಕೆ ಸಮುದ್ರ, ಆಗ್ನೇಯಕ್ಕೆ ಕರ್ನಾಟಕ, ನೈರುತ್ಯಕ್ಕೆ ನಗರ ಹಾಗು ಸೊಂದಾ ಪ್ರಾಂತಗಳು ಮತ್ತು ಕೃಷ್ಣಾ ಹಾಗು ತುಂಗಭದ್ರಾ ನದಿಗಳು, ಪೂರ್ವಕ್ಕೆ ಪೂರ್ವಘಟ್ಟ. ಈ ಪಶ್ಚಿಮ ಚಾಲುಕ್ಯರ ರಾಜಧಾನಿಯು ಕಲ್ಯಾಣವು. ಇವರೊಳಗಿನ ಳನೆಯ ವಿಕ್ರಮಾದಿತ್ಯ (ತ್ರಿಭುವನಮಲ್ಲ) ನೆಂಬವನು ಕ್ರಿ. ಶ. ೧೦೭೬ ರಿಂದ ೧೧೨೬ ರ ವರೆಗೆ ರಾಜ್ಯವಾಳಿದನು. ಇವನು ಬಹಳೇ ಪರಾಕ್ರಮಿಯಾಗಿದ್ದು ಇವನ ಕೈಕೆಳಗೆ (೧) ಕಾಲಿಂಜರಪುರದ ಕಲಚೂರ್ಯ ಅಥವಾ ಕಲ ಭೂರ್ಯ (೨) ಸವದತ್ತಿ (ಸುಗಂಧವತಿ), ಬೆಳಗಾವ (ವೇಣುಗ್ರಾಮ) ಹಾಗು ರಾಯಬಾಗದ ರಟ್ಟರಾಜರು (೩) ಬನವಾಸಿಯ ಮತ್ತು ಗೋ ವೆಯ ಕದಂಬ ಅರಸರು (೪) ಕೊಲ್ಹಾಪುರ ಮತ್ತು ಕರ್ಹಾಟ (ಕರ್ಹಾಡ) ದಶಿಲಾಹರರು ಹೀಗೆ ಮುಖ್ಯವಾಗಿ ನಾಲ್ಕು ಮಹಾಮಂಡಲೇಶ್ವರರಿದ್ದರು. ಇವರೆಲ್ಲರು ಜೈನಮತಾನುಯಾಯಿಗಳಾಗಿದ್ದರು. ಇವರಿಗೂ ಮತ್ತು ಚಾಲುಕ್ಯರಿಗೂ ಊಟವ್ಯವಹಾರಗಳಾಗುತ್ತಿದ್ದು ಹೆಣ್ಣುಗಂಡ ಸಹ ನಡೆ ಯುತ್ತಿದ್ದವು. ಉದಾ: ವಿಕ್ರಮನು ಚೋಳರಾಜನ ಮಗಳ ಕೂಡ ದೊಡ್ಡ ಸಮಾರಂಭದಿಂದ ಲಗ್ನ ಮಾಡಿಕೊಂಡನು. (ಬಿಲ್ಹಣಕವಿಕೃತ ವಿಕ್ರ ಮಾಂಕನ ಚರಿತ್ರ ಸರ್ಗ ೫, ಶ್ಲೋಕ ೧೮--೮೯, ಸರ್ಗ ೬, ಶ್ಲೋಕ ೧--೨೫ ಸರ್ಗ ೭, ಶ್ಲೋಕ ೭--೧೪ ಸ್ವಯಂವರ ವರ್ಣನೆ.) ಕರ್ಹಾಡ

ದೇಶದ ಶಿಲಾಹಾರ ರಾಜನಿಗೆ ಚಂದ್ರಲೇಖಾಯಿ ಎಂಬ ಹೆಸರಿನ ಒಬ್ಬ ಅತಿ ರೂಪವತಿ ಮಗಳಿದ್ದಳು. ಅವಳು ವಿಕ್ರಮನನ್ನು ವರಿಸಿದಳು. ಈ ವಿಕ್ರಮರಾಜನು ಕ್ರಿ. ಶ. ೧೧೫೬ ರಿಂದ ೧೧೬೭ ರ ವರೆಗೆ ರಾಜ್ಯವಾಳಿದನು. ವಿಕ್ರಮನ ಮಗಳಾದ ಮೈಲಾಲದೇವಿಯನ್ನು ಗೋವೆಯ ಜಯಕೇಶಿ ಕದಂಬನೆಂಬ ಜೈನ ರಾಜನಿಗೆ ಕೊಟ್ಟಿತ್ತು. ಚಾಲುಕ್ಯವಂಶದ ಅರಸರು ವಿಕ್ರಮಾದಿತ್ಯನ ಕಾಲದಲ್ಲಿ ವೈಭವದ ಶಿಖರಕ್ಕೆ ಏರಿದ್ದರು. ಅನಂತರ ಮೆಲ್ಲಮೆಲ್ಲನೆ ಅವರ ಹ್ರಾಸಕ್ಕೆ ಪ್ರಾರಂಭವಾಯಿತು. ಮುಂದಿನ ಅರಸರು ದುರ್ಬಲರಾದರು. ಕಲಭೂರ್ಯ ವಂಶದೊಳಗಿನ ಬಿಜ್ಜಳನೆಂಬ ಒಬ್ಬ ಮಹಾ ಪರಾಕ್ರಮಿ ಪುರುಷನಿಗೆ ಚಾಲುಕ್ಯರ ಸೈನ್ಯದ ಆಧಿಪತ್ಯವು ದೊರೆಯಿತು. ಈ ಸಂಧಿಯನ್ನು ಸಾಧಿಸಿ ಅವನು ರಾಜನನ್ನು ಪದಚ್ಯುತ ಮಾಡಿದನು. ಮರಾಟರ ಆಳಿಕೆಯಲ್ಲಿ ಪೇಶ್ವೆಯರು ತಾವು ಬಹಿರಂಗವಾಗಿ ಸಾತಾರೆಯವರ ನವಕರರೆಂದು ಅಂದುಕೊಳ್ಳುವಂತೆ ಬಿಜ್ಜಳನು ಕೆಲವು ಕಾಲದ ವರೆಗೆ ಮಹಾಮಂಡಲೇಶ್ವರನೆಂದು ಹೇಳಿಕೊಳ್ಳುತ್ತ ಕಡೆಗೆ ತಾನೇ ಏಕಛತ್ರಾಧಿಕಾರಿಯೆಂದು ಜಾಹೀರನಾಮೆಯನ್ನು ಪ್ರಸಿದ್ಧಮಾಡಿದನು. ಈ ಪ್ರತಿಯೊಬ್ಬ ಮಹಾಮಂಡಳೇಶ್ವರನ ಕೈಕೆಳಗೆ ಸಣ್ಣ ದೊಡ್ಡ ಅನೇಕ ಮಾಂಡಲೀಕ ಅರಸರು ಇರುತ್ತಿದ್ದರು. ಉದಾಹರಣಾರ್ಥವಾಗಿ ಬಿಜ್ಜಳನ ಕೈಕೆಳಗೆ ಕ್ರಿ. ಶ. ೧೧೬೧ ರಲ್ಲಿ ಬರ್ಮರಸನೆಂಬವನು ಬನವಾಸಿಯಲ್ಲಿ ರಾಜ್ಯವಾಳುತ್ತಿದ್ದನು. ಶ್ರೀಧರನೆಂಬವನು ಅಣ್ಣೀಗೇರಿಯಲ್ಲಿ ರಾಜ್ಯವಾಳುತ್ತಿದ್ದನು. ಕಾಶಪ್ಪೈ ಎಂಬವನು ಪಾನಗಲ್ಲ [ಹಾನಗಲ್ಲ] ೫೦೦ ರ ಮೇಲೆ ರಾಜ್ಯವಾಳುತ್ತಿದ್ದನು. ಮೊದಲಿಗೆ ಬಿಜ್ಜಳನ ರಾಜಧಾನಿಯು ಅಣ್ಣಿಗೇರಿಯಾಗಿತ್ತು. ಆ ಮೇಲೆ ಕಲ್ಯಾಣವಾಯಿತು. ಈ ಸಣ್ಣ ದೊಡ್ಡ ಮಾಂಡಲಿಕ ಅರಸರೇ ಅನೇಕ ಧರ್ಮಾರ್ಥ ದೇಣಿಗೆಗಳನ್ನು ಕೊಟ್ಟು ಅವುಗಳಿಗೆ ತಮ್ಮ ರಾಜರ ಕಡೆಯಿಂದ ಸಮ್ಮತಿ ಕೊಡಿಸುತ್ತಿದ್ದರು. ಉದಾಹರಣಾರ್ಥವಾಗಿ ಬೆಳಗಾವಿಯ ರಟ್ಟವಂಶದೊಳಗಿನ ೪ ನೆಯ ಕಾರ್ತವೀರ್ಯನು (ಶಕೆ ೧೧೨೭--೧೧೪೯) ಶಾಲಿವಾಹನ ಶಕೆ ೧೧೨೭ ರಲ್ಲಿ ಸಿದ್ಧನ ಕಲ್ಪವಲ್ಲಿ (ಕಲ್ಹೊಳಿ ಗೋಕಾಕ ತಾಲೂಕ) ಯಲ್ಲಿಯ ಒಂದು ಜಿನಾಲಯಕ್ಕೆ ದಾನಕೊಟ್ಟಿರುವನು (ಆರ್. ಎ. ಎಸ್. ವ್ಹಾಲ್ಯುಮ್ ೧೦ ನಂಬರ ೨೯ ಪುಟ ೨೨೦ ರಿಂದ ೨೬೯ ರ ವರೆಗೆ) ಈ ಅರಸನು ಶಾಲಿವಾಹನ ಶಕೆ ೧೧೨೪ ರಲ್ಲಿಯೂ ರಾಜ್ಯವಾಳುತ್ತಿದ್ದನೆಂದು ಒಂದು ಶಿಲಾಶಾಸನದಲ್ಲಿ ಹೇಳಿದೆ (ಮೋಜರ ಗ್ರಾಹಮ

ರವರ ರಿಪೋರ್ಟ್ಸ್ ಪುಟ ೪೭೫—೪೧೬ ವರೆಗೆ) ಅದರಂತೆಯೇ ಈ ಕಾರ್ತವೀರ್ಯನ ಆಜ್ಞಾನುಸಾರವಾಗಿ ನೇಸರಗಿ ಪರಗಣೆಯು ನಾಯಿಕರು ಶಾಲಿವಾಹನ ಶಕೆ ೧೧೪೧ ರಲ್ಲಿ ಕೆಲವು ದೇಣಿಗೆ ಕೊಟ್ಟದ್ದರ ಉಲ್ಲೇಖವದೆ (ಆರ್. ಎ. ಎಸ್. ವ್ಹಾಲ್ಯುಮ್ ೧೦ ನಂಬರ ೨೯ ಪುಟ ೨೪೦—೨೫೯ ರ ವರೆಗೆ) ಇದರ ಮೇಲಿಂದ ಆ ಕಾಲದಲ್ಲಿಯೂ ಕೂಡ ಪರಗಣೇ ನಾಯಿಕೀ ವತನದಾರರು ಇದ್ದದ್ದು ಸಿದ್ಧವಾಗುತ್ತದೆ. ಅದರಂತೆ ಶಾಲಿವಾಹನ ಶಕೆ ೮೪೫ (ಕ್ರಿ. ಶ. ೯೨೩) ರಲ್ಲಿ ರಾಷ್ಟ್ರಕೂಟ ವಂಶದ ವಡ್ಡಿಗದೇವನ ಸಾಮಂತರಾದ ಸೈಂದಕ ವಂಶದೊಳಗಿನ ವಿಜಯಾನಂದನ ಮಗನಾದ ಇಂದ್ರನಂದಿಯೆಂಬವನು ಜಂಬುಖಂಡಿಯಲ್ಲಿ ರಾಜ್ಯವಾಳುವಾಗ ಜಳಾರ (ಮುದುರಖಂಡಿ) ಎಂಬ ಊರಲ್ಲಿ ಜಂಬುಖಂಡಿಯ ಗಣದ ಆಚಾರ್ಯನಾದ ನಂದಾಚಾರ್ಯನಿಗೆ ನಿತ್ಯ ಜಿನಪೂಜೆಯು ಸಲುವಾಗಿ ಭೂಮಿಯನ್ನು ಇನಾಮು ಕೊಟ್ಟಿರುವನು. ಜಂಬುಖಂಡಿಯು ಇಂದ್ರನಂದೀ ರಾಜನ ವಶದಲ್ಲಿ ಆ ಕಾಲಕ್ಕೆ ಎಪ್ಪತ್ತು ಗ್ರಾಮಗಳಿದ್ದವು (ರನ್ನಕವಿಕೃತ ಅಜಿತಪುರಾಣ) ಇದರೊಳಗಿನ ಖಂಡಿ ಈ ಶಬ್ದವು ಗ್ರಾಮವಾಚಕವದೆ. ಉದಾಹರಣಾರ್ಥವಾಗಿ ಜಂಬುಖಂಡಿ, ಮುದರಖಂಡಿ, ಹನಗಂಡಿ, ಬಾಡಗಂಡಿ ಮುಂತಾದವುಗಳು ೪ ನೆಯ ಚಾಲುಕ್ಯಚಕ್ರವರ್ತಿಯಾದ ವಿಕ್ರಮಾದಿತ್ಯ (ತ್ರಿಭುವನಮಲ್ಲ) ನ ಮಾಂಡಲಿಕ ರಾಜನಿಂದ ಗೊಂಕದೇವ ಅರಸು ಎಂಬವನು ತನಗೂ ಸಾಮಂತನಾದ ನಿಂಬರಸ ಕಾಮದೇವನಿಗೂ ಗುರುವಾದ ಮಂಡಲಾಚಾರ್ಯ ಕುನಚಂದ್ರಪಂಡಿತನ ಶಿಷ್ಯನಾದ ಕೊಲ್ಹಾಪುರದ ಮಾಘನಂದಿ ಸೈಂಧಾಂತಿಕನಿಗೆ ಶಾಲಿವಾಹನ ಶಕೆ ೧೦೪೫ ಶೋಭನಕೃತ ಸಂವತ್ಸರ ವೈಶಾಖ ಶುದ್ಧ ಪೌರ್ಣಿಮೆ ಬೃಹಸ್ಪತಿವಾರದಲ್ಲಿ ಎಂದರೆ ಕ್ರಿ. ಶ. ೧೧೨೩ ಎಪ್ರೀಲ ತಾರೀಖು ೧೨ ಗುರುವಾರ ದಿವಸ ಭೂದಾನ ಕೊಟ್ಟ ಈ ಮಾಘನಂದಿ ಸೈಂಧಾಂತಿಕನ ಶಿಷ್ಯರಾದ ಕನಕನಂದಿ, ಶೃತಕೀರ್ತಿ, ತ್ರೈವಿದ್ಯ, ಚಂದ್ರಕೀರ್ತಿ, ಪ್ರಭಾಚಂದ್ರ, ವರ್ಧಮಾನಮುನಿ ಮುಂತಾದವರನ್ನು ಹೊಗಳಿರುವರು. ತೇರದಾಳದ ಒಂದು ಶಿಲಾಶಾಸನದಲ್ಲಿ ಉಂಟು. (ಇಂಡಿಯನ್ ಆ್ಯಂಟಿಕ್ವೆರಿ ವ್ಹಾಲ್ಯುಮ್ ೧೪, ಪುಟ ೧೪) ಇಲ್ಲಿ ಸ್ತುತಿಮಾಡಿದ ಮಾಘನಂದಿಯೂ ಶ್ರವಣಬೆಳಗುಳದ ೪೦ ನೆಯ ಶಿಲಾಶಾಸನದಲ್ಲಿಯು ಕುಲಚಂದ್ರನ ಶಿಷ್ಯನೆಂದೂ ಕೊಲ್ಹಾಪುರ ತೀರ್ಥಕೃತಯೆಂದೂ ವರ್ಣನ ಮಾಡಿದ ಮಾಘನಂದಿಯೂ ಒಬ್ಬನೇಯಾಗಿರುವನು. ಈ ಶಿಲಾಲೇಖ

ದಲ್ಲಿ ಹೇಳಿದ ಸಾಮಂತನಾದ ನಿಂಬದೇವನೂ ಕಾಮದೇವ ಮತ್ತು ಕನಕನಂದಿ ಎಂಬ ಮುನಿಗಳೂ ತೇರದಾಳದ ಶಿಲಾಲೇಖದಲ್ಲಿ ಹೇಳಿದ ನಿಂಬದೇವನೂ ಕಾಮದೇವ ಮತ್ತು ಕನಕನಂದಿ ಮುಂತಾದವರೂ ಒಂದೇಯಾಗಿರುವರು. ಆದುದರಿಂದ ಈ ಮಾಘನಂದಿಯ ವಿಷಯವಾಗಿ ಸ್ವಲ್ಪ ಹೆಚ್ಚು ವಿಚಾರ ಮಾಡುವದು ಬಹಳೇ ಅವಶ್ಯವದೆ. ಜೈನ ಗುರುಗಳ ದೊಡ್ಡ ಸಮುದಾಯಕ್ಕೆ ಆ ಜನರು ಗುಚ್ಛೆಯೆಂದೆನ್ನುವರು. ಈ ಗುಚ್ಛದ ಅವಾಂತರ ಭೇದಕ್ಕೆ ಎಂದರೆ ಜೈನ ಗುರುಗಳ ಸಣ್ಣ ಸಮುದಾಯಕ್ಕೆ ಬಳಿ ಇಲ್ಲವೆ ವಳಿ ಯೆಂದೆನ್ನುವರು. ಒಂದು ಗುಚ್ಛದಲ್ಲಿ ಅನೇಕ ಬಳಿಗಳಿರುತ್ತವೆ. ಉದಾಹರಣಾರ್ಥವಾಗಿ ೧ ಹನಸೋಗೆಯ ಬಳಿ, ೨ ಇಂಗಳೇಶ್ವರದಬಳಿ, ೩ ವಡ್ಡಿಗದೇವರಬಳಿ ಇತ್ಯಾದಿ.

ಇಂಗಳೇಶ್ವರ ಬಳಿಯ (ಜಿಲ್ಹಾ ವಿಜಾಪೂರ ತಾಲೂಕ ಬಾಗೇವಾಡಿ) ಗುರುವು ಅಲ್ಲಿಯ ಚಂದ್ರಪ್ರಭಾ ಜಿನಾಲಯದಲ್ಲಿ ಪೂಜೆಯನ್ನು ಮಾಡಿಕೊಂಡು ಅದರ ಕೈಕೆಳಗೆ ಇದ್ದ ಇತರ ಬಸ್ತಿಗಳ ಹಾಗು ಅವುಗಳಿಗೆ ಇನಾಮವಾಗಿದ್ದ ಭೂಮಿಗಳ ವ್ಯವಸ್ಥೆಯನ್ನು ತನ್ನ ಶಿಷ್ಯರ ಕಡೆಯಿಂದ ಅವುಗಳ ಮೇಲ್ವಿಚಾರಣೆಯನ್ನು ಮಾಡುತ್ತಿದ್ದನು. ಈ ಗುರುಪರಂಪರೆಯು ಶ್ರವಣಬೆಳಗುಳದ ೪೦ ನೆಯ ಶಿಲಾಲೇಖದಲ್ಲಿ ಹೇಳಿದೆ. ಇವನು ಮಹಾಮಂಡಲಾಚಾರ್ಯನಾಗಿದ್ದರು. ಈ ಇಂಗಳೇಶ್ವರ ಬಳಿಯ ಗುರುಗಳಲ್ಲಿ ಒಬ್ಬನಾದ ಮಾಘನಂದಿಯ ಶಿಷ್ಯನಾದ ಮಹಾ ಸಾಮಂತ ನಿಂಬದೇವನು ಕೊಲ್ಹಾಪುರದಲ್ಲಿ ಕಟ್ಟಿದ ರೂಪನಾರಾಯಣ ಬಸ್ತಿಗೆ ಒಡೆಯನಾಗಿ ಅಲ್ಲಿ ಒಂದು ತೀರ್ಥ ಎಂದರೆ ಪೀಠವನ್ನು ಸ್ಥಾಪಿಸಿದನು. ಈ ಮಾಘನಂದಿಯ ಶಿಷ್ಯರಲ್ಲಿ ಅನೇಕರು ಅಲ್ಲಲ್ಲಿಗೆ ಬಸ್ತಿಗಳನ್ನು ಕಟ್ಟಿಸಿ ಅವುಗಳನ್ನು ಈ ರೂಪನಾರಾಯಣನ ಬಸ್ತಿಗೆ ಅಧೀನ ಮಾಡಿದರು. ಈಗ್ಗೆ ಈ ರೂಪನಾರಾಯಣ ಬಸ್ತಿಯಲ್ಲಿಯೇ ಕೊಲ್ಹಾಪುರದ ಶ್ರೀ. ಮಹಾಲಕ್ಷ್ಮಿಯ ವಿಗ್ರಹವದೆ. ಈ ಬಸ್ತಿಯ ಹಾಗು ಇದಕ್ಕೆ ಇರುವ ಇನಾಮ ಭೂಮಿಗಳ ಮೇಲ್ವಿಚಾರಣೆಯು ಈ ಮಾಘನಂದಿಗೆ ಮತ್ತು ಆತನ ನಂತರ ಆ ಪೀಠಕ್ಕೆ ಬಂದ ಶಿಷ್ಯ ಪ್ರತಿಶಿಷ್ಯರ ಕಡೆಗೆ ಬಂದದರಿಂದ ಇವರಾದರೂ ಮಹಾಮಂಡಲಾಚಾರರೇ ಆದರು, (ಶ್ರವಣಬೆಳಗುಳ ೩೯ ನೇ ಶಾಸನ) ಇಂಗಳೇಶ್ವರ ಬಳಿಯ ಗುರುವಿನಿಂದ ಇವರು ಬೇರೆಯಾದದ್ದರಿಂದ ಇವರು ತಮಗೆ ಮೂಲಸಂಘದ ದೇಶೀಯ ಗಣದ ಪುಸ್ತಕ ಗುಚ್ಛದ ಇಂಗಳೇ

ಶ್ವರ ಬಳಿಯ ಕೊಲ್ಹಾಪುರದ ಸಾಮಂತ ಬಸ್ತಿಯ ಪ್ರತಿಬದ್ಧ ಮಾಘನಂದಿ ಮುಂತಾದವರು ಎಂದು ಅಂದುಕೊಳ್ಳಹತ್ತಿದರು. ಈ ಪೀಠದ ಸ್ವಾಮಿಗಳು ಈಗ್ಗೆ ಕೊಲ್ಹಾಪೂರ ಸಂಸ್ಥಾನದೊಳಗಿನ ಶಿರೋಳ ಪೇಠೆಯ ನಾಂದಣಿಯಲ್ಲಿ ಮಠ ಮಾಡಿಕೊಂಡು ಇರುವರು. ಇವರ ದೇಖರೇಖಿ ಕೆಳಗೆ ತೇರದಾಳದ ಗೊಂಕ ಬಸ್ತಿಯು ಹಾಗು ಅದಕ್ಕೆ ಇರುವ ಇನಾಮು ಭೂಮಿಗಳ ವ್ಯವಸ್ಥೆಯು ಈಗ್ಗೂ ಇವರ ಅಡಕಳತೆಯಲ್ಲಿ ಇರುವವು. ಇದರ ಮೇಲಿಂದ ಸದ್ಯದ ನಾಂದಣೀಮಠದ ಜೈನ ಗುರುಗಳು ಪೂರ್ವದ ಕೊಲ್ಹಾಪುರ ಬಸ್ತಿಯ ಗುರುಪರಂಪರೆಯವರೆಂದು ಅನ್ನಲು ತಿಲಮಾತ್ರವೂ ಸಂಶಯವಿಲ್ಲ. ಈ ನಾಂದಣಿಯ ಮಠದ ಶಿಷ್ಯರೂ ತೇರದಾಳದ ಗೊಂಕ ಬಸ್ತಿಗೆ ನಡೆದುಕೊಳ್ಳುವವರೂ ದಿಗಂಬರ ಜೈನ ಪಂಥಾನುಯಾಯಿಗಳೂ ಆದ ಸದ್ಯದ ಮೆಹರ್ಬಾನ ಶ್ರೀಮಂತ ಪಾಯಪ್ಪಾ ಊರ್ಫ ಅಪ್ಪಾ ಸಾಹೇಬ ಜಕ್ಕಪ್ಪದೇಸಾಯಿ, ಪರಗಣೆ ತೆರದಾಳ ಠಾಣೆ ಹನಗಂಡಿ, ಇವರು ಆ ಗೊಂಕದೇವ ಅರಸನ ವಂಶಜರು ಎಂಬದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ತೇರದಾಳದೊಳಗಿನ ಹಳೇ ಬಸ್ತಿಗೆ ಗೊಂಕ ಬಸ್ತಿಯೆಂದು ಈಗ್ಗೂ ಜನರು ಅನ್ನುವರು. ಗೊಂಕದೇವ ಅರಸನು ಈ ಗೊಂಕ ಬಸ್ತಿಯನ್ನು ಇತರರಂತೆ ಕೊಲ್ಹಾಪುರದ ರೂಪನಾರಾಯಣ ಬಸ್ತಿಯ ಅಧೀನ ಮಾಡಿರಬಹುದು ೪ ನೆಯ ಚಾಲುಕ್ಯವಿಕ್ರಮಾದಿತ್ಯನ (ತ್ರಿಭುವನಮಲ್ಲ) ಸಾಮಂತನಾದ ಗೊಂಕದೇವನು ತೇರದಾಳದಲ್ಲಿ ತಾನು ಸ್ಥಾಪಿಸಿದ ನೇಮಿನಾಥ ದೇವರಿಗೆ ಭೂದಾನ ಕೊಟ್ಟದ್ದರ ವರ್ಣನೆಯು ತೇರದಾಳದ ಅದೇ ಬಸ್ತಿಯಲ್ಲಿಯ ಶಾಸನದಲ್ಲಿ ಹೇಳಿದೆಯೆಂದು ಮೇಲೆ ನಾವು ಹೇಳಿರುವೆವು. ಅದೇ ಶಾಸನದ ಕಡೆಯಲ್ಲಿ ಆತನ ದಂಡನಾಯಕ (ಸಚಿವ) ನಾದ ತೇಜಮನ ಮಗನಾದ ಭಾಯಿದೇವನು ಕ್ರಿ. ಶ. ೧೧೮೭ ರ ಸುಮಾರಿನಲ್ಲಿ ನೇಮಿನಾಥ ದೇವರಿಗೆ ಭೂದಾನ ಕೊಟ್ಟದ್ದರ ವರ್ಣನೆಯು ಇರುವದು. ಈ ಶಾಸನದಲ್ಲಿ ತೇರಬಾಳಕ್ಕೆ ತೇರಿದಾಳಯೆಂದು ಅಂದಿರುವರು. ಈ ೪ ನೆಯ ಚಾಲುಕ್ಯ ವಿಕ್ರಮನಿಗೆ ತ್ರಿಭುವನಮಲ್ಲ ಎಂಬ ಬಿರುದಿನ ಹೊರ್ತು ಮಂಡಳೇಶ್ವರ ಕಳಭೈಕಕೇಸರಿ, ನರೇಂದ್ರಶಿಖಾಮಣಿ ಮುಂತಾದ ಬಿರುದುಗಳು ಇದ್ದದ್ದರ ವರ್ಣನೆಯು ಕ್ರಿ. ಶ. ೧೦೭೭ ರ ಸುಮಾರಿನಲ್ಲಿಯ ನಗರದ ೩೫ ನೆಯ ಶಾಸನದಲ್ಲಿರುವದು. ಇದರ ಮೇಲಿಂದ ನರೇಂದ್ರ (ರಾಜ) ಎಂಬ ಬಿರುದು ಮಾಂಡಲೀಕ ಅರಸರಿಗೆ ಹಚ್ಚುತ್ತಿದ್ದರೆಂದು ಕಂಡುಬರುತ್ತದೆ. ಶ್ರೀಮಂತ

ಮಗೆಪ್ಪಾ ದೇಸಾಯಿ ( ಮಗಿಯ ನರೇಂದ್ರ ಕವಿ ) ಇವನು ಗೊಂಕದೇವ ಅರಸನ ವಂಶಜನಿದ್ದದರಿಂದ ತನಗೆ ಮಗಿಯ ನರೇಂದ್ರ ಎಂದು ಸಂಬೋಧಿಸಿಕೊಂಡದ್ದು ನಿಜವೆಂದು ತೋರುತ್ತದೆ. ಗೊಂಕದೇವ ಅರಸನು ಈ ಹನಗಂಡೀ ಸಂಸ್ಥಾನದ ಮೂಲಪುರುಷನಿದ್ದು ತಾರೀಖು ೫-೯-೧೮೫೩ ಇಸ್ವಿ ದಿವಸ ಆಗಿನ ದೇಸಾಯಿಯು ಈ ಸಂಸ್ಥಾನದ ಮೂಲಪುರುಷನು ಕರಿಬಸವಗೌಡನೆಂದು ಬರೆದು ಅದರ ವಂಶಾವಳಿಯನ್ನು ಕೆಳಗಿನಂತೆ ಇನಾಮು ಕಮೀಟಿಗೆ ಹಾಜರ ಮಾಡಿರುವರು. ಈ ದೇಸಗತಿಯಿಂದಲೇ ಮುಂದೆ ತೇರದಾಳದ ನಾಡಗೌಡರು ಬೇರೆಯಾದದ್ದರಿಂದ ಈ ಎರಡೂ ಮನೆತನಗಳ ವಂಶಾವಳಿಗಳನ್ನು ಇದರಡಿಯಲ್ಲಿ ಕೊಟ್ಟಿರುವೆವು. ದೇಸಗತಿಯ ವಂಶಾವಳಿಃ— ೧. ಕರಿಬಸವಗೌಡಾ ೨. ಕಲಗೌಡಾ ೩. ಕೃಷ್ಣಗೌಡಾ ೪. ಜಖಗೌಡಾ ೫. ಯಾದಗೌಡಾ ೬. ಮಘೆಪ್ಪಾ ೭. ಪಾಸಪ್ಪಾ ೮. ಜಖ್ಖಪ್ಪಾ ೯. ಮಘೆಪ್ಪಾ ೧೦. ಅಲ್ಲಪ್ಪಾ ೧೧ ಜಖ್ಖಪ್ಪಾ ೧೨ ಪಾಯಪ್ಪಾ (ಜೀವಂತ) ವಯಾ ವರ್ಷ ೬೫. ಪ್ರಬುದ್ಧ ಮಕ್ಕಳು, ಅಲ್ಲಪ್ಪಾ, ಮಗೆಪ್ಪಾ, ಪರಪ್ಪಾ. ನಾಡಗೌಡರ ವಂಶಾವಳಿಃ— ೧. ಕರಿಬಸವಗೌಡಾ ೨. ಜಿನಗೌಡಾ ೩. ಮಘೆಪ್ಪಾ ೪. ಭೋಮಪ್ಪಾ ೫. ಸಾಬಗೌಡಾ ೬. ಹಣಮಗೌಡಾ ೭. ರಾಯಗೌಡಾ ೮. ವೀರಗೌಡಾ ೯. ದರೀಗೌಡಾ ೧೦. ಪಾಯಗೌಡಾ ೧೧. ಸಗುಣಪ್ಪಾ ೧೨. ಪಾಯಪ್ಪಾ ೧೩. ಸಗುಣಪ್ಪಾ ೧೪. ಪಾಯಪ್ಪಾ (ಅಪ್ಪಾಸಾಹೇಬ) ೧೫. ಸಗುಣಪ್ಪಾ (ಅಣ್ಣಾಸಾಹೇಬ) ೧೬. ಪಾಯಪ್ಪಾ (ಅಜ್ಞಾನ). ದೇಸಗತಿಯ ಮತ್ತು ನಾಡಗೌಡಕಿಯ ಕಾಗದ-ಪತ್ರಗಳ ಮೇಲಿಂದಾ ನೋಡಲಾಗಿ ದೇಸಗತಿಯೊಳಗಿನ ೩ ನೆಯ ಪುರುಷ ಜಖ್ಖಪ್ಪಾ ಹಾಗು ನಾಡಗೌಡರ ಮನೆತನದೊಳಗಿನ ೪ ನೆಯ ಪುರುಷ ದರೀಗೌಡಾ ಈ ಉಭಯತರ ಹೆಸರುಗಳನ್ನು ಮೇಲಿನ ವಂಶಾವಳಿಗಳಲ್ಲಿ ಕಾಣಿಸಿಲ್ಲ. ಇದು ದೃಷ್ಟಿ ದೋಷವಿರಬಹುದು. ಈ ಉಭಯತರ ಹೆಸರುಗಳನ್ನು ಆ ಆ ವಂಶಾವಳಿಗಳಲ್ಲಿ ಸಮಾವೇಶ ಮಾಡಿದರೆ ದೇಸಗತಿಯ ಗಾದಿಯ ಮೇಲೆ ೧೩ ಮಂದಿ ಮತ್ತು ನಾಡಗೌಡರ ಗಾದಿಯ ಮೇಲೆ ೧೬ ಮಂದಿ ಆಗುವರು. ಈ ವಂಶಾವಳಿಯೊಳಗಿನ ಪ್ರತಿಯೊಂದು ಹೆಸರಿನ ಮುಂದಿನ ಗೌಡಾ ಎಂಬ ಶಬ್ದವು ಗ್ರಾಮಣಿ ಎಂಬುದರ ತದ್ಭವವದೆ. ಅಥವಾ ಗ್ರಾಮ+ಮುಂಡ= ಗ್ರಾಮಮುಂಡ=ಗಾಮುಂಡ=ಗಾವುಂಡ=ಗೌಂಡ=ಗೌಡ ಹೀಗೆ ಉಂಟಾ

ಗಿರಬಹುದು. ಶ್ರೀಬಸವೇಶ್ವರನ ತಂದೆಗೆ ಗ್ರಾಮಣೀಮಣೀ ಮಾದರಸ ನೆಂದು ಅನ್ನುತ್ತಿದ್ದರು. ಇದರ ಮೇಲಿಂದ ಗೌಡಾ ಎಂಬ ಶಬ್ದವು ಅರಸು ಎಂಬ ಶಬ್ದದ ಬದಲಾಗಿ ಹಿಂದಿನ ಕಾಲದಲ್ಲಿ ಉಪಯೋಗ ಮಾಡುತ್ತಿದ್ದರೆಂದು ಕಂಡುಬರುತ್ತದೆ.

ಗೊಂಕದೇವ ಅರಸನಾದ ಕರಿಬಸವಗೌಡನ ವರೆಗೆ ಎಷ್ಟು ತಲೆಗ ಳಾದವು ತಿಳಿಯಲು ಮಾರ್ಗವಿಲ್ಲ. ಏಕೆಂದರೆ ಹಿಂದಿನ ಎಷ್ಟೋ ದೊಡ್ಡ ದೊಡ್ಡ ರಾಜಮಹಾರಾಜರ ವಂಶಾವಳಿಗಳು ಸುಸಂಗತವಾಗಿ ದೊರೆ ಯುವದಿಲ್ಲ. ಅಂದ ಮೇಲೆ ಇಂಥ ಚಿಕ್ಕ ಪುಟ್ಟ ಮಾಂಡಲಿಕರ ವಂಶಾ ವಳಿಯು ಸಿಗುವದು ಬಹಳೇ ದುಸ್ತರವದೆ.

ಇನ್ನು ಹನಗಂಡೀ ಅರಸನಿಗೆ ಶ್ರೀ ಪ್ರಭುದೇವನು ಲಿಂಗಧಾರಣ ಮಾಡಿದ್ದರ ಸಂಗತಿಯು ನಿರಂಜನ ವಂಶರತ್ನಾಕರದಲ್ಲಿ ಹೇಳಿದೆಯೆಂದು ನಾವು ಹಿಂದೆಯೇ ಹೇಳಿರುವೆವು. ಲಿಂಗಧಾರಣ ಮಾಡಿಸಿಕೊಂಡ ಹನ ಗಂಡಿಯ ಅರಸನು ಗೊಂಕದೇವ ಅರಸನೋ ಅಥವಾ ಕರಿಬಸವಗೌ ಡನೋ ಇಲ್ಲವೆ ಈ ಉಭಯತರ ನಡುವಿನವನೊಬ್ಬ ಪುರುಷನೋ ಇಲ್ಲವೆ ಕರಿಬಸವಗೌಡನ ಮುಂದಿನ ಪುರುಷನೋ ಎಂಬದನ್ನು ಗೊತ್ತುಮಾಡ ಬೇಕಾಗಿದೆ. ಕರಿಬಸವಗೌಡನ ಮುಂದಿನ ಯಾವನಾದರೊಬ್ಬ ಪುರುಷ ನಿರಬಹುದೆಂದು ಊಹಿಸಬೇಕಾದರೆ ಕರಿಬಸವಗೌಡ ಎಂಬ ಹೆಸರೇ ಮೊದಲು ಲಿಂಗಾಯತರದಿರುವದು. ಮೇಲಾಗಿ ದೇಸಗತಿಯ ೨ ನೆಯ ಪುರುಷನಾದ ಕಲಗೌಡಾ ಹಾಗು ನಾಡಗೌಡಕೀಯ ೨ ನೆಯ ಪುರು ಷನಾದ ಜಿನಗೌಡಾ ಈ ಉಭಯತರು ಅಣ್ಣ ತಮ್ಮಂದಿರಿದ್ದರು. ಎಂದರೆ ಕರಿಬಸವಗೌಡನ ಖಾಸ ಮಕ್ಕಳಾಗಿದ್ದರು. ಏಕೆಂದರೆ ತಾರೀಖು ೪ ನೇ ಜಾನೇವಾರಿ ಕ್ರಿ. ಶ. ೧೫೭೨ ರಲ್ಲಿ ಈ ಉಭಯ ಅಣ್ಣತಮ್ಮಂದಿರೊಳಗೆ ಪಾಲಾಗಿರುವದು. ಇದನ್ನು ತೋರಿಸುವ ಕಾಗದಕ್ಕೆ ಮಹಾಜರ ಅನ್ನು ವರು. ಇದುವು ವಿಜಾಪುರ ಮುಕ್ಕಾಮಿನಲ್ಲಿ ಬಾದಶಹನ ಹುಕುಮಿ ನಿಂದ ಆಗಿರುತ್ತದೆ. ಏಕೆಂದರೆ ಈ ಉಭಯತರು ಲಢಾಯಿಯಲ್ಲಿ ವಿಶೇಷ ಪರಾಕ್ರಮ ತೋರಿಸಿದ್ದರಿಂದ ಈ ಪಾಲುಮಾಡಿ ಕೊಟ್ಟದೆ ಎಂದು ಮಹಾಜರ ಕಾಗದದಲ್ಲಿ ಬರೆದಿದೆ. ಈ ತೀರ್ಮಾನದ ಕಾಲಕ್ಕೆ ದೇಶ ದೊಳಗಿನ ಅನೇಕ ಪರಗಣಾ ವತನದಾರರು ಕೂಡಿದ್ದರು. ಪೂರ್ವದಲ್ಲಿ ದೇಸಗತಿಯಲ್ಲಿ ಪಾಲುಮಾಡುವ ಪದ್ಧತಿಯು ಇದ್ದಿಲ್ಲವೆಂದು ಠರಾವಿನಲ್ಲಿ

ಉಲ್ಲೇಖಿಸಿರುವರು. ದೇಸಗತಿಯ ಅರ್ಧದಷ್ಟು ಉತ್ಪನ್ನವು ನಾಡಗೌಡರಿಗೆ ದೊರೆತಿರುವದು. ಈ ಎರಡೂ ಮನೆತನಗಳಲ್ಲಿ ಶ್ರೀ ಪ್ರಭೂದೇವನು ಕುಲಸ್ವಾಮಿಯಾಗಿರುವದರಿಂದ ಲಿಂಗಧಾರಣಮಾಡಿಸಿಕೊಂಡ ಅರಸನು ಕರಿಬಸವಗೌಡನಕ್ಕಿಂತಲೂ ಹಿಂದಿನವನಿದ್ದಿರಬಹುದೆಂದು ಸಿದ್ಧವಾಗುತ್ತದೆ. ಇನ್ನು ಆ ಪುರುಷನು ಎಷ್ಟನೆಯವನು ಮತ್ತು ಅವನ ಹೆಸರೇನು, ಇದನ್ನು ಗೊತ್ತುಮಾಡಬೇಕಾಗಿದೆ. ಶ್ರೀಮಂತ ಹನಗಂಡೀ ದೇಸಾಯರ ವಂಶದೊಳಗಿನ ಮಗಿಯನರೇಂದ್ರ ಎಂಬ ಹೆಸರಿನ ಒಬ್ಬ ಕವಿಯು ಕನ್ನಡದಲ್ಲಿ ಶ್ರೀ ಪ್ರಭೂದೇವರ ಮೇಲೆ ೧೧೦೦ ಪದ್ಯಗಳನ್ನು ಮಾಡಿರುವನು. ಆ ಎಲ್ಲ ಪದ್ಯಗಳು ಈಗ್ಗೆ ಉಪಲಬ್ಧವಿಲ್ಲದಿದ್ದರೂ ಸಿಕ್ಕಷ್ಟೇ ಪದ್ಯಗಳನ್ನು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧-೪ ಮತ್ತು ೧೧ ನೆಯ ಪುಷ್ಪಗಳಲ್ಲಿ ಮುದ್ರಿಸಿರುವೆವು. ಈ ಪದ್ಯಗಳು ಕನ್ನಡ ಭಾಷೆಯಲ್ಲಿರುವದರಿಂದ ಆ ಕಾಲಕ್ಕೆ ಆ ಪ್ರಾಂತದಲ್ಲಿ ಕನ್ನಡ ಭಾಷೆಯು ಪ್ರಚಲಿತವಿರಬಹುದೆಂದು ತೋರುತ್ತದೆ. ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ ಪುಷ್ಪದೊಳಗಿನ ೩೮ ನೆಯ ಪದ್ಯದ ಕಡೆಯ ಚರಣದಲ್ಲಿ "ಪರಮ ಕವಿತ್ವ ಪೇಳಿದ ಮಹಾತ್ಮ ಧುರಧೀರ ಗುರುಬಸಪ್ಪ ಪದನದ" ಎಂದು ಮಗಿಯ ನರೇಂದ್ರ ಕವಿಯು ಹೇಳಿರುವನು. ಇದರ ಮೇಲಿಂದ ಈ ಕವಿಯು ಗುರುಬಸವಕವಿಯ ಸಮಕಾಲಿಕನೆಂದು ತೋರುವದು. ಈ ಗುರುಬಸವಕವಿಯ ವಿಷಯವಾಗಿ ಕರ್ನಾಟಕ ಕವಿಚರಿತೆಕಾರರು ಕವಿಚರಿತೆಯ ದ್ವಿತೀಯ ಸಂಪುಟದ ೭೪ ನೆಯ ಪುಟದಲ್ಲಿ "ಈತನು ಶಿವಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಮನೋವಿಜಯ ಕಾವ್ಯ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನೂ ವೀರಶೈವ ಕವಿಯು. ಚನ್ನಬಸವ ಪುರಾಣದ ೬೩ ನೆಯ ಸಂಧಿಯ ೧೫, ೧೬, ೩೫ ನೆಯ ಪದ್ಯಗಳಿಂದ ಇವನು ವಿಜಯನಗರದ ರಾಜನಾದ ೨ನೆಯ ಪ್ರೌಢದೇವರಾಯನ [೧೪೧೯-೧೪೪೬] ಕಾಲದಲ್ಲಿ ಇದ್ದಂತೆ ತಿಳಿಯಬರುತ್ತದೆ. ಇವನ ಕಾಲವು ಸುಮಾರು ಕ್ರಿ. ಶ. ೧೪೩೦ ಆಗಬಹುದು. ಇವನ ೭ ಗ್ರಂಥಗಳು ಸಪ್ತಕಾವ್ಯವೆಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ೧೨೪೩ ಪದ್ಯಗಳಿವೆ ಎಂದು ಹೇಳಿರುವರು. ಇವನ ಸಮಾಧಿಯು ತೇರದಾಳದಲ್ಲಿ ಶ್ರೀ ಪ್ರಭೂದೇವರ ಬ್ರಹನ್ಮಠದೊಳಗಿನ ಹಿಂದಿನ ಸಣ್ಣ ಚೌಕಿನಲ್ಲಿ ಇರುವದು. ಅದರ ನಿತ್ಯ ಪೂಜೆಯನ್ನು ಧೂಪಾರತಿಯೆಂಬ ಉಪನಾಮದ ಒಬ್ಬ ಜಂಗಮನು ಮಾಡುತ್ತಿರುವನು.

ಈ ಮಗಿಯ ನರೇಂದ್ರ ಕವಿಯು ತನ್ನ ಒಂದು ಪದ್ಯದಲ್ಲಿ ಚೆನ್ನ ಶ್ರೀ ಪ್ರಭು ಎಂಬ ಹೆಸರಿನ ಒಬ್ಬ ಕವಿಯ ಸ್ತುತಿಯನ್ನು ಮಾಡಿರುವನು. ಈ ಚನ್ನ ಶ್ರೀ ಪ್ರಭುಕವಿಯು ೬ ಶಾಸ್ತ್ರ ೧೮ ಪುರಾಣಗಳಲ್ಲಿ ಪಾರಂಗತನಿದ್ದನೆಂದು ಹೇಳಿದೆ. ಇದು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ ಪುಷ್ಪದ ೩೮ ನೆಯ ಪದ್ಯದ ೨ ನೆಯ ನುಡಿಯಲ್ಲಿ "ಕಲಿಯುಗದೊಳು ತಾನು ದಲದಂಕನಾಗಿರ್ದ । ಬಲುಶಾಸ್ತ್ರದೊಳಗೆಲ್ಲ ॥ ಬಲುಮೆಯೊಳು ಗುರು ಕರುಣವ ಪಡೆದಿದ್ದ । ಸಲೆ ಪುರಾಣ ಚನ್ನಪ್ಪನಸದನದ ॥" ಎಂದು ಅಚ್ಚಾಗಿದೆ. ಈ ಚನ್ನ ಶ್ರೀ ಪ್ರಭು ಕವಿಯಾದರೂ ಈ ಮಗೀಯ ನರೇಂದ್ರ ಕವಿಯ ಸಮಕಾಲೀನನಿರಬಹುದು. ಈ ಚನ್ನ ಶ್ರೀ ಪ್ರಭು ಕವಿಯು ತನ್ನ ಒಂದು ಪದ್ಯದಲ್ಲಿ ಶ್ರೀ ಪ್ರಭುದೇವನು ಹನಗಂಡಿಯ ಕೃಷ್ಣೇಂದ್ರ ರಾಜನಿಗೂ ಹಾಗು ಅವನ ಹೆಂಡತಿಗೂ ಆಶೀರ್ವಾದ ಕೊಟ್ಟು ಉದ್ಧಾರ ಮಾಡಿದ್ದರ ವರ್ಣನೆಯದೆ. ಈ ಪದ್ಯವು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ ಪುಷ್ಪದ ೨೪ ನೆಯ ಪುಟದಲ್ಲಿ ಪ್ರಸಿದ್ಧವಾಗಿದೆ. ಅದರೊಳಗಿನ ೧ ನೆಯ ಪದ್ಯದ ೩ನೆಯ ನುಡಿಯ ಕಡೆಯ ಚರಣದಲ್ಲಿ "ವೀರಧೀರ ಕೃಷ್ಣೇಂದ್ರ ಸತಿಗೆ । ವರವ ಕೊಟ್ಟ ಪ್ರಭುವಿಗೆ ॥" ಎಂದು ಹೇಳಿದೆ. ಇದರ ಮೇಲಿಂದ ಲಿಂಗಧಾರಣ ಮಾಡಿಕೊಂಡ ಹನಗಂಡಿ ಧೊರೆಯು ಕೃಷ್ಣರಾಜನೆಂಬುವದರಲ್ಲಿ ಸಂಶಯವಿಲ್ಲ. ಈ ಕೃಷ್ಣರಾಜನು ಹನಗಂಡಿ ದೇಸಾಯಿಯರು ತಾವು ಕೊಟ್ಟ ವಂಶಾವಳಿಯೊಳಗಿನ ೩ನೆಯ ಕೃಷ್ಣಗೌಡನಾಗದೆ ಕರಿಬಸವಗೌಡ ಹಾಗು ಗೊಂಕದೇವಅರಸು ಈ ಉಭಯತರ ನಡುವಿನವನಿರಬೇಕು.

ಮುಂಬಯಿ ಇಲಾಖೆಯ ಗ್ಯಾಝೆಟಿಯರ ಪುಸ್ತಕ ೨೪, (ಕೊಲ್ಹಾಪುರ) ಪುಟ ೫೪೯-೫೫೦ ರಲ್ಲಿ "ತೇರದಾಳದ ಕೃಷ್ಣಗೌಡನು ಹಾಗು ಅವನ ಹೆಂಡತಿಯಾದ ಸತ್ಯವ್ವನು ೧೩ ನೆಯ ಶತಮಾನದಲ್ಲಿ ಶ್ರೀಪ್ರಭುದೇವನಿಂದ ವೀರಶೈವ ಧರ್ಮದ ದೀಕ್ಷೆಯನ್ನು ಹೊಂದಿದನು. ಅಂದರೆ ಅವರು ಲಿಂಗಾಂಗಿಗಳಾದರು." ಎಂದು ಹೇಳಿದೆ. ಇದರ ಮೇಲಿಂದ ಕೃಷ್ಣಗೌಡನೇ ಲಿಂಗಾಯತ ಧರ್ಮದ ಸ್ವೀಕಾರ ಮಾಡಿದ್ದು ನಿಜವೆಂದು ತೋರುತ್ತದೆ. ಆದರೆ ಗ್ಯಾಝೆಟಿಯರದಲ್ಲಿ "೧೩ ನೆಯ ಶತಮಾನದಲ್ಲಿ ವಿಜಾಪುರ ಬಾದಶಹನ ಭಕ್ತಿಯು ಶ್ರೀ ಪ್ರಭುಸ್ವಾಮಿಗಳವರ ಮೇಲೆ ಬಹಳ ಇತ್ತು. ಆದುದರಿಂದ ಆ ಸ್ವಾಮಿಗಳು ಬಾದಶಹನಿಗೆ ಹೇಳಿ ಹನಗಂಡಿ ದೇಸಾಯಿಯರ ಮೂಲ ಪುರುಷನಾದ ಕೃಷ್ಣಗೌಡನಿಗೆ ತೇರ

ದಾಳ ಪರಗಣಿಯ ದೇಸಗತಿಯನ್ನು ಕೊಡಿಸಿದರು. ಈ ಉಪಕಾರದ ಸಲುವಾಗಿ ಆತನು ಲಿಂಗಧಾರಣ ಮಾಡಿದನು." ಎಂದು ಹೇಳಿದೆ. ಇದು ಮಾತ್ರ ತೀರ ತಪ್ಪು. ಕೃಷ್ಣಗೌಡನು ಶ್ರೀ ಪ್ರಭುದೇವರ ಉಪದೇಶಕ್ಕೆ ಮನಸೋತು ಲಿಂಗಧಾರಣ ಮಾಡಿರಬಹುದು. ೧೩ ನೆಯ ಶತಮಾನದಲ್ಲಿ ವಿಜಾಪುರದ ರಾಜ್ಯವೇ ಇದ್ದಿಲ್ಲ.

ಶ್ರೀಮಂತ ಹನಗಂಡಿ ದೇಸಾಯಿಯರು ಹಾಗು ತೇರದಾಳ ನಾಡಗೌಡರು ಶ್ರೀಪ್ರಭುದೇವನ ನಾಮಸ್ಮರಣವನ್ನು ಸದಾಕಾಲದಲ್ಲಿಯೂ ಮಾಡುತ್ತ ಕಾಲಕ್ರಮಣವನ್ನು ಮಾಡಿಕೊಂಡು ವತನದ ಉಪಭೋಗವನ್ನು ಮಾಡಿಕೊಂಡಿರುವಷ್ಟರಲ್ಲಿ ಮುಂದೆ ಅವರ ಸಂತತಿಯು ಹೆಚ್ಚಾಗಿ ಗಾದಿಯ ಮಾಲಕರ ಹೊರ್ತಾಗಿ ಇತರ ಅಣ್ಣ-ತಮ್ಮಂದಿರಿಗೆ ಸಾಂಪ್ರದಾಯಕ್ಕನುಸರಿಸಿ ಹೊಟ್ಟಿಗೆಂದು ಕೆಲವು ಉತ್ಪನ್ನವನ್ನು ಕೊಟ್ಟು ಬೇರೆ ಇಡುವ ಭಾಗ ಬಿತ್ತು. ಹನಗಂಡಿಯ ಸುತ್ತುಮುತ್ತಲಿನ ಕೆಲವು ಇತಿಹಾಸ ಪ್ರಸಿದ್ಧ ಮನೆತನಗಳೇ ಈ ಅಣ್ಣ-ತಮ್ಮಂದಿರ ಮನೆತನಗಳಿರುವವೆಂದು ಜನರು ಅನ್ನುವರು. ಈ ಮನೆತನದವರು ಈಗ್ಯೂ ಲಿಂಗಾಯತರಿರುವರು. ಇತ್ತಿತ್ತಲಾಗಿ ಹನಗಂಡಿಯ ದೇಶಗತಿಯೊಳಗಿನ ಸತ್ಯವ್ವಾ ಎಂಬ ಹೆಸರಿನ ಒಬ್ಬ ಹೆಣ್ಣುಮಗಳು ಜಕ್ಕಣ್ಣನೆಂಬ ಚಿಕ್ಕಮಗನೊಡನೆ ಕ್ರಿ. ಶ. ೧೭೪೪ ರಲ್ಲಿ ಪುನಃ ಜೈನಧರ್ಮವನ್ನು ಸ್ವೀಕರಿಸಿದಳು. ಮುಂಬಯಿ ಇಲಾಖೆಯ ಗ್ಯಾಝೇಟಿಯರ ಪುಸ್ತಕ ೨೪ (ಕೊಲ್ಹಾಪುರ) ಪುಟ ೫೪೯-೫೫೦ ರಲ್ಲಿ ಸತ್ಯವ್ವನು ಈ ಮಾತಿನ ಸ್ಮರಣಾರ್ಥವಾಗಿ ಒಂದು ಮಾನಸ್ತಂಭವನ್ನು ಕಟ್ಟಿಸಿದಳೆಂದು ಆ ಗೊಂಕದೇವ ಬಸ್ತಿಯೊಳಗಿನ ಶಿಲಾಲೇಖದಿಂದ ತಿಳಿದುಬರುತ್ತದೆಯೆಂದು ಹೇಳಿದೆ. ಸದ್ಯದಲ್ಲಿ ಈ ಹನಗಂಡಿ ದೇಸಗತಿಯ ಹಾಗು ತೇರದಾಳ ನಾಡಗೌಡಕಿಯ ಮಾಲಿಕರು ಹೆಸರಿಗೆ ಜೈನ ಪಂಥಾನುಯಾಯಿಗಳಾಗಿದ್ದರೂ ಅವರ ಎಲ್ಲ ಆಚಾರವಿಚಾರಗಳು ಲಿಂಗವಂತರಂತೇ ಇರುವವು. ಅವರು ತೇರದಾಳದಲ್ಲಿಯ ಶ್ರೀ ಪ್ರಭುಸ್ವಾಮಿಯ ಬೃಹನ್ಮಠದ ವಿಷಯವಾಗಿಯೂ ಹಾಗು ಆ ಮಠದೊಳಗಿನ ಐಕ್ಯಸ್ಥಾನದ (ಶೂನ್ಯ ಸಿಂಹಾಸನದ) ಪೂಜೆಯನ್ನು ಮಾಡುವ ಸ್ವಾಮಿ ಜನರ ವಿಷಯವಾಗಿಯೂ ಅತಿ ಪ್ರೇಮ ಮತ್ತು ಭಕ್ತಿ ಭಾವವನ್ನು ಉಳ್ಳವರಾಗಿರುವರು. ಮತ್ತು ಶ್ರೀಪ್ರಭುಸ್ವಾಮಿಗಳವರ ಹೆಸರಿನಿಂದ ಎರಡೂ ಅರಮನೆಗಳ ಜಗಲಿಗಳ ಮೇಲೆ ಹಿತ್ತಾಳಿಯ ಮಗಿಗಳನ್ನಿಟ್ಟು ಅವುಗಳ ನಿತ್ಯ ಪೂಜೆಯನ್ನು ಜಂಗಮರ ಕಡೆಯಿಂದ ಮಾಡಿಸುತ್ತಿರು

ವರು. ಈ ಮೇಲಿನ ಎಲ್ಲ ಸಂಗತಿಗಳ ಮೇಲಿಂದ ನಿರಂಜನ ವಂಶ ರತ್ನಾಕರದಲ್ಲಿ ಹೇಳಿದಂತೆ ಶ್ರೀಪ್ರಭುದೇವನು ತೇರದಾಳಕ್ಕೆ ಬಂದದ್ದೂ ಮತ್ತು ಅಲ್ಲಿಯ ಸದ್ಭಕ್ತರ ಭಕ್ತಿಭಾವಕ್ಕೆ ವಶನಾಗಿ ಕೆಲವು ದಿವಸಗಳ ವರೆಗೆ ಅಲ್ಲಿ ನಿಂತು ಕಡೆಗೆ ಅಲ್ಲಿಯ ಭಕ್ತರನ್ನು ಕರೆಯಿಸಿಕೊಂಡು ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ಶ್ರೀಆದಿಲಿಂಗೇಶನೆಂಬ ಗಣವರನಿಗೆ ಕೊಟ್ಟ ಸಂಗತಿಯೂ ನಿಜವೆಂದು ತೋರುತ್ತದೆ. ಯಾಕಂದರೆ ಈ ಆದಿಲಿಂಗೇಶನ ಹೆಸರನ್ನು ಶ್ರೀತೋಂಟದಾರ್ಯನು ಕೂಡ ತನ್ನ ಗುರುಪರಂಪರೆಯಲ್ಲಿ ಕೊಟ್ಟಿರುವನು. ನಿಜಾಚರಣೆಯಲ್ಲಿಯೂ ಕೂಡ ಇದೇ ಗುರುಪರಂಪರೆಯು ಇದ್ದು ಅದರಲ್ಲಿಯೂ ಈ ಆದಿಲಿಂಗೇಶನ ಹೆಸರು ಹೇಳಿದೆ. ಇದರಂತೆ ಮುಂಬಯಿ ಇಲಾಖೆಯ ಗ್ಯಾಝೆಟರ, ಕರ್ನಾಟಕ, ಪ್ರಕರಣ ೧೩, ಪುಟ ೪೩೭ ರಲ್ಲಿ ಇದೇ ಆದಿಲಿಂಗೇಶನ ಹೆಸರನ್ನು ಹೇಳಿದೆ. ಒಟ್ಟಿನ ಮೇಲೆ ಪ್ರಭುದೇವನು ತೇರದಾಳಕ್ಕೆ ಬಂದಿದ್ದನಿಷ್ಟೇ ಅಲ್ಲದೆ ಆತನ ವಾಸವು ಅಲ್ಲಿ ಕೆಲವು ದಿವಸಗಳ ವರೆಗೆ ಇದ್ದದ್ದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಶ್ರೀಬಸವಪ್ರಭುಸ್ವಾಮಿಯು ತನ್ನ ಕೈಯೊಳಗಿನ ಕಮಂಡಲುವಾದ ಮಗಿಯನ್ನು ತೇರದಾಳದಲ್ಲಿ ಇಟ್ಟದ್ದರಿಂದ ಮಗಿಪ್ರಭುವೆಂಬ ರೂಢನಾಮ ಬಂದಿದೆಯೆಂದು ನಿರಂಜನ ವಂಶ ರತ್ನಾಕರದಲ್ಲಿ ಹೇಳಿದ್ದು ನಿಜವದೆ. ಕ್ರಿ. ಶ. ೧೪೩೦ ರ ಸುಮಾರಿನಲ್ಲಿ ಇದ್ದ ಮಗಿಯ ನರೇಂದ್ರ ಗುರುಬಸವ ಮತ್ತು ಚನ್ನ ಶ್ರೀ ಪ್ರಭು ಹೀಗೆ ಮೂವರು ಕವಿಗಳು ತಮ್ಮ ಅನೇಕ ಪದ್ಯಗಳಲ್ಲಿ ಶ್ರೀಅಲ್ಲಮಪ್ರಭುದೇವನಿಗೆ ಮಗಿಪ್ರಭುವೆಂದು ಸಂಬೋಧಿಸಿ ಸ್ತುತಿ ಮಾಡಿರುವರು. ಇವರ ಸಿಕ್ಕಷ್ಟು ಪದ್ಯಗಳನ್ನು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ಪುಷ್ಪ ೧, ೪, ೯, ೧೧ ರಲ್ಲಿ ಪ್ರಸಿದ್ಧ ಮಾಡಿರುವೆವು. ಇದರಂತೆ ಎಳಂದೂರ ಹರೀಶ್ವರ ಕೃತ ಶ್ರೀಪ್ರಭುದೇವರ ಕನ್ನಡ ಪುರಾಣ ಸಂಧಿ ೧, ಪದ ೨೯ ರಲ್ಲಿ ಶ್ರೀಪ್ರಭುದೇವನಿಗೆ ಮಗಿಪ್ರಭುವೆಂದು ಸಂಬೋಧಿಸಿದ್ದು ಕಂಡುಬರುತ್ತದೆ. ಮತ್ತು ಅನೇಕ ವೀರಶೈವ ಗ್ರಂಥಗಳಲ್ಲಿಯೂ ಈ ಹೆಸರು ಕಂಡುಬರುತ್ತದೆ. ಸಿದ್ಧಮಲ್ಲಾರ್ಯನೆಂಬ ಒಬ್ಬ ಕವಿಯು ಪ್ರಭುದೇವನಿಗೆ ಮಗೇಶನೆಂದು ಸಂಬೋಧಿಸಿ ಸ್ತುತಿಸಿದ್ದು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೨ ನೆಯ ಪುಷ್ಪದ ೯ ನೆಯ ಪುಟದಲ್ಲಿ ಪ್ರಸಿದ್ಧವಾಗಿದೆ. ಅದರಲ್ಲಿ "ಸಿದ್ಧರಾಮನ ಪಳಿದು ಗುಡ್ಡರ ಯುದ್ಧವನು ಜಯಿಸುತ್ತ ಫಣಿದ್ರುಗ

ರದ್ವಣಿಗೆ ಸೊನ್ನಲಪುರವು ಬೇಯಲ್ಕೆ ಕೃಪೆ ಮಾಡಿ। ಇದ್ದರೀತಿಯು ಪೇಳಿ ಲಿಂಗವ ಬದ್ಧಿಸುತ ರಾಮಂಗೆ ಗೊಗ್ಗಿಯ ಗದ್ದಿಯಲಿ ಉಪದೇಶ ವಿತ್ತ ಮಗೇಶ ಶರಣೆಂಬೆ॥" ಎಂದು ಅದೆ. ಈ ಸ್ತೋತ್ರದಲ್ಲಿ ಶ್ರೀ ಮದನಾದಿ ಅಲ್ಲಮಪ್ರಭುದೇವನ ಎಲ್ಲ ಲೀಲೆಗಳನ್ನು ಮಗಿಪ್ರಭುದೇವ ನಿಗೆ ಸಂಬೋಧಿಸಿ ಹೇಳಿದೆ.

ಪ್ರಭುದೇವನ ತೇರದಾಳದಲ್ಲಿ ಒಂದೆರಡು ಕುರುಹುಗಳನ್ನು ಹೇಳಿ ಈ ಭಾಗವನ್ನು ಮುಗಿಸುವೆವು. ಗ್ರಾಮೋಪಾಧ್ಯ ಎಂಬ ಉಪನಾಮದ ಒಬ್ಬ ಬಡ ವೃದ್ಧ ಸ್ಮಾರ್ತ ಬ್ರಾಹ್ಮಣ ವಿಧವೆಯು ತನ್ನ ಮಗನನ್ನು ಕರೆದುಕೊಂಡು ದಿನಂಪ್ರತಿ ಶ್ರೀಗಳವರ ದರ್ಶನಕ್ಕೆ ಬಂದು ಅವರ ಸೇವೆಯನ್ನು ಮಾಡುತ್ತಿದ್ದಳು. ಈ ರೀತಿ ಕೆಲವು ಕಾಲ ಹೋದ ಮೇಲೆ ಒಂದು ದಿವಸ ಶ್ರೀಗಳವರ ದಿವ್ಯ ಚರಣಗಳು ತನ್ನ ಬಡವಿಯ ಮನೆಯಲ್ಲಿ ಬೀಳಬೇಕು ಮತ್ತು ಆದರಿಂದ ತಾನು ಕೃತಾರ್ಥಳಾಗ ಬೇಕು ಎಂದು ಅವಳು ಶ್ರೀಗಳವರಿಗೆ ಬಿನ್ನೈಸಿಕೊಂಡಳು. ಕೃಪಾಸ ಮುದ್ರನಾದ ಪ್ರಭುದೇವನು ಆ ಬಡವಿಯ ಬಿನ್ನಹವನ್ನು ಮಾನ್ಯಮಾಡಿ ಕೂಡಲೇ ಅವಳ ಮನೆಗೆ ದಯಮಾಡಿಸಿದರು. ಕಿಂಚಿತ್ ಕಾಲದ ವರೆಗೆ ಅವಳ ಮನೆಯಲ್ಲಿ ಮೂಹೂರ್ತ ಮಾಡಿ ತಿರುಗಿ ಬಂದನು. ಅವನು ಕೂತ ಸ್ಥಳದಲ್ಲಿ ಅವಳು ಒಂದು ಕಟ್ಟೆಯನ್ನು ಕಟ್ಟಿ ಅದನ್ನು ಶ್ರೀಗಳ ವರ ಹೆಸರಿನಿಂದ ಪ್ರತಿದಿನ ಪೂಜಿಸಹತ್ತಿದಳು. ಮುಂದೆ ಅವಳ ಸಂತ ತಿಯ ಬೆಳವಣಿಗೆಯಾಗಿ ಆ ಮನೆತನವು ಬಹಳೇ ಪ್ರಸಿದ್ಧಿಗೆ ಬಂತು. ಈಗ್ಗೂ ಆ ಮನೆತನದವರು ತಮ್ಮ ಮನೆಯೊಳಗೆ ಆ ಕಟ್ಟೆಯನ್ನು ನಿತ್ಯ ಪೂಜಿಸುತ್ತಿರುವರು. ಅಂದಿನಿಂದ ಪ್ರಭುದೇವನು ಆ ಮನೆತನಕ್ಕೆ ಕುಲ ಸ್ವಾಮಿಯಾಗಿರುವನು.

ಒಮ್ಮೆ ಒಬ್ಬ ಡಾಂಬಿಕನು ಮನದಲ್ಲಿ ವೈಲಿಗೆಯಿಂದ ಬಹಿರಂಗ ದಲ್ಲಿ ಬಹಳ ಮಡಿಯಿಂದ ವನದೊಳಗಿನ ಹೂವುಗಳನ್ನು ತಂದು ದಿನಾಲು ಒಂದು ಶಿವಾಲಯದೊಳಗಿನ ಶಿವಲಿಂಗದ ಪೂಜೆಯನ್ನು ಮಾಡಿಹೋಗು ತ್ತಿದ್ದನು. ಅವನ ಭಕ್ತಿಯ ಪರೀಕ್ಷಾರ್ಥವಾಗಿ ಕೆಲವು ದಿವಸಗಳವರೆಗೆ ಭೂದೇವನು ಯಾರಿಗೂ ಗೊತ್ತಾಗದಂತೆ ಆ ಶಿವಾಲಯದಲ್ಲಿ ಹೋಗಿ ದೇವರ ಪೂಜೆಯನ್ನು ಕೆಡಿಸಿ ಬರುತ್ತಿದ್ದನು. ಇದು ಏನು ಚಮತ್ಕಾರ ಇರಬಹುದೆಂದು ಮೂಢನಾಗಿ ಆ ಭಕ್ತನು ವಿಚಾರ ಮಾಡತೊಡಗಿ

ದನು. ಆದರೆ ಅದು ಗೊತ್ತಾಗಲಿಲ್ಲ. ಒಂದು ದಿವಸ ಅಕಸ್ಮಾತ್ತಾಗಿ ಪ್ರಭೂದೇವನು ಆ ಶಿವಾಲಯುದಲ್ಲಿ ಪ್ರವೇಶ ಮಾಡುವ ಕಾಲಕ್ಕೆ ಆ ಮನುಷ್ಯನು ಅವನ ಹಿಂದಿನಿಂದ ಬಂದನು. ಪ್ರಭುದೇವನು ಶಿವಾಲ ಯುದೊಳಗೆ ಇರುವಾಗ್ಗೆ ಆ ಮನುಷ್ಯನು ಮೆಲ್ಲನೆ ಹೋಗಿ ಅದರ ದ್ವಾರ ಗಳನ್ನು ಇಕ್ಕಿ ತಾನು ಹೊರಗೆ ನಿಂತುಕೊಂಡನು. ಆಮೇಲೆ ಪ್ರಭುದೇ ವನು ಗುಂಗೀಹುಳದ ರೂಪನ್ನು ಧರಿಸಿಕೊಂಡು ಆ ಗುಡಿಯು ಗಚ್ಚಿನ ಭದ್ರವಾದ ಗೋಡೆಯೊಳಗೆ ತೂತು ಸರೆದು ಹೊರಬಿದ್ದುಹೋದನು. ಕೆಲವು ಹೊತ್ತಿನ ಮೇಲೆ ಆ ಮನುಷ್ಯನು ಶ್ರೀಗಳವರ ಸಮಾಚಾರವನ್ನು ತೆಗೆದುಕೊಳ್ಳುವ ಉದ್ದೇಶದಿಂದ ಬಾಗಿಲ ತೆಗೆದು ನೋಡುವಷ್ಟರಲ್ಲಿ ಅಲ್ಲಿ ಪ್ರಭುದೇವನು ಇದ್ದಿಲ್ಲ. ಹಾಗು ಶಿವಾಲಯುದಲ್ಲಿ ಶಿವಲಿಂಗವೂ ಇದ್ದಿಲ್ಲ. ಇದನ್ನು ಕಂಡು ಅವನು ಗಾಬರಿಯಾಗಿ ಕ್ಷಮೆಯುನ್ನು ಬೇಡುವ ಕುರಿತು ಶ್ರೀಗಳವರ ಕಡೆಗೆ ಹೋದನು. ಆದರೆ ಅವನಿಗೆ ಅವರ ದರ್ಶನ ಆಗಲಿಲ್ಲ. ಶ್ರೀಗಳವರ ಲೀಲೆಯು ಆದ ಸ್ಥಳಕ್ಕೆ ಗದ್ದಿಗಿ ಮಠವೆನ್ನು ವರು. ಮತ್ತು ಆ ಮಠದ ಗಚ್ಚಿನ ಗೋಡೆಯೊಳಗೆ ಈಗ್ಯು ಒಂದು ತೂತು ಇರುವದು. ಆ ಮಠದಲ್ಲಿ ಒಂದು ಗದ್ದುಗೆಯುನ್ನು ಕಟ್ಟಿ ಅದರ ಪೂಜೆಯುನ್ನು ದಿನಂಪ್ರತಿ ಮಾಡುತ್ತಿರುವರು. ಪೂಜಕರು ಪಂಚಮರಿ ರುವರು. ಆದಕ್ಕೆ ಶ್ರೀಮಂತ ಹನಗಂಡಿ ದೇಸಾಯುರಿಂದ ಇನಾಮು ಭೂಮಿಯಿರುವದು.

ಈ ಮೇಲಿನ ಎಲ್ಲ ವಿವೇಚನೆಗಳಿಂದ ಶ್ರೀ ಪ್ರಭುದೇವನು ತೇರ ದಾಳಕ್ಕೆ ಬಂದಿದ್ದನಿಷ್ಟೇ ಅಲ್ಲದೆ ಆತನ ವಾಸವು ಆ ಊರಲ್ಲಿ ಕೆಲವು ದಿವಸಗಳವರೆಗೆ ಇತ್ತೆಂಬದು ಸಹಜವಾಗಿ ಸಿದ್ಧವಾಗುತ್ತದೆ.

---

# ಸಂಶೋಧನ ಕಾರ್ಯಗಳು.

(ಸಂಪಾದಕ)



ವೀರಶೈವ ಧರ್ಮವು ಹಿಂದೂ ಧರ್ಮದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಹೊಂದಿರುತ್ತದೆ. ಈಚೆಗೆ ವೀರಶೈವ ಧರ್ಮ ಗ್ರಂಥಗಳು ಅವುಗಳಲ್ಲಿ ವಿಶೇಷವಾಗಿ ವಚನ ವಾಙ್ಮಯವು ಹೊರಪಟ್ಟ ಹಾಗೆ ಈ ಸಂಗತಿಯು ಹೆಚ್ಚುಹೆಚ್ಚಿಗೆ ವಿಶದಪಡುತ್ತ ನಡೆದಿರುತ್ತದೆ. ವೀರಶೈವ ಧರ್ಮವು ಹಿಂದೂ ಧರ್ಮದ ಮಹತ್ವದ ತತ್ವಗಳನ್ನು ಅವಲಂಬಿಸಿಕೊಂಡು ಅವುಗಳಿಗೆ ಒಂದು ವಿಶಿಷ್ಟ ಸ್ವರೂಪವನ್ನು ಕೊಟ್ಟು ಆತ್ಮವಿಕಾಸವನ್ನು ಹ್ಯಾಗೆ ಉಂಟುಮಾಡಿಕೊಳ್ಳಬೇಕೆಂಬುದನ್ನು ವಿವರಿಸುತ್ತದೆ. ಅದರ ಪ್ರವರ್ತಕರು ಹೀಗೆ ಧಾರ್ಮಿಕ ತತ್ವಗಳನ್ನು ಗ್ರಂಥಗಳಲ್ಲಿ ಮಾತ್ರ ವಿವರಿಸಿ ಕುಳ್ಳಿರದೆ ಅವುಗಳ ಪ್ರತ್ಯಕ್ಷ ಉಪಯೋಗವನ್ನು ಮನುಷ್ಯನು ಹ್ಯಾಗೆ ಮಾಡಿಕೊಳ್ಳಬೇಕೆಂಬದನ್ನು ಷಟ್‌ಸ್ಥಲಶಾಸ್ತ್ರದಲ್ಲಿ ವಿವರಿಸಿರುವರು. ಹೀಗೆ ವಿವರಿಸಿ ಅವರು ಅದನ್ನು ತಮ್ಮ ನಡೆಯಲ್ಲಿಯೂ ನಡೆದು ತೋರಿಸಿರುವರು. ಇದರಿಂದ ದೇಶದಲ್ಲಿ ಒಂದು ವಿಲಕ್ಷಣ ಧರ್ಮ ಜಾಗ್ರತೆಯನ್ನು ಉಂಟು ಮಾಡಲು ಅವರು ಕಾರಣರಾದರು. ಅವರು ನುಡಿದ ವಾಕ್ಯಗಳಲ್ಲಿ ಒಂದು ವಿಧದ ಕಳೆ ಮತ್ತು ಸ್ಫೂರ್ತಿಯು ಹೊರಹೊಮ್ಮುತ್ತದೆ. ಈ ಸಂಗತಿಯು ವಚನ ಗ್ರಂಥಗಳ ಅಭ್ಯಾಸದಿಂದ ಚನ್ನಾಗಿ ತಿಳಿದು ಬರದೆ ಇರಲಾರದು.

ವಚನ ವಾಙ್ಮಯದ ಮಹತ್ವವು ಈಚೆಗೆ ಜನತೆಗೆ ಮನವರಿಕೆಯಾಗಹತ್ತಿರುವದು ಸುಚಿನ್ಹವಾಗಿದೆ. ಅವುಗಳ ಬಗ್ಗೆ ಅನೇಕ ವಿಮರ್ಶಾತ್ಮಕ ಲೇಖಗಳು ಮೇಲಿಂದ ಮೇಲೆ ಪ್ರಸಿದ್ಧವಾಗುತ್ತಲಿವೆ. ಕನ್ನಡ ವಾಙ್ಮಯದ ಇತಿಹಾಸದ ವಿವರಣೆಯಲ್ಲಿ ಈ ವಾಙ್ಮಯಕ್ಕೆ ಅಗ್ರ ಸ್ಥಾನವು ಈಗ ದೊರೆಯುಹತ್ತಿದೆ. ಹಾಗೂ ಇವುಗಳಲ್ಲಿ ಹೊರಪಟ್ಟ ವಿಚಾರಗಳನ್ನು ಕುರಿತು ಸ್ವತಂತ್ರ ದೊಡ್ಡ ದೊಡ್ಡ ಗ್ರಂಥಗಳೂ ಸಹ ವಿದ್ವಾಂಸರಿಂದ ಬರೆಯಲ್ಪಡಹತ್ತಿವೆ. ಹೀಗೆ ಒರೆದ ಗ್ರಂಥಗಳು ಬರೇ ವೀರಶೈವರಿಂದಷ್ಟೇ ಅಲ್ಲ, ಇತರ ಮತದವರಿಂದಲೂ ಕೂಡ ಬರೆಯಲ್ಪಡಹತ್ತಿರುತ್ತವೆ. ಕೆಲವರು ವಚನಗಳನ್ನು ಇಂಗ್ಲೀಷ ಮತ್ತು ಮರಾಠೀ ಭಾಷೆಗಳಲ್ಲಿ ಸಹ ಪರಿವರ್ತಿಸಿ ಅವುಗಳ ಪ್ರಸಾರ ಮಾಡ

ಹತ್ತಿರುವರು. ಈಚೆಗೆ ಮುಂಬಯಿ ವಿಶ್ವವಿದ್ಯಾಲಯದವರು ಈ ವಾಙ್ಮಯದ ಮಹತ್ವವನ್ನು ಅರಿತುಕೊಂಡು ಅವುಗಳನ್ನು ತಮ್ಮ ಪಠ್ಯಪುಸ್ತಕಗಳಲ್ಲಿ ಸೇರ್ಪಡೆ ಮಾಡಹತ್ತಿರುವರು. ಇಷ್ಟೇ ಅಲ್ಲ, ಎಮ್. ಎ. ಪರೀಕ್ಷೆಯಲ್ಲಿರುವ ಪ್ರಶ್ನೆ ಕಾಗದಗಳಲ್ಲಿ ಒಂದು ಸ್ವತಂತ್ರ ಕಾಗದವನ್ನು ವೀರಶೈವ ಧರ್ಮ ತತ್ವಗಳ ಬಗ್ಗೆಯೇ ಇಟ್ಟು, ಅದಕ್ಕೋಸ್ಕರ ವಚನ ಗ್ರಂಥಗಳನ್ನು ನಿಯಾಮಿಸಿರುವರು. ಈ ಕಾರ್ಯಗಳೆಲ್ಲವೂ ಯೋಗ್ಯವೂ ಪ್ರಶಂಸನೀಯವೂ ಎಂದು ಯಾರು ಒಪ್ಪದೆ ಇರಲಿಕ್ಕಿಲ್ಲ?

ಹೀಗೆ ವಚನಗ್ರಂಥಗಳು ವಾಙ್ಮಯದೃಷ್ಟಿಯಿಂದ ಎಷ್ಟು ಮಹತ್ವದವೆಂಬದರ ಅರಿಕೆಯು ಈಗ ಆಗಹತ್ತಿದ್ದರೂ ಅವುಗಳಲ್ಲಿ ಅಡಕವಾಗಿರುವ ಸಿದ್ಧಾಂತವು ಮಾತ್ರ ಇನ್ನೂ ಹೊರಪಟ್ಟಿಲ್ಲ. ಈ ವಿಷಯವು ಷಟ್‌ಸ್ಥಲಶಾಸ್ತ್ರದಲ್ಲಿ ಸಮಾವೇಶವಾಗಿರುತ್ತದೆ. ಈ ಶಾಸ್ತ್ರದ ವಿವೇಚನೆಯು ಈಗ ಪ್ರಸಿದ್ಧವಾಗಿರುವ ವಚನಗ್ರಂಥಗಳಲ್ಲಿ ಕಂಡುಬರುತ್ತಿದ್ದರೂ ಅದು ಬಹಳ ಸ್ಥೂಲತರವಾಗಿರುತ್ತದೆ. ಆದರೆ ತದಂತರ್ಗತ ತತ್ವಗಳು ಇನ್ನೂ ಹೊರಪಟ್ಟಿರುವದಿಲ್ಲ. ಇದರಿಂದ ವಚನಗ್ರಂಥಗಳಲ್ಲಿ ನಿರೂಪಿಸಿರುವ ಅನೇಕ ವಿಷಯಗಳು ಜನರಿಗೆ ತಿಳಿಯದಂತೆ ಆಗುತ್ತವೆ. ಬಹುಜನರು ವಚನಗಳ ಅರ್ಥವು ತಿಳಿಯುವದಿಲ್ಲೆಂದು ಗೊಣಗುವದುಂಟು. ಹೀಗೆ ಅವರಿಗೆ ತಿಳಿಯದೆ ಇದ್ದದ್ದಕ್ಕೆ ವಚನಗ್ರಂಥಗಳ ಭಾಷೆಯು ಕಾಠಿಣ್ಯವಲ್ಲ. ಅದು ಸುಲಭವೇ ಇದೆ. ಆದರೆ ಅವುಗಳಲ್ಲಿ ಪ್ರತಿಪಾದಿಸಲ್ಪಟ್ಟ ತತ್ವಗಳ ತಿಳುವಳಿಕೆಯು ಅವರಿಗೆ ಇಲ್ಲದ್ದರಿಂದ ಈ ಸ್ಥಿತಿಯುಂಟಾಗುತ್ತದೆ. ಆದ್ದರಿಂದ ಷಟ್‌ಸ್ಥಲ ಸಿದ್ಧಾಂತದ ತತ್ವಗಳನ್ನು ವಿವರಿಸುವಂಥ ಗ್ರಂಥಗಳನ್ನು ಇನ್ನು ಮುಂದೆ ಹೊರಪಡಿಸುವದು ಬಹಳ ಅವಶ್ಯವಾಗಿರುತ್ತದೆ. ಆದ್ದರಿಂದ ನಾವು ಈ ಕಾರ್ಯವನ್ನು ಇನ್ನು ಮುಂದೆ ಕೈಕೊಂಡು ವಚನಶಾಸ್ತ್ರಸಾರದ ೨ ನೇ ಮತ್ತು ೩ ನೇ ಭಾಗಗಳನ್ನು ಹೊರಪಡಿಸಬೇಕೆಂದು ಉದ್ದೇಶಪಟ್ಟಿರುತ್ತೇವೆ.

ಈ ಷಟ್‌ಸ್ಥಲ ಶಾಸ್ತ್ರದ ವಿವರಣೆಯಲ್ಲಿ ಜಗತ್ತಿನ ಉದ್ಭವ, ಜಗತ್ತಿಗೂ ತನಗೂ ಇರುವ ಸಂಬಂಧ, ಗುಣಗಳ ವಿವೇಚನೆ (ಇದಕ್ಕೆ ಕರಣ ಹಸಿಗೆ ಎಂಬ ಹೆಸರು.) ಸಕೀಲಗಳ ವರ್ಣನೆ, ೧ ಸ್ಥಲದಿಂದ ೨೧೬ ಸ್ಥಲಗಳ ವರೆಗೆ ಸ್ಥಲಗಳ ವಿವೇಚನೆ ಮತ್ತು ಏಕೋತ್ತರ ಶತಸ್ಥಲ ಈ ವಿಷಯಗಳು ಬರುತ್ತವೆ. ಆದರೆ ಈ ವಾಙ್ಮಯವು ಮಾತ್ರ

ಬೇರೆ ವಿಧವಾಗಿರುತ್ತದೆ. ಇದರಲ್ಲಿ ವಚನಗಳಲ್ಲಿಯ ಒಂದು ಬಗೆಯ ಧಾರ್ಮಿಕ ಬೋಧೆಯ ಕ್ರಮವನ್ನು ವಚನಕಾರರು ಅನುಸರಿಸದೆ, ಅವರು ಎಂಥ ಅಜ್ಞಾನಿ ಮನುಷ್ಯನಿಗಾದರೂ ತಿಳಿಯುವಂತೆ ಅತಿ ವಾಡಿಕೆಯ ಭಾಷೆಯನ್ನು ಅನುಸರಿಸಿ ಅನೇಕ ಮಹತ್ವದ ವಿಷಯಗಳನ್ನು ನಿರೂಪಿಸಿರುವರು. ಮೇಲ್ಕಂಡ ವಿಷಯಗಳು ವಚನಶಾಸ್ತ್ರಸಾರ ಭಾಗ ೧ ಇದರಲ್ಲಿಯಂತೆಯೇ ಈ ಎರಡನೇ ಭಾಗದಲ್ಲಿ ಆಯಾ ಗ್ರಂಥಕಾರರ ಉಕ್ತಿಗಳಿಂದಲೇ ವಿವರಿಸಲ್ಪಡುವವು.

ಷಟ್‌ಸ್ಥಲ ಶಾಸ್ತ್ರದಲ್ಲಿ ಆಚರಣೆಯ ವಿಷಯವು ಅತ್ಯಂತ ಮಹತ್ವದ್ದಾಗಿದೆ. ಇದು ವಚನಶಾಸ್ತ್ರಸಾರದ ೩ ನೇ ಭಾಗದಲ್ಲಿ ಬರುವದು. ವೀರಶೈವರಲ್ಲಿ ಬಾಹ್ಯಾಡಂಬರದ ಕ್ರಿಯಾ ಕರ್ಮಗಳು ಬಹು ಕಡಿಮೆ ಇವೆ. ಆದರೂ ಅವುಗಳಲ್ಲಿ ಮಾನಸಿಕ ಉನ್ನತಿಗೆ ಕಾರಣವಾದ ರೀತಿಗಳು ಬಹು ಜಾಣತನದಿಂದ ಸೇರ್ಪಡೆ ಮಾಡಲ್ಪಟ್ಟಿವೆ. ಷಟ್‌ಸ್ಥಲ ಶಾಸ್ತ್ರದ ತತ್ವಗಳ ತಿಳುವಳಿಕೆಯಾಗದ ಹೊರತು ಇವುಗಳು ಜನರಿಗೆ ತಿಳಿಯುವದು ದುಸ್ತರವು. ಹೀಗೆ ಈ ೩ ನೇ ಭಾಗದಲ್ಲಿ ಆಚಾರ ವಿಷಯಕ ವಿಷಯಗಳನ್ನು ಸೇರಿಸಬೇಕೆಂದು ಇಚ್ಛಿಸಿದ್ದೇವೆ.

ಈ ಪ್ರಕಾರ ಗ್ರಂಥಗಳನ್ನು ಹೊರಪಡಿಸಿದ ತರುವಾಯ ವೀರಶೈವರ ಧಾರ್ಮಿಕ ಮತ್ತು ರಾಜಕೀಯ ಇತಿಹಾಸವನ್ನು ಹೊರಪಡಿಸುವದು ಅತ್ಯಂತ ಮಹತ್ವದ್ದದೆ. ವೀರಶೈವ ಧರ್ಮವು ಹಿಂದೂ ಧರ್ಮದಲ್ಲಿ ಒಂದು ಮಹತ್ವದ ಸ್ಥಾನವನ್ನು ಅಲಂಕರಿಸಿರುವರಲ್ಲದೆ, ವೀರಶೈವ ಜನಾಂಗವು ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಇತಿಹಾಸದಲ್ಲಿ ಬಹು ಮಹತ್ವದ ಕಾರ್ಯಗಳನ್ನು ಮಾಡಿರುತ್ತದೆ. ಇದರ ನಿರೂಪಣೆಯು ಈಗಿನ ಕಾಲದಲ್ಲಿ ಅತ್ಯಂತ ಅವಶ್ಯವಾಗಿರುತ್ತದೆ. ಆದರೆ ಇದಕ್ಕೆ ಸಂಶೋಧನ ಕಾರ್ಯಗಳು ಎಡೆಬಿಡದೆ ಎಲ್ಲ ಕಡೆಗೂ ಸಾಗಬೇಕಾಗುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಶೋಧಕರು ತಮಗೆ ಶಕ್ಯವಿದ್ದಷ್ಟರ ಮಟ್ಟಿಗೆ ಸಂಶೋಧನೆ ಮಾಡಿ ಅವುಗಳನ್ನು ಪ್ರಸಿದ್ಧಿಸುವದು ಅವಶ್ಯವು. ಈ ಕಾರ್ಯವು ನಡೆಯಬೇಕೆಂಬ ಉದ್ದೇಶದಿಂದಲೇ ನಾವು ಶಿವಾನುಭವ ಪತ್ರಿಕೆಯನ್ನು ಹೊರಪಡಿಸಿದ್ದಾಗಿದೆ. ಆದ್ದರಿಂದ ಈ ಪತ್ರಿಕೆಯಲ್ಲಿ ಐತಿಹಾಸಿಕ ಸಂಶೋಧನೆಗೆ ನಾವು ಮಹತ್ವದ ಸ್ಥಾನವನ್ನು ಕೊಡುತ್ತ ಬಂದಿದ್ದೇವೆ. ಇದರಲ್ಲಿ ಈ ವರೆಗೆ ಬಂದ

ಲೇಖಗಳ ಮೇಲಿಂದ ಬಸವೇಶ್ವರನಕಿಂತಲೂ ಪೂರ್ವದಲ್ಲಿ ವೀರಶೈವ ಸಮಾಜವು ಯಾವ ತರದ್ದಿತ್ತು, ಅವನ ಕಾಲಕ್ಕೆ ಯಾವ ಯಾವ ಮಾರ್ಪಾಡಗಳಾದವು ವೀರಶೈವ ಸಮಾಜವು ಬೆಳೆಯಲು ಏನು ಕಾರಣವಾಯಿತು, ಇವೇ ಮೊದಲಾದ ವಿಷಯಗಳ ಬಗ್ಗೆ ಮಹತ್ವದ ಪ್ರಕಾಶವು ಕ್ರಮೇಣ ಬೀಳತೊಡಗಿದೆ. ಈ ಇತಿಹಾಸವು ಅತ್ಯಂತ ಉದ್ಬೋಧಕವೂ, ಮನೋರಂಜಕವೂ ಆಗಿರುತ್ತವೆ. ಈ ವಿಷಯವನ್ನು ನಾವು ನಾಲ್ಕನೇ ಭಾಗದಲ್ಲಿ ಸೇರಡೆ ಮಾಡಬೇಕೆಂದು ಉದ್ದೇಶಪಟ್ಟಿರುತ್ತೇವೆ.

ಈ ಕಾರ್ಯಗಳೊಡನೆ ವೀರಶೈವರ ಸಂಘಟನೆಯನ್ನುಂಟು ಮಾಡುವದು ಬಹು ಅವಶ್ಯವಾಗಿರುತ್ತದೆ. ವೀರಶೈವರ ಸಂಸ್ಕೃತಿಯನ್ನು ಕಾಯಲು ಇದು ಅತ್ಯಾವಶ್ಯಕವು. ಇದಕ್ಕೋಸ್ಕರ ವೀರಶೈವರು ಈಗಿನಿಂದ ತೀವ್ರ ಯತ್ನಿಸಬೇಕು. ಒಂದು ವೀರಶೈವ ವಿದ್ಯಾಪೀಠವನ್ನು ಅವರು ಸ್ಥಾಪಿಸಿದ್ದಾದರೆ, ಇದು ಕೆಲಮಟ್ಟಿಗಾದರೂ ಶಕ್ಯವಾಗಬಹುದು. ಈ ಬಗ್ಗೆ ಯೋಗ್ಯ ಘಟನೆಯಾದಲ್ಲಿ ಸಮಾಜದಲ್ಲಿ ಈಗ ತೋರುವ ನಾನಾ ವಿಧ ಕಲಹಗಳು ದೂರಾಗಿ ವೀರಶೈವ ಸಮಾಜದ ಭಾವೀ ಏಳ್ಗೆಗೆ ಕಾರಣವಾಗುವದೆಂದು ನಾವು ಭಾವಿಸಿದ್ದೇವೆ.

---

# ಬಾಗಲಕೋಟೆಯು ಸ್ತುತ್ಯ ಸಮಾರಂಭ.

ಓರ್ವ ಪ್ರತ್ಯಕ್ಷದರ್ಶಿ.



ಇಲ್ಲಿಯ ಹುಂಡೇಕಾರ ಮಠದಲ್ಲಿ ತಾ. ೨೬-೮-೩೯ ನೆಯ ಸಾಯಂಕಾಲಕ್ಕೆ ಪ್ರಮುಖ ವೀರಶೈವ ಸ್ತ್ರೀ ಪುರುಷರ ಮಹತ್ವದ ಸಭೆಸೇರಿತ್ತು. ಮೊದಲು ಶಿವಸ್ತುತಿಯಾದ ಮೇಲೆ ಶ್ರೀ. ಹರ್ಡೇಕರ್ ಮಂಜಪ್ಪನವರು ಸಭೆಯ ಉದ್ದೇಶವನ್ನು ಮತ್ತು ಅದರ ಮಹತ್ವವನ್ನು ತಿಳಿಸುವಾಗ ಹೀಗೆ ಹೇಳಿದರು—

"ವೀರಶೈವ ಮತ ಪ್ರಸಾರಣೆಗೂ ಮತ್ತು ಕನ್ನಡ ಸಾಹಿತ್ಯಕ್ಕೂ ಶ್ರೀ ಬಸವಾದಿ ಪ್ರಮಥರ ವಚನಗಳು ಅತ್ಯಂತ ಮಹತ್ವನಾದವುಗಳಾಗಿವೆ. ಈ ತರದ ಸಾಹಿತ್ಯವು ಸಂಸ್ಕೃತದಲ್ಲಾಗಲಿ ಅಥವಾ ಇನ್ನಾವದೇ ಭಾಷೆಗಳಲ್ಲಾಗಲಿ ಇಲ್ಲವೇ ಇಲ್ಲವೆಂದು ಶ್ರೀ. ವೆಂಕಣ್ಣಯ್ಯನವರೇ ಮೊದಲಾದ ಮಹಾ ಮಹಾ ವಿದ್ವಾಂಸರೂ ಹೇಳುತ್ತಿದ್ದಾರೆ ಇಂಥ ಅದ್ವಿತೀಯ ಸಾಹಿತ್ಯವನ್ನು ಶ್ರೀಮಾನ್ ಹಳಕಟ್ಟಿಯವರು ಅತ್ಯಂತ ಶ್ರಮವಹಿಸಿ ಈ ವರೆಗೂ ಪ್ರಕಟಿಸುತ್ತ ಬಂದುದರಿಂದ ಅವರ ಈ ಮಹತ್ಕಾರ್ಯದ ವಿಷಯದಲ್ಲಿರುವ ತಮ್ಮ ಪ್ರೇಮಾದರಾಭಿಮಾನಗಳನ್ನು ವ್ಯಕ್ತಗೊಳಿಸಲು ವಿಜಾಪುರ ಜಿಲ್ಹೆಯ ವೀರಶೈವರ ಪರವಾಗಿ ೭೭೧ ರೂ. ಗಳ ನಿಧಿಯನ್ನು ಸಮರ್ಪಿಸುವದಕ್ಕೋಸ್ಕರ ಸಭೆ ಸೇರಿದ್ದಾಗಿದೆ. ಈ ಸಭೆಗೆ ಕನ್ನಡ ಸಾಹಿತ್ಯ ಸೇವೆಯಲ್ಲಿಯೇ ನಿರತರಾಗಿರುವ ಶ್ರೀಮಾನ್ ಹಾಲಭಾವಿ ವೀರಭದ್ರಪ್ಪನವರು ರಿ॥ ಸಬ್ ಜಜ್ ಧಾರವಾಡ ಇವರು ಅಧ್ಯಕ್ಷರಾಗಬೇಕೆಂದು ನನ್ನ ಸೂಚನೆ."

ಇದಕ್ಕೆ ಅನುಮೋದನ ಕೊಡುವಾಗ ಶ್ರೀಮಾನ್ ಜಂಗಿನ ಮುರಿಗಯ್ಯನವರು ಹೀಗೆ ಹೇಳಿದರು— ವಚನಶಾಸ್ತ್ರ ಸಂಗ್ರಹ ಮತ್ತು ಪ್ರಸಾರಗಳಲ್ಲಿ ಬಾಗಲಕೋಟೆಯು ಎಷ್ಟೋ ಮುಂದಾದುದು. ಕೈ. ಕಿಣಗಿ ಬಸಲಿಂಗಪ್ಪನವರು ವಚನಶಾಸ್ತ್ರಕೋವಿದರಾಗಿದ್ದರು. ಇವರ ಶಿಕ್ಷಣದಿಂದಲೇ ಇಲ್ಲಿ ವಚನ ಪ್ರವಚನವು ಆಗಾಗ್ಗೆ ನಡೆಯುತ್ತಲಿವೆ. ಶ್ರೀ. ಪಂಡಿತ ಕಲಿಗಣನಾಥ ಶಾಸ್ತ್ರಿಗಳು ಈಗ ವಚನಗಳಿಗೂ ಆಗಮಗಳಿಗೂ ತುಲನೆಮಾಡಿ ಪ್ರವಚನವನ್ನು ನಡೆಸಿದ್ದಾರೆ. ಇಂಥ ಸ್ಥಳದಲ್ಲಿ ಶ್ರೀಮಾನ್

ಹಳಕಟ್ಟಿಯವರಿಗೆ ಅವರು ಮಾಡಿದ ಮಹತ್ವದ ಸೇವೆಗೋಸ್ಕರ ನಿಧಿಯನ್ನರ್ಪಿಸುವ ಸಮಾರಂಭ ನಡೆಯುವ ಪ್ರಸಂಗ ಬಂದುದು ಬಾಗಲಕೋಟೆಯವರಾದ ನಮಗೆ ಅಭಿಮಾನಾಸ್ಪದವಾದ ಸಂಗತಿಯು. ಇಂಥ ಪ್ರಸಂಗವನ್ನು ಶ್ರೀ ಹರ್ಡೀಕರ್ ಮಂಜಪ್ಪನವರು ನಮಗೆ ತಂದು ಕೊಟ್ಟುದಕ್ಕೆ ನಾವು ಬಹಳ ಕೃತಜ್ಞರಾಗಿದ್ದೇವೆ. ಈ ಸ್ತುತ್ಯ ಸಮಾರಂಭಕ್ಕೆ ಶ್ರೀಮಾನ್ ಹಾಲಭಾವಿಯವರು ಅಧ್ಯಕ್ಷರಾಗಬೇಕೆಂದು ಅವರು ಸೂಚಿಸಿದ್ದಕ್ಕೆ ನಾನು ಮನಃಪೂರ್ವಕ ಒಪ್ಪಿಗೆಯನ್ನು ಕೊಡುತ್ತೇನೆ.

## ಅಧ್ಯಕ್ಷರ ಭಾಷಣ.

ಆ ಮೇಲೆ ಅಧ್ಯಕ್ಷರಾದ ಶ್ರೀಮಾನ್ ಹಾಲಭಾವಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು— "ಈ ವಿಧವಾದ ಸಮಾರಂಭವು ನಮ್ಮಲ್ಲಿ ಹೊಸದು. ವಚನಶಾಸ್ತ್ರ ಪ್ರಸಾರದ ಕಾರ್ಯವು ಅತ್ಯಂತ ಮಹತ್ವದ್ದಾಗಿದೆ. ಈ ಕಾರ್ಯವನ್ನು ನನ್ನ ಮಿತ್ರರಾದ ಶ್ರೀ. ಹಳಕಟ್ಟಿಯವರು ಬಹು ಶ್ರಮವಹಿಸಿ ಮಾಡುತ್ತಿದ್ದಾರೆ. ವಚನಸಾಸ್ತ್ರಗಳ ವಿಚಾರದಲ್ಲಿ ನನ್ನ ಅಭಿಪ್ರಾಯ ಹೀಗಿದೆ.

ಶ್ರೀ ಬಸವಾದಿ ಪ್ರಮಥರ ಕಾಲದಲ್ಲಿ ವಚನಶಾಸ್ತ್ರವುಂಟಾಗಿ ಅದು ಕೆಲವು ಕಾಲ ಪ್ರಸಾರವಾಯಿತು. ಆಮೇಲೆ ಅದಕ್ಕೆ ಇಳಿತರ ಬಂದಿತು. ಬಾಹ್ಮಣ್ಯದ ಕಲ್ಪನೆಯು ದಿನೇ ದಿನೇ ಹೆಚ್ಚುತ್ತಾ ಬಂದಿತು. ಬ್ರಾಹ್ಮಣರ ಆಚಾರ ವಿಚಾರಗಳ ಅನುಕರಣದ ಕಡೆಗೆ ಲಕ್ಷಿಸಿದರು. ಮುಂದೆ ಸಂಸ್ಕೃತಕ್ಕೆ ಮಹತ್ವ ಬಂದಿತು. ಇತ್ತೀಚೆಗೆ ವಚನಶಾಸ್ತ್ರದ ಮಹತ್ವವು ಎಲ್ಲರಿಗೂ ಮನವರಿಕೆಯಾಗಿದೆ. ಇದಕ್ಕೆ ನನ್ನ ಮಿತ್ರರಾದ ಹಳಕಟ್ಟಿಯವರ ಪ್ರಯತ್ನವೇ ಕಾರಣವು. ವಿಜಾಪುರ ಜಿಲ್ಹೆಯ ವೀರಶೈವ ಮಹಾಜನರು ಈ ಪ್ರಕಾರ ಸಾರ್ವಜನಿಕವಾಗಿ ವಚನಶಾಸ್ತ್ರ ಪ್ರಸಾರಣೆಗೆ ಮುಂದೆ ಬಂದುದು ಸಂತೋಷದ ಸಂಗತಿಯು. ನಿಮ್ಮ ಇಷ್ಟದಂತೆ ಈ ನಿಧಿಯನ್ನು ಶ್ರೀ. ಹಳಕಟ್ಟಿಯವರಿಗೆ ಅರ್ಪಿಸಿ ಪರಮಾತ್ಮನು ಅವರಿಗೆ ದೀರ್ಘಾಯುರಾರೋಗ್ಯಗಳನ್ನು ದಯಪಾಲಿಸಿ ಸಮಾಜಸೇವೆಯನ್ನು ಇದಕ್ಕಿಂತಲೂ ಹೆಚ್ಚಾಗಿ ಮಾಡುವ ಶಕ್ತಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ."

ಅನಂತರ ಒಂದು ತಟ್ಟೆಯಲ್ಲಿ ೭೭೧ ರೂ. ಗಳನ್ನು ಫಲ ಪುಷ್ಪ ತಾಂಬೂಲಗಳನ್ನು ಇಟ್ಟು ಶ್ರೀಮಾನ್ ಹಳಕಟ್ಟಿಯವರಿಗೆ ಅರ್ಪಿಸಿದರು.

# ಶ್ರೀಮಾನ್ ಹಳಕಟ್ಟಿಯವರ ಭಾಷಣ.

ಅನಂತರ ಶ್ರೀ ಹಳಕಟ್ಟಿಯವರು ತಮ್ಮ ಭಾಷಣದಲ್ಲಿ ಈ ಪ್ರಕಾರ ಹೇಳಿದರು—"ತಾವು ಮಾಡಿದ ಈ ಸನ್ಮಾನಕ್ಕೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನಾನು ಮಾಡಿರುವ ಸೇವೆಯು ಅತ್ಯಲ್ಪವಾದುದು. ನೀವು ಇದನ್ನು ಬಹು ಘನವಾಗಿ ಭಾವಿಸಿರುವಿರಿ. ವಚನಶಾಸ್ತ್ರವು ಜನಾಂಗದ ಸಕಲ ಸುಧಾರಣೆಗಳಿಗೆ ಬಹು ಸಹಾಯವಾದುದಾಗಿದೆ. ಶ್ರೀ ಬಸವಾದಿ ಪ್ರಮಥರ ಕಾಲದಲ್ಲುಂಟಾದ ಈ ವಚನ ಸಾಹಿತ್ಯವು ಅಪಾರವಾದುದಾಗಿದೆ. ಈ ವರೆಗೆ ನಮಗೆ ಸುಮಾರು ೩೦೦ ವಚನಕಾರರ ವಚನಗಳು ಮಾತ್ರ ದೊರೆತಿವೆ. ಇವುಗಳಲ್ಲಿ ನಾನು ಪ್ರಕಟಿಸಿರುವುದೂ ಬಹು ಸ್ವಲ್ಪ. ಇನ್ನೂ ಪ್ರಕಟಿಸಬೇಕಾದುದೇ ಹೆಚ್ಚಾಗಿದೆ.

ವಚನಗಳಂತೆಯೇ ಷಟ್ಪದಿ, ಸಾಂಗತ್ಯ, ರಗಳೆ ಮೊದಲಾದ ವೀರಶೈವರ ಕನ್ನಡ ಸಾಹಿತ್ಯವು ಕೂಡಾ ಬಹು ಘನವಾದುದಾಗಿದೆ. ಪೂರ್ವಕಾಲದ ಮಠಗಳಲ್ಲಿ ಇವೆಲ್ಲವೂ ಸಂಗ್ರಹವಾಗಿರುತ್ತಿದ್ದವು. ಆಗ ಇವುಗಳ ಶಿಕ್ಷಣವೂ ದೊರೆಯುತ್ತಿದ್ದಿತು. ಇತ್ತೀಚಿಗೆ ಅದು ನಿಂತುಹೋಯಿತು. ಈಗಲಾದರೂ ಮೊದಲಿನ ಎಲ್ಲ ಗ್ರಂಥಗಳನ್ನೂ ಒಂದು ಕಡೆ ಕೂಡಿಸಿ, ಅವುಗಳನ್ನು ಪರಿಶೋಧಿಸಿ ಪ್ರಸಾರಗೊಳಿಸುವುದು ಅತ್ಯಗತ್ಯ. ಈ ಕಾರ್ಯವು ಸಂಘಮೂಲಕವಾಗಿಯೇ ಜರುಗಬೇಕು.

ಈ ವಚನಶಾಸ್ತ್ರ ಮುದ್ರಣಕ್ಕೆ ತಾವೆಲ್ಲ ಕೂಡಿ ಈ ಪ್ರಕಾರ ಧನಸಹಾಯ ಮಾಡಿ ನನ್ನ ಮೇಲೆ ಮಹತ್ವದ ಭಾರವನ್ನೇ ಹಾಕಿರುವಿರಿ. ನಾನು ನಿಮ್ಮೆಲ್ಲರ ಸಹಾಯ ಸಲಹೆಗಳಿಂದಲೇ ಈ ಕಾರ್ಯವನ್ನು ಮುಂದುವರಿಸುವೆನು."

ಆ ಮೇಲೆ ಇಲ್ಲಿಯ ಪ್ರಸಿದ್ಧ ವಕೀಲರಾದ ಶ್ರೀಯುತ ಧಾರವಾಡಕರರು ವೀರಶೈವರ ಈ ವಿಧವಾದ ಕಾರ್ಯವನ್ನು ನೋಡಿ ಸಂತೋಷದಿಂದ ಈ ಪ್ರಕಾರ ತಿಳಿಸಿದರು—ಈಗ ಜಗತ್ತಿನ ಎಲ್ಲಾ ಧರ್ಮದವರೂ ತಮ್ಮ ತಮ್ಮ ಧರ್ಮತತ್ವಗಳನ್ನು ಪ್ರಸಾರ ಮಾಡುತ್ತಿದ್ದಾರೆ. ಇಂಥ ಸಮಯದಲ್ಲಿ ವೀರಶೈವರಾದ ನೀವು ನಿಮ್ಮ ಧರ್ಮಪ್ರಸಾರಕ್ಕಾಗಿ ಈ ಪ್ರಕಾರ ಸಾರ್ವಜನಿಕ ರೀತಿಯಿಂದ ಪ್ರಯತ್ನಿಸಿದ್ದು ಬಹಳ ಸ್ತುತ್ಯವಾದದ್ದು. ತೇರು, ಜಾತ್ರೆ, ಹಬ್ಬ, ನಿಬ್ಬಣ ಮೊದಲಾದವುಗಳಲ್ಲೆ ವೃಥಾ

ಹಣವನ್ನು ವೆಚ್ಚ ಮಾಡದೆ ಈ ಪ್ರಕಾರ ಮತಗ್ರಂಥ ಪ್ರಸಾರ ಮಾಡುವುದು ಬಹು ಸ್ತುತ್ಯವಾದುದು."

ಆ ಬಳಿಕ ಶ್ರೀಯುತ ಧನಶೆಟ್ಟಿ ಶಂಕರಪ್ಪನವರು ವಿಜಾಪುರ, ಇವರು ಉತ್ಸಾಹಭರಿತವಾದ ಭಾಷಣ ಮಾಡಿದರು. ಅದರಲ್ಲಿ ಹೀಗೆ ಹೇಳಿದರು— "ಶ್ರೀ ಬಸವಾದಿ ಪ್ರಮಥರ ವಚನಗಳ ಕಡೆಗೆ ನಾವು ಎಲ್ಲಿಯವರೆಗೆ ನಿರ್ಲಕ್ಷಿಸಿದ್ದೆವೋ ಆ ವರೆಗೆ ನಮ್ಮ ಅಧೋಗತಿಯೇ ಇದ್ದಿತು. ಇತ್ತೀಚಿಗೆ ವಚನಶಾಸ್ತ್ರದ ಕಡೆಗೆ ತಿರುಗಿದ್ದೇವೆ. ಇದು ನಮ್ಮ ಭಾಗ್ಯೋದಯದ ಕುರುಹು ಶ್ರೀ ಸ್ವಾಮಿ ವಿವೇಕಾನಂದ, ರಾಮತೀರ್ಥ, ಮಹಾತ್ಮಾ ಗಾಂಧಿಯವರು ಬೋಧಿಸಿದ ಅನೇಕ ದಿವ್ಯ ತತ್ವಗಳು ಕೂಡಾ ಪ್ರಮಥರ ವಚನಗಳಲ್ಲಿ ಹೇರಳವಾಗಿವೆ. ಇಂಥ ವಚನಶಾಸ್ತ್ರ ಪ್ರಸಾರಕ್ಕೆ ತಾವೆಲ್ಲರೂ ಮುಂದೆ ಬಂದುದಕ್ಕೂ ರಾ|| ಸಾ|| ಹಳಕಟ್ಟಿಯವರು ಇದಕ್ಕಾಗಿಯೇ ತನು ಮನ ಧನ ಸೂರೆ ಮಾಡಿದುದಕ್ಕೂ ನಾನು ಅನೇಕ ಧನ್ಯವಾದಗಳನ್ನು ಅರ್ಪಿಸುತ್ತೇನೆ."

ತರುವಾಯ ಶ್ರೀ ಹರ್ಡೇಕರ ಮಂಜಪ್ಪನವರು ಹೀಗೆ ಹೇಳಿ ಮುಕ್ತಾಯಗೊಳಿಸಿದರು— "ನಾನು ಈ ಜಿಲ್ಹೆಯ ಬಾಗೇವಾಡಿ, ಮುದ್ದೇಬಿಹಾಳ ತಾಳಿಕೋಟಿ, ವಿಜಾಪುರ, ಸಿಂದಗಿ, ಮೊರಟಗಿ, ಇಳಕಲ್ಲ, ಹುನಗುಂದ ಅಮೀನಗಡ, ಬಾಗಲಕೋಟಿ ಈ ಸ್ಥಳಗಳಿಗೆ ಈ ನಿಧಿಯನ್ನು ಕೂಡಿಸಲು ಹೋದಾಗ ಅಲ್ಲಿಯ ಮಹಾಶಯರು ಬಹು ಪ್ರೇಮಾದರಗಳಿಂದ ಹಣವನ್ನು ಕೊಟ್ಟ ವಿವರವು ಈ ಪ್ರಕಟನೆಯಲ್ಲಿದೆ. ಅದನ್ನು ಇಲ್ಲಿಯೇ ಈಗ ಹಂಚಲಾಗುವದು. ಆ ಎಲ್ಲಾ ಮಹಾಶಯರಿಗೂ ನಾನು ಬಹು ಕೃತಜ್ಞನಾಗಿದ್ದೇನೆ." ಆ ಬಳಿಕ ಪದ್ಧತಿಯಂತೆ ಪಂಡಿತ ಕಲಿಗಣನಾಥ ಶಾಸ್ತ್ರಿಗಳ ವಚನ ಪ್ರವಚನ ಜರುಗಿ ಸಮಾರಂಭವು ಸಮಾಪ್ತವಾಯಿತು.

---

## "ಕರಿಬಸವ" ಸ್ತುತಿ.

### ಕಂದ

ಶ್ರೀಗುರುವೆ ಸ್ಥಿತಜಗಾಶ್ರಿತ ।
ನಾಗುತನೀಗಲ್ಕೆ ಜನದ ಬೇಗುದಿ ಭವಮಂ ॥
ಆಗಮನಿಗಮಾಂತರ್ಥವ ।
ರಾಗದಿ ರಚಿಸೆನಲು ಗದ್ಯ ಆದುವು ಪದ್ಯ ॥ ೧ ॥

ವಾಣಿಯು, ಗಣಪನ, ಕವಿಗಳ ।
ಶ್ರೇಣಿಯು ಬಲಗೊಳಲು ವಿದ್ಯಾತತ್ರಾಣಿಗನಲ್ಲವು ॥
ಜಾಣರಿದ ಜರಿಯಲೊಲ್ಲದೆ ।
ಕಾಣಿಸಿ ಸದ್ಗುಣವ, ನಿಮ್ಮ ಕರುಣದ ಸೊಮ್ಮು ॥ ೨ ॥

ಲಕ್ಷಣ ಗುಣವಿಲ್ಲದಿದೊಡು ।
ಲಕ್ಷಾಧಿಪ ಧನಿಕನೆಂದಪೇಕ್ಷಿಪುದೆಂತೋ ॥
ಲಕ್ಷಾರ್ಥ ಕರ್ತೃಬಲದ ದಧ್ಯಕ್ಷವೆ ।
ಸಾಕೆಂದು ಒಲಿಸಿ ರಕ್ಷಿಸಿ ಹಿರಿದು ॥ ೩ ॥

ತರುಮೂಲ ಕೆರೆಯೆ ನೀರನು ।
ಉರುತರ ಫಲ ಪರಿಯನಾಂತ ತೆರದಲಿ ದೇವಾ ॥
ಸುರರ ಪರಮಾತ್ಮನಾದಿ ।
ಗುರುವಿನ ಸ್ತುತಿಗೂಡಿ ಬಂದು ರಸನೆಯಲಿನಿಂದು ॥ ೪ ॥

ಬಾಲಗೆ ನುಡಿಗಲಿಸಿ ಪುನರಪಿ ।
ಲಾಲಿಸಿ ತೋಷಿಸುವ ತೆರದಿ ಕಲಿಸಿ ಮನದ ॥
ಮೂಲಿಗ ನೀನೊರೆದುದ ನೀ ।
ನಾಲಿಗೆಯೊಳು ನುಡಿವೆ ನಾನು ಅಧಿಕವಿದೇನು ॥ ೫ ॥

ಯತಿಪ್ರಾಸ ಎಲ್ಲಗಣಗಳ ।
ಗತಿಯುಲಿ ಗರುವಾಯಗೊಂಡ ಸ್ಥಿತಿಯುಲ್ಲೆನಲಾ ॥
ಮತಿಗೊಲಿದ ಯತಿಗಳೊಡೆಯನ ।
ನುತಿಸಲು ಶಿವಗಣದಿ ಶುಭವು ಪ್ರಾಸ-ವಿಷ ಹರವು ॥ ೬ ॥

ಓರ್ವ ನೀನೊಲಿದೊಡಾವುದು ।
ಸರ್ವ ಸಹಜಾರ್ಥವದರಿಂ ಸರ್ವದಾ ಸ್ಮರಿಸಿ ॥
ಗೀರ್ವಾಣಗಿರಿಯು ಬಳಸದೆ ।
ತೋರ್ಪುದು ತ್ವಂಪದ ಸುಖವ ಸಾಕಿದನೀವ ॥೭॥

ಸೋಜಿಗದ ಸೊಬಗ ನೋಡಲು ।
ಮಾಜಿತು ಮಾಯಾಪ್ರಬಂಧ ಮಹಿಮೆಲಿನಿಂದ ॥
ರಾಜಿಸಿ ತೋರಿಸಲೊರೆದೆನು ।
ಮೂಜಗದೊಳು ಮುಖ್ಯವೆಂದೆ ನೀನೊಲಿದಂದೆ ॥೮॥

ಇನ್ನೊರೆವೆನೆನ್ನಭಾಗ್ಯದ ।
ಮನ್ನಣೆ ಮನೆತನದಿ ಬಹಳ ಉನ್ನತವಾಂತದ ॥
ಸನ್ನುತನೀತನನಾಮದ ।
ಮುನ್ನಿನ ಏಳ್ಗೆಯು ಸಹಿತ ನುತಿಸಲು ಸತತ ॥೯॥

ಇದು ಮೊದಲು ಎನ್ನ ಗುರುವಿನ ।
ಸದನವ ಸ್ತುತಿಸುವೆನು ಅದಕತ್ಯಧಿಕವೆ ಎಂತೊ ॥
ಹದನೇನು ಅದನು ವರ್ಣಿಪೆ ।
ಸದರವೆ ಸಾಮಾನ್ಯದನಿಗೆ ಮದ ಮುಖನರಿಗೆ ॥೧೦॥

ಶ್ರೀ ಸೋಮೆಕಟ್ಟೆಯೆಂಬುದು ।
ಭಾಸುರವಾಂತಿದುವೆ ಭುವಿಯೊಳಗೆಸೆದುದೆಂತೆನೆ ॥
ಸೂಸದೆ ತನುಮನಧನವನು ।
ಮೀಸಲಗ್ಗೈವರಿಗೆ ಶಿವನು ಶಿರಬಾಗುವನು ॥೧೧॥

ಇಂತಿರ್ದ ಇಳೆಯುರಿಚ್ಚೆಗೆ ।
ಮುಂತೊದಗಿಸೆ ಮುಖ್ಯವೆಂದು ಶಂಕರನಂದು ॥
ನಿಂತಿರ್ದ ನಿತ್ಯ ಗಣದೊಳು ।
ಕುಂತಿರೆ ಕುಟ್ಮಳವಿರಕ್ತ ಜಗದಾಸಕ್ತ ॥೧೨॥

ನೀತಳುವವೇನುಮಾಡದೆ ।
ನಾ ತಿಳಿವೆನು ನನ್ನನೆನಲು ನಿತ್ಯಾನಿತ್ಯವ ॥

ನೀ ತಿಳಿಯೆ ನಿಲ್ಲುಹೋಗೆನೆ ।
ಭೂತಳ ಕ್ಕೆ ತಂದನಾಗ ಭವಭಯಬೇಗ ||೧೩||

ಆವನೊಡನೆ ಅರಿದು ಕೆಲಬರು ।
ಅವನಿಯೊಳಲ್ಲಲ್ಲಿ ತಾವೂ ಶಿವರೂಪಾಂತಿರೆ ॥
ಆವರಿರಲಿ ಅಧಿಕನಾದೀ ।
ಭವಹರ ಬಸವಾರ್ಯನೆಂದೆ ಇವಗ್ಗೆಸರೆಂದೆ ॥ ೧೪ ॥

ಗುಣಗಣಾಗ್ರಣಿಯು ಗುಂಪಿಲಿ ।
ಮಣಿಯೆನೆ ಮೂವತ್ತು ಎರಡು ಶಿಖಿಯದು ನೋಡ ॥
ಅ್ಮಣಿಮಾದಿ ಸಿದ್ಧಿಸಾಧ್ಯರು ।
ಪ್ರಣತರ ಪಾವನವ ಮಾಡೆ, ಜಗ ಕೊಂಡಾಡೆ ॥ ೧೫ ॥

ಈ ತಪೋಧನನು ಇರ್ದಿ ।
ಭೂತಳ ಬಹು ಹಂಸಮಯದಿಭಾತಿಸಿತೆಂತೆನು ||
ತಾತಪದೇಳ್ಗಿಗೆ ಮೌನಿ ।
ವ್ರತವೆ ಮುತ್ತಿರ್ಪುದಂತೆ ಸ್ಮರಿಸುತ ನಿಂತೆ ॥ ೧೬ ॥

ಅರಿಯದರರಿತರ ಕೇಳಲು ।
ಕುರುಹಿಟ್ಟರು ಸೋಮೆಕಟ್ಟೆ ಕುವಲಯ ಪ್ರಿಯನೆಂ ॥
ದುರುತರ ನಾಮವನಿಟ್ಟರು ।
ಪರಿಕಿಸಲಿದು ಪರಮಹಂಸ ಪರಿಯಾಂತಿಹುದು ॥೧೭॥

ಸುಕೃತವ ನೀಗುವ ಸ್ವರ್ಗದ ।
ಸುಖವನು ಸೈತಿರಿಸಿ ತಾನೆ ಭಕುತಿಲಿ ಭಜಿಸಲ್ ॥
ಸಕಲಕುಸಾಧ್ಯದೊಳಿಪ್ಪುದು ।
ಪ್ರಕೃತಿಯ ಪರೆ ಕಳಚಲಲ್ಲಿ ಪಠಿಸುವ ಹಂಸ ॥೧೮॥

ಉರುತರ ಸೋಬರಿ ಬ್ರಹ್ಮವು ।
ಬೆರಿಸಲುಹಂಭೇದಗೊಂಡು ತರುವಾಯಲಿ ಸಂ ॥
ಚರಿಸುವ ಚರಾದಿಗಳೊಳು ।
ಮೆರೆಯುತ ಮೋದಿರ್ಸಿ ಮುಖದಿ ಸ್ವರಸಂಪುಟದಿ ॥೧೯॥

ಇದು ಸೂರ್ಯಚಂದ್ರರೀರ್ವರ ।
ಒಡೆಗರ ಮಾಡುತಲಿ ಬಳಸಿ ಬರುತಿಹವಾ ॥
ಗರ್ದ ಪದ್ಧತಿ ಪಾಡರಿ ದಟ್ಟಿಪ ।
ಹೃದಯ ಗ್ರಂಥಿದರ ಕರ್ಮ ಉಳಿಯಲು ಧರ್ಮ ॥೨೦॥

ಯೋಚಿಸಿದೆನು ಎಲ್ಲ ಒರೆಯಲು ।
ಗೋಚರಿಸದ ಗೌರವಾರ್ಥ ಗುಣಗಣ ನಿಧಿಯ ॥
ಸೂಚನೆಯೆಂತುಟೋ "ಸೋ" ಎನೆ ।
ಭೂಚಕ್ರದಿ ಭರಿತವಸ್ತು ಭಾವ ಪ್ರಶಸ್ತ ॥೨೧॥

ಸತ್ಯನ ಸಂಸಿದ್ಧತ್ವದಿ ।
ಮಿಥ್ಯವ ಮಿಕ್ಕತುಳನಾದ ನಿತ್ಯನು ನಾನೆ ॥
ಕರ್ತೃಭೃತ್ಯತ್ವವಿಲ್ಲದ ।
ಚಿತ್ತೇಹಂ ಎಂದು ತಿಳಿಯಲ್ ಚಿನ್ಮಯನಾಗಲ್ ॥೨೨॥

ಹೆಮ್ಮೆಗೆ ಹೇಳಲ್ಕಲ್ಲಿದು ।
ಸಮ್ಮತ ಸಹಜಾತ್ಮರಿಂಗೆ ಸತತ ಸ್ವರೂಪಿನ ॥
ಪೆರ್ಮೆಲಿ ಪರುಠವಿಸಿರ್ಪರ ।
ನಿರ್ಮಲ ನಿಜ ನಿತ್ಯನಿಲಯ ಶೃತಿಸಮ್ಮತಿಯ ॥೨೩॥

ಇಂತಿದು ಜಸವಾಂತದು ಬಳಿ ।
ಕಿಂತೆಯೆ ಈ ಸೋಮೆಕಟ್ಟೆ ಎಂತಾದಪುದೆನೆ ॥
ಅಂತರವೇನಿದೆ ಆದಿಯ ।
ಲಂತ್ಯಾಕ್ಷರ ಎರಡು ಒಂದೆ "ಹಂಮೆ" ಎಂದೆ ॥೨೪॥

"ಮೇ" ಎನೆ "ಹಂ" ಎನೆ ಏಕವು- ।
ಪಾಯದ ಮಾತಲ್ಲ ಪಳಿಯೆ ಪರಿಕಿಸಿ ತಿಳಿಯ ॥
ಲ್ಪಾಯುತವಾಕ್ಯಗಳೈಕ್ಯನೆ ।
ಸೋ ಎಂತಾಗಲದಿಲ್ಲಿ ಮೆ ಹಂ (ಮ್ಮಿ) ನಲಿ ॥೨೫॥

ವಂದಿಸಿ ಹೊಗಳುತ ಓರ್ವರು ।
ಅಂದರು ಅಧಿಕುತ್ಸವದೊಳು ಮಂದಿಯ ಕೂಡಾ ॥

ನಂದದಿ ನಟಿಸುವ ಈತನ ।
ದಂದುಗದಭಯಭರಿತ ಕಟ್ಟೆ ದುರಿತವನಟ್ಟೆ ॥೨೬॥

ಇದು ಇನ ಬಿಂಬದ ಓಲಾಂ ।
ತಿದು ಅಘತಿಮಿರವನುತೀರ್ಚೆ ವ್ಯಗಮುದವಾಂತೀ ॥
ಸದನವು ಸಂತತ ಸತ್ಯಾಭ್ಯುದ ।
ಯದ ಪರಿಪೂರ್ಣ ಕಟ್ಟೆ ಸುಖವಿದಿರಟ್ಟೆ ॥೨೭॥

ಆದಿಯಲೆ ಆಯ್ತೀ ಅಧಿ ।
ಕಿದು ಸಾದರದಲ್ಲಿ ತತ್ವಮಸ್ಯರ್ಥದ ಮಹಾವಾಕ್ಯವ ॥
ಬೋಧಿಸುತ ಭಕ್ತ ಭಾಗ್ಯವೆ ।
ಮೇದಿನಿಗವತರಿಸಿದಂತೆ ಮೆರೆಯಿತು ಪಿಂತೆ ॥೨೮॥

ಅನುಪಮುನಹಸ್ತ ಸಂಭವ ।
ರೆನಿಬರು ಏಳ್ನೂರು ಮತ್ತೆ ಹೆಚ್ಚಂತಿರಲಿ ॥
ಘನ ಮನು ಮೂರ್ತಿಗಳಾದರು ।
ಎಣಿಸಲ್ಕೆಪ್ಪತ್ತುಮೂರು ಚರ ಹದಿನಾರು ॥೨೯॥

ಷೋಡಶರ ಸತ್ವ ಸಾದೃಶ್ಯ ।
ಪಾಡಲ್ಕರಿದಾಯ್ತು ಈಗ ರೂಢಿಯ ಮೇಲಾ ॥
ರೂಢನು ರಾಜಿಸಿ ಭಕ್ತರ ।
ಮಾಡಿದ ಮಹಿಯೊಳಗೆ ಎಲ್ಲಾ ಮುನಿ ಮನಸೊಲ್ಲ ॥೩೦।

ವೀರಶೈವಾಬ್ಧಿಗಿಂದುರೆ ।
ಸಾರಸ್ವತ ಪೂರ್ಣ ಕಳೆಯ ತೋರುವೆನೆಂದಾ ॥
ಗೀರ್ವಾಣತತಿಗಳಂದದಿ ।
ಆರೈಸುತಲಿರ್ದುದಮುಮು ಅಧಿಕಸ್ತೋಮ ॥೩೧

ಜನ್ಮಜಾಡ್ಯಗಳ ಜಯಿಸೆ ಜ ।
ಗನ್ಮಯ ನಿತ್ಯತ್ವ ಸತ್ತುಉನ್ಮನೆಚಿತ್ತು ॥
ಸನ್ಮಾತಾನಂದ ಸಕಲಕೆ ।
ಭಾನುಮಣಿ ಬಲು ಬೆಳಗನಿತ್ತ ಭಾವದ ಗೊತ್ತ ॥೩೨॥

ಇದು ಸೂರ್ಯಚಂದ್ರರೀರ್ವರ ।
ಒದೆಗರ ಮಾಡುತಲಿ ಬಳಸಿ ಬರುತಿಹವಾ ॥
ಗರ್ದ ಪದ್ಧತಿ ಪಾಡರಿ ದಟ್ಟಿಪ ।
ಹೃದಯ ಗ್ರಂಥಿದರ ಕರ್ಮ ಉಳಿಯಲು ಧರ್ಮ ॥೨೦॥

ಯೋಚಿಸಿದೆನು ಎಲ್ಲ ಒರೆಯಲು ।
ಗೋಚರಿಸದ ಗೌರವಾರ್ಥ ಗುಣಗಣ ನಿಧಿಯ ॥
ಸೂಚನೆಯೆಂತುಟೋ "ಸೋ" ಎನೆ ।
ಭೂಚಕ್ರದಿ ಭರಿತವಸ್ತು ಭಾವ ಪ್ರಶಸ್ತು ॥೨೧॥

ಸತ್ಯನ ಸಂಸಿದ್ಧತ್ವದಿ ।
ಮಿಥ್ಯವ ಮಿಕ್ಕತುಳನಾದ ನಿತ್ಯನು ನಾನೆ ॥
ಕರ್ತೃಭೃತ್ಯತ್ವವಿಲ್ಲದ ।
ಚಿತ್ತೇಹಂ ಎಂದು ತಿಳಿಯಲ್ ಚಿನ್ಮಯನಾಗಲ್ ॥೨೨॥

ಹೆಮ್ಮೆಗೆ ಹೇಳಲ್ಕಲ್ಲಿದು ।
ಸಮ್ಮತ ಸಹಜಾತ್ಮರಿಂಗೆ ಸತತ 'ಸ್ವರೂಪಿಸ ॥
ಪೆರ್ಮೆಲಿ ಪರುಠವಿಸಿರ್ಪರ ।
ನಿರ್ಮಲ ನಿಜ ನಿತ್ಯನಿಲಯ ಶೃತಿಸಮ್ಮತಿಯ ॥೨೩॥

ಇಂತಿದು ಜಪವಾಂತದು ಬಳಿ ।
ಕಿಂತೆಯೆ ಈ ಸೋಮೆಕಟ್ಟೆ ಎಂತಾದಪುದೆನೆ ॥
ಅಂತರವೇನಿದೆ ಆದಿಯ ।
ಲಂತ್ಯಾಕ್ಷರ ಎರಡು ಒಂದೆ "ಹಂಮೆ" ಎಂದೆ ॥೨೪॥

"ಮೇ" ಎನೆ "ಹಂ" ಎನೆ ಏಕವು- ।
ಪಾಯದ ಮಾತಲ್ಲ ಪಳಿಯೆ ಪರಿಕಿಸಿ ತಿಳಿಯ ॥
ಲ್ಕಾಯತವಾಕ್ಯಗಳೈಕ್ಯನೆ ।
ಸೋ ಎಂತಾಗಲದಿಲ್ಲಿ ಮೆ ಹಂ (ಮ್ಮಿ) ನಲಿ ॥೨೫॥

ವಂದಿಸಿ ಹೊಗಳುತ ಓರ್ವರು ।
ಅಂದರು ಅಧಿಕುತ್ಸವದೊಳು ಮುಂದಿಯ ಕೂಡಾ ॥

ನಂದದಿ ನಟಿಸುವ ಈತನ ।
ದಂದುಗದಭಯಭರಿತ ಕಟ್ಟಿ ದುರಿತವನಟ್ಟಿ ॥೨೬॥

ಇದು ಇನ ಬಿಂಬದ ಓಲಾಂ ।
ತಿದು ಅಘತಿಮಿರವನುತೀರ್ಚಿ ವ್ಯಗಮುದವಾಂತೀ ॥
ಸದನವು ಸಂತತ ಸತ್ಯಾಭ್ಯುದ ।
ಯದ ಪರಿಪೂರ್ಣ ಕಟ್ಟೆ ಸುಖವಿದಿರಟ್ಟೆ ॥೨೭॥

ಆದಿಯಲೆ ಆಯ್ತೀ ಅಧಿ ।
ಕಿದು ಸಾದರದಲ್ಲಿ ತತ್ವಮಸ್ಯರ್ಥದ ಮಹಾವಾಕ್ಯವ ॥
ಬೋಧಿಸುತ ಭಕ್ತ ಭಾಗ್ಯವೆ ।
ಮೇದಿನಿಗವತರಿಸಿದಂತೆ ಮೆರೆಯಿತು ಪಿಂತೆ ॥೨೮॥

ಅನುಪಮುನಹಸ್ತ ಸಂಭವ ।
ರೆನಿಬರು ಏಳ್ನೂರು ಮತ್ತೆ ಹೆಚ್ಚಂತಿರಲಿ ॥
ಘನ ಮನು ಮೂರ್ತಿಗಳಾದರು ।
ಎಣಿಸಲ್ಕೆಪ್ಪತ್ತುಮೂರು ಚರ ಹದಿನಾರು ॥೨೯॥

ಷೋಡಶರ ಸತ್ವ ಸಾದೃಶ್ಯ ।
ಪಾಡಲ್ಕರಿದಾಯ್ತು ಈಗ ರೂಢಿಯ ಮೇಲಾ ॥
ರೂಢನು ರಾಜಿಸಿ ಭಕ್ತರ ।
ಮಾಡಿದ ಮಹಿಯೊಳಗೆ ಎಲ್ಲಾ ಮುನಿ ಮನಸೊಲ್ಲ ॥೩೦।

ವೀರಶೈವಾಬ್ಧಿಗಿಂದುರೆ ।
ಸಾರಸ್ವತ ಪೂರ್ಣ ಕಳೆಯ ತೋರುವೆನೆಂದಾ ॥
ಗೀರ್ವಾಣತತಿಗಳಂದದಿ ।
ಆರೈಸುತಲಿದ್ದುದಮುಮು ಅಧಿಕಸ್ತೋಮ ॥೩೧

ಜನ್ಮ ಜಾಡ್ಯಗಳ ಜಯಿಸೆ ಜ ।
ಗನ್ಮಯ ನಿತ್ಯತ್ವ ಸತ್ತುಉನ್ಮನೆಚಿತ್ತು ॥
ಸನ್ಮತಾನಂದ ಸಕಲಕೆ ।
ಭಾನುಮಣಿ ಬಲು ಬೆಳಗನಿತ್ತ ಭಾವದ ಗೊತ್ತ ॥೩೨॥

ಆದಿಗಾಧಾರವಾದುದ ।
ಮೂದೇವತ ಮುಖ್ಯಗೊಂಡ ಅನಾದಿಯು ಬ್ರಹ್ಮವ ॥
ಸಾದರದಲಿ ಸಾಧ್ಯಗೊಳಿಸ ।
ಲ್ಯಾದಿಯೆ ಇವನಾದ ತಿಳಿಯೆ ಕಾರಣ ಬಲಿಯು ॥೩೩॥

ಭವರೋಗ ವೈದ್ಯನೆನುತಲಿ ।
ಭುವನದಿ ಭಜಿಸುವರೆಲ್ಲ ಶಿವ ತಾ ಬಲ್ಲ ॥
ಸವೆಯುದ ಅವಿರಳದನುಭವ ।
ನಿವಹವೆ ಇವನಹುದು ಎಂದು ನುತಿಸುವೆ ನಿಂದು ॥೩೪॥

ಈತನೆನಗಿಂದು ಶೇಖರ ।
ಪಾತಕವನು ಪರಿದು ಫಲಿತ ಭೂತಳದಲಿ ವಿ ॥
ಖ್ಯಾತನ ಮಾಡುತ ಕಡೆಯುಲಿ ।
ಆತುಮನೊಡವೆರಸಲಹುದು ಅಧಿಕೇನಿಹುದು ॥೩೫॥

ಜರೆಮರಣ ದುಃಖ ಜಂಜಡ ।
ಪರಿಯಲ್ಪಹುದಾಪ್ತನಾಗಿ ಪೊರೆಯಲ್ಗರುತ ॥
ಸ್ಥಿರವರಿದಂತ್ಯದಿ ನಿಜದೊಳು ।
ಬೆರೆಯಲ್ಪಹುದಾಗಿ ಮರೆಯಾದರಿವಿನ ಪರಿಯ ॥೩೬॥

ಗುರುತೇನು ಗುರುವ ಸ್ಮರಿಸಲು ।
ಅರಸುವ ತಾನಾಗಿ ಬಂದು ಮರೆಯುವನೆಂದು ॥
ಸುರುಚಿರ ಸುಕೃತೋದಯ ವಿಂ ।
ತಿರಲೆಂದೆನೆ ಒರೆದನೇನೋ ಒಲಿಸಲ್ಕಾನೊ ॥೩೭॥

ಮಂಜುಳ ಮಹಾಮಹಿಮೆಯಾಂತೀ ।
ಕಂಜದ ಸಮುಪಾದಕೆರಗೆ ಅಂಜನೆ ಆರಿದೋ ॥
ಲ್ರಂಜನೆಗೈದೆನು ಪದ್ಯಗ ।
ಳಂಜುಳಿ ಆರತಿಯು ಬೆಳಗೆ ಆನಿಂತೊಳಗೆ ॥೩೮॥

ಜಯಜಯತು ಎನ್ನಲೆನ್ನಯ ಭವ ।
ಭಯ ಬರಿದಾಗೆ ನಿತ್ಯ ಭಜಿಪುದೆ ಸತ್ಯ ॥

ಸ್ವಯುವಮಾದ ಸೋಮೆಕಟ್ಟಿಯು ।
ಪ್ರಿಯನಾದೀ ಪರಮಗುರುವ ಪಿರಿದಿನ್ನಾವ ॥೩೯॥

ಕುಲ ಶೀಲ ವಿದ್ಯ ವಿನಯದಿ ।
ಬಲವಂತಿದನಹುದು ಅದರಿಂ ಒಲಿಸಿದೆನಿಂದು ॥
ಮಲಮೂರ ಕಳೆಯಬಲ್ಲರೆ ।
ಹಲವನ್ನುಳಿದಖಿಳನೆಂದು ಅರಿಯಿರಿ ಮುಂದು ॥೪೦॥

ಕವಲಿಲ್ಲದರ್ಚಿಸಲ್ಕಿವ ।
ಸವೆಯದ ಸಂಪತ್ತನೀವ ಸಕಳಾನಿಧಿಯು ॥
ಪ್ರವಿಮಲ ಪುಂಜತರಂಗಿಣಿ ।
ಅವತರಿಸಿದ ಅಭವನಂತೆ ಶಾಂತಿಹುದಂತೆ ॥೪೧॥

ಈತನ ಗುಣದಿದಿರಿಗೆ ಸತ್ಯ ।
ವ್ರಾತದ ಸೊಬಗರಿದು ತಾನೆ ವರ್ಣಿಸಲಹುದೆ ॥
ಈತನೆ ಎರಗದ ಹೆಸರಿದು ।
ಆತಗೆ ಅರಿದಾಯ್ತು ನೋಡೆ ಅರಿಮರುಳೋಡೆ ॥೪೨॥

ಭುವನದ ಬಳಗದ ಬಸವನು ।
ತವೆ ತದ್ಗಣವಳಿದು ತಾನೇ ತಪಸಿಯವೊಲು ॥
ಶಿವಗಿರಿ ಶಿಖರದ ಮೇಲೆ ಪವ ।
ಡಿಸಿ ಇರೆ ಪರಮ ಜೊಲ್ಲು ಪರಿದಿರಲಲ್ಲು ॥೪೩॥

ಇದರಿಂದುದಯವು ಮಹಿಮಾ ।
ಸ್ಪದವಾದಿದ ಒಲಿಸಲೆಂದು ಸಂತಸಗೊಂಡು ॥
ತ್ರಿದಶರವಂದ್ಯನು ತೀವ್ರದಿ ।
ಸದನವನುಳಿದಲ್ಲಿ ಬಂದು ಸದರವು ಎಂದು ॥೪೪॥

ಭರದೋಳ್ ಕೈಚಾಚಲು ಬ ।
ಲ್ಮೊರೆಯುತ ಮೇಲ್ವಾಯ್ದು ಬರಲು ಪುರಹರನಾಗ್ಳಿಂ ॥
ದಿರುಗುತಲರಿದ ಉಪಾಯವ ।
ಶರಧಿಯ ಶ್ರಮಕಿಡಲು ಮುಂದೆ ಶೇರುವುದಂದೆ ॥೪೫॥

ಮದನಾರಿ ಮನದ ಇಚ್ಛೆಯು ।
ಒದಗಲು ಸುಧೆಗಾಗಿ ವಸುಧಾವಲ್ಲಿಕೆಯಾದ ॥
ಉದಧಿಯ ಮಥಿಸಲ್ಕೊದಗಿದ ।
ತ್ರಿದಶರಹದನರಿಯೆ ಅಸುರಾಂಬುಧಿಗಿದು ಸರಿಯೇ ॥೪೬॥

ಅಸುರ ಸುರರಾಗ ಅಭಯದ ।
ಪಸರವನಿಕ್ಕುತಲಿ ಪಳಿವಿನ್ನಳಿದಪೆವೆಂದು ॥
ಪುಸಿಯದಿರಿ ಉದಿತಸಾಗರ ।
ಕೆಸರನು ಕೇಳುವರು ಬನ್ನಿ ಸುಖ ಮುಂದೆನ್ನಿ ॥೪೭॥

ಎಂದೆನುತ ಒಲ್ಲ ರೊಗ್ಗಿಲಿ ।
ಮಂದರ ಪರ್ವತವ ಬಳಸಿ ಸಂಧಿಸಿ ಆಗಳು ॥
ಹಿಂದು ಮುಂದೆನುತ ತವಕದಿ ।
ಬಂಧಿಸಲುಲಿಗೊಡುತಾಗ ಕೇಳನುರಾಗ ॥೪೮॥

ಸದರವೋ ಸಾಹಸದೇಳ್ಗೆಯೋ ॥
ಹದನೆಂತುಟೋ ಅರಿಯೆ ನಾನು ಔಚಿತವೇಣಾ ॥
ಕದನವೋಲ್ಕೈಗುಟ್ಟುತ ।
ಬದುಕಿದೆ ಭಾಗ್ಯಹುದು ಎಂದು ನಗಹಿದರಂದು ॥೪೯॥

ಅಸಮಸಾಹಸಿಗಳವರೆನೆ ।
ವಸುಮತಿ ಕುಸಿವುತಲಿ ಮತ್ತಾ ದೆಸೆ ಬಿರಿಯುತ್ತಿರೆ ॥
ಬಸವಳಿಯುತ ಭುಜದೊಳ್ಕುತ ।
ನುಸಿಗಳು ದಿವಿಜರುಗಳೆನುತ ಅಸುರರೆ ಹೊರುತ ॥೫೦॥

ಮದಮುಖರು ಮದ್ಯದೇಳ್ಗೆಗೆ ।
ಪದಕುಳಿಗೊಳುತಲಿ ಮನದಿ ಅದನೇನೆಣಿಸದೆ ॥
ಗದಗದಿಸುವ ಗರ್ವದುಬ್ಬಿಲಿ ।
ಎದೆಯೊಡ್ಡುತ ಎತ್ತಲಿಂತು ಮೇಲಕೆ ಬಂತು ॥೫೧॥

ಹರದೋಯಿತು ಅಲ್ಲಿ ಕೆಲಬರು ।
ಹರಿಯೇ ಅಧಿಕವೆಂಬ ಗರ್ವ ಅದನೇನ್ ವರ್ಣಿಪೆ ॥

ಯುನೆಂಬುದ ಪುರಾತನರ ಚಾರಿತ್ರ್ಯದಿಂದರಿದು ಅಸತ್ಯವನೆ ನುಡುತ್ತಿರ್ಪುದು. ಎಲೆ ವಾಙ್ಮನ ಪ್ರಾಣಾಧಿನಾಥ ಇವೆಲ್ಲವ ಕಳೆದು ನಿಮ್ಮ ಶರಣರಲ್ಲಿ ಸತ್ಯಸಂಭಾಷಣೆಯ ಕರುಣಿಸಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಇನಿಮಾತು = ಸವಿಮಾತು

**ವಚನ**:— ೭೬. ಆದಿಮಧ್ಯಾವಸಾನದಲ್ಲಿ ಎನ್ನನಾಸೆಯೇ ಅವಗ್ರಹಿಸುತ್ತಿದೆ. ಶಿವಶಿವಾ ಆಸೆಯಿಂದವೆ ಗಾಸಿಯಾಗುತ್ತಿದೇನೆ. ಶಿವಶಿವಾ ಈ ಆಸೆಯ ಕೆಡಿಸಿ ನಿಮ್ಮ ಶ್ರೀಪಾದದಾಸೆಯೇ ನಿವಾಸವಾಗಿರಿಸಯ್ಯಾ ಎನ್ನನುರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಅವಗ್ರಹಿಸು = ಹಿಡಿ.

**ವಚನ**:— ೭೭. ಶಿವಾಚಾರ ಶಿವಕಾರ್ಯಕ್ಕೆ ವಕ್ರವಾದವರ ಗುರುಲಿಂಗಜಂಗಮುವ ನಿಂದಿಸಿ ನುಡಿದವರ ಬಾಯ ಸೀಳಿ ನಾಲಿಗೆಯ ಕಿತ್ತು ಕೊಲುವೆನು. ಅದೆಂತೆಂದೊಡೆ ॥ಶ್ಲೋ॥ ಯೋವಾಪ್ಯುತ್ಪಾಟಯೇಜ್ಜಿಹ್ವಾಂ ಶಿವನಿಂದಾ ರತಸ್ಯ ತು । ತ್ರಿಸಪ್ತ ಕುಲಮುದ್ಧರೇತ್ ಶಿವಲೋಕೆ ಮಹೀಯತೆ ॥ ಎಂದುದಾಗಿ ಮತ್ತಂ ಶಿವಭಕ್ತನಿಂದೆಯನು ಎನ್ನ ಕಿವಿಯಲ್ಲಿ ಕೇಳಿ ಆ ನಿಂದಕರ ಕೊಲ್ಲುವೆನು. ಅಲ್ಲದಿರ್ದಡೆ ತಾನು ಸಾವೆನು. ಅದೆಂತೆಂದಡೆ ॥ಶ್ಲೋ॥ ಶ್ರುತ್ವಾ ನಿಂದಾಂ ಶಿವಸ್ಯಾಥ ತತ್ಕ್ಷಣಾದ್ವರ್ಷಂ ಸಂತ್ಯಜೇತ್ । ತಸ್ಯ ದೇಹಂ ನಿಹಂತಾತದ್ರುದ್ರಲೋಕಂ ಸ ಗಚ್ಛತಿ ಎಂದುದಾಗಿ ಇದನರಿತು ಶಿವನಿಂದಕರ ಸಂಹರಿಸಿದಲ್ಲದೆ ಎನಗೆ ಸಂತೋಷವಿಲ್ಲವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ**:— ೭೮. ಶರಣರ ಸಂಗ ಸಾಲೋಕ್ಯಪದವಯ್ಯ; ಗಣಂಗಳ ಮುಖಾವಲೋಕನ ಪ್ರಿಯ ಸಂಭಾಷಣೆ ಸಾಮೀಪ್ಯಪದವಯ್ಯ; ಶ್ರೀವಿಭೂತಿ ರುದ್ರಾಕ್ಷಿ ಪ್ರಮಥರ ಶ್ರೀಮೂರ್ತಿಯ ಕಂಡು ಮನದಲ್ಲಿ ಧರಿಸಿದಡೆ ಸಾರೂಪ್ಯಪದವಯ್ಯ; ಪುರಾತನರ ಶ್ರೀಪಾದಂಗಳಲ್ಲಿ ಎನ್ನ ಶಿರಸ್ಪರ್ಶನದಿಂದ ಸಾಷ್ಟಾಂಗವೆರಗಲು ಸಾಯುಜ್ಯಪದವಯ್ಯ; ಇಂತೀ ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಪದವೆನಗಾಯಿತ್ತಯ್ಯ ನಿಮ್ಮ ಗಣಂಗಳ ಕರುಣದಿಂದ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

**ವಚನ:—** ೭೯. ಆಶೆಯುಳ್ಳನ್ನಕ ಒಬ್ಬರನಾಶ್ರಯಿಸುವದು. ಆಶ್ರಯದಾಸೆ ಕಷ್ಟ ಕಾಣಿರಯ್ಯ. ಆಶೆಯೇ ದಾಸತ್ವ. ನಿರಾಸೆಯೆ ಈಶತ್ವ ದಾಸತ್ವದ ಈಶತ್ವದ ಅನುವ ವಿಚಾರಿಸಿ ನಿರಾಸೆಯಾಗಿಪ್ಪುದೆ ಈಶ ಪದವಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ:—** ೮೦. ಭಕ್ತನು ರುದ್ರಗಣಂಗಳ ಮಠಕ್ಕೆ ಬಂದರೆ ಭೃತ್ಯನಾಗಿರಬೇಕು. ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ ಹಿಂದೆ ಮಾಡಿದ ಭಕ್ತಿ ಹಾನಿಯಪ್ಪುದು. ಲಕ್ಷ ಗಾವುದ ಹೋಗಿಯಾದರೂ ಭಕ್ತನು ಗಣಂಗಳ ಕಾಂಬುದು ಸದಾಚಾರ. ಅಲ್ಲೇ ಕೂಡಿ ದಾಸೋಹವ ಮಾಡಿ ಗುರುಲಿಂಗಜಂಗಮಕ್ಕೆ ಅರ್ಥ ಪ್ರಾಣಾಭಿಮಾನವ ಕೊಟ್ಟು ಅಹಂಕಾರ ವಳಿದಿಹ ಪುರಾತನರು ಮೆಟ್ಟುವ ಪಾದರಕ್ಷೆಗಳ ನನ್ನ ಮಸ್ತಕದ ಮೇಲಿರಿಸಿ ಕೊಂಡು ನಾನು ಕೃತಾರ್ಥನಾದೆನಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ:—** ೮೧. ಅಯ್ಯಾ ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯ. ನಿಮ್ಮ ಶರಣರ ಅರ್ಚನೆ ಪೂಜೆಯೆ ಎನಗೆ ಸಾಮೀಪ್ಯಪದವಯ್ಯ. ಅಯ್ಯಾ ನಿಮ್ಮ ಗಣಂಗಳ ಧ್ಯಾನವೇ ಎನಗೆ ಸಾರೂಪ್ಯಪದವಯ್ಯ. ಅಯ್ಯಾ ನಿಮ್ಮ ಪುರಾತನರ ಜ್ಞಾನಾನುಭಾವ ಸಮರಸಾನಂದವೇ ಎನಗೆ ಸಾಯುಜ್ಯಪದವಯ್ಯ. ಇಂತೀ ಚತುರ್ವಿಧ ಪದಂಗಳಲ್ಲದೆ ಅನ್ಯವ ನಾನರಿಯೆನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ:—** ೮೨. ಹಿಂದಾದ ದುಃಖವನು ಮುಂದಾದ ಸುಖವನು ಮರೆದೆಯಲ್ಲಾ. ನೀ ಮರೆದ ಕಾರಣ ಬಂಧನ ಪ್ರಾಪ್ತಿಯಾಯಿತ್ತಲ್ಲಾ. ಹೇಮ ಭೂಮಿ ಕಾಮಿನಿಯರೆಂಬ ಸಂಕೋಲೆಯಲ್ಲಿ ಬಂಧಿಸಿದರಲ್ಲಾ. ಅರಿಷಡ್ವರ್ಗವೆಂಬ ದಂಡದಲ್ಲಿ ದಂಡಿಸಿದರಲ್ಲಾ. ಇನ್ನು ಮರೆಯದಿರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಯ್ಯನ.

**ವಚನ:—** ೮೩. ಬ್ರಹ್ಮ ವಿಷ್ಣು ಮೊದಲಾದ ದೇವ ದಾನವ ಮಾನವರೆಲ್ಲರ ಆಶೆಯೇ ಘಾಸಿಮಾಡಿ ಕಾಡಿತ್ತು. ಮಹತ್ವ ತಪ ವ್ರತ ನಿಯಮವುಳ್ಳ ಗುರುತ್ವವುಳ್ಳವರುಗಳ ತಪ ವ್ರತ ನಿಯಮ ಮಹತ್ವ ಗುರುತ್ವಂಗಳ ಕೆಡಿಸಿ ಲಘು ಮಾಡಿ ನಗೆಗೆಡೆಮಾಡಿತ್ತು. ಇಂತಪ್ಪ ಸಾಮರ್ಥ್ಯ ಪುರುಷರ ಘಾಸಿಮಾಡಿ ಸೋಲಿಸಿ ತಾ ಗೆಲುವ ಸಾಮರ್ಥ್ಯವುಳ್ಳ ಆಶೆ ಇದೇನೋ ಎಂದು ವಿಚಾರಿಸಲು ಈಯಾಶೆ ಶಿವಸಂಬಂಧಿಯಾದ ಇಚ್ಛಾ

ಶಕ್ತಿ ಶಿವನೊಪ್ಪದವರನ್ನು ಶಿವನಾಜ್ಞೆಯಿಂದ ಈಯಾಶೆ ಎಂಬ ವಿಧಿ ಕಾಡಿ ತಿಂಬುದು. ಈಯಾಶೆ ಎಂಬ ವಿಧಿ ಶಿವನೊಲಿದವರನು ಹೊದ್ದಲಮ್ಮದಾಗಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನ ಶರಣರು ನಿರಾಶಾಸಂಪನ್ನರು.

ಹೊದ್ದಲಮ್ಮದಾಗಿ = ಸಂಬಂಧಿಸಿಕೊಳ್ಳಲು ಅಸಮರ್ಥನಾಗಿರುವದರಿಂದ.

**ವಚನ**:— ೮೪. ಸಕಲ ಜನಂಗಳು ಹೇಸಿದ ಉದಾನವನು ಶ್ವಾನ ಭುಂಜಿಸಿ ತನ್ನೊಡಲ ಹೊರೆವುದು. ಆದು ತಾನು ಹೇಸಿದ ಉದಾನವನು ತಾ ಮುಟ್ಟದು ನೋಡಾ. ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಮರಳಿ ಭವಿಯ ಬೆರಿಸಿದನಾದಡೆ ಆ ಶ್ವಾನನಿಂದ ಕರಕಷ್ಟ ನೋಡಾ. ನೀನೊಲಿದವರಿಗಲ್ಲದೆ ಎಲ್ಲರಿಗಳವಡುವುದೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

ಅಳವಡು = ವಶವಾಗು.

**ವಚನ**:— ೮೫. ಹಸಿವು, ತೃಷೆ, ವಿಷಯ, ವ್ಯಸನ, ಕಾಮ, ಕ್ರೋಧ, ಲೋಭ, ಮದ, ಮತ್ಸರವಾದಿಯಾದ ತನುಗುಣಂಗಳು ದೇವದಾನವ ಮಾನವರಂತಾದರೆ ಲಿಂಗವಂತನಾದ ಪರಿ ಎಂತಯ್ಯಾ? ತನುಗುಣಂಗಳು ಭೂತದೇಹಿಯಂತಾದಡೆ ಲಿಂಗದೇಹಿಯಾದ ಪರಿ ಎಂತಯ್ಯ ? ಲಿಂಗಗುಣ ಲಿಂಗಚಿನ್ಹ ಇಲ್ಲದಿರ್ದೊಡೆ ಲಿಂಗದೇಹಿಯಾದ ಪರಿ ಎಂತಯ್ಯಾ? ಹಸಿವು ತೃಷೆ ವಿಷಯ ವ್ಯಸನವಡಗಿದಡೆ ಲಿಂಗಚಿನ್ಹ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವಾದಿಯಾದ ದೇಹಗುಣಂಗಳಳಿದರೆ ಲಿಂಗಚಿನ್ಹ. ಇಂತಲ್ಲದೆ ದೇಹಗುಣಂಗಳು ತನ್ನ ಬಿಡದೆ. ತಾನವ ಕೂಡಿಕೊಂಡು ಬಿಡದಿರ್ದು ತಾ ಲಿಂಗದೇಹಿ ಎಂದಡೆ ಆ ಲಿಂಗವೆಂತು ಒಲಿವುದು ? ಸದ್ಭಕ್ತರೆಂತು ಮೆಚ್ಚುವರಯ್ಯ ? ಇಂತಹ ಅವಗುಣಂಗಳೆಲ್ಲವೂ ಅಳಿದು ಗುರುಲಿಂಗ ಜಂಗಮದಲ್ಲಿ ತನು ಮನ ಧನವ ಲೀಯವ ಮಾಡಿದರೆ ಆತನೇ ಸರ್ವಾಂಗ ಲಿಂಗಿಯಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಅವಗುಣ = ಕೆಟ್ಟಗುಣ.

**ವಚನ**:— ೮೬. ಎನ್ನ ಮನಸ್ಸು ಹೊನ್ನು, ಹೆಣ್ಣು, ಮಣ್ಣು, ಘ್ಯಾನಿಸಿ ನಿಮ್ಮ ಮರೆದೆನಯ್ಯ. ನಾ ಮರೆದ ಕಾರಣ ನೀನೆನ್ನ ಮರೆದೆ. ನೀ ಮರೆದ ಕಾರಣ ನಿನ್ನ ಮೋಹ ತಪ್ಪಿ ನಾನು ಕೆಟ್ಟೆನಯ್ಯ. ಹೊನ್ನು ಹೆಣ್ಣು ಮಣ್ಣೆಂಬ ಆಶೆ ಎನ್ನ ಘಾಸಿ ಮಾಡುತ್ತಿವೆಯಯ್ಯ. ಶಿವಧೋ ಶಿವಧೋ ಮಹಾದೇವಾ. ಈ ಹೊನ್ನು ಹೆಣ್ಣು ಮಣ್ಣಿಂಗೆ ಕರ್ತ ನೀನು. ॥ಶ್ರುತಿ॥ ತೇನವಿನಾತೃಣಾಗ್ರಮಪಿ ನ ಚಲತಿ ಎಂಬುದನರಿದು ಮದದಲ್ಲಿ ಇರ್ದು ಕೆಟ್ಟೆ. ಈ ಕೇಡಲ್ಲದೆ ಹಸಿವು ತೃಷೆ ವ್ಯಸನ ವಿಷಯ ಪಂಚೇಂದ್ರಿಯ ಷಡ್ವರ್ಗಂಗಳು ಕಾಡುತ್ತಿವೆ. ಶಿವಧೋ ಮಹಾದೇವಾ, ಈ ಹೊನ್ನು ಹೆಣ್ಣು ಮಣ್ಣಿನಾಶೆಯಿಂದ ಈಯವಸ್ಥೆಗೊಳಗಾದೆನು. ಇನ್ನಿ ವಕ್ಯಾಸೆ ಮಾಡಿ ನಿಮ್ಮ ಮರೆಯದಂತೆನಗೆ ಕೃಪೆಯ ಮಾಡಯ್ಯ. ನಿಮಗೆ ಎನ್ನಾಣೆ. ಭಕ್ತವತ್ಸಲ ಭಕ್ತದೇಹಿಕ ದೇವ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ**— ೮೭. ಲಿಂಗವಂತರು ಕೇವಲ ಲಿಂಗಮೂರ್ತಿಯ ಲಿಂಗಾರ್ಚನೆಯ ಮಾಡಿ, ಲಿಂಗಪ್ರಸಾದವ ಧರಿಸಿ ಸರ್ವವೂ ಲಿಂಗಕ್ರಿಯೆಯಾಗಿರ್ದು ಲಿಂಗವಿಲ್ಲದವರಲ್ಲಿ ತನುವಿನ ಕೊಳುಕೊಡೆ, ಮನದ ಕೊಳುಕೊಡೆ, ಧನದ ಕೊಳುಕೊಡೆಗಳನು ಮಾಡಿದಡೆ ಮಾಡುವನೆಂಬ ಆಶೆಯಿಂದಿದ್ದರೆ ನಾಚದೇ ಶಿವಾಚಾರ, ನಾಚದೇ ಗುರುವು, ನಾಚದೇ ಲಿಂಗವು, ನಾಚದೇ ಜಂಗಮವು, ನಾಚದೇ ಪ್ರಸಾದವು? ಸುಡು ಕಷ್ಟಮನವನು. ಬಿಡು ಬಿಡು ಕೆಟ್ಟ ತನುವನು. ಲಿಂಗವಂತರಲ್ಲಿಯೇ ಸದ್ಭಕ್ತಿಯ ವರ್ತಿಸುವುದು, ತನಗಿಚ್ಛೈಸಿದುದ ಬೇಡುವುದು, ಲಿಂಗವಂತರಿಚ್ಛೈಸಿದುದ ಕೊಡುವುದು. ಇಂತಲ್ಲದೆ ಅನ್ಯವನಾಶ್ರಯಿಸಿದಡೆ ಅನ್ಯಾಯವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಕೊಳುಕೊಡೆ = ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರ.

**ವಚನ**— ೮೮. ದಿಟದಿಟ, ಎನಗಿನ್ನೆಂತಯ್ಯಾ? ಸಾವು ಬಂದಿತ್ತೇ ಸಾವು ಬಂದಿತ್ತೇ? ಸ್ಥಿರಾಯುಗಳೆಂಬ ದೇವಜಾತಿಗಳು ಸತ್ತುದ ಕೇಳುತ್ತ ಇದ್ದೇನೆ. ಮತ್ತೆ ಎನ್ನ ಅನ್ವಯದವರು ಸತ್ತುದ ಕಾಣುತ್ತಿದ್ದೇನೆ. ಮತ್ತೆಯೂ ನಾಚಿಕೆ ಇಲ್ಲ, ಹೇಸಿಕೆ ಇಲ್ಲ. ಕರ್ಮಿ ನಾನು ಸದ್ಧರ್ಮಿ ನೀನು. ಬೇಗ ಬೇಗ ಭಕ್ತಿಜ್ಞಾನ ವೈರಾಗ್ಯವನಿತ್ತು ರಕ್ಷಿಸಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಅನ್ವಯದವರು = ವಂಶದವರು.

**ವಚನ**— ೪೯. ಗೃಹ ಗ್ರಾಮ ನಾಡು ದೇಶಗಳೆಂಬ ಆಳುವಿಚ್ಛೆಗೆ ಭೂಮಿ ಏಕೆ? ಅಲ್ಪ ಭೂಮಿ ಅಲ್ಪಂಗಲ್ಲದೆ, ಪಂಚಾಶತ್ಕೋಟಿ ಭೂಮಿಯನು ಒಳಕೊಂಡುದು ಬ್ರಹ್ಮಾಂಡ. ಅಂತಹ ಬ್ರಹ್ಮಾಂಡವನು ಆಭರಣವ ಮಾಡಿಕೊಂಡಿಪ್ಪ ಆದಿಶೇಷನು. ಅಂತಹ ಆದಿಶೇಷಾಭರಣದಿಂ ಪೂಜೆಗೊಂಡಿಪ್ಪ ಲಿಂಗವೇ ಪ್ರಾಣವಾಗಿ ಭೂಮಿಯಲ್ಲಿ ನಿಂದ ಲಿಂಗೈಕ್ಯಂಗೆ ಭೂಮಿಯಾಕಾಂಕ್ಷೆ ಇನ್ನೆಲ್ಲಿಯದೋ ಅಯ್ಯಾ? ಕ್ಷೋಣಿ ಕೋಟ್ಟೆ ಕ್ಷಿತಿಪತಿಯಂತರ ಧನವ ಪಡೆವ ತಾಗುನಿರೋಧ ಆಗುವಿಚ್ಛೆಗೆ ಸುಖದುಃಖಂಗಳು ತನುಮನ ಧನ ಕಾಂಕ್ಷೆ ಅಲ್ಪಂಗಲ್ಲದೆ, ಮಹಾ ಲಕ್ಷ್ಮದೊಡೆಯನಾಗಿ ಮಹದೈಶ್ವರ್ಯ ಸಂಪನ್ನನಾಗಿ ಹಿರಣ್ಯಪತಿಯೇ ಕಾಯವಾಗಿ ಹಿರಣ್ಯಪತಿಯೇ ಪ್ರಾಣವಾಗಿರ್ದ ಮಹಾಲಿಂಗೈಕ್ಯಂಗೆ ಧನದ ಕಾಂಕ್ಷೆ ಇನ್ನೆಲ್ಲಿಯದಯ್ಯಾ? ಉತ್ತಮ ಮಧ್ಯಮ ಕನಿಷ್ಠ ನಿಕೃಷ್ಟವೆಂಬ ಜಾತಿವಿಕಾರಂಗಳ ಮೀರೆದಪ್ಪಿದ ದಾಸಿ, ವೇಶಿ, ಪರಸ್ತ್ರೀ, ವಿಧವೆ, ಕನ್ನಿಕೆಯರಲ್ಲಿ ಕಂಗೆಟ್ಟು ವರ್ತಿಸುವ ಪಾಪದೃಷ್ಟಿಯ ಕ್ರೂರಾತ್ಮಂಗೆ ಹೆಣ್ಣಿನ ಚಿಂತೆಯಲ್ಲದೆ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯ ವರ್ತನೆಯ ಮೀರಿದ ಮಹಾಶಕ್ತಿ ತಾನಾಗಿ ಮಹಾಪುರುಷನಲ್ಲಿ ಮಹಾ ಸಂತೋಷವುಳ್ಳ ಮಹಾಶರಣಂಗೆ ಹೆಣ್ಣಿನ ಕಾಂಕ್ಷೆ ಇನ್ನೆಲ್ಲಿಯದಯ್ಯಾ? ವೇದ ಶಾಸ್ತ್ರ ಪುರಾಣಾಗಮಾದಿಯಾದ ಅಷ್ಟಾದಶ ವಿದ್ಯಂಗಳನೋದುವ ಹೇಳುವ ಕೇಳುವ ವಿಚಾರಿಸುವ ವಿದ್ಯೆಯ ಬಯಕೆ ಅಲ್ಪ ಮತಿಯಲ್ಪಂಗಲ್ಲದೆ ವಾಗ್ದೇವತೆಗೆ ಅಧಿದೈವವಪ್ಪ ಮಹಾಘನ ವಿದ್ಯೆಯೇ ದೇಹವಪ್ಪ ವಿದ್ಯಾರೂಪನು ಮಹಾದೇವನೇ ಕಾಯವಾಗಿ, ಆ ಮಹಾದೇವನೇ ಜಿಹ್ವೆಯಾಗಿ, ಆ ಮಹಾ ವಾಗ್ದೇವತೆಯೇ ಮನವಾದ ಮಹಾಘನಲಿಂಗೈಕ್ಯಂಗೆ ಉಳಿದಾದ ವಿದ್ಯೆಯ ಬಯಕೆ ಇನ್ನೆಲ್ಲಿಯದಯ್ಯಾ? ಭಕ್ತಕಾಯ ಶಿವನಾದನಾಗಿ ಶಿವನೇ ಪ್ರಾಣವಾಗಿ ನಿಂದ ಸದ್ಭಕ್ತಂಗೆ ಸಕಲಾಗಮಂಗಳಾವವೂ ಇಲ್ಲ. ಆತ ನಿಶ್ಚಿಂತನು, ಆತ ಪರಿಣಾಮಿ, ಆತ ಸದ್ಭಕ್ತನಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನ**:— ೫೦. ಲಿಂಗವಂತನು ಲಿಂಗವಂತರಲ್ಲಿಯೇ ಸಂಗವ ಮಾಡುವುದು. ಲಿಂಗಬಾಹ್ಯರ ಸಂಗವ ಮಾಡಲಾಗದು. ಸ್ತ್ರೀಪುತ್ರರು ಮೊದಲಾದವರ ಕೂಡೆ ಲಿಂಗವಿಲ್ಲದವರೊಡನೆ ಸಂಗವ ಮಾಡಲಾಗದು. ಅದೆಂತೆಂದೊಡೆ, ಶಿವಲಿಂಗಾಂಗ ಸಂಪನ್ನೋ ಲಿಂಗಬಾಹ್ಯ ಸತಿ ಸುತಾನ್ ।

ಆಲಿಂಗ ಚುಂಬನಂ ಚ್ಚೈವ ರೌರವಂ ನರಕಂ ವ್ರಜೇತ್ ॥ ಎಂದುದಾಗಿ ಮತ್ತೆಯೂ ಲಿಂಗಾಲಿಂಗೀ ಸಹವಾಸೀ ಲಿಂಗಿನಾಂ ಸಹವರ್ತಿನಾಂ। ಲಿಂಗಿನಾಂ ಸಹಭುಂಜತೆ ಲಿಂಗಯೊಗೋ ನ ಸಂಶಯಃ ॥ ಎಂದುದಾಗಿ ಲಿಂಗವಂತನು ಲಿಂಗವಂತರಲ್ಲಿಯೇ ಸಂಗವ ಮಾಡುವುದು ಶಿವಪಥವಯ್ಯಾ. ಲಿಂಗವಿಲ್ಲದವರ ಕೂಡೆ ಸಂಗವ ಮಾಡುವುದು ಮಹಾ ಪಾತಕವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ವಚನಃ—** ೯೧. ಪುಣ್ಯಾಂಗನೆಯ ಸುತಂಗೆ ಪಿತನುಂಟು, ಪಿತಾಮಹನುಂಟು, ಪ್ರಪಿತಾಮಹನುಂಟು. ಪುಣ್ಯಾಂಗನೆಯ ಸುತಂಗೆ ಪಿತನಿಲ್ಲ, ಮೇಲೆ ಏನೂ ಇಲ್ಲ. ಅವನ ಬದುಕು ನಗೆಗೇಡೆ. ಭಕ್ತ್ಯಾಂಗನೆಯ ಸುತನಹ ಸದ್ಭಕ್ತಂಗೆ ಪಿತನಹ ಗುರುವು ಉಂಟು. ಪಿತಾಮಹನೆಂಬ ಜಂಗಮ ಉಂಟು. ಪ್ರಪಿತಾಮಹ ಲಿಂಗ ಉಂಟು. ಅಭಕ್ತ್ಯಾಂಗನೆಯ ಸುತನಹ ತಾಮಸ ಭಕ್ತಂಗೆ ಪಿತನಹ ಗುರುವಿಲ್ಲ. ಪಿತಾಮಹ ಜಂಗಮವಿಲ್ಲ. ಪ್ರಪಿತಾಮಹನಹ ಮಹಾಲಿಂಗವಿಲ್ಲ. ಅವನ ಸ್ಥಿತಿ ನಗೆಗೇಡೆ. ಇದು ದೃಷ್ಟ ನೋಡಿರೇ. ಇದುಕಾರಣ ಸದ್ಭಕ್ತನಾದವನು ಭಕ್ತಿಹೀನರ ಸಂಗಡ ನಡೆನುಡಿ ಉಳ್ಳಡೆ ನಿಮ್ಮ ಕಾರುಣ್ಯಕ್ಕೆ ದೂರವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

---

# ಬಸವನ ಮಹಿಮೆ.

**ವಿವರಣೆ:**— ಪ್ರತಿಯೊಬ್ಬ ವಚನಕಾರನು ಬಸವೇಶ್ವರನ ಬಗ್ಗೆ ಬಹು ಆದರವನ್ನು ತಾಳಿ ಅವನನ್ನು ಸ್ತುತಿಸಿದ್ದು ಕಂಡುಬರುತ್ತದೆ. ಅದೇ ಮೇರೆಗೆ ಉರಿಲಿಂಗಪೆದ್ದಿಯಾದರೂ ಅವನನ್ನು ಮುಂದಿನ ವಚನಗಳಲ್ಲಿ ಸ್ತುತಿಸಿದ್ದಾನೆ. ಆದರೆ ಈ ಸ್ತುತಿಗಳಲ್ಲಿ ಕೇವಲ ಅಂಧ ಭಕ್ತಿಯು ತುಂಬಿರದೆ ಅವುಗಳಲ್ಲಿ ಅವನು ತಾತ್ವಿಕ ವಿಚಾರಗಳನ್ನು ತುಂಬಿರುವನು. ಹ್ಯಾಗೆ ಬಸವನು ಷಟ್‌ಸ್ಥಲಾಚರಣೆಯನ್ನೊಳಕೊಂಡು ವರ್ತಿಸಿದನೋ ಹಾಗೆಯೇ ಭಕ್ತರೆಲ್ಲರೂ ವರ್ತಿಸಬೇಕೆಂದು ವಚನಕಾರನು ಬಯಸಿ ಈ ವಚನಗಳನ್ನು ರಚಿಸಿರುವನು.

**ವಚನ:**— ೯೨. ಶ್ರೀಗುರುಲಿಂಗದಲ್ಲಿ ಬಸವಣ್ಣನ ಕಂಡೆನು. ಬಸವಣ್ಣನಲ್ಲಿ ಶ್ರೀಗುರು ಲಿಂಗವ ಕಂಡೆನು. ಶಿವಲಿಂಗದಲ್ಲಿ ಬಸವಣ್ಣನ ಕಂಡೆನು. ಬಸವಣ್ಣನಲ್ಲಿ ಶಿವಲಿಂಗವ ಕಂಡೆನು. ಜಂಗಮಲಿಂಗದಲ್ಲಿ ಬಸವಣ್ಣನ ಕಂಡೆನು. ಬಸವಣ್ಣನಲ್ಲಿ ಜಂಗಮಲಿಂಗವ ಕಂಡೆನು. ಪ್ರಸಾದದಲ್ಲಿ ಬಸವಣ್ಣನ ಕಂಡೆನು. ಬಸವಣ್ಣನಲ್ಲಿ ಪ್ರಸಾದವ ಕಂಡೆನು. ಈ ಚತುರ್ವಿಧದಲ್ಲಿ ಬಸವಣ್ಣನ ಕಂಡೆನು. ಬಸವಣ್ಣನಲ್ಲಿ ಚತುರ್ವಿಧವ ಕಂಡೆನು. ಇಂತಹ ಮಹಾಮಹಿಮರುಂಟೇ? ಶಿವಶಿವಾ ಮಹಾದೇವಾ, ಇಂತಹ ಸದ್ಭಕ್ತರುಂಟೇ? ಇದು ಕಾರಣ ಶ್ರೀಗುರುಲಿಂಗವೂ ಬಸವಣ್ಣನೇ. ಶಿವಲಿಂಗವೂ ಬಸವಣ್ಣನೇ. ಜಂಗಮಲಿಂಗವೂ ಬಸವಣ್ಣನೇ. ಪ್ರಸಾದಲಿಂಗವೂ ಬಸವಣ್ಣನೇ. ಇಷ್ಟಲಿಂಗವೂ ಬಸವಣ್ಣನೇ. ಪ್ರಾಣಲಿಂಗವೂ ಬಸವಣ್ಣನೇ. ಭಾವಲಿಂಗವೂ ಬಸವಣ್ಣನೇ. ಆಚಾರಲಿಂಗವೂ ಬಸವಣ್ಣನೇ. ಮಹಾಲಿಂಗವೂ ಎನಗೆ ಬಸವಣ್ಣನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮ ಪ್ರಸಾದಗಳು ಒಂದು ವಿಶೇಷ ಸ್ಥಾನವನ್ನು ಹೊಂದಿವೆ. ಗುರುಲಿಂಗಜಂಗಮದ ತತ್ವಗಳನ್ನು ಭಕ್ತನು ತನ್ನಲ್ಲಿ ಒಡಮೂಡಿಸಿಕೊಂಡು ಆಚರಿಸಬೇಕು. ಹೀಗೆ ಆಚರಿಸಿ ಅನುಭವಿಸುವದೇ ಪ್ರಸಾದವಾಗಿರುತ್ತದೆ. ಈ ಚತುರ್ವಿಧವನ್ನು ಒಳಗುಮಾಡಿಕೊಂಡವನೇ ನಿಜವಾದ ಸುಖಾನುಭವವನ್ನು ಹೊಂದುವನು.

ಈ ರೀತಿಯನ್ನು ಬಸವಣ್ಣನು ಚನ್ನಾಗಿ ತಿಳಿದುಕೊಂಡು ಆಚರಿಸುತ್ತಿದ್ದ ದರಿಂದ ಆತನು ಮಹಾಮಹಿಮನು ಎಂದು ವಚನಕಾರನು ಇಲ್ಲಿ ಅವ ನನ್ನು ಹೊಗಳುತ್ತಲಿದ್ದಾನೆ. ಬಸವನು ಈ ತರದ ಆಚರಣೆಯಿಂದ ಇಷ್ಟ ಪ್ರಾಣ ಭಾವಲಿಂಗಗಳನ್ನು ಹೊಂದಿಕೊಂಡನು. ಈ ತ್ರಿವಿಧ ಲಿಂಗ ಗಳಲ್ಲಿ ಅವನು ಬೆರೆದುಕೊಂಡದ್ದರಿಂದ ಅವನು ಮಹಾಲಿಂಗಿಯು ಎಂದೆ ನಿಸಿಕೊಂಡನೆಂದು ವಚನಕಾರನು ಇಲ್ಲಿ ಹೇಳುತ್ತಾನೆ. ವಚನಕಾರನು ಬಸವನನ್ನು ಹೀಗೆ ಹೊಗಳುವಲ್ಲಿ ಭಕ್ತರೆಲ್ಲರೂ ಈ ವಿಧವಾಗಿ ಆಚರಿ ಸಬೇಕೆಂದು ಅವನ ಮುಖ್ಯಾಭಿಪ್ರಾಯವಾಗಿದೆ.

**ವಚನ**:— ೯೩. ಶಿವ ಶಿವಾ, ಬಸವಣ್ಣನೇ ಗುರುತತ್ವವುಳ್ಳ ಮಹಾವಸ್ತುವಾಗಿ, ಶ್ರೀಗುರುಲಿಂಗವೂ ಬಸವಣ್ಣನೇ. ಶಿವಸುಖ ಸಂಪ ನ್ನನಾಗಿ, ಶಿವಲಿಂಗವೂ ಬಸವಣ್ಣನೇ. ಜಂಗಮಪ್ರಾಣಿಯಾಗಿ, ಜಂಗ ಮಲಿಂಗವೂ ಬಸವಣ್ಣನೇ. ಪ್ರಸಾದ ಗ್ರಾಹಕನಾಗಿ, ಪ್ರಸಾದಲಿಂಗವೂ ಬಸವಣ್ಣನೇ. ಭಾವಶುದ್ಧವುಳ್ಳ ಮಹಾನುಭಾವಿಯಾಗಿ, ಭಾವಲಿಂಗವೂ ಬಸವಣ್ಣನೇ. ಪಂಚಾಚಾರ ನಿಯುತಾತ್ಮನಾಗಿ, ಆಚಾರಲಿಂಗವೂ ಬಸ ವಣ್ಣನೇ. ಗುರುಲಿಂಗ ಜಂಗಮಕ್ಕೆ ಎನಗೆ ಇಷ್ಟವಾಗಿ, ಇಷ್ಟಲಿಂಗವೂ ಬಸವಣ್ಣನೇ ಇಂತೀ ಚತುರ್ವಿಧ ಪ್ರಾಣವಾಗಿ ಪ್ರಾಣಲಿಂಗವೂ ಬಸ ವಣ್ಣನೆ. ಮಹಾಮಹಿಮನೂ ಬಸವಣ್ಣನೇ. ಮಹಾವಸ್ತುವ ಗರ್ಭೀ ಕರಿಸಿಕೊಂಡಿಪ್ಪಾತನು ಬಸವಣ್ಣನೇ. ಮಹಾಸತ್ಯನೂ ಬಸವಣ್ಣನೇ. ಮಹಾ ನಿತ್ಯನೂ ಬಸವಣ್ಣನೇ. ಮಹಾಶಾಂತನು ಬಸವಣ್ಣನೇ. ಮಹಾಸುಖಿಯೂ ಬಸವಣ್ಣನೇ. ಮಹಾಪರಿಣಾಮಿಯೂ ಬಸವಣ್ಣನೇ. ಮಹಾಲಿಂಗವೂ ಬಸವಣ್ಣನೇ. ಇಂತೀ ನವವಿಧ ಲಿಂಗವು ಬಸವಣ್ಣನೇ. ಇಂತಿವನೆಲ್ಲ ವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದು ಎನಗೆ ಪ್ರಸಾದವನಿಕ್ಕಿ ಸಲ ಹಿದನಯ್ಯಾ ಬಸವಣ್ಣನು. ಇದು ಕಾರಣ ಅನವರತ ನಾನು ಬಸವಾ ಬಸವಾ ಬಸವಯ್ಯ, ಬಸವ ಗುರುವೇ, ಬಸವಲಿಂಗವೇ, ಬಸವ ತಂ ದೆಯೇ, ಬಸವ ಪ್ರಭುವೇ ನಮೋ ನಮೋ ಎನುತಿರ್ದೆನಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ**:— ಬಸವನು ಮಹಾಭಕ್ತನೆಂದು ಹೆಸರುಗೊಂಡಿದ್ದಾನೆ. ಯಾಕಂದರೆ ಅವನು ಗುರು ಲಿಂಗ ಜಂಗಮ ಪ್ರಸಾದ ಇಷ್ಟ ಪ್ರಾಣ, ಭಾವ ಮತ್ತು ನವಲಿಂಗಗಳನ್ನು ತನ್ನಲ್ಲಿ ಒಳಗುಮಾಡಿಕೊಂಡಿದ್ದಾನೆ.

ಗುರುಲಿಂಗಜಂಗಮುಗಳು ಅವನಿಗೆ ಇಷ್ಟಲಿಂಗವಾಗಿವೆ. ಈ ತ್ರಿವಿಧಗಳ ಅನುಭವವು ಅವನ ಪ್ರಾಣದಲ್ಲಿ ಹುದುಗಿ ಅವನು ಪ್ರಾಣಲಿಂಗಿಯಾಗಿರುವನು. ಪಂಚಾಚಾರಗಳನ್ನು ಹಿಡಿದು ಆಚರಿಸುವವನಾದ್ದರಿಂದ ಆಚಾರಲಿಂಗವು ಅವನಲ್ಲಿ ನೆಲೆಗೊಂಡಿದೆ. ಇದರಿಂದ ಅವನು ಗುರುಲಿಂಗ ಜಂಗಮುಗಳನ್ನು ತನ್ನಲ್ಲಿ ಒಳಗುಮಾಡಿಕೊಂಡವನಾಗಿದ್ದನು. ಇವುಗಳೊಡನೆ ಪ್ರಸಾದವು ಆವಿರ್ಭವಿಸಲು ಆ ಪ್ರಸಾದವು ಅವನ ಪ್ರಾಣದಲ್ಲಿ ನೆಲೆಗೊಂಡು ಅದರ ಸುಖವನ್ನು ಅವನು ಆಸ್ವಾದಿಸುವವನಾಗಿದ್ದನು. ನವವಿಧಲಿಂಗಗಳನ್ನು ಒಳಕೊಂಡಿದ್ದರಿಂದ ಭಾವಶುದ್ಧನಾದನು. ಮತ್ತು ಮಹಾಲಿಂಗಿ ಎನಿಸಿಕೊಂಡನು. ಈ ಬಗೆಯು ಬಸವಣ್ಣನು ನನ್ನ ಕರಸ್ಥಲಕ್ಕೆ ಬಂದು ಎನಗೆ ಪ್ರಸಾದವನಿಕ್ಕಿ ಸಲಹಿದನೆಂದು ಬಸವಾ ಬಸವಾ ಎಂದು ವಚನಕಾರನು ಅವನನ್ನು ಇಲ್ಲಿ ಹೊಗಳುತ್ತಲಿದ್ದಾನೆ.

---

# ದಾಸೋಹ.



**ವಿವರಣೆ:**— ದಾಸೋಹವೆಂದರೆ ಜನರಲ್ಲಿ ಭಿಕ್ಷೆಯನ್ನು ಬೇಡಿ ತಂದು ಇತರಿಗೆ ಊಟಹಾಕುವದೆಂದು ಈಗಿನ ಕಾಲದಲ್ಲಿ ತಿಳುವಳಿಕೆಯುಂಟು. ಆದರೆ ವಚನಕಾರರಲ್ಲಿ ಈ ಭಾವವಿಲ್ಲ. ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ನಡೆಯಬೇಕೆಂಬುದನ್ನು ಅವರು ಈ ಶಬ್ದದ ಮೂಲಕ ತಿಳಿಸುತ್ತಾರೆ. ಪ್ರತಿಯೊಬ್ಬನು ತಾನು ಪರಮಾತ್ಮನ ಸೇವಕನೆಂದು ತಿಳಿದುಕೊಂಡು ವರ್ತಿಸಬೇಕೆಂದು ಅವರ ಮುಖ್ಯ ಅಭಿಪ್ರಾಯವಿದೆ. ಈ ವಿಚಾರವು ದಾಸೋಹದಲ್ಲಿ ಇದೆ. ಮನುಷ್ಯನಿಗೆ ಜಗತ್ತಿನಲ್ಲಿ ತನ್ನ ಸ್ವಂತದ ಸೊತ್ತೆಂಬುದು ಇಲ್ಲ. ಅದೆಲ್ಲವೂ ಪರಮಾತ್ಮನದಾಗಿರುತ್ತದೆ. ಆದ್ದರಿಂದ ಅರ್ಪಣಭಾವ ಯುಕ್ತವಾಗಿ ಅವನು ಆಚರಿಸಬೇಕು. ಅರ್ಪಣದ ರೀತಿಯನ್ನು ಅವರು ಹೇಳುವಲ್ಲಿ ದುಡಿದು ಅರ್ಪಿಸಬೇಕೆಂದು ಅವರು ಬೋಧಿಸುತ್ತಾರೆ. ಈ ದುಡಿಕೆಗೆ ಅವರು ಕಾಯಕವೆನ್ನುವರು. ಇಂಥ ಕಾಯಕದಿಂದ ಮನುಷ್ಯನು ತಾನು ಗಳಿಸಿ ಗುರುಲಿಂಗಜಂಗಮಕ್ಕೆ ಅರ್ಪಿಸಬೇಕು. ಇದೇ ದಾಸೋಹವೆನಿಸುವದು. ಮನುಷ್ಯನು ತಾನು ಗಳಿಸಿದ್ದನ್ನು ತನ್ನ ಇಂದ್ರಿಯ ಸುಖಕ್ಕಾಗಿ ಉಪಯೋಗಿಸತಕ್ಕದ್ದಲ್ಲ. ಅದನ್ನು ಪರಾರ್ಥಕ್ಕಾಗಿ ಉಪಯೋಗಿಸಬೇಕು. ಈ ಬಗೆಯ ವರ್ತನೆಯಿಂದ ಜನ್ಮದ ಸಾರ್ಥಕತೆ ಇದೆ. ಈ ವಿಚಾರಗಳು ದಾಸೋಹದ ಅವರ ನಿರೂಪಣೆಯಲ್ಲಿ ಕಂಡು ಬರುವದುಂಟು.

**ವಚನ:**— ೯೪. ಸದ್ಭಕ್ತನು ಶ್ರೀಗುರುಲಿಂಗಜಂಗಮಕ್ಕೆ ತನು ಮನಧನ ಪ್ರಾಣಾದಿಗಳನರ್ಪಿಸಿ ಸಕಲಸಾಕಾರದ ದ್ರವ್ಯಾದಿಗಳೆಲ್ಲವು ಶಿವನ ಸೊಮ್ಮಾಗಿ ॥ ಅದೆಂತೆಂದಡೆ ॥ ಋಗ್ವೇದದಲ್ಲಿ ॥ಶ್ಲೋ॥ ಶಿವೋದಾತಾ ಶಿವೋಭೋಕ್ತಾ ಶಿವಸ್ಸರ್ವಮಿದಂಜಗತ್ । ಶಿವೋ ಯಜತಿ ಸರ್ವಸ್ವಂ ಯಶ್ಶಿವಸ್ಸೋಽಹಮೇವಚ । ಎಂದುದಾಗಿ ಇವನರಿದು ದಾತೃ ಭೋಕ್ತೃ ಶಿವನೆಂದು ಅಹಂಮಮತೆಗಳಡಗೆ, ಸ್ವಾನುಭಾವವಳವಟ್ಟು, ಬಾಗಿಲು ಗಾಹಿಯಾಗಿ ದಾಸೋಹವಂ ಮಾಡುವುದು. ಇದು ಉತ್ತಮ ಕ್ರಿಯೆಯು. ಇದು ಲಿಂಗದೊಡನೆ ಹುಟ್ಟಿ ಲಿಂಗದೊಡನೆ ಬೆಳೆದು ಲಿಂಗದೊಡನೆ

ಲೀಯುವಹ ಮಹಾಲಿಂಗಾಂಗಿಗಲ್ಲದೆ ಸಾಧ್ಯವಾಗದು. ಇದು ಅಳವಡದಿರ್ದಡೆ ಸದ್ಭಕ್ತನು ಶ್ರೀಗುರುಲಿಂಗಜಂಗಮಕ್ಕೆ ತನು ಮನ ಧನ ಪ್ರಾಣ ಮುಂತಾಗಿ ಹೊನ್ನು ಹೆಣ್ಣು ಮಣ್ಣಿನಲ್ಲಿ ವಂಚನೆ ಇಲ್ಲದೆ ಸದ್ಭಕ್ತಿಯಿಂದ ದಾಸೋಹವ ಮಾಡುವುದು. ಇದು ಮಧ್ಯಮ ಕ್ರಿಯೆಯು. ಇದು ಸಾಮಾನ್ಯರಿಗಳವಡದು. ಇದು ಅಸಾಧ್ಯವು. ಇದು ಅಳವಡದಿರ್ದಡೆ ಸದ್ಭಕ್ತನು ತನ್ನ ತನುಮನ ಪ್ರಾಣಂಗಳಂ ಬಳಲಿಸಿ ತನಗೆ ಪ್ರಿಯವಾದ ಪುತ್ರಮಿತ್ರ ಕಳತ್ರಾದಿಗಳಿಗೆ ಹೇಗೆ ಸಕಲ ದ್ರವ್ಯಂಗಳಂ ಕೊಡುವನೋ ಹಾಗೆಯಾದರೂ ಶ್ರೀಗುರುಲಿಂಗಜಂಗಮಕ್ಕೆ ಸ್ನೇಹದಿಂದ ದಾಸೋಹವಂ ಮಾಡುವುದು. ಇದು ಕನಿಷ್ಠ ಕ್ರಿಯೆಯು. ಇದು ಮಹಾಜ್ಞಾನ ಪುರುಷರಿಗಲ್ಲದೆ ಅಳವಡದು. ಇದು ಅಳವಡದಿರ್ದಡೆ ಶ್ರೀಗುರುಲಿಂಗಜಂಗಮಕ್ಕೆ ಶಕ್ತ್ಯಾನುಸಾರ ಮಾಡುವುದು. ಇದು ನಿಕೃಷ್ಟಕ್ರಿಯೆಯು. ಅದೆಂತೆಂದಡೆ ॥ಶ್ಲೋ॥ ಶ್ರೂಯತಾಂ ಧರ್ಮ ಸರ್ವತ್ರ ಶ್ರುತ್ವಾಚೈವಾವಧಾರ್ಯತಾಂ। ಆತ್ಮನಃ ಪ್ರತಿಕೂಲಂ ಚ ಪರೀಕ್ಷಾನಂದ ಮಾಚರೇತ್ ॥ ಎಂದುದಾಗಿ ಇದನರಿತು ತನ್ನಂತೆ ಭಾವಿಸಿಯಾದಡೆಯೂ ದಾಸೋಹವ ಮಾಡಿ ಪ್ರಸನ್ನತೆಯ ಪಡೆವುದೇ ಸದ್ಭಕ್ತಂಗೆ ಪಥವು ನೋಡಾ. ಇಂತಪ್ಪ ಉತ್ತಮ ಮಧ್ಯಮ ಕನಿಷ್ಠ ನಿಕೃಷ್ಟವೆಂಬ ಈ ನಾಲ್ಕು ಪರ್ಯಾಯದಲ್ಲಾದಡೆಯೂ ಒಂದು ಪರ್ಯಾಯದಲ್ಲಿ ಭಾವಿಸಿಕೊಂಡು ತನುಮನಧನವನಿತ್ತು ಸ್ನೇಹದಿಂದ ದಾಸೋಹವ ಮಾಡಿ ಪ್ರಸಾದವ ಪಡೆದು ಭೋಗಿಸಿ ಭಕ್ತರಾಗಬೇಕು. ಈ ಪ್ರಕಾರದಿಂದಲ್ಲದೆ ಮುಕ್ತಿ ಇಲ್ಲ. ಈ ಚತುರ್ವಿಧ ಕ್ರಿಯೆಗಳೊಳಗೆ ಆವುದನು ಮಾಡದೆ ದುಷ್ಕ್ರಿಯೆಯಲ್ಲಿ ವರ್ತಿಸುತ್ತ ದುರ್ಭಾವದಿಂದ ಗುರುಲಿಂಗಜಂಗಮವನವಿಶ್ವಾಸವಂ ಮಾಡಿ ದಾಸೋಹವಿಲ್ಲದೆ ತನ್ನೊಡಲನೆ ಹೊರೆದಡೆ ಅವನು ಸದ್ಭಕ್ತರೊಳಗೆ ಸಲ್ಲ. ಅವಂಗೆ ಪ್ರಸಾದವಿಲ್ಲ. ಪ್ರಸಾದವಿಲ್ಲವಾಗಿ ಮುಕ್ತಿ ಇಲ್ಲ. ಅವನು ಉಭಯ ಭ್ರಷ್ಟ. ಇದನರಿತು ತನ್ನಂತೆ ಭಾವಿಸಿ ಶ್ರೀಗುರುಲಿಂಗಜಂಗಮಕ್ಕೆ ವಿಶ್ವಾಸದಿಂ ದಾಸೋಹವ ಮಾಡಲು ಇಹಸಿದ್ಧಿ ಸರ್ವಸಿದ್ಧಿಯಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ವಚನಕಾರನು ದಾಸೋಹದಲ್ಲಿ ನಾಲ್ಕು ಭಾಗಗಳನ್ನು ಮಾಡಿರುವನು. ಅವು ಉತ್ತಮ, ಮಧ್ಯಮ, ಕನಿಷ್ಠ, ನಿಕೃಷ್ಟ ಎಂದು ಇವೆ. ಭಕ್ತನು ತನ್ನ ಸೊಮ್ಮೆಲ್ಲ ತನ್ನದೆಂದು ಭಾವಿಸದೆ ಶಿವನದೆಂದು

ಭಾವಿಸಿ ಗುರು-ಲಿಂಗ-ಜಂಗಮಕ್ಕೆ ತನ್ನ ತನು-ಮನ-ಧನ-ಪ್ರಾಣಗಳನ್ನು ಅರ್ಪಿಸುವವನೂ ಹೀಗೆ ಅರ್ಪಿಸಿ ಉಣ್ಣುವವನೂ ಈ ಉಭಯತರು ಶಿವನೆಂದು ಭಾವಿಸಿ ಸಮರಸ ಭಾವದಿಂದ ಅನುಭವಿಸಬೇಕು. ಇದು ಉತ್ತಮ ಕ್ರಿಯೆಯು. ಯಾವನಲ್ಲಿ ಲಿಂಗವು ಬೆರೆತು ಹೋಗಿದೆಯೋ ಅವನಿಗೆ ಮಾತ್ರ ಇದು ಸಾಧ್ಯವೆಂದು ಉರಿಲಿಂಗ ಪೆದ್ದಿಯು ಇಲ್ಲಿ ಹೇಳುತ್ತಾನೆ.

ಹೀಗೆ ದಾತೃ ಭೋಕ್ತೃ ಶಿವನೆಂದು ಭಾವಿಸಿ ಕೊಡುವದು ಭಕ್ತನಿಗೆ ಶಕ್ಯವಾಗದಿದ್ದರೆ ಅವನು ವಂಚನೆ ಇಲ್ಲದೆ ಸದ್ಭಕ್ತಿಯಿಂದ ತನ್ನ ತನು ಮನಧನಪ್ರಾಣಗಳನ್ನು ಗುರುಲಿಂಗಜಂಗಮಕ್ಕೆ ಅರ್ಪಿಸಬೇಕು. ಇದು ಮಧ್ಯಮ ಕ್ರಿಎಂದೆನಿಸುವದು. ಸಾಮಾನ್ಯರಿಗೆ ನಿಜವಾದ ಭಕ್ತಿಯು ಇರುವದಿಲ್ಲಾದ್ದರಿಂದ ಇದು ಅವರಿಗೆ ಅಳವಡದು ಎಂದು ವಚನ ಕಾರನು ಇಲ್ಲಿ ಹೇಳುತ್ತಾನೆ.

ಗುರುಲಿಂಗಜಂಗಮಕ್ಕೆ ಹೀಗೆ ವಂಚನೆ ಇಲ್ಲದೆ ಸದ್ಭಕ್ತಿಯಿಂದ ಅರ್ಪಿಸಲು ಭಕ್ತನಿಗೆ ಆಗದಿದ್ದರೆ, ಅವನು ಹೇಗೆ ತನ್ನ ಹೆಂಡತಿ ಪುತ್ರ ಮಿತ್ರರಿಗೆ ಪ್ರೀತಿಯಿಂದ ತನ್ನ ಸಕಲ ದ್ರವ್ಯಗಳನ್ನು ಕೊಡುತ್ತಾನೋ ಹಾಗೆಯೇ ಪ್ರೀತಿಯಿಂದ ಗುರುಲಿಂಗಜಂಗಮಕ್ಕೆ ಕೊಡಬೇಕು. ಇದು ಕನಿಷ್ಠ ಕ್ರಿಎಂದೆನಿಸುವದು. ಇದಾದರೂ ಕಠಿಣವು. ಇದು ಮಹಾ ಜ್ಞಾನಿಗಳಿಗೆ ಮಾತ್ರ ಅಳವಡುವದು ಎಂದು ಹೇಳುತ್ತಾನೆ.

ಇದೂ ಅಳವಡದಿದ್ದರೆ ಗುರುಲಿಂಗಜಂಗಮಕ್ಕೆ ತನ್ನ ಶಕ್ತ್ಯಾನು ಸಾರ ಕೊಡಬೇಕು. ಇದು ನಿಕೃಷ್ಟ ಕ್ರಿಯೆಯು.

ಈ ನಾಲ್ಕು ವಿಧಗಳಲ್ಲಿ ಒಂದು ವಿಧವನ್ನಾದರೂ ಭಕ್ತನು ಕೈಕೊಂಡು ಆಚರಿಸಬೇಕು. ಹೀಗೆ ಆಚರಿಸದ ಹೊರ್ತು ಭಕ್ತನಿಗೆ ಮುಕ್ತಿ ಇಲ್ಲ. ಆದರೆ ಹೀಗೆ ವರ್ತಿಸದೆ ದುಷ್ಕ್ರಿಯೆಯಲ್ಲಿ ಭಕ್ತನು ವರ್ತಿ ಸುತ್ತ ದಾಸೋಹಕ್ಕೆ ಹೊರ್ತಾಗಿ ಬರೀ ತನ್ನ ಹೊಟ್ಟೆಯನ್ನು ಹೊರೆ ದುಕೊಂಡಿದ್ದರೆ ಅವನು ಸದ್ಭಕ್ತರೊಳಗೆ ಸಲ್ಲನು. ಅವನಿಗೆ ಪ್ರಸಾದ ವಿಲ್ಲ, ಮುಕ್ತಿ ಇಲ್ಲ, ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

ಈ ಪ್ರಕಾರ ಕೊಡುವದರಲ್ಲಿ ವಚನಕಾರನು ನಾಲ್ಕು ವಿಧಗಳನ್ನು ಮಾಡಿರುವನು. ಶಿವನ ಸೊಮ್ಮೆಂದು ತಿಳಿದುಕೊಡುವದು, ಸದ್ಭಕ್ತಿ

ಯಿಂದ ಕೊಡುವದು, ಸ್ನೇಹದಿಂದ ಕೊಡುವದು, ಶಕ್ತ್ಯಾನುಸಾರ ಕೊಡುವದು ಹೀಗೆ ಇವುಗಳು ಇವೆ. ಇವುಗಳಲ್ಲಿ ಒಂದನ್ನಾದರೂ ಮನುಷ್ಯನು ಅನುಸರಿಸಬೇಕು. ಅವನು ಸ್ವಾರ್ಥವನ್ನು ಸಂಪೂರ್ಣ ಬಿಡಬೇಕು, ಜಗತ್ತಿನ ಹಿತಾರ್ಥವಾಗಿ ಮಾಡಬೇಕು, ಎಂದು ವಚನ ಕಾರನು ಇಲ್ಲಿ ಹೇಳುತ್ತಾನೆ. ಹೀಗೆ ಮಾಡುವಲ್ಲಿ ಅವನ ಉದ್ದೇಶ ಗಳು ಮತ್ತು ಮನಸ್ಸು ಹ್ಯಾಗೆ ಇರಬೇಕೆಂಬದನ್ನು ವಚನಕಾರನು ಇಲ್ಲಿ ವಿವೇಚಿಸಿರುವನು.

**ವಚನ:**— ೯೫. ಸಾವುದು ದಿಟದಿಟ ನೋಡಾ. ಅದು ಸಟೆ ಎಂದು ನಿತ್ಯವೆಂದನಿತ್ಯವ ನಂಬಿ, ಹೊನ್ನು ಹೆಣ್ಣು ಮಣ್ಣು ನಿನ್ನವೆಂದು ನಂಬಿರಲು, ಅವು ನಿನ್ನ ವಂಚಿಸಿ ಅನ್ಯರಿಗೆ ಹೋದುದನರಿಯಿರೆ? ಅಯ್ಯೋ, ಅಯ್ಯೋ, ಕೆಡದಿರಿ. ಕೆಡದಿರಿ ಸತ್ಪಾತ್ರಕ್ಕೆ ಸಲಿಸಿ ಬದುಕಿರಯ್ಯಾ. ಗುರು ಲಿಂಗಜಂಗಮಕ್ಕೆ ಸದ್ಭಕ್ತಿಯಿಂ ದಾಸೋಹವಂ ಮಾಡಲು ನಿತ್ಯವು. ಇದು ಸಟೆ ಎಂದು ನರಕಕ್ಕಿಳಿದು ಕೆಡದಿರಿ ಕೆಡದಿರಿ. ಇದನರಿದು ಸಟೆಯು ದಿಟ ಮಾಡದಿರಿ. ಗುರುಲಿಂಗಜಂಗಮಕ್ಕೆ ದಾಸೋಹವ ಮಾಡುವುದೇ ದಿಟ. ಇದು ಸತ್ಯ. ಇದು ಸತ್ಯ. ಇದೇ ನಿತ್ಯ, ಇದೇ ಯುಕ್ತಿ, ಇದೇ ಭಕ್ತಿ, ಇದೇ ಶಕ್ತಿ, ಇದೇ ಮುಕ್ತಿ. ಇದು ಸತ್ಯ, ಶಿವಬಲ್ಲ, ಶಿವ ನಾಣೆ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಮನುಷ್ಯನು ಕಡೆಗೆ ಸತ್ತುಹೋಗುವುದೇ ದಿಟ. ಇದನ್ನು ಅವನು ಲಕ್ಷಿಸದೆ ಅನಿತ್ಯವಾದ ವಸ್ತುಗಳನ್ನು ನಿತ್ಯವೆಂದು ನಂಬಿ ಅವು ಗಳಿಗಾಗಿ ದುಡಿದು ಬಳಲುತ್ತಾನೆ. ಮತ್ತು ಹೊನ್ನು ಹೆಣ್ಣು ಮಣ್ಣು ಇವುಗಳನ್ನು ದೊರಕಿಸಲು ಕಷ್ಟಪಡುತ್ತಾನೆ. ಆದರೆ ಇವು ಅವನವಲ್ಲ. ಅವೆಲ್ಲವೂ ಒಮ್ಮೆ ಹೆರವರ ಪಾಲಾಗುತ್ತವೆ. ಇಂಥವುಗಳಿಗೋಸ್ಕರ ಮನು ಷ್ಯನು ಶ್ರಮಪಟ್ಟು ಕಡೆಗೆ ಕೆಟ್ಟುಹೋಗುವನು. ಆದ್ದರಿಂದ ಭಕ್ತನು ಈ ವಸ್ತುಗಳನ್ನು ಸತ್ಪಾತ್ರಕ್ಕೆ ಸಲಿಸಿ ಬದುಕಬೇಕು. ಅವನು ಗುರುಲಿಂ ಗಜಂಗಮಕ್ಕೆ ದಾಸೋಹವನ್ನು ಮಾಡಬೇಕು. ಹೀಗೆ ಮಾಡಿದ್ದಾದರೆ ಅವನು ನಿತ್ಯನಾಗುವನು. ಇದನ್ನು ತಿಳಿದುಕೊಂಡು ಸಟೆಯಾಗಿರುವ ದ್ರವ್ಯಗಳನ್ನು ದಿಟವೆಂದು ನಂಬಿ ಆಚರಿಸದೆ ಅವುಗಳನ್ನು ಸತ್ಪಾತ್ರಕ್ಕೆ ದಾಸೋಹಭಾವದಿಂದ ಸಲಿಸಿ ಬದುಕಬೇಕು. ಇದೇ ಸತ್ಯವು, ನಿತ್ಯವು,

ಭಕ್ತಿಯು, ಶಕ್ತಿಯು, ಯುಕ್ತಿಯು ಹೀಗೆ ವಚನಕಾರನು ಈ ಆಚರಣೆಯ ವಿಧವನ್ನು ಬಹಳವಾಗಿ ಹೊಗಳಿದ್ದಾನೆ.

**ವಚನಃ—** ೯೬. ಹೊನ್ನ ಬಿಟ್ಟು, ಹೆಣ್ಣ ಬಿಟ್ಟು, ಮಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಬಣ್ಣವಿಟ್ಟು ನುಡಿವ ಅಣ್ಣಗಳ ಪರಿಯು ನೋಡಿರೇ. ಹೆಣ್ಣ ಬಿಟ್ಟಡೆಯೂ ಹೊನ್ನ ಬಿಡಿರಿ. ಹೊನ್ನ ಬಿಟ್ಟಡೆಯೂ ಮಣ್ಣ ಬಿಡಿರಿ. ಒಂದು ಬಿಟ್ಟಡೆಯೂ ಒಂದ ಬಿಡಿರಿ. ಬ್ರಹ್ಮಚಾರಿಗಳೆಂತಪ್ಪಿರಿ ಹೇಳಿರಣ್ಣಾ? ಹೆಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಆವರೆಂತು ಹೇಳಿದರು? ನೀವೆಂತು ಕೇಳಿದಿರಿ? ಹೆಣ್ಣನು ಹೆಣ್ಣೆಂದರಿವಿರಿ. ಹೊನ್ನನು ಹೊನ್ನೆಂದರಿವಿರಿ. ಮಣ್ಣನು ಮಣ್ಣೆಂದರಿವಿರಿ. ಬ್ರಹ್ಮಚಾರಿಗಳೆಂತಪ್ಪಿರಣ್ಣಾ? ಬಿಟ್ಟಡೆ ಹೆಣ್ಣು ಹೊನ್ನು ಮಣ್ಣು ಈ ಮೂರನೂ ಬಿಟ್ಟು ನಿರಾಭಾರಿ ಜಂಗಮವಾಗಿ ಜ್ಞಾನದಲ್ಲಿ ಸುಳಿಯ ಬಲ್ಲಡೆ ಭವಂ ನಾಸ್ತಿ ತಪ್ಪದು. ಹಿಡಿದಡೆ ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು ಗುರುಲಿಂಗಜಂಗಮಕ್ಕೆ ಸದ್ಭಕ್ತಿಯಿಂದ ದಾಸೋಹವ ಮಾಡ ಬಲ್ಲಡೆ ಭವಂ ನಾಸ್ತಿ ತಪ್ಪದು. ಅದೆಂತೆಂದಡೆ, ವೀರಾಗಮದಲ್ಲಿ ॥ಶ್ಲೋ॥ ಮಾತರಃ ಪಿತರಶ್ಚೈವ ಸ್ವಪತ್ನೀಬಾಲಕಾಂ ಸ್ತಥಾ। ಹೇಮಭೂಮಿ ವಿನಾಶಶ್ಚ ನ ದುಃಖೀ ಬ್ರಹ್ಮಚಾರಿಣಾಂ ॥ ಎಂದುದಾಗಿ ಇಂತು ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು, ಗುರುಲಿಂಗಜಂಗಮಕ್ಕೆ ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ. ಅಲ್ಲಿ ಇದ್ದರೆಯೂ ನೀರ ತಾವರೆಯಂತಿಪ್ಪರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ನಿಮ್ಮ ಶರಣರು.

**ಭಾವಃ—** ಭವವನ್ನು ಹೋಗಲಾಡಿಸಲು ಇಂಥದೇ ಒಂದು ಮಾರ್ಗ ವನ್ನು ಅನುಸರಿಸಬೇಕೆಂದು ವಚನಕಾರರು ಹೇಳುವದಿಲ್ಲ. ಭಕ್ತರಲ್ಲಿ ಸಾಮರ್ಥ್ಯವೂ ಒಲವುಗಳೂ ಒಂದೇ ವಿಧವಾಗಿರುವದಿಲ್ಲ. ಅವು ಭಿನ್ನ ತೆರನಾಗಿರುತ್ತವೆ. ಆದ್ದರಿಂದ ಅವುಗಳಿಗೆ ಅನುಸರಿಸಿ ಭಕ್ತನು ತನ್ನ ಪಾರಮಾರ್ಥಿಕ ಹಾದಿಯನ್ನು ಹಿಡಿಯಬೇಕು. ಷಟ್‌ಸ್ಥಲ ಶಾಸ್ತ್ರವು ಇದ ಕ್ಕನುಸರಿಸಿಯೇ ವ್ಯವಸ್ಥೆಗೊಳಿಸಲ್ಪಟ್ಟಿರುತ್ತದೆ. ಅನೇಕರು ಹೊನ್ನು ಹೆಣ್ಣು ಮಣ್ಣು ಬಿಟ್ಟು ಬ್ರಹ್ಮಚಾರಿಗಳಾಗಿ ಈ ಭವವನ್ನು ದಾಂಟಬೇಕೆಂದು ಅಪೇಕ್ಷಿಸುತ್ತಾರೆ. ಉರಿಲಿಂಗ ಪೆದ್ದಿಯು ಹೀಗೆ ವರ್ತಿಸುವವರು ನಿರಾ ಭಾರಿ ಜಂಗಮರು ಎಂದು ಹೇಳಿ ಇಂಥವರು ಈ ಮೂರನೂ ಬಿಟ್ಟು ಜ್ಞಾನದಲ್ಲಿ ಸುಳಿಯಬೇಕೆಂದು ಹೇಳುತ್ತಾನೆ. ಅವರು ಒಂದನ್ನು ಬಿಟ್ಟು

ಬೇರೆಯುವುಗಳನ್ನು ಆಶಿಸಿದರೆ ಅವರು ನಿರಾಭಾರಿ ಜಂಗಮವಲ್ಲ. ಅವರಿಗೆ ಭವ ತಪ್ಪದು. ಬರೇ ಅವಿವಾಹಿತರಾಗಿ ಉಳಿದಿದ್ದರೂ ಅವರು ಹೊನ್ನು ಮಣ್ಣು ಆಶಿಸುತ್ತಿದ್ದರೆ ಹೀಗೆ ಅವಿವಾಹಿತರಾಗಿ ಉಳಿದದ್ದರಲ್ಲಿ ಏನೂ ಪ್ರಯೋಜನವಿಲ್ಲ. ಬಿಟ್ಟರೆ ಹೆಣ್ಣನ್ನೂ ಬಿಡಬೇಕು, ಹೊಲಮನೆಗಳನ್ನೂ ಬಿಡಬೇಕು, ದ್ರವ್ಯವನ್ನೂ ಆಶಿಸಬಾರದು, ಹೀಗಿರುವವರು ನಿಜವಾದ ನಿರಾಭಾರಿ ಜಂಗಮವು. ಇದು ಆರಿಗೆ ಶಕ್ಯವೋ ಅವರು ಹಾಗೆ ಇರ ಬೇಕು. ಇದು ಶಕ್ಯವಿರದಿದ್ದರೆ ಈ ಮೂರನ್ನೂ ಹಿಡಿದು ದಾಸೋ ಹಭಾವದಿಂದ ವರ್ತಿಸಬೇಕು. ಹೀಗೆ ಇರುವವರೂ ಕೂಡ ಭವವನ್ನು ಹೋಗಲಾಡಿಸಿಕೊಳ್ಳುವರು. ಯಾಕಂದರೆ ಹೀಗೆ ದಾಸೋಹ ಮಾಡು ವವರು ಈ ಮೂರರಲ್ಲಿ ಇದ್ದರೂ ಕೂಡ ಹ್ಯಾಗೆ ಕಮಲವು ನೀರಲ್ಲಿ ಇರು ವದೋ ಹಾಗೆ ಇರುತ್ತಾರೆ. ಅಂದರೆ ಅವರು ಪ್ರಪಂಚದಲ್ಲಿದ್ದರೂ ಅವರು ಅದರ ಸುಖದು:ಖಗಳಿಗೆ ಅಂಟಿಕೊಳ್ಳದೆ ಇರುವರು. ಅವರಿಗೆ ಭವವಿಲ್ಲವೆಂದು ಉರಿಲಿಂಗಪೆದ್ದಿಯು ಇಲ್ಲಿ ಹೇಳಿದ್ದಾನೆ.

**ವಚನ**:— ೯೭. ವೇದವನೋದಿ ಕೇಳಿ ವೇದದ ಮರ್ಮವನ ರಿದ ಫಲ ದಾಸೋಹವಯ್ಯ. ಶಾಸ್ತ್ರವನೋದಿ ಕೇಳಿ ಶಾಸ್ತ್ರದ ಮರ್ಮ ವನರಿದ ಫಲ ದಾಸೋಹವಯ್ಯ. ಪುರಾಣವನೋದಿ ಕೇಳಿ ಪುರಾಣದ ಮರ್ಮವನರಿದ ಫಲ ದಾಸೋಹವಯ್ಯ. ಆಗಮವನೋದಿ ಕೇಳಿ ಆಗ ಮದ ಮರ್ಮವನರಿದ ಫಲ ದಾಸೋಹವಯ್ಯ. ಪುರಾತನರ ವಚನವ ನೋದಿ ಕೇಳಿ ಪ್ರಸಂಗಾನುಭಾವದಲ್ಲಿದ್ದು ಅರಿದ ಫಲ ದಾಸೋಹವಯ್ಯ. ವೇದಶಾಸ್ತ್ರ ಪುರಾಣಾಗಮಂಗಳ ಪುರಾತನರ ವಚನ ಪ್ರಸಂಗವನರಿದು ದಾಸೋಹವಿಲ್ಲದಿರ್ದಡೆ ಆ ಓದು ಗಿಳಿಯೋದಿನಂತೆ. ಕೇಳುವೆ ಮರುಳನ ಕೇಳುವೆಯಂತೆ. ಅವನೇತಕ್ಕೆ ಬಾತೆಯಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇ ಶ್ವರಾ.

**ಭಾವ**:— ಜನರು ಬಹಳ ಶ್ರಮಪಟ್ಟು ವೇದ, ಶಾಸ್ತ್ರ ಪುರಾಣ, ಆಗಮ, ಪುರಾತನರ ವಚನ ಇವುಗಳನ್ನೋದುತ್ತಾರೆ. ಅಥವಾ ಕೇಳು ತ್ತಾರೆ. ಆದರೆ ದಾಸೋಹವಿಲ್ಲದಿದ್ದರೆ ಈ ಓದು ಬರೀ ಗಿಳಿಯೋದು ಕೇಳುವೆ ಹುಚ್ಚನ ಕೇಳುವೆ ಎಂದು ವಚನಕಾರನು ಇಲ್ಲಿ ಅವರನ್ನು ಹಾಸ್ಯ ಮಾಡುತ್ತಾನೆ. ಆದರೆ ಓದಿದ್ದನ್ನು ಆಚರಣೆಯಲ್ಲಿ ತಂದಾಗಲೇ ಆ ಓದು ಆ ಕೇಳುವೆ ಪ್ರಯೋಜನಕಾರಿಯಾದವುಗಳು ಆಚರಣೆ

ಯಲ್ಲಿ ತರಬೇಕಾದರೆ ದಾಸೋಹಿಯಾಗುವದು ಅವಶ್ಯವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನಃ**— ೯೮. ವಂಚಿಸುವ ಸತಿಸುತ ಬಂಧುಗಳು ಮೊದಲಾದ ಲೋಕವ ನಂಬಿ, ನಿರ್ವಂಚಕರಪ್ಪ ಗುರು ಲಿಂಗ ಜಂಗಮವ ವಂಚಿಸಿ, ನರಕಕ್ಕೀಳಿವರನೇನೆಂಬೆನೆಯ್ಯ? ಅಕ್ಕಟಕ್ಕಟಾ, ಹೀಗೆಯೇ ಶಿವಾಚಾರ? ಹೀಗೆಯೇ ಸದಾಚಾರ? ಹೀಗೆಯೇ ಭೃತ್ಯಾಚಾರ? ಭಕ್ತಿಯುಕ್ತಿಯನರಿಯದೆ ತನುಮನ ಧನಂಗಳು ಕೆಟ್ಟು ಹೋದಾವೆಂಬ ಯುಕ್ತಿಯನರಿಯದೆ ಮರ್ಮವನರಿದು ವಂಚಿಸುವವರ ವಂಚಿಸಿ ನಿರ್ವಂಚಕರಾಗಿ ಗುರುಲಿಂಗಜಂಗಮಕ್ಕೆ ದಾಸೋಹವ ಮಾಡಲು ತನು ಕೆಡದು ಮನ ಕೆಡದು ಧನ ಕೆಡದು. ಭಕ್ತಿಯುಂಟು ಯುಕ್ತಿಯುಂಟು ಮುಕ್ತಿಯುಂಟು. ಇದು ಸತ್ಯ ಶಿವಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಜನರು ತಾವು ಗಳಿಸಿದ್ದನ್ನು ಸತಿ-ಸುತ-ಬಂಧುಗಳಿಗಾಗಬೇಕೆಂದು ಯಾವಾಗಲೂ ಇಚ್ಛಿಸುವರು. ಆದರೆ ಇಂಥವರು ಕಡೆಗೆ ವಂಚನೆ ಹೊಂದಿ ನರಕಕ್ಕಿಳಿದು ಹೋಗುವರು. ಇದು ಶಿವಾಚಾರವಲ್ಲ, ಭೃತ್ಯಾಚಾರವಲ್ಲ. ನಿರ್ವಂಚಕರಾಗಿ ದಾಸೋಹವನ್ನು ಮಾಡಿದ್ದಾದರೆ ತನು, ಮನ, ಧನಗಳು ಕೆಡಲಾರವು. ಇದೇಭಕ್ತಿಯು, ಇದರಿಂದಲೇ ಮುಕ್ತಿಯು. ಇಲ್ಲದಿದ್ದರೆ ತನು, ಮನ, ಧನಗಳೆಲ್ಲವೂ ಕೆಟ್ಟು ಹೋಗುವವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನಃ**— ೯೯. ನಿರುಪಾಧಿಕನಾಗಿ ನಿರ್ವಂಚಕತ್ವದಿಂದ ದಾಸೋಹವ ಮಾಡಿ ಪರಿಣಾಮದಿಂದ ನಿತ್ಯ ದಾಸೋಹವೆನಿಸಿದೊಡೆ ಆ ದಾಸೋಹಿಯೇ ಸದ್ಭಕ್ತನು, ಆತನೇ ಮಾಹೇಶ್ವರನು, ಆತನೇ ಪ್ರಸಾದಿ, ಆತನೇ ಪ್ರಾಣಲಿಂಗಿ, ಆತನೇ ಶರಣ, ಆತನೇ ಐಕ್ಯನು. ಆತನೇ ಇಹಲೋಕ ಪರಲೋಕ ಪೂಜ್ಯನು. ಆತನೇ ಶ್ರೇಷ್ಠ, ಆತನೇ ವಿದ್ವಾಂಸ, ಆತನೇ ಜ್ಞಾನಿ. ಶ್ರೀಗುರುಲಿಂಗಜಂಗಮವು ಒಂದೇ ಎಂದು ಭಾವಿಸದ ನಿರ್ಭಾವಿಯೇ ವಂಚಕನು. ದಾಸೋಹವ ಮಾಡಲರಿಯದವ ಅಹಂಕಾರಿ, ಆಭಾಸನು, ಅಪೂಜ್ಯನು. ಭಕ್ತನಲ್ಲ, ಮಾಹೇಶ್ವರನಲ್ಲ, ಪ್ರಸಾದಿಯಲ್ಲ, ಶರಣನಲ್ಲ, ಐಕ್ಯನಲ್ಲ. ಆತನೇ ಮೂರ್ಖನು, ಆತನೇ ಅಜ್ಞಾನಿ, ಆತನೇತಕ್ಕೆಯೂ ಬಾತೆಯಲ್ಲವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಉರವಣಿಸಿ ನಡೆತಂದು ಬ್ರಹ್ಮೇಶ್ವರನ ಮುಂದೆ
ಹರಿವಾಣ ಸಹಿತ ತಂದಿಳುಪಿ ಭಕ್ತರ ಮುಂದೆ
ಹೋಹೋ ಉಘೇ ಜಾಂಗುಬೊಲ್ಲೆಂದು ಸಂಭ್ರಮಿಸಿ
ಆಹೊ ಶಿವ ತಾನೆ ಎಂದೆನುತೆ ಮಿಗೆ ಹಾರೈಸಿ
ಶಿರಮಂ ತೆಗೆದು ಶಿವನ ಪೀಠ ಮೂಲದೊಳಿರಿಸಿ
ಹರನ ಪ್ರಸಾದ ಪಾದೋದಕದಿ ಸಿಂಗರಿಸಿ
ತೆಗೆದು ತಂದಾ ಶಿರವನೆತ್ತಿ ನಲವಿಂ ತೋರಿ
ಬೊಗುಳ್ವ ಸವಣರ್ನೋಡಿರೋ ಎನುತ್ತಂ ಸಾರಿ
ಜಡಿಯುತೀ ಸವಣ ಗುನ್ನಿಗಳ ಕೈಕೊಂಬರೇ
ವೃಡನ ಭಕ್ತಮುರ್ನಿಯುಲೇನುಮಂ ಬಗೆವರೇ

ಎನುತಗ್ಗವಣಿ ಹೊನ್ನಿತಂದೆಗಳ್ಸಡಗರಿಸಿ
ಘನ ಸಂಭ್ರಮದಿ ಕುಣಿದು ಕುಕಿಲಿರುವುತಬ್ಬರಿಸಿ
ಶರಣರ್ಜನಪ್ರತಿಮೆಗಳನೆತ್ತಲನುವಾಗೆ
ಸುರಸಮಿತಿ ಪೂಮಳೆಗಳಂ ಕರೆಯಲನುವಾಗೆ
ತಂದು ಶಿವಲಿಂಗಪ್ರತಿಷ್ಠೆಯಂ ಮಾಳ್ಪಂತೆ
ತಂದು ಪೀಠಿಕೆಯೊಳಗೆ ಲಿಂಗಮನಿಳಿಪುವಂತೆ
ಇಳಿಪಿದರು ರಾಮತಂದೆಗಳ ದೇಹದ ಮೇಲೆ
ಇಳಿಪುವಲ್ಲಿಂ ಮುನ್ನ ಉರವಣಿಸುತಂ ಮೇಲೆ
ಒಂದು ಕೈಯುಲಿ ತನ್ನ ಶಿರವ ಹತ್ತಿಸಿಕೊಳುತೆ
ಒಂದು ಕೈ ಕೂರಲಗನಾಯುತವನೆಡೆಗೊಳುತೆ
ಮುರಿದೇಳ್ದು ಗರ್ಜಿಸುತೆ ದೆಸೆದೆಸೆಯ ನೋಡುತಂ
ಇರೆ ಕಂಡು ಸವಣವಡೆ ನಡನಡನೆ ನಡುಗುತಂ
ಆಯೇಳ್ದನಾಯೇಳ್ದನಮ್ಮಯ್ಯ ರಾಮಯ್ಯ
ಆಯೇಳ್ದನಾಯೇಳ್ದನೆಲೆಲೆಲೆಲೆ ರಾಮಯ್ಯ
ಆ ನಡೆದನತ್ತತ್ತಲೇಕಾಂತರಾಮಯ್ಯ
ಈ ನಡೆದನಿತ್ತಿತ್ತಲೇಕಾಂತರಾಮಯ್ಯ

ಎನುತ ಸವಣರ್ಪರಿಯುಲೇಳ್ದು ಹರವರಿವರಿದು
ಮುನಿದು ಭುಗಿಭುಗಿಲೆನುತೆ ಹೊಗೆಯಿಲ್ಲದುರಿ ಉರಿದು

ಕೂರಲಗನೆತ್ತಿ ಭುಗಿಭುಗಿಲೆಂದು ತಿರುಪುತಂ
ಕಾರಮಿಂಚಿನ ತೆರದಿ ಹೊಳೆದು ಘುಳಿಘುಳಿಸುತಂ
ಪರಿವನಟ್ಟಿದನೋಡಿಸಿದನರುಹ ನಿಕರಮಂ
ತಿರುತಿರುಗಿ ಕೈವೀಸಿದಂ ಭಕ್ತನಿಕರವುಂ
ಕೈವೀಸಿ ತಮುತಮಗೆ ವೀರರೆಲ್ಲರ್ನೆರೆದು
ಕೈವಾರದಿಂದೆ ಬಸದಿಗಳೊಳಗೆ ಪುಗುತಂದು
ಕಿತ್ತು ಬಿಸುಟರ್ಜಿನಪ್ರತುಮೆಗಳನಲ್ಲಲ್ಲಿ
ಎತ್ತಿದರ್ಬತ್ತಲೆಯ ಬೊಂಬೆಗಳನಲ್ಲಲ್ಲಿ
ನಾನಾ ವಿಧದ ಸಂತಸಂ ಸಾರ್ದ ಕೂಟವುಂ
ಏನೆಂಬೆನಾ ಭಕ್ತರಾನಂದದಾಟವುಂ
ನಲಿನಲಿದು ನೆಗೆನೆಗೆದು ನಿಂದು ನಿಂದಾಡುತಂ
ಉಲಿದುಲಿದು ಪರಿಪರಿದು ಮುರಿಮುರಿದು ಹಿಗ್ಗುತಂ

ಇರ್ದ ಭಕ್ತರ ನೋಡುತೀಕ್ಷಿಸುತ ರಾಮಯ್ಯ
ಪೊರ್ದಿದವರಂ ಕರೆದನೇಕಾಂತ ರಾಮಯ್ಯ
ಆನಂದದಿಂದೆ ಶಿವಲಿಂಗಂಗಳಂ ತರಿಸಿ
ನಾನಾ ಮುಹೂರ್ತದಿಂದಂ ಲಿಂಗವಂ ನಿಲಿಸಿ
ಲಿಂಗ ಪ್ರತಿಷ್ಠೆಗಳನಲ್ಲಲ್ಲಿ ಮಾಡುತಿರೆ
ಹಿಂಗದೆ ಹರನನಕ್ಕರಿಂದ ಕೊಂಡಾಡುತಿರೆ
ಆಗಳೆರಗಿದವಲ್ಲಿ ಪೂಮಳೆಗಳೊಪ್ಪದಿಂ
ಮೇಗೆ ದುಂದುಭಿಶಂಖನಾದಂಗಳೊಪ್ಪದಿಂ
ಮೊಳಗಿದವು ಮಂಗಳ ಮೃದಂಗಂಗಳಲ್ಲಲ್ಲಿ
ತೊಳಗಿದವು ಧವಳಾತಪತ್ರ ಚಾಮರವಲ್ಲಿ
ಆ ಸಮಯದೊಳು ಸಕಲ ಭಕ್ತರೆಲ್ಲಂ ಪೊಗಳೆ
ಆಸುರದಿ ಹೊಗಳತೊಡಗಿದರುತ್ಸವಂ ನೆಗಳೆ
ಶಿವನ ಕೀರ್ತಿಗೆ ಮೂರ್ತಿಯಾದೆ ಎಲೆ ರಾಮಯ್ಯ
ಭವನ ಕೀರ್ತಿಯ ಲತೆಗಡರ್ಪಾದೆ ರಾಮಯ್ಯ
ಸಂದುದು ಸದಾಚಾರ ನಿನ್ನಿಂದೆ ರಾಮಯ್ಯ
ಒ ಸಂದುದೀಶ್ವರನಲ್ಲಿಗೇಕಾಂತರಾಮಯ್ಯ
ಸಂದ ಭಕ್ತರ ಕಣ್ಣ ಪುಣ್ಯವೇ ರಾಮಯ್ಯ

ಇಂದು ನಿನಗೆಣೆ ಯಾವನೇಕಾಂತರಾಮಯ್ಯ
ಭಾಪುರೇ ವೀರ ಸೋಮೇಶ್ವರನೆ ಕೀರ್ತಿಯೇ
ಭಾಪುಮಜಭಾಪೆನ್ನ ಭಕ್ತ ಚೂಡಾಮಣಿಯೆ

ಎಂದು ಪೊಗಳಲ್ಕೆ ಶಿವಭಕ್ತರ್ಗೆ ಕೈಮುಗಿದು
ನಿಂದು ಪೊಡಮಟ್ಟು ಬಲವಂದು ತನುಮಂ ಸುಗಿದು
ಶರಣರ್ಗೆ ಸಂತಸದ ಗಣಪರ್ವಮಂ ಮಾಡಿ
ಹರಿವರಿಯು ಹರುಷಂಗಳಿಂದಲೋಕುಳಿಯಾಡಿ
ಎಲ್ಲರ್ಗೆಯುಡಕೊಟ್ಟು ಮಿಗೆ ಸಂತಸಂ ಬಡಿಸಿ
ಎಲ್ಲರಂ ನಿಜನಿವಾಸಕ್ಕೆ ಬಿಜಯಂಗೈಸಿ
ಹೊನ್ನತಂದೆಗಳನಿದಿರ್ಗೊಂಡು ಪುರದೊಳ್ಮೆರಿಸಿ
ಮನ್ನಿಸುತ್ತವರ ಹುಲಿಗೆರೆಗೆ ಬಿಜಯಂಗೈಸಿ
ಇರುತಮಿರೆ ಬಂದ ಪುಷ್ಪಕದೊಳಗೆ ರಾಮಯ್ಯ
ಅರರೆ ಕುಳ್ಳಿರುತಿರ್ದನೇಕಾಂತರಾಮಯ್ಯ

ಆ ಗಣಂಗಳ್ಸಹಿತ ದೇವದುಂದುಭಿ ಸಹಿತ
ಮೇಗೆ ನೆಗೆದುದು ಸರ್ವವಾದ್ಯ ರಭಸಂ ಸಹಿತ
ನಡೆವುತಿರೆ ಗಗನದೊಳಗಿಳೆ ಕೌತುಕಂಬಡಲು
ಮೃಡಭಕ್ತರುತ್ಸವದಿ ಮಿಗೆ ಸಂತಸಂಬಡಲು
ಒಂದು ರಜತಾದ್ರಿಯು ಸಮೀಪಕ್ಕೆ ಸಾರುತಂ
ನಂದೀಶನಿರ್ದ ಬಾಗಿಲೊಳಿರ್ದು ಸಾರುತಂ
ಮೆಯ್ಯಿಕ್ಕುತಂ ಮೃಡನ ಪದತಳದೆಡೆಗೆ ಸಾರ್ದು
ಕೆಯ್ಯಂ ಮುಗಿದು ಮುಗಿದು ಪುಳುಕಮುಣ್ಮುತೆ ಸಾರ್ದು
ಇರಲಭವನತಿಶಯ ಸ್ನೇಹದಿಂ ಬಿಗಿಯಪ್ಪಿ
ಗಿರಿಸುತೆಗೆ ಪೇಳುತಂ ಪ್ರೇಮದಿಂ ಬಿಗಿಯಪ್ಪಿ
ನೋಡು ಪಾರ್ವತಿ ಧೀರನಂ ಮಹಾ ಭಕ್ತನಂ
ನೋಡು ನಂದೀಶ ನಿಷ್ಠಾಭಕ್ತಿಯುಕ್ತನಂ
ಅಬ್ಬಲೂರೊಳ್ಸವಣರೊಳು ವಾದಿಸಿದರುಂಟೆ
ನಿಬ್ಬರದ ಭಾಷೆಯುಂ ಕೈಕೊಂಡರಿಂತುಂಟೆ
ಸಿರಿವನರಿದೇಳುದಿನವಿರಿಸಿ ಪಡೆದವರುಂಟೆ

ಉರವಣಿಸಿ ಎನ್ನ ವಿಶ್ವಾಸಿಸಿದರಿಂತುಂಟೆ
ಎಂದು ಬೋಳೈಸುತಂ ಗಣಕುಲಕೆ ತೋರುತಂ
ಸಂದಣಿಪ ಲೀಲೆಯಿಂ ಸುಖರಸದೊಳಾಳುತಂ
ರಾಮತಂದೆಗೆ ಒಲ್ದು ಗಣಪದವನೀವುತಂ
ಕಾಮಹರನಲ್ಲಿ ಸಾಮೀಪ್ಯ ಪದವೀವುತಂ
ಶಂಕರಂ ಶಶಿಧರಂ ಗಿರಿಜೇಶನೊಪ್ಪಿದಂ
ಪಂಕಜೋದ್ಭವ ಶಿರಃ ಕಂಜಕರನೊಪ್ಪಿದಂ
ಅಭಯಹಸ್ತಂ ಶೂಲಪಾಣಿ ಇಂತೊಪ್ಪಿದಂ
ವಿಭವದಿಂ ಡಮರುಘಂಟಾಹಸ್ತನೊಪ್ಪಿದಂ
ಹೆಂಪೆಸೆವಲಂಪಿನಿಂ ಪ್ರಮಥನಿಧಿಯೊಪ್ಪಿದಂ
ಹಂಪೆಯ ವಿರೂಪಾಕ್ಷಲಿಂಗನಿಂತೊಪ್ಪಿದಂ

**ಕಂದ॥** ವಸುಧೆಯೊಳು ಜೈನರಂ ವಾ।
ದಿಸಿ ಗೆಲ್ದೇಕಾಂತರಾಮ ತಂದೆಯ ಶಿಶುವೆಂ॥
ದೊಸೆದೆನಗೆ ಕೃಪೆಯನೀವುದು।
ಶಶಿಯಂ ಸೂಡಿದನೆ ಹಂಪೆಯ ವಿರೂಪಾಕ್ಷಂ॥

---

# ವೈಜಕ್ಕವ್ವೆಯ ರಗಳೆ.

**ಕಂದ॥** ಅರುಹ ಕುಲಕುಮುದ ಭಾಸ್ಕರ ।
ನರುಹದ್ವಿಪ ಸಿಂಹ ಹಂಪೆಯ ವಿರೂಪಾಕ್ಷಂ ।
ಶರಣರ್ಜಯ ಎನೆ ಮೆರೆದಂ ।
ಪರಿವಳಿಗೆಯ ವೈಜಕಾಂಬೆಯಂ ಧಾರುಣಿಯೊಳ್ ॥

## ಉತ್ಸಾಹ ರಗಳೆ.

ಒಂದು ಶಿವಪುರಂ ವಿರಾಜಿಸಿರ್ಪುದುತ್ತರಾಭಿಯಲ್ಲಿ
ಇಂದುಧರನ ಹರನ ಶರಣ ವೃಂದದಿಂದಲೊಪ್ಪುತಲ್ಲಿ
ಶಿವನ ಭಕ್ತನೋರ್ವನಿರ್ಪನಾತನರಸಿ ಪರಮ ಭಕ್ತೆ
ಭವನ ಭಾವ ಭರಿತ ಚರಿತೆ ಸರ್ವ ಲಕ್ಷಣ ಪ್ರಯುಕ್ತೆ
ಅಂತವರ್ಗೆ ಪುಟ್ಟಿದಳ್ವಿವೇಕ ನಿಧಿ ಯೆನಿಪ್ಪ ಬಾಲೆ
ಕಂತುಹರನ ನೊಲಿಸಬಲ್ಲ ನಿರ್ವಿಕಾರಯುಕ್ತ ಶೀಲೆ
ನಾಮವಾಗೆ ಓಜೆವೆತ್ತ ವೈಜಕವ್ವೆ ಎಂಬುಬಾಗೆ
ಸೋಮಧರನ ಕಿವಿಗೆ ಸವಿಗಳೀವ ಕರ್ಣಪೂರವಾಗೆ
ಬೆಳೆಯುತಿರ್ದಳಿಂದುಕಳೆಗೆ ಮುಖದ ಬೆಳಗನೀವುತಲ್ಲಿ
ಬೆಳೆಯುತಿರ್ದಳವಮ ನಿತ್ಯನೇಮದಚಲ ಭಕ್ತಿಯಲ್ಲಿ
ಬೆಳೆಯೆ ಬಾಲಲೀಲೆ ಕಳೆದು ಯೌವ್ವನಂ ತಳಿರ್ತು ತೋರೆ
ತೊಳಗುವಂಗರೇಖೆ ಕನಕಲತೆಯೊಲಂತೆಯೊಪ್ಪಿ ಮೀರೆ
ಪದತಳಂ ಸರಾಗ ನಳಿನ ದಳದ ಕಂಪನೇಳಿಸುತ್ತೆ
ಮುದದೆ ಗುಲ್ಫಗಳ್ಸುವರ್ಣ ಘುಟಿಕೆಯಂತೆ ರಂಜಿಸುತ್ತೆ
ಜಾನುದೇಶವಾನತರ್ಗನೂನ ಪದವನಿತ್ತು ತಣಿಪೆ
ಭೂನುತಂಗಳೂರುದಂಡವಲ್ಲಿ ರಂಭೆಯೊಳ್ಪನಳಿಪೆ
ಕೃತಕ ಗಿರಿಯ ಸಿರಿಯನೆಳೆದು ಸೆಳೆದುಕೊಂಡು ಜಘನ ಒಪ್ಪೆ
ಅತನುವಿಂಗೆ ಪುಗಃವೊಡಡ್ಡಲಾದ ತೆರದಿ ತ್ರಿವಳಿಯೊಪ್ಪೆ
ಪೊಕ್ಕು ಗುಣ್ಪನರಿವೊಡತನುಗರಿದೆನಿಪ್ಪ ನಾಭಿ ಎಸೆಯೆ
ಮಿಕ್ಕು ಮೀರಿ ಸೈತನಾಗಿ ಸೂಸದಡರ್ದ ಬಾಸೆ ಎಸೆಯೆ

ಮಿಸುಪ ಮೊಲೆ ಮನೋಜಕುಂಭಿ ಕುಂಭಯುಗಮನೆಯ್ದೆ ನೆಗಳೆ
ಎಸೆವ ತೋಳವೊದಲನಂಗ ಖಡ್ಗಲತೆಯ ಹೊಗರನುಗುಳೆ
ವದನ ಮಂಡಲಂ ಮೃಗಾಂಕ ಬಿಂಬಮಂ ನಗುತ್ತ ಪಳಿಯೆ
ಸುದತಿಯಕ್ಷಿ ಮದನಬಾಣದುದಯಮಂ ನಿಮಿರ್ಚಿ ಕಳೆಯೆ
ಕುಂತಳಂ ಕವರ್ತು ಕೊರ್ವಿ ಕುಸುಮ ಗಂಧದಿಂದ ಮೆರೆಯೆ
ಇಂತು ವೈಜಕವ್ವೆಯೊಪ್ಪಿ ಯೌವ್ವನಂ ಪೊದಳ್ದು ಮೆರೆಯೆ

ತಂದೆ ಕಂಡು ಮಗಳರೂಪ ಯೌವ್ವನಕ್ಕೆ ನೇಹದಿಂದೆ
ಇಂದುಮುಖಿಗೆ ವರನನರಸವೇಳ್ಕುಮೆಂಬ ಚಿತ್ತದಿಂದೆ
ಇರುತಿರಲ್ಕೆ ಬಂದಳೊರ್ಗೆ ತನ್ನ ತಂಗಿ ನೋಡಲೆಂದು
ಪರಿವಳಿಗೆಯೊಳಿರ್ಪ ಜೈನನರಸಿ ಹರ್ಷದಿಂದೆ ಬಂದು
ಸುಖದೊಳಿರ್ದ ವೈಜಕವ್ವೆ ಇರವನಳ್ಕರಿಂದೆ ನೋಡಿ
ನಿಖಿಳ ಸಂಪದಕ್ಕೆ ನೆಲೆಯದಪ್ಪುದೆಂದು ಮತ್ತೆ ನೋಡಿ
ತನ್ನ ಪುತ್ರನಪ್ಪ ನೇಮಿಸೆಟ್ಟಿಗುಚಿತವೀಕೆ ಯೆಂದು
ಉನ್ನತ ಪ್ರಮೋದೆ ಯೌವ್ವನಂ ಸಮಾನವಪ್ಪುದೆಂದು
ನೆನೆದು ನೋಡಿದಳಣ್ಣನಲ್ಲಿ ನಲಿದು ಸಲುಗೆಯಿಂದೆ
ಮನದೊಳುತ್ಸಹಂಬಡುತ್ತೆ ಬೇಡಿದಳ್ತಿಮೋಹದಿಂದೆ
ನಿನ್ನ ಮಗಳನೆನ್ನ ನಿಜತನೂಭವಂಗೆ ಕುಡುವುದೆಂದು
ಸನ್ನುತಂ ಸಲಕ್ಷಣಂ ವರಾನ್ವಿತಂ ಸಮಾನವೆಂದು
ನುಡಿಯೆ ಕೇಳ್ದು ಸೋದರಳಿಯನಾದೊಡೇನು ಭವಿಗೆ ಕೊಡೆನು
ವೃಡನ ಭಕ್ತರಾವು ಸವಣಗುನ್ನಿಗಳ್ಗೆ ಹೆಣ್ಣ ಕುಡೆನು

ಎಂಬ ನುಡಿಗೆ ತಂಗಿಯೊಟ್ಟಿಯೊರಲಿಯಳುತೆ ಬೇಡಿ ಕಾಡಿ
ನಂಬಿ ನೆಚ್ಚಿ ಬೆನ್ನ ಬಂದ ಸೋದರಕ್ಕೆ ಲೇಸು ಮಾಡಿ
ನುಡಿದರಪ್ಪುದಪ್ಪುದೆನ್ನ ಸೊಸೆಯನೆಂತು ಬಿಡುವಳಲ್ಲ
ಕುಡದೆ ನಿಂದೊಡೆನ್ನ ತನುವನಳಿವಳಲ್ಲದುಳಿವಳಲ್ಲ
ಎಂದು ನುಡಿಯುತೊಂದುಪಾಸವೆರಡುಪಾಸವಿರ್ದಳಲ್ಲಿ
ಅಂದು ನೆರೆಯ ಹೊರೆಯ ನಂಟರಿಷ್ಟರೆಲ್ಲ ನೆರೆವುತಲ್ಲಿ
ನೋಡು ನಿನ್ನ ತಂಗಿ ಪಟ್ಟಿರುತ್ತೆ ಸತ್ತೊಡಕಟ ಲೇಸೆ
ಬೇಡ ಜೀಯ ಜೈನರಾದೊಡೇನು ಮಗಳನೀವುದೈಸೆ

ಪಿರಿಯರಲ್ಲಿ ನಂಟರಲ್ಲಿ ನಲ್ಲರಲ್ಲಿ ಛಲವಿದೇಕೆ
ಗುರುವಿನಲ್ಲಿ ಗೋತ್ರದಲ್ಲಿ ತಂಗಿಯಲ್ಲಿ ಬಲ್ಪಿದೇಕೆ
ಎಂದು ಪೇಳೆ ಭಕ್ತನಂದು ಕಂದಿ ಕುಂದಿ ಮನವನಿಳುಪಿ
ನೊಂದು ಸುಯ್ದೊಡಂಬಡುತ್ತೆ ಬಂಧುಜನವನೆಯ್ದೆ ಕಳುಪಿ
ಇಹದ ಕೀರ್ತಿಗಂಜಿ ಪರದ ಗತಿಯನೆಯ್ದೆ ಮರೆದು ಕಳೆದು
ಅಹಹ ಕುಡುವೆನೆಂಬ ಬುದ್ಧಿ ಚಿತ್ತದೊಳಗೆ ಬೇಗ ಹೊಳೆದು
ಕೊಟ್ಟೆನೇಳು ತಂಗಿ ಬಟ್ಟಗುತ್ತತನವಿದೇವುದೆಂದು
ಕೊಟ್ಟೆನವ್ವ ಪುತ್ರಿಯಂ ಸುಧರ್ಮದಿಂದೆ ರಕ್ಷಿಸೆಂದು

ನುಡಿಯೆ ಪುಳುಕವೇಳಲೆಳ್ದು ಪರಮ ಹರುಷ ಚಿತ್ತೆಯಾಗಿ
ಒಡನೆ ಹುಟ್ಟಿದಣ್ಣನಂ ಸರಾಗದಿಂದಲಪ್ಪಿ ಪೋಗಿ
ಕರೆಯಿಸಲ್ಕೆ ಬಂದ ಜೋಯಿಸಂಗೆ ದಕ್ಷಿಣೆಗಳನಿತ್ತು
ಹರುಷದಿಂದೆ ಲಗ್ನಮಂ ಸಮೀಪ ದಿನದೊಳೆಯ್ದೆ ಪೊತ್ತು
ಇರೆ ವಿವಾಹಮಂಟಪಂ ಸವಿಸ್ತರಂ ನಿಮಿರ್ಚುತಲ್ಲಿ
ಅರರೆ ತಳಿರ ಮಕರತೋರಣಂಗಳೊಪ್ಪಿ ನೆಗೆದವಲ್ಲಿ
ನಡುವೆ ವೇದಿಕಾ ವಿಳಾಸವಾಗಳೊಪ್ಪುತಿರ್ದುದಲ್ಲಿ
ಪುಡದಿಯರ್ಕಳೆಲ್ಲ ದಂಡೆತೊಂಡಿಲಿಂದೆ ಮೆರೆಯಲಲ್ಲಿ
ಇಂತು ಮದುವೆಯುತ್ಸವಂ ವಿರಾಜಿಸುತ್ತಮಿರ್ದುದಿತ್ತ

ಕಂತುಹರನ ಭಕ್ತೆ ವೈಜಕವ್ವೆ ನಿತ್ಯನೇಮದತ್ತ
ಬಂದು ಶಿವನ ಮುಂದೆ ನಿಂದು ಸೂಸಿ ಸುಯ್ದು ಗಾಸಿಯಾಗಿ
ಇಂದುಮೌಳಿ ಕರುಣಿಸೆನುತೆ ನಿತ್ಯನೇಮ ಹಸ್ತೆಯಾಗಿ
ದೇವ ಭವಿಗೆ ಮದುವೆ ಎಂದು ತಾಪಿಸಿರ್ದು ಏವೆನೈಯ್ಯ
ಭಾವಿಸಲ್ಕೆ ಭವಿಯ ಸೋಂಕದಾವ ತೆರದೊಳಾರ್ಪೆನೈಯ್ಯ
ತಿಳಿವಿನೊಳಗೆ ಪುಟ್ಟಿ ಮರವೆಯೊಳಗದೆಂತು ಪುಗುವೆನೈಯ್ಯ
ಬೆಳಗಿನೊಳಗೆ ಬೆಳೆದು ತಮದೊಳೆಂತು ಪೋಗಿ ಬೀಳ್ವೆನೈಯ್ಯ
ನಿನ್ನನರಿಯದಚ್ಚ ಬಚ್ಚ ಬರಿಯ ಭವಿಗಳಲ್ಲಿ ದೇವ
ನಿನ್ನನೆಂತು ನೆನವೆನೆಂತು ಮಾಳ್ಪೆನೆಂತದೆಂತು ದೇವ
ಏಕೆ ಭಕ್ತರೊಳಗೆ ಬರಿಸಿ ಭವಿಗಳೊಳಗೆ ನೂಂಕಿದಪ್ಪೆ
ಏಕೆ ನಿನ್ನನರುಪಿ ಯರಿಯಲೀಯದಿಂತು ನೋಡುತಿಪ್ಪೆ

ಕರುಣಿ ಎಂಬರಭವ ಕರುಣವಿಲ್ಲದಂತಿರಿಪ್ಪಿರಯ್ಯ
ಕರುಣಿ ಯೊರಲುತಿರ್ದೆನೆನ್ನನಕ್ಕಟಾ ನಿರೀಕ್ಷಿಸಯ್ಯ
ದೇವ ಚಂದ್ರವೌಲಿ ಶೂಲಿ ಗರಳಕಂಠ ಕರುಣಿಸಯ್ಯ
ದೇವ ಸಲಿಲಶಯನ ನಯನ ಚರಣಕಮಲ ಕರುಣಿಸಯ್ಯ

ಎಂದು ಮುಯ್ಯಲಿಡುವ ಪುಯ್ಯಲಂ ಪುರಾರಿಯಾಲಿಸುತ್ತೆ
ಬಂದು ವೈಜಕವ್ವೆಗೊಂದು ಮರಹನಲ್ಲಿ ಕೀಲಿಸುತ್ತೆ
ಕನಸಿನೊಳಗೆ ನಿಂದು ವೈಜಕವ್ವೆ ನಿನಗೆ ಚಿಂತೆ ಬೇಡ
ಅನುದಿನಂ ಸಮೀಪದಿಂದ ನಗಲೆನವ್ವ ನಂಬು ಬೇಡ
ಮದುವೆಯಾಗಿ ಪೋಗು ಮಗಳೆ ಮರೆವುದಿಲ್ಲ ನಿನ್ನನೆಂದು
ಮದನವೈರಿ ಕರುಣದಿಂದೆ ನಿಂದು ಬೆಸಸಿ ಪೋಗಲಂದು
ಮೆಲ್ಲನೆಚ್ಚರೊಳಗೆ ಸಂದು ವೈಜಕವ್ವೆ ತಿಳಿದು ನೋಡಿ
ಅಲ್ಲಿಗಲ್ಲಿಗಡರ್ದು ನಳನಳಿಪ್ಪ ಪುಳಕದೊಳಗೆ ಕೂಡಿ
ಶಂಭು ಬೆಸಸಿತಕ್ಕೆ ಮನವನಿಂಬುಗೈದು ನಂಬಿ ನಚ್ಚಿ
ಡಂಭರಹಿತೆ ಗರ್ವರಹಿತೆ ಜೈನರಹಿತೆ ನಚ್ಚಿ ಮೆಚ್ಚಿ
ಇರೆ ವಿವಾಹದುತ್ಸಹಂ ವಿರಾಜಿಸುತ್ತಮಿರ್ದುದಲ್ಲಿ
ಕರುಣಿಯರ್ಕಳೆಸೆವ ಸಿಂಗರಂಗಳೊಪ್ಪುತಿರ್ದುದಲ್ಲಿ
ಆಗಳೆಲ್ಲ ತೆರದ ಸಂಭ್ರಮಂಗಳೊಳಗೆ ನಲಿದು ಬಂದು
ರಾಗದಿಂದೆ ಮದುವೆ ಮಂಟಪಾಂತರಂಗದೊಳಗೆ ನಿಂದು
ಸಕಲ ವಸ್ತು ನಿಕರ ಹಸ್ತವಾದ ಬಂಧುಜನಗಳೊಳಗೆ
ಸುಕರವೆನಿಪ ಮುಕುರಕಳಶಲಸಿತಲಲನೆಯರ್ಕಳೊಳಗೆ
ವರನಿರಲ್ಕೆ ವೈಜಕವ್ವೆಗೊಪ್ಪಿ ಸಿಂಗರಂಗಳಾಗೆ
ತರುಣಿಯರ್ಕಳಿಂಬುಗೊಂಡು ಬರ್ಪ ಗಾಡಿ ಗಮಕವಾಗೆ
ತಂದು ತಂಡುಲಂಗಳೊಳಗೆ ಬೇರೆ ಬೇರೆ ನಿಲಿಸಲಲ್ಲಿ
ಅಂದು ನಡುವೆ ತೆರೆ ವಿರಾಜಿಸಲ್ಕೆ ಬಂಧುನಿಕರವಲ್ಲಿ
ಆಯತಪ್ರಣಾದ ಚಿತ್ತರಾಲಿಸುತ್ತೆ ನೋಡೆ ನೋಡೆ
ಜೋಯಿಸನ ಮುಹೂರ್ತ ವಚನದೊಡನೆ ತೆರೆಗಳಲ್ಲಿ ಕೂಡೆ
ವೈಜಕವ್ವೆಗಳ್ಗೆ ಸೋಲ್ತು ನೇಮಿಸೆಟ್ಟಿಯೊಪ್ಪಲಾಗೆ
ಮೂಜಗಂಗಳರಿಯೆ ಮುಂದೆ ಮೆರೆವುದಕ್ಕೆ ಚಿಹ್ನವಾಗೆ

ವರ ಸುವಾಸಿನೀ ಜನಂಗಳಿತ್ತು ವಾರತಿಗಳು ಮೆರೆಯೆ
ಪರಸುತಿರ್ಪ ಪರಕೆ ಮಂಗಳಂಗಳಂ ನಿಮಿರ್ಚಿ ಕರೆಯೆ
ಇಂತು ಮದುವೆ ಬಳೆಯುತಿರೆ ಚತುರ್ಥಿಯಂ ಸಡಿಲ್ಚಿ ಕಳೆದು

ಮುಂತೆ ಪರಿವಳಿಗೆಗೆ ನಡೆದು ಪೊಕ್ಕು ಸುಖವನೊಲ್ದು ತಳೆದು
ತಮದ ನಡುವೆ ನಿರ್ಮಳ ಪ್ರಭಾಂತರಾಂಶು ನಿರ್ಪತೆರದಿ
ಅಮಮ ತರುಗಳೊಳಗೆ ಚಂದನಂ ವಿರಾಜಿಸಿರ್ಪ ತೆರದಿ
ನೇಮಿಸೆಟ್ಟಿಯೊಡನೆ ವೈಜಕವ್ವೆ ಸುಖದೊಳೊಂದಿರುತ್ತೆ
ಕಾಮಹರನೊಳಗೆ ನೆನೆಯುತೊಳಗೆ ಕಂಡು ಪೂಜಿಸುತ್ತೆ
ಭಸಿತ ರುದ್ರರಕ್ಷೆಯಂ ಮನಶ್ಶರೀರದೊಳಗೆ ತಳೆದು
ಪುಸಿವು ಕಾಮವಾಸೆ ಲೋಭವೆಂಬ ಕಸವನುಡುಗಿ ಕಳೆದು
ಹೃದಯ ನಿಳಯ ಕಮಳವಳಯ ಕರ್ಣಿಕಾಸುಪೀಠದೊಳಗೆ
ಸದಮಳ ಪ್ರಕಾಶರಾಶಿ ರೂಪುಲಿಂಗ ಒಳಗೆ ತೊಳಗೆ
ಮನದ ಪುಷ್ಪ ಪೂಜೆ ನೆಗಳೆ ನೇಹದುಸಿರ ಧೂಪವೆಸೆಯೆ
ನೆನಹಿ ನರಿವಿನಚ್ಚ ಬೆಳಗಿನ ಪ್ರಕಾಶ ದೀಪವೆಸೆಯೆ
ಭಕ್ತಿಯೋಗರಂ ವಿರಾಜಿಸಲ್ಕೆ ಶಿವನನೆಯ್ದೆ ತಣಿಪೆ
ಮುಕ್ತಿ ಸುಖದೊಳಿಂತು ಬಾಳುತಿರ್ಪಳಖಿಳ ಭವವನಿಳಿಪೆ
ಜಲದ ಜಲಜದಂತೆ ಪವನನಂತೆ ತರಣಿ ಕಿರಣದಂತೆ
ತಿಲದ ತೈಲದಂತೆ ವಹ್ನಿಯಂತೆ ಯಾತ್ಮತೇಜದಂತೆ
ಜೈನರೊಳಗೆ ಹೊದ್ದಿಹೊದ್ದದಿರ್ಪಳಮಮ ನಿರ್ಮಳಾಂಗಿ
ದಾನನಿಧಿ ನವೀನ ಭಕ್ತೆ ಪರಮ ಶೀಲೆ ಸುರುಚಿರಾಂಗಿ
ವಿಮಳಭಕ್ತೆ ಶಾಂತಿಯುಕ್ತೆ ಯತಿವಿರತೆ ವೈಜಕವ್ವೆ
ಅಮಮ ಗುಪ್ತೆ ಭವಸಮಾಪ್ತೆ ಶೈವಭಕ್ತೆ ವೈಜಕವ್ವೆ
ಇಂತೆನಿಪ್ಪ ಗುಣಗಣಕ್ಕೆ ನಿಳಯವೆನಿಸಿ ನೆನೆಯುತಿರ್ದು
ಸಂತತಂ ಪುರಾರಿಯಂ ಸರಾಗದಿಂದೆ ಬಯಸುತಿರ್ದು
ದೇವ ಭವಿಗಳೊಳಗಣಿರವಿದೆಂದು ಮಾಣ್ಬುದೆಂದೆನುತ್ತೆ
ದೇವ ನಿನ್ನನೆನ್ನ ಕಣ್ಗಳಾರೆ ಕಾಣ್ಬೆನೆಂದೆನುತ್ತೆ
ದೇವ ಚಿತ್ತವೃತ್ತಿ ತಣಿಯೆ ಪೂಜಿಸುವೆನದೆಂದೆನುತ್ತೆ
ದೇವ ಜೈನರೊಳಗೆ ಸಿಲ್ಕಿದೆಂ ಪುರಾರಿ ಬಿಡಿಸೆನುತ್ತೆ

ಇಂತು ಶಂಕರಂಗೆ ಸಾರಿ ತೋರಿ ಮೀರಿ ದೂರಿಸುತ್ತೆ
ಚಿಂತೆ ಬಲಿಯೆ ಭಕ್ತಿ ನಲಿಯೆ ಶಂಭು ನಲಿಯೆ ಭಾವಿಸುತ್ತೆ

ಇರುತಿರಲ್ಕೆ ನೇಮಿಸೆಟ್ಟಿ ಹರುಷದಿಂದೆ ಮನೆಗೆ ಬಂದು
ಕರೆದು ಮೈಜಕವ್ವೆ ಕೇಳ ಸಕಳ ಋಷಿಗಳೆಲ್ಲ ನೆರೆದು
ಚರಿಗೆ ಮಾಡಿದಪ್ಪರಿಲ್ಲಿ ಬೋನಮಂ ವಿರಾಜಿಸೆಂದು
ಸರಸ ವಸ್ತು ನಿಕರಮಂ ಸರಾಗದಿಂದೆ ಮುಂದೆ ತಂದು
ತೋರಿಕೊಟ್ಟು ಮೈಜಕವ್ವೆಗಿಸಿದೆನಿಪ್ಪ ಮಾತನಾಡಿ
ಮೀರದಂತೆ ಮುಳಿಯದಂತೆ ಬೋಳವಣಿಯನೆಯ್ದೆ ಕೂಡಿ
ಮಾಡುತಿರ್ದಳಲ್ಲಿ ಬೋನಮಂ ಮಹೇಶಭಕ್ತಿಯುಕ್ತೆ
ನೋಡೆ ನೋಡೆ ಮೃಡ ವಿವೇಕನಿಧಿ ದಯಾಂಬುನಿಧಿ ವಿರಕ್ತೆ

ಹಾಲಲವುಗು ಹಾಲಲುಂಡೆ ಹಾಲಮುಂಡಿಗೆಗಳನಟ್ಟು
ಮೇಲೆನಿಪ್ಪ ತರಗಪೂಷಣಂಬುಮಂ ತೆರಳ್ಕೆ ಇಟ್ಟು
ಲಡ್ಡುಗೆಗಳನೆಸೆವ ಬೀಸುಹೊರಿಗೆಗಳನೆಯ್ದೆ ಸಾರ್ಚೆ
ಇಡ್ಡಲಿಗೆಯ ನಣ್ಣೆವಾಲ ಪಾಯಸಂಗಳಂ ನಿಮಿರ್ಚೆ
ಚಂದ್ರಿಕಾಸುಬೀಜವೆನಿಪ ಕಳವೆಯೋಗರಂಗಳಾಗೆ
ಸಾಂದ್ರ ರುಚಿಯ ಕಂಪನಾಂತ ಶಾಕಪಾಕ ತತಿಯುಮಾಗೆ
ಕಿವಿಗೆ ಕಣ್ಗೆ ಜಿಹ್ವೆಗೈದೆ ನಾಸಿಕಕ್ಕೆ ತೀವಿ ಮೆರೆವ
ರವದ ಚೆಲ್ವ ಮೃದುಸುಗಂಧರುಚಿಗಳಿಂದೆ ಸವಿಗಳೊರೆವ
ಮಧುರವಾಮ್ಲ ಕಟುಕ ತಿಕ್ತ ಲವಣ ಕೈಪೆ ಹೆಸರನುಳ್ಳ
ಮಧುಗೆ ವಿಧುಗೆ ಸುಧೆಗೆ ಮಿಗಿಲೆನಿಪ್ಪ ರುಚಿಯ ರೂಪನುಳ್ಳ
ಸಕಲ ಸುಖವನಾಂತ ಷಡುರಸಾಯನಂಗಳೊಪ್ಪ ಮಾಡಿ
ಸುಕರ ಚಿತ್ತೆ ಸಚ್ಚರಿತ್ರೆ ಮೈಜಕವ್ವೆ ಮಾಡಿ ನೋಡಿ

ಅಕ್ಕಟಾ ಸುವಸ್ತುವಂ ಮಹೇಶ ನಿನಗೆ ಸಲಿಸಲಿಲ್ಲ
ತಕ್ಕ ಭಕ್ತವಿತತಿಗೆಯ್ದೆ ತವಕದಿಂದೆ ತಣಿಪಲಿಲ್ಲ
ಇಂತು ಮಾಡಿದೆಯ್ಯ ಎನ್ನ ತಂದೆ ಜೈನರೊಳಗೆ ಕೂಡಿ
ಕಂತು ವೈರಿ ನಿನಗೆ ಭಕ್ತಿ ಮಾಡಲಿಲ್ಲದಂತೆ ಮಾಡಿ
ಇಂತಿದಂ ಪುರಾರಿ ನಿಮ್ಮ ನರಿಯದಚ್ಚ ಪಾಪಿಗಳ್ಗೆ

ಎಂತು ಮಾಡಿ ನೋಡಿ ಕುಡುವೆನಯ್ಯ ಸವಣಗುನ್ನಿಗಳ್ಗೆ
ಎಂದಳಲ್ದು ಕಂದಿ ಕುಂದಿ ನೊಂದು ಕಣ್ಣನೀರನಿಕ್ಕೆ

ಬಂದು ತಾಗಿತಭವನಂ ಸಮರ್ಥ ಸತ್ಯ ಭಕ್ತಿಯುಕ್ತೆ
ತಾಗೆ ಶಂಭುವರಿದು ಮೆಚ್ಚಿ ಕರುಣದಿಂದೆ ಗಿರಿಜೆಗೆಂದ
ರಾಗವಲರಿ ನುಡಿದನಲ್ಲಿ ಕೇಳು ನಿನಗೆ ಪೇಳ್ವೆನೊಂದ
ವೈಜಕವ್ವೆಯಕ್ಕೆಯಂ ಸಡಿಲ್ಚಿ ಕೊಂಡು ಬರ್ಪೆನೆಂದು
ರಾಜಿಸುತ್ತೆ ದೇವ ಶರಣವೇಷದಿಂದೆ ಬರುತಲಂದು
ದಶಭುಜಂಗಳಂ ಭುಜದ್ವಯಂಗಳಾಗೆ ನಿರ್ಮಿಸುತ್ತೆ
ಎಸೆವ ಪಂಚಮುಖವನೊಂದು ವದನದೊಳಗೆ ರಂಜಿಸುತ್ತೆ
ಹೆರೆಯನಲ್ಲಿ ಕಿರಿಯ ಜಡೆಗೆ ಮಿಸುಪ ಕುಸುಮವಾಗಿ ಮಾಡಿ
ನೆರೆವ ಕೊರಲಗರಳಮಂ ಶರೀರವರ್ಣದೊಳಗೆ ಕೂಡಿ
ಪುಲಿದೊವಲ್ವಿಭೂತಿ ಭೂಷಣಂ ವಿಶೇಷವಾಗಲೊಪ್ಪೆ
ನಲಿದು ಕುಣಿವ ಕುಂಡಲಂಗಳುಭಯ ಗಂಡತಟದೊಳೊಪ್ಪೆ
ಸುಲಿದ ಪಲ್ಲ ಬೆಳಪ ಕಣ್ಗಳಭವನಲ್ಲಿ ಚೆಲ್ವುಗೊಂಡು
ನಲಿಯುತಜಕಪಾಲ ಪಾತ್ರೆಯೊಪ್ಪೆ ಕರದೊಳಾಂತುಕೊಂಡು
ಬಂದು ಪರಿವಳಿಗೆಯ ನೇಮಿಸೆಟ್ಟಿ ಇರ್ಪ ಮನೆಯ ಮುಂದೆ

ನಿಂದು ವೈಜಕವ್ವೆ ಕಾಣ್ಬ ಕೇಳ್ವ ತೆರದಿ ಕರುಣದಿಂದ
ಭವನ ವೇಷದಚ್ಚ ಶರಣವೇಷದಿಂದೆ ರಂಜಿಸುತ್ತೆ
ಶಿವನ ಕರುಣವಕ್ಕೆ ನಿಮಗೆ ಭಿಕ್ಷೆ ಈವುದೆಮಗೆನುತ್ತೆ
ಇರೆ ಸದರ್ಥೆ ವೈಜಕವ್ವೆ ಹರುಷದಿಂದೆ ಕೇಳುತಂದು
ಸರವನಾಲಿಸುತ್ತೆ ಕಿವಿಗೆ ಕಣ್ಗಳಾದ ತೆರದೆ ಬಂದು
ನೆನೆವ ಮನಕೆ ಕಾಮಧೇನುವಾದ ತೆರದಿ ಬಂದಿರಯ್ಯ
ಮನದ ಬಯಕೆ ಭಾವಿಸಲ್ಕೆ ರೂಪುಗೊಂಡ ತೆರದೊಳಯ್ಯಾ
ಎನುತೆ ಪುಳಕಿಸುತ್ತೆ ಕಂಪಿಸುತ್ತೆ ಪದದ ಮೇಲೆ ಬೀಳ್ದು
ವಿನುತ ಭಕ್ತೆ ಹರುಷಚಿತ್ತೆಯಾಗಿ ಬೇಗಿ ಮೆಲ್ಲನೇಳ್ದು
ದೇವ ಪಾತ್ರೆ ಕಿರಿದು ವಸ್ತು ಪಿರಿದದೆಂತು ಮೊಳ್ಪೆನೆಂದು
ಭಾವಭಕ್ತಿಭರಿತೆ ತೀವುತಿರ್ದಳಲ್ಲಿ ತಂದು ತಂದು
ತಂದು ತೀವಲೊಳಕೊಳುತ್ತಲಿರ್ದುದಲ್ಲಿ ದೇವಪಾತ್ರೆ

ಅಂದು ಕೌತುಕಂಬಡುತ್ತಲಿಕ್ಕಿದಳ್ಸರೋಜನೇತ್ರೆ
ಒಳಗೆ ಶೀರೆ ಪಾತ್ರೆ ಶೀವೆ ವೈಜಕವ್ವೆ ನೋಡಿ ನಲಿದು
ಎಳಸಿ ಹಿಗ್ಗಿ ಬಳಸಿ ಮೆಚ್ಚಿ ಹೆಚ್ಚಿ ನಚ್ಚಿ ಪವಣನರಿದು
ದೇವ ಪೋಗವೇಳ್ಪದಭವ ಪಸಿದಿರಿನ್ನು ಇರಲ್ಕೆವೇಡ
ದೇವ ಮತ್ತೆ ಭವಿಗಳಲ್ಲಿ ಬಂದು ಸುಳಿಯೆ ಕಾಣವೇಡ
ಎನೆ ವಿಭೂತಿಯುಂ ಕೊಡುತ್ತೆ ಮಾತನಾಡಿ ಪೊಳ್ತುಗಳೆದು
ತನು ಸುರುಳ್ಪುದೇಕೆ ವೈಜಕವ್ವೆ ನಿನಗೆ ಚಿಂತೆ ಪಿರಿದು

ಎನುತಿರಲ್ಕೆ ಬರುತೆ ನೇಮಿಸೆಟ್ಟಿ ಋಷಿಯರೆಲ್ಲರಂದು
ಮನದೊಳತಿ ನಿರೋಧದಿಂದೆ ನೋಡೆ ನೋಡೆ ನೆಗೆದನಂದು
ನೆಗೆಯೆ ಋಷಿಯರೆಲ್ಲ ಮುಟ್ಟಿಘಡವಿದಾದುದೊಲ್ಲೆನೆಂದು
ಬಗೆಯೊಳತಿ ವಿಷಾದವೇರೆ ನೊಂದು ತಿರುಗಿ ಪೋಗಲಂದು
ಮನೆಗೆ ಬಂದು ನೇಮಿಸೆಟ್ಟಿ ಮುನಿದು ಸುಯ್ದು ನುಡಿದನಂದು
ವನಿತೆ ನೀನಿದೇಕೆ ಇಂತು ಮಾಡಿ ಎನ್ನನಿರಿದೆ ಎಂದು
ಋಷಿಯರೋಗರಂಗಳಂ ತಪಸ್ವಿಗಿಕ್ಕಿ ಕೆಡಿಸಿ ಕಳೆದೆ
ಹೊಸೆದ ಹುವ್ವಿನಂತೆ ಋಷಿಯರೆಲ್ಲ ಪಸಿದು ಪೋದರುಣದೆ
ಗೊರವನೆಂಜಲಾಯ್ತು ಮುಟ್ಟಿಘಡವನಿಂತು ಮಾಡಿ ನಿಂದೆ
ಅರುಹನ ವ್ರತಕ್ಕೆ ಪೊಲ್ಲಗೆಯ್ದು ಕುಂದನಿಂತು ತಂದೆ

ಎಂದ ನೇಮಿಸೆಟ್ಟಿಗಂದು ನುಡಿದಳೆಮ್ಮ ವೈಜಕವ್ವೆ
ಇಂದುಧರನ ಭಕ್ತಿಯುಕ್ತೆ ನಿಜದ ನೀರೆ ವೈಜಕವ್ವೆ
ಶಿವನ ನೊಸಲನಯನದೆಂಜಲೆಂಬುದರಿಯ ಲೋಕವೆಲ್ಲ
ಭವನ ಕರುಣದಿಂದಲಿರ್ಪುದೆಂಬುದರಿಯ ಭುವನವೆಲ್ಲ
ನೇಮಿಸೆಟ್ಟಿ ನೀನದಕ್ಕೆ ಮರುಳನಾಗಿ ಕೆಟ್ಟು ನುಡಿದೆ
ಭೂಮಿಯೊಳಗೆಯರುಹನೆಂದಡಾರದೆಲ್ಲಿ ಬರಿದೆ ಮುನಿದೆ
ವೇದದೊಳಗೆ ಶಾಸ್ತ್ರದೊಳಗೆ ನೋಡಲಿಲ್ಲ ನುಡಿಯಲಿಲ್ಲ
ಆದಿದೇವರಾದಿಯಲ್ಲಿ ಹೇಳಲಿಲ್ಲ ಕೇಳಲಿಲ್ಲ
ಬಯಲ ಬರಿಯ ಬೊಂಬೆಗಳ್ಗೆ ಭಕ್ತಿ ಮಾಡಿ ಮರುಗಲೇಕೆ
ನಯವಿಹೀನ ಪರದ ಗತಿಯ ನಳಿದು ಕೆಟ್ಟು ಪೋಗಲೇಕೆ

ಎಂದ ವೈಜಕವ್ವೆಗುತ್ತರಕ್ಕೆ ತೆರಹುಗಾಣದಿರ್ದು
ನೊಂದು ನೇಮಿಸೆಟ್ಟಿ ಕೋಪದಿಂದೆ ಬಂದು ಹತ್ತಿಸಾರ್ದು
ತನ್ನ ಭಾಗ್ಯ ಕುಸುಮಮಾಲೆಗಲಸಿ ಪೊಸೆದು ಬಿಸುಡುವಂತೆ
ತನ್ನ ಪುಣ್ಯ ಫಲವನಂದು ಜಡಿದು ಘಾಸಿ ಮಾಡುವಂತೆ
ಪಾಪಿ ಮುಟ್ಟಿ ಬಡಿದನಲ್ಲಿ ವೈಜಕವ್ವೆ ಸೆಡೆದು ನೋಯೆ
ಕೋಪಿ ಬಡಿದನಲ್ಲಿ ರಜತ ಗಿರಿಯೊಳಭವನೈದೆ ನೋಯೆ
ಬಡಿಯೆ ವೈಜಕವ್ವೆ ಶಿವನನಂದು ನೆನೆಯುತಿರ್ದಳಲ್ಲಿ
ಮೃಡನನಂತರಂಗದೊಳಗೆ ಭಾವಿಸುತ್ತಮಿರ್ದಳಲ್ಲಿ
ಇರಲಿರಲ್ಕೆ ಭಕ್ತೆನೋಯೆ ನೋಡಲಾರೆನೆಂಬ ತೆರದಿ
ತರಣಿ ಇಳಿದನಪರ ಜಳಧಿವಳಯದೊಳಗೆ ಮೆಲ್ಲನುರದಿ
ಇಳಿಯೆ ವೈಜಕವ್ವೆಯೊಡನೆ ವೇಳೆಗೊಂಡ ತೆರದಿ ಬಳಲೆ
ನಳಿನ ಸಮಿತಿ ಮುಗಿಯೆ ಕುಮುದವಲರೆ ಚಕ್ರವಾಕವಗಲೆ
ಕವಿಯೆ ತಮವನಂತರಂ ಸುತಾರಕಾಳಿ ಥಳಿಲನೊಗೆಯೆ
ನವಕರಂಗಳಿಂದೆ ಬೆಳಗುತೋಷಧೀಶನಂದು ನೆಗೆಯೆ
ವೈಜಕವ್ವೆ ನೊಂದು ಕಂದಿ ಕುಂದಿ ಮಧ್ಯನಿಶಿಯೊಳೆಯ್ದೆ
ರಾಜಶೇಖರಂಗೆ ಮುಯ್ಯಲಿಕ್ಕಿ ನೋವು ಶಿವನನೆಯ್ದೆ

ಕನಸಿನಲ್ಲಿ ಮುನ್ನ ಬಂದ ತೆರದಿ ಶಂಭು ಒಲ್ದು ಬಂದು
ಮನದ ಕೊನೆಯ ಮೊನೆಯ ಭಾವದಚಲದೀಪ್ತಿಯೊಳಗೆ ನಿಂದು
ನಿನಗೆ ಚಿಂತೆ ಬೇಡ ಬೇಡ ವೈಜಕವ್ವೆ ನಾಳೆ ನೋಡ
ಜಿನನ ಶಿರವ ನೊಡೆದು ಜಡಿದು ಮೂಡಿ ನಿಲ್ವೆ ನಂಜಬೇಡ
ಎಂದು ಬೆಸಸಿ ಪೋಗೆ ಮೆಲ್ಲನೆಚ್ಚರೊಳಗೆ ಸಂದು ತಿಳಿದು
ಇಂದುಧರನ ಕೃಪೆ ಇದೆಂದು ಹರುಷಚಿತ್ತೆ ಮನದೊಳರಿದು
ಇರೆ ಪುರಾರಿ ಜಿನನನೊಡೆದು ಮೂಡುವುದನೆ ನೋಳ್ಪೆನೆಂದು
ತರಣಿಯೊಗೆದನಲ್ಲಿ ವೈಜಕವ್ವೆಗಿತ್ತ ನಲವಿನಂದು
ಅರಿವುತೆಲ್ಲರರಿಯಲೆಂದು ಭಸಿತಮಂ ತೆರಳ್ಚಿ ಪೂಸಿ
ಅರಿಮುರುಳ್ಗಳೆನಿಪ ಜೈನ ಕುಲದ ಕಲೆಗೆ ಹೇಸಿ
ಸುಲಿದ ಪಲ್ಲ ಸುಲಲಿತಾಂಗಿ ಧವಳ ವಸನದಮೃತ ಮೂರ್ತಿ
ಛಲದ ಲಲನೆ ನಲಿವಿನೊಲವು ಶಿವನ ಭವನ ಭುವನಕೀರ್ತಿ
ವೈಜಕವ್ವೆ ನಿಳಯದೊಳಗೆ ಸುಖದೊಳೊಪ್ಪುತಿರ್ದಳಿತ್ತ

ರಾಜಿಸುತ್ತ ಧರಣಿಯೊಳಗೆ ಜೈನರೆಲ್ಲ ಬಸದಿಯತ್ತ
ಬಂದು ಕದವನೊತ್ತಿ ಹೋಗದಿರ್ದೊಡಲ್ಲಿ ಸವಣರೆಲ್ಲ
ನಿಂದು ಕೌತುಕಂಬಡುತ್ತೆ ವಿಕೃತಿವೇಷನಿಹತರೆಲ್ಲ
ಹಾರೆ ದಬ್ಬುಕಂಗಳಿಂದೆ ಒತ್ತಿ ಒತ್ತಿ ನೂಂಕಿ ಸೆಡೆಯೆ
ಮೇರೆಯಿಲ್ಲದಚಲ ಕಠಿಣತರುಗಳಿಂದೆ ಒತ್ತಿ ಕೆಡೆಯೆ
ಮತ್ತ ಕರಿಗಳಿಂದ ಒತ್ತಿ ನೂಂಕಿಸುತ್ತೆ ಬಾಡಿ ಬಳ್ಕಿ
ಮತ್ತೆಯುಂ ಸಹಸ್ರವೇಳೆಯಂತುವಿರದೆ ನೂಂಕಿ ತಳ್ಕಿ
ಜೈನರೆಲ್ಲ ಜಂಗುಜರಿದು ಋಷಿಗಳೆಲ್ಲ ಮಟ್ಟವಾಗೆ
ಮಾನವಳಿದು ಮೌನ ಉಳಿದು ಹೀನ ಮನದ ದೀನರಾಗೆ
ಏಕೆ ಜಿನ ಕವಾಟವಿಕ್ಕಿತದ್ಭುತ ಪ್ರಕಾರವೆಂದು
ಏಕೆ ತಾನಿದಾದಪುದು ವಿರೋಧವೆಂದು ಮುಳಿದು ನೊಂದು
ಎಮ್ಮ ಪುರದೊಳಿಂದು ನಿನ್ನೆ ಧರ್ಮ ಹಾನಿ ಗೈದರುಂಟೆ
ಉಮ್ಮಳಕ್ಕೆ ಕಜ್ಜವೇನೊ, ಜೀವತತಿಯನಳಿದರುಂಟೆ
ಇಲ್ಲದಿರ್ದೊಡರುಹನಿಂತು ಕದವನಿಕ್ಕಿಕೊಳ್ವನಲ್ಲ
ಎಲ್ಲರಂತೆ ಭೂತಹಿಂಸೆ ಮಾಳ್ಪ ಸಮಯವಿಂತಿದಲ್ಲ
ಜೀವತತಿಗೆ ನೋವು ಬಂದೊಡರುಹನಿಲ್ಲಿ ನಿಲ್ವನಲ್ಲ
ಭಾವಿಸಲ್ಕೆ ಸುಮ್ಮನಿರದೆ ಪೇಳಿರೆಮಗೆ ಜೈನರೆಲ್ಲ

ಎಂದೊಡಾ ನೇಮಿಸೆಟ್ಟಿ ನಿನ್ನೆ ಬಡಿದೆನೆನ್ನ ಸತಿಯ
ಇಂದು ಕದವನಿಕ್ಕಿತೇನನೆಂಬೆನೆನ್ನಗಲ್ದ ಮತಿಯ
ಎನಲು ಜೈನರೆಲ್ಲರುಂ ತೆರಳ್ಚಿ ಕೂಡಿಕೊಂಡು ಬಂದು
ವನಿತೆ ವೈಜಕವ್ವೆಯಲ್ಲಿಗೆಲ್ಲರೈದೆ ಸಾರ್ದು ನಿಂದು
ಚರಣದಲ್ಲಿ ಬೀಳ್ದು ವೈಜಕವ್ವೆ ನಿನ್ನ ನೋವಿನಿಂದೆ
ಅರುಹನಲ್ಲಿ ಕದವನಿಕ್ಕಿಕೊಂಡು ಕಾಡುತಿರ್ದನಿಂದೆ
ಬಂದು ಕದವನಿಂದು ತೆರೆಯಿಸುತ್ತೆ ಕರುಣಿಸೆಂದು ನುಡಿಯೆ
ಇಂದುವದನೆ ನಗುತೆ ನುಡಿದಳಲ್ಲಿ ಪಿರಿಯರೆಯ್ದೆ ಸೆಡೆಯೆ
ಏಕೆ ಬಂದಿರಣ್ಣ ವೈಜಕವ್ವೆ ಎತ್ತಲರುಹನೆತ್ತ
ಲೋಕನಾಥನರುಹಸಿರವನೊಡೆದು ಮೂಡಿ ನಿಂದನತ್ತ
ನೀವು ಬೇಡಿಕೊಳಲಿದೇಕೆ ನಾನೆ ಬರ್ಪೆನೆನ್ನ ಗತಿಗೆ
ನೀವಿದೇಕೆ ಬೇಡವಾಯುಸಂಗೊಳಲ್ಕೆ ನೋಡ ಧರೆಗೆ

ಪೊಸತು ಮಾಳ್ಪೆನೆನುತ ನಡೆದಳಭವ ಭಕ್ತೆ ವೈಜಕವ್ವೆ
ಅಸಮ ನಯನನಚಲಭಕ್ತಿ ನೆಲಸಿ ನಿಂದ ವೈಜಕವ್ವೆ
ಬಕನಿಕಾಯ ಮಧ್ಯದೊಳಗೆ ನಡೆವ ರಾಜಹಂಸಿಯಂತೆ
ಸಕಲ ಜನನ ಕುಲದ ನಡುವೆ ವೈಜಕವ್ವೆ ನಡೆಯುತಿಂತೆ

ಬಂದು ಶಿವಕವಾಟದಲ್ಲಿ ನಿಂದು ನೋಡುತಚಲಭಕ್ತೆ
ಇಂದು ವದನೆ ಸುಕೃತ ಸದನೆ ದೇವರಲ್ಲಿ ಸಹಜಯುಕ್ತೆ
ದೇವ ಸತ್ಯ ನಿತ್ಯ ಭರ್ಗ ಭೀಮ ರುದ್ರ ಕರುಣಿಸಯ್ಯ
ದೇವ ಸಕಲ ಭುವನ ತಿಮಿರಹರಣ ಕಿರಣ ಕರುಣಿಸಯ್ಯ
ದೇವ ಗಿರೀಶ ಗಿರಿಜೆಯರಸ ತತ್ವದರ್ಶ ಕರುಣಿಸಯ್ಯ
ದೇವ ಚಂದ್ರ ಸುರನದಿ ಕಳಾಪಜೂಟ ಕರುಣಿಸಯ್ಯ
ಎಂದು ಪೊಗಳ್ವ ತುತಿಗಳೊಡನೆ ಶಾಂತಿ ಕುಸುಮ ವರಲ್ದ ತೆರದಿ
ಇಂದುಧರನ ನಿಜದ ಪರಮ ಭಕ್ತಿ ತೆರಹುಗುಡುವ ತೆರದಿ
ಶಿವನ ಕಣ್ಗಳೆವೆಯ ಸಂಪುಟಂಗಳಲ್ಲಿ ಸಾರ್ವ ತೆರದಿ
ಭವನ ನಿಷ್ಠೆಯೊಗ್ಗು ಹಿಗ್ಗಿ ತನ್ನೊಳಿಡೆಯನೀವ ತೆರದಿ
ಶಿವಕವಾಟವಲ್ಲಿ ತೆರೆಯಲೊಳಗೆ ತೋರುತಿರ್ದುದರರೆ
ನವಮರೀಚಿ ಮಸಗಿ ದೆಸೆಗೆ ಪರಿದು ತೊಳಗಿ ಬೆಳಗಲರರೆ

ಜಿನನ ಶಿರವನೊಡೆದು ಶಿವನ ಲಿಂಗವಲ್ಲಿ ಬೆಳೆದು ನೆಗೆಯೆ
ಅನಘನಪ್ರಮಾಣ ನತುಳ ತೇಜ ನಮಳ ಕಾಂತಿಯೊಗೆಯೆ
ಜೈನರೆಲ್ಲ ಕಂಡು ಕಣ್ಗಳುರಿದು ತನುಗಳರಿದು ಬೀಳೆ
ಮಾನವಳಿದು ಗಂಡುಗೆಟ್ಟನೂನ ದುಃಖಜಲದೊಳಾಳೆ
ನೆರೆದ ಋಷಿಯರೆಲ್ಲ ಬೆಂದ ಮರದ ತೆರದಿ ಜಂಗುಜರಿಯೆ
ಪರಮಪಂಡಿತರ್ಕಳೆಲ್ಲ ಮೆಲ್ಲಮೆಲ್ಲನೇಳ್ದು ಸರಿಯೆ
ಆಗಳಲ್ಲಿ ವೈಜಕವ್ವೆ ಭವನನಪ್ಪಿ ಶಿವನನಪ್ಪಿ
ರಾಗವಲರೆ ಚರಣತಳವನಪ್ಪಿ ಮತ್ತೆ ಮಾಣದಪ್ಪಿ
ಪುಳಕವಡರೆ ಗದ್ಗದಂಗಳಡಸೆ ಬೆಮರಬಿಂದು ನೆರೆಯೆ
ಇಳಿವ ಸುಖಜಲಂ ವಿಲೋಚನಂಗಳಿಂದೆ ಸೂಸಿ ಪರಿಯೆ
ಕುಣಿದು ಮಣಿದು ತಣಿದುಃ ತೇಗಿ ತೂಗಿ ಬೀಗಿ ವೈಜಕವ್ವೆ

ಅಣಿಯುರಂಗಲುಕ್ಕಲಾಡಿ ಹಾಡಿ ನೋಡಿ ವೈಜಕವ್ವೆ
ತನ್ನ ಚರಣದಲ್ಲಿ ಬೀಳ್ದ ನೇಮಿಸೆಟ್ಟಿಗೆಂದಳಂದು
ಎನ್ನ ಸಂಗವಾದ ನಿನಗೆ ಪಾಪವಾಗಲಾಗದೆಂದು
ಕರುಣದಿಂದೆ ಭಸಿತವಿಟ್ಟು ಶೈವದೀಕ್ಷೆಯಂ ತೊಡರ್ಚಿ
ಪರಮ ಪಂಚವರ್ಣಕರ್ಣ ಕುಹರನಪ್ಪುದಂ ನಿಮಿರ್ಚಿ
ಎನ್ನ ಪೆಸರ ವೈಜನಾಥದೇವರಿವರ ನರ್ಚಿಸುವುದು
ಉನ್ನತ ಪ್ರಮೋದವುಂ ಮಹೇಶನಲ್ಲಿ ಪೆರ್ಚಿಸುವುದು

ಎಂದು ನುಡಿವುತಿರಲಿರಲ್ಕೆ ಪುಷ್ಪವೃಷ್ಟಿ ಸುರಿದವಲ್ಲಿ
ದುಂದುಭಿ ಪ್ರಣಾದದೊಡನೆ ಶಂಖನಾದ ಒಗೆದುದಲ್ಲಿ
ನಡುವೆ ಬಂದು ಒಂದು ಪುಷ್ಪಕಂ ಜಗಂಗಳೆಲ್ಲ ಹೊಗಳೆ
ವೃಡನ ಭಕ್ತಸಂಕುಳಕ್ಕೆ ಸಂತಸಂಗಳೆಯ್ದೆ ನೆಗಳೆ
ಭುವನವೆಲ್ಲ ಪೊಗಳೆ ವೈಜಕವ್ವೆ ಪುಷ್ಪಕದೊಳೆ ಪೊಕ್ಕು
ಶಿವಗಣಂಗಳೊಳಗೆ ಯಂಬರಕ್ಕೆ ನೆಗೆದು ಮೀರಿ ಮಿಕ್ಕು
ಬಂದು ನಂದಿನಾಥನಿರ್ಪ ಬಾಗಿಲಲ್ಲಿ ಭೋಂಕನಿಳಿದು
ಇಂದುಮೌಳಿ ಶರಣೆನುತ್ತೆ ಪುಳುಕತತಿಯನೆಯ್ದೆ ತಳೆದು
ಎನ್ನ ನಿಧಿಯೆ ಎನ್ನ ಮಧುವೆ ಎನ್ನ ಸುಧೆಯೆ ಕರುಣಿಸೆಂದು
ಎನ್ನ ಗುರುವೆ ಪರಮ ಗುರುವೆ ಪರಕೆ ಪರವೆ ಕರುಣಿಸೆಂದು
ತಂದೆ ತಾಯೆ ಗತಿಯೆ ಮತಿಯೆ ಚಂದ್ರಚೂಡ ಕರುಣಿಸೆಂದು
ಬಂದು ವೈಜಕವ್ವೆ ಹರನ ಚರಣದಲ್ಲಿ ಬೀಳಲಂದು
ಶಂಭು ಒಸೆದು ನಲಿವುತೆತ್ತಿ ಶಿರದ ಮೇಲೆ ಕರವನಿಟ್ಟು
ಡಂಭರಹಿತ ನೊಲವುಸಹಿತ ವೀಕ್ಷಿಸುತ್ತೆ ಚಿತ್ತವಿಟ್ಟು
ಗಿರಿಜೆ ನೋಡ ವೈಜಕವ್ವೆಯಂತೆ ನಿಷ್ಠೆಯುಳ್ಳರುಂಟೆ
ಪರರ ಸಮಯದೊಳಗೆ ನಿಂದು ಭಕ್ತಿಯುಕ್ತೆಯಾದರುಂಟೆ
ಸವಿಗೆ ಸವಿಗಳೆನಿಪ ವಸ್ತು ಕುಲವನೆನ್ನೊಳಿತ್ತರುಂಟೇ
ಭುವನದೊಳಗೆ ಭಕ್ತಿಯಂ ವಿರಾಜಿಸಲ್ಕೆ ಮೆರೆದರುಂಟೆ
ಎಂದು ಕೊಂಡು ತೊನೆದು ರುದ್ರ ಕನ್ನಿಕಾನಿಯೋಗವಿತ್ತು
ಸಂದ ಗಣನಿಕಾಯದೊಳಗೆ ಸಕಳಸುಖವನೆಯ್ದೆ ಹೊತ್ತು
ರಜತ ಗಿರಿಯ ಪಿರಿಯ ನಿಳಯದೊಳಗೆ ಬೆಳಗುತಿರ್ದನಲ್ಲಿ

R. N. B. 2554.

# ಶಿವಾನುಭವ.



ಸಂಪುಟ ೧೦.] ಡಿಶೆಂಬರ ೧೯೩೫. [ಸಂಚಿಕೆ ೪.

# ವಿಷಯಾನುಕ್ರಮಣಿಕೆ.



---


ಇದನ್ನು ವಿಜಾಪುರದಲ್ಲಿ ಇವರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರ ಉಪ್ಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೧೦] ಡಿಶೆಂಬರ. ೧೯೩೫ [ಸಂಚಿಕೆ ೪.

## ಶೂನ್ಯಸಂಪಾದನೆಯ ರಹಸ್ಯ.

(ಲೇಖಕರು:— ಮಿ॥ ಬ್ಯಾಳಿ ಕಲ್ಯಾಣಪ್ಪನವರು ಬಿ. ಏ.)

### ಆಯ್ದಕ್ಕಿಮಾರಯ್ಯಗಳ ಸಂಪಾದನೆ.

ಅಕ್ಕಿಯನೊಪ್ಪಿಡಿಯಾಯ್ದಾಂ
ದಕ್ಕರದಿಂ ಬಸವಮುಖ್ಯ ಶರಣಗಣಕ್ಕಂ।
ಮಿಕ್ಕನಿಸಿ ತೃಪ್ತಿಬಡಿಸಿದ
ಅಕ್ಕಯ ಮಾರಯ್ಯನವರ ಚರಿತೆಯನುಸುರ್ವೆಂ॥

ಬಸವಣ್ಣನವರ ಕಾಲಕ್ಕೆ ಆಯ್ದಕ್ಕಿಮಾರಯ್ಯನವರೆಂಬ ಶಿವಶರಣರಿದ್ದರು. ಅವರು ದಿನಾಲು ಬಸವೇಶ್ವರನ ಅರಮನೆಯ ಮುಂದಿನ ಅಂಗಣದಲ್ಲಿ ಕಸದೊಳಗೆ ಬಿದ್ದುಹೋದ ಅಕ್ಕಿಯ ಕಾಳುಗಳನ್ನು ಆಯ್ದು ತಂದು ಗುರುಲಿಂಗಜಂಗಮಕ್ಕೆ ಆ ಪ್ರಸಾದವನ್ನುಣಬಡಿಸಿ ಮಿಕ್ಕ ಪ್ರಸಾದವನ್ನು ತಾವು ಸೇವಿಸುತ್ತಿದ್ದರು. ಹೀಗೆ ಪ್ರತಿನಿತ್ಯ ಅಕ್ಕಿಯನ್ನು ಆಯ್ದು ತರುವದೇ ಅವರ ಕಾಯಕವಾದ್ದರಿಂದ ಈ ಸಂಪಾದನೆಗೆ "ಆಯ್ದಕ್ಕಿಮಾರಯ್ಯನವರ ಸಂಪಾದನೆ" ಎಂಬ ಹೆಸರು ಬಂದಿದೆ.

ಆಯ್ದಕ್ಕಿಮಾರಿ ತಂದೆಗಳಿಗ ಅವರ ಕಾಯಕವೇ ಕೈಲಾಸ. ಅನ್ಯರ ದೃಷ್ಟಿಯಲ್ಲಿ ಈ ಕೆಲಸವು ಕೀಳಾಗಿ ತೋರಿದರೂ ನಮ್ಮ ಶರಣರು ಆ ಕಾಯಕವನ್ನು ಮನಗೊಟ್ಟು ಲಿಂಗಪೂಜೆಗಿಂತ ಅಧಿಕನಾದ ಪ್ರೇಮನಿಷ್ಠೆಗಳಿಂದ ಮಾಡುತ್ತಿದ್ದರು. ನಮ್ಮ ಶರಣರಿಗೆ ಬಡತನವೇ ಭಾಗ್ಯ. ಅವರಿಗೆ ಗಳಿಸಬೇಕೆಂಬಾಶೆಯಿಲ್ಲ. ಉಳಿಸಬೇಕೆಂಬಿಚ್ಛೆಯಿಲ್ಲ. ಬೇಡಬೇಕೆಂಬ ಬಯಕೆಯಿಲ್ಲ. ಕಾಡಬೇಕೆಂಬ ಹಟವಿಲ್ಲ. ನೀಡಿಹೆನೆಂದರೆ ಒಂದು

ಕಾಸು ಸಹ ಇಲ್ಲ. ಇಂಥದರೊಳಗೂ ಸಹ ಅವರು ದಾಸೋಹ ಮಾಡದೆ ಪ್ರಸಾದವನ್ನು ಸೇವಿಸುತ್ತಿರಲಿಲ್ಲ. ಇದೊಂದು ನಮ್ಮ ಎಲ್ಲ ಶಿವಶರಣರ ವಿಶಿಷ್ಟವಾದ ಗುಣಧರ್ಮವು. ನಮ್ಮ ಶರಣರು ಮಾಡುವದೆಲ್ಲ ತಮ್ಮ ಹೊಟ್ಟೆಗಾಗಿಯಲ್ಲ, ಗುರುಲಿಂಗಜಂಗಮದ ತೃಪ್ತಿಗಾಗಿ.

ನಮ್ಮ ಶರಣರು ಹಣಗಳಿಸುವವರಲ್ಲ, ಗುಣಗಳಿಸುವವರು. ಆಶೆ ಬುರುಕರಲ್ಲ, ನಿರಾಶಾವಂತರು. ನಮ್ಮ ಶರಣರದು ಒಡಲ ಕಳವಳಕ್ಕಾಗಿ ಎಂದೂ ನೊಂದುಕೊಳ್ಳದ ಜೀವನ. ತಮ್ಮ ರಟ್ಟೆ ಮುರಿದು ಗಳಿಸಿದ ಒಂದು ತುತ್ತು ರೊಟ್ಟಿಯೇ ಅವರಿಗೆ ಮಹಾ ಪ್ರಸಾದ. ಅವರಿಗೆ ಇಂದಿನದು ನಾಳಿಗೆ ತಂಗಳು. ನಾಳಿಗೆ ಬೇಕೆಂದು ಅವರು ಏನನ್ನೂ ಕೂಡಹಾಕುತ್ತಿರಲಿಲ್ಲ. ಲೋಕದಲ್ಲಿ ಎಷ್ಟೋ ಜನರು ಬಡತನವು ಬಹು ಕೆಟ್ಟದ್ದೆಂದೂ ಅದರ ಸಮಾನ ದುಃಖವು ಬೇರೊಂದಿಲ್ಲವೆಂದೂ ಕೂಗಿಕೊಳ್ಳುತ್ತಿರುವಾಗ ನಮ್ಮ ಶರಣರು ಇದ್ದ ಸಂಪತ್ತನ್ನೆಲ್ಲ ಸತ್ಪಾತ್ರಕ್ಕೆ ಧಾರೆಯೆರೆದು ಬಡತನದ ದೀಕ್ಷೆ ಹೊಂದಿ ಸಣ್ಣಸುಟ್ಟ ಕಾಯಕವನ್ನು ಕೈಕೊಂಡು ಶಿವಾನುಭವ ಸುಖವನ್ನು ಸ್ವಾರಸ್ಯವಾಗಿ ಅನುಭವಿಸುತ್ತಿದ್ದರು. ಕಾಶ್ಮೀರದ ರಾಜನಾಗಿದ್ದ ಮೋಳಿಗೆಯ ಮಾರಯ್ಯನವರು ಬಸವಣ್ಣನವರಿದ್ದೆಡೆಗೆ ಬಂದು ಕಟ್ಟಿಗೆಯನ್ನು ಕಡಿದು ಮಾರಿ ಜೀವಿಸುವ ಕಾಯಕವನ್ನು ಕೈಕೊಂಡು ಬಂದ ಹಣದಿಂದ ಗುರುಲಿಂಗಜಂಗಮ ದಾಸೋಹವನ್ನು ಮಾಡಲಿಲ್ಲವೇ ? ಇದರಂತೆ ಹಿಂದಕ್ಕೆ ಎಷ್ಟೋ ವಿದ್ಯಾವಂತರೂ ಅನುಭಾವಿಗಳೂ ನಾನಾ ತರಹದ ಕಸಬುಕಾಯಕಗಳನ್ನು ಕೈಕೊಂಡು ಶಿವಾನುಭವದ ಸವಿಯುಂಡು ತಮ್ಮ ಜೀವನ ಯಾತ್ರೆಯನ್ನು ಬಹು ಸೊಗಸಾಗಿ ಕಳೆಯಲಿಲ್ಲವೇ ? ನಿರುದ್ಯೋಗಿಗಳಾದ ಈಗಿನ ಅನೇಕ ವಿದ್ಯಾವಂತರು ನಮ್ಮ ಶಿವಶರಣರ ಉದಾಹರಣೆಯನ್ನು ಚೆನ್ನಾಗಿ ಲಕ್ಷಿಸಬೇಡವೇ ?

ಸೊಕ್ಕಿನ ಸಿರಿವಂತರ ಅರಮನೆಯಲ್ಲಿ ದೈವೀಸಂಪತ್ತಿನ ನೆಲೆಕಲೆಗಳಿರಲಾರವು. ಬಡವರ ಗುಡಿಸಲುಗಳಲ್ಲಿಯೇ ಆಧ್ಯಾತ್ಮಿಕ ಜೀವನದ ರಹಸ್ಯವಿರುತ್ತದೆ. ಅಂತೆಯೇ ನಮ್ಮ ಎಷ್ಟೋ ಶರಣರು ಸಂಪತ್ತನ್ನು ಧಿಕ್ಕರಿಸಿ ಬಡವರಾದರು. ನಮ್ಮ ಶರಣರ ನಿಜಸ್ಥಿತಿಯನ್ನು ಬಸವಣ್ಣನವರು ಒಂದು ಮುತ್ತಿನಂತಹ ಮಾತಿನಲ್ಲಿ ಬಹು ಸುಗಮವಾಗಿ ಹೇಳಿದ್ದಾರೆ. ಅದೇನಂದರೆ "ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು. ಧನ ನೋಡಾ ಬಡವರು, ಘನಮನ ಸಂಪನ್ನರು ಕೂಡಲಸಂಗನ

ಶರಣರು ಕರುಳಿಲ್ಲದ ಕಲಿಗಳು. ಅರಿಗುಪಮಿಸಬಾರದು." ನಮ್ಮ ಶರಣರ ನಿಜವನರಿವೊಡೆ ಇದೊಂದೇ ವಚನವು ಸಾಕು. ಈ ವಚನದ ಯೋಗ್ಯತೆಯೂ ಬೆಲೆಯೂ ಇಷ್ಟಿಷ್ಟೆಂದು ಹೇಳಲಶಕ್ಯವು.

ಈ ನಮ್ಮ ಆಯ್ದಕ್ಕಿಮಾರಿ ತಂದೆಗಳಿಗೆ ಲಕ್ಕಮ್ಮನೆಂಬ ಸತಿಯಿದ್ದಳು. ಒಂದು ದಿನ ಆಯ್ದಕ್ಕಿಮಾರಿ ತಂದೆಗಳು ದಿನಕ್ಕಿಂತ ಸ್ವಲ್ಪ ಹೆಚ್ಚು ಆಯ್ದು ತಂದದ್ದಕ್ಕಾಗಿ ಆ ಮಹಾರಾಣಿಯಳು ಹೆಚ್ಚಿನ ಅಕ್ಕಿಯನ್ನು ತಿರುಗಿ ಇದ್ದಸ್ಥಳಕ್ಕೊಯ್ದು ಚಲ್ಲಿಬಾರೆಂದು ಗಂಡನನ್ನು ಕಳಿಸಿಕೊಟ್ಟದ್ದಲ್ಲದೆ "ಶರಣರಿಗೆ ಹೆಚ್ಚಿನ ಆಶೆಯೇ?" ಎಂದು ಗಂಡನಿಗೆ ಚನ್ನಾಗಿ ಬುದ್ಧಿಗಲಿಸಿದಳು. ಇದನ್ನು ನೋಡಿದರೆ ನಮ್ಮ ಶಿವಶರಣೆಯರೇನು ಶರಣರಿಗಿಂತ ಕಡಿಮೆ ಯೋಗ್ಯತೆಯುಳ್ಳವರಿದ್ದಿಲ್ಲವೆಂದು ತೋರುತ್ತದೆ. ಹರಳಯ್ಯನವರ ಮಡದಿಯಾದ ಕಲ್ಯಾಣಮ್ಮನು ಗಂಡನು ಕೇಳದ ಮುನ್ನವೇ ಬಸವಣ್ಣನವರ ಪಾದರಕ್ಷೆಗೆಂದು ತನ್ನ ಬಲದೊಡೆಯ ತೊಗಲನ್ನು ಬಹು ಸಂತೋಷದಿಂದ ಕೊಯ್ದು ಕೊಡಲಿಲ್ಲವೇ?

ಈ ಸಂಪಾದನೆಯಲ್ಲಿ ಲಕುಮಮ್ಮಗಳ ಉಪದೇಶವು ಒಳ್ಳೇ ಸ್ಫೂರ್ತಿದಾಯಕವೂ ಬೋಧಪ್ರದವೂ ಆಗಿದೆ. ಮುಂದೆ ಆಯ್ದಕ್ಕಿಮಾರಿ ತಂದೆಗಳು ಅಸಂಖ್ಯಾತರಾದ ಬಸವಾದಿ ಪ್ರಮಥರನ್ನು ಮನೆಗೆ ಕರೆಯಿಸಿ ಅವರಿಗೆ ಪ್ರಸಾದವನ್ನುಣಬಡಿಸಿ ಲಿಂಗದಲ್ಲಿ ನೈಮರೆದಾಗ ಅಲ್ಲಿಯೇ ಐಕ್ಯರಾದರು. ತತ್ಕ್ಷಣದಲ್ಲಿಯೇ ಅವರ ಪತ್ನಿಯವರಾದ ಲಕುಮಮ್ಮಗಳು ಶಿವೈಕ್ಯರಾದರು. ಈ ಸಂದರ್ಭದಲ್ಲಿ ನಮಗೆ ಬಸವಣ್ಣನವರು ಸಂಗಮದಲ್ಲಿ ಐಕ್ಯವಾದದ್ದನ್ನು ಕೇಳಿ ನೀಲಮ್ಮನವರು ತಂಗಡಿಗೆಯಲ್ಲಿ ಲಿಂಗಪೂಜೆ ಮಾಡುತ್ತ ಕುಳಿತಿದ್ದು ಆ ಕ್ಷಣವೇ ಐಕ್ಯವಾದ ಸಂಗತಿಯು ನೆನಪಾಗುವದು.

ಶ್ರೀಪ್ರಭುದೇವರು ಆಯ್ದಕ್ಕಿ ಮಾರಯ್ಯಗಳ ಕಾಯಕದ ನಿಷ್ಠೆಯನ್ನು ಪರೀಕ್ಷಿಸಿ ನೋಡುವ ಸಂದರ್ಭವು ಈ ಸಂಪಾದನೆಯಲ್ಲಿ ಪ್ರತಿಪಾದಿತವಾಗಿದೆ. ಅದನ್ನು ಇದರಡಿಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಆಯ್ದಕ್ಕಿ ಮಾರಯ್ಯಗಳು ಬಸವಾದಿ 'ಪ್ರಮಥರೆದುರಿನಲ್ಲಿ ಕಾಯಕದ ಮಹತ್ವದ ಬಗ್ಗೆ ಅರಿಕೆ ಮಾಡಿಕೊಂಡದ್ದೇನಂದರೆ "ಕಾಯಕದಲ್ಲಿ ನಿರುತನಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗ

ಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರಲಿಂಗ ವಾದರೂ ಕಾಯಕದೊಳಗು ”

ಇದಲ್ಲದೆ “ ಕಾಯಕವನ್ನು ಬಿಟ್ಟು ಭಕ್ತರ ಭವನಂಗಳ ಹೊಕ್ಕು ಹೊನ್ನು ಹಣ ಬೇಡಿ ತರುವದು ಸದ್ಭಕ್ತಂಗೆ ಕಷ್ಟ. ಗುರು-ಲಿಂಗ-ಜಂಗಮ ದಾಸೋಹ ಮಾಡಬೇಕಾದರೆ ಪರರ ಹೊನ್ನ-ಹೆಣ್ಣು-ಮಣ್ಣಿ ನಾಶೆಯನ್ನು ತೊರೆಯಬೇಕು. ಅಂದರೆ ಅಮಳೇಶ್ವರಲಿಂಗ ಮೆಚ್ಚುವನು. ”

ಈ ಮಾತಿಗೆ ಪ್ರಭುದೇವರು ನುಡಿದುದೇನಂದರೆ “ ಮಾರಯ್ಯಾ, ಕಣ್ಣುಗಳು ಗೊತ್ತಿನವಲ್ಲ, ಮನಸ್ಸನ್ನು ನಂಬುವಂತಿಲ್ಲ. ಹೀಗಿರಲು ಹೊನ್ನು-ಹೆಣ್ಣು-ಮಣ್ಣಿನಾಶೆಯನ್ನು ಬಿಟ್ಟು ಕಾಯಕವನ್ನು ಮಾಡುವದೆಂ ದರೇನು? ಇದು ಸುಲಭವೇ? ಆದರೆ ನಮ್ಮ ಚಿತ್ತವು ಹರಿದಾಡದೆ ಸ್ವಸ್ಥವಾಗಿ ನಿಂತದ್ದಾದರೆ ಮಾತ್ರ ಗುಹೇಶ್ವರಲಿಂಗದ ಕೃಪೆಯಾಗುವದು ಕಾಣಾ. ”

ಆದಕ್ಕೆ ಮಾರಯ್ಯ ತಂದೆಗಳು “ ಪ್ರಭುವೇ, ಮಾಡುವ ಕೆಲಸವನ್ನು ಬಿಟ್ಟು ಮಾಡಬಾರದ ಕೆಲಸಕ್ಕೆ ಕೈಹಾಕಿದರೆ ಆದರಿಂದ ಚಿತ್ತವು ಸ್ವಾಸ್ಥ್ಯ ವಾಗಲರಿಯದು ನೋಡಾ. ಆದುದರಿಂದ ನಾವು ಕೈಕೊಂಡ ಕಾಯಕ ದಲ್ಲಿಯೇ ಅನನ್ಯ ಮನಸ್ಕರಾಗಿದ್ದರಾಯಿತು. ಆದರೆ ನಾವು ಕಾಯಕ ವನ್ನು ಬಿಟ್ಟದ್ದಾದರೆ ನಮ್ಮ ಮನಸ್ಸು ಅತ್ತಿತ್ತ ಹರಿದಾಡಿ ಅಮಳೇಶ್ವರ ಲಿಂಗವು ನಮಗೆ ದೂರವಾಗುವದು. ಕಾಯಕದಲ್ಲಿಯೇ ಲಿಂಗಪೂಜೆ ಯಿರುವದರಿಂದ ಬೇರೆ ಲಿಂಗಪೂಜೆಯೆನಗೇಕಯ್ಯಾ? ” ಎಂದುಸುರಿದರು.

ಆಗ ಪ್ರಭುದೇವರು ಅಪ್ಪಣೆ ಕೊಡಿಸಿದ್ದೇನಂದರೆ “ ಕಾಯಕಕ್ಕೆ ಮಹತ್ವಕೊಟ್ಟು ಕಾಯದ ಕರಸ್ಥಲದಲ್ಲಿದ್ದ ಲಿಂಗವನ್ನು ಜರಿದು ಬಿಟ್ಟರೆ ಆ ಗುಹೇಶ್ವರ ಲಿಂಗವು ನಿನಗೆಂತು ಸಾಧ್ಯ ಹೇಳಾ, ಮಾರಯ್ಯಾ? ಲಿಂಗವನ್ನು ಬಿಟ್ಟು ಕಾಯಕವನ್ನು ಹಿಡಿದರೆ ಅಸಗ ನೀರಡಿಸಿ ಹೊಳೆ ಯಲ್ಲಿ ನಿಂದಂತಾಗುವದಿಲ್ಲವೇ? ಅರ್ಥಾತ್ ಅಸಗನು ನೀರಡಿಸಿ ತಾನು ಹೊಳೆಯಲ್ಲಿ ನಿಂತಿದ್ದರೂ ಆ ನೀರನ್ನು ಕುಡಿಯಬೇಕೆಂಬ ಅರಿವು ಅವ ನಿಗೆ ಹುಟ್ಟದಿದ್ದರೇನು ಪ್ರಯೋಜನ? ಅದರಂತೆ ಬೇಕಾದಂಥ ಕಾಯಕ ಮಾಡಿದರೂ ಇಷ್ಟಲಿಂಗದಲ್ಲಿ ಭಕ್ತಿಯಿಲ್ಲದಿದ್ದರೆ ವ್ಯರ್ಥವಲ್ಲವೇ? ”

ಅದಕ್ಕೆ ಮಾರಯ್ಯಗಳು "ಹಣ್ಣು ಕಳಚಿ ಬೀಳುವತನಕ ಅದಕ್ಕೆ ತೊಟ್ಟಿನ (ತುಂಬಿನ) ಹಂಗು ಬೇಕು. ನಮ್ಮ ಚಿತ್ತವು ಪರಿಪಕ್ವವಾಗುವ ತನಕ ನಮಗೆ ಶರಣರ ಸಂಗ, ಜಂಗಮ ಸೇವೆ, ಲಿಂಗಪೂಜೆಗಳು ಬೇಕು. ಆದರೆ ಹಣ್ಣಿನಂತೆ ಪರಿಪಕ್ವವಾದ ಮನಸ್ಸುಳ್ಳವರಿಗೆ ಅಮಳೇಶ್ವರ ಲಿಂಗದ ಹಂಗೇಕೆ ಹೇಳಾ ಪ್ರಭುವೇ?" ಎಂದು ಪ್ರಶ್ನೆ ಮಾಡಿದರು.

ಬಳಿಕ ಪ್ರಭುದೇವರು "ಮಾರಯ್ಯಾ ಚಿತ್ತವು ಸ್ವಾಸ್ಥ್ಯವಾಯಿತ್ತೆಂದು ಮೈಮರೆದು ಲಿಂಗ ಪೂಜೆಯ ತೊರೆದರೆ ಮತ್ತೊಮ್ಮೆ ಅದು ಚಂಚಲವಪ್ಪುದು ನೋಡಾ. ನೀನು ಮಾಡುವ ಕಾಯಕವನ್ನು ಗುರು-ಲಿಂಗ-ಜಂಗಮ ಭಾವನೆಯಿಂದ ಮಾಡಬೇಕು. ಹೊರಗೆ ಕಾಯಕ ಮಾಡಿದರೂ ಒಳಗೆ ಅರಿವನ್ನು ಜಾಗ್ರತಗೊಳಿಸಿ ಗುರು-ಲಿಂಗ-ಜಂಗಮದಲ್ಲಿ ಭಕ್ತಿಯಿಟ್ಟರೆ ಗುಹೇಶ್ವರ ಲಿಂಗವು ನಿನಗೆ ಸಾಧ್ಯವಾಗುವದು ನೋಡಾ." ಎಂದು ಉತ್ತರ ಕೊಟ್ಟರು.

ಇದನ್ನು ಕೇಳಿ ಮಾರಯ್ಯ ತಂದೆಗಳು "ಪ್ರಭುವೇ ತಮ್ಮ ನುಡಿಯಿಂದ ಕೃತಾರ್ಥನಾದೆನು. ನಿಮ್ಮ ಶರಣ ಸಂಗವೊಲ್ಲದೆ ಬರೇ ಕಾಯಕಕ್ಕೆ ಮಹತ್ವ ಕೊಡುವದೆಂದರೆ ಗೆದ್ದಲಿಯು ಮನೆ ಮಾಡಿ ಸರ್ಪಂಗೀಡಾದಂತೆಯೇ ಸರಿ. ನಾನೆತ್ತಣ ಕಾಯಕದಿಂದಲೇನಾದರೂ ಗಳಿಸಿ ದಾಸೋಹವ ಮಾಡಿದರೇನು ಲಿಂಗ ನಿಷ್ಠೆಯಿಲ್ಲದನ್ನಕ್ಕರ? ನಿಮ್ಮ ಶರಣರ ಸಂಗದಿಂದ ಅರಿವರಿತು ಮರವು ನಷ್ಟವಾಗಿ ಅಮಳೇಶ್ವರ ಲಿಂಗದಲ್ಲಿ ಶ್ರೀಪ್ರಭುದೇವರ ಪಾದಕ್ಕೆ ನಮೋ ನಮೋ ಎನುತಿರ್ದೆನು."

ಹೀಗೆಂದು ಮಾರಯ್ಯಗಳು ತಮ್ಮ ಕಾಯಕವನ್ನು ತಾವೇ ಜರಿದು ಘನಲಿಂಗದ ನಿಜ ಸಮಾಧಿಯೊಳಗೆ ಬೆರಸಿ ನಿಂದು ಪ್ರಭುದೇವರಿಗೆ ನಮಸ್ಕರಿಸುವಾಗ ಆಯ್ದಕ್ಕಿ ಮಾರಯ್ಯಗಳ ಪುಣ್ಯಾಂಗನೆಯಾದ ಲಕ್ಕಮ್ಮಗಳು ಬಂದು ಪ್ರಭು ಮುಖ್ಯರಾದ ಮಹಾಗಣಂಗಳಿಗೆ ನಮಸ್ಕರಿಸಿ ಪತಿಯನ್ನು ಕುರಿತು— ನಿತ್ಯ ಕಾಯಕವನ್ನು ನಿಲ್ಲಿಸಿದುದೇಕೆ? ದಯಮಾಡಿ ಹೋಗಿರೆಂದು ಈ ಪ್ರಕಾರ ಅರಿಕೆ ಮಾಡಿಕೊಂಡಳು. "ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ. ಭಾವ ಶುದ್ಧವಾಗಿ ಮಹಾ ಶರಣರ ಅಂಗಣದಲ್ಲಿ ಬಿದ್ದ ಅಕ್ಕಿಯ ತಂದು ದಾಸೋಹ ಮಾಡಬೇಕು ಮಾರಯ್ಯಪ್ರಿಯ ಅಮಳೇಶ್ವರ ಲಿಂಗಕ್ಕೆ. ಬೇಗ ಹೋಗು ಮಾರಯ್ಯ"

ಮಡದಿಯ ನುಡಿಯನ್ನು ಕೇಳಿ ಮಾರಯ್ಯ ತಂದೆಗಳು ಬಸವೇಶ್ವರನ ಅಂಗಣಕ್ಕೆ ಬಂದು ಅಲ್ಲಿ ಚಲ್ಲಿದ ಅಕ್ಕಿಯನ್ನು ದಿನಕ್ಕಿಂತ ಹೆಚ್ಚಾಗಿ ಆಯ್ದುಕೊಂಡು ತರಲು ಲಕ್ಕಮ್ಮನವರು ಸಿಟ್ಟಾಗಿ ಅದು ಆಶೆಬುರುಕತನವೆಂದು ಪತಿಗೆ ವಿಡಂಬಿಸಿ ನುಡಿದುದನ್ನು ಇಲ್ಲಿ ಕೊಟ್ಟಿದೆ.

## ಲಕ್ಕಮ್ಮಗಳ ವಿಡಂಬನೆ.

(೧) ಮಾರಯ್ಯ, ಮನಹರುಷದಿಂದೆ ಬಸವಣ್ಣನವರ ಅಂಗಳಕ್ಕೆ ಹೋಗಿ ಹೆಚ್ಚಾಗಿ ಅಕ್ಕಿಯನ್ನು ಕಟ್ಟಿಕೊಂಡು ಬಂದಿರಲ್ಲ! ಎಂದಿನಂದವೆ ಸಾಕು. ಹೆಚ್ಚಿನದನ್ನು ಕೊಂಡು ಹೋಗಿ ಅಲ್ಲಿಯೇ ಸುರಿ. ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕೊಟ್ಟ ಕಾಯಕವೇ ಸಾಕು, ಮಾರಯ್ಯ.

(೨) ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಎಲೆ ಆಯ್ಯ? ಈಸಕ್ಕಿಯ ಆಶೆ ನಿಮಗೇಕೆ? ಈಶ್ವರನೊಪ್ಪ. ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕ್ಕೆ ದೂರ ಮಾರಯ್ಯ.

(೩) ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ? ಬೆಟ್ಟ ಬಲ್ಲಿತ್ತೆಂದರೆ ವಜ್ರದ ಮೊನೆಯು ಬಡವಾಗಿದ್ದರೆ ಅದು ಒಡೆಯದೆ? ಘನಶಿವಭಕ್ತರಿಗೆ ಬಡತನವಿಲ್ಲ. ಸತ್ಯರಿಗೆ ದುಃಕರ್ಮವಿಲ್ಲ. ಎನಗೆ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗವುಳ್ಳನ್ನಕ್ಕರ ಆರ ಹಂಗಿಲ್ಲ ಮಾರಯ್ಯ.

(೪) ಭಕ್ತರು ಕಾಯಕವೆಂದು ದುಂದುಗಾರಿಕೆಯಲ್ಲಿ ದಾಸೋಹ ಮಾಡಬಹುದೇ? ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕ್ಕೆ ಸಲ್ಲಬೇಕು ಮಾರಯ್ಯ.

(೫) ಭಕ್ತಂಗೆ ಬಡತನವುಂಟೆ? ನಿತ್ಯರಿಗೆ ಮರಣವುಂಟೆ? ಭಕ್ತರು ತಾವು ಬಡವರೆಂದು ಮತ್ತಿಷ್ಟು ಆಶೆ ಬಡಬಹುದೇ? ಭಕ್ತರಿಗೆ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ ಮಾರಯ್ಯ.

(೬) ಗರ್ವದಿಂದ ಮಾಡುವ ಭಕ್ತಿ ಮನದ ಕೇಡು. ನಡೆಯಿಲ್ಲದ ನುಡಿ ಅರುವಿಂಗೆ ಹಾನಿ. ಕೊಡದೆ ತ್ಯಾಗಿಯೆನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಖಜಲವ ತುಂಬಿದಂತ ನೋಡಾ ಮಾರಯ್ಯ.

(೭) ಒಮ್ಮನವ ಮೂರಿ ಇಮ್ಮನದಲ್ಲಿ ತಂದಿರಿ. ಇದು ನಿಮ್ಮ ಮನವೋ? ಬಸವಣ್ಣನವರು ಹೂಡಿದ ಸತ್ವಪರೀಕ್ಷೆಯೋ? ಮಾರಯ್ಯ ಪ್ರಿಯ ಅಮುಳೇಶ್ವರ ಲಿಂಗಕ್ಕೆ ಸಲ್ಲದ ಬೋನವನಲ್ಲಿಯೆ ಸುರಿದು ಬನ್ನಿ ಮಾರಯ್ಯ.

ಹೆಂಡತಿಯು ಈ ಮಾತುಗಳನ್ನು ಕೇಳಿ ಮಾರಯ್ಯಗಳು "ಪ್ರಮಥ ಗಣಂಗಳು ಇಲ್ಲಿಗೆ ದಯಮಾಡಿಸಿದ್ದರಿಂದ ನಮ್ಮ ಮನೆಯೇ ಶಿವಲೋಕವಾಯಿತ್ತೆಂದು ದಾಸೋಹಕ್ಕಾಗಿ ಹೆಚ್ಚಿಗೆ ಅಕ್ಕಿಯನ್ನು ಆಯ್ದು ತಂದೆ ನೋಡಾ. ನನಗೆ ಅದೇ ಕೈಲಾಸ, ಅಮುಳೇಶ್ವರ ಲಿಂಗದಲ್ಲಿ ನನಗೆ ಹೆಚ್ಚಿನ ಆಶೆಯಿಲ್ಲ ನೋಡಾ" ಎಂದರು. ಅದಕ್ಕೆ ಲಕ್ಕಮ್ಮಗಳು "ಮಾಡುವ ಕಾಯಕವುಳ್ಳನ್ನಕ್ಕ ಬೇರೊಂದು ಪದವನರಲೇತಕ್ಕೆ? ದಾಸೋಹವೆಂಬ ಸೇವೆಯ ಬಿಟ್ಟು ಕೈಲಾಸವೆಂಬ ಆಶೆ ಬೇಡ. ಮಾರಯ್ಯ ಪ್ರಿಯ ಅಮುಳೇಶ್ವರ ಲಿಂಗವಿದ್ದ ಠಾವೇ ಕೈಲಾಸ. ಮಾಡಿ ನೀಡಿ ಹೋದಿಹೆನೆಂಪರೆ ಕೈಲಾಸವೇನು ಕೈಕೂಲಿಯೆ? ಹಿಂದುಮುಂದು ಭಾವಿಸದೆ ಮಾರಯ್ಯ ಪ್ರಿಯ ಅಮುಳೇಶ್ವರ ಲಿಂಗವಿದ್ದ ಠಾವೇ ಕೈಲಾಸವೆಂದರಿಯಬೇಕು ಮಾರಯ್ಯ!" ಎಂದು ಉತ್ತರಕೊಟ್ಟರು.

ಈ ಮಾತನ್ನು ಕೇಳಿ ಮಾರಯ್ಯನವರು ತಮ್ಮ ಪತ್ನಿಯನ್ನು ಕುರಿತು ಅಂಧಕಂಗೆ ಜೀವವಿದ್ದರೇನು? ಕಣ್ಣುಬೇಕಲ್ಲವೇ? ನೀ ಸತಿಯಾಗಿ ನಾ ಪತಿಯಾಗಿ ಉಭಯ ಪ್ರಾಣಗಳು, ಅಮುಳೇಶ್ವರ ಲಿಂಗದಲ್ಲಿ ಏಕರೂಪವಾಗಿರುವ ಪರಿಯ ತೋರಾ" ಎಂದು ಬೆಸಗೊಳ್ಳಲು ಆಕೆಯು ಬಹು ವಿನೋದ ಪೂರ್ವಕವಾಗಿ ನುಡಿದುದೇನಂದರೆ "ಕೈದುವ ಕೊಡುವರಲ್ಲದೆ ಕಲಿತನವ ಕೊಟ್ಟವರುಂಟೆ ಮಾರಯ್ಯ? ಹೆಣ್ಣು ಕೊಡುವರಲ್ಲದೆ ಕೂಟ ಕಾದವರುಂಟೆ ಮಾರಯ್ಯ? ಮಾರಯ್ಯ ಪ್ರಿಯ ಅಮುಳೇಶ್ವರ ಲಿಂಗದಲ್ಲಿ ಏಕರೂಪವ ಮನಭಕ್ತಿಯುಳ್ಳ ನೀವೇ ಬಲ್ಲಿರಿ, ನಾನೆತ್ತ ಬಲ್ಲೆ ಮಾರಯ್ಯ? ಲಿಂಗೈಕ್ಯರಾಗಬೇಕಾದರೆ ತ್ರಿವಿಧ ದಾಸೋಹ ಮಾಡಬೇಕು. ಆ ಮಾಟವಿಲ್ಲದವನ ಭಕ್ತಿ ಹಾಳೂರ ಮುಂದಿನ ಕೊಳದಲ್ಲಿ ಕಾಲನಿಟ್ಟು ಕೀಲ ಜಡಿದಂತೆಯೇ ಸರಿ. ಅದು ಕಾರಣ ಅಮುಳೇಶ್ವರ ಲಿಂಗದ ಮಹಾಮನೆಯಲ್ಲಿ ಪ್ರಸಾದವಾಯಿತ್ತೆಂದು ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಮುಖ್ಯರಾದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳಿಗೆ ವಿಭೂತಿಯ ಕಳುಹಾ ಮಾರಯ್ಯ." ಎಂದು ಬಿನ್ನಯಿಸಿದರು.

ಆದಕ್ಕೆ ಮಾರಯ್ಯನವರು "ಶಿವಶಿವಾ, ನಾನೆತ್ತ ! ಅವರೆತ್ತ ! ನಿತ್ಯ ನಿಯಮ ವ್ರತಾಶೀಲಸಂಪನ್ನರುಗಳಿಗೆ ಅವರವರ ನೇಮಂಗಳಂ ಸಲಿಸುವದು ಎಮಗಳವೆ ? ನಾವು ನಿರ್ಧನಿಕರು. ಅಸಂಖಾತ ಮಹಾಗಣಂಗಳಿಗೆ ತೃಪ್ತಿ ಪಡಿಸುವದು ನಮ್ಮಿಂದ ಸಾಧ್ಯವೇ ?" ಎನ್ನಲು ಲಕ್ಕಮ್ಮಗಳು "ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕ ಮಾಡುವ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ" ಎಂದು ಹೇಳಿದರು.

ಆ ಮೇರೆಗೆ ಮಾರಯ್ಯನವರು ಬಸವಣ್ಣನವರ ಬಳಿಗೆ ಹೋಗಿ "ಅಸಂಖ್ಯಾತ ಪ್ರಮಥರೆಲ್ಲರು ಸಹವಾಗಿ ಅಮಳೇಶ್ವರ ಲಿಂಗದ ಮನೆಯಲ್ಲಿ ಪ್ರಸಾದವ ಸಲಿಸುವ ಬಾರಾ ಸಂಗನಬಸವಣ್ಣ" ಎಂಬುದಾಗಿ ಬಿನ್ನವಿಸಿಕೊಂಡರು. ಅದೇ ಪ್ರಕಾರ ಪ್ರಮಥರೆಲ್ಲರು ದಯಮಾಡಿಸಿದ ಮೇಲೆ ಅವರವರ ಮನದಿಷ್ಟದಂತೆ ಪ್ರಸಾದದ ಪದಾರ್ಥಗಳನ್ನು ಆ ದಂಪತಿಗಳು ಸಲಿಸಿದರು. ಎಲ್ಲ ಗಣಂಗಳು ಷಡುರುಚಿಯನ್ನು ಲಿಂಗಕ್ಕರ್ಪಿಸಿ ತೃಪ್ತಿ ಪಡೆದರು.

ಇದನ್ನು ನೋಡಿ ಪ್ರಭುದೇವರು ಆಶ್ಚರ್ಯಬಟ್ಟು ಬಸವಣ್ಣನವರಿಗೆ "ಅವರವರ ನೇಮದಂತೆ ಇಚ್ಛಾಭೋಜನವು ಸಂದಿತ್ತು. ಮಹಾಘನವು ಕಂಡಯ್ಯ, ಸಂಗನಬಸವಣ್ಣಾ. ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು ಎಂದುಸುರಲು ಬಸವಣ್ಣನವರು "ಮನೆ ನೋಡಾ ಬಡವರು. ಮನ ನೋಡಾ ಸಂಪನ್ನರು. ಧನ ನೋಡಾ ಬಡವರು ಘನ ಮನ ಸಂಪನ್ನರು. ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು. ಆರಿಗೂ ಉಪಮಿಸಬಾರದು" ಎಂದು ಅಪ್ಪಣೆಕೊಡಿಸಿದರು. ಆ ಮೇಲೆ ಪ್ರಭುದೇವರು "ಉಭಯದೃಷ್ಟಿಯಲ್ಲಿ ದೃಷ್ಟವ ಕಾಂಬಂತೆ ದಂಪತಿಗಳು ಏಕಭಾವವಾಗಿನಿಂದಲ್ಲಿ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು" ಎಂದು ನುಡಿದರು.

ನಂತರ ಮಾರಯ್ಯಗಳು ತಮ್ಮ ವಿನೀತ ಭಾವವನ್ನು ಹೀಗೆ ವ್ಯಕ್ತಗೊಳಿಸಿದರು. "ತನುವೀವೊಡೆ ತನುವೆನಗಿಲ್ಲ. ಮನವೀವಡೆ ಮನವೆನಗಿಲ್ಲ. ಧನವೀವಡೆ ಧನವೆನಗಿಲ್ಲ. ನಿಮ್ಮ ಶರಣರ ಅಂಗಣದ ಅಕ್ಕಿಯ ನಾಯ್ದು ತಂದು ಎನ್ನೊಡಲ ಹೊರೆವೆನಲ್ಲದೆ ಅಮಳೇಶ್ವರ ಲಿಂಗಕ್ಕೆ ನೀಡುವ ಒಯಕೆಯೆನಗೆಂತು ಸಾಧ್ಯ ಹೇಳಾ ಸಂಗನಬಸವಣ್ಣಾ." ಇದಲ್ಲದೆ

"ಎನಗೆ ಮನೆಯಿಲ್ಲ. ಎನಗೆ ಧನವಿಲ್ಲ. ಮಾಡುವದೇನು ? ನೀಡುವದೇನು ? ಮನೆ ಧನ ಸಕಲ ಸಂಪದ ಸೌಖ್ಯವುಳ್ಳ ನಿಮ್ಮ ಶರಣಬಸವಣ್ಣನಂಗಳದ ಅಕ್ಕಿಯನಾಯ್ದು ಹೊಟ್ಟೆಯ ಹೊರೆವೆನಗೆ ಅಮಳೇಶ್ವರ ಲಿಂಗಕ್ಕೆ ನೀಡುವ ಶಕ್ತಿಯಿಲ್ಲ ಸಂಗನಬಸವಣ್ಣಾ."

"ಬಸವಣ್ಣಾ, ಎನ್ನ ಕರಸ್ಥಳದ ಕಳೆ ನೀನು. ಎನ್ನ ಮನೋಮಧ್ಯದ ಸ್ವಯಂಜ್ಯೋತಿ ನೀನು. ಅಮಳೇಶ್ವರ ಲಿಂಗದ ಕಳೆ ನೀನು. ಅಮೃತದ ಸವಿಯು ಸ್ವಾದಿಸುವರಿಗಲ್ಲದೆ ತನ್ನ ತಾ ಸ್ವಾದಿಸದ ಪರಿಯಂತೆ ನಿತ್ಯತೃಪ್ತಂಗೆ ಆಪ್ಯಾಯನವುಂಟೆ? ಪ್ರತಿನಿತ್ಯ ಏಳುನೂರೆಪ್ಪತ್ತು ಅಮರ ಗಣಂಗಳ ಕಟ್ಟಳೆಯ ಕಟ್ಟು ನಿನ್ನದು ನಾನೆಷ್ಟರವನು ? ಸಂಗನಬಸವಣ್ಣಾ, ನಿಮ್ಮ ಪಾದಕ್ಕೆ ನಮೋ ನಮೋ ಎಂಬೆನು."

ಹೀಗೆ ನುಡಿದು ಮಾರಯ್ಯ ತಂದೆಗಳು ಲಿಂಗೈಕ್ಯರಾದರು. ತತ್ಕ್ಷಣದಲ್ಲಿಯೇ ಮಾರಯ್ಯನವರ ಸತಿಶಿರೋಮಣಿಯಾದ ಲಕ್ಕಮ್ಮಗಳು ಪತಿಯೊಡನೆ ಲಿಂಗೈಕ್ಯರಾದರು. ಶಿವಶರಣರೆಲ್ಲರೂ ಸತಿಪತಿಗಳ ಲಿಂಗೈಕ್ಯವನ್ನು ಮನವಾರೆ ಕೊಂಡಾಡಿದರು.

---

# ತೇರದಾಳದಲ್ಲಿ ಶ್ರೀ ಪ್ರಭುದೇವರ ಐಕ್ಯ.

ಲೇಖಕ:— ಬುದ್ಧಯ್ಯಾ ಸ್ವಾಮಿ ಪುರಾಣಿಕ.

## ೩ ನೆಯ ಪ್ರಕರಣ.

ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧, ೨, ೩ ನೆಯ ಪುಷ್ಪಗಳನ್ನು ಅಭಿಪ್ರಾಯದ ದೆಶೆಯಿಂದ ಎಲ್ಲರಿಗೂ ಕಳುಹಿಸುವಂತೆ ರಾವಸಾಹೇಬ ಫ. ಗು. ಹಳಕಟ್ಟಿಯವರಿಗೂ ಕಳುಹಿಸಿ ಕೊಟ್ಟಿತ್ತು. ಅದಕ್ಕೆ ಅವರು, “ ತಾವು ಬಹಳ ಶ್ರಮವನ್ನು ತೆಗೆದುಕೊಂಡು ಈ ಪದಗಳನ್ನು ಅಚ್ಚು ಹಾಕಿಸಿದ್ದಕ್ಕೆ ಸಮಾಜವು ಋಣಿಯಾಗಿದೆ. ಈ ವಿಷಯವಾಗಿ ವಿಮರ್ಶೆಯನ್ನು ಡಾ. ನಂದೀಮಠ ಎಮ್. ಎ. (ಮುಂಬಯಿ), ಪಿ. ಎಚ್. ಡಿ. (ಲಂಡನ್ನ) ಇವರು ತಾವು ಬರೆದು ನನ್ನ ಕಡೆಗೆ ಕಳುಹಿಸುವೆವೆಂದು ನನಗೆ ಲಂಡನದಿಂದ ಬರೆದಿರುವರು. ಆದ್ದರಿಂದ ಈ ಬಗ್ಗೆ ವಿಮರ್ಶೆಯನ್ನು ನವಕರ್ನಾಟಕದಲ್ಲಿ ಮಾಡಿಲ್ಲ” ವೆಂಬುದಾಗಿ ವಿಜಾಪುರದಿಂದ ತಾ|| ೨೩-೩-೧೯೨೯ ನೆಯ ಪತ್ರದಿಂದ ತಿಳಿಸಿದರು. ಮುಂದೆ ಶಿವಾನುಭವ, ಸಂಪುಟ ೪, ಜುಲಾಯಿ ೧೯೨೯ ನೆಯ ಸಂಚಿಕೆಯ ೧೮೫ ನೆಯ ಪುಟದಲ್ಲಿ “ ಬಸವಪ್ರಭು ಮಹಾಸ್ವಾಮಿಗಳು ತೇರದಾಳ ” ಎಂಬ ಶಿರೋಲೇಖದ ಕೆಳಗೆ “ ಗ್ರಂಥ ವಿಮರ್ಶೆ—ಪ್ರಭುದೇವರ ಪದ್ಯಗಳು ” ಎಂಬದೊಂದು ಲೇಖವನ್ನು ಪ್ರಕಟಿಸಿದರು. ಅದರಲ್ಲಿ, ಮಗೆಪ್ಪ ದೇಸಾಯಿ, ಗುರುಬಸವ ಮತು ಚನ್ನಪ್ಪ ಇವರ ಮುದ್ರಿಕೆಗಳು ಅನುಕ್ರಮವಾಗಿ ಮಗಿಯ ನರೇಂದ್ರ, ಗುರುಬಸವ ಮತ್ತು ಚನ್ನಶ್ರೀಪ್ರಭು ಎಂದು ಇರುತ್ತವೆ. ಇವರೆಲ್ಲರೂ ಹದಿನ್ನೈದನೆಯ ಶತಮಾನದ ಕವಿಗಳಿದ್ದು ಅವರು ಶ್ರೀಅಲ್ಲಮಪ್ರಭು ಮತ್ತು ಅವರ ತರುವಾಯ ಹನ್ನೆರಡನೆಯ ಪೀಠಸ್ಥರಾದ ಶ್ರೀ ಬಸವಪ್ರಭು ಇವರ ಸ್ತುತಿಪರ ಪದ್ಯಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಶ್ರೀಮದನಾದಿ ಅಲ್ಲಮಪ್ರಭುದೇವರ ಸುಂದರ ಸ್ತೋತ್ರಗಳಲ್ಲದೆ, ಅವರ ತರುವಾಯ ಶೂನ್ಯಸಿಂಹಾಸನ ಮಹಾಪೀಠಕ್ಕೆ ಅಧಿಕಾರಾರೂಢರಾದ ಶ್ರೀಬಸವಪ್ರಭು ಸ್ವಾಮಿಗಳವರ ಸ್ತೋತ್ರಗಳೂ ಬಂದಿರುತ್ತವೆ. ಈ ಮೇಲ್ಕಂಡ ಮೂವರೂ ಕವಿಗಳು

ಸಮಕಾಲೀನರೆಂಬುದು ಅವರ ಪದ್ಯಗಳಿಂದಲೇ ಗೊತ್ತಾಗುತ್ತದೆ. ಮತ್ತು ಅವರೆಲ್ಲರು ಶ್ರೀ ಬಸವಪ್ರಭು ಇವರ ಪರಮಭಕ್ತರೆಂದು ಅವುಗಳಿಂದ ತಿಳಿದು ಬರುತ್ತದೆ. ಈ ಬಸವಪ್ರಭು ಸ್ವಾಮಿಗಳು ಆಕಾಲಕ್ಕೆ ಅತ್ಯಂತ ಪ್ರಸಿದ್ಧವಾಗಿದ್ದರು. ಶ್ರೀಮನ್ನಿರಂಜನ ವಂಶರತ್ನಾಕರವೆಂಬ ಗ್ರಂಥದಲ್ಲಿ ಇವರ ಬಗ್ಗೆ ಉಪಲಬ್ಧವಿರುವ ವೃತ್ತಾಂತವೇನಂದರೆ—ಅವರು ಶ್ರೀ ಅಲ್ಲಮಪ್ರಭುವಿನ ತರುವಾಯ ಹನ್ನೆರಡನೆಯ ಪಟ್ಟದ ಸ್ವಾಮಿಗಳು. ಅವರ ಹಿಂದಿನವರು ತಿಪ್ಪೆಯರುದ್ರ ಮಹಾಸ್ವಾಮಿಗಳವರು (ಈ ಸ್ವಾಮಿಗಳವರ ಗದ್ದಿಗೆಯು ಮೈಸೂರ ಜಿಲ್ಹಾ ನಾಯಕನ ಹಳ್ಳಿಯಲ್ಲಿ ಈಗ್ಗೆಯೂ ಅತ್ಯಂತ ಪ್ರಸಿದ್ಧವಾಗಿದೆ.) ಶ್ರೀ ಬಸವಪ್ರಭುಗಳು ಪಟ್ಟವೇರಿದ ತರುವಾಯ ಕೆಳದೀ ದೇಶಕ್ಕೆ ಬಂದು ಅಲ್ಲಿ ಕೆಲಕಾಲವಿದ್ದು ಅಲ್ಲಿಯ ಜನರಿಗೆ ಜ್ಞಾನೋಪದೇಶವನ್ನು ಮಾಡುತ್ತ ಅನೇಕ ಮಹಿಮೆಗಳನ್ನು ತೋರಿಸಿದರು. ಅಲ್ಲಿಂದ ಹಿರೇಸೂರು ಕಿರೇಸೂರು (ಬಾಗಲಕೋಟೆ ತಾಲೂಕ) ಗ್ರಾಮಗಳಿಗೆ ಬಂದು ಅಲ್ಲಿ ತಮ್ಮ ಕುರುಹುಗಳನ್ನು ಇಟ್ಟು, ಹುಕ್ಕೇರಿ ಸೀಮೆಗೆ ಬಂದು ಅಲ್ಲಿರುವ ಜೈನಮತಸ್ಥರಿಗೆ ಶಿವಮತವನ್ನು ಬೋಧಿಸಿ ತಮ್ಮ ಭಕ್ತರನ್ನು ಮಾಡಿಕೊಂಡರು. ಅಲ್ಲಿಂದ ಹನಗಂಡಿ (ಸಂಸ್ಥಾನ ಸಾಂಗಲಿ) ಎಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿಂದ ಜೈನ ಅರಸನಿಗೆ ಲಿಂಗಧಾರಣೆಯನ್ನು ಮಾಡಿಸಿದರು. ಅಲ್ಲಿಂದ ಅದಕ್ಕೆ ಸಮೀಪವಾಗಿರುವ ತೇರದಾಳ ಗ್ರಾಮಕ್ಕೆ ಬಂದು ಅಲ್ಲಿಯೇ ನಿರ್ವಯಲಾದರು. ಆ ಸಮಯದಲ್ಲಿ ಅಲ್ಲಿಯ ಭಕ್ತರ ಇಚ್ಛೆಯ ಮೇರೆಗೆ ತಮ್ಮ ಕಮಂಡಲುವಾದ ಮಗಿಯನ್ನೂ ಹಾವುಗೆಯನ್ನೂ ಬೆತ್ತವನ್ನೂ ತಮ್ಮ ಕುರುಹಾಗಿ ಇಟ್ಟರು. ಆ ಸ್ಥಳದಲ್ಲಿ ಭಕ್ತರು ಒಂದು ಮಠವನ್ನು ಕಟ್ಟಿಸಿ ಅಲ್ಲಿ ಆ ಮಗಿಯನ್ನೂ ಬೆತ್ತ ಹಾವುಗೆಗಳನ್ನೂ ಇಟ್ಟು ಈಗಲೂ ಪೂಜಿಸುತ್ತಿರುವರು. ಈ ಮಠಕ್ಕೆ ಪೂಜೋತ್ಸವಗಳು ವಿಶೇಷವಾಗಿ ಜರಗುತ್ತಿದ್ದು ಅದಕ್ಕೆ ಬಹಳ ಭೂಮಿಯು ಇನಾಮವಾಗಿ ಈಗ್ಗೆಯೂ ನಡೆಯುತ್ತದೆ. ಮೇಲ್ಕಂಡ ವೃತ್ತಾಂತಗಳು ಈ ಮೂರು ಕವಿಗಳು ರಚಿಸಿರುವ ಪದ್ಯಗಳಿಂದ ಸಮರ್ಥನೆಯನ್ನು ಹೊಂದುತ್ತವೆ. ಈ ಕವಿಗಳಲ್ಲೊಬ್ಬನಾದ ಮಗಿಯ ನರೇಂದ್ರನೇ ಮಹಾಸ್ವಾಮಿಗಳಿಂದ ದೀಕ್ಷೆಹೊಂದಿದ ಹನಗಂಡಿಯ ದೊರೆಯು. ಅವನು ತಾನು ಈ ಮಗಿಪ್ರಭುವಿನಿಂದ ವರವನ್ನು ಪಡೆದೆನೆಂತಲೂ, ತಾನು ಅವರ ಶಿಷ್ಯನೆಂತಲೂ ಮೇಲಿಂದ ಮೇಲೆ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ. ಈ ಹನಗಂಡೀ ದೇಸಾಯರು ಮೊದಲಿಗೆ ಜೈನರಿದ್ದು ಬಸವಪ್ರಭುವಿ

ನಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಆದರೆ ಮಧ್ಯದಲ್ಲಿ ಯಾವಾಗಲೋ ಅವರು ಪುನಃ ಜೈನಧರ್ಮವನ್ನು ಸ್ವೀಕರಿಸಿ ಅದರಂತೆಯೇ ಈಗ ಆಚರಿಸುತ್ತಲಿದ್ದಾರೆ. ಹೀಗಿದ್ದರೂ ಅವರು ತೇರದಾಳದಲ್ಲಿಯ ಶ್ರೀಬಸವಪ್ರಭುವಿನ ಗದ್ದಿಗೆಗೆ ಕೇವಲ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಾರೆ.

೫೯ ನೇಯ ಪದ್ಯದಲ್ಲಿ ಶ್ರೀಬಸಪ್ರಭು ಸ್ವಾಮಿಗಳು ಗೋಕಾವಿಯ ಹತ್ತರಿರುವ ಗೂಗಿಯ ಕೊಳ್ಳಕ್ಕೆ ಹೋದದ್ದೂ, ಪುಟ ೪೦ ಮತ್ತು ೪೫ ರಲ್ಲಿ ಅವರು ಲಕುಮೇಂದ್ರನ ಆಲಯಕ್ಕೆ ಬಂದದ್ದೂ ಉಲ್ಲೇಖಿಸಲ್ಪಟ್ಟಿವೆ. ಈ ಲಕುಮೇಂದ್ರನೆಂದರೆ ಆಗಿನ ಹುಕ್ಕೇರಿ ನಾಡಿನ ಪ್ರಭುಗಳಾದ ಈಗಿನ ಒಂಟಮುರಿ ದೇಸಾಯರ ಪೂರ್ವಜರೊಬ್ಬರು. ಈ ದೇಸಾಯಿಯ ವಂಶಜರು ಈಗಲೂ ಈ ತೇರದಾಳದ ಬಸವಪ್ರಭುದೇವರ ಮಠಕ್ಕೆ ಅತ್ಯಂತ ಭಕ್ತಿಪೂರ್ವಕವಾಗಿ ನಡೆಕೊಳ್ಳುತ್ತಲಿರುವರು. ಪುಟ ೮೭ ರಲ್ಲಿಯ ಮೂರನೆಯ ಪದ್ಯದಲ್ಲಿ "ಸ್ವಾಮಿಗಳಿಂದ ಪ್ರಜ್ವಲಿಸಿತು ಪ್ರಭೆ ಪುಣ್ಯದ ಮಲೆನಾಡು" ಎಂದು ಇದ್ದು ಇದು ಅವರು ಕೆಳದಿನಾಡಿನಲ್ಲಿದ್ದದ್ದರ ಉಲ್ಲೇಖವಾಗಿರಬೇಕು" ಹೀಗೆ ಅಂದಿರುವರು.

ಶ್ರೀಯುತ ಚನ್ನಪ್ಪಾ ಗುರಪ್ಪಾ ಹುಂಡೇಕಾರ ಬಿ. ಎ. ಎಲ್ ಎಲ್. ಬಿ. ವಕೀಲ ಧಾರವಾಡ, ಇವರು "ಶ್ರೀಬಸವಪ್ರಭು ಸ್ವಾಮಿಗಳು ಯಾರು" ಎಂಬ ಶಿರೋಲೇಖದ ಕೆಳಗೆ ಒಂದು ಲೇಖವನ್ನು ಬರೆದು ಅದನ್ನು ಸಪ್ಟಂಬರ ೧೯೩೯ ನೆಯ ಇಸವಿಯ ಶಿವಾನುಭವದ ೪ ನೆಯ ಸಂಪುಟ ೬ ನೆಯ ಸಂಚಿಕೆಯಲ್ಲಿ ಪ್ರಸಿದ್ಧಪಡಿಸಿರುವರು. ಅದರ ಸಾರಾಂಶವು—ರಾವಸಾಹೇಬ ಹಳಕಟ್ಟಿಯವರು ಶ್ರೀಬಸವಪ್ರಭುದೇವರು ಅಲ್ಲಿಯ ಪ್ರಭುದೇವರ ತರುವಾಯದವರೆಂದೂ, ಮತ್ತು ಅವರ ತರುವಾಯು ಹನ್ನೆರಡನೆಯ ಪೀಠಸ್ಥರೆಂದೂ ಮತ್ತು ಬಸವಪ್ರಭುವು ೧೫ ನೆಯ ಶತಮಾನದಲ್ಲಿದ್ದನೆಂದೂ ಶ್ರೀಮನ್ನಿರಂಜನ ವಂಶರತ್ನಾಕರವೆಂಬ ಗ್ರಂಥದ ಆಧಾರವನ್ನು ತೋರಿಸಿ ಅಭಿಪ್ರಾಯಪಟ್ಟಿದ್ದಾರೆ. ಮತ್ತು ಬಸವಪ್ರಭು ದೇವರು ಶೂನ್ಯಸಿಂಹಾಸನವನ್ನು ಏರಿದ ತರುವಾಯ ಕೆಳದೀ ದೇಶಕ್ಕೂ, ಅಲ್ಲಿಂದ ಬಾಗಲಕೋಟಿ ತಾಲೂಕಿನಲ್ಲಿರುವ ಹಿರೇಸೂರ ಕಿರೇಸೂರ ಗ್ರಾಮುಗಳಿಗೂ ಅಲ್ಲಿಂದ ಹುಕ್ಕೇರಿ ಸೀಮೆಗೂ ದಯಮಾಡಿಸಿ ಹನಗಂಡಿಯಲ್ಲಿದ್ದ ಜೈನ ಅರಸನಿಗೆ ವೀರಶೈವ ದೀಕ್ಷೆಯನ್ನು ಮಾಡಿ, ಮುಂದೆ ತೇರದಾಳ ಗ್ರಾಮಕ್ಕೆ

ಹೋಗಿ ಅಲ್ಲಿ ನಿರ್ವಯಲವಾದರೆಂದೂ ಮತ್ತು ಮೂವರು ಕವಿಗಳಲ್ಲೊಬ್ಬನಾದ ಮಗಿಯ ನರೇಂದ್ರನೇ ಶ್ರೀಬಸವಪ್ರಭುದೇವರಿಂದಲೇ ವೀರಶೈವ ದೀಕ್ಷೆಹೊಂದಿದ ಹನಗಂಡಿಯ ದೊರೆಯೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಇದಲ್ಲದೆ ೫೫ ನೆಯ ಪದ್ಯದ ಮೇಲಿಂದ ಶ್ರೀಬಸವಪ್ರಭುದೇವರು ಗೋಕಾವಿಯ ಹತ್ತರಿರುವ ಗೂಗಿಯಕೊಳ್ಳಕ್ಕೆ ಹೋಗಿದ್ದರೆಂದೂ ಮತ್ತು ೩೭ ನೆಯ ಪುಟದಲ್ಲಿರುವ ೩ ನೆಯ ಪದದಲ್ಲಿ ಉಲ್ಲೇಖಿಸಲ್ಪಟ್ಟ "ಪ್ರಜ್ವಲಿಸಿತು ಪ್ರಭೆ ಪುಣ್ಯದ ಮಲ್ನಾಡ" ಎಂಬದರ ಮೇಲಿಂದ ಅವರು ಕೆಳದೀ ನಾಡಿನಲ್ಲಿ ಇದ್ದದ್ದರ ಉಲ್ಲೇಖವಾಗಿರಬೇಕೆಂದೂ ಅನುಮಾನ ಮಾಡಿರುತ್ತಾರೆ. ಆದರೆ ಪ್ರಸಿದ್ಧಮಾಡಿದ ಪುಸ್ತಕವನ್ನು ಆಮೂಲಾಗ್ರ ಸಂಶೋಧಕ ಬುದ್ಧಿಯಿಂದ ಪರಿಶೋಧಿಸಿ ನೋಡಿದರೆ, ರಾವಸಾಹೇಬ ಹಳಕಟ್ಟಿಯವರ ಅಭಿಪ್ರಾಯವು ತಪ್ಪು ಇದ್ದಂತೆ ಕಾಣಿಸುತ್ತದೆ. ರಾವಸಾಹೇಬರು ಅನ್ನುವಂತೆ ಶ್ರೀ ಅಲ್ಲಮಪ್ರಭುವು ಮತ್ತು ಬಸವಪ್ರಭುವು ಬೇರೆ ಬೇರೆ ಇರದೆ ಅಲ್ಲಮಪ್ರಭುವೇ ಬಸವಪ್ರಭುವೆಂಬ ಪರಿಯಾಯ ನಾಮವನ್ನು ಧರಿಸಿದಂತೆಯೂ ಮತ್ತು ೧೫ ನೆಯ ಶತಮಾನದಲ್ಲಿರದೆ ೧೨ ನೆಯ ಶತಮಾನದಲ್ಲಿ ಇದ್ದಂತೆಯೂ ಕಂಡುಬರುತ್ತದೆ. ಇದಲ್ಲದೆ ಬಸವಪ್ರಭುವೇ ಅಲ್ಲಮಪ್ರಭುವೆಂದು ನಿರ್ಧರಿಸಿದರೆ ಅವನು ಹನಗಂಡಿಯ ದೊರೆಯಾದ ಮಗಿಯ ನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲವೆಂದೂ ಮತ್ತು ಬಾಗಲಕೋಟ ತಾಲೂಕಿನಲ್ಲಿರುವ ಹಿರೇಸೂರ, ಕಿರೇಸೂರ ಗ್ರಾಮಗಳಿಗೆ ಹೊಗಲಿಲ್ಲವೆಂದೂ ಹೇಳಬಹುದು.

ಅಲ್ಲಮಪ್ರಭುವಿಗೆ ಅನೇಕ ಪರ್ಯಾಯ ನಾಮಗಳಿದ್ದು ಬಸವಪ್ರಭು ಎಂಬ ನಾಮವು ಕೂಡ ಒಂದು ಪರ್ಯಾಯ ನಾಮವಾಗಿರುವದರಿಂದ ಈ ವಿಷದಲ್ಲಿ ಸ್ವಲ್ಪ ವಿಚಾರ ಮಾಡುವದು ಅವಶ್ಯವೆಂದು ಅನಿಸುತ್ತದೆ. ಈ ಮೂವರು ಕವಿಗಳಲ್ಲಿ ಪ್ರತಿಯೊಬ್ಬರು ೧೧೦೦ ಪದಗಳನ್ನು ರಚಿಸಿದರೆಂದು ಐತಿಹಯುಂಟೆಂದು ಬರೆದಿದ್ದಾರೆ. ಆದರೆ ದುರ್ದೈವದಿಂದ ಈ ಮೂವರು ಕವಿಗಳ ಒಟ್ಟು ೧೧೪ ಪದಗಳೇ ಉಪಲಬ್ಧವಿರುತ್ತವೆ. ಮತ್ತು ಇದರಲ್ಲಿ ಇತರರ ಪದಗಳು ಸೇರಿಸಲ್ಪಟ್ಟಿವೆ. ಅಂತು ಒಟ್ಟು ೧೨೯ ಪದಗಳಲ್ಲಿ ೨ ಪದಗಳು ಶ್ರೀ ಅಲ್ಲಮಪ್ರಭುವಿಗೆ ಸಂಬಂಧಿಸಿರುವದಿಲ್ಲ. ಉಳಿದ ೧೨೭ ಪದಗಳನ್ನು ಸಂಶೋಧಕ ಬುದ್ಧಿಯಿಂದ ಓದಿದರೆ ಬಸವಪ್ರಭುವು ಬೇರೆಯಾಗಿರದೆ ಅಲ್ಲಮಪ್ರಭುವೇ ಬಸವನಪ್ರಭುವೆಂದು ಮತ್ತು ೧೫ ನೆಯ ಶತಮಾನದಲ್ಲಿರದೆ ೧೨ ನೆಯ ಶತಮಾನ

ದಲ್ಲಿ ಇದ್ದನೆಂದು ಕಂಡುಬರುತ್ತದೆ. ಇದನ್ನೇ ಶ್ರೀಸಿದ್ಧಲಿಂಗ ಯತಿಗಳ ವಚನದಿಂದಲೂ ಶ್ರೀ ಮನ್ನಿರಂಜನ ವಂಶರತ್ನಾಕರ ಗ್ರಂಥದ ಆಧಾರ ದಿಂದಲೂ ತೋರಿಸಬಹುದು.

ಈಗ ಉಪಲಬ್ಧವಿದ್ದ ೧೨೭ ಪದಗಳ ಮೇಲಿಂದ ಶ್ರೀ ಅಲ್ಲಮಪ್ರ ಭುವಿಗೆ ನಿರಂಜನ, ನಿರ್ಮಾಯ, ಮಾಯಾಕೋಲಾಹಲ, ಗುಹೇಶ್ವರ, ಗುಹೇಶಪ್ರಭು, ಪ್ರಭುಲಿಂಗ, ಜಂಗಮಲಿಂಗ, ಅಲ್ಲಮ, ಅಲ್ಲಮೇಶ, ಅಲ್ಲಯ್ಯ, ಅಲ್ಲಮಪ್ರಭು, ಚನ್ನಪ್ರಭು, ಬಸವಪ್ರಭು, ಮಗಿಪ್ರಭು, ಮುಂತಾದ ಅನೇಕ ಪರ್ಯಾಯ ನಾಮಗಳಿದ್ದಂತೆ ಕಂಡುಬರುತ್ತದೆ. ಮತ್ತು ಅಚ್ಚಾದ ಪುಸ್ತಕದ ೨೦ ನೆಯ ಪುಟದಲ್ಲಿರುವ ೬೦ ನೆಯ ಪದದಲ್ಲಿ ಮಗಿಯ ನರೇಂದ್ರ ಕವಿಯು ಅಲ್ಲಮನೆಂದೂ, ಬಸವಪ್ರಭುವೆಂದೂ ಸಂಬೋಧಿಸಿ ದ್ದಾರೆ.

ಪದ— "ಜೋ ಜೋ ಎನ್ನಿ ಅಸಮ ಅಲ್ಲಮಗೆ। ಜೋ ಜೋ ಎನ್ನಿ ಬಸವಪ್ರಭುವಿಗೆ" ॥ ಇತ್ಯಾದಿ.

ಮತ್ತು ಬೇರೆ ಬೇರೆ ಭಕ್ತರ ಪ್ರಭುದೇವರ ಪದಗಳಲ್ಲಿ ೪೩ ನೆಯ ಪುಟದಲ್ಲಿರುವ ೭ ನೆಯ ಪದದಲ್ಲಿ ಬಸವಪ್ರಭುವೆಂದು ಉಲ್ಲೇಖಿಸಲ್ಪ ಟ್ಟಿದೆ. ಪದ— "ನಿರುಪಮನಿತ್ಯ ನಿರಂಜನ ಸಚ್ಚಿತ್। ವರಬಸವಪ್ರಭು ವಿನ ಧ್ಯಾನಮಾಡೊ ಬಿಡದೆ" ॥೩॥ ಇದೇ ಪುಸ್ತಕದ ೪೧ ನೆಯ ಪುಟ ದಲ್ಲಿರುವ ೩ ನೆಯ ಪದದಲ್ಲಿ ತ್ರಿಪುರಾಂತಕ ಲಿಂಗನು ಸಹ ಬಸವ ಪ್ರಭುವೆಂದು ಸಂಬೋಧಿಸಿದ್ದಾನೆ. ಪದ— "ಆದಿಪ್ರಸಾದವ ಭೇದಿಸಬಲ್ಲದೆ। ನಮ್ಮ ತ್ರಿಪುರಾಂತಕ ಲಿಂಗದಲ್ಲಿ ಬಸವಪ್ರಭುವಿಗಲ್ಲದೆ" ॥೭॥

ಈ ಪುಸ್ತಕದಲ್ಲಿ ಮೇಲೆ ಕಾಣಿಸಿದ ಪರ್ಯಾಯ ನಾಮಗಳನ್ನು ಅನೇಕ ಪದಗಳಲ್ಲಿ ಉಪಯೋಗಿಸಿದ್ದಾಗಿದೆ. ಆದ್ದರಿಂದ ಮೇಲೆ ಬರೆದ ಕಾರಣಗಳ ಮೂಲಕ ಅಲ್ಲಮಪ್ರಭುವಿಗೆ ಅನೇಕ ಪರ್ಯಾಯ ನಾಮ ಗಳಿದ್ದವೆಂದೂ ಅವನೇ ಬಸವಪ್ರಭುವೆಂದೂ ಧಾರಾಳವಾಗಿ ಹೇಳಬಹುದು. ಇದೇ ವಿಷಯವನ್ನು ಶ್ರೀ ತೋಂಟದಾರ್ಯರ ವಚನಗಳ ದೃಷ್ಟಿಯಿಂದಲೂ ಮತ್ತು ಶ್ರೀ ಮನ್ನಿರಂಜನ ವಂಶರತ್ನಾಕರ ಗ್ರಂಥದ ದೃಷ್ಟಿಯಿಂದಲೂ ತೋಧಿಸುವಾ. ಶ್ರೀ ತೋಂಟದಾರ್ಯರು ತಮ್ಮ ವಚನದಲ್ಲಿ (ಪುಟ. ೨. ವಚನ ೮) ತಮ್ಮ ವಂಶಾವಳಿಯನ್ನು ಕೊಟ್ಟಿರುತ್ತಾರೆ. ಇದೇ ವಂಶಾ ವಳಿಯನ್ನು ಶ್ರೀ ಮನ್ನಿರಂಜನ ವಂಶರತ್ನಾಕರ ಗ್ರಂಥವು ಸಮರ್ಥಿಸುತ್ತದೆ.

ವಂಶಾವಳಿಯ ವಿವರ (೧) ಅನಾದಿಗಣೇಶ, (೨) ಆದಿಗಣೇಶ, (೩) ನಿರ್ವಾಣಯ. (೪) ನಿರಂಜನ, (೫) ಜ್ಞಾನಾನಂದ, (೬) ಆತ್ಮಗಣೇಶ, (೭) ಆಧ್ಯಾತ್ಮಗಣೇಶ, (೮) ರುದ್ರಗಣೇಶ, (೯) ಬಸವಪ್ರಭು, (೧೦) ಆದಿಲಿಂಗೇಶ, (೧೧) ಚನ್ನವೀರೇಶ (೧೨) ಗೋಸಲದೇವ, (೧೩) ಶಂಕರದೇವ, (೧೪) ದಿವ್ಯಲಿಂಗೇಶ, (೧೫) ಚನ್ನಬಸವೇಶ, (೧೬) ಸಿದ್ಧಲಿಂಗ ತೋಂಟದಾರ್ಯ.

ಈ ಪ್ರಕಾರ ವಂಶಾವಳಿಯು ಇದ್ದು ಇದರಲ್ಲಿ ಎಲ್ಲಿಯೂ ಅಲ್ಲಮಪ್ರಭುವೆಂದು ಉಲ್ಲೇಖವಿಲ್ಲ; ಮತ್ತು ೯ ನೇ ಪೀಠಸ್ಥರು ಬಸವಪ್ರಭುವೆಂದು ಉಲ್ಲೇಖವದೆ. ಮೇಲೆ ಬರೆದಂತೆ ಶ್ರೀ ಮನ್ನಿರಂಜನ ವಂಶರತ್ನಾಕರವು ಈ ವಂಶಾವಳಿಯನ್ನು ಸಮರ್ಥಿಸುತ್ತದೆ. ಮೇಲೆ ಕೊಟ್ಟ ವಂಶಾವಳಿಯಲ್ಲಿ ಶ್ರೀ ಅಲ್ಲಮಪ್ರಭುವಿನ ಹೆಸರು ಉಲ್ಲೇಖವಿಲ್ಲದ ಮೂಲಕ ಎರಡು ವಿಚಾರಗಳಿಗೆ ಆಸ್ಪದವಾಗಬಹುದು. (೧) ಅಲ್ಲಮನಿಗೂ ಈ ವಂಶಾವಳಿಗೂ ಏನೂ ಸಂಬಂಧವಿರದೆ ಅವನು ಪ್ರತ್ಯೇಕವಾಗಿರಬೇಕೆಂಬದೊಂದು ವಿಚಾರ. ಅಥವಾ (೨) ಈ ವಂಶಾವಳಿಯಲ್ಲಿ ಅಲ್ಲಮಪ್ರಭುವಿದ್ದು ಅವನ ಪರ್ಯಾಯ ನಾಮವು ಸೇರಿಸಲ್ಪಟ್ಟಿರಬೇಕೆಂಬ ವಿಚಾರವು ಮತ್ತೊಂದು. ಈ ಎರಡು ವಿಚಾರಗಳಲ್ಲಿ ಮೊದಲನೇದ್ದು ತೀರ ಅಸಮಂಜಸವೂ, ಅಪಕ್ವವೂ ಮತ್ತು ತೀರ ಅಸಂಭವನೀಯವೂ ಆಗುವ ಕಾರಣ ಅದರ ಬಗ್ಗೆ ಇಲ್ಲಿ ವಿಸ್ತಾರವಾಗಿ ಚರ್ಚಿಸುವದು ಅನವಶ್ಯವು. ಆದ್ದರಿಂದ ಈ ವಂಶಾವಳಿಯಲ್ಲಿ ಅಲ್ಲಮಪ್ರಭುವಿನ ಪರ್ಯಾಯ ನಾಮವೇ ಅರ್ಥಾತ್ ಬಸವಪ್ರಭುವೆಂದು ಉಲ್ಲೇಖಿಸಲ್ಪಟ್ಟಿರಬೇಕೆಂದು ಅರ್ಥವಾಗುತ್ತದೆ. ಇನ್ನು ಅಲ್ಲಮಪ್ರಭುವೇ ೯ ನೆಯ ಪೀಠಸ್ಥನಾದ ಬಸವಪ್ರಭುವು ಆದದ್ದಾದರೆ ಅವನು ೧೫ ನೆಯ ಶತಮಾನದಲ್ಲಿರದೆ ೧೨ ನೆಯ ಶತಮಾನದಲ್ಲಿದ್ದನೆಂದು ಹೇಳಬಹುದು. ೧೬ ನೆಯ ಪೀಠಸ್ಥರಾದ ಸಿದ್ಧಲಿಂಗ ಯತಿಗಳು ೧೪೭೦ ರಲ್ಲಿ ಇದ್ದರೆಂದು ಕರ್ನಾಟಕ ಕವಿ ಚರಿತ್ರಕಾರರು ಕಂಡು ಹಿಡಿದಿದ್ದಾರೆ. ಮತ್ತು ಅವರ ಪರಮ ಗುರುವೂ ಮತ್ತು ೧೩ ನೆಯ ಪೀಠಸ್ಥನೂ ಆದ ಶಂಕರ ದೇವನು ೧೩೨೫ ರಲ್ಲಿ ಇದ್ದಿರಬೇಕೆಂದು ಶಿ. ಮೂ. ಬುದ್ಧಯ್ಯನವರು ತಮ್ಮ ೩ ನೆಯ ಪುಷ್ಪದ ಪ್ರಸ್ತಾವನೆಯಲ್ಲಿ ಹೇಳಿರುವರು. ಶ್ರೀ ಪ್ರಭುದೇವನು ೧೧೬೦ ರಲ್ಲಿ ಇದ್ದನೆಂದು ಕರ್ನಾಟಕ ಕವಿಚರಿತ್ರಕಾರರು ಹೇಳಿರುವರು. ಆದ್ದರಿಂದ ೯ ನೆಯ ಪೀಠಸ್ಥರಾದ ಬಸವಪ್ರಭುವು ಅಥವಾ ಅಲ್ಲಮಪ್ರಭುವು ೧೨ ನೆಯ ಶತಮಾನದಲ್ಲಿದ್ದಿರಬೇಕೆಂದು ತಿಳಿಯುತ್ತದೆ.

ಹಿಂದೆ ಹೇಳಿದಂತೆ ತ್ರಿಪುರಾಂತಕಲಿಂಗನು ಈ ಪುಸ್ತಕದ ೪೧ ನೆಯ ಪಾನಿನಲ್ಲಿರುವ ೩ ನೆಯ ಪದ್ಯದಲ್ಲಿ ಅಲ್ಲಮ ಪ್ರಭುವನ್ನು ಸ್ತುತಿಸಿದ್ದಾನೆ. ಈ ತ್ರಿಪುರಾಂತಕ ಲಿಂಗವು ಶರಣರ ಕಾಲದಲ್ಲಿ ಇದ್ದನೆಂದು ಕರ್ನಾಟಕ ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಶರಣರ ಕಾಲವೆಂದರೆ ಬಸವಾದಿ ಪ್ರಮಥರ ಕಾಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ, ಇದಲ್ಲದೆ ಅಲ್ಲಮನು ಬಸವಾದಿ ಪ್ರಮಥರಿಗೆ ಉಪದೇಶಮಾಡಿದ್ದು ಜಗತ್ಪ್ರಸಿದ್ಧವದೆ. ಇದೇ ಪುಸ್ತಕದ ೩೯ ನೆಯ ಪುಟದಲ್ಲಿರುವ ೭ ನೆಯ ಪದ್ಯದಲ್ಲಿ ಅಲ್ಲಮ ಪ್ರಭು ಬಸವಾದಿ ಪ್ರಮಥರ ಕಾಲದಲ್ಲಿ ಇದ್ದನೆಂಬ ಬಗ್ಗೆ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಈ ಯಾವತ್ತೂ ಕಾರಣಗಳ ಮೂಲಕ ಅವನು ೧೨ ನೆಯ ಶತಮಾನದಲ್ಲಿರಬೇಕೆಂದು ಅನುಮಾನವು ಬರುತ್ತದೆ. ಇನ್ನು ಅಲ್ಲಮನು ೧೨ ನೇ ಶತಮಾನದಲ್ಲಿದ್ದನೆಂದು ಗ್ರಹಿಸಿದರೆ ಮಗಿಯನರೇಂದ್ರನಿಗೆ ಅವನು ವೀರಶೈವ ದೀಕ್ಷೆಯನ್ನು ಮಾಡಿ ಲಿಂಗಧಾರಣವನ್ನು ಮಾಡಲಿಲ್ಲವೆಂದು ಪ್ರತ್ಯೇಕವಾಗಿ ಹೇಳಲಿಕ್ಕೆ ಬೇಡ. ಯಾಕಂದರೆ ಮಗಿಯನರೇಂದ್ರ, ಗುರುಬಸವ, ಚನ್ನಪ್ಪ ಈ ಮೂವರು ಕವಿಗಳು ಸಮಾನ ಕಾಲಿನವರು ಇದ್ದು ೧೫ ನೇ ಶತಮಾನದಲ್ಲಿದ್ದರೆಂದು ರಾವಸಾಹೇಬ ಹಳಕಟ್ಟಿಯವರು ಅಭಿಪ್ರಾಯಪಡುತ್ತಾರೆ. ಮತ್ತು ಅದು ನಿಜವಿದ್ದಂತೆ ಕಾಣಿಸುತ್ತದೆ. ಆದ್ದರಿಂದ ೧೨ ನೇ ಶತಮಾನದಲ್ಲಿದ್ದ ಅಲ್ಲಮನು ೧೫ ನೇ ಶತಮಾನದಲ್ಲಿದ್ದ ಮಗಿಯನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಿದನೆಂಬ ಮಾತು ತೀರ ಅಸಂಭವನೀಯವಾಗಿ ತೋರುತ್ತದೆ. ಇದಲ್ಲದೆ ಮಗಿಯನರೇಂದ್ರನ ಸಮಕಾಲೀನ ಕವಿಯಾದ ಚೆನ್ನಪ್ಪನು ಅದೇ ಪುಸ್ತಕದ ೨೪ ನೇ ಪುಟದಲ್ಲಿರುವ ೧ ನೇ ಪದ್ಯದಲ್ಲಿ "ವೀರಧೀರ ಕೃಷ್ಣೇಂದ್ರ ಸತಿಗೆ ವರಕೊಟ್ಟ ಪ್ರಭುವಿಗೆ" ಎಂದು ಸಂಬೋಧಿಸಿದ್ದರ ಮೇಲಿಂದ ಹನವಗಂಡಿಯ ದೇಸಾಯರ ಪೂರ್ವಜನಾದ ಕೃಷ್ಣೇಂದ್ರರಾಜನೆಂಬವನೊಬ್ಬನು ೧೨ ನೇ ಶತಮಾನದಲ್ಲಿದ್ದು ಅವನಿಗೆ ಅಲ್ಲಮನು ವೀರಶೈವದೀಕ್ಷೆಯನ್ನು ಮಾಡಿದನೆಂದು ಕೆಲವರ ಅಭಿಪ್ರಾಯವಿರುತ್ತದೆ.

ಇದಲ್ಲದೆ ಮಗಿಯನರೇಂದ್ರನು ತನ್ನ ಕಾಲದಲ್ಲಿ ತೇರದಾಳವು ಭೂಕೈಲಾಸವಾಗಿತ್ತೆಂದು ಅಂದಿದ್ದಾನೆ. ಅಲ್ಲಮನು ತೇರದಾಳದಲ್ಲಿ ನಿರ್ವಯಲವಾಗಿದ್ದು ಅವನ ತೋರಗದ್ದಿಗೆಯು ತೇರದಾಳದಲ್ಲಿರುತ್ತದೆ. ಇದರ ಮೇಲಿಂದಾದರೂ ಮಗಿಯನರೇಂದ್ರನ ಕಾಲಕ್ಕಿಂತ ಮೊದಲೇ ಅಲ್ಲಮನು

ನಿರ್ವಯಲವಾಗಿ ಅವನ ಪ್ರಭೆಯು ನಾಲ್ಕೂ ದಿಕ್ಕಿಗೂ ಪಸರಿಸಿ ತೇರದಾಳವು ೧೫ನೇ ಶತಮಾನದಲ್ಲಿ ಭೂಕೈಲಾಸವಾದರೂ ಆಗುವ ಸಂಭವವದೆ.

ಇದಲ್ಲದೆ ಮಗಿಯನರೇಂದ್ರ ಕವಿಯ ಹೆಸರು ಮಗಿಯಪ್ಪ ಎಂದು ಇದ್ದು ಈ ಹೆಸರು ಅಲ್ಲಮನ ಪರಿಯಾಯ ನಾಮವಾದ ಮಗಿಪ್ರಭು ಎಂಬ ಹೆಸರಿನ ಮೇಲಿಂದ ಬಂದಿತ್ತೆಂದು ಕೆಲವರ ಅಭಿಪ್ರಾಯವದೆ. ಮತ್ತು ಅಲ್ಲಮನಿಗೆ ಮಗಿಪ್ರಭು ಎಂಬ ಪರ್ಯಾಯ ನಾಮವು ತಾನು ತೇರದಾಳ ಗ್ರಾಮದಲ್ಲಿ ನಿರ್ವಯಲವಾಗುವ ಕಾಲಕ್ಕೆ ತನ್ನ ಕಮಂಡಲುವಾದ ಮಗಿಯನ್ನು ಕೆಳಗಿಟ್ಟನಂತರ ಬಂತೆಂದು ಕೆಲವರ ಅಭಿಪ್ರಾಯವದೆ. ಇದು ನಿಜವಿದ್ದಂತೆ ಕಾಣಿಸುತ್ತದೆ. ಆದ್ದರಿಂದ ಮಗಿಪ್ರಭು ನಿರ್ವಯಲವಾದನಂತರ ಮಗಿಯಪ್ಪನ ಜನನವಾಗಿರಬೇಕೆಂದು ಅನುಮಾನವಾಗುತ್ತದೆ. ಮೇಲೆ ಬರೆದ ಕಾರಣಗಳಿಂದ ಅಲ್ಲಮನು ಮಗಿಯನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲವೆಂದೂ ಮತ್ತು ಅವನು ೧೫ ನೇ ಶತಮಾನದಲ್ಲಿ ಇದ್ದಿಲ್ಲವೆಂದೂ ಗ್ರಹಿಸಿದರೆ ತಪ್ಪಾಗಲಿಕ್ಕಿಲ್ಲ. ಇನ್ನು ಬಾಗಲಕೋಟಿ ತಾಲೂಕಿನಲ್ಲಿರುವ ಹಿರೇಸೂರ ಕಿರೇಸೂರ ಗ್ರಾಮಗಳಿಗೆ ಅಲ್ಲಮನು ಹೋದದ್ದು ಸಂಭವನೀಯವಾಗಿ ಕಂಡುಬರುವದಿಲ್ಲ. ಯಾಕಂದರೆ ಅವನು ಕೆಳದೀ ದೇಶದಲ್ಲಿದ್ದು ಅಲ್ಲಿಂದ ಗದಗ ತಾಲೂಕಿನಲ್ಲಿರುವ ಮುಳಗುಂದ ಕುರ್ತಕೋಟಿ ಮತ್ತು ಕಣಿವಿ ಗ್ರಾಮಗಳಿಗೆ ಬಂದು ಅಲ್ಲಿಯ ಭಕ್ತರನ್ನು ಉದ್ಧರಿಸುತ್ತ ಹಾಗೇ ಹುಕ್ಕೇರಿ ಸೀಮೆಗೆ ಹೋಗಿ ಅಲ್ಲಿಂದ ಹನಗಂಡಿಯ ಗ್ರಾಮಕ್ಕೆ ಹೋಗಿ ಅಲ್ಲಿಂದ ತೇರದಾಳಕ್ಕೆ ಹೋಗಿ ಅಲ್ಲಿ ನಿರ್ವಯಲವಾದನೆಂಬ ಆಧಾರಗಳು ಸಿಗುತ್ತವೆ. ಹೀಗಿದ್ದು ಅವನು ದಾರಿಬಿಟ್ಟು ಬಾಗಲಕೋಟಿ ತಾಲೂಕಿನಲ್ಲಿರುವ ಹಿರೇಸೂರ ಕಿರೆಸೂರ ಗ್ರಾಮಗಳಿಗೆ ಹೋದಂತೆ ಉಲ್ಲೇಖವಿಲ್ಲ. ಆದ್ದರಿಂದ ಹುಕ್ಕೇರಿ ಸೀಮೆಗೂ ಮತ್ತು ಮುಳಗುಂದ ಕುರ್ತಕೋಟೆಗಳಿಗೂ ಮಧ್ಯದಲ್ಲಿರುವ ಹುಬ್ಬಳ್ಳಿ ತಾಲೂಕಿನಲ್ಲಿರುವ ಹಿರೇಸೂರ ಕಿರೇಸೂರ ಗ್ರಾಮಗಳ ಮೇಲೆ ಹಾಯ್ದು ಹೋಗಿರಬೇಕೆಂಬಂತೆ ಕಾಣಿಸುತ್ತದೆ. ಮತ್ತು ೫೯ ನೇ ಪದದಮೇಲಿಂದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಗೋಕಾವಿಯ ಹತ್ತರಿರುವ ಗೂಗಿಯಕೊಳ್ಳಕ್ಕೆ ಹೋಗಿರಬಹುದೆಂದು ರಾವಸಾಹೇಬ ಹಳಕಟ್ಟಿಯವರು ತರ್ಕಿಸುತ್ತಾರೆ. ಆದರೆ ಈ ಪದವು ಅಲ್ಲಮನ ಪರವಾಗಿರದೆ ೧೫ ನೇ ಶತಮಾನದಲ್ಲಿದ್ದ ದಿಗಂಬರೇಶನ ಪರವಾಗಿರುತ್ತದೆ. ಅವನು ಗೋಕಾವಿಯ ಹತ್ತರಿರುವ ಗೂಗಿಯಕೊಳ್ಳಕ್ಕೆ ಹೋಗಿರಬಹುದು.

ಇದಲ್ಲದೆ ಅದೇ ಪುಸ್ತಕದ ೩೭ ನೇ ಪುಟದಲ್ಲಿರುವ ೩ ನೆಯ ಪದ್ಯದಲ್ಲಿ ಉಲ್ಲೇಖಿಸಿದ “ಪ್ರಜ್ವಲಿಸಿತು ಪ್ರಭೆಪುಣ್ಯದ ಮಲ್ನಾಡ” ಎಂಬದರ ಅರ್ಥವನ್ನು ರಾವಸಾಹೇಬರು ಇದು ಬಸವಪ್ರಭುವು ಕೆಳದೀ ನಾಡಿನಲ್ಲಿದ್ದದ್ದರ ಉಲ್ಲೇಖವಾಗಿರಬೇಕೆಂದು ಊಹಿಸಿರುತ್ತಾರೆ. ಬರೇ ಅರ್ಧಚರಣದಿಂದಲೇ ಹೀಗೆ ಅರ್ಥಮಾಡಿದಂತೆ ಕಾಣಿಸುತ್ತದೆ. ಅದೇ ನುಡಿಯಲ್ಲಿ ಮುಂದೆ “ನಿಜ ಭಾಪುರಿ ಮೊಗ್ಗ” ಎಂದು ಉಲ್ಲೇಖವಿರುವದರಿಂದ ಅವರು ಬರೇ ಕೆಳದೀ ನಾಡಿನಲ್ಲಿದ್ದದ್ದರ ಉಲ್ಲೇಖವಾಗಿರದೆ ಶಿಕಾರಪುರದ ತಾಲೂಕಿನಲ್ಲಿದ್ದ ಬಳ್ಳೀಗಾವಿ ಗ್ರಾಮದಲ್ಲಿ ಅವತರಿಸಿದ ಬಗ್ಗೆ ಉಲ್ಲೇಖವಾಗಿರಬೇಕು. ಪ್ರಸಿದ್ಧ ಮಾಡಿದ ಪುಸ್ತಕದಲ್ಲಿ ಅಲ್ಲಮಪ್ರಭುವಿನ ಬಗ್ಗೆ ಒಟ್ಟು ೧೨೭ ಪದಗಳಿದ್ದು ಅವುಗಳಲ್ಲಿ ೨೮ ಪದಗಳಲ್ಲಿ ಅಲ್ಲಮನು ತೇರದಾಳದಲ್ಲಿ ಬಂದು ನಿಂತು ಅಲ್ಲಿ ನಿರ್ವಯಲವಾದ ಬಗ್ಗೆ ಸ್ಪಷ್ಟ ಉಲ್ಲೇಖವದೆ.

ಮೇಲಿನ ಎಲ್ಲ ಕಾರಣಗಳ ಮೂಲಕ ಅಲ್ಲಮನಿಗೆ ಅನೇಕ ಪರ್ಯಾಯ ನಾಮಗಳಿದ್ದು, ಅವುಗಳಲ್ಲಿ ಬಸವಪ್ರಭು ಎಂಬುದು ಕೂಡ ಒಂದು ಪರ್ಯಾಯ ನಾಮವಾಗಿ ಅಲ್ಲಮನೇ ಬಸವಪ್ರಭು ಎಂಬ ಪರ್ಯಾಯ ನಾಮ ಧರಿಸಿ ಸಂಚರಿಸಿದನು. ಅವನು ೧೫ ನೇ ಶತಮಾನದಲ್ಲಿರದೆ ೧೨ ನೇ ಶತಮಾನದಲ್ಲಿದ್ದನು. ಅವನು ಮಗಿಯ ನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲ. ಅವನು ಬಾಗಲಕೋಟಿ ತಾಲೂಕಿನಲ್ಲಿದ್ದ ಹಿರೇಸೂರ ಕಿರೇಸೂರ ಗ್ರಾಮಗಳಿಗೆ ಹೋಗದೆ ಹುಬ್ಬಳ್ಳಿ ತಾಲೂಕಿನಲ್ಲಿದ್ದ ಹಿರೇಸೂರ ಕಿರೇಸೂರ ಗ್ರಾಮಗಳ ಮೇಲೆ ಹಾಯ್ದು ಹುಕ್ಕೇರಿ ಸೀಮೆಗೆ ಹೋದನು. ಗೋಕಾವಿಯ ಹತ್ತರಿರುವ ಗೂಗಿಯ ಕೊಳ್ಳಕ್ಕೆ ಹೋಗಲಿಲ್ಲ. ಮತ್ತು ೩೭ ನೇ ಪುಟದಲ್ಲಿರುವ ೩ ನೇ ಪದದ ಆಧಾರದಿಂದ ಅಲ್ಲಮನು ಶಿಕಾರಪೂರ ತಾಲೂಕಿನಲ್ಲಿರುವ ಬಳ್ಳೀಗಾವಿಯಲ್ಲಿ ಅವತರಿಸಿದನೆಂದು ಅನುಮಾನ ಮಾಡಿದರೆ ತಪ್ಪಾಗಲಿಕ್ಕಿಲ್ಲವೆಂದು ಅನಿಸುತ್ತದೆ. ಇದಲ್ಲದೆ ಈ ಮೂವರು ಕವಿಗಳ ಒಟ್ಟು ೩೩೦೦ ಪದಗಳಿದ್ದು ಅವುಗಳಲ್ಲಿ ಈಗ ಉಪಲಬ್ಧವಿರುವ ೧೨೭ ಪದಗಳಲ್ಲಿಯೇ ಇಷ್ಟು ಅನುಮಾನ ಮಾಡಲಿಕ್ಕೆ ಅವಕಾಶವಿದ್ದಲ್ಲಿ ಕಣ್ಮರೆಯಾದ ಉಳಿದ ಪದಗಳಲ್ಲಿ ಏನು ಹೊರಡುತ್ತವೆಂಬುವದನ್ನು ಶ್ರೀಅಲ್ಲಮನೇ ಬಲ್ಲನು.

ಶ್ರೀ. ಹುಂಡೇಕಾರರ ಈ ಅಭಿಪ್ರಾಯಕ್ಕೆ ರಾವಸಾಹೇಬ ಹಳಕಟ್ಟಿಯವರು ಅದೇ ಸಂಚಿಕೆಯ ೨೫೫ ನೇ ಪುಟದಲ್ಲಿ “ಆಕ್ಷೇಪ ನಿರಸನ”

ಎಂಬ ಶಿರೋಲೇಖದ ಕೆಳಗೆ ತಮ್ಮ ಉತ್ತರವನ್ನು ಪ್ರಕಟಿಸಿರುವರು. ಅದರ ಸಾರಾಂಶವು:— “ತೇರದಾಳದಲ್ಲಿ ಸಮಾಧಿಸ್ಥರಾದ ಶ್ರೀಬಸವ ಪ್ರಭು ಸ್ವಾಮಿಗಳವರ ಬಗ್ಗೆ ನಾವು ಶಿವಾನುಭವದ ೪ ನೇ ಸಂಚಿಕೆ ಯಲ್ಲಿ ವಿವರಿಸಿದ್ದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಅವರು ಮೂಲ ಅಲ್ಲಮಪ್ರಭುವಿನ ತರುವಾಯ ೧೨ ನೇ ಪಟ್ಟದವರಿದ್ದು ಅವರು ಮಾಡಿದ ಮಹತ್ಕೃತ್ಯಗಳನ್ನು ನಾವು ಅದರಲ್ಲಿ ವಿವರಿಸಿದ್ದೇವೆ. ಆದರೆ ಶ್ರೀಯುತ ಚನ್ನಪ್ಪಾ ಹುಂಡೇಕಾರ ಬಿ. ಎ., ಎಲ್. ಎಲ್. ಬಿ., ಇವರು ಶ್ರೀಬಸವಪ್ರಭು ಸ್ವಾಮಿಗಳವರು ಮೂಲ ಅಲ್ಲಮಪ್ರಭು ಸ್ವಾಮಿಗಳೆಂ ತಲೇ ತಿಳಿದು ಇದನ್ನು ಸಮರ್ಥಿಸಲಿಕ್ಕೆ ಅವರು ಹಿಂದಿನ ಲೇಖವನ್ನು ಬರೆದಿದ್ದಾರೆ.

(೧) ಅವರು ತಮ್ಮ ಲೇಖದಲ್ಲಿ ಮೂಲ ಅಲ್ಲಮಪ್ರಭುದೇವರಿಗೆ ೧೫ ಪರ್ಯಾಯ ನಾಮಗಳಿರಬಹುದೆಂದು ತಿಳಿದು ಅವುಗಳನ್ನು ತಮ್ಮ ಲೇಖದಲ್ಲಿ ವಿವರಿಸಿದ್ದಾರೆ. ಆದರೆ ಅವುಗಳಲ್ಲಿರುವ ಮಗಿಪ್ರಭು ಮತ್ತು ಬಸವಪ್ರಭು ಈ ಹೆಸರುಗಳು ಮಾತ್ರ ಅಲ್ಲಮಪ್ರಭುವಿಗೆ ಇದ್ದ ಹಾಗೆ ಯಾವ ಗ್ರಂಥಗಳಲ್ಲಿಯೂ ತೋರಿ ಬರುವದಿಲ್ಲ. ಆದ್ದರಿಂದ ಈ ೧೫ ಹೆಸರುಗಳು ಅಲ್ಲಮಪ್ರಭುವಿನ ಪರ್ಯಾಯ ನಾಮಗಳಾಗಿರದೆ ಅವು ಮಗಿಪ್ರಭು ಅಥವಾ ಬಸವಪ್ರಭುವಿನ ಪರ್ಯಾಯ ನಾಮಗಳಾಗಿ ಏಕೆ ಇರಬಾರದು? ಇದಾದರೂ ಅಷ್ಟೇ ಸಂಭವನೀಯವಾಗಿದೆ. ತೇರದಾಳದಲ್ಲಿ ಸಮಾಧಿಸ್ಥರಾದ ಸ್ವಾಮಿಗಳಿಗೆ ಮಗಿಪ್ರಭು ಎಂಬ ಹೆಸರು ವಾಡಿಕೆಯ ಲ್ಲಿದೆ. ಈ ಹೆಸರೇ ಅಚ್ಚುಹಾಕಿದ ಪದ್ಯಗಳಲ್ಲಿ ಉಪಯೋಗವಾದದ್ದು ತೋರಿಬರುತ್ತದೆ. ಈ ಮಗಿಪ್ರಭುವು ಪೂರ್ವದ ಅಲ್ಲಮಪ್ರಭುವಿನ ಸೂತ್ರ ದವನಾದ್ದರಿಂದ, ಮೂಲ ಪೀಠಾಧಿಪತಿಗಳ ನಾಮನಿರ್ದೇಶದಿಂದ ಅವ ರನ್ನು ಪೂಜ್ಯಭಾವದಿಂದ ಸಂಬೋಧಿಸುವ ರೂಢಿಯನ್ನು ಈ ಪದ್ಯಗಳನ್ನು ರಚಿಸಿದ ಮಗಿಯ ನರೇಂದ್ರ, ಚನ್ನಪ್ರಭು ಇವರು ಅನುಸರಿಸಿರಬಹುದು. ಆದ್ದರಿಂದ ಶ್ರೀ. ಹುಂಡೇಕಾರ ಇವರು ಉಲ್ಲೇಖಿಸಿದ ಪರ್ಯಾಯ ನಾಮಗಳು ಅಲ್ಲಮಪ್ರಭುವಿನವಿರದೆ ಅವರ ತರುವಾಯ ಪಟ್ಟಕ್ಕೆ ಬಂದ ಬಸವಪ್ರಭು ಅಥವಾ ಮಗಿಪ್ರಭು ಇವರವು ಇರಬಹುದು.

(೨) ಮೂಲ ಅಲ್ಲಮಪ್ರಭುವಿಗೆ ಬಸವಪ್ರಭು ಎಂಬ ಹೆಸರು ಉಪಯೋಗವಾದದ್ದು ಎಲ್ಲಿಯೂ ತೋರಿಬರುವದಿಲ್ಲ. ಈ ಬಸವಪ್ರಭು

ಶಬ್ದವು ಬಸವೇಶ್ವರನ ಹೆಸರಿರುತ್ತದೆ. ಬಸವೇಶ್ವರನಿಗೆ ಬಸವರಾಜ, ಬಸವಪ್ರಭು, ಬಸವದಂಡೇಶ ಎಂಬ ನಾಮುಗಳಿವೆ. ಆದರೆ ಈಗಿನ ಪದ್ಯಗಳಲ್ಲಿ ಬಸವಪ್ರಭು ಸ್ವಾಮಿಗಳಿಗೆ ಅಲ್ಲಮನೆಂತಲೂ ಅಲ್ಲಲ್ಲಿ ನಾಮ ನಿರ್ದೇಶವಿರುತ್ತದೆ. ಆದ್ದರಿಂದ ಹೀಗೆ ಬಸವಪ್ರಭು ಎಂಬ ಅಂಕಿತದಿಂದ ಕರೆಯಲ್ಪಟ್ಟ ಅಲ್ಲಮನು ಮೂಲ ಅಲ್ಲಮನಿರಲಿಕ್ಕಿಲ್ಲ.

(೩) ಮೂಲ ಅಲ್ಲಮನು ಐಕ್ಯವಾದ ಸ್ಥಳವು ಶ್ರೀಶೈಲವಿರುತ್ತದೆ. ಕಲ್ಯಾಣದಲ್ಲಿ ವಿರೋಧಿಗಳು ಉತ್ಪನ್ನವಾದ ಬಳಿಕ ಅವನೂ ಮಹಾದೇವಿ ಅಕ್ಕ ಮೊದಲಾದ ಶಿವಶರಣರೂ ಶ್ರೀಶೈಲಕ್ಕೆ ಹೋಗಿ ಕದಳಿಯ ಬನದಲ್ಲಿ ಐಕ್ಯಹೊಂದಿದರು. ಈ ಪ್ರಕಾರ ಎಲ್ಲ ವೀರಶೈವ ಗ್ರಂಥಗಳಲ್ಲಿ ಹೇಳಿರುತ್ತದೆ. ಆದರೆ ಅಲ್ಲಮಪ್ರಭುವು ತೇರದಾಳದಲ್ಲಿ ಐಕ್ಯಹೊಂದಿದ್ದು ಎಲ್ಲಿಯೂ ಉಲ್ಲೇಖವಿರುವದಿಲ್ಲ. ಆದ್ದರಿಂದ ತೇರದಾಳದಲ್ಲಿ ಸಮಾಧಿಸ್ಥರಾದ ಬಸವ ಪ್ರಭುವು ಅಲ್ಲಮಪ್ರಭುವಿನಿಂದ ಬೇರೆಯಾಗಿರಬೇಕು.

(೪) ತೋಂಟದಾರ್ಯರು ತಮ್ಮ ವಚನ ಗ್ರಂಥದಲ್ಲಿ ತಮ್ಮ ಪೂರ್ವ ಪೀಠಾಧಿಪತಿಗಳ ಹೆಸರನ್ನು ಹೇಳುವಾಗ ಬಸವಪ್ರಭು ಸ್ವಾಮಿಗಳು ೯ನೆ ಯವರಾಗಿ ಉಲ್ಲೇಖಿಸಿದ್ದಾರೆ. ಆದರೆ ಶೂನ್ಯಸಿಂಹಾಸನಕ್ಕೆ ಅಲ್ಲಮ ಪ್ರಭುವೇ ಮೂಲಿಗರಾಗಿದ್ದರಿಂದ ಬಸವಪ್ರಭು ಎಂದು ಅವರು ಇಲ್ಲಿ ೯ನೆಯವರಾಗಿದ್ದು ಹೇಳಲಿಕ್ಕೆ ಕಾರಣವೇನು? ಆದ್ದರಿಂದ ಇವನು ಮೂಲ ಅಲ್ಲಮನಾಗಿರದೆ ಅವರ ತರುವಾಯದವರೆಂದು ಸ್ಪಷ್ಟವಾಗುತ್ತದೆ.

(೫) ಮೂಲ ಅಲ್ಲಮ ಪ್ರಭುವಿನ ಗುರುಗಳ ಹೆಸರು ಅನುಮಿಷ ನೆಂದು ಪ್ರಸಿದ್ಧವದೆ. ಆದರೆ ತೋಂಟದಾರ್ಯರು ಕೊಟ್ಟ ವಂಶಾ ವಳಿಯಲ್ಲಿ ಬಸವಪ್ರಭುವಿನ ಗುರುಗಳ ಹೆಸರು ರುದ್ರಗಣೇಶನೆಂದು ಹೇಳ ಲ್ಪಟ್ಟಿದೆ. ಆದ್ದರಿಂದ ಈ ಬಸವಪ್ರಭುವೂ ಮೂಲ ಅಲ್ಲಮನೂ ಒಂದೇ ಯಾಗಿರಲಾರರು.

(೬) 'ಪ್ರಭುದೇವರ ಸ್ತೋತ್ರಸಂಗ್ರಹ' ಎಂಬ ಪುಸ್ತಕದಲ್ಲಿ ಬಸವ ಪ್ರಭುಗಳ ಚರಿತ್ರೆಯು ಕೊಡಲ್ಪಟ್ಟಿದೆ. ಈ ಚರಿತ್ರೆಯು ನನ್ನ ಹತ್ತರಿ ರುವ ನಿರಂಜನವಂಶರತ್ನಾಕರವೆಂಬ ಗ್ರಂಥದಿಂದ ಎತ್ತಿ ಬರೆದದ್ದೆಂದು ಆ ಪುಸ್ತಕದ ಅವತರಣಿಕೆಯಲ್ಲಿ ಬರೆದಿದ್ದಾರೆ. ಆದರೆ ಈ ಚರಿತ್ರೆಯನ್ನು ಮೂಲ ಅಲ್ಲಮನ ಚರಿತ್ರೆಗೆ ಹೋಲಿಸಿದರೆ ಅವು ಎಷ್ಟು ಪರಸ್ಪರ ಭಿನ್ನ ವಾಗಿರುತ್ತವೆಂಬುದು ಯಾರಿಗಾದರೂ ತಿಳಿದು ಬರುವಂತಿದೆ.

ಈ ಚರಿತ್ರೆಗೂ ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಲ್ಲಿ ಕಂಡು ಬರುವ ಮೂಲ ಅಲ್ಲಮಪ್ರಭುವಿನ ಚರಿತ್ರೆಗೂ ಎಷ್ಟು ಅಂತರವಿದೆಂಬುದು ಯಾರಿಗಾದರೂ ಸ್ಪಷ್ಟವಾಗದೆ ಇರಲಾರದು. ಆದ್ದರಿಂದ ಈ ಬಸವಪ್ರಭುವು ಮೂಲ ಅಲ್ಲಮನೆಂದು ತಿಳಿಯಲಿಕ್ಕೆ ಬರಲಾರದು. ಮೇಲ್ಕಂಡ ಸಂಗತಿಗಳ ಮೂಲಕ ತೇರದಾಳದಲ್ಲಿ ಐಕ್ಯಹೊಂದಿದ ಬಸವಪ್ರಭುಗಳು ಮೂಲ ಅಲ್ಲಮಪ್ರಭುವಾಗಿರಲಿಕ್ಕಿವೆಂದು ನಮಗೆ ತೋರುತ್ತದೆ. ಆದರೆ ಶಿವಮೂರ್ತಿ ಬುದ್ಧಯ್ಯನವರು ಹನಗಂಡಿ ದೇಸಾಯರಾದ ಮಗೆಪ್ಪ ದೇಸಾಯಿ, ಚನ್ನಪ್ಪ ಮತ್ತು ಗುರುಬಸವ ಇವರಿಂದ ರಚಿತವಾದ ೩೩೦೦ ಪದ್ಯಗಳಲ್ಲಿ ಈಗ ಉಪಲಬ್ಧವಾಗಿರುವ ೧೨೭೭ ಪದ್ಯಗಳನ್ನು ಮಾತ್ರ ಪ್ರಸಿದ್ಧಿಸಿದ್ದಾರೆ. ಆದರೆ ಈ ಎಲ್ಲ ಪದ್ಯಗಳು ಪ್ರಸಿದ್ಧವಾದ ಬಳಿಕ ಬಸವಪ್ರಭುಗಳ ವಿಷಯವಾಗಿ ಹೆಚ್ಚಿಗೆ ಸಂಗತಿಗಳು ಹೊರಬೀಳುವ ಸಂಭವವದೆ.

ಶ್ರೀ. ಎಮ್. ಆರ್. ಶ್ರೀನಿವಾಸಮೂರ್ತಿಯವರು ಶ್ರೀಮನ್ನಿರಂ 'ಜನ ಜಗದ್ಗುರು ಗ್ರಂಥ ಮಾಲೆಯ ೧-೬ ವರೆಗಿನ ಪುಷ್ಪಗಳ ಬಗ್ಗೆ ಬೆಂಗಳೂರ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಿಂದ ಪ್ರಕಟಿಸಲ್ಪಡುವ "ಪ್ರಬುದ್ಧ ಕರ್ನಾಟಕ"ದ ಕ್ರಿಸ್ತಿ ಶಕ ೧೯೩೧ ನೆಯ ಸಾಲಿನ ಪ್ರಮೋದೂತ ಸಂವತ್ಸರದ ೧೨ ನೇ ಸಂಪುಟದ ೪ ನೆಯ ಕಾಮನ ಸಂಚಿಕೆಯಲ್ಲಿ 'ಕಾವ್ಯಾವಲೋಕನ' ಎಂಬ ಶಿರೋಲೇಖದ ಕೆಳಗೆ ವಿಮರ್ಶೆಯನ್ನು ಮಾಡಿರುವರು. ಅದರಲ್ಲಿ ಅವರು "ಈ ಗ್ರಂಥಗಳಿಂದಲೂ ಅವುಗಳಲ್ಲಿರುವ ಮುನ್ನುಡಿಗಳಿಂದಲೂ ಕೆಲವು ಚರ್ಚಾಸ್ಪದವಾದ ವಿಷಯಗಳು ಹೊರಬಿದ್ದಿವೆ. ಅವುಗಳಲ್ಲಿ ಮುಖ್ಯವಾದೆರಡನ್ನು ಇಲ್ಲಿ ಕಾಣಿಸಿದೆ. (೧) ಬಸವಪ್ರಭು, ಚನ್ನಪ್ರಭು ಮತ್ತು ನುಗಿಪ್ರಭು ಎಂಬ ಉಪನಾಮಗಳು ಪ್ರಭುದೇವನಿಗುಂಟು. (೨) ಅಲ್ಲಮಪ್ರಭುವು ಐಕ್ಯವಾದ ಸ್ಥಳವು ಶ್ರೀಶೈಲವಿರದೆ ತೇರದಾಳವೆಂಬ ಗ್ರಾಮವಾಗಿರುತ್ತದೆ" ಎಂದು ಹೇಳಿ "ಈ ಚರ್ಚೆಯಲ್ಲಿ ನಾವು ಈಗ ಕೈಹಾಕಲು ಇಚ್ಛೆಪಡುವದಿಲ್ಲ.

ಆದರೆ ಈ ವಾದದ ರೀತಿಯು ಹೇಗಿರುವದೆಂಬದನ್ನು ಮಾತ್ರ ಒಂದೆರಡು ವಾಕ್ಯಗಳಲ್ಲಿ ವಾಚಕರ ಸೌಕರ್ಯಕ್ಕಾಗಿ ತಿಳಿಸುತ್ತೇವೆ. ತೇರದಾಳದಲ್ಲಿ ಬಸವಪ್ರಭು ಸ್ವಾಮಿಗಳ ಮಠವಿರುತ್ತದೆ. ಅದು ಶೂನ್ಯ ಸಿಂಹಾಸನ ಪರಂಪರೆಯಿಂದ ನಡೆದುಬಂದಿರುವದಾಗಿ ಹೇಳುತ್ತಾರೆ. ಆದಿ

ಅಲ್ಲಮನ ಚರಿತ್ರೆಯು ಶ್ರೀ ಮನ್ನಿರಂಜನ ವಂಶ ರತ್ನಾಕರದಲ್ಲಿ ವರ್ಣಿತ ವಾಗಿರುವದೆಂದು ಶ್ರೀಯುತ ಪುರಾಣಿಕರು ಪ್ರಭುದೇವರ ಸ್ತೋತ್ರಸಂಗ್ರಹದ ಅವತರಣಿಕೆಯಲ್ಲಿ ಹೇಳಿ ಆ ಭಾಗವನ್ನು ಉದ್ಧರಿಸಿದ್ದಾರೆ. ಆ ಚರಿತ್ರೆಯು ತೇರದಾಳದ ಮಠಾಧಿಪತಿಗಳಾಗಿದ್ದ ಬಸವಪ್ರಭು ಸ್ವಾಮಿಗಳದೆಂದೂ ಈ ಬಸವಪ್ರಭು ಸ್ವಾಮಿಗಳು ಮೂಲ ಅಲ್ಲಮನಲ್ಲವೆಂದೂ ಶ್ರೀಯುತ ಹಳಕಟ್ಟಿಯವರು ಅಭಿಪ್ರಾಯಪಡುತ್ತಾರೆ. ವಂಶರತ್ನಾಕರದಲ್ಲಿರುವ ಬಸವಪ್ರಭು ಚರಿತ್ರೆಗೂ ಪ್ರಭುಲಿಂಗಲೀಲಾದಿ ಗ್ರಂಥಗಳಲ್ಲಿ ದೊರೆಯುವ ಅಲ್ಲಮನ ಚರಿತ್ರೆಗೂ ಏನೇನೂ ಸಂಬಂಧವಿಲ್ಲವೆಂಬುದನ್ನು ಪರಸ್ಪರ ಹೋಲಿಕೆಗಳಿಂದ ಹೇಳಬಹುದಾಗಿದೆ. ಎದುರು ಪಕ್ಷದವರು ಶ್ರೀಯುತ ಹಳಕಟ್ಟಿಯವರ ಅಭಿಪ್ರಾಯಗಳನ್ನು ಒಪ್ಪಿರುವಂತೆ ತೋರುವದಿಲ್ಲ. ಬಸವಪ್ರಭು ಇತ್ಯಾದಿ ನಾಮಗಳು ಯಾವ ಕಾಲದಲ್ಲಿ ಯಾವ ಕಾರಣಗಳಿಂದ ಬಂದಿರಬಹುದು? ಅವು ಕೀರ್ತನಕಾರರ ಅಂಕಿತಗಳಾಗಿರಬಹುದೇ? ತ್ರಿಪುರಾಂತಕ ಲಿಂಗನ ಕಾಲವು ಯಾವದು? ಅವನ ವಚನದಲ್ಲಿ ಬರುವ ಬಸವಪ್ರಭು ಯಾರು? ಅಲ್ಲಮಪ್ರಭುವಿನ ಸಾಂಪ್ರದಾಯದವರಾಗಿ ಅಲ್ಲಮಪ್ರಭುವಿನ ಮಹತ್ವವನ್ನು ತೇರದಾಳದ ಮಠಾಧಿಪತಿಗಳಲ್ಲಿಯೂ ಆರೋಪಿಸಿ ಕೀರ್ತನಕಾರರು ಕೆಲವು ಕೀರ್ತನೆಗಳನ್ನು ರಚಿಸಿರಬಹುದೇ? ಎಂಬಿವೇ ಮೊದಲಾದ ಪ್ರಶ್ನಗಳು ಸಹಜವಾಗಿ ತಲೆದೋರುತ್ತವೆ. ಈ ವಿಷಯಗಳನ್ನು ಸಾಹಿತ್ಯಾಭಿಮಾನಿಗಳು ಚರ್ಚಿಸುವದು ಅವಶ್ಯಕ ಎಂದು ಅಂದಿರುವರು. ಇದರ ಮೇಲಿಂದ ನೋಡಲಾಗಿ ಈ ವಾದದ ರೀತಿಯು ಹೇಗಿರುವದೆಂಬದನ್ನು ಸಹಜವಾಗಿ ಮನಗಾಣಬಹುದು.

ಸದ್ಯಕ್ಕೆ ಈ ವಾದದಲ್ಲಿ ತಾವು ಬೀಳುವದಿಲ್ಲೆಂದು ಹೇಳಿ, ನಾವು ಪದ್ಧತಿಯಂತೆ ಅವರಿಗೆ ಕಳುಹಿಸಿದ ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೮, ೯, ೧೦, ೧೧, ೧೨ ನೆಯ ಪುಷ್ಪಗಳನ್ನು ವಿಮರ್ಶಿಸದೆ ಪುನಃ ಕ್ರಿ. ಶ. ೧೯೩೪ ನೆಯ ಇಸವಿಯಲ್ಲಿ ಮೈಸೂರ ವಿಶ್ವವಿದ್ಯಾಲಯದಿಂದ ಪ್ರಕಟಿಸಲ್ಪಟ್ಟ "ಪ್ರಭುಲಿಂಗ ಲೀಲೆಯ ಸಂಗ್ರಹ" ದ ಪೀಠಿಕೆಯ ೭೫ ನೆಯ ಪುಟ ಪರಿಶಿಷ್ಟ I ಭಾಗ VI ಪ್ಯಾರಾ ೪ ರಲ್ಲಿ "ಸಾಂಗಲಿ ಸಂಸ್ಥಾನದ ತೇರದಾಳದಲ್ಲಿ ಪ್ರಭುದೇವರ ಗದ್ದುಗೆ ಇರುವದಾಗಿಯೂ ಅದೇ ಆತನ ಐಕ್ಯದ ಸ್ಥಲವಾಗಿರಬೇಕೆಂದೂ, ಶ್ರೀಯುತ ಧಾರವಾಡದ

ಬಿ. ಎಸ್. ಪುರಾಣಿಕರು ಶ್ರೀ ಪ್ರಭುದೇವರ ಸ್ತೋತ್ರಸಂಗ್ರಹದ ಅವತರಣಿಕೆಯಲ್ಲಿ ಹೇಳಿ ನಿರಂಜನವಂಶರತ್ನಾಕರದ ಆಧಾರವನ್ನು ತೋರಿಸಿದ್ದಾರೆ. ಆದರೆ ಇವರು ನಿರಂಜನವಂಶರತ್ನಾಕರದಿಂದ ಆಧಾರನಾಗಿ ಉದ್ಧರಿಸುವ ಭಾಗವು ಅಲ್ಲಮಪ್ರಭುವಿಗೆ ಸಂಬಂಧ ಪಟ್ಟದ್ದಲ್ಲ. ಅದು ಬಸವಪ್ರಭು ಸ್ವಾಮಿಗಳಿಗೆ ಸಂಬಂಧಪಟ್ಟದ್ದು. ಈ ಬಸವಪ್ರಭು ಸ್ವಾಮಿಗಳು ಮೂಲ ಅಲ್ಲಮಪ್ರಭುವಿನಿಂದ ೧೨ನೆಯ ಪಟ್ಟದವರೆಂದು ನಿ. ವ. ರ. ಪುಟ ೨೧ ರಲ್ಲಿ ಹೇಳಿದೆ. ಇಲ್ಲಿ ಬರುವ ಬಸವಪ್ರಭು ಚರಿತ್ರೆಗೂ ಚಾಮರಸಾದಿಗಳು ಹೇಳಿರುವ ಅಲ್ಲಮ ಪ್ರಭು ಚರಿತ್ರೆಗೂ ಯಾವ ಸಂಬಂಧವೂ ಇಲ್ಲವೆಂಬುದು ಗ್ರಂಥ ಪರಿಶೀಲನದಿಂದ ತಿಳಿದು ಬರುತ್ತದೆ.

"ಎರಡನೆಯದಾಗಿ ಅದೇ ನಿ. ವ. ರ. ದಲ್ಲಿ ಅಲ್ಲಿಯ ಪ್ರಭುವಿಚಾರವಾಗಿ (ಪುಟಗಳು 4-5) ಹೀಗೆ ಹೇಳಿದೆ. "ಆ ಮೇಲೆ ಕಲ್ಯಾಣದಿಂದ ಪ್ರಭುಸ್ವಾಮಿಗಳು ಶ್ರೀಶೈಲಕ್ಕೆ ದಯಮಾಡಿಸಿ ಕದಳಿಯ ಬನದೊಳಗಿರುವ ಮಠದಲ್ಲಿ ರಕ್ತಾಕ್ಷಿನಾಮಸಂವತ್ಸರದ ಪುಷ್ಯ ಶುದ್ಧ ಪಾಡ್ಯಮಿ ಸೋಮವಾರ ಉದಯ ೨೫ ಗಳಿಗೆಗೆ ತಮ್ಮ ಗುಹೇಶ್ವರ ಲಿಂಗದಲ್ಲಿ ನಿರ್ವಯಲಾದರು. ಇವರ ಬಯಲಾದ ಮಠವು ಶ್ರೀಶೈಲ ಕದಳೀ ಬನದಲ್ಲಿ ಇರುವದು. ಪಾತಾಳಗಂಗೆಯ ತಟಿಯಲ್ಲಿ ಇರುವ ಗುಡ್ಡದ ಮೇಲೆ ನಿಂತು ನೋಡಿದರೆ ಈಗ ಕಾಣುತ್ತದೆ. ಅಲ್ಲಿ ಹೋಗುವೆವೆಂದು ಹೋದರೆ ದಾರಿ ಸಿಗುವದಿಲ್ಲ."

"ಮೂರನೆಯದಾಗಿ ಎಂಟನೆಯ ಪದ್ಯದ ಜ್ಞಾನಾನಂದ ಸ್ವಾಮಿಗಳು ಕಲ್ಯಾಣದಲ್ಲಿ ಹಿಂದೆ ಅಲ್ಲಮಪ್ರಭು ಶೂನ್ಯಸಿಂಹಾಸನವೇರಿದ ಸ್ಥಳದಲ್ಲಿ ಶೂನ್ಯಸಿಂಹಾಸನವನ್ನು ರಚಿಸಿ ಒಂದು ಮಠವನ್ನು ಕಟ್ಟಿಸಿದಂತೆ ನಿ. ವ. ರ. ಪುಟ ೧೯ ರಲ್ಲಿ ಹೇಳಿದೆ. ಆದುದರಿಂದ ೧೨ನೆಯ ಪಟ್ಟಕ್ಕೆ ಬಂದ ತೇರದಾಳದಲ್ಲಿ ಬಯಲಾದ ಬಸವಪ್ರಭು ಸ್ವಾಮಿಗಳು ಮೂಲ ಅಲ್ಲಮಪ್ರಭು ಆಗುವ ಸಂಭವವಿಲ್ಲವೆಂದು ಹೇಳಬೇಕಾಗುತ್ತದೆ." ಎಂದು ಹೇಳಿ ಚರ್ವಿತ ಚರ್ವಣ ಮಾಡಿರುವರು.

ಇನ್ನು ನಮ್ಮ ಅಭಿಪ್ರಾಯವಾದರೂ ಶ್ರೀಮದನಾದಿ ಅಲ್ಲಮಪ್ರಭುದೇವನು ತೇರದಾಳದಲ್ಲಿಯೇ ಐಕ್ಯವಾದದ್ದು ನಿಜವೆಂದು ತೋರುತ್ತದೆ. ಅದನ್ನು ನಾವು ಆಧಾರಗಳಿಂದ ಸಿದ್ಧ ಮಾಡಬಹುದು. ಆದರೆ ಈ ಮಾತು ಸದ್ಯಕ್ಕೆ ಸಮಯಭೇದದವರಿಗೆ ಮಾತ್ರ ಅಷ್ಟು ರುಚಿಸಲಿಕ್ಕಿಲ್ಲ.

ಉಳಿದ ಸಂಶೋಧಕ ಬುದ್ಧಿಯುಳ್ಳವರು ಅದನ್ನು ಒಪ್ಪಬಹುದು. ನಾವು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಅನೇಕ ಚಿತ್ರವಿಚಿತ್ರ ಲೀಲೆಗಳನ್ನು ಮಾಡುತ್ತ ಅತ್ಯಾನಂದದಿಂದ ತೇರದಾಳದಲ್ಲಿರುತ್ತಿರಲು ಷಟ್‌ಸ್ಥಲ ಜ್ಞಾನವನ್ನು ಸಂಪಾದಿಸಿದ್ದರಿಂದ ನಿರಾಲಂಬ ಸ್ಥಿತಿಗೆ ಮುಟ್ಟಿದವನೂ, ವಿದ್ಯೆಯೇ ಹೆಂಡತಿ, ಸಂತೋಷವೇ ಮಗನು, ವೈರಾಗ್ಯವೇ ಬಂಧುವು, ಕ್ಷಮೆಯೇ ಪರಿವಾರವು, ಶಾಂತಿಯೇ ಸ್ನೇಹಭಾವ, ಭಕ್ತಿಯೇ ಮಾತೋಶ್ರೀಯು, ಸದಾಚಾರವೇ ತಂದೆಯು, ಶಿವನ ಮೇಲಿನ ವಿಶ್ವಾಸವೇ ತಂಗಿಯು, ನಿರಾಶೆ ಮತ್ತು ಅಹಿಂಸೆಗಳೇ ತೊತ್ತುಗಳು, ಧರ್ಮವೇ ವಾಹನವು, ಇಂದ್ರಿಯ ದಮನವೇ ತನ್ನ ಆಚಾರವು, ಉಳಿದ ಸದ್ಗುಣಗಳೇ ತನ್ನ ಮೊಮ್ಮಕ್ಕಳು ಮರಿಮಕ್ಕಳು, ಜ್ಞಾನವೇ ಶರೀರವು, ವಿಚಾರವೇ ಕ್ಷೇತ್ರವು, ಮುಕ್ತಿಯೇ ಆತನ ಸಾಮ್ರಾಜ್ಯವು ಎಂದು ನಿಶ್ಚಯಿಸಿದವನೂ ಮತ್ತು ಮಹಾಲಿಂಗ, ಕಪನಿ, ಕಮಂಡಲು, ದಂಡ, ಭಿಕ್ಷಾಪಾತ್ರೆ ಹಾಗೂ ಭಸ್ಮಪಾತ್ರೆ ಎಂಬ ಪಂಚ ಬಹಿರಂಗ ಮುದ್ರೆಗಳನ್ನು ಧರಿಸಿದವನೂ ಅಂತರಂಗದಲ್ಲಿ ಸಮತೆಯೇ ಕಂಥೆ, ಜ್ಞಾನವೇ ದಂಡ, ದಯವೇ ಕಮಂಡಲು, ವೈರಾಗ್ಯವೇ ಬಿಕ್ಷಾಪಾತ್ರೆಯು ಮತ್ತು ಕ್ಷಮೆಯೇ ಭಸ್ಮಪಾತ್ರೆ ಮುಂತಾದವುಗಳನ್ನು ಧರಿಸಿದಂಥವನೂ ಹಾಗೂ ಶ್ರೀಮದ್ವೀಶಿಕ ಷಟ್‌ಸ್ಥಲ ಚಕ್ರವರ್ತಿ, ಬ್ರಹ್ಮಾನಂದ, ಪರಶಿವಮೂರ್ತಿ, ವಿರಕ್ತ ಶಿಖಾಮಣಿ, ಮಾಯಾ ಕೋಲಾಹಲನಾದ ಶ್ರೀಪ್ರಭುದೇವನು ನಿರ್ವಯಲವಾಗುವನೆಂಬ ವಾರ್ತೆಯು ಅಲ್ಲಲ್ಲಿ ಹಬ್ಬಿತು.

ಅದರಂತೆ ನಿರಂಜನ ವಂಶರತ್ನಾಕರದಲ್ಲಿ "ಆಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ, ಅಲ್ಲಿಯ ಭಕ್ತಗಣಂಗಳನ್ನು ಕರಿಸಿಕೊಂಡು ತಮ್ಮ ಶಿವಾನುಭವ ಚರಂತಿಕೆಯನ್ನು ಆದಿಲಿಂಗೇಶನೆಂಬ ಗಣವರರಿಗೆ ಮಾಡಿ ಅವರಿಗೆ ತಮ್ಮಯ ೭೨ ಬಿರುದುಗಳು ಗಣಸಮೂಹವಂ ಕೊಟ್ಟು ಕಳುಹಿಸಿ ಅನಂತರ ಅಲ್ಲಿಯ ಭಕ್ತರ ಭಕ್ತಿಯೊಳು ಸ್ವಲ್ಪ ದಿವಸವಿದ್ದು ಆ ಬಳಿಕ ಅಲ್ಲಿಯ ದೇವಭಕ್ತರ ಕರೆಸಿಕೊಂಡು ಅವರಿಗೆ ತಾವು ಕಾಯ ಸಹಿತವಾಗಿ ಈ ಸ್ಥಳದಿ ನಿರ್ವಯಲಾಗುವೆವು, ನಾಳಿನ ಉದಯಕ್ಕೆ ನೀವು ಸರ್ವರೂ ಬಾಹುದು" ಎಂದು ಆಜ್ಞಾಪಿಸಿದ್ದನ್ನು ನಾವು ಹಿಂದಿನ ಪ್ರಕರಣದಲ್ಲಿ ಹೇಳಿದ್ದು ವಾಚಕರ ಸ್ಮರಣದಲ್ಲಿರಬಹುದು. ಸಾರಾಂಶ, ಈ ಸುದ್ದಿಯನ್ನು ಕೇಳಿ ಸದ್ಯದ ಮುಂಬಯಿ

ಮದ್ರಾಸ ನಿಜಾಮ ಇಲಾಖಾ ಮೈಸೂರ ಸಂಸ್ಥಾನ ಮುಂತಾದ ಸ್ಥಳಗಳಿಂದ ಅಸಂಖ್ಯ ಭಕ್ತ ಮಹೇಶ್ವರರು ಕೂಡಿದರು. ಅವರಲ್ಲಿ ಶ್ರೀಮಂತ ಸರದಾರ ರಾಜಾ ಲಖಮಗೌಡಾ ಬಸವಪ್ರಭು ಸರದೇಸಾಯಿ ಒಂಟಮುರಿ ಸಿ. ಆಯ್. ಇ. ಬಾರ್-ಅಟ್-ಲಾ, ಇವರ ಮೂಲ ಪುರುಷನಾದ ಪ್ರಭು ಬಸವಂತರಾಯನೂ ಹಾಗೂ ಮೆಹರ್ಬಾನ ಶ್ರೀಮಂತ ಹನಗಂಡಿ ದೇಸಾಯರ ಮೂಲಪುರುಷನಾದ ಕೃಷ್ಣಗೌಡನೂ ಒಡೆದು ಕಾಣಿಸುತ್ತಿದ್ದರು. ಈ ಪ್ರಕಾರವಾಗಿ ಅನೇಕ ಜನರು ಕೂಡಿದವರಲ್ಲಿ ಕೆಲವರು ಭಜನೆಮಾಡುತ್ತಲೂ, ಕೆಲವರು ಜಂಗಮ ದಾಸೋಹ ಮಾಡಿಸುತ್ತಲೂ, ಕೆಲವರು ಪುರಾಣ ಹೇಳುತ್ತಲೂ, ಕೆಲವರು ಶಿವಕೀರ್ತನೆಗಳನ್ನು ಹಾಡುತ್ತಲೂ, ಕೆಲವರು ಶ್ರೀ ಪ್ರಭುದೇವರ ಮಂಗಲ ನಾಮದ ಜಯಘೋಷವನ್ನು ಮಾಡುತ್ತಲೂ ಐಕ್ಯಸಮಯದ ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತ ಕುಳಿತಿರಲು, ಶ್ರೀಪ್ರಭುದೇವನು ತನ್ನ ಹತ್ತರಿರುವ ಕರಿಬಸವ ದೇಶಿಕೇಂದ್ರ ಮತ್ತು ಚನ್ನಪ್ಪ ದೇವರು ಈ ಉಭಯತರನ್ನು ತನ್ನ ಹತ್ತರ ಕರೆದು ಕರಿಬಸವ ದೇಶಿಕೇಂದ್ರನಿಗೆ ಚನ್ನಪ್ಪನ ಮಗಳ ಪಾಣಿಗ್ರಹಣವನ್ನು ಮಾಡಿ ನೀನು ಗೃಹಸ್ಥಾಶ್ರಮಿಯಾಗಿ ಇಲ್ಲಿಯೇ ಇರು ಎಂದು ಆಜ್ಞಾಪಿಸಿದನು. ಮತ್ತು ಚನ್ನಪ್ಪನಿಗೆ ನಿನಗೇನು ಬೇಕು ಬೇಡೆಂದು ಆಜ್ಞಾಪಿಸಲು "ವರಮನ್ಯಂ ನ ಯಾಚೇ ಹಂ। ಶಿವಭಕ್ತಿಂ ವಿನಾಪ್ರಭೋ ‖ ತಾಮೇವ ಸುದೃಢಾಂ ದೇಹಿ। ಸೈವ ಮೇ ಪರಮಾಗತಿಃ ‖ ಎಂದರೆ ಹೇ ಪ್ರಭುವೇ ನಿನ್ನ ಭಕ್ತಿಯು ಹೊರ್ತು ಬೇರೊಂದು ಬೇಡವು, ಜನ್ಮ ಜನ್ಮಾಂತರದಲ್ಲಿ ನನಗೂ ನನ್ನ ಮುಂದಿನ ಸಂತತಿಯುವರಿಗೂ ನಿನ್ನ ಪಾದಸೇವೆಯೇ ಘಟಿಸಲಿ, ಯಾಕಂದರೆ ಅದರಿಂದಲೇ ನನಗೆ ಪರಮಗತಿಯುಂಟು ಎಂದು ಬೇಡಿಕೊಳ್ಳಲು ಚನ್ನಪ್ಪನ ಎರಡೂ ಗಂಡು ಮಕ್ಕಳನ್ನು ಹತ್ತರ ಕರೆದು ಅವರ ಪುಸ್ತಕಗಳ ಮೇಲೆ ತನ್ನ ವರದ ಹಸ್ತಗಳನ್ನು ಇಟ್ಟು "ನಿಮಗೆ ಕಲ್ಯಾಣವಾಗಲಿ ಮತ್ತು ನಿಮ್ಮ ಮತ್ತು ನಿಮ್ಮ ಸಂತತಿಯುವರ ಕಡೆಯಿಂದ ನನ್ನ ಪಾದಸೇವೆಯು ನಡೆಯಲಿ" ಎಂದು ಆಶೀರ್ವದಿಸಿದನು. ಆ ಮೇಲೆ ಅವರು ಸಾಷ್ಟಾಂಗವೆರಗಿ ಸ್ವಾಮಿಪಾದವು ಕಾಯಸಹಿತವಾಗಿ ದಯಮಾಡಿಸಿದರೆ ತಮ್ಮಯ ಕುರುಹು ಏನಾದರೊಂದು ದಯಪಾಲಿಸಿದರೆ ಅದನ್ನು ನಾವು ಪೂಜಿಸಿ ನಮ್ಮ ವಂಶಪರಂಪರೆಯಾಗಿ ಕೃತಾರ್ಥರಾಗುವೆವು ಎಂದು ಬಿನ್ನವಿಸಿಕೊಳ್ಳಲು, ತನ್ನ ಕೈಯೊಳಗಿನ ಕಮಂಡಲುವಾದ ಮಗಿಯನ್ನೂ ಬೆತ್ತ

ಹಾವುಗೆಗಳನ್ನೂ ನಿರಂಜನವಂಶರತ್ನಾಕರದಲ್ಲಿ ಹೇಳುವಂತೆ ದಯಪಾಲಿಸಿದನು. ಇಷ್ಟಾದ ಮೇಲೆ ಶ್ರೀಮಂತರಿಗೂ ಬಡವರಿಗೂ ಎಲ್ಲರಿಗೂ ದರ್ಶನಾಶೀರ್ವಾದ ಕೊಡುವಷ್ಟರಲ್ಲಿ ಒಮ್ಮಿಂದೊಮ್ಮೆ ಕೋಟಿ ಸೂರ್ಯರ ಪ್ರಕಾಶದಂತೆ ತೇಜವು ಪ್ರಕಟಿಸಿತು. ಆದರಿಂದ ಸ್ವಲ್ಪ ವೇಳೆಯ ವರೆಗೆ ಸರ್ವರು ದೃಷ್ಟಿಶೂನ್ಯರಾದರು. ಆ ಪ್ರಕಾಶವು ಅಡಗಿದ ನಂತರ ನೋಡಲಾಗಿ ಶ್ರೀ ಪ್ರಭುದೇವನು ನಿರ್ವಯಲನಾಗಿದ್ದನು. ಈ ವಿಷಯವಾಗಿ ನಿರಂಜನವಂಶರತ್ನಾಕರದಲ್ಲಿ " ಉರಿಕರ್ಪೂರದಂತೆ" ನಿರ್ವಯಲಾದನೆಂದು ಹೇಳಿದೆ.

ನಿರ್ವಾಣಯು ಅಥವಾ ಐಕ್ಯ ಮತ್ತು ಮರಣ ಇವೆರಡರ ಭೇದವು ಹೀಗಿರುವದು. ಮರಣವೆಂದರೆ ಬ್ರಹ್ಮಸೃಷ್ಟಿಯಲ್ಲಿ ಉತ್ಪನ್ನನಾಗಿ ವಿಷ್ಣು ಸೃಷ್ಟಿಯಲ್ಲಿ ಜೋಪಾನವಾಗಿ, ಕಡೆಗೆ ರುದ್ರಸೃಷ್ಟಿಯಲ್ಲಿ ಲಯಹೊಂದಿ ಪುನಃ ತನ್ನ ಪಾಪಾನು ಗುಣಗಳಿಂದ ಕ್ರಿಮಿಕೀಟಕ ಪತಂಗಾದಿ ಯೋನಿಗಳಲ್ಲಿ ಬಂದು, ಜನನ ಮರಣ ರೂಪವಾದ ಸಂಸಾರ ಚಕ್ರಗಳಲ್ಲಿ ಸಿಕ್ಕು, ಮೇಲಿಂದ ಮೇಲೆ ಕಷ್ಟಬಡುವಂಥ ಪ್ರಾಕೃತ ಮನುಷ್ಯನ ಅಂತ್ಯದ ಸ್ಥಿತಿಗೆ ಮರಣವೆಂದೆನ್ನುವರು. ಇದರಂತೆ ಗುರುಸೃಷ್ಟಿಯಲ್ಲಿ ಉತ್ಪನ್ನನಾಗಿ ಲಿಂಗಾಸೃಷ್ಟಿಯೊಳಗೆ ಲಿಂಗನಂದಾತಿಶಯದ ವೈಭವದಲ್ಲಿ ಬೆಳೆದು ಕಡೆಗೆ ಜಂಗಮಲಿಂಗದಲ್ಲಿ ನಿರ್ವಾಣಯನಾಗುವ (ಅಪ್ರಾಕೃತ) ವೀರಶೈವನಿಗೆ ಐಕ್ಯ, ಶಿವಾಧೀನ, ಶಿವೈಕ್ಯ, ಮತ್ತು ಲಿಂಗೈಕ್ಯವಾದನೆಂದು ಅನ್ನುವರು. ಇದು ಸರ್ವಸಾಧಾರಣವಾಗಿ ವೀರಶೈವರದಾಯಿತು. ಆದರೆ ಶ್ರೀ ಮದನಾದಿ ಅಲ್ಲಮಪ್ರಭುದೇವನು ದಿವ್ಯದೇಹಿಯಾಗಿದ್ದು ಅಯೋನಿಜನೆಂದು ಎಲ್ಲ ವೀರಶೈವ ಪ್ರಾಚೀನ ಮತ್ತು ಅರ್ವಾಚೀನ ಕವಿಗಳು ಹೊಗಳಿರುವರು. ಇದು ಅಲ್ಲದೆ ನಾವು ಮೇಲೆ ಹೇಳಿರುವಂತೆ ಶಿವಯೋಗಿಗಳು ನಿರ್ವಾಣಸಮಯದಲ್ಲಿ ತಮ್ಮ ದೇಹವನ್ನು ಉರಿಕರ್ಪೂರದಂತೆ ಯೋಗಸಾಮರ್ಥ್ಯದಿಂದ ಸುಡಬಲ್ಲರು. ಅದು ಹೀಗೆ ಯೋಗಶಾಸ್ತ್ರದ ನಿಯಮಾನುಸಾರವಾಗಿ ಶಿವಯೋಗಿಗಳ ನಿರ್ವಾಣಯವಾಗುವ ಸಮಯದಲ್ಲಿ ಆಗುವ ಅತ್ಯಂತ ಶ್ರೇಷ್ಠವಾದ ಸ್ಥಿತಿಯು. ಇದಕ್ಕೆ ಆಧಾರ "ಸಮಾನ ಜಯಾ ಜ್ವಲನಮ್" (ಪಾತಂಜಲಯೋಗಸೂತ್ರ ವಿಭೂತಿ ಪಾದ ೪೦) ಸೂತ್ರಾರ್ಥ— ಸಮಾನವಾಯುವನ್ನು ಸಂಯಮನದಿಂದ ಜಯಿಸಿದರೆ ಯೋಗಿಯು ಅಗ್ನಿಯಂತೆ ದೇದಿಪ್ಯಮಾನನಾಗಿ ಕಾಣುವನು.

ಇದಕ್ಕೆ ಭಾಷ್ಯ— "ಜಿತಸಮಾನಸ್ತೇಜಸ ಉಪಧ್ಮಾನಂ ಕೃತ್ವಾ ಜ್ವಲತಿ" ಭಾಷ್ಯಾರ್ಥ— ನಾಭಿಮಂಡಲದ ಹತ್ತರಿರುವ ಜಠರಾಗ್ನಿಯನ್ನು ಸುತ್ತಿಕೊಂಡಿರುವ ಸಮಾನ ವಾಯುವನ್ನು ಸಂಯಮನದಿಂದ ಗೆದ್ದದ್ದಾದರೆ ಜಠರಾಗ್ನಿಯ ತೇಜ ಬೆಳೆದು ಶಿವಯೋಗಿಯು ಅಗ್ನಿಯಂತೆ ಪ್ರದೀಪ್ತನಾಗುವನು; ಇಲ್ಲವೆ ಅಗ್ನಿಯ ತೇಜ ಬೆಳೆದು ಶಿವಯೋಗಿಯು ತನ್ನ ಶರೀರವನ್ನು ಪಾರ್ವತೀದೇವಿಯಂತ ಸುಟ್ಟುಬಿಡುವನು. ಇದರ ಮೇಲಿಂದ ನೋಡಲಾಗಿ ಯೋಗ ಸಾಮರ್ಥ್ಯದಿಂದ ನಿರ್ವಾಣ ಸಮಯದಲ್ಲಿ ಶಿವಯೋಗಿ ಮಹಾತ್ಮರು ಎಷ್ಟೋ ಪ್ರಸಂಗಗಳಲ್ಲಿ ತಮ್ಮ ನಶ್ವರವಾದ ದೇಹವನ್ನು ಯೋಗಾಗ್ನಿಗೆ ಸಮರ್ಪಿಸಿ ಬಿಡುವರು. ಇದಕ್ಕೆ ಪುರಾಣದೊಳಗಿನ ಉದಾಹರಣೆಯು ದಾಕ್ಷಾಯಣಿಯು ತನ್ನ ತಂದೆಯಾದ ದಕ್ಷಪ್ರಜಾಪತಿಯ ಯಜ್ಞದ ಕಾಲಕ್ಕೆ ಯೋಗಬಲದಿಂದ ತನ್ನ ದೇಹವನ್ನು ಭಸ್ಮೀಭೂತ ಮಾಡಿದಳು. (ಶಿವಗೀತ ಅಧ್ಯಾಯ ೭.)

ಇದಕ್ಕೆ ಅಧುನಿಕ ಉದಾಹರಣೆಯು ಬಂಗಾಲ ಪ್ರಾಂತದಲ್ಲಿಯ ಜೌನಪುರ ಜಿಲ್ಲೆಯೊಳಗಿನ ಪ್ರೇಮಪುರ ನಾಮಕ ಊರಲ್ಲಿ ಅಯೋಧ್ಯಾನಾಥನೆಂಬ ಒಬ್ಬ ಗೃಹಸ್ಥನಿಗೆ ಕ್ರಿಸ್ತಶಕ ೧೮೪೦ ರಲ್ಲಿ ಹರಭಜನ್ನ ಈ ಹೆಸರಿನ ಒಬ್ಬ ಮಗನು ಜನಿಸಿದನು. ಅವನಿಗೆ ಪಹೊರಿ (ಪವನ+ಆಹಾರಿ) ಬುವಾ ಎಂದು ಜನರು ಕರೆಯುತ್ತಿದ್ದರು. ಅವನು ಕ್ರಿಸ್ತೀಶಕ ೧೮೯೮ ರಲ್ಲಿ (ಬಂಗಾಲಿ ಸಮಂತ್ ೧೯೫೫ ಜೇಷ್ಠ ಶುದ್ಧ ಸಪ್ತಮಿಗೆ) ಯೋಗ ಸಾಮರ್ಥ್ಯದಿಂದ ತನ್ನ ಶರೀರವನ್ನು ಉರಿಕರ್ಪೂರದಂತೆ ಸುಟ್ಟುಬಿಟ್ಟನು. ಆ ವೇಳೆಯಲ್ಲಿ ಆತನ ಬಂಧುವಾದ ಬದರೀನಾರಾಯಣ ಮತ್ತು ಸೋದರಳಿಯನಾದ ಪ. ಭಗವತಾಚಾರ್ಯ (ಕಾಶಿಯೊಳಗಿನ ಕಾಲೇಜದ ಪ್ರೋಫೆಸರ) ಪಂಡಿತ ಜನಾರ್ದನ ಮುಂತಾದ ಐದಾರು ಜನರು ಹಾಜರು ಇದ್ದರೆಂದು "ಭಾರತನಾ ಸಂತಪುರುಷೊ" ಎಂಬ ಗುಜರಾಥೀ ಗ್ರಂಥದಲ್ಲಿ ಉಲ್ಲೇಖವದೆ. ಹೀಗೆ ವಸ್ತುಸ್ಥಿತಿಯು ಇರಲಿಕ್ಕೂ ಕರ್ನಾಟಕ ಕವಿ ಚರತೆಕಾರರು ತಮ್ಮ ಕವಿಚರಿತೆಯಲ್ಲಿ ಮಹಾದೇವಿಯಕ್ಕನಿಗೆ ನಿರ್ಯಾಣಪ್ರಾಪ್ತಿಯ ಮಾರ್ಗವನ್ನು ಹೇಳಿ ಶ್ರೀಬಸವೇಶ್ವರನಕಿಂತಲೂ ಮುಂಚಿತವಾಗಿ ಕದಳೀವನದಲ್ಲಿ ಶ್ರೀಪ್ರಭುದೇವನು ಐಕ್ಯನಾದನೆಂದು ಕೆಲವು ವಚನಕಾರರು ವರ್ಣಿಸಿದ್ದಾರೆಂದು ಬರೆದಿದ್ದಾರೆ.

ಈ ವಚನಕಾರರೆಲ್ಲರೂ ಬಹಳ ಮಾಡಿ ಶ್ರೀಪ್ರಭುದೇವನ ಸಮಕಾಲದಲ್ಲಿ ಇದ್ದವರಲ್ಲ. ವಿರಕ್ತವರ್ಗದವರಲ್ಲಿ ಅಶಾಸ್ತ್ರೀಯವಾದ ಸಮಯಭೇದ ಉತ್ಪನ್ನವಾದ ಮೇಲೆ ಜನಿಸಿದವರು ಇರುವರು. ಇಂಥವರ ಗ್ರಂಥಗಳಲ್ಲಿ ಈಗ ರಾವಸಾಹೇಬ ಹಳಕಟ್ಟಿಯವರು ಅಚ್ಚುಹಾಕಿಸಿದ ಶೂನ್ಯಸಂಪಾದನೆಯ ಕರ್ತೃವಾದ ಸಿದ್ಧವೀರನೊಬ್ಬನು ಇರುವನು. ಆದರೆ ಮೊದಲಿಗೆ ಶಿವಗಣಪ್ರಸಾದಿ ಮಹಾದೇವಯ್ಯನೆಂಬವನೊಬ್ಬನು ಒಂದು ಶೂನ್ಯಸಂಪಾದನೆಯನ್ನು ಬರೆದನು. ಅದರಲ್ಲಿ ಸುಮಾರು ೧೦೦೦ ವಚನಗಳಿವೆ. ಅದರಲ್ಲಿ ಸಿದ್ಧರಾಮೇಶ್ವರ ಸಂಪಾದನೆಯು ಇದ್ದಿಲ್ಲ. ಹಿಂದುಗಡೆ ಗುಮ್ಮಳಾಪುರದ ಸಿದ್ಧಲಿಂಗದೇವನು "(೧೫)" ಈ ಸಂಪಾದನೆಯನ್ನು ಆದರಲ್ಲಿ ಸೇರಿಸಿ ಪೂರ್ತಿ ಮಾಡಿದನು. ಇದರಿಂದ ಅದರಲ್ಲಿ ಸುಮಾರು ೧೪೦ ವಚನಗಳು ಹೆಚ್ಚು ಸೇರಿದವು. ಆಮೇಲೆ ಕನ್ನಡ ಪ್ರಭುದೇವರ ಪುರಾಣದ ಕರ್ತೃವಾದ ಎಳಂದೂರ ಹರೀಶ್ವರ (೧೬೦೬) ನ ಗುರು ವೃಷಭಪುರ (ಗುಳೂರ) ದ ಆಗಮಜ್ಞಾನಿ ಸಿದ್ಧವೀರೇಶನು ೩ ನೆಯ ಸಂಪಾದನೆಯನ್ನು ಬರೆದನು. ಇದರಲ್ಲಿ ಸುಮಾರು ೧೫೫೦ ವಚನಗಳು ಅವೆ. ಇವುಗಳಲ್ಲಿ ಬೇರೆ ಬೇರೆ ರಾಗಗಳ ಮೇಲೆ ಶಿವಶರಣರ ಮುಖದಿಂದ ಅನೇಕ ಹಾಡುಗಳು ಸೇರಿವೆ.

'ಕದಳೀ' ಈ ಶಬ್ಧದ ಅರ್ಥವು ಬಾಳೆಯೆಂದಿದ್ದರೂ ಪ್ರಮಥರ ವಚನದೊಳಗಿನ 'ಕದಳೀ' ಶಬ್ದದ ನಿಜವಾದ ಅರ್ಥಗಳು ಜಂಗುಳಿ, ಗೊಂದಣಿ, ಸಂದಣಿ ಮುಂತಾದವು ಇರುತ್ತವೆಂದು ಅನೇಕ ಗ್ರಂಥಗಳಿಂದ ಕಂಡು ಬರುವದು. ವಚನಕಾರರು ಈ ಕದಳೀ ಶಬ್ದದ ಅರ್ಥವನ್ನು ಬೇರೆಯಾಗಿ ಮಾಡಿರುವರು. ಅದು ಹೇಗಂದರೆ— ಶ್ರೀ ಮನ್ನಿರಂಜನ ಜಗದ್ಗುರು ಗಂಥಮಾಲೆಯ ೩ ನೆಯ ಪುಷ್ಪದ ೮ ನೇ ಪುಟದೊಳಗಿನ ೧೧೦ ನೇ ಶ್ಲೋಕವಾದ "ಪರಮಭಕ್ತರ ಸಲಹಿ। ಬರುತಕಾಯದ ಕದಳೀ। ಅರಮನೆಯ ಪೊಕ್ಕು। ಗುರುಗುಹೇಶ್ವರನೊಳಗೆ। ಬೆರೆದಾ ಪ್ರಭುದೇವ ಶರಣಾಗು "॥ ಎಂಬದರಲ್ಲಿ 'ಕಾಯ ಕದಳಿ' ಇದರ ಅರ್ಥವನ್ನು ಶರೀರ ರೂಪವಾದ ಕದಳೀ ಹೀಗೆ ಮಾಡಿರುವರು. ಹಡಪದ ಅಪ್ಪಣ್ಣನ ಪತ್ನಿಯಾದ ಲಿಂಗಮ್ಮನು ಕೂಡ ತನ್ನ ವಚನಗಳಲ್ಲಿ ಕಾಯಕದಳೀ ಎಂಬದರ ಅರ್ಥವನ್ನು ಶರೀರ ರೂಪವಾದ ಕದಳಿಯೆಂದೇ ಮಾಡಿರುವಳು. ಮಹಾದೇವಿ ಅಕ್ಕನ ಸಂಪಾದನೆ ವಚನ ೬೮ "ಕರ್ಮವೆಂಬ ಕದಳಿಯೆನಗೆ।

ಕಾಯವೆಂಬ ಕದಳಿ ನಿಮಗೆ। ಮಾಟವೆಂಬ ಕದಳಿ ಬಸವಣ್ಣಂಗೆ। ಭಾವವೆಂಬ ಕದಳಿ ಚನ್ನಬಸವಣ್ಣಂಗೆ। ಬಂದ ಬಂದ ಭಾವ ಸತಿ ಸಂದಿತ್ತು। ಎನ್ನಂಗದವಸಾನವ ಹೇಳಾ ಚನ್ನಮಲ್ಲಿಕಾರ್ಜುನಾ" ಈ ರೀತಿಯಾಗಿ ಇರುವದು. ಇದರಂತೆ ಸರ್ವಗಣಂಗಳ ನಿರ್ವಯಲ ಸಮಾಧಿಯ ಸಂಪಾದನೆಯಲ್ಲಿ ಶ್ರೀಪ್ರಭುದೇವನು ಗೋರಕ್ಷನಿಗೆ ಲಿಂಗಾಂಗ ಸಂಬಂಧವ ತೋರಿಸಿ ಆತನ ನಿರೋಪ ತೆಗೆದುಕೊಂಡು ಅಂದ ೧೧ ನೆಯ ವಚನದಲ್ಲಿ "ಕಾಯವೆಂಬ ಕದಳಿಯಹೊಕ್ಕು, ಪ್ರಾಣವೆಂಬ ಗಂಹ್ವರ ದೊಳಗೆ ಸಕಲೇಂದ್ರಿಯವೆಂಬ ಕೋಣಿ ಕೋಣಿಗಳಲ್ಲಿ ತಿರುಗಾಡುತ ಬರಲಾಗಿ ಮೇರು ಮಂದಿರದ ತ್ರಿಕೋಣಿಯಲ್ಲಿ ಬೆಳಗಾಯಿತ್ತು. ಗುಹೇಶ್ವರ ಲಿಂಗವೆಂಬುದು ರೂಪಾಯಿತ್ತು ಎಂದು ಇರುವದು. ಮತ್ತು ಅದೇ ಶ್ರೀ ಪ್ರಭುದೇವರ ೧೨ ನೇ ವಚನದಲ್ಲಿ "ಕಾಯವೆಂಬ ಮಹಾಕದಳಿಯ ಗೆಲಬಲ್ಲವರಾರನು ಕಾಣೆ, ಸಂಸಾರವೆಂಬ ಸಪ್ತ ಸಮುದ್ರವ ಬಳಸಿ ಬಂದಿಪ್ಪ, ಉಭಯವೆಂಬ ಮಹಾ ಅರಣ್ಯದೊಳು ಪಂಚೇಂದ್ರಿಯವೆಂಬ ವಿಷದ ಮಳೆ ಸುರಿಯುತ್ತಿಪ್ಪದು, ಕೋಪವೆಂಬ ಪೆರ್ಬುಲಿ ಮೊರೆಯುತ್ತಿಪ್ಪದು, ಅಷ್ಟಮದಗಜಂಗಳು ಬೀದಿವರೆಯುತ್ತಿಪ್ಪವು, ಕಾಮವೆಂಬ ಕೂರಂಬಿನ ಸೋನೆ ಸುರಿಯುತ್ತಿಪ್ಪದು, ಮತ್ಸರವೆಂಬ ಮಹಾ ಸರ್ಪಂಗಳು ಕಿಡಿಯ ನುಗುಳುತ್ತಿರ್ಪವು, ಆಶೆಯೆಂಬ ಪಾಪಿಯ ಕೂಸು ಹಿಸಿಹಿಸಿದು ತಿನ್ನುತ್ತಿರ್ಪದು, ತಾಪತ್ರಯವೆಂಬ ಕೆಂಡದ ಮಳೆ ಅಡಿಯಿಡಬಾರದು, ಅಹಂಕಾರವೆಂಬ ಗಿರಿಗಳು ಅಡ್ಡ ಬಿದ್ದಿಪ್ಪವು, ಪಂಚಭೂತಗಳೆಂಬ ಭೂತಂಗಳ ಭಯ ದಿಟ್ಟಿಸಬಾರದು, ಮಾಯವೆಂಬ ರಕ್ಕಸಿ ಹಸಿಯ ತಿನ್ನುತ್ತಿಪ್ಪಳು, ವಿಷಯವೆಂಬ ಕೂಪವ ಬಳಸಬಾರದು, ಮೋಹವೆಂಬ ಬಳ್ಳಿ ಕಾಲಕುತ್ತಬಾರದು, ಮೋಹವೆಂಬ ಮಸೆದ ಆಯುಧವ ನೊರೆಯ ನುಚ್ಚಬಾರದು, ಇಂತಪ್ಪ ಕದಳಿಯ ಹೋಗಲರಿಯದೆ ದೇವದಾನವ ಮಾನವರೆಲ್ಲರು ಮತಿಗೆಟ್ಟು ಮರುಳಾಗಿ ಹೊರದೆಗೆದು ಓಡಿದರು ಅಂಗಾಲ ಕಣ್ಣವರು, ಮೈಯೆಲ್ಲ ಕಣ್ಣವರು, ತಲೆಬಾಲಗೆಟ್ಟರು, ನಾನೀ ಕದಳಿಯ ಹೊಕ್ಕು ಹೊಯದಾಡಿ ಮುಳ್ಳಮೊಸೆಯುಟ್ಟದೆ ಕದಳಿಯವರೆದು ಗೆಲಿದು ತರಿಸಿ ಗುಹೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಂದು ಪರವಶನಾಗಿ ನಿರಾಳಕೆ ನಿರಾಳನಾಗಿದ್ದೆನಯ್ಯಾ" ಹೀಗೆ ಈ ಶರೀರರೂಪವಾದ ಕದಳೀ ಬನದ ವಿಸ್ತಾರವನ್ನು ಬಹು ಸುಂದರವಾಗಿ ವರ್ಣಿಸಿರುವನು. ಒಟ್ಟಿನ ಮೇಲೆ

ಈ ಶರೀರಕ್ಕೆ ಕದಳೀ ಬನದ ಉಪಮೆಯನ್ನು ಕೊಟ್ಟದ್ದು ವಾಚಕರು ಮನಗಂಡಿರಬಹುದು. ಆದ್ದರಿಂದ ಶ್ರೀ ದತ್ತಾತ್ರೇಯನು ಕೂಡ-ನರಸೋಬಾನ ವಾಡಿ (ಸಂಸ್ಥಾನ ಕೊಲ್ಹಾಪುರ) ಯಲ್ಲಿ ಬಯಲಾದರೂ ಆತನು ಕದಳೀ ಬನದಲ್ಲಿ ಬಯಲಾದನೆಂದು ಗುರುಚರಿತ್ರೆಯ ಕಡೆಯ ಅಧ್ಯಾಯದಲ್ಲಿ ವರ್ಣಿಸಿರುವರು. ಇದೇ ಶರೀರಕ್ಕೆ ಅಲಂಕಾರಿಕ ಭಾಷೆಯಲ್ಲಿ ಅನೇಕ ಹೆಸರುಗಳನ್ನು ಅನೇಕ ಪೂರ್ವದ ಕವಿಗಳು ಕೊಟ್ಟಿರುವರು. ಉದಾಹರಣಾರ್ಥವಾಗಿ, ಸರ್ವಭೂಷಣ ಶಿವಯೋಗಿಗಳು ತಮ್ಮ ಕೈವಲ್ಯ ಕಲ್ಪವಲ್ಲರೀ ನಾಮಕ ಗ್ರಂಥದ ನೀತಿ, ಕ್ರಿಯಾ, ಚರ್ಯಾ ಪ್ರತಿಪಾದನಸ್ಥಲದ ೧೮ ನೇ ಪದ್ಯದಲ್ಲಿ ಈ ಪಂಚಭೂತಾತ್ಮಕ ಶರೀರಕ್ಕೆ ಕಾಂತಾರದ ಉಪಮೆಯನ್ನು ಯೋಗಪ್ರತಿಪಾದನಸ್ಥಲದ ೧೧ ನೇ ಪದ್ಯದಲ್ಲಿ ಮಾನವನ ದೇಹಕ್ಕೆ ಶ್ರೀಶೈಲ ಗಿರಿಯ ಹೋಲಿಕೆಯನ್ನೂ ೩ ನೆಯ ಪದ್ಯದಲ್ಲಿ ಶರೀರಕ್ಕೆ ರಥದ ಉಪಮೆಯನ್ನೂ ಕೊಟ್ಟಿರುವರು. ಏವಂಚ ಶ್ರೀ ಮದನಾದಿ ಅಲ್ಲಮ ಪ್ರಭುದೇವನು ಶ್ರೀಶೈಲದಲ್ಲಿ ಕದಳಿಯ ಬನದಲ್ಲಿ ಐಕ್ಯವಾದನೆಂದರೆ ಶ್ರೀಶೈಲದಂಥ ಗಿರಿ ಗಂಹ್ವರಗಳ ಕಡೆಗೆ ಹೋಗದೆ ಇದ್ದ ಠಾವಿನಲ್ಲಿಯೇ ಶರೀರ ರೂಪವಾದ ಕದಳೀ ಬನದಲ್ಲಿ ಐಕ್ಯನಾಗಿರುವನು ಎಂದು ಆಗುವದು. ಇದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ. ಬಿಜ್ಜಳನ ವಧೆಯಾದನಂತರ ಶ್ರೀ ಚನ್ನಬಸವೇಶ್ವರಾದಿ ಕೆಲವು ಶಿವಶರಣರು ಮಾತ್ರ ದಂಡು ಬೆನ್ನು ಹತ್ತಿದ್ದರಿಂದ ಅನಿರ್ವಾಹ ಪಕ್ಷಕ್ಕೆ ಉಳವಿಯಂಥ ಘೋರಾರಣ್ಯದ ಕಡೆಗೆ ಹೋಗಿ ಅಂತರ್ಧಾನ ಹೊಂದಿರಬಹುದು. ಪ್ರಮಥಾಗ್ರಣಿಯಾದ ಶ್ರೀ ಬಸವೇಶ್ವರ ಮಾಚಯ್ಯ ಸಿದ್ಧರಾಮಾದಿ ಅನೇಕ ಶಿವಶರಣರು ಸಂಗಮ (ತಾ. ಹುನಗುಂದ), ಹಿಪ್ಪರಗಿ. (ಜಿ. ವಿಜಾಪುರ) ಸೊಲ್ಲಾಪುರ (ಸೊನ್ನಲಿಗಿ) ಮುಂತಾದ ಬೈಲು ಪ್ರದೇಶಗಳಲ್ಲಿ ನಿರಂಕುಶರಾಗಿ ಐಕ್ಯ ಹೊಂದಿರುವರು. ಕ್ರಿಸ್ತಿ ಶಕ ೧೨೨೨ ರಲ್ಲಿ ಸೋಮರಾಜನೆಂಬ ಒಬ್ಬ ವೀರಶೈವ ಕವಿಯು ತನ್ನ ಉದ್ಭಟ ಕಾವ್ಯದಲ್ಲಿ ಪ್ರಥಮಾಶ್ವಾಸದ ೧೦ ನೇ ಪದ್ಯದಲ್ಲಿ "ಶಿವನೆಂದುತ್ತಮ ಶೈವರಂಬುರುಹನೇತ್ರಂಗೆತ್ತು ತಾಮ್ ವೈಷ್ಣವರ್। ಹರಿರನ್ನಪ್ರಿಯನೆಂದು ಭೂಮಿ ದಿವಿಜರ್ಜೈನರ್ಜಿನಂಗೆತ್ತು ತ॥ ಮ್ಮವನೆಂದರ್ಚಿಸಲೊಲ್ದು ಸರ್ವಮುಖದಿಂದಂ ಪೂಜೆಗೊಂಡಾವಗಂ। ಸುವಿಲಾಸಂ ಬಡೆದೊಪ್ಪುವಲ್ಲಮನೆ ಬೆಚ್ಚಿರ್ಕೆನ್ನ ಚಿತ್ತಾಬ್ಜದೊಳ್"॥ ಎಂದರೆ ಶ್ರೀ ಪ್ರಭುವಿನನ್ನು ಶೈವರು ಶಿವನೆಂತಲೂ ವೈಷ್ಣವರು ವಿಷ್ಣುವೆಂತಲೂ ಜೈನರು ಜಿನನೆಂತಲೂ

ಸರ್ವಮುಖವಾಗಿ ಪೂಜಿಸುತ್ತಿದ್ದರೆಂದು ಸ್ತುತಿಸಿರುವನು. ಇಂಥ ಶ್ರೀ ಪ್ರಭುದೇವನೊಬ್ಬನೇ ಮಾತ್ರ ಶ್ರೀಶೈಲ ಗಿರಿಯೊಳಗಿನ ಕದಳೀ ಬನದಲ್ಲಿ ಐಕ್ಯನಾದನೆಂಬುವದು ಹಾಸ್ಯಾಸ್ಪದವಾದ ಮಾತೇ ಸರಿ. ಈ ಮಿಥ್ಯಾರೋಪದಿಂದ ಶ್ರೀಪ್ರಭುದೇವನ ಯೋಗ್ಯತೆಯನ್ನು ಕಡಿಮೆ ಮಾಡಿದಂತೆ ಆಗುತ್ತದೆ. ಇದು ಅಲ್ಲದೆ ಇದರಿಂದ ವೀರಶೈವ ತತ್ವಕ್ಕೇನೇ ಕುಂದು ಬರುತ್ತದೆ. ಅದು ಹೇಗಂದರೆ— ಮೋಳಿಗೆ ಮಾರಯ್ಯಗಳ ಸಂಪಾದನೆ, ವಚನ ೨೭ರಲ್ಲಿ "ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುರುಹು ಇರುತ್ತಿರಲಿಕ್ಕೆ, ಆ ನಿಜಲಿಂಗಸಂಗನರಿಯದೆ ಸಂದಿಗೊಂದಿಯಲ್ಲಿ ಹೊಕ್ಕೆನೆಂಬ ಗೊಂದಣವೇತಕ್ಕೆ" ಎಂದೂ ಮತ್ತು ವಚನ ೩೮ ರಲ್ಲಿ "ಇಷ್ಟದಲ್ಲಿ ನೋಟ ಜ್ಞಾನದಲ್ಲಿ ಕೂಟ ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯ ಬಿಟ್ಟುದು" ಎಂದು ಮೋಳಿಗೆ ಮಾರಯ್ಯಗಳ ಪತ್ನಿ ಮಹಾದೇವಿಯು ಅಂದಿರುವಳು. ಇದಕ್ಕೆ ಇನ್ನೊಂದು ದೃಷ್ಟಾಂತವು, ಮಹಾನುಭಾವಿಗಳಾದ ಬಸವಣ್ಣನವರು ಸಂಗಮಕ್ಕೆ ಬಂದು ಸಹಕುಟುಂಬ ಐಕ್ಯವಾಗಬೇಕೆಂಬ ಉದ್ದೇಶದಿಂದ ಕೃಷ್ಣಾ ನದಿಯ ಆಚೆಯಲ್ಲಿದ್ದ ತಂಗಡಿಗಿ ಗ್ರಾಮದೊಳಗಿದ್ದ ತಮ್ಮ ಧರ್ಮ ಪತ್ನಿಯವರಾದ ನೀಲಲೋಚನೆಯವರಿಗೆ ಸೇವಕನ ಕಡೆಯಿಂದ ಬರಹೇಳಕಳಿಸಿದರು. ಮಹಾನುಭಾವರ ಆಜ್ಞಾನುಸಾರವಾಗಿ ದೂತನು ತಂಗಡಿಗೆಗೆ ಹೋಗಿ ಅಮ್ಮನವರಿಗೆ ಬಿನ್ನವಿಸಿಕೊಳ್ಳಲು, ಶಿವಪೂಜಾ ಮಾಡುತ್ತಿರುವ ನೀಲಮ್ಮನವರು ತಮ್ಮ ಇಷ್ಟಲಿಂಗದಲ್ಲಿ ದೃಷ್ಟಿಯನ್ನು ಇಟ್ಟು ಶ್ರೀ ಸಂಗಮನಾಥನು ಅಲ್ಲಿಯೇ ಇರುವನು ಇಲ್ಲಿಲ್ಲವೇನು ಎಂದು ಉತ್ತರ ಕೊಟ್ಟು ತಮ್ಮ ಕರಸ್ಥಲ ಲಿಂಗದೊಳಗೆ ನಿರ್ವಯಲಾದರು. ಆ ದೂತನು ಮರಳಿ ಬಂದು ಬಸವಣ್ಣನವರಿಗೆ ಆ ವೃತ್ತಾಂತವನ್ನು ನಿವೇದಿಸಲು ಅದು ಹೇಗೆಂದು ಬಸವಣ್ಣವರು ಕೇಳಿದ್ದಕ್ಕೆ ಆ ಸೇವಕನು ತನ್ನ ಇಷ್ಟ ಲಿಂಗವನ್ನು ತೆಗೆದು ಅದರಲ್ಲಿ ತಾನೂ ಬಯಲಾದನು. ಇದನ್ನು ಕಂಡು ಬಸವನು ಚೋದ್ಯಪಟ್ಟು ರಂಗಮಧ್ಯದಲ್ಲಿ ನಿಂತು "ಹೇ ಗುರುಸಂಗಮೇಶ ಈ ಉಭಯತರ ಸ್ಥಿತಿಯು ಹೀಗಾದ ಮೇಲೆ ನಾನು ನಿನ್ನ ಸ್ಥಾವರಲಿಂಗದಲ್ಲಿ ಐಕ್ಯನಾಗುವದು ಗೌಣವು; ಆದ್ದರಿಂದ ನನ್ನನ್ನು ನೀನು ಜಂಗಮ ಲಿಂಗವಾಗಿ ನಿನ್ನೊಳಗೆ ಐಕ್ಯಮಾಡಿಕೋ" ಎಂದು ಪ್ರಾರ್ಥಿಸಲು, ಅವನ ಇಚ್ಛಾನುಸಾರವಾಗಿ ಶ್ರೀ ಸಂಗಮನಾಥನು ಜಂಗಮರೂಪವನ್ನು ಧರಿಸಿ ಬಸವಣ್ಣನವರನ್ನು ಸಮರಸ ಮಾಡಿಕೊಂಡನು. ಆದುದರಿಂದ ತೇರದಾಳ

ದಲ್ಲಿಯೇ ಶ್ರೀ ಮದನಾದಿ ಅಲ್ಲಮ ಪ್ರಭುದೇವರ ಐಕ್ಯಸ್ಥಾನವಿದ್ದದ್ದು ಸ್ಪಷ್ಟವಾಗಿ ಕಂಡು ಬರುತ್ತದೆ. ಇದು ಅಲ್ಲದೆ ಇದಕ್ಕೆ ಇನ್ನೊಂದು ಪ್ರಬಲವಾದ ಕಾರಣವಾದರೂ ಉಂಟು. ಅದಾವದೆಂದರೆ— ತೇರದಾಳ ದಲ್ಲಿಯ ಶ್ರೀ ಪ್ರಭುದೇವರ ಬೃಹನ್ಮಠಕ್ಕಿರುವ ಭೂದಾನ ಪತ್ರಗಳೂ, ಸನದ ಪತ್ರದೊಳಗಿನ ಶಬ್ದಗಳೂ, ಅದರಂತೆ ಆ ಬೃಹನ್ಮಠದೊಳಗಿನ ಶ್ರೀ ಪ್ರಭುದೇವರ ಐಕ್ಯ ಸ್ಥಾನದ (ಶೂನ್ಯ ಸಿಂಹಾಸನದ) ಈ ವರೆಗೆ ಅವ್ಯಾಹತ ರೀತಿಯಿಂದ ಮತ್ತು ವೈಭವದಿಂದ ನಡೆದಂಥ ವಿಧಿಯುಕ್ತ ವಾದ ತ್ರಿಕಾಲ ಪೂಜೆಯೂ ಶ್ರೀಮಂತ ಒಂಟಮುರಿ ಮತ್ತು ಹನಗಂಡಿ ಸಂಸ್ಥಾನದೊಳಗಿನ ಸನದ ಸೂತ್ರಗಳೂ ಮತ್ತು ಕಾಗದಪತ್ರಗಳೂ, ಹಾಗು ಆ ಮನೆತನಗಳಲ್ಲಿ ಈ ಹೊತ್ತಿನ ವರೆಗೆ ನಡೆಯುತ್ತ ಬಂದ ಶ್ರೀ ಪ್ರಭುದೇವರ ವರ್ಚಸ್ಸೂ ಹಾಗೂ ವೈಭವವೂ ಮತ್ತು ತೇರದಾಳ ದಲ್ಲಿ ಮತ್ತು ಅದರ ಸುತ್ತು ಮುತ್ತಲು ಆದಂಥ ಶ್ರೀಗಳ ಅನೇಕ ಲೀಲೆ ಗಳೂ, ಐತಿಹಾಸಿಕ ಕುರುಹುಗಳೂ, ದಂತಕಥೆಗಳೂ ಮುಂತಾದ ವುಗಳನ್ನು ನೋಡಲಾಗಿ ತೇರದಾಳದಲ್ಲಿ ಶ್ರೀ ಪ್ರಭುದೇವರು ಐಕ್ಯವಾದದ್ದು ನಿಃಸಂದೇಹವಾಗಿ ಸಿದ್ಧವಾಗುತ್ತದೆ. ಇದು ಅಲ್ಲದೆ ಶ್ರೀ ಪ್ರಭುದೇವನು ಶ್ರೀಶೈಲದಲ್ಲಿ ಅಕ್ಕಮಹಾದೇವಿಗೆ ನಿರ್ವಾಣ ಪ್ರಾಪ್ತಿಯ ಮಾರ್ಗವನ್ನು ಹೇಳಿ ಅವಳನ್ನು ಉದ್ಧರಿಸಿದ ಮೇಲೆ ಪುನಃ ಅನೇಕ ವೇಳೆ ಕಲ್ಯಾಣ ಮೊದಲಾದ ಸ್ಥಳಗಳಿಗೆ ಹೋಗಿ ಅಲ್ಲಿ ಅನೇಕ ಭಕ್ತರನ್ನು ಉದ್ಧಾರ ಮಾಡಿದ ಅನೇಕ ಉದಾಹರಣೆಗಳು ಚಾಮರಸನ ಪ್ರಭುಲಿಂಗಲೀಲಾದಿ ಎಷ್ಟೋ ಗ್ರಂಥಗಳಲ್ಲಿ ಸಿಕ್ಕುತ್ತವೆ. ಇನ್ನು ಮಾಯಾದೇವಿಯು ಕಾಮಾ ತುರತೆಯಿಂದ ಮದೋನ್ಮತ್ತಳಾಗಿ ಶ್ರೀ ಪ್ರಭುದೇವರನ್ನು ಆಲಿಂಗಿಸಲು ಉದ್ಯುಕ್ತಳಾಗಲು ಅವಳಿಗೆ ಸಾಕಾರವಾಗಿ ಕಂಡರೂ ಪ್ರಭುದೇವನು ಆ ಮಾಯಾ ದೇವಿಗೆ ವಶವಾಗಲಿಲ್ಲ. ಶರೀರ ಸಿದ್ಧಿಯನ್ನು ಪಡೆದು ಪ್ರಭು ದೇಹಿಯಾಗಿ ಗರ್ವಿಷ್ಠನಾಗಿರುವ ಗೋರಕ್ಷನಿಗೆ “ ನಿಃಶಬ್ದಂ ಬ್ರಹ್ಮ ಮುಚ್ಯತೆ ” ಈ ನ್ಯಾಯದಂತೆ ಖಡ್ಗದಿಂದ ನಿನ್ನ ಶರೀರದ ಮೇಲೆ ಹೊಡೆಯಲು ಖಣ್ ಖಣ್ಣೆಂದು ಶಬ್ದ ಹೊರಟ ಕಾರಣ ಅದಕ್ಕೆ ಲಯ ವಿದೆಯೆಂದು ನಿಶ್ಚಯವಾಗಿ ತಿಳಿ. ಇದು ಶರೀರ ಸಿದ್ಧಿ ಅಲ್ಲವು. ಇದೇ ಖಡ್ಗದಿಂದ ನನ್ನನ್ನು ಹೊಡೆ” ಎಂದು ಆಜ್ಞಾಪಿಸಲು ಗೋರಕ್ಷನು ಪ್ರತ್ಯಕ್ಷ ಕಾಣುವಂಥ ಶ್ರೀ ಪ್ರಭುಮೂರ್ತಿಯನ್ನು ಎಷ್ಟು ಹೊಡೆದಾಗ್ಯೂ ಅದರಿಂದ ನಾದವು ಹೊರಡದೆ ಅವನಿಗೆ ಏನೂ ಬಾಧೆಯಾಗದೆ ಹಾಗೇ

ನಿಂತದ್ದು ಕಂಡು ಆಶ್ಚರ್ಯ ಚಕಿತನಾಗಿ ಆ ಗೋರಕ್ಷನು ಶರಣು ಹೋಗಿ ಶರೀರ ಸಿದ್ಧಿಯು ಸಂಪಾದನೆಗಾಗಿ ವೀರಶೈವ ಧರ್ಮದ ದೀಕ್ಷೆಯನ್ನು ಹೊಂದಿ ಮುಕ್ತನಾದ ಕಥೆಯು ಪ್ರಭುಲಿಂಗ ಲೀಲೆಯಲ್ಲಿ ಪ್ರಸಿದ್ಧವದೆ. ಇಂಥ ಸಿದ್ಧ ಪುರುಷನಿಗೆ ಶ್ರೀಶೈಲದೊಳಗಿನ ಕದಳೀ ಬನದ ಅವಶ್ಯ ಕತೆಯೇ ಇದ್ದಿಲ್ಲ. ಅತ ಏವ ಮೇಲಿನ ವಿವೇಚನಗಳಿಂದ ನೋಡ ಲಾಗಿ ತೇರದಾಳದಲ್ಲಿ ಶ್ರೀ ಪ್ರಭುದೇವರ ಐಕ್ಯಸ್ಥಾನವಿದ್ದದ್ದು ನಿಜವೆಂದೇ ಕಂಡು ಬರುತ್ತದೆ. ಇನ್ನು ಅದೇ ಪ್ರಭುದೇವನು ಈತನೆಂಬುದು ಹೇಗೆ ತಿಳಿಯಬೇಕು, ಇವನೊಬ್ಬ ಬೇರೆ ಪ್ರಭುದೇವನು ಯಾಕಾಗಬಾರದು ಎಂದು ಯಾರಾದರು ವಿಚಾರಿಸಿದರೆ ಅವರಿಗೆ ಉತ್ತರ, ನಿರಂಜನ ವಂಶ ರತ್ನಾಕರದಲ್ಲಿ "ತೇರದಾಳದಲ್ಲಿ ಶ್ರೀ ಪ್ರಭುದೇವನು ನಿರ್ವಾಯವಾದ ನಂತರ ಆ ಸ್ಥಲದಲ್ಲಿ ಒಂದು ಮಠವನ್ನು ಕಟ್ಟಿಸಿ ಆದರಲ್ಲಿ ಶೂನ್ಯಪೀಠ (ಶೂನ್ಯಸಿಂಹಾಸನ) ಎಂಬ ಹೆಸರಿನ ಒಂದು ಗದ್ದುಗೆಯನ್ನು ಸ್ಥಾಪಿಸಿ ಆದರ ಮೇಲೆ ಶ್ರೀ ಪ್ರಭುದೇವನು ಕೊಟ್ಟ ಕೈಯೊಳಗಿನ ಕಮಂಡಲು ರೂಪವಾದ ಮಗೆಯನ್ನಿಟ್ಟು ಅದನ್ನು ಈ ವರೆಗೂ ಪೂಜಿಸುತ್ತಿರುವರು. ಮತ್ತು ಆ ಸ್ಥಲದಲ್ಲಿ ಅನೇಕ ಪೂಜೋತ್ಸವಗಳು ನಡೆಯುತ್ತಿರುವವು. ಅದರಿಂದ ಆ ಶ್ರೀ ಪ್ರಭುದೇವನಿಗೆ ಮಗಿ ಪ್ರಭುಯೆಂದು ಹೆಸರು ಬಿದ್ದಿದೆ" ಎಂದು ಇದ್ದದ್ದನ್ನು ನಾವು ಹಿಂದೆಯೇ ವರ್ಣಿಸಿದ್ದೇವೆ. ಇದರ ಮೇಲಿಂದ ಚಾರುತರ ಸಮ್ಮೋಹನಾಂಗನೂ ಮದನಮರ್ದನನೂ, ಮಾಯಾ ವಿಲಾಸ ನಿರಸನ ಚತುರನೂ ಆದ ಅದೇ ಅನಾದಿ ಪ್ರಭುದೇವನು ಈತನು ಹೌದೆಂಬುದರಲ್ಲಿ ಸಂಶಯವಿಲ್ಲವೆಂದು ಧಾರಾಳವಾಗಿ ಹೇಳಬಹುದು. ಇದು ಅಲ್ಲದೆ ಶ್ರೀಮತ್ ಸಚ್ಚಿದಾನಂದ, ಘನಪರಬ್ರಹ್ಮ, ಸಾಕ್ಷಾತ್ ಪರಶಿವ ಸ್ವರೂಪ ಹಾಗೂ ಶೂನ್ಯಸಿಂಹಾಸನಾಧೀಶನೆಂದು ಅನೇಕ ವೀರಶೈವ ಪುರಾತನ ಕವಿಗಳು ಯಾವ ಪ್ರಭುದೇವನನ್ನು ಸ್ತುತಿಸಿರುವರೋ, ಪಾಲ್ಕುರಿಕೆ ಸೋಮರಾಧ್ಯರು (೧೧೬೫) ತೆಲಗಿನಲ್ಲಿ ಪ್ರಭುಲಿಂಗ ಲೀಲಾ, ಪ್ರಭುದೇವರ ರಗಡ ಎಂಬ ಗ್ರಂಥಗಳಿಂದ ಯಾವ ಪ್ರಭುವಿನನ್ನು ಸ್ತುತಿ ಸಿರುವನೋ; ಕ್ರಿಸ್ತಿ ಶಕ ೧೪೩೦ ರಲ್ಲಿ ಚಾಮರಸನೆಂಬ ಕವಿಯು ಪ್ರಭು ಲಿಂಗ ಲೀಲೆಯೆಂಬ ಗ್ರಂಥದಿಂದ ಯಾವ ಪ್ರಭುದೇವನನ್ನು ಕೊಂಡಾ ಡಿರುವನೋ, ಪಿಡುಪರ್ತಿ ಸೋಮಕವಿಯೆಂಬವನು ಪ್ರಭುಲಿಂಗ ಲೀಲೆ ಯೆಂಬ ತೆಲಗು ಗ್ರಂಥದಿಂದ ಯಾವ ಪ್ರಭುದೇವನನ್ನು ಹೊಗಳಿರು ವನೋ, ಮತ್ತು ಕ್ರಿಸ್ತಿ ಶಕ ೧೬೦೬ ರಲ್ಲಿ ಎಳೆಂದೂರ ಹರೀಶ್ವರನೆಂಬ

ವನು ಕನ್ನಡ ಪ್ರಭುದೇವರ ಪುರಾಣದಿಂದ ಯಾವ ಪ್ರಭುದೇವನನ್ನು ವರ್ಣಿಸಿರುವನೋ ಅದೇ ಪ್ರಭುವಿನ ಅದೇ ಲೀಲೆಗಳನ್ನು ಶ್ರೀಮಂತ ಹನಗಂಡಿ ದೇಸಾಯರ ವಂಶಜನಾದ ಮಗಿಯ ನರೇಂದ್ರ ಕವಿಯು ಕ್ರಿಸ್ತಿ ಶಕೆ ೧೪೩೦ ರ ಸುಮಾರಿನಲ್ಲಿ ೧೧೦೦ ಪದ್ಯಗಳಿಂದ ಹಾಡಿರುವನು. ಈ ಮಗಿಯ ನರೇಂದ್ರ ಕವಿಗೆ ಕವಿತ್ವ ಪೇಳಿದ ಗುರುಬಸವ ಕವಿಯು ತನ್ನ ೧೧೦೦ ಪದ್ಯಗಳಿಂದ ಅದೇ ಪ್ರಭುವಿನನ್ನು ಕೊಂಡಾಡಿರುವನು. ಈ ಗುರುಬಸವನ ಸಪ್ತಕಾವ್ಯದ ಹೊರ್ತು ವಚನಸಾರ ಎಂಬದೊಂದು ಪದ್ಯ ರೂಪವಾದ ಗ್ರಂಥವಿರುವದು. ಈ ಪದ್ಯಗಳ ಮೇಲಿಂದ ಶ್ರೀ ಪ್ರಭುದೇವನು ತೇರದಾಳದಲ್ಲಿಯೇ ಬಯಲಾದದ್ದು ಸಿದ್ಧವಾಗುತ್ತದಲ್ಲದೆ ಶ್ರೀ ಪ್ರಭುದೇವನಿಗೆ ಆತನು ಚನ್ನನಿಗೆ ವಶವಾದದ್ದರಿಂದ ಚನ್ನಪ್ರಭು ಯೆಂದೂ, ಸರ್ವಂತರ್ಯಾಮಿಯಾಗಿರುವದರಿಂದ ಗುಹೇಶ್ವರ (ಕ್ಷೇತ್ರಜ್ಞ) ನೆಂದೂ, ಮಾಯೆಯನ್ನು ಗೆದ್ದದ್ದರಿಂದ ಅಲ್ಲಮನೆಂದೂ, ಶ್ರೀ ಬಸವೇಶ್ವ ರಾದಿ ಶಿವಶರಣರಿಗೆ ಕಲ್ಯಾಣಪಟ್ಟಣದಲ್ಲಿ ಎರಡೆಂಬತ್ತು ಕೋಟಿ ವಚನ ಗಳಿಂದ ತತ್ವೋಪದೇಶ ಮಾಡಿರುವನಾಗಿ ಬಸವ ಪ್ರಭುಯೆಂದೂ, ಮತ್ತು ತೇರದಾಳದಲ್ಲಿ ನಿರ್ವಾಣಯವಾಗುವ ಸಮಯಕ್ಕೆ ತನ್ನ ಕರಕ ಮಂಡಲುವಾದ ಮಗೆಯನ್ನು ಕೊಟ್ಟಿರುವದರಿಂದ ಮಗಿ ಪ್ರಭುಯೆಂದೂ ಹೆಸರುಗಳು ಪ್ರಾಪ್ತವಾಗಿದ್ದು ಈ ಯಾವತ್ತೂ ಹೆಸರುಗಳು ಆ ಅನಾದಿ ಪ್ರಭುದೇವನವೆಂದು ಈ ಪದ್ಯಗಳಿಂದ ವಾಚಕರು ಸಹಜವಾಗಿ ಮನ ಗಾಣಬಹುದು. ಈ ಬಗ್ಗೆ ಸವಿಸ್ತಾರವಾದ ಸಂಗತಿಯನ್ನು ನಾವು ಹಿಂ ದಿನ ಪ್ರಕರಣದಲ್ಲಿ ಕೊಟ್ಟಿರುತ್ತೇವೆ. ಆ ಯಾವತ್ತೂ ಪದ್ಯಗಳು ಸದ್ಯಕ್ಕೆ ಉಪಲಬ್ಧವಿರದಿದ್ದರೂ ಸಿಕ್ಕಷ್ಟೇ ಪದಗಳನ್ನು ಶ್ರೀಮನ್ನಿರಂಜನ ಜಗ ದ್ಗುರು ಗ್ರಂಥಮಾಲೆಯ ಪುಷ್ಪಗಳಲ್ಲಿ ಪ್ರಸಿದ್ಧಿಸಿರುವೆವು. ಆ ಪದಗಳನ್ನು ವಾಚಕರು ಓದಬೇಕೆಂದು ನಾವು ಆಶಿಸುತ್ತೇವೆ. ಹಾಗೆ ಮಾಡಿದರೆ ಪ್ರಪಂಚದಲ್ಲೆಲ್ಲ ಪ್ರಸಿದ್ಧಿಯನ್ನು ಪಡೆದ ಶ್ರೀ ಪ್ರಭುದೇವನು ಮತ್ತು ತೇರದಾಳದಲ್ಲಿ ನಿರ್ವಾಣಯವಾದ ಶ್ರೀ ಪ್ರಭುದೇವನು ಈ ಎರಡೂ ವ್ಯಕ್ತಿ ಗಳು ಒಬ್ಬನೇ ಎಂಬುವದು ವಾಚಕರು ಮನಗಾಣಬಹುದು. ವಾಚಕರ ಅವಗಾಹನಕ್ಕಾಗಿ ಸ್ಥಲಸಂಕೋಚದ ಮೂಲಕ ಮಗಿಯನರೇಂದ್ರ ಕವಿಯ ಒಂದೇ ಪದವನ್ನು ಇಲ್ಲಿ ಕೊಡುತ್ತೇವೆ. (ರಾಗ ಕನ್ನಡ ಕಾಂಬೋದಿ, ಏಕತಾಳ) ಮುದ್ದು ಮುಖದ ಮಗಿಯ ಅಲ್ಲಮ ಅದಿ ಪ್ರಭುವೆ। ಸಿದ್ಧ ವಾಗಿ ಅವನಿಗೆ ಬೇಗ ಬಂದೆ ಪ್ರಭುವೆ ॥ಪಲ್ಲ॥ ಕರವೂರ ಸುಜ್ಞಾನಿ

ನಿರಹಂಕಾರರಿಗೊಲಿದೆ ಪ್ರಭುವೆ। ಭರದಿ ಬನವಾಸಿಗೆ ಬಂದು ನಿಂದೆ ಪ್ರಭುವೆ। ವರವಮಾಯಿ ಸೋಲಿಸಿ ಮುಂದಕ್ಕೆ ತೆರಳಿ ಪ್ರಭುವೆ। ಕರುಣವಿಟ್ಟೆ ಗೊಗ್ಗಿ ದೇವಗೆ ನೀನು ಪ್ರಭುವೆ॥ ೧॥ ಅಲ್ಲಿಂದ ನೀನು ಸೊನ್ನಲಪುರಕೆ ಬಂದೆ ಪ್ರಭುವೆ। ಬಲ್ಲಿದ ಸಿದ್ಧರಾಮನ ಗರ್ವಕೆಡಿಸಿ ಪ್ರಭುವೆ। ಕಲ್ಯಾಣಹೊಕ್ಕು ಪ್ರಥಮರ ಕೂಡ ಮೆರಿದಿ ಪ್ರಭುವೆ। ಸುಲಭ ಬಸವೇಶಂಗೆ ಕೃಪೆಯಿತ್ತೆ ಪ್ರಭುವೆ॥ ೨॥ ಧರೆಗೆ ತ್ರಿದಳವಾದ ಪುರದಿ ನಿಂದೆ ಪ್ರಭುವೆ। ಪರಸಿಪನ್ನಾ(ು) ದೇಶಬಂದಿತು ಪ್ರಭುವೆ। ನರೇಂದ್ರ ಮಗಿಯಗೆ ದಯದಿ ಸಲಹು ಪ್ರಭುವೆ। ದುರಿತ ದೋಷಂಗಳ ಪರಿಹರಿಸು ಪ್ರಭುವೆ॥ ೩॥ ಇದರ ಮೇಲಿಂದ ನೋಡಲಾಗಿ ಕಲ್ಯಾಣದಲ್ಲಿ ಬಸವಾದಿ ಪ್ರಮಥರ ಕೂಡ ಇದ್ದಂಥ ಶ್ರೀಪ್ರಭು ದೇವನೇ ತೇರದಾಳಕ್ಕೆ ಬಂದು ಅಲ್ಲಿಯೇ ಬಯಲಾದದ್ದು ನಿಜವಿರುತ್ತದೆ. ಮತ್ತು ಈ ಮಗಿಯನರೇಂದ್ರ ಕವಿಯು ತನ್ನದೊಂದು ಪದ್ಯದಲ್ಲಿ "ಕಲಿಯುಗ ದೊಳು ತಾನು ದಲದಂಕನಾಗಿರ್ದು ಬಲುಶಾಸ್ತ್ರದೊಳಗೆಲ್ಲ ಒಲವ ಯೊಳು ಗುರುಕರುಣವ ಪಡೆದಿದ್ದ ಸಲೆಪುರಾಣ ಚನ್ನಪ್ಪನ ಸದನದ ದಾಸಿ ನಾ" ಎಂದು ಶ್ರೀ ಚನ್ನಪ್ರಭು ಕವಿಯನ್ನು ಸ್ತುತಿಸಿರುವನು. ಈ ಚನ್ನ ಶ್ರೀಪ್ರಭು ಕವಿಯು ತನ್ನ ಒಂದು ಪದ್ಯದಲ್ಲಿ "ಕರಿಕಾಲಚೋಳಗೆ ಒಲಿದ ದೇವನು। ಕರುಣದಿಂದಲಿ ಬಂದನು। ವೀರಧೀರ ಕೃಷ್ಣೇಂದ್ರ ಸತಿಗೆ ವರವಕೊಟ್ಟ ಪ್ರಭುವಿಗೆ"॥ ಎಂದು ಹೇಳಿರುವನು. ಅಂದರೆ ಕರಿಕಾಲಚೋಳನನ್ನು ಯಾವ ಪ್ರಭುದೇವನು ಉದ್ಧಾರ ಮಾಡಿದನೊ ಆದೇ ಪ್ರಭುದೇವನು ಹನಗಂಡಿ ದೇಸಾಯರ ಮೂಲ ಪುರುಷನಾದ ಕೃಷ್ಣ ಗೌಡನನ್ನು ಉದ್ಧರಿಸಿದಂತೆ ಹೇಳಿರುವನು. ಇದರ ಮೇಲಿಂದ ತೇರದಾಳದಲ್ಲಿ ಬಯಲಾದ ಪ್ರಭುದೇವನೇ ಕಲ್ಯಾಣದಲ್ಲಿ ಪ್ರಮಥರ ಕೂಡ ಇದ್ದದ್ದು ಸಹಜ ಸಿದ್ಧವಾಗುತ್ತದೆ. ಇದು ಅಲ್ಲದೆ ಮುಂಬಯಿ ಇಲಾಖೆಯ ಗ್ಯಾಝಿಟಿಯರ್ ಕರ್ನಾಟಕ ಪ್ರಕರಣ ೧೩, ಮಹತ್ವದ ಸ್ಥಳಗಳು, ಅಲತಗಿ, ಪುಟ ೪೩೭ ರಲ್ಲಿ "ಅಲತಗಿಯಿಂದ ಒಂದು ಮೈಲು ಅಂತರದ ಮೇಲೆ ಲಿಂಗಾಯತರ ಗುರುವಾದ ಅಲ್ಲಮಪ್ರಭುವಿನ ಗುಡಿಯು ಆದೆ. ಈ ದೇವರ ದರ್ಶನಕ್ಕೆ ಮುಖ್ಯವಾಗಿ ಲಿಂಗಾಯತರು ಮತ್ತು ಜೈನರು ಹೋಗುವರು. ಈ ವಿಷಯಕ್ಕೆ ಒಂದು ಕಥೆಯುಂಟು. ಅದು ಏನಂದರೆ— ಲಿಂಗಾಯತರ ಗುರುವಾದ ಪ್ರಭುವು ಬಸವನಿಂದ ಪ್ರಸಿದ್ಧಿ ಹೊಂದಿದ ಕಲ್ಯಾಣ ಪಟ್ಟಣದಿಂದ ಅಲತಗಿಗೆ ಬಂದನು. ಇವನ ಶಿಷ್ಯ ನಾದ ಆದಿಲಿಂಗನು ತನ್ನ ಗುರುವಿನ ಶೋಧಮಾಡುತ್ತ ಅವನ ಹಿಂದಿ

ನಿಂದ ಅಲತಗಿಯ ವರೆಗೆ ಬಂದನು. ಆದಾಗ್ಯೂ ಗುರುವಿನ ಶೋಧ ವಾಗಲಿಲ್ಲ. ಆಗ್ಗೆ ಪ್ರಭುದೇವನು ಜೀವಂತ ಸಮಾಧಿಯನ್ನು ಹೊಂದಿರ ಬೇಕೆಂದು ಆದಿಲಿಂಗನಿಗೆ ಅನಿಸಿತು. ತನ್ನ ಗುರುವಿನ ವಿಷಯವಾಗಿ ಭಕ್ತಿಯನ್ನು ತೋರಿಸುವದರ ಸಲುವಾಗಿ ಪ್ರಭುದೇವರ ಹೆಸರಿನಿಂದ ಅಲತಗಿಯಲ್ಲಿ ಒಂದು ಗುಡಿಯನ್ನು ಕಟ್ಟಿಸಿ ಅದರಲ್ಲಿ ಒಂದು ದೀವಿಗೆ ಯನ್ನು ಹಚ್ಚಿದನು. ಆ ದೀವಿಗೆಯು ಈಗ್ಯೂ ಅಲ್ಲಿ ಉರಿಯುತ್ತಿರುವದು. ಮತ್ತು ಅದನ್ನು ಜನರು ಪೂಜಿಸುತ್ತಿರುವರು. ” ಹೀಗೆ ಹೇಳಿದೆ. ಇದರ ಮೇಲಿಂದ ಮೇಲೆ ಹೇಳಿದಂತೆ ಈ ಆದಿಲಿಂಗೇಶನಿಗೆ ಶ್ರೀ ಪ್ರಭುದೇವನು ತೇರದಾಳದಲ್ಲಿ ಅಧಿಕಾರ ಕೊಟ್ಟು ಎಲ್ಲ ಬಿರುದುಗಳೊಡನೆ ದಿಗ್ವಿಜಯ ದೆಶೆಯಿಂದ ಹೊರಗೆ ಕಳುಹಿಸಿರಲು ಆ ಆದಿಲಿಂಗನಿಗೆ ಅಲತಗಿಯ ಮುಕ್ಕಾಮಿನಲ್ಲಿ ತನ್ನ ಗುರುವಾದ ಶ್ರೀ ಪ್ರಭುದೇವನು ತೇರದಾಳದಲ್ಲಿ ಬಯಲಾದದ್ದರ ವಾರ್ತೆಯು ಹತ್ತಿರಬಹುದು. ಮತ್ತು ಶ್ರೀ ಪ್ರಭು ದೇವನಿಗೆ ದಿಗ್ವಿಜಯು ಸಾಕಾಗಿಯೇ ತಾನು ತೇರದಾಳದಲ್ಲಿ ಉಳಕೊಂ ಡದ್ದು ಮತ್ತು ಆ ಮೇಲೆ ತನ್ನ ಇಚ್ಛೆಯ ಮೇರೆಗೆ ಅಲ್ಲಿಯೇ ಬಯಲಾ ದದ್ದು ಸಿಜವಿರುತ್ತದೆ. ಈ ಆದಿಲಿಂಗನ ಗುರುವಾದ ಅಲ್ಲಮಪ್ರಭುವಿಗೆ ಬಸವಪ್ರಭುಯೆಂದು ತೋಂಟದಾರ್ಯನು ತನ್ನ ವಚನವಲ್ಲಿ ಹೇಳಿರು ವನು. ಆದುದರಿಂದ ಅಲ್ಲಮಪ್ರಭುವೆಂದರೆ ಬಸವಪ್ರಭು, ಮತ್ತು ಬಸವ ಪ್ರಭುವೆಂದರೆ ಅಲ್ಲಮಪ್ರಭುವೆಂಬುವದು ಸಹಜ ಸಿದ್ಧವಾಗುವದು. ಇನ್ನು ಹಿಂದಿನ ಪ್ರಕರಣದಲ್ಲಿ ವರ್ಣನೆ ಮಾಡಿದಂತೆ ಮಂಗಸೂಳಿ, ಮಾರಿಹಾಳ, ಪ್ರಭುದೇವರ ಗುಡ್ಡ, ಚಿಮ್ಮಡ, ಜಮಖಂಡಿ, ಜಂಬಿಗಿ, ಚಿಕ್ಕೋಡಿ, ಚಿಂಚಣಿಗಿ ಸಿದ್ಲಿಹಾಳ, ಮತ್ತು ಒಂಟಮುರಿ ಮುಂತಾದ ಊರಗಳಲ್ಲಿರುವ ಶ್ರೀ ಪ್ರಭು ದೇವನ ದಿವ್ಯಸ್ಥಾನದ ಪೂಜಕರೂ ಹಾಗೂ ಸದ್ಭಕ್ತರೂ ಮೇಲಿಂದ ಮೇಲೆ ತೇರದಾಳಕ್ಕೆ ಬಂದು ದಂಡ ಖಂಡನಾದಿಗಳನ್ನು ಕೊಟ್ಟು ದರ್ಶನಾಶೀರ್ವಾ ದಗಳನ್ನು ತೆಗೆದುಕೊಂಡು ಈಗ್ಯೂ ಹೋಗುತ್ತಿರುವರು. ಇದರ ಮೇಲಿಂ ದಾದರೂ ತೇರದಾಳ ಸ್ಥಾನವು ಮುಖ್ಯವಾಗಿ ಶ್ರೀ ಪ್ರಭುದೇವರು ಅಲ್ಲಿಯೇ ಬಯಲಾದನೆಂಬದನ್ನು ವಾಚಕರು ಮನಗಾಣಬಹುದು. ಅದರಂತೆ ಶ್ರೀ ಪ್ರಭುದೇವನ ಷಟ್‌ಸ್ಥಲದ ವಚನಗಳಿಗೆ ಟೀಕೆಯನ್ನು ಬರೆದ ಮಹಾಲಿಂಗ ದೇವ (೧೪೨೫) ಮತ್ತು ಆತನ ಶಿಷ್ಯನಾದ ಕುಮಾರ ಬಂಕನಾಥ (೧೪೩೦) ಈ ಉಭಯತರ ಸಮಾಧಿಗಳು ಅನುಕ್ರಮವಾಗಿ ಮಹಾಲಿಂ ಗಪುರ, ( ಸಂಸ್ಥಾನ ಮುಧೋಳ) ಮತ್ತು ರಾಯಭಾಗ ( ಸಂಸ್ಥಾನ

ಕೊಲ್ಹಾಪೂರ) ಗಳಲ್ಲಿ ಇರುವವು. ಮಹಾಲಿಂಗಪುರ ತೇರದಾಳದಿಂದ ೫ ಮೈಲಿನ ಮೇಲೆ ಮತ್ತು ರಾಯಭಾಗವು ೧೫ ಮೈಲುಗಳ ಮೇಲೆ ಇರುತ್ತವೆ. ಇದರ ಮೇಲಿಂದಲೂ ತೇರದಾಳದಲ್ಲಿಯೇ ಶ್ರೀ ಪ್ರಭುದೇವನು ಐಕ್ಯನಾದನೆಂಬುವದು ಮನವರಿಕೆಯಾಗುವದು. ಇದು ಅಲ್ಲದೆ ತೇರದಾಳದ ಸುತ್ತುಮುತ್ತಲು ೧೦೦ ಹರದಾರಿ ಪ್ರಮಾಣದ ವರೆಗೆ ಇರುವಂಥ ಎಷ್ಟೋ ಬ್ರಾಹ್ಮಣ, ಜೈನ, ಲಿಂಗಾಯತ ಮತ್ತು ಉಳಿದ ಹಿಂದೂ ಜನರ ಸಣ್ಣ ದೊಡ್ಡ ಮನೆತನಗಳಲ್ಲಿ ತೇರದಾಳದ ಶ್ರೀ ಪ್ರಭುಸ್ವಾಮಿಯು ಕುಲಸ್ವಾಮಿಯಾಗಿ ಪೂಜೆಗೊಂಬುತ್ತಿರುವನು ಮತ್ತು ಆ ಮನೆತನದವರು ತಮ್ಮ ಜಗುಲಿಗಳ ಮೇಲೆ ಶ್ರೀಪ್ರಭುದೇವರ ಹೆಸರಿನಿಂದ ಒಂದು ಹಿತ್ತಾಳಿಯ ಮಗಿಯನ್ನಿಟ್ಟು ಅದರ ಪೂಜೆಯನ್ನು ನಿತ್ಯ ಮಾಡಿ ಕೊಂಡು ವರ್ಷದೊಳಗೆ ಒಂದಾವರ್ತಿಯಾದರೂ ತೇರದಾಳಕ್ಕೆ ಬಂದು ದಂಡ ಖಂಡನಾದಿಗಳನ್ನು ಕೊಟ್ಟು ದರ್ಶನಾಶೀರ್ವಾದಗಳನ್ನು ತೆಗೆದು ಕೊಂಡು ಹೋಗುತ್ತಿರುವರು. ಇವುಗಳಲ್ಲಿಯ ಎಷ್ಟೋ ಮನೆತನಗಳು ಪುರಾತನವೂ ಮತ್ತು ಇತಿಹಾಸ ಪ್ರಸಿದ್ಧವೂ ಆಗಿರುವವು. ಅವುಗಳಲ್ಲಿ ಶ್ರೀಮಂತ ಒಂಟಮುರಿ ಮತ್ತು ಹನಗಂಡಿ ಈ ಎರಡು ಮನೆತನಗಳ ವಿವರಣೆಯನ್ನು ನಾವು ಹಿಂದಿನ ಪ್ರಕರಣದಲ್ಲಿ ಸವಿಸ್ತಾರವಾಗಿ ವರ್ಣಿಸಿದ್ದೇವೆ. ಈ ಮಾತಿನ ವಿಚಾರವನ್ನು ವಾಚಕರು ಚನ್ನಾಗಿ ಮಾಡಿದರೆ ಶ್ರೀ ಪ್ರಭುದೇವರು ತೇರದಾಳದಲ್ಲಿ ಬಯಲಾದ ತರುವಾಯ ಅವನ ಹೆಸರಿನಿಂದ ಮಗೆಯನ್ನಿಟ್ಟು ಪೂಜಿಸುವ ರೂಢಿಯು ಈ ಮನೆತನಗಳಲ್ಲಿ ಇದ್ದದ್ದು ಮನಗಾಣಬಹುದು. ಅತ ಏವ ತೇರದಾಳದಲ್ಲಿ ಐಕ್ಯನಾದ ಶ್ರೀ ಪ್ರಭುದೇವನು ಮತ್ತು ಪುರಾಣಗಳಲ್ಲಿ ವರ್ಣಿಸಲ್ಪಟ್ಟ ಶ್ರೀ ಪ್ರಭುದೇವನು ಒಬ್ಬನೇ ಎಂದು ಹೇಳುವದರಲ್ಲಿ ಎಳ್ಳಷ್ಟಾದರೂ ಸಂಶಯವು ಬರುವದಿಲ್ಲ. ಆದುದರಿಂದ ಬಬಲೇಶ್ವರದ ಪುರಾಣಿಕ ಸಿದ್ಧಮಲ್ಲಾರ್ಯನು ಒಂದು ಕಡೆ "ಸಿದ್ಧರಾಮನ ಪೊಳೆದು ಗುಡ್ಡರ। ಯುದ್ಧವನು ಜಯಿಸುತ್ತ ಫಣಿದ್ಯಗ। ರದ್ದಣಿಗೆ ಸೊನ್ನಲಪುರವು ಬೇಯಲ್ಕೆ ಕೃಪೆಮಾಡಿ॥ ಇದ್ದ ರೀತಿಯ ಪೇಳಿ ಲಿಂಗವ। ಬದ್ಧಿಸುತರಾಮಂಗೆ ಗೊಗ್ಗಯ। ಗದ್ದೆಯಲಿ ಉಪದೇಶವಿತ್ತ ಮಗೇಶ ಶರಣೆಂಬೆ" ಎಂದು ಶ್ರೀಮದನಾದಿ ಅಲ್ಲಮಪ್ರಭುದೇವನಿಗೆ ಮಗೀಶನೆಂದು ಸಂಬೋಧಿಸಿದ್ದು ವಾಚಕರು ಕಾಣಬಹುದು. ಆದುದರಿಂದ ಮಗೀಶನೆಂದರೆ ಪ್ರಭುದೇವನೆಂಬುದು ಸಹಜ ಸಿದ್ಧವಾಗುತ್ತದೆ.

ನಿರಂಜನ ವಂಶರತ್ನಾಕರದಲ್ಲಿ ಹೇಳಿರುವಂತೆ ತೇರದಾಳದಲ್ಲಿ ಶ್ರೀ ಪ್ರಭುದೇವನು ಐಕ್ಯವಾಗುವ ಸಮಯದಲ್ಲಿ ತಮ್ಮ ಕೆಲವು ಕುರುಹುಗಳನ್ನು ದಯಪಾಲಿಸಿದರೆ ಅವುಗಳನ್ನು ಪೂಜಿಸಿಕೊಂಡು ಇರುವೆವೆಂದು ಬೇಡಿಕೊಳ್ಳುವವರೊಳಗೆ ಶಿವಮೂರ್ತೆಪ್ಪನೆಂಬ ಒಬ್ಬ ವೀರಶೈವ ಸದ್ಭಕ್ತನಿದ್ದನು. ಆತನಿಗೆ ಶ್ರೀ ಪ್ರಭುದೇವನು ತನ್ನ ಎರಡೂ ಹಾವುಗೆಗಳನ್ನು ಕೊಟ್ಟನು. ಅವುಗಳನ್ನು ಪೂಜಿಸಿಕೊಂಡು ಇರುತ್ತಿರಲಾಗಿ ಕೆಲವು ವರ್ಷಗಳ ಮೇಲೆ ಪರಚಕ್ರಗಳ ಗೊಂದಲವೆದ್ದಿತು. ಆದಕ್ಕಂಜಿ ಅವನು ಆ ಹಾವುಗೆಗಳನ್ನು ಸಂಗಡ ತೆಗೆದುಕೊಂಡು ಸಹಕುಟುಂಬವಾಗಿ ಬೇರೂರಿಗೆ ನಡೆದನು. ದಾರಿಯಲ್ಲಿ ಒಂದು ನದಿಗೆ ಹೆಚ್ಚು ಪ್ರವಾಹ ಬಂದಿದ್ದರಿಂದ ಉಡಿಯೊಳಗೆ ಹಾವುಗೆಗಳನ್ನು ಕಟ್ಟಿಕೊಂಡು ನದಿಯನ್ನು ದಾಟುವಷ್ಟರಲ್ಲಿ ಆ ಹಾವುಗೆಗಳು ಜಾರಿ ನೀರಿನಲ್ಲಿ ಬಿದ್ದವು. ಗಾಬರಿಯಾಗಿ ತೆಗೆದುಕೊಳ್ಳುವಷ್ಟರಲ್ಲಿ ಅವುಗಳಲ್ಲಿ ಒಂದು ಕೈಗೆ ಸಿಕ್ಕಿತು. ಮತ್ತೊಂದು ಘಟಸರ್ಪವಾಗಿ ಹರಿದು ಹೋಯಿತಂತೆ. ಅದರಿಂದ ಆತನು ಭಯಭೀತನಾಗಿ ಉಳಿದ ಒಂದು ಹಾವುಗೆಯ ಮೇಲೆ ಇಷ್ಟಲಿಂಗದಂತೆ ಕಾಂತಿಯನ್ನು ಕೂಡ್ರಿಸಿ ಅದನ್ನೇ ನಿತ್ಯ ಪೂಜಿಸತೊಡಗಿದನು. ಹೀಗಿರುತ್ತಿರಲು ಕಾಲಾಂತರದಲ್ಲಿ ಆತನು ನೀಲಿಯ ಬಣ್ಣದ ವ್ಯವಹಾರದಲ್ಲಿ ವಿಶೇಷ ಲಾಭಹೊಂದಿ ಸಂತತಿ ಸಂಪತ್ತುಳ್ಳವನಾಗಿ ವಿಶೇಷ ಘನತೆಗೇರಿದನು. ಇತ್ತಿಚೀಗೆ ಕಾಲಮಾನಕ್ಕನುಸರಿಸಿ ಆ ಮನೆತನದವರು ದರಿದ್ರತನಕ್ಕೀಡಾಗಿ ಬೇರೆ ಕಡೆಗೆ ಹೋಗಿರುವರು. ಈ ಹಾವುಗೆಯು ೧೮ ಇಂಚು ಉದ್ದ ೬ ಇಂಚ ಅಗಲು ೪ ಇಂಚು ದಪ್ಪ ಇತ್ತು. ಅದನ್ನು ಕಣ್ಣಾರೆ ಕಂಡವರು ಈಗಲೂ ತೆರದಾಳದಲ್ಲಿ ಎಷ್ಟೋ ಜನರು ಜೀವಂತರಿರುವರು. ಆದರೆ ಈಗ್ಗೆ ಆ ಹಾವುಗೆಯು ಇಲ್ಲದಂತಾಗಿದೆ. ಇದರ ಮಹಿಮೆಯನ್ನು ಶ್ರೀ ಪ್ರಭುದೇವನೇ ಬಲ್ಲ. ಮೇಲಿನ ಎಲ್ಲ ವಿವೇಚನೆಗಳಿಂದ ನೋಡಲಾಗಿ ತೇರದಾಳದಲ್ಲಿಯೇ ಶ್ರೀ ಮದನಾದಿ ಅಲ್ಲಮಪ್ರಭುದೇವನು ಬಯಲಾದದ್ದರಲ್ಲಿ ಏನೂ ಸಂಶಯವಿಲ್ಲೆಂದು ವಾಚಕರು ಮನಗಾಣಬಹುದು.

ರಾವಸಾಹೇಬ ಹಳಕಟ್ಟಿಯವರ ಮೊದಲಿನ ಲೇಖಕ್ಕೆ ಶ್ರೀಯುತ ಹುಂಡೇಕಾರ ವಕೀಲರು ಕೊಟ್ಟ ಉತ್ತರಗಳನ್ನು ನೋಡಲಾಗಿ ರಾವಸಾಹೇಬ ಹಳಕಟ್ಟಿಯವರ ಯಾವತ್ತೂ ಸಂಶಯಗಳು ದೂರಾದಂತೆ ವಾಚಕರು ಕಾಣಬಹುದು. ಆ ಮೇಲೆ ರಾವಸಾಹೇಬ ಹಳಕಟ್ಟಿಯವರು

ತೆಗೆದ ಆಕ್ಷೇಪಣಗಳ ಮತ್ತು ಶ್ರೀನಿವಾಸಮೂರ್ತಿಯವರ ಸಂಶಯಗಳ ನಿರಸನವಾದರೂ ಈ ನಮ್ಮ ಲೇಖನದಿಂದ ಬಹು ಅಂಶದಿಂದ ಆಗಿರ ಬೇಕೆಂದು ನಾವು ನಂಬುತ್ತೇವೆ. ಆದರೂ ಒಂದೆರಡು ಸಂಶಯಗಳ ವಿಶೇಷ ಸ್ಪಷ್ಟೀಕರಣವನ್ನು ಮಾಡಿ ಈ ಲೇಖವನ್ನು ಮುಗಿಸುತ್ತೇವೆ. ರಾವಸಾಹೇಬ ಹಳಕಟ್ಟಿಯವರು ತಮ್ಮ ಆಕ್ಷೇಪಣೆಯಲ್ಲಿ "ಶ್ರೀಯುತ ಹುಂಡೇಕಾರರವರು ಕೊಟ್ಟ ಬಸವಪ್ರಭು ಮೊದಲಾದ ೧೫ ಹೆಸರುಗಳು ಅಲ್ಲಮಪ್ರಭುವಿನ ಪರ್ಯಾಯನಾಮಗಳಾಗಿರದೆ, ಅವು ಮಗಿ ಪ್ರಭು ಅಥವಾ ಬಸವಪ್ರಭುವಿನ ಪರ್ಯಾಯನಾಮಗಳು ಏಕೆ ಇರಬಾರದು? ಇದಾದರೂ ಅಷ್ಟೇ ಸಂಭವನೀಯವಾಗಿದೆ" ಎಂದೂ ಎರಡನೇ ಪ್ರಶ್ನದಲ್ಲಿ "ಈಗಿನ ಪದ್ಯಗಳಲ್ಲಿ ಬಸವಪ್ರಭುಸ್ವಾಮಿಗಳಿಗೆ ಅಲ್ಲಮನೆಂತಲೂ ಅಲ್ಲಲ್ಲಿ ನಾಮನಿರ್ದೇಶವಿರುತ್ತದೆ." ಎಂದೂ ಮತ್ತು ಅದರಂತೆ ಅಂತ್ಯಭಾಗದಲ್ಲಿ "ಹನಗಂಡಿ ದೇಸಾಯರಾದ ಮಗೆಪ್ಪ ದೇಸಾಯಿ, ಚನ್ನಪ್ಪ, ಮತ್ತು ಗುರುಬಸವ ಇವರಿಂದ ರಚಿತವಾದ ೩೩೦೦ ಪದ್ಯಗಳಲ್ಲಿ ಈಗ ಉಪಲಬ್ಧವಾಗಿರುವ ೧೨೭ ಪದ್ಯಗಳನ್ನು ಮಾತ್ರ ಪ್ರಸಿದ್ಧಿಸಿದ್ದಾರೆ. ಆದರೆ ಈ ಎಲ್ಲ ಪದ್ಯಗಳು ಪ್ರಸಿದ್ಧವಾದ ಬಳಿಕ ಬಸವಪ್ರಭುಗಳ ವಿಷಯವಾಗಿ ಹೆಚ್ಚಿಗೆ ಸಂಗತಿಗಳು ಹೊರಬೀಳುವ ಸಂಭವವದೆ" ಎಂದು ಹೇಳಿ "ಈ ಮಗಿ ಪ್ರಭುವು ಪೂರ್ವದ ಅಲ್ಲಮಪ್ರಭುವಿನ ಸೂತ್ರದವರಾದ್ದರಿಂದ ಮೂಲ ಪೀಠಾಧಿಪತಿಗಳ ನಾಮನಿರ್ದೇಶದಿಂದ ಅವರನ್ನು ಪೂಜ್ಯಭಾವದಿಂದ ಸಂಬೋಧಿಸುವ ರೂಢಿಯನ್ನು ಈ ಪದ್ಯಗಳನ್ನು ರಚಿಸಿದವರು ಅನುಸರಿಸಿರಬಹುದು," ಎಂಬದರ ಸಾರಾಂಶವನ್ನೇ ಶ್ರೀಯುತ ಎಮ್. ಆರ್. ಶ್ರೀನಿವಾಸಮೂರ್ತಿಯವರು ತಮ್ಮ ಲೇಖದಲ್ಲಿ "ಅಲ್ಲಮಪ್ರಭುವಿನ ಸಾಂಪ್ರದಾಯದವರಾಗಿ, ಅಲ್ಲಮಪ್ರಭುವಿನ ಮಹತ್ವವನ್ನು ತೇರದಾಳದ ಮಠಾಧಿಪತಿಗಳಲ್ಲಿಯೂ ಆರೋಪಿಸಿ ಕೀರ್ತನಕಾರರು ಕೆಲವು ಕೀರ್ತನೆಗಳನ್ನು ರಚಿಸಿರಬಹುದೇ" ಎಂದು ಬರೆದು ಸಂಶಯಗ್ರಸ್ತರಾಗಿರುವರು. ಆದರೆ ಮೂಲ ಮಠಾಧಿಪತಿಗಳ ಹೆಸರಿನಿಂದ ಅವರ ತರುವಾಯದ ಪೀಠಸ್ಥರಿಗೆ ಸಂಬೋಧಿಸಿ ಸ್ತುತಿಸುವ ರೂಢಿಯು ವಿರಕ್ತರೊಳಗಿನ ಅಶಾಸ್ತ್ರೀಯವಾದ ಸಮಯಭೇದವು ಆರಂಭವಾದಂದಿನಿಂದ ಅಂದರೆ ೧೮ ನೇ ಶತಮಾನದ ಪ್ರಾರಂಭದಿಂದ ಆರಂಭವಾದಂತೆ ಕಂಡುಬರುತ್ತದೆ. ಉದಾಹರಣೆ— ಮುರಿಗೇಶ, ಮಹಾಂತೇಶ, ಕುಮಾರೇಶ ಮತ್ತು ತೋಂಟದಾರ್ಯ ಇತ್ಯಾದಿ. ಮೂಲ ತೋಂಟದಾರ್ಯ (೧೪೭೦) ರ ಕಾಲದಲ್ಲಿ

ಇದು ಇದ್ದಿಲ್ಲವು. ಆದುದರಿಂದ ಗದುಗಿನ ಮಠಾಧಿಪತಿಗಳು ತಮ್ಮ ನಿರಂಜನ ವಂಶ ದರ್ಪಣದಲ್ಲಿ "ಮೂಲ ತೋಂಟದಾರ್ಯರಿಗೆ ಆದಿಪ್ರಭುವೆಂದು ಅನ್ನದೆ ದ್ವಿತೀಯ ಪ್ರಭುವಿನ ಅವತಾರವೆಂದು ಹೇಳಿರುವರು. ರಾವಸಾಹೇಬ ಹಳಕಟ್ಟಿಯವರು "ತೇರದಾಳದಲ್ಲಿ ಸಮಾಧಿಸ್ಥರಾದ ಸ್ವಾಮಿಗಳಿಗೆ ಮಗಿಪ್ರಭು ಎಂಬ ಹೆಸರು ವಾಡಿಕೆಯಲ್ಲಿ ಇದೆ" ಎಂದು ಬರೆದದ್ದು ತೀರ ತಪ್ಪು. ಅದು ಹಾಗಿರದೆ ತೇರದಾಳದಲ್ಲಿಯ ಬ್ರಹನ್ಮಠಕ್ಕೆ ಪ್ರಭುಸ್ವಾಮಿಗಳ ಮಠವೆಂತಲೂ ಹಾಗೂ ಅಲ್ಲಿ ಬಯಲಾದ ಸ್ವಾಮಿಗಳಿಗೆ ಪ್ರಭುಸ್ವಾಮಿಗಳೆಂತಲೂ ನಿಜವಾಗಿ ಈ ಹೊತ್ತಿಗೂ ಜನರು ಅನ್ನುವರು. ರಾವಸಾಹೇಬ ಹಳಕಟ್ಟಿಯವರು ನಿರಂಜನವಂಶರತ್ನಾಕರದೊಳಗಿನ ತೇರದಾಳದ ವಿಷಯವನ್ನು ಎತ್ತಿ "ಈ ಚರಿತ್ರೆಗೂ ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಲ್ಲಿ ಕಂಡುಬರುವ ಮೂಲ ಅಲ್ಲಮಪ್ರಭುವಿನ ಚರಿತ್ರೆಗೂ ಎಷ್ಟು ಅಂತರವಿದೆಂಬುದು ಯಾರಿಗಾದರೂ ಸ್ಪಷ್ಟವಾಗದೆ ಇರಲಾರದು" ಎಂದು ಹೇಳಿದ್ದನ್ನೇ ಮಿ॥ ಶ್ರೀನಿವಾಸಮೂರ್ತಿಯವರು ತಮ್ಮ ಲೇಖಗಳಲ್ಲಿ "ವಂಶರತ್ನಾಕರದಲ್ಲಿರುವ ಬಸವಪ್ರಭು ಚರಿತ್ರೆಗೂ ಪ್ರಭುಲಿಂಗ ಲೀಲಾದಿ ಗ್ರಂಥಗಳಲ್ಲಿ ದೊರೆಯುವ ಅಲ್ಲಮನ ಚರಿತ್ರೆಗೂ ಏನೇನೂ ಸಂಬಂಧವಿಲ್ಲವೆಂಬುದನ್ನು ಪರಸ್ಪರ ಹೋಲಿಕೆಗಳಿಂದ ಹೇಳಬಹುದಾಗಿದೆ" ಎಂದು ಅನುವಾದಿಸಿರುವರು. ಆದರೆ ಈ ಉಭಯತರ ಸಂಶಯಗಳನ್ನು ನಾವು ಮೇಲೆ ಹೇಳಿರುವ "ಮುದ್ದುಮುಖದ ಮಗಿಯ ಅಲ್ಲಮ" ಈ ಒಂದೇ ಪದ್ಯವು ದೂರ ಮಾಡಲಿಕ್ಕೆ ಸಾಕಾಗಿದೆ. ಇನ್ನು ರಾವಸಾಹೇಬ ಹಳಕಟ್ಟಿಯವರು ಅಚ್ಚು ಹಾಕಿಸಿದ ನಿರಂಜನವಂಶರತ್ನಾಕರ ಗ್ರಂಥದ ೧೫ ನೆಯ ಪುಟದಲ್ಲಿ "ಕ್ರಿ. ಶ. ೧೬೫೫ ರ ಸುಮಾರಿನಲ್ಲಿರುವ ಷಡಕ್ಷರಿ ಕವಿಯ ಹೆಸರನ್ನು" ಪುಟ ೬೦ ರಲ್ಲಿ "೧೮ ನೇ ಶತಮಾನದ ಪ್ರಾರಂಭಕ್ಕೆ ಸ್ಥಾಪಿಸಲ್ಪಟ್ಟಂಥ ಒಂಟಮುರಿ ಊರ ಹೆಸರನ್ನೂ" ಮತ್ತು ೧೫ ನೇ ಶತಮಾನದ ಆದಿಯಲ್ಲಿ ಉತ್ಪನ್ನವಾದ ಸಮಯಭೇದದ ಹೆಸರುಗಳನ್ನು ಹೇಳಿ ಅವುಗಳಲ್ಲಿ ಮುರಿಗಿ, ಕೆಂಪಿನ, ಸಂಪಾದನೆ ಮುಂತಾದವುಗಳ ಹೆಸರುಗಳನ್ನೂ ಕೊಟ್ಟಿರುವದರಿಂದ ಈ ನಿರಂಜನವಂಶರತ್ನಾಕರವೆಂಬ ಗ್ರಂಥವು ಬಹು ಅರ್ವಾಚೀನವೆಂದು ಕಂಡು ಬರುವದಲ್ಲದೆ ಈ ಗ್ರಂಥಕರ್ತನಿಗೆ ಎಳ್ಳಷ್ಟಾದರೂ ಐತಿಹಾಸಿಕ ಜ್ಞಾನವು ಇದ್ದಿಲ್ಲವೆಂದು ಮುಂದಿದ ಒಂದೇ ಉದಾಹರಣೆಯಿಂದ ಒಡೆದು ತೋರುವದು. ಅದು ಹೇಗಂದರೆ— ತೋಂಟದಾರ್ಯ

(೧೪೭೦) ನ ತರುವಾಯ ನಿರಕ್ಷರ ಬೋಳಬಸವ (೯೬ ವರ್ಷ, ಸಿದ್ಧವೀರ (೯೪ ವರ್ಷ), ಗುರುಶಿದ್ಧದೇಶಿಕೇಂದ್ರ (೧೦೦ ವರ್ಷ), ಗಗನದಾರ್ಯ (೯೯ ವರ್ಷ), ಮತ್ತು ಸಿದ್ಧವೀರ (೯೦ ವರ್ಷ), ಹೀಗೆ ಐದು ಜನರು ಅನುಕ್ರಮವಾಗಿ ಪರಂಪರೆಯಿಂದ ಶೂನ್ಯಪೀಠವನ್ನು ಅಲಂಕರಿಸಿದರೆಂದು ಹೇಳಿದೆ. ಅಂದರೆ ೧೪೭೦ ಕ್ಕೆ ಈ ವರ್ಷಗಳನ್ನು ಕೂಡಿಸಿದರೆ ೧೯೫೩ ಆಗುತ್ತದೆ. ಇದು ೨೦೦ ವರ್ಷಗಳ ಹಿಂದೆ ಆಗಿ ಹೋದ ಸಿದ್ಧವೀರನ ವರೆಗೆ ೧೯೫೩ ಆದಂತಾಯಿತು. ಇದರ ಮೇಲಿಂದ ನೋಡಲಾಗಿ ಇದು ಎಷ್ಟು ಅಸಮಂಜಸವೂ ಮತ್ತು ಅಪಕ್ವ ವಿಚಾರದ್ದೂ ಎಂದು ತಿಳಿಯದೆ ಇರಲಾರದು. ಇಷ್ಟರ ಮೇಲಿಂದ ಈ ಗ್ರಂಥದಲ್ಲಿ ಹೇಳಿದ್ದೆಲ್ಲ ಐತಿಹಾಸಿಕ ದೃಷ್ಟಿಯಿಂದ ಎಷ್ಟು ಗ್ರಾಹ್ಯವಾದೀತೆಂಬದನ್ನು ವಾಚಕವೃಂದವೇ ವಿಚಾರಿಸತಕ್ಕದ್ದು. ನಾವು ಪ್ರಸಿದ್ಧಿಸಿದ ಪದಗಳು ೧೫ ನೇ ಶತಮಾನದವು. ಮತ್ತು ಮಗಿಯನರೇಂದ್ರ, ಚನ್ನಶ್ರೀಪ್ರಭು, ಹಾಗೂ ಗುರುಬಸವ ಈ ಮೂವರು ೧೫ ನೆಯ ಶತಮಾನದವರೆಂದು ರಾವಸಾಹೇಬ ಹಳಕಟ್ಟಿಯವರೇ ತಮ್ಮ ಮೊದಲಿನ ವಿಮರ್ಶಾತ್ಮಕ ಲೇಖದ ಪ್ರಾರಂಭದಲ್ಲಿ ಒಪ್ಪಿರುವರು. ಅಂದರೆ ಈ ಮೂವರು ಕವಿಗಳು ಪ್ರಭುಲಿಂಗಲೀಲೆಯ ಕರ್ತನಾದ ಚಾಮರಸನ ಸಮಕಾಲಿಕರು. ಒಟ್ಟಿನ ಮೇಲೆ ಶುದ್ಧ ವಿರಕ್ತ ಸಾಂಪ್ರದಾಯದ ಪ್ರವಾಹವು ಸಮಯ ಭೇದದಿಂದ ಕಲಕಾಗುವದಕ್ಕಿಂತ ಮುಂಚಿತವೇ ಈ ಕವಿಗಳು ಈ ಪದ್ಯಗಳನ್ನು ರಚಿಸಿರುವರು. ಮತ್ತು ಇದು ವರೆಗೆ ಮಗಿಯನರೇಂದ್ರನವು ೭೬, ಚನ್ನಶ್ರೀಭುವಿನವು ೧೬೦, ಮತ್ತು ಗುರುಬಸವನವು ೧೫ ಹಾಗೂ ಬೇರೆ ಭಕ್ತರವು ೪೬ ಹೀಗೆ ೨೯೭ ಪದ್ಯಗಳು ಪ್ರಕಟವಾಗಿರುವವು. ಅವುಗಳಲ್ಲಿ ಶ್ರೀಮದನಾದಿ ಅಲ್ಲಮಪ್ರಭುದೇವರಿಗೆ ೧ ಪ್ರಭು, ೨ ಅಲ್ಲಮಪ್ರಭು, ೩ ಬಸವಪ್ರಭು, ೪ ಚೆನ್ನಪ್ರಭು, ೫ ಮಗಿಯಪ್ರಭು, ೬ ಜಂಗಮಲಿಂಗ, ೭ ಮಗಿಯ ಅಲ್ಲಮ, ೮ ಮಾಯಾಕೋಳಾಹಾಳ, ೯ ಆದಿಲಿಂಗ, ೧೦ ಅಲ್ಲಮ, ೧೧ ಅಲ್ಲಯ್ಯ, ೧೨ ನಿರ್ಮಾಯ, ೧೩ ಗುಹೇಶ್ವರ, ೧೪ ನಿರಂಜನ, ೧೫ ಮೊಗ್ಗೆಯ, ೧೬ ತೇರದಾಳವಾಸ, ೧೭ ಬಸವ ಪ್ರಾಣೇಶ, ೧೮ ಬಸವ ಸಂಪ್ರೀತ, ೧೯ ಪಟ್ಟದೊಡೆಯ, ೨೦ ಮಗೀಶ, ೨೧ ಗೋಪ್ರಭು, ೨೨ ಬಸವಪತ್ನ, ಮುಂತಾದ ಹೆಸರುಗಳು ಒಟ್ಟಿಗೆ ನಾಲ್ಕುನೂರು ಸಾರೆಗಿಂತಲೂ ಹೆಚ್ಚಿಗೆ ಬಂದದ್ದು ಓದುಗರು ಕಾಣಬಹುದು. ಆಕ್ಷೇಪನಿರಸನದ ೪ ನೇ ಪ್ರಶ್ನದಲ್ಲಿ "ತೋಂಟದಾರ್ಯರು ತಮ್ಮ ವಚನ ಗ್ರಂಥಗಳಲ್ಲಿ ತಮ್ಮ ಪೂರ್ವಪೀಠಾಧಿ

ಪತಿಗಳ ಹೆಸರನ್ನು ಹೇಳುವಾಗ ಬಸವಪ್ರಭುಸ್ವಾಮಿಗಳು ೯ ನೆಯವರಾಗಿ ಉಲ್ಲೇಖಿಸಿದ್ದಾರೆ. ಆದರೆ ಶೂನ್ಯ ಸಿಂಹಾಸನಕ್ಕೆ ಅಲ್ಲಮಪ್ರಭುವೇ ಮೂಲಿಗನಾಗಿದ್ದರಿಂದ ಬಸವಪ್ರಭು ಎಂದು ಅವರು ಇಲ್ಲಿ ೯ ನೆಯವರಾಗಿದ್ದು ಹೇಳಲಿಕ್ಕೆ ಕಾರಣವೇನು," ಎಂದು ರಾವಸಾಹೇಬ ಹಳಕಟ್ಟಿಯವರು ಕೇಳಿರುವರು.

ತೋಂಟದಾರ್ಯರ ವಚನದಲ್ಲಿಯೂ ನಿರಂಜನವಂಶರತ್ನಾಕರ ಗ್ರಂಥದಲ್ಲಿಯೂ ಒಂದೇ ವಂಶಾವಳಿಯನ್ನು ಕೊಟ್ಟಂತೆ ಶ್ರೀಯುತ ಹುಂಡೇಕಾರ ವಕೀಲರು ತಮ್ಮ ಲೇಖದಲ್ಲಿ ಬರೆದದ್ದನ್ನು ರಾವಸಾಹೇಬ ಹಳಕಟ್ಟಿಯವರು ಒಪ್ಪಿರುವರು. ಒಪ್ಪಿಗೆ ಇಲ್ಲವಾಗಿದ್ದರೆ ತಮ್ಮ ಹತ್ತರಿರುವ ನಿರಂಜನ ವಂಶರತ್ನಾಕರದೊಳಗಿನ ವಂಶಾವಳಿಯನ್ನು ಪ್ರಸಿದ್ಧಪಡಿಸಬೇಕಾಗಿತ್ತು, ಅದನ್ನು ಸಹ ಮಾಡಿಲ್ಲ. ಇದರಂತೆಯೇ ನಿಜಾಚರಣೆ ಎಂಬ ಗ್ರಂಥದಲ್ಲಿಯೂ ಕೂಡ ಇದೇ ಗುರುಪರಂಪರೆಯನ್ನು ಹೇಳಿದೆ. ಈ ಗ್ರಂಥವು ರಬಕವಿಯಲ್ಲಿ ಅಚ್ಚಾಗಿದೆ. ಹೀಗಿರುತ್ತಿರಲು ಇತ್ತೀಚಿಗೆ ಅಚ್ಚಾದ ನಿರಂಜನವಂಶರತ್ನಾಕರದಲ್ಲಿ ಮಾತ್ರ ಅಲ್ಲಮ, ಚನ್ನಬಸವ, ಸಿದ್ಧರಾಮಾದಿಗಳ ಹೆಸರುಗಳನ್ನು ಹೇಳಿ ಆಮೇಲೆ ತೋಂಟದಾರ್ಯರ ವಚನದಲ್ಲಿರುವಂತೆ ಅನಾದಿಗಣೇಶ ಮೊದಲಾದವರ ಹೆಸರುಗಳನ್ನು ಹೇಳಲಾಗಿದೆ. ಇದರ ಮರ್ಮವೇನೋ ತಿಳಿಯದು. ಶೂನ್ಯ ಸಿಂಹಾಸನಕ್ಕೆ ಅಲ್ಲಮನು ಮೂಲಪುರುಷನೆಂದು ತಿಳಿಸಿದ್ದಾರೆ. ಬಸವಪ್ರಭುವಿನ ಹಿಂದಿನ ೮ ಜನರ ಹೆಸರುಗಳು ಕೈಲಾಸದೊಳಗಿನ ಪ್ರಮಥರ ಹೆಸರುಗಳಿದ್ದಂತೆ ಕಂಡು ಬರುತ್ತದೆ. ಮತ್ತು ಈ ೮ ಹೆಸರುಗಳು ಬಸವಪ್ರಭುವಿನ ಮುಂದಿನ ಹೆಸರುಗಳಂತೆ ವಿರಕ್ತರೊಳಗೆ ಪ್ರಚಾರದಲ್ಲಿಲ್ಲವು. ಮತ್ತು ಈ ೮ ರಲ್ಲಿ ನಿರ್ಮಾಯನೆಂಬ ಒಬ್ಬ ಗಣಾಧ್ಯಕ್ಷನು ಅಲ್ಲಮಪ್ರಭುವಾಗಿ ಭೂಲೋಕದಲ್ಲಿ ಅವತರಿಸಿದನೆಂದು ಹರಿಹರನು ತನ್ನ ಪ್ರಭುದೇವರ ರಗಳೆಯಲ್ಲಿ ಹೇಳಿರುವನು. ಆದುದರಿಂದ ಅಲ್ಲಮಪ್ರಭುವೆಂದರೆ ಬಸವಪ್ರಭು ಮತ್ತು ಬಸವಪ್ರಭುವೆಂದರೆ ಅಲ್ಲಮಪ್ರಭು ಹೀಗೆ ಹೇಳುವದರಲ್ಲಿ ಏನೂ ಸಂಶಯವಿಲ್ಲ. ಮೇಲಾಗಿ ಈ ವಿಷಯದಲ್ಲಿ ತೋಂಟದಾರ್ಯರ ವಚನಕ್ಕಿಂತಲೂ ಹೆಚ್ಚಿನ ಪ್ರಾಶಸ್ತ್ಯವು ಇತರ ಗ್ರಂಥಗಳಿಗೆ ಕೊಡಲಿಕ್ಕೆ ಬರಲಾರದು. ಶ್ರೀಯುತ ಎಮ್. ಆರ್. ಶ್ರೀನಿವಾಸಮೂರ್ತಿಗಳು "ಪ್ರಭುಲಿಂಗಲೀಲೆಯ ಸಂಗ್ರಹ" ದ ಪೀಠಿಕೆಯಲ್ಲಿ ಕವಿ, ಕಾವ್ಯ ಹಾಗು ಅದರಲ್ಲಿಯ ಮುಖ್ಯ ವಿಷಯಗಳ ಸಂಬಂಧವಾಗಿ ತಾರತಮ್ಯದಿಂದ ಕಾಲಮಾನ ಹಾಗು ಸ್ಥಾನಗಳನ್ನರಿತು ಜನರ

ಮನಸ್ಸು ನೋಯಿಸದಂತೆ ಲಕ್ಷ್ಮೀಶ ಕುಮಾರ ವ್ಯಾಸಾದಿಗಳ ಕಾವ್ಯಗಳ ಕೂಡ ತುಲನೆಯನ್ನು ಮಾಡಿ ಕನ್ನಡಿಗರಿಗೆ ಬೋಧವಾಗುವಂತೆ ಹೆಚ್ಚಿಗೆ ವಿಸ್ತಾರಪೂರ್ವಕವಾಗಿ ಬರೆಯಬೇಕಾಗಿತ್ತು. ಹಾಗೇ ಮಾಡದೆ ಮುಖ್ಯವಾದ ವಿಷಯಗಳನ್ನು ಬಿಟ್ಟು ಮುಖ್ಯವಲ್ಲದವುಗಳ ಬಗ್ಗೆ ಹೆಚ್ಚಿಗೆ ಬರೆಯುವ ದೆಂದರೆ, ಭಾರತ ಗ್ರಂಥಕ್ಕೆ ಪ್ರಸ್ತಾವನೆಯನ್ನು ಬರೆಯುವವನು ಅದರಲ್ಲಿಯ ಉತ್ತಮವಾದ ರಸಗುಣಾದಿಗಳನ್ನ ಬಿಟ್ಟು, ದ್ರೌಪದಿಯು ಐದು ಮಂದಿ ಗಂಡಂದಿರಕೂಡ ಹೇಗೆ ವ್ಯವರಿಸುತ್ತಿದ್ದಳು, ಆಗಸ್ತ್ಯನು ಕುಂಭದಲ್ಲಿಯೂ ಹಾಗು ಕರ್ಣನು ಕಿವಿಯಲ್ಲಿಯೂ ಹೇಗೆ ಹುಟ್ಟಿದರು ಎಂಬದರ ಬಗ್ಗೆ ಹೆಚ್ಚಿಗೆ ವಿವೇಚಿಸುವಂಥ ಅವಿವೇಕಿಯಂತೆ ಹಾಸ್ಯಾಸ್ಪದವಾಗುವದು. ತುಂಬಿಯು ಕಮಲದ ಮಧುರವಾದ ಮಧುರಸಪಾನವನ್ನು ಮಾಡಿ ಮನ ಬಲ್ಲಂತೆ ಚರಿಸುವದನ್ನು ಕಣ್ಣಾರೆ ಕಂಡೂ, ಆ ರಸಾಸ್ವಾದವನ್ನರಿಯದ ಕಪ್ಪೆಯು ಅದೇ ಕಮಲದ ಬುಡದಲ್ಲಿರುವ ಕೆಸರಿನಲ್ಲಿಯೇ ಆನಂದ ಪಡುವಂತೆ ಈ ಲೇಖಕರ ಅಜ್ಞಾನ ದೃಷ್ಟಿಯು ತೋರುವದು. ಕಾವ್ಯದೊಳಗಿನ ಅಮೌಲ್ಯವಾದ ಗುಣಗಳನ್ನು ವರ್ಣಿಸುವದು ಗುಣ ಗ್ರಾಹಿಗಳಾದ ವಾಙ್ಮಯ ಪ್ರೇಮಿಗಳ ಕೆಲಸವು. ಇನ್ನು ಕಾವ್ಯಗಳಲ್ಲಿ ಇಲ್ಲದ ಸಂಗತಿಗಳ ಬಗ್ಗೆ ಚರ್ಚಿಸುವದೆಂದರೆ "ಅವ್ಯಾಪಾರೇಷು ವ್ಯಾಪಾರಃ" ವಾಗುವದು. ಇದರಲ್ಲಿ ಶ್ರೀಯುತ ಶ್ರೀನಿವಾಸಮೂರ್ತಿಗಳದಾದರೂ ಅದೇ ಹಾಡಾಗಿರುವದು. ಅದು ಹೇಗಂದರೆ— (೧) ಚಾಮರಸನು ತನ್ನ ಗ್ರಂ ಥದಲ್ಲೆಲ್ಲಿಯೂ ಶ್ರೀಪ್ರಭುವಿನ ಬೈಲಾದ ವಿಷಯಕ್ಕೆ ಹೇಳಿಲ್ಲವು. ಇದನ್ನು ಶ್ರೀಯುತ ಶ್ರೀನಿವಾಸಮೂರ್ತಿಗಳು ೩೭ ನೆಯ ಪುಟದಲ್ಲಿ ಒಪ್ಪಿ, ಪುನಃ ಅದರ ಬಗ್ಗೆಯೇ ಚರ್ಚಿಸುವದೂ, (೨) ಅಲ್ಲಮಪ್ರಭುವಿಗೆ ಅಲ್ಲಯ್ಯ ನೆಂದು ಬೇರೆ ಹೆಸರು ಚಾಮರಸನು ಹೇಳದಿರುವದರಿಂದ ಅಲ್ಲಯ್ಯ ಈ ಹೆಸರು ಬೇರೊಬ್ಬ ಶಿವಶರಣರದು ಇರಬಹುದೆಂದೂ, (೩) ಚಾಮರಸನ ಕಾವ್ಯದಲ್ಲಿ ಅಕ್ಕಮಹಾದೇವಿಯು ಕುಮಾರಿ ಎಂದು ಇದ್ದದ್ದು ಅವಳ ಲಗ್ನವಾಗಿತ್ತೆಂದೂ ಹೇಳಿ ದುರ್ಬಲ ಪ್ರಮಾಣಗಳನ್ನು ಕೊಟ್ಟು ಅವುಗಳನ್ನು ಸಿದ್ಧಪಡಿಸಲಿಕ್ಕೆ ಯತ್ನಿಸಿರುವರು. ಅದು ಹೇಗೆ ಸಾಧ್ಯವು? ಬೇಕಾದರೆ ಇವುಗಳ ವಿಷಯವಾಗಿ ಐತಿಹಾಸಿಕ ದೃಷ್ಟಿಯಿಂದ ಸ್ವತಂತ್ರ ಗ್ರಂಥಗ ಳನ್ನು ಬರೆದು ಸಿದ್ಧಮಾಡಬೇಕು. ಇದನ್ನು ಬಿಟ್ಟು ನುರಿತ ಲೇಖಕರು ಹೀಗೆ ಮಾಡುವದು ಒಳಿತಲ್ಲವು. ಒಟ್ಟಿನ ಮೇಲೆ ಪ್ರ. ಲಿ. ಸಂಗ್ರಹದ ಪೀಠಿಕೆಯಿಂದ "ಕವಡಿಚಾಫಾಯಿದಾನಾಹಿ, ಆಣಿ ಘಟಕೇಚಿ ಘುರಸತ ನಾಹಿ" ಎಂಬಂತೆಯಾಗಿದೆ.

# ವೀರಶೈವ ಚಾರಿತ್ರ ರಕ್ಷಣ.

ಲೇಖಕ:— ಶ್ರೀಯುತ ಜೀರಿಗೆ ಬಸವಲಿಂಗಪ್ಪ, ಅರಳೇಪೇಟೆ ಬೆಂಗಳೂರ ಸಿಟಿ.



ಬಸವಾದಿ ಪ್ರಮಥರ ನಿಜತತ್ವಗಳೆಂಬ ಅಮೃತವಳ್ಳಿಗಳು ಈಚಿನ ಬಹಿಃಪ್ರಕಾಶಾಕಾಂಕ್ಷಿಗಳ ಕಲ್ಪಿತಗಳೆಂಬ ಮುಳ್ಳು ಗಿಡಗಳಿಂದ ಆವರಿಸಲ್ಪಟ್ಟು ಲಿಂಗಾಯತ ಮತದ ನಿಜಸ್ವರೂಪವು ಮಾಜಿ ಹೋಗಿ ಕೃತ್ರಿಮದ ಬಣ್ಣದಿಂದ ಕಲ್ಪಿತರೂಪವು ಬಂದಿರುತ್ತದೆ. ಇದು ಬಹಳ ಅನ್ಯಾಯವಾಗಿದೆ. ಬಸವಾದಿ ಎಲ್ಲರ ಶರಣರ ವಚನಗಳನ್ನು ಓದಿ ನೋಡಿದರೆ ಆವರು ಹೋದ ಮಾರ್ಗವೇ ಬೇರೆ, ಅವರ ನಂತರ ಡಾಂಭಿಕ ರಾಶಿಯಿಂದ 'ಈಚಿನವರು ಕಲ್ಪಿಸಿಕೊಳ್ಳುತ್ತ ಬಂದಿರುವ ಹಾದಿಯೇ ಬೇರೆಯಾಗಿರುತ್ತದೆ. ಬಸವಾದಿಗಳು ದೇಶದ ಸಮಾಜಗಳ ಸಂಕಟಗಳನ್ನು ನೋಡಿ ಮರುಕಬಟ್ಟು ಅದನ್ನು ನಿವಾರಿಸುವದಕ್ಕಾಗಿ ಅತ್ಯಂತ ದೇಹ ಚಿತ್ತ ಶ್ರಮಗಳಿಂದ ಸುಧಾರಣೆಯ ತತ್ವಗಳನ್ನು ಮಾಡಿ ಅದನ್ನು ಜನವರ್ಗಕ್ಕೆ ಕೊಟ್ಟು ತಾವು ನಡೆದು ತೋರಿಸಿ ಮಹೋಪಕಾರವನ್ನು ಮಾಡಿ ತಮ್ಮ ಮಣಿಹವನ್ನು ತೀರಿಸಿಕೊಂಡು ಇಹಲೋಕವನ್ನು ಬಿಟ್ಟು ಹೋದರು.

ಈಚಿನವರಿಗೆ ಆಗಿನ ಬಿಸಿ ತಪ್ಪಿ ಅಪ್ಪ ಮಾಡಿದ್ದು ಮಗನಿಗೆ ಸೊಪ್ಪಿನ ಸಮಾನವೆಂಬ ಗಾದೆಯಂತೆ ಅಂತಃಕರಣ ದೃಷ್ಟಿ ತಪ್ಪಿ ಆಡಂಬರದ ದೃಷ್ಟಿಯುಂಟಾಗಿ ಅದು ಹಾಗಿದ್ದರೆ ಸರಿಯಲ್ಲ, ಹೀಗಿದ್ದರೆ ಸರಿ ಎಂದು ನಿಜವನ್ನು ಬದಲಾಯಿಸಿ ಓಲೆಕಂಠಗಳು ಬಿಟ್ಟಯಾಗಿವ ಎಂದು ಕಲ್ಪನೆಗಳನ್ನು ಬರೆದು ಬಸವಾದಿ ಪ್ರಮಥರ ತತ್ವಗಳ ನಿಜಾಂಶಗಳನ್ನೂ, ಅವರ ವಿಷಯಕ ಚರಿತ್ರೆಯ ನಿಜಾಂಶಗಳನ್ನೂ ಮಾಜಿ ಚರಿತ್ರ ಭಗ್ನ ಮಾಡಿರುತ್ತಾರೆ. ಭಾರತ ರಾಷ್ಟ್ರದ ಚರಿತ್ರಕಾರರೇ, ಕರ್ನಾಟಕ ದೇಶದ ಚರಿತ್ರಕಾರರೇ, ಇದಕ್ಕೆ ಈಗ ನೀವು ಏನು ಹೇಳುತ್ತೀರಿ? ರುಚಿಕರವೋ, ರುಚಿಕರವಲ್ಲವೋ— ಚರಿತ್ರದ ನಿಜವುಳಿಯಬೇಕಲ್ಲವೇ? ಮುಂದಿನವರಿಗೆ ಹಿಂದಿನವರು ನಿಜವಾಗಿ ಹೇಗಿದ್ದರು, ಅವರ ನಡೆನುಡಿಗಳು ಹೇಗಿದ್ದವೆಂಬದನ್ನು ತಿಳಿದುಕೊಂಡರೆ ಅದು ಪ್ರಯೋಜನಕಾರಿಯಲ್ಲವೇ? ಹಿಂದಿನವರು ಒಂದು ವಿಧವಾಗಿದ್ದು, ಮುಂದಿನವರು ಒಂದು ವಿಧವಾಗಿ

ತಿಳಿದುಕೊಂಡರೆ ಅದು ಹಾನಿಕರವಲ್ಲವೆ? ಮೇಲಾಗಿ ನಿಜವು ಉಳಿಯು ಬೇಕಾದ ಜಗತ್ತಿನ ಸದ್ವಸ್ತುವಲ್ಲವೆ?

ಲಿಂಗಾಯತರೇ, ಲಿಂಗಾಯತ ಚರಿತ್ರೆಯ ಮೇಲೆ ಅಭಿಮಾನವುಳ್ಳ ಬ್ರಾಹ್ಮಣರೇ, ನೀವು ಚರಿತ್ರೆಯ ನಿಜವುಳಿಯುವದಕ್ಕೆ ನಿರ್ವಂಚನೆಯಿಂದ ಪ್ರಯತ್ನಮಾಡಿರೆಂದು ನಾನು ಬೇಡಿಕೊಳ್ಳುತ್ತೇನೆ. ರುಚಿ ನೋಡಬೇಡಿರಿ. ನಿಜವನ್ನು ನೋಡಿರಿ. ಲಿಂಗಾಯತರು ಇನ್ನೂ ಮುಂದುವರಿದಿರುವದಿಲ್ಲ. ಬೆಳಕಿನ ಆಕಾಂಕ್ಷೆ ಇನ್ನೂ ಲಿಂಗಾಯತರಲ್ಲಿ ಹೋಗಿಲ್ಲ. ಇಂದಿನ ವಿಜ್ಞಾನ ವಿದ್ಯವನ್ನು ಪಡೆದ ಬ್ರಾಹ್ಮಣ ವಿದ್ವನ್ಮಣಿಗಳೇ ಲಿಂಗಾಯತ ಮತದ ನಿಜತತ್ವದ, ಲಿಂಗಾಯತರ ಮತದ ನಿಜ ಚರಿತ್ರೆಯ ರಕ್ಷಣೆಯನ್ನು ಮಾಡಬೇಕಾಗಿದೆ. ನಿಜಚರಿತ್ರೆಯೇ ಜಗತ್ತಿನ ರತ್ನವು. ನಿಜ ಚರಿತ್ರೆಯೇ ಜಗತ್ತಿನ ಚೈತನ್ಯವು. ನಿಜಚರಿತ್ರೆಯೇ ಜಗತ್ತಿನ ಸುಮಾರ್ಗ ಬೋಧಕವು. ನಿಜಚರಿತ್ರೆಯೇ ಜ್ಞಾನಪ್ರಸಾರಕವು. ನಿಜಚರಿತ್ರೆಯೇ ಹರ್ಷಪ್ರಸಾರಕವು. ನಿಜಚರಿತ್ರೆಯೇ ಚಿತ್ತ ಸ್ಥಿರೀಕರಣಸಾಮಗ್ರಿಯು. ನಿಜ, ಬಸವೇಶ್ವರನು ಬ್ರಾಹ್ಮಣ್ಯವನ್ನು ನಿರಾಕರಿಸಿದನು. ನಿಜ, ಬಸವೇಶ್ವರನು ಜನಿವಾರವನ್ನು ದೂರೀಕರಿಸಿದನು. ನಿಜ, ಬಸವೇಶ್ವರನು ಬ್ರಾಹ್ಮಣರ ಸೂತಕಗಳನ್ನು ನಿರಾಕರಿಸಿದನು. ನಿಜ, ಬಸವೇಶ್ವರನು ಬ್ರಾಹ್ಮಣರ ಜಾತಿಗಳನ್ನು ನಿರಾಕರಿಸಿದನು. ನಿಜ, ಬಸವೇಶ್ವರನು ವೇದಾದಿಗಳಿಗೆ ಸಾಧಾರಣ ಸ್ಥಲ ಕೊಟ್ಟನು. ನಿಜ, ಬಸವೇಶ್ವರನು ತನ್ನ ವಚನಗಳೆಂಬ ಹೊಸ ಮಾರ್ಗವನ್ನು ಕಲ್ಪಿಸಿದನು. ಬಸವಣ್ಣನು ತನಗೆ ತೋರಿದಂತೆ ತಾನು ಮಾಡಿದನು. ಅದು ಕೆಲವರ ದೃಷ್ಟಿಯಲ್ಲಿ ಒಳ್ಳೆಯದಾಗಿ ಕಾಣಬಹುದು. ಕೆಲವರ ದೃಷ್ಟಿಯಲ್ಲಿ ಕೆಟ್ಟದ್ದಾಗಿ ಕಾಣಬಹುದು. ಆದರೆ ಇದ್ದದ್ದನ್ನು ಜಗತ್ತಿಗೆ ತೋರಿಸಬೇಕಲ್ಲವೆ? ಬಸವಣ್ಣನ ತತ್ವಗಳೆಂಬ ಶಿಲೆಯ ಪಾತ್ರೆಗಳಿಗೆ ಚಿನ್ನದ ಲೇಪವೇತಕ್ಕೆ? ಬೆಳ್ಳಿಯ ಲೇಪವೇತಕ್ಕೆ? ಚಿನ್ನ, ಬೆಳ್ಳಿ ಒಂದು ವಿಧದಲ್ಲಿ ಶ್ರೇಷ್ಠವಾಗಿದ್ದರೆ, ಶಿಲೆಯು ಒಂದು ವಿಧದಲ್ಲಿ ಉತ್ಕೃಷ್ಟವಲ್ಲವೆ? ವಿಜ್ಞಾನ ಪಂಡಿತರಾದ ಬ್ರಾಹ್ಮಣರು ಈ ದೃಷ್ಟಿಯಿಂದ ಲಿಂಗಾಯತ ಮತದ ನಿಜ ಚರಿತ್ರೆಯನ್ನು ಹೊರದೆಗೆದು ವಿಶ್ವಚಕ್ರದ ಮುಂದಿಟ್ಟು ಚರಿತ್ರ ರಕ್ಷಣೆಯನ್ನು ಮಾಡಬೇಕು. ಯಾರ ನುಡಿಬಡಿತಗಳಿಗೂ ಭಯಪಡಬಾರದು.

ಲಿಂಗಾಯತ ವಿದ್ವಾಂಸರಾದರೂ ಇದೇ ದೃಷ್ಟಿಯಿಂದ ಕೆಲಸ ಮಾಡಬೇಕು. ಅನೇಕ ಸುಳ್ಳುಗಳು ನಮ್ಮ ಮತದಲ್ಲಿ ಕೆಲಕಾಲದಿಂದಲೂ

ಈ ವರೆಗೂ ಆವರಿಸಿ ಸತ್ಯವು ಮುಚ್ಚಿಹೋಗಿದೆ. ನಾವು ನಿಜವಾಗಿ ಎಂತವರೋ ಅಂತವರಾಗಿ ಕಾಣಿಸಿಕೊಳ್ಳಬೇಕೆಂಬುದು ನನ್ನ ಇಷ್ಟವು. ಮೊದಲು ಚರಿತ್ರೆಯನ್ನು ಉಳಿಸಿ, ಆ ಮೇಲೆ ಯಾವ ಕೆಲಸ ಮಾಡಬೇಕಾದರೂ ಮಾಡೋಣ. ಇಲ್ಲದ್ದಕ್ಕೆ ಹೋಗಬಾರದು, ಇದ್ದದ್ದನ್ನು ಬಿಡಬಾರದು. ಅನೇಕ ಸುಳ್ಳುಗಳು ಈ ವರೆಗೂ ಆವರಿಸುತ್ತಾ ಬಂದದ್ದು ಹಾಗಿರಲಿ, ಈಗಲೂ ದ್ವಿಗುಣ ತ್ರಿಗುಣವಾಗಿ ಹಬ್ಬುತ್ತ ಅವೆ. ಪಾಪಸು ಕಳ್ಳಿಯಂತೆ ಮಳೆಯಿಲ್ಲದೇನೇ ಕರಲು ನೆಲದಲ್ಲಿಯೇ ಹಬ್ಬುತ್ತಲಿವೆ. ಈ ಪಾಪಸು ಕಳ್ಳಿಗಳನ್ನು ಜಾಗ್ರತೆ ಕಿತ್ತು ಹಾಕಬೇಕು. ನೂತನ ಗ್ರಂಥಗಳು ಹುಟ್ಟುತ್ತಲಿವೆ. ಹಿಂದಿನವರು ಬರೆದದ್ದರಲ್ಲಿ ಕೆಲವನ್ನು ತೆಗೆದು ಹಾಕಿ, ಕೆಲವನ್ನು ಹೊಸದಾಗಿ ಸೇರಿಸಿ, ಕೆಲವನ್ನು ಬದಲಾವಣೆ ಮಾಡಿ ವ್ಯಾಕರಣದ ಲೋಪ, ಆಗಮನ, ಆದೇಶ ಎಂಬ ಸಂಧಿಗಳನ್ನು ನಡಿಸಿ ಹೊಸ ಕವಿತ್ವಗಳನ್ನು ಬರೆದು ಅದನ್ನು ಜನ ಸಾಮಾನ್ಯದಲ್ಲಿ ವಾಚನದ್ವಾರ ಪ್ರಚಾರಪಡಿಸುತ್ತಲಿರುವದರಿಂದ ಅತ್ಯಂತ ಹಾನಿಕರವಾಗಿರುವದೆಂದು ನನಗೆ ತೋರುತ್ತದೆ. ಇವುಗಳನ್ನೆಲ್ಲವನ್ನು ಸತ್ಯ ದೃಷ್ಟಿಯಿಂದ ಸಮಾಜದವರು ಶೋಧನೆ ಮಾಡಿ ಇದರಿಂದ ಆಗತಕ್ಕ ಕೆಟ್ಟ ಪರಿಣಾಮವನ್ನು ತಡೆದು ನಿಜರಕ್ಷಣೆಗೆ ಸಹಾಯಮಾಡಬೇಕೆಂದು ನಾನು ವಿನಯಪೂರ್ವಕವಾಗಿ ತಿಳಿದವರನ್ನು ಕೇಳಿಕೊಳ್ಳುತ್ತೇನೆ.

ಬಸವೇಶ್ವರನ ನಿಜ ವಿಚಾರವೇನು, ಬಸವೇಶ್ವರನಿಗಿಂತ ಮುಂಚೆ ಶೈವದ ಸ್ಥಿತಿ ಹೇಗಿತ್ತು, ಬಸವೇಶ್ವರನಿಗಿಂತ ಮೊದಲು ಷಟ್‌ಸ್ಥಲದ ಕುರುಹು ಏನಾದರೂ ತೋರುತ್ತವೆಯೋ, ವೀರಶೈವ ಶಬ್ದ ವಿಚಾರವೇನು, ಅದು ಬಸವೇಶ್ವರನಿಗಿಂತ ಮೊದಲು ತೋರಿಬರುತ್ತದೆಯೋ, ಲಿಂಗಿ ಶಬ್ದ ಪ್ರಯೋಗದ ಅರ್ಥವೇನು, ಆಗಮಗಳಲ್ಲಿ ಶೈವ ಸಂಬಂಧವಾದವುಗಳು ಯಾವಾಗ ಆದವು, ವೀರಶೈವ ಸಂಬಂಧವಾದವುಗಳು ಯಾವಾಗ ತಲೆದೋರಿದವು, ಅಲ್ಲಮಪ್ರಭುದೇವರು, ಚನ್ನಬಸವೇಶ್ವರ, ಸಿದ್ಧರಾಮೇಶ್ವರರೆಂಬ ವ್ಯಕ್ತಿತ್ರಯಗಳ ನಿಜ ವಿಚಾರವೇನು, ಬಸವೇಶ್ವರನು ಈ ಮೂವರನ್ನು ಪ್ರಥಮ ಗುರುಸ್ಥಾನಕ್ಕೆ ಸೇರಿಸಿದುದರಲ್ಲಿ ಯಾವ ಅದ್ವಿತೀಯ ಕಾರ್ಯವನ್ನು ಮಾಡಿದನು, ಇವರುಗಳ ವಿಚಾರದಲ್ಲಿ ಈಚಿನ ಗ್ರಂಥಗಳಲ್ಲಿ ಯಾವ ಆಚ್ಛಾದನೆಗಳು ಮಾಡಲ್ಪಟ್ಟಿವೆ, ಆಚ್ಛಾದನೆ ಮಾಡುವದರಲ್ಲಿ ಈಚಿನವರು ಏನು ಲೋಪವನ್ನು ಮಾಡಿದರು, ಬಸವಾದಿ ಶರಣರಿಗೆ ಇದ್ದಿಲ್ಲದ

ಆಡಂಬರದ ಅಭಿಮಾನವು ಈಚಿನವರಿಗೆ ಉಂಟಾಗಿ ಯಾವ ಕಲ್ಪಿತಗಳು ಮುಖದೋರಿದವು, ಇದರಿಂದ ನಿಜಕ್ಕೆ ಏನು ಲೋಪ ಬಂತು, ಬಸವಾದಿಗಳ ಯಾವ ಸರಳ ತತ್ವಗಳು ಹಾರಿಹೋಗಿ ಕ್ಲಿಷ್ಟ ವಿಧಾನಗಳು ಮುಖವಿಟ್ಟವು, ಇವೇ ಮೊದಲಾದ ವಿಚಾರಗಳನ್ನು ಮಾಡಿ ಹುಸಿಯನ್ನು ತೂರಿ ಹಾಕಿ ನಿಜವನ್ನು ಗಟ್ಟಿಮಾಡಿ ತೋರಿಸಬೇಕಾದ ಮಹತ್ಕಾರ್ಯವು ಚಾರಿತ್ರಕಾರರ ಮೇಲೆ ಬಿದ್ದ ಭಾರವಾಗಿರುತ್ತದೆ.

ಲಿಂಗಾಯುತರ ಮತಗ್ರಂಥವೆಂದರೆ ಬಸವಾದಿಗಳ ವಚನರಾಶಿಯೇ! ಅವುಗಳೆಲ್ಲವೂ ಸರಳವಾದ, ಉತ್ತೇಜಕವಾದ, ಅರ್ಥಗರ್ಭಿತವಾದ, ಲೋಕವ್ಯವಹಾರಜ್ಞಾನಪೂರಿತವಾದ ಅಚ್ಚ ಕನ್ನಡ ನುಡಿಯಲ್ಲಿ ಬರೆದಿರುವದರಿಂದ ಲಿಂಗಾಯುತರ ಮತ ಭಾಷೆಯು ಕನ್ನಡವೆಂಬುದರಲ್ಲಿ ಯಾವ ಅಡ್ಡಿಯೂ ಇರುವದಿಲ್ಲ. ಆದದರಿಂದ ಲಿಂಗಾಯುತರು ಕನ್ನಡಕ್ಕೆ ಹೆಚ್ಚು ಗಮನಕೊಡಬೇಕು. ಇದರಿಂದ ಲಿಂಗಾಯುತರು ಸಂಸ್ಕೃತವನ್ನು ಓದಬಾರದೆಂಬ ಅಭಿಪ್ರಾಯವಲ್ಲ. ಜ್ಞಾನಾಭಿವೃದ್ಧಿಗೆ ಸಂಸ್ಕೃತ, ಇಂಗ್ಲಿಷ ಮೊದಲಾದ ಭಾಷೆಗಳನ್ನು ಓದಲೇಬೇಕು. ವಿದ್ಯಕ್ಕೆ ಬೇಕಾದುದೊಂದು, ಬೇಡವಾದುದೊಂದು ಇರುವದಿಲ್ಲ. ವಿದ್ಯವು ಯಾವ ಮುಖದಲ್ಲಿ ತೋರಿಸಿಕೊಂಡರೂ ಅದು ಗಣ್ಯವೇ. ಲಿಂಗಾಯುತರ ಅನೇಕ ಗ್ರಂಥಗಳು ಕನ್ನಡದಿಂದ ಸಂಸ್ಕೃತಕ್ಕೆ ಹೋಗಿರುತ್ತವೆಯೋ ಹೊರತು, ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವದಿಲ್ಲ. ಪ್ರಭುಲಿಂಗಲೀಲೆಯು ಮೊದಲು ಕನ್ನಡದಲ್ಲಿ ಆಗಿ, ಆಮೇಲೆ ಸಂಸ್ಕೃತಕ್ಕೆ ಹೋಯಿತು. ವಿವೇಕಚಿಂತಾಮಣಿಯು ಮೊದಲು ಕನ್ನಡದಲ್ಲಿ ಆಗಿ, ಆಮೇಲೆ ಸಂಸ್ಕೃತಕ್ಕೆ ಹೋಯಿತು. ಬಸವಪುರಾಣವು ಮೊದಲು ಹರಿಹರರಗಳೆಯಲ್ಲಿ ಕನ್ನಡದಲ್ಲಿದ್ದು ತೆಲುಗಿಗೆ ಹೊರಟು, ಭೀಮಕವಿಯ ಬಸವ ಪುರಾಣದ ಕನ್ನಡಕ್ಕೆ ಬಂದು, ಆನಂತರ ಸಂಸ್ಕೃತಕ್ಕೆ ಹೋಯಿತು. ಷಟ್‌ಸ್ಥಲವು ಮೊದಲು ಕನ್ನಡ ವಚನದಲ್ಲಿ ಆಗಿ, ಆಮೇಲೆ ಸಂಸ್ಕೃತಕ್ಕೆ ಹೋಯಿತು. ಸಂಸ್ಕೃತವನ್ನು ಓದುವವರಲ್ಲಿ ಈ ಬಗ್ಗೆ ಲಿಂಗಾಯುತ ನಿಜತತ್ವಗಳಿಗೆ ಹಾನಿ ತಟ್ಟಿದಂತೆ ಕಾಣುತ್ತದೆ. ಇದು ಓದಿದವರ ಭ್ರಾಂತಿದೋಷವೇ ಹೊರತು, ಸಂಸ್ಕೃತದ ತಪ್ಪಲ್ಲ. ಸಂಸ್ಕೃತವನ್ನು ಓದುವವರು, ಲಿಂಗಾಯುತ ಧರ್ಮದ ನಿಜತತ್ವವ ಅರಿಯದೇ ಸಂಸ್ಕೃತವನ್ನು ಓದಿ ಸುತ್ತಮುತ್ತಣ ಕೆಲವು ಪ್ರಕಾಶಗಳನ್ನು ಅವಲಂಬಿಸಿದುದರಿಂದ ಈ ಲೋಪ ಉಂಟಾಯಿತೇ

ಹೊರತು, ಮತ್ತೆ ಬೇರೆಯಲ್ಲ. ಅಂತು ಬಸವಾದಿ ಪ್ರಮಥರ ತತ್ವ ದೃಷ್ಟಿಯಿಂದ ನೋಡಿದರೆ, ಸಂಸ್ಕೃತವನ್ನು ಓದಿದುದರಿಂದ ಫಲವಾಗಲಿಲ್ಲ. ಆದರ ಬದಲಾಗಿ ಸಮಾಜದಲ್ಲಿ ಕಲ್ಪಿತಗಳು ಉತ್ಪನ್ನವಾಗಿ ಒಡಕುಗಳಿಗೆ ಅವಕಾಶವಾಗಿ ಕೇಡುಂಟಾಯಿತು. ಇದು ಶೋಚನೀಯವಾದ ಸಂಗತಿಯಾಗಿರುತ್ತದೆ. ಇದನ್ನು ಸಂಸ್ಕೃತಾಭಿಮಾನಿಗಳು ಗಮನಕ್ಕೆ ತಂದು ತಿದ್ದುಪಾಟು ಮಾಡಿಕೊಂಡರೆ ಸಮಾಜಕ್ಕೆ ಅತ್ಯಂತ ಹಿತಕರವಾಗುವದೆಂದು ನಾನು ಸಂಪೂರ್ಣ ನಂಬುತ್ತೇನೆ.

ಎಲ್ಲ ಲಿಂಗಾಯತರೂ ನಿಜದ ಕಡೆಗೆ ಗಮನವನ್ನು ತಿರುಗಿಸಬೇಕು. ನಿಜವೆಂಬ ಧ್ವಜವನ್ನು ಎತ್ತಿ ಎಲ್ಲರೂ ಜಯಧ್ವನಿ ಮಾಡಬೇಕು. ಮುಸಿಯನ್ನು ಅತ್ತಿತ್ತ ತಳ್ಳಿ ದಿಶಾಂತವನ್ನು ಸೇರುವಂತೆ ತೂರಿಬಿಡಬೇಕು. ಬಸವಾದಿ ಶಿವಶರಣರ ವಚನಗಳನ್ನು ಲಿಂಗಾಯತ ಮತವೇದವೆಂದು ತಿಳಿದು ಸದಾ ವ್ಯಾಸಂಗಮಾಡಬೇಕು.

---

# ಪಾಶ್ಚಿಮಾತ್ಯರ ತತ್ವಶಾಸ್ತ್ರ.

## ಆಧುನಿಕಕಾಲ ಕ್ರಿ. ಶ ೧೪೫೩ ರಿಂದ ೧೯೩೦.

(ಲೇಖಕ:-ಶ್ರೀಯುತ ವೀರಪ್ಪ ಯುಗಟಿ ಬಿ. ಏ. ಎಲ್. ಎಲ್. ಬಿ. ಹಾವೇರಿ.)

(ಮುಂದೆ ಸಾಗಿದ್ದು.)

ಆಧುನಿಕ ತತ್ವಜ್ಞಾನವು ಸನಾತನ ಗ್ರೀಕರ ತತ್ವದಂತೆ ಬಹಿರಂಗಿಕ (*objective*) ವಾದದ್ದಲ್ಲ ಅಥವಾ ಮಧ್ಯವರ್ತಿಕಾಲದಂತೆ ತಾರ್ಕಿಕವಾದದ್ದೂ ಅಲ್ಲ. ಆದರೆ ಅಂತರಂಗಿಕ (*subjective*) ವಾದದ್ದು. ಈ ಕಾಲವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. (೧) ಜ್ಞಾನಾರ್ಜನೆಯು ಕಾಲ (೨) ಜ್ಞಾನೋದಯುಕಾಲ (೩) ಜರ್ಮನ್‌ತತ್ವ (೪) ೧೯ ನೇ ಶತಮಾನದ ತತ್ವ.

(೧) ಜ್ಞಾನಾರ್ಜನೆಯು ಕಾಲ ೧೪೫೩—೧೬೯೦. ರೋಮುಪಟ್ಟಣದ ಧಾರ್ಮಿಕ ಕೇಂದ್ರವು ಸ್ಥಿರವಾಗಿ ಉಳಿಯಲಿಲ್ಲ. ವಿಟಿನ್‌ಬರ್ಗ, ಲಂಡನ್, ಜಿನಿವಾ ಪಟ್ಟಣಗಳು ಧಾರ್ಮಿಕ ಮತ್ತು ಜ್ಞಾನಾರ್ಜನೆಯು ಮುಖ್ಯ ಪಟ್ಟಣಗಳಾದವು. ಈ ಕಾಲವು ಅಧಿಭೌತಿಕ ವಿಷಯುದ ಕಡೆಗೆ ಅಂದರೆ ಇಹಲೋಕದ ವಿಷಯುದ ಕಡೆಗೂ ಮತ್ತು ಆಧ್ಯಾತ್ಮಿಕ ವಿಷಯುದ ಕಡೆಗೂ ಲಕ್ಷವನ್ನು ಹಾಕಿತು. ವ್ಯಕ್ತಿಯು ಜಗತ್ತಿನ ಶೋಧೆಯನ್ನು ಪ್ರಾರಂಭಿಸಿದ್ದಲ್ಲದೆ ಜಗನ್ನಿರ್ಮಾಣಕನ ಶೋಧೆಯನ್ನೂ ಪ್ರಾರಂಭಿಸಿದನು. ಸನಾತನ ಗ್ರೀಕರ ಮತವು ಅಧಿಭೌತಿಕವೂ (*cosmo-centric*), ಮಧ್ಯವರ್ತಿ ಕಾಲದ ಮತವು ಅಧಿದೈವಿಕವೂ (*theo-centric*) ಆಧುನಿಕ ಕಾಲದ ಮತವು ಆಧ್ಯಾತ್ಮಿಕವೂ (*ego-centric*) ಆಗಿದೆ.

ನಿಕೋಲಾಸ ಕುಶಾನನ್ ಕ್ರಿ. ಶ. ೧೪೦೧-೧೪೬೪ ಜರ್ಮನಿ ದೇಶದಲ್ಲಿ ಜನ್ಮ ತಾಳಿದನು. ಇವನು ಭೂಮಿಯು ತನ್ನ ಅಚ್ಚಿನ ಮೇಲೆ ತಿರುಗುತ್ತದೆಂದು 'ಕೊಪರ್ನಿಕಸನ ಮುಂಚಿತವಾಗಿಯೇ ಹೇಳಿದನು. ಸ್ಥಳವು ಮೇರೆಯಿಲ್ಲದ್ದೆಂತಲೂ ಕಾಲವು ಅನಂತವಾದದ್ದೆಂತಲೂ ಬ್ರೂನೋ ಎಂಬವನ ಮುಂಚಿತವಾಗಿಯೇ ಹೇಳಿದನು. ಜರ್ಮನಿಯು ನಕಾಶವನ್ನು ಇವನೇ ಮೊದಲು ತಯಾರಿಸಿದನು. ಕ್ರೈಸ್ತ ಚರ್ಚದ ಮೂಢ ನಂಬಿಕೆಯನ್ನೂ ಸೃಷ್ಟಿಯು ಕೃತಿಗಳನ್ನೂ ವಿವರಿಸುವದರಲ್ಲಿ ಜಾದು ವಿದ್ಯೆಯು ಉಪ

ಯೋಗಿಸುವಿಕೆಯನ್ನೂ ಇವನು ನಿಷೇಧಿಸಿದನು. ಇವನು ಜಗತ್ತು ಪರಮಾತ್ಮನ ಪ್ರತಿಬಿಂಬವೆಂದು ಹೇಳುತ್ತಾನೆ. ಮತ್ತು ಮನುಷ್ಯನು ಜಗತ್ತಿನ ಸ್ವರೂಪವೆಂದು ಹೇಳುತ್ತಾನೆ. ಇವನು ಜಗತ್ತು ಆತ್ಮದಿಂದ ಕೂಡಿರುವದೆಂದು ಹೇಳುತ್ತಾನೆ. ಇವನು ಭೌತಿಕ ಶಾಸ್ತ್ರವು ಊಹಾಮಾತ್ರವಾದದ್ದೆಂದು ಹೇಳುತ್ತಾನೆ. ಆದರೂ ಅದು ಇಹಪರಲೋಕಗಳ ಸಂಬಂಧವನ್ನು ಹೊರಪಡಿಸುತ್ತದೆಂದು ಹೇಳಿದನು.

ಪ್ಯಾರಾಸೆಲ್‌ಸಸ್- ಕ್ರಿ. ಶ. ೧೪೯೩—೧೫೪೧. ಸ್ವಿಟ್ಸರ್ಲಂಡದ ನಿವಾಸಿಯು. ರಸಾಯನ ಶಾಸ್ತ್ರಜ್ಞನು. ಜಗತ್ತು ಅಭಿವೃದ್ಧಿ ಹೊಂದತಕ್ಕ ವಸ್ತುವು. ಮನುಷ್ಯನು ಜಗತ್ಶಕ್ತಿಯ ಅಂಶನು. ಸೃಷ್ಟಿಯ ಶಕ್ತಿಯು ಮೂರು ರೂಪದಲ್ಲಿ ಪ್ರಕಟವಾಗಿದೆ. (೧) ಸ್ಥೂಲ (*terrestrial*), (೨) ಸೂಕ್ಷ್ಮ (*astral*), (೩) ಕಾರಣ (*spiritual*). ಮನುಷ್ಯ ಶರೀರವು ಸ್ಥೂಲ ಸೃಷ್ಟಿಯಿಂದ ಬಲವನ್ನು ದೊರಕಿಸುತ್ತದೆ. ಮನಸ್ಸು ನಕ್ಷತ್ರಗಳಿಂದ ಬಲವನ್ನು ಹೊಂದುತ್ತದೆ. ಆತ್ಮವು ಕ್ರೈಸ್ತನಲ್ಲಿಯ ಭಕ್ತಿಯಿಂದ ಬಲವನ್ನು ಹೊಂದುತ್ತದೆ.

ಜಿಯಾರಡಾನೊ ಬ್ರೂನೋ— ಕ್ರಿ. ಶ. ೧೫೪೮—೧೬೦೦. ಇಟಲಿ ನಿವಾಸಿಯು. ಪಾದ್ರಿಯು. ಧರ್ಮಲಂಡನೆಂಬ ಆರೋಪದಿಂದ ಇವನನ್ನು ಅಗ್ನಿಗೆ ಆಹುತಿಕೊಟ್ಟರು. ಇವನು ಹದಿನೈದು ವಯಸ್ಸಿನವನಿರುವಾಗ ಟ್ರೆಂಟ ಕೌನ್ಸಿಲ್ ಕೂಡಿತ್ತು. ಇಟಲಿಯಲ್ಲಿ ಪ್ರತಿಗಾಮಿ ಸುಧಾರಣೆ ನಡೆದಿತ್ತು (*counter-Reformation*). ಬ್ರೂನೋನ ಪ್ರೇರಣೆಯು ಸ್ಪಿನೋಜಾ ಮತ್ತು ಲೀಬ್ನಿ ಇವರ ಮೇಲೆ ಆಯಿತು. ಬ್ರೂನೋನು ದೇವರು ಅನಂತನಾಗಿರುವದರಿಂದ ಜಗತ್ತೂ ಸಹ ಸ್ಥಳ, ಕಾಲಗಳಿಂದ ಅನಂತವಾಗಿದೆಯೆಂದು ಹೇಳಿದನು. ಇದರಿಂದ ಭೌತಿಕ ಶಾಸ್ತ್ರಕ್ಕೆ ಹೊಸ ವಿಚಾರವನ್ನು ಇವನು ಒದಗಿಸಿಕೊಟ್ಟನು. ಜಗತ್ತು ದೇವರ ಸ್ವರೂಪವೆಂದು ಇವನು ತಿಳಿದನು. ಧರ್ಮ, ತತ್ವಜ್ಞಾನ ಮತ್ತು ಸೌಂದರ್ಯಗಳು ಒಂದೇ ಎಂದು ಇವನು ತಿಳಿದನು. ದೇವರು ಜಗತ್ತಿನ ಆತ್ಮವೆಂತಲೂ ಜಗತ್ತು ದೇವರ ದೇಹವೆಂತಲೂ ತಿಳಿದನು. ದೇವರು ಒಬ್ಬನೇ ಇದ್ದು ಎಲ್ಲ ವಸ್ತುಗಳಲ್ಲಿ ಸೇರಿಕೊಂಡಿದ್ದಾನೆ. ಅವನು ಸರ್ವಾಂತರ್ಯಾಮಿಯು. ಜಗತ್ತಿನಲ್ಲಿ ತೋರುವ ಏಕತ್ವ ಮತ್ತು ಅನೇಕತ್ವಗಳು ನಿಜವಸ್ತುವಿನ ಎರಡು ವಿಧವಾದ ಸ್ವರೂಪಗಳಾಗಿವೆ.

(೨) ಜ್ಞಾನೋದಯಕಾಲದ ಪದಾರ್ಥವಿಜ್ಞಾನಿಗಳು- (*Natural scientists*). ಗ್ಯಾಲಿಲಿಯೋ. ಕ್ರಿ. ಶ. ೧೫೬೪—೧೬೪೨. ಇವನು ಇಟಲಿ ದೇಶದವನು. ಭೌತಿಕ ಶಾಸ್ತ್ರಜ್ಞನಿದ್ದದರಿಂದ ಇವನಿಗೆ ಕ್ರೈಸ್ತ ಪಾದ್ರಿಗಳ ವಿರೋಧವುಂಟಾಯಿತು. ಇವನು ಪಾಡುವಾ ಮತ್ತು ಪಿಜಾ ವಿಶ್ವ ವಿದ್ಯಾಲಯಗಳಲ್ಲಿ ಪ್ರೊಫೇಸರ (ಪಂಡಿತ) ನಾಗಿದ್ದನು. ಟಸ್ಕಿನಿ ರಾಜಾಸ್ಥಾನದಲ್ಲಿ ಗಣಿತ ಮತ್ತು ತತ್ವಶಾಸ್ತ್ರದ ಬೋಧಕನಾಗಿದ್ದನು. ಕೊಪರ್ನಿಕಸನಂತೆ ಭೂಮಿಯು ಸೂರ್ಯನ ಸುತ್ತಲೂ ತಿರುಗವದೆಂದು ಗ್ರಹಿಸಿದನು. ಇವನು ಒಂದು ದುರ್ಬಿನವನ್ನು (ದೂರದರ್ಶಕ ಯಂತ್ರಕವನ್ನು ರಚಿಸಿಸಿದನು. ಬ್ರಹಸ್ಪತಿಯ (*Jupitor*) ಉಪಗ್ರಹವನ್ನು ಶೋಧಿಸಿದನು. ಜಲಸಂಬಂಧವಾದ ತಕ್ಕಡಿಯನ್ನೂ (*Hydrostatic balance*), ಶೀತೋಷ್ಣಮಾಪಕಯಂತ್ರ ಸೂಕ್ಷ್ಮದರ್ಶಕಯಂತ್ರವನ್ನೂ (*Microscope*) ರಚಿಸಿದನು. ತರ್ಕವು ಸರಿಯಾದ ವಿಚಾರ ಮಾಡಲು ಸಹಾಯಭೂತವಾಗಿರುವದಲ್ಲದೆ ಹೊಸ ವಿಚಾರವನ್ನು ಹುಟ್ಟಿಸಲಾರದೆಂದು ಇವನು ನಂಬಿದನು. ಕೆಲವು ಅನುಭವಗಳಿಂದ ಹೊಸ ಗೃಹೀತವನ್ನು ರಚಿಸಿದಾಗ ಹೊಸ ವಿಚಾರವು ಹೊರಪಡುತ್ತದೆ. ಭೌತಿಕ ಸೃಷ್ಟಿಯನ್ನು ವಿವರಿಸುವಾಗ ಆಧ್ಯಾತ್ಮಿಕ ಆಧಾರವನ್ನು ತೆಗೆದುಕೊಂಡರೆ ಸರಿಯಾಗದು. ದೇವರು ಸೂರ್ಯಚಂದ್ರರನ್ನು ತಿರುಗುವಂತೆ ಮಾಡುತ್ತಾನೆಂದರೆ ನಿಜವಾದ ಆಧಾರವನ್ನು ಕೊಟ್ಟಂತಾಗುವದಿಲ್ಲ. ಸೃಷ್ಟಿಯ ತಳಹದಿಯಾದ ವಸ್ತುವು ಚಲನೆಯು.

ಫ್ರಾನ್ಸಿಸ್ ಬೇಕನ್— ಕ್ರಿ. ಶ. ೧೫೬೧—೧೬೨೬. ಲಂಡನ್ ಪಟ್ಟಣದ ನಿವಾಸಿಯು. ಕೇಂಬ್ರಿಜ್ಜದಲ್ಲಿ ವಿದ್ಯಾಭ್ಯಾಸ ಮಾಡಿದನು. ವಕೀಲಿಯ ಉದ್ಯೋಗವನ್ನು ವಹಿಸಿದನು. ಮೂವತ್ತೆರಡನೆಯ ವಯಸ್ಸಿನಲ್ಲಿ ಪಾರ್ಲಿಮೆಂಟ ಸಭೆಯಲ್ಲಿ ಪ್ರವೇಶಿಸಿದನು. ಐವತ್ತಾರನೆಯ ವಯಸ್ಸಿನಲ್ಲಿ ಲಾರ್ಡ ಚಾನ್ಸಲರನಾದನು. ಲಂಚ ತೆಗೆದುಕೊಂಡನೆಂಬ ಆರೋಪದಿಂದ ಅಧಿಕಾರವನ್ನು ಕಳೆದುಕೊಂಡನು. ಇವನು ಮಹಾ ಜ್ಞಾನಿಯೂ, ರಾಜಕಾರಣಪಟುವೂ ಆಗಿದ್ದನು. ತತ್ವಜ್ಞಾನವು ಸಮಾಜ ಸ್ಥಿತಿಯನ್ನು ಸುಧಾರಿಸತಕ್ಕದ್ದೂ, ಮನುಷ್ಯ ಜೀವವನ್ನು ಉದಾತ್ತ ಮಾಡತಕ್ಕದ್ದೂ, ಸೃಷ್ಟಿಯನ್ನು ವಶಪಡಿಸಿಕೊಳ್ಳತಕ್ಕದ್ದೂ, ಆಗಿದೆ ಎಂದು ಇವನು ಹೇಳಿದನು. ಜ್ಞಾನಬಲವೇ ಬಲವು. ಶಾಸ್ತ್ರಿಕನ ಪದ್ಧತಿಯು ಜೇಡ ಹುಳದಂತೆ ತನ್ನೊ

ಳಗಿಂದ ಬಲೆಯನ್ನು ಹುಟ್ಟಿಸುವಂತೆಯಾಗಲಿ ಅಥವಾ ಇರುವೆಯಂತೆ ಆಹಾರವನ್ನು ಕೂಡಿ ಹಾಕುವಂತೆಯಾಗಲಿ ಇರದೆ ಜೇನು ಹುಳದಂತೆ ಪುಷ್ಪ ಗಂಧವನ್ನು ಕೂಡಿಸಿ ಜೇನು ತುಪ್ಪವಾಗಿ ಮಾಡುವಂತಿದೆಯೆಂದು ಇವನು ಹೇಳಿದನು. ಶಾಸ್ತ್ರವು ಯಾವತ್ತು ವ್ಯಷ್ಟಿ ವಸ್ತುಗಳ ಸತ್ಯದಿಂದ ಸಮಷ್ಟಿಯ ಸತ್ಯವನ್ನು ಕಂಡು ಹಿಡಿಯಬೇಕು. ಆದ್ದರಿಂದ ಶಾಸ್ತ್ರವು ಸಮಷ್ಟಿ ಪದ್ಧತಿ (*Induction*) ಮತ್ತು ಅನುಭವಗಳನ್ನು ಸಾಧನವಾಗಿಟ್ಟುಕೊಳ್ಳಬೇಕು. ಇವನು ನೋವಮ್ ಆರ್ಗ್ಯಾನಮ್ ಮುಂತಾದ ಪ್ರಸಿದ್ಧ ಗ್ರಂಥಗಳನ್ನು ಬರೆದಿದ್ದಾನೆ.

ಥಾಮಸ್‌ಹಾಬ್ಸ—೧೫೮೮—೧೬೭೯. ಇಂಗ್ಲಂಡದ ನಿವಾಸಿಯು ಇವನು ಬೇಕನ್ನನ ಸೆಕ್ರೆಟರಿಯಾಗಿದ್ದನು. ಆದರೆ ಅವನಂತೆ ವ್ಯವಹಾರಿಕ ರಾಜಕಾರಣ ಪಟುವಾಗಿರಲಿಲ್ಲ. ಗಣಿತ ಶಾಸ್ತ್ರದಲ್ಲಿ ಇವನ ಅಭಿರುಚಿಯು ಹೆಚ್ಚಾಯಿತು. ಇವನು ಮುಖ್ಯವಾಗಿ ಭೌತಿಕ ತತ್ವಜ್ಞನು. ಅಸ್ತಿತ್ವದಲ್ಲಿರುವದೆಲ್ಲವೂ ಭೌತಿಕವಸ್ತುವು. ಸಂಭವಿಸುವದೆಲ್ಲವೂ ಚಲನೆಯು (*Motion*) ಇವನು ಈ ಸಿದ್ಧಾಂತವನ್ನು ಭೌತಿಕ ಜಗತ್ತಿಗೆ ಹಚ್ಚುವದರಿಂದ ಭೌತಿಕವಾದಿಯೆಂದೂ, ಜ್ಞಾನಕ್ಷೇತ್ರದಲ್ಲಿ ಇದನ್ನು ಉಪಯೋಗಿಸುವದರಿಂದ ಇಂದ್ರಿಯ ಜ್ಞಾನ ವಿಶಿಷ್ಟವಾದಿಯೆಂದೂ, (*Sensationalist*) ಇಚ್ಛಾ ಶಕ್ತಿಗೆ ಪ್ರಯೋಗ ಮಾಡುವದರಿಂದ ನಿಶ್ಚಯವಾದಿಯೆಂದೂ, (*Determinist*) ನೀತಿ ಮತ್ತು ರಾಜಕಾರಣಗಳಿಗೆ ಪ್ರಯೋಗಮಾಡುವದರಿಂದ ಸಹಜ ಸ್ವಭಾವವಾದಿಯೆಂದೂ (*Naturalist*) ಕರೆಯಲ್ಪಡುತ್ತಾನೆ. ಅಧ್ಯಾತ್ಮಿಕ ವಿಷಯವನ್ನು ಇವನು ಮುಟ್ಟಲೇ ಇಲ್ಲ. ಯಾಕಂದರೆ ದೇವರು ಚಲನಾತ್ಮಕ ವಸ್ತುಗಳಲ್ಲಿ ( *bodies in motion*) ಗಣನೆಯಾಗಿಲ್ಲ. ಪ್ರಕೃತಿ, ಮನಸ್ಸುಗಳು ಒಂದೇ ಸ್ವರೂಪವಾಗಿವೆ. ಆದರೆ ಪ್ರಕೃತಿ ಮತ್ತು ದೈವಗಳು ಪರಸ್ಪರ ವಿರೋಧ ಸ್ವರೂಪಗಳಾಗಿವೆ. ಗಣಿತವೇ ಸರ್ವಜ್ಞಾನಕ್ಕೆ ಆಧಾರವೆಂದು ಹೇಳಿದನು. ಶಾಸ್ತ್ರಿಕನ ಜಗತ್ತು ಕಾರಣ ಪರಿಣಾಮಗಳಿಂದ ಕೂಡಿದೆ. ಸೃಷ್ಟ ವಸ್ತುಗಳು ಭೌತಿಕ ಜಗತ್ತಿಗೆ ಸಂಬಂಧಪಟ್ಟವೆಂತಲೂ ಕೃತ್ರಿಮ ವಸ್ತುಗಳು ಸಮಾಜದ ಸಂಸ್ಥೆಗಳೆಂತಲೂ ಇವನ ಮತವು. ಮನುಷ್ಯನು ಎರಡಕ್ಕೂ ಸಂಬಂಧಿಸಿದ್ದಾನೆ. ತತ್ವಸ್ಥಾನವು ಭೌತಿಕ ಶಾಸ್ತ್ರ, ಮಾನಸ ಶಾಸ್ತ್ರ, ರಾಜನೀತಿಶಾಸ್ತ್ರ ಎಂದು ಮೂರು ವಿಧವಾದದ್ದು ಎಂದು ಇವನು ಹೇಳಿದನು. ಸೃಷ್ಟಿ ಮತ್ತು ಕೃತ್ರಿಮ ವಸ್ತುಗಳ ಸ್ವರೂಪವನ್ನು ಚಲನೆಯು ವಿವರಿಸುತ್ತದೆ.

ಮಾನಸಶಾಸ್ತ್ರ— ಅರಿವು ಆತ್ಮವಾಗಿರದೆ ವಸ್ತುಗಳ ಚಲನೆಯಾಗಿದೆ. ಅರಿವಿನ ಸ್ವರೂಪಗಳಾದ ಇಂದ್ರಿಯ ಜನ್ಯಜ್ಞಾನ, ಪ್ರತ್ಯಕ್ಷ ಜ್ಞಾನ, ಬುದ್ಧಿಗಮ್ಯಜ್ಞಾನ ಮುಂತಾದವು ಮಿದುಳಿನ ಚಲನೆಗಳು ಅಥವಾ ನರಗಳಲ್ಲಿಯ ಸೂಕ್ಷ್ಮಾಣುಗಳ ಚಲನೆಗಳು. ನೆನಪು ಮತ್ತು ಕಲ್ಪನೆಗಳು ಕೃಶವಾದ ಇಂದ್ರಿಯ ಜನ್ಯಜ್ಞಾನಗಳಾಗಿವೆ. ಅನೇಕ ಇಂದ್ರಿಯ ಜನ್ಯ ಜ್ಞಾನಗಳ ಸಮೂಹವೇ ವಿಚಾರವಾಗಿದೆ. ಅನುಭವವು ಸಹವಾಸ ನಿಯಮದಿಂದ (*Lows of association*) ಬದ್ಧವಾದ ಇಂದ್ರಿಯ ಜನ್ಯ ಜ್ಞಾನಗಳ ಸಮೂಹವಾಗಿದೆ. ಮಾನಸಿಕ ಸ್ಥಿತಿಯು ಮಿದುಳಿನ ಚಲನೆಯಿಂದುಂಟಾಗುವದು. ಇದು ಹೊರಗಿನ ಚಲನೆಯ ಪರಿಣಾಮವು. ಬಾಹ್ಯ ಜಗತ್ತಿನಲ್ಲಿಯ ಚಲಿಸುವ ವಸ್ತುವು ಇಂದ್ರಿಯದ ಮೇಲೆ ಮುದ್ರೆ ಹಾಕುವದು. ಈ ಚಲನೆಯನ್ನು ನರಗಳು ಹೃದಯ ಮತ್ತು ಮಿದುಳಿಗೆ ತಲುಪಿಸುವವು. ಇದರಿಂದ ಮಿದುಳಿನಲ್ಲುಂಟಾದ ಪ್ರಗತಿಕ್ರಿಯೆಯೇ (*Reaction*) ಮಾನಸಿಕ ಸ್ಥಿತಿಯು. ಮಿದುಳಿನ ಬದಲಾವಣೆಗಳ ಅರಿವು ನಮಗಾಗುವದಲ್ಲದೆ ಬ್ಯಾಹ ವಸ್ತುಗಳ ಚಲನೆಯ ಅರಿವು ನಮಗುಂಟಾಗುವದಿಲ್ಲ. ಬೆಳಕಿನ ಪ್ರತ್ಯಕ್ಷ ಜ್ಞಾನವು ಮಿದುಳಿನ ಬದಲಾವಣೆಯಿಂದಾಗುವದಲ್ಲದೆ ದೀಪದಿಂದಲ್ಲ. ವಸ್ತುಗಳ ಚಲನೆಯ ಹೊರ್ತು ನಮಗೆ ಬಾಹ್ಯವಾದ ವಸ್ತುವೇ ಇಲ್ಲ. ಬಾಹ್ಯಜಗತ್ತು ನಿಜವಾದದ್ದು ಆದರೆ ನಮಗೆ ಅದರ ಜ್ಞಾನವಿಲ್ಲ.

ಗಣಿತನಿಯಮವನ್ನು ರಾಜ ನೀತಿಗೆ ಅನ್ವಯಿಸಿದ್ದು— ಚಲನೆಯಲ್ಲಿರುವ ಪ್ರಾಕೃತಿಕ ವಸ್ತುಗಳು ಮಾನಸಿಕ ಸ್ಥಿತ್ಯಂತರವನ್ನುಂಟು ಮಾಡುವಂತೆಯೂ, ಚಲನೆಯಲ್ಲಿರುವ ಮಾನಸಿಕ ಸ್ಥಿತಿಗಳು ಮನುಷ್ಯನ ಅರಿವನ್ನುಂಟು ಮಾಡುವಂತೆಯೂ, ಮನುಷ್ಯ ವ್ಯಕ್ತಿಗಳು ರಾಜ್ಯ ಸಂಸ್ಥೆಯನ್ನುಂಟು ಮಾಡುವರು. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಆತ್ಮರಕ್ಷಣೆಯ ಭಾವವು ಸ್ವಭಾವ ಜನ್ಯವಾಗಿದೆ. ಎಲ್ಲ ರಾಜ್ಯ ಸಂಸ್ಥೆಗಳ ಉದ್ದೇಶವು ಆತ್ಮರಕ್ಷಣೆಯಾಗಿದೆ. ಸಮಾಜದಲ್ಲಿರುವಾಗಲೂ, ಸಮಾಜಬಾಹಿರವಾಗಿರುವಾಗಲೂ ಸ್ವಾರ್ಥವೇ ಮನುಷ್ಯನ ಮುಖ್ಯ ಹೇತುವು. ರಾಜ್ಯ ಸಂಸ್ಥೆಯುಂಟಾಗದ ಪೂರ್ವದಲ್ಲಿ ಜನರು ಪರಸ್ಪರ ದ್ವೇಷದಿಂದ ಕಲಹ ಮಾಡುತ್ತಿದ್ದರು. ಆದರೆ ಅದು ಆತ್ಮವಿನಾಶಕ ಕಾರ್ಯವಾಗಿತ್ತು. ಅದ್ದರಿಂದ ಜನರು ತಮ್ಮ ಹಿತಕಕ್ಕಾಗಿ ರಾಜ್ಯಸಂಸ್ಥೆಯನ್ನು ಮಾಡಿಕೊಂಡರು.

ಇದರಿಂದ ಶಾಂತತೆಯೂ ವ್ಯಕ್ತಿಯ ಹಿತವೂ ಸಾಧ್ಯವಾಯಿತು. ಜನರು ರಾಜನಿಗೆ ತಮ್ಮನ್ನಾಳುವ ಪೂರ್ಣ ಅಧಿಕಾರವನ್ನು ಕೊಟ್ಟಿದ್ದರಿಂದಲೇ ಜನರ ಹಕ್ಕು ಬಾಧ್ಯತೆಗಳ ಸುರಕ್ಷಣೆಗೆ ಕಾರಣವಾಯಿತು. ಸರ್ವರ ಇಚ್ಛೆಯೇ ರಾಜನ ಇಚ್ಛೆಯು. ಪ್ರಜಾರಾಜ್ಯದಲ್ಲಿ ಪ್ರಜಾಪ್ರತಿನಿಧಿಗಳ ಇಚ್ಛೆಯು ಅಥವಾ ಮತವು ಪ್ರಜೆಗಳ ಮತದ ಪ್ರತಿಧ್ವನಿಯಾಗಿದೆ. ಯಾವ ವರೆಗೆ ರಾಜ್ಯ ಸಂಸ್ಥೆಯು ಜನರಲ್ಲಿ ತನ್ನ ಸತ್ತೆಯನ್ನು ಯೋಗ್ಯವಾಗಿ ಉಪಯೋಗಿಸುವದೋ ಆ ವರೆಗೆ ಜನರು ರಾಜ್ಯ ಸಂಸ್ಥೆಗೆ ವಿಧೇಯರಾಗಿರತಕ್ಕದ್ದು. ರಾಜ್ಯ ಸಂಸ್ಥೆಯ ಆಜ್ಞೆಯೆಲ್ಲವೂ ನ್ಯಾಯವಾದದ್ದು. ರಾಜ್ಯ ಸಂಸ್ಥೆಯು ಯಾವದನ್ನು ನಿಷೇಧ ಮಾಡುವದೋ ಅದು ಅನ್ಯಾಯವು. ರಾಜ್ಯ ಸಂಸ್ಥೆಯು ಧರ್ಮನೀತಿಗಳನ್ನು ಸಹ ನಿರ್ಣಯಿಸುವದು. ಕ್ರಾಂತಿಗಿಂತ ಅಥವಾ ಅನಾಯಕತ್ವಕ್ಕಿಂದ ಎಂತಹ ರಾಜ್ಯ ಸಂಸ್ಥೆಯಾದರೂ ಹಿತಕರವು. ೧ ನೇ ಚಾರ್ಲಸ್ ರಾಜನ ರಾಜ್ಯಭಾರವು ಇದಕ್ಕೆ ದೃಷ್ಟಾಂತವಾಗಿತ್ತು. ಕಲಹ ಮಾಡುವದೆಂದರೆ ಅನಾಗರಿಕತ್ವದ ಲಕ್ಷಣವು. ಕ್ರೈಸ್ತ ಚರ್ಚ ಅಥವಾ ಮಠವು ರಾಜ್ಯ ಸಂಸ್ಥೆಗೆ ಅಧೀನವಾದದ್ದು. ಧರ್ಮವು ಮೂಢ ನಂಬಿಕೆಯಿಂದ ಕೂಡಿದೆ.

ಜ್ಞಾನೋದಯಕಾಲದ ಪದಾರ್ಥ ವಿಜ್ಞಾನ ಶಾಸ್ತ್ರವೂ ಮತ್ತು ಬುದ್ಧಿವಾದವೂ— ಈ ಕಾಲದ ಶಾಸ್ತ್ರಿಕರು ಜಗತ್ತಿನ ಸಶಾಸ್ತ್ರಿಕವಾದ ವಿವರಣೆಯನ್ನು ಮಾಡುವದು ಬಹಳ ಕಠಿಣವಾಗಿತ್ತು. ಯಾಕಂದರೆ ಅದರಿಂದ ಅವರು ಚರ್ಚದ ನಂಬಿಕೆಗೆ ವಿರೋಧಿಗಳಾಗುತ್ತಿದ್ದರು. ಆದರೆ ಬುದ್ಧಿವಾದಿಗಳು (*Rationalists*) ಭೌತಿಕ ಶಾಸ್ತ್ರವು ಗಣಿತ ಪ್ರಯೋಗದಿಂದ ಸಫಲವಾಗಿರುವಾಗ ತತ್ವಶಾಸ್ತ್ರದ ಸಮಸ್ಯೆಗಳನ್ನು ಸಹ ಗಣಿತ ಶಾಸ್ತ್ರದ ಆಧಾರದಿಂದ ಯಾಕೆ ನಿವಾರಣೆ ಮಾಡಬಾರದೆಂದು ಹೇಳಿದರು. ಇವರು ಸೃಷ್ಟಿ, ದೇವರು ಮನುಷ್ಯ ಶರೀರ ಮತ್ತು ಆತ್ಮಗಳ ವಿಷಯಕ್ಕೆ ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ಈ ಕಾಲದ ಶಾಸ್ತ್ರದ ಸಂಶೋಧನೆಗಳು ಚರ್ಚಿನ ಆಧ್ಯಾತ್ಮಿಕ ನಂಬಿಕೆಗೆ ಅತ್ಯಂತ ವಿರೋಧವಾಗಿದ್ದವು. ಆದ್ದರಿಂದ ಹೊಸ ಶಾಸ್ತ್ರವು ಯಾಂತ್ರಿಕ ಜಗತ್ತನ್ನು ಸರ್ವಶಕ್ತನಾದ ದೇವರೊಂದಿಗೂ ಮತ್ತು ಯಾಂತ್ರಿಕ ಮನುಷ್ಯ ಶರೀರವನ್ನು ಸ್ವತಂತ್ರವಾದ ಆತ್ಮದೊಂದಿಗೂ ಸಮನ್ವಯ ಮಾಡುವ ಕಾರ್ಯವನ್ನು ಕಠಿಣವಾಗಿ ಮಾಡಿತು.

ಡೇಕಾರ್ಟ್ಸ್— ಕ್ರಿ. ಶ. ೧೫೯೬-೧೬೫೦. ಇವನು ಫ್ರಾನ್ಸ ದೇಶದವನು. ಇವನು ಜಗತ್ತಿನ ಉತ್ಪತ್ತಿ ಮತ್ತು ಸ್ಥಿತಿಯ ವಿಷಯವಾಗಿ ಒಂದು ಗ್ರಂಥವನ್ನು ಬರೆದನು. ಇದು ಕೆಲ ಅಂಶದಲ್ಲಿ ಕೋಪರ್ನಿಕಸನ ಸಿದ್ಧಾಂತವನ್ನು ಪುಷ್ಟೀಕರಿಸುತ್ತದೆ. ಆದರೆ ರೋಮಪಟ್ಟಣದಲ್ಲಿ ಗ್ಯಾಲಿಲಿಯೋನನ್ನು ಚರ್ಚ ನಂಬಿಕೆಯ ವಿರೋಧವಾದ ವಿಚಾರಕ್ಕೆ ಶಿಕ್ಷಿಸಿದರೆಂಬ ಸುದ್ದಿಯನ್ನು ಕೇಳಿ ಈ ಗ್ರಂಥವನ್ನು ಇವನು ಮುದ್ರಿಸಲಿಲ್ಲ. ಇವನು ಶಾಲೆಯಲ್ಲಿರುವಾಗಲೇ ಗಣಿತದಲ್ಲಿ ಮೇಧಾವಿಯೆಂದು ಪ್ರಸಿದ್ಧನಾಗಿದ್ದನು. ಗಣಿತ ವಿದ್ಯೆಯಲ್ಲಿ (*analytical geometry*) ಎಂಬದನ್ನು ಹೊಸದಾಗಿ ಶೋಧಿಸಿದನು. ಭೌತಿಕ ಶಾಸ್ತ್ರದಲ್ಲಿ ಪ್ರಕಾಶದ ವಕ್ರೀಕರಣವನ್ನು, ಕಾಮನ ಬಿಲ್ಲಿನ ಕಾರಣವನ್ನೂ ಸರಿಯಾಗಿ ವಿವರಿಸಿದನು. ಗಾಳಿಯ ತೂಕವನ್ನು ಕಂಡು ಹಿಡಿದನು. ತನ್ನ ಆತ್ಮಕ್ಕೆ ನಿಷ್ಕಪಟಿಯಾಗಿರುವದೇ ಸತ್ಯವೆಂದು ಹೇಳಿದನು. ಗಣಿತದಿಂದ ಯಾವತ್ತು ಜ್ಞಾನಕ್ಷೇತ್ರವೆಂದು ಕ್ರಮಗೊಳಿಸಬಹುದೆಂದು ಹೇಳಿದನು. ವ್ಯಷ್ಟಿಭೂತವಾದ ಅಭಿಪ್ರಾಯಗಳಿಂದ ಒಂದೇ ಒಂದು ತತ್ವವನ್ನು ಹೊರಡಿಸಬಹುದು. ಸತ್ಯವನ್ನು ಶೋಧಿಸಲು ಇವನು ಮೊದಲು ಸಂದೇಹ ಪದ್ಧತಿಯನ್ನು ಅನುಸರಿಸಿದನು. ನಿಷ್ಕಳಂಕವಾದ ಸತ್ಯವನ್ನು ಕಂಡು ಹಿಡಿಯಲು ಮಾತ್ರ ಸಂದೇಹ ಪದ್ಧತಿಯನ್ನು ಸಾಧನವಾಗಿ ಪ್ರಯೋಗಿಸುತ್ತಾನೆ. ಯಾವದೂ ಸ್ಥಿರವಲ್ಲವೆಂದು ಸಂದೇಹಪಡುವಾಗ ನಾನು ಸಂದೇಹ ಪಡುತ್ತೇನೆಂಬದು ನನಗೆ ನಿಶ್ಚಯವಾಗಿ ಗೊತ್ತುಂಟು. ಸಂದೇಹ ಪಡುವದೆಂದರೆ ವಿಚಾರ ಮಾಡುವದು. ಸಂದೇಹ ಪಡುವದರಲ್ಲಿ ನನ್ನ ಅರಿವಿನ ಇರುವಿಕೆಯು ನನಗೆ ಗೊತ್ತಾಗುವದು. ಆದರೆ ಸಂಶಯವಾದವು (*Skepticism*) ಎಲ್ಲ ವಸ್ತುಗಳನ್ನು ಅಲ್ಲಗಳೆಯುವದು. ಆದ್ದರಿಂದ ಅದು ಆತ್ಮವಿರೋಧವಾಗಿದೆ. ನಮ್ಮ ವಿಚಾರಗಳಿಂದ ತಿಳಿಯುವದೇನಂದರೆ ವಿಚಾರ ಮಾಡತಕ್ಕ ನಾನು ಎಂಬ ವಸ್ತುವು ಇರುತ್ತದೆಂಬದು. (*Cogito ergo sum*)

ಆತ್ಮದಲ್ಲಿ ಸತ್ಯವಿದೆ. ಅಂತರಂಗದ ಸಹಜವಾದ ವಿಚಾರಗಳಲ್ಲಿ ದೇವರು ಪರಿಪೂರ್ಣವಾದವನೆಂಬ ವಿಚಾರವು ಒಂದಾಗಿದೆ. ನನ್ನ ಆತ್ಮದ ಇರುವಿಕೆಯು ನನಗೆ ಎಷ್ಟು ಸ್ಪಷ್ಟವಾಗಿ ಗೊತ್ತದೆಯೋ ಅಷ್ಟೇ ಸ್ಪಷ್ಟವಾಗಿ ದೇವರ ಇರುವಿಕೆಯಿದೆ. ಕೆಲವು ವಿಚಾರಗಳ ಗುಣಗಳು ಎಷ್ಟು ಸ್ಥಿರವಾಗಿವೆಯೆಂದರೆ ಆ ವಿಚಾರಗಳ ಬಗ್ಗೆ ಯೋಚಿಸಿದಾಗಲೆಲ್ಲ ಅವುಗಳ ಗುಣಗಳ ಬಗ್ಗೆ ನಾವು ಅವಶ್ಯವಾಗಿ ಯೋಚಿಸುತ್ತೇವೆ. ಹೇಗೆಂದರೆ ತ್ರಿಕೋ

ಣದ ಬಗ್ಗೆ ಯೋಚಿಸಿದಾಗ ಅದರ ಮೂರು ಕೋನಗಳು ಎರಡು ಸಮ ಕೋನಗಳಿಗೆ ಸರಿಯಾಗಿವೆಯೆಂದು ನಾವು ಅವಶ್ಯವಾಗಿ ಯೋಚಿಸುತ್ತೇವೆ.

ಪರಿಪೂರ್ಣ ವಸ್ತುವಿನ ಯೋಚನೆಯು ನನ್ನಲ್ಲಿದೆ. ಈ ಯೋಚನೆಗೆ ಒಂದು ಕಾರಣವಿರಲೇಬೇಕು. ಈ ಕಾರಣವೇ ದೇವರು. ಆತ್ಮದ ಅರಿವಿನ ವಿಚಾರದಿಂದ ಡೇಕಾರ್ಟ್ಸನು ಉಳಿದ ವಿಚಾರಗಳ ಅಸ್ತಿತ್ವವನ್ನು ಹೊರಡಿಸಲು ಪ್ರಯತ್ನಿಸುತ್ತಾನೆ. ಪ್ರಕೃತಿಯ ಅಸ್ತಿತ್ವವು ದೇವರ ಅಸ್ತಿತ್ವದ ಮೇಲೆ ಅವಲಂಬಿಸಿದೆ. ದೇವರು ಇರದಿದ್ದರೆ ಬಾಹ್ಯ ಜಗತ್ತು ನಿರಾಧಾರವೂ ಅಸತ್ಯವೂ ಆಗುವದು. ಆತ್ಮವೂ ಬುದ್ಧಿಯೂ ಒಂದೇ ಎಂದು ಇವನು ಹೇಳುವದರಿಂದ ಇವನು ಬುದ್ಧಿವಾದದ ಸ್ಥಾಪಕನೆಂದು ಕರೆಯಲ್ಪಡುತ್ತಾನೆ. ದೇವರು ಮೂಲ ವಸ್ತುವು ಮತ್ತು ನಿರಾಲಂಬಿಯು. ಪ್ರಕೃತಿ ಮತ್ತು ಆತ್ಮಗಳು ದೇವರ ಮೇಲೆ ಅವಲಂಬಿಸಿವೆ. ಪ್ರಕೃತಿಯ ಮುಖ್ಯ ಗುಣವು ವ್ಯಾಪ್ತಿಯು (*Extension*). ಗುಣಗಳು ವಸ್ತುವಿನಲ್ಲಿ ವಾಸವಾಗಿಲ್ಲ. ಆದರೆ ಅವು ಇಂದ್ರಿಯ ಜ್ಞಾನದ ಪರಿಣಾಮವಾಗಿವೆ. ಸ್ಥಳ, ವ್ಯಾಪ್ತಿ ಮತ್ತು ಪ್ರಕೃತಿಗಳು ಒಂದೇ ಆಗಿವೆ. ಬರಿದಾದ ಸ್ಥಳವು ಇಲ್ಲವೇ ಇಲ್ಲ. ಪ್ರಕೃತಿಯು ಸ್ವಯಂ ಚಲನೆಯುಳ್ಳದ್ದಿರುವದಿಲ್ಲ. ಅದರ ಚಲನೆಯನ್ನುಂಟು ಮಾಡುವವನು ದೇವರಾಗಿದ್ದಾನೆ. ಪ್ರಕೃತಿಯು ಯಂತ್ರ ರೂಪವಾಗಿದ್ದು ದೇವರು ಯಂತ್ರ ರಚಿಸಿದವನೂ ಅದರ ನಿಯಾಮಕನೂ ಆಗಿದ್ದಾನೆ.

---

# ಶಿವಯೋಗದ ನಿಜಸ್ವರೂಪು.

(ಲೇಖಕ:—ಓರ್ವ ವೀರಶೈವ.)

---

ನಮ್ಮ ಸಮಾಜದಲ್ಲಿ ಕೆಲವು ಅಜ್ಞ ಜನರು ಭೂತ ಪಿಶಾಚಾದಿಗಳನ್ನು ಬಿಡಿಸುವವರೂ, ಮಂತ್ರೋಚ್ಚಾಟನ ಮಾಡುವವರೂ, ಯಂತ್ರ-ತಂತ್ರಗಳನ್ನು ಕಟ್ಟುವವರೂ, ಮಕ್ಕಳು ಮರಿಗಳಾಗುತ್ತವೆಂದು ಹೇಳುವವರೂ, ಜೋತಿಷ್ಯ ಹೇಳುವವರೂ ಶಿವಯೋಗಿಗಳೆಂದು ತಿಳಿದಿದ್ದಾರೆ. ಇದು ಶುದ್ಧ ತಪ್ಪು. ಹಾಗೆ ಮಾಡುವವರು ಶಿವಯೋಗಿಗಳಲ್ಲ; ಶಿವಯೋಗವು ಮಾಟಗಾರಿಕೆಯಲ್ಲ; ಮೋಡಿಯಲ್ಲ; ಜಾದುಗಾರಿಕೆಯಲ್ಲ; ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆಯುವದಲ್ಲ; ಇಂದ್ರಜಾಲ ಮಹೇಂದ್ರಜಾಲ

ವಲ್ಲ; ಘಟೋತ್ಕಚನ ಮಾಯಾಜಾಲವಲ್ಲ; ಮೆಸ್‌ಮೆರಿಜಮ್, ಹಿಪ್ನಾಟಿಜಮ್ ಅಲ್ಲ. ಇಂಥ ಕಸರತ್ತುಗಳನ್ನು ಮಾಡುವವರು ಹೊಟ್ಟೆಗಾಗಿ ಜಗತ್ತಿಗೆ ಆಟ ತೋರಿಸುವ ಡೊಂಬರು. ಅಂಥವರ ಮಾತಿನಲ್ಲಿ ವಿಶ್ವಾಸ ಇಡುವದಾಗಲಿ ಅವರ ವಿಷಯದಲ್ಲಿ ಭಕ್ತಿಯನ್ನು ತೋರಿಸುವದಾಗಲಿ ಕೇವಲ ಮೂರ್ಖತನವೇ ಸರಿ.

ಸಕಳೇಶಮಾದರಸರೆಂಬ ಶಿವಶರಣರೊಬ್ಬರು ಹೀಗೆ ಹೇಳಿದ್ದಾರೆ. "ಗಿರಿಯ ಕರದಿಂದ ಎತ್ತಿದರೇನು ? ಹರಿವ ವಾರಿಧಿಯ ಆಪೋಷಣವ ಮಾಡಿದರೇನು ? ಗಗನ ಗಮನದಲ್ಲಿ ಸುಳಿದರೇನು ? ಇವೆಲ್ಲರು ಪವನ ಬಳಿಯ ಅಭ್ಯಾಸಿಗಳು. ಇಂತಹ ಮರ್ತ್ಯದ ಲೌಕಿಕರ ಮೆಚ್ಚ ನಮ್ಮ ಸಕಳೇಶ್ವರ ದೇವರು", ಈ ವಚನದ ತಾತ್ಪರ್ಯವಿಷ್ಟೇ. ಮನುಷ್ಯನು ಬೇಕಾದಂಥ ಕಸರತ್ತು ಅಥವಾ ಶಮರಂತಿಕೆಯನ್ನು ತೋರಿಸಿದರೂ ಕೂಡ ಆತನು ಮರ್ತ್ಯಲೋಕದ ಮಾನವನೇ ವಿನಾ ಶಿವಲೋಕದ ಶರಣನಾಗಲಾರನು. ಉದಾಹರಣಾರ್ಥವಾಗಿ ಶ್ರೀ ಕೃಷ್ಣನು ಮಂದರ ಪರ್ವತವನ್ನು ಕರದಿಂದ ಎತ್ತಿ ಹಿಡಿದನು. ಅಗಸ್ತ್ಯಋಷಿಯು ಸಮುದ್ರದ ನೀರನ್ನು ಒಂದೇ ಕುಡಿತಕ್ಕೆ ಕುಡಿದುಬಿಟ್ಟನು. ವಿಷ್ಣುಬ್ರಹ್ಮಾದಿಗಳು ಗರುಡಹಂಸವಾಹನಗಳನ್ನೇರಿ ಆಕಾಶದಲ್ಲಿ ಸಂಚರಿಸಿದರು. ಇವರೆಲ್ಲರು ವಾಯು ಸಾಧನದಿಂದ ಅಂಥ ಸಾಮರ್ಥ್ಯವನ್ನು ಪಡೆದರು. ಇಂತಹ ಲೌಕಿಕರಿಗೆ ಪರಮಾತ್ಮನು ಮೆಚ್ಚಲಾರನೆಂಬುದೇ ನಮ್ಮ ಸಕಳೇಶ್ವರನ ಅಭಿಪ್ರಾಯವು. ನಾವು ದೇವರೆಂದು ಭಾವಿಸುವ ಬ್ರಹ್ಮ ವಿಷ್ಣು ಮೊದಲಾದವರು ಪವಾಡಮಾಡಿದ್ದರಿಂದ ಶರಣರ ಪಾಲಿಗೆ ಅವರು ಮರ್ತ್ಯರಾಗಿ ಕಾಣುತ್ತಿರುವಾಗ ಲೌಕಿಕದ ಮಾನವರು ಅಂತಹ ಕೆಲಸಗಳನ್ನು ಮಾಡಿದರೇನೆನ್ನಬೇಕು ? ನೊಸಲಲ್ಲಿ ಉರಿಗಣ್ಣುಳ್ಳ ಸಿದ್ಧರಾಮಯೋಗಿಯು ಹಣೆಗಣ್ಣಿನ ಜ್ವಾಲೆಯನ್ನು ಕಾಲಕೆಳಗೆ ತುಳಿದು ಪ್ರಭುದೇವರು ಅವರ ಅಷ್ಟಸಿದ್ಧಿಯ ಗರ್ವವನ್ನು ತಗ್ಗಿಸಿರುವರಲ್ಲವೇ ?

ಗರುಡಿಯಲ್ಲಿ ಸಾಧನ ಮಾಡಿದ ಸ್ಯಾಂಡೋನು ಮೋಟಾರ ತಡೆದು ನಿಲ್ಲಿಸಬಹುದು, ದೊಡ್ಡ ಬಂಡೆಗಲ್ಲನ್ನು ಎದೆಯ ಮೇಲೆ ಹೇರಿಕೊಳ್ಳಬಹುದು. ಎಷ್ಟೋ ಜನ ತಿರುಕರು ಹೊಟ್ಟೆಗಾಗಿ ಕಂದ ಪೀಡಾಸನ ನೌಲಿ ಮುಂತಾದ ಕಷ್ಟತರವಾದ ಆಸನಗಳನ್ನು ಜನರಿಗೆ ಪ್ರದರ್ಶಿಸಿ ಅವರನ್ನು ಬೆರಗುಗೊಳಿಸುವದನ್ನು ನಾವು ಕಣ್ಣಾರೆ ಕಾಣುತ್ತೇವೆ. ಯಾವನೋ ಒಬ್ಬ ಮನುಷ್ಯನು ತನ್ನ ದೇಹಧರ್ಮದಂತೆ ನಡೆದು ೧೫೦ ವರ್ಷ

ಬಾಳಿದನಂತೆ! ಇಂತವರೆಲ್ಲ ಸಾಮಾನ್ಯ ಜೀವರುಗಳೆಂದೇ ನಮ್ಮ ಶಿವ ಶರಣರು ಹೇಳಿದ್ದಾರೆ. ಆಧುನಿಕ ಶಾಸ್ತ್ರೀಯ ಶೋಧ ನಮಗೆ ಬೇಕಾದಷ್ಟು ಕೌತುಕಗಳನ್ನುಂಟು ಮಾಡಿದರೂ ಅವು ಇಹಲೋಕದ ಉಪಜೀವನದ ಕಾರ್ಯಗಳೇ ಹೊರತು ಪಾರಮಾರ್ಥಿಕ ತತ್ವಗಳನೊಳಕೊಂಡಿಲ್ಲ. ನಮ್ಮ ಪುರಾಣಗಳಲ್ಲಿ ಕೆಲವು ಮಹನೀಯರ ಬಗ್ಗೆ ಪವಾಡಗಳನ್ನು ಕಲ್ಪಿಸಿದ್ದು ಸಾಮಾನ್ಯ ಜನರಲ್ಲಿ ಕೌತುಕವನ್ನು ಹುಟ್ಟಿಸುವದಕ್ಕಾಗಿಯೇ ವಿನಾ ಬೇರೆಯಲ್ಲ.

ನಮ್ಮ ಶಿವಯೋಗಿಗಳು ಶಿವಲೋಕದವರು, ಮರ್ತ್ಯರಲ್ಲ. ನಮ್ಮವರು ಸಾಧನ ಮಾಡಿದ್ದು ಅವಿದ್ಯೆಯಲ್ಲ; ವಿದ್ಯೆಯು. 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತ ಮಶ್ನುತೆ' ಎಂಬ ಉಪನಿಷತ್ ವಾಕ್ಯದಂತೆ ನಮ್ಮ ಶಿವಶರಣರು ಕರ್ಮಭಕ್ತಿಗಳೆಂಬ ವಿದ್ಯಗಳನ್ನು ಸಾಧಿಸಿ ಮೋಕ್ಷ ಸುಖವನ್ನು ಪಡೆದರಲ್ಲದೆ ಮೇಲೆ ಹೇಳಿದ ಮಡಗಾಡಸಿದ್ಧರಾಟದಿಂದಲ್ಲ. ನಮ್ಮವರು ಕರ್ಮಯೋಗಿಗಳು ಮತ್ತು ಭಕ್ತಿಯೋಗಿಗಳು. ಕರ್ಮಯೋಗಿಗಳೆಂದರೆ ಜಗತ್ತಿನ ಸದ್ವ್ಯವಹಾರಗಳನ್ನು ಫಲಾಪೇಕ್ಷೆಯಿಲ್ಲದೆ ನಿಷ್ಕಾಮ ಬುದ್ಧಿಯಿಂದ ಮಾಡುವದು. ಭಕ್ತಿಯೋಗವೆಂದರೆ ಗುರು ಕೊಟ್ಟ ಇಷ್ಟಲಿಂಗದಲ್ಲಿ ನಿರ್ಮಲವಾದ ಪ್ರೇಮವನ್ನಳವಡಿಸಿ ಪತಿವ್ರತೆಯಾದ ಸತಿಶಿರೋಮಣಿಯು ಪತಿಯೊಡನೆ ಕೂಡಿ ರಮಿಸುವಂತೆ ಲಿಂಗದ ಕಳೆಗಳನ್ನು ಹೆಚ್ಚಿಸುತ್ತ ಪರಮಾತ್ಮನಲ್ಲಿ ಪಾರವಶ್ಯತೆಯನ್ನು ಹೊಂದುವದು. ಕರ್ಮಯೋಗವು ಸಮಾಜ ಹಿತಕ್ಕೆ ಬೇಕು. ಭಕ್ತಿಯೋಗವು ಸ್ವಂತ ಹಿತಕ್ಕೆ ಬೇಕು.

ಮನುಷ್ಯನು ಸಮಾಜದ ಪ್ರಾಣಿಯಾದ್ದರಿಂದ ಆತನ ಮೇಲೆ ಸಮಾಜದ ಉಪಕಾರಗಳು ಅನೇಕವಾಗುತ್ತಿರುತ್ತವೆ. ಸಮಾಜದ ನಡೆನುಡಿ ರೀತಿ ಪದ್ಧತಿಗಳು ಅವನ ನಡವಳಿಕೆಯಲ್ಲಿ ತೊಡತೊಡಕಾಗಿ ಹೆಣೆಯಲ್ಪಟ್ಟಿರುತ್ತವೆ. ಆದುದರಿಂದ ಸಮಾಜದ ನಿರ್ಬಂಧನೆಗೊಳಗಾದ ಆತನು ಸದಾಚಾರಸಂಪನ್ನನಾಗಿ ಲೋಕಸಂಗ್ರಹ ಕಾರ್ಯಗಳನ್ನು ಮಾಡಲೇಬೇಕಾಗುತ್ತದೆ. ಇದೇ ನಾಗರಿಕನ ಜೀವನದ ರಹಸ್ಯವು. ನಮ್ಮ ಶಿವಶರಣರು ನೂರೆಂಟು ಕಾಯಕಗಳನ್ನು ಮಾಡಿ ಸಮಾಜದ ಸಾಂಪತ್ತಿಕ ಸ್ಥಿತಿಯನ್ನು ಬೆಳಸಿಕೊಂಡದ್ದಲ್ಲದೆ ಸಮಾಜ ಹಿತಕ್ಕಾಗಿ ಅರ್ಥಾತ್ ಗುರುಲಿಂಗಜಂಗಮದ ಸೇವೆಗಾಗಿ ತನು-ಮನ-ಧನಗಳನ್ನು ಸಮರ್ಪಿಸುತ್ತಿದ್ದರು. ಇದೇ ಶಿವಯೋಗವು.

---

# ಸುಜ್ಞಾನ ಸಾರವು.

(ಶ್ರೀ ಶಿವಶರಣ—ಘನಮಠದಾರ್ಯರು)

[ಈ ಕೆಳಗಿನ ಲೇಖವು ಶ್ರೀ ಮಹಾ ಶಿವಶರಣ ಘನಮಠದಾರ್ಯರದು ಇರುತ್ತದೆ. ಈ ಮಹಾನುಭಾವರು ಒಂದು ನೂರು ವರ್ಷಗಳ ಹಿಂದೆ ಉತ್ತರ ಕರ್ನಾಟಕದಲ್ಲಿ ಮಹಾ ಸಾಧುಪುರುಷರೆಂದು ಹೆಸರ್ಗೊಂಡು ಅಸಂಖ್ಯ ಪದ್ಯಗಳನ್ನು ರಚಿಸಿದ್ದಾರೆ. ಈ ಪದ್ಯಗಳು ಇಲ್ಲಿ ಈಗಲೂ ಬಹು ಲೋಕಪ್ರಿಯ ವಾಗಿರುತ್ತವೆ. ಈ ಪ್ರಕಾರ ಈ ಮಹಾನುಭಾವರು ಕೇವಲ ಧಾರ್ಮಿಕ ಪುರುಷರಾಗಿರದೆ ಬಸವಾದಿ ಪ್ರಮಥರ ಮಾರ್ಗವನ್ನು ಚನ್ನಾಗಿ ಅರಿತು ಕೊಂಡು ಅವರ ಕಾಯಕಗಳ ಆಚರಣೆಯನ್ನು ಅಕ್ಷರಶಃ ಪಾಲಿಸುವವ ರಾಗಿದ್ದರು. ಅವರು ಒಕ್ಕಲತನದ ಮೇಲೆ ಒಂದು ಬಹು ಅಮೌಲ್ಯವಾದ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಅವರು ವೀರಶೈವ ಮತದ ವಿಶಾಲ ತತ್ವಗಳನ್ನು ಸಹ ಬಹು ಸುಬೋಧವಾಗಿ ವಿವರಿಸಿ ಅವರು "ಸುಜ್ಞಾನ" ಈ ವಿಷಯದ ಮೇಲೆ ಬರೆದ ವಿಚಾರಗಳು ಬಹು ಮಹತ್ವವಾದವುಗಳು ಇವೆ. ಅವುಗಳನ್ನು ಕೆಳಗೆ ನಾವು ಪ್ರಸಿದ್ಧಿಸಿದ್ದೇವೆ. ಈ ಲೇಖದ ಮೇಲಿಂದ ಶ್ರೀ ಘನಮಠದಾರ್ಯರು ವಚನಶಾಸ್ತ್ರದ ಮಹತ್ವವನ್ನು ಎಷ್ಟು ಚನ್ನಾಗಿ ಅರಿತವರಾಗಿದ್ದರೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಅವರು ಬರೆದ ಕಾಲದಲ್ಲಿ ಕನ್ನಡ ಅಚ್ಚುಕೂಟಗಳಿರಲಿಲ್ಲ ಹಾಗೂ ಅವರು ವಿಶೇಷವಾಗಿ ನಿಜಾಮ ಇಲಾಖೆಯಲ್ಲಿ ಇದ್ದವರು. ಆದ್ದರಿಂದ ಅವರ ಭಾಷೆಯಲ್ಲಿ ಈಗಿನ ಅಚ್ಚುಕಟ್ಟಾದ ನುಡಿಗಳಿರಲಿಕ್ಕಿಲ್ಲ. ಆದರೂ ಅವರು ತಮ್ಮ ವಿಚಾರಗಳನ್ನು ಬಹು ಮನೋವೇಧಕವಾಗಿ ವಿವರಿಸಿದ್ದನ್ನು ನೋಡಿದರೆ ನಾವು ಈ ಲೇಖವನ್ನು ಪ್ರಸಿದ್ಧಿಸಿದ್ದಕ್ಕಾಗಿ ವಾಚಕರು ಬೇಸರಗೊಳ್ಳಲಿಕ್ಕಿಲ್ಲೆಂದು ಭಾವಿಸಿದ್ದೇವೆ ——— **ಸಂಪಾದಕ** ]

ಈ ಕೃಷಿಜ್ಞಾನದಲ್ಲಿ ಸುಜ್ಞಾನವೇನು ಪ್ರಯೋಜನವೆಂದರೆ, ಈ ಪಾರಮಾರ್ಥ ಕೃಷಿಗೆ ಸುಜ್ಞಾನವೇ ಸಾಧನವು. "ಜ್ಞಾನೇನ ವಿನಾ ನಾನ್ಯ ಪಂಥಃ" ಎಂಬ ಶ್ರುತಿಯುಂಟಾಗಿ ಸದ್ಯೋನ್ಮುಕ್ತಿಯಾದ ಜ್ಞಾನಕೃಷಿ ಯಾದ ನಿಜಮೋಕ್ಷಕ್ಕೆ ಜ್ಞಾನದ ವಿನಾ ಬೇರೊಂದು ಯೋಗವಿಲ್ಲವು. ಅದುಕಾರಣ ಸದಾಚಾರಿಗಳಿಗೆ ಸುಜ್ಞಾನವೇ ಬೇಕಾಗಿರುವದಾಗಿ ಸುಜ್ಞಾನ ಸಾರವನ್ನೇ ಹೇಳಬೇಕಾಯಿತು.

ಜ್ಞಾನೋತ್ಕೃಷ್ಟವರ್ಣನೆಯು— ಈ ಸುಜ್ಞಾನವೆಂಬುದು ಶಿವನ ಜ್ಞಾನವು. ಶಿವಜ್ಞಾನವೆಂದರೂ ಬ್ರಹ್ಮಜ್ಞಾನವೆಂದರೂ ಆತ್ಮಜ್ಞಾನವೆಂದರೂ ಸ್ವಾತ್ಮಜ್ಞಾನವೆಂದರೂ ತತ್ವಜ್ಞಾನವೆಂದರೂ ಶಿವತತ್ವಜ್ಞಾನವೆಂದರೂ ಮಹಾಜ್ಞಾನವೆಂದರೂ ಏಕಪರ್ಯಾಯಾರ್ಥವು. ಆದರೆ "ಶಿವಜ್ಞಾನ ನ ಜಾನಾತಿ ಬ್ರಾಹ್ಮಣಃ ಶ್ವಪಚಾ ಧಮಃ" ಎಂದುಂಟಾಗಿ ಶಿವಜ್ಞಾನ ಹೀನ ರಾಗಿ ಉತ್ತಮ ಕುಲದಲ್ಲಿ ಹುಟ್ಟಿದವನಾದರೂ ಅಧಮನೆಂದು ಹೇಳಲ್ಪ ಟ್ಟಿದೆ. "ಬ್ರಹ್ಮಜ್ಞಾನೀ ಚ ಬ್ರಾಹ್ಮಣಃ" ಎಂಬ ಶೃತಿಯುಂಟಾಗಿ ಪೂರ್ವದ ಋಷಿಗಳೆಲ್ಲರು ಕಮ್ಮಾರ ಮಚ್ಚಿಗಾರ ಘೋರ ಕಬ್ಬಲಿಗ ನಾಯುದ ಮೊದ ಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ ಬ್ರಹ್ಮಜ್ಞಾನಿಗಳಾದುದರಿಂದ ಎಲ್ಲರು ಬ್ರಾಹ್ಮಣರಾಗಿ ವರ್ತಿಸಿದರು. ಈಗಲಾದರೂ ಆ ಋಷಿಗಳ ಗೋತ್ರದವರು ಬ್ರಾಹ್ಮಣರೆಂದು ಹೇಳಿಸಿಕೊಳ್ಳುತ್ತಾರೆ. ಇವರಾದರೂ ಬ್ರಹ್ಮಜ್ಞಾನಿಗಳಾದರೆ ಆ ವರ್ಣಕ್ಕೆ ಯೋಗ್ಯರಾಗುವರು. ಬ್ರಾಹ್ಮಣ ವರ್ಣಕ್ಕೆ ಬ್ರಹ್ಮಜ್ಞಾನವೇ ಮುಖ್ಯವು.

"ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ" ಎಂದು ಭಗವದ್ಗೀತೆಯಲ್ಲಿ ಹೇಳುತ್ತಿಹುದಾಗಿ ಮತ್ತು "ನಂಬೋ ಜ್ಞಾನ ವನ್ನೆ । ಕರ್ಮವೆಂಬ ಜಾಲದೊಳು ಶಿಲ್ಕಿ । ಹಂಬಲಿಸದಿರು ಮುಕ್ತಿಯಂ ಬೇರೆ ಬಯಸಿ ಮನುಜ॥" ಎಂದು ನಿಜಗುಣಾರ್ಯರ ವಾಕ್ಯವಿಹುದಾಗಿ ಈ ಸುಜ್ಞಾನವು ವೇದಾಂತಾದಿ ಉಪನಿಷತ್ವಾಕ್ಯಂಗಳಿಂದಲ್ಲದೆ, ತಲೆ ದೋರದಾಗಿ "ವೇದಾಂತಜನ್ಯ ತೇ ಜ್ಞಾನಂ ವಿದ್ಧೇತಿ ಪರಿಕೀರ್ತಿತೆ" "ವಿದ್ಯಾಯಾಂ ರಮತೇ ಯಸ್ಯ ವೀರ ಇತಿ ಬ್ರೂಯತೆ" ಎಂದುಂಟಾಗಿ ವೇದಾಂತದಿಂದುದ್ಭವಿಸಲ್ಪಟ್ಟ ಜ್ಞಾನವೇ ವೀರಶೈವ ಜ್ಞಾನವೆಂದು ಹೇಳಿ ಸುತ್ತಿಹುದಾಗಿ ವೀರಶೈವ ಸದ್ಭಕ್ತರು ವೇದಾಂತ ಸಾರವಾದ ಉಪನಿಷ ದ್ವಾಕ್ಯಂಗಳನ್ನು ನೋಡಬೇಕು. ಅಥವಾ ಉಪನಿಷದ್ವಾಕ್ಯಂಗಳ ಸಾರ ವನ್ನೆಲ್ಲಾ ತೆಗೆದು ಏಕ ಮುಹೂರ್ತದಲ್ಲಿ ತಿಳಿಯುವದಕ್ಕೆ ಆಬಾಲವೃದ್ಧ ರಿಗಾಯಾಸವಿಲ್ಲದ ಹಾಗೆ ಕನ್ನಡ ಬಾಷೆಯಿಂದ ದೇಶ ಭಾಷೆಯಂತೆ ಬೆಳುಗನ್ನಡವಾಗಿ ವಿವೇಕಚಿಂತಾಮಣಿ ಅನುಭವಸಾರ ಪರಮಾನುಭವ ಪಾರಮಾರ್ಥಪ್ರಕಾಶ ಗೀತೆ ಕೈವಲ್ಯಪದ್ಧತಿಗಳೆಂಬ ಷಟ್ಶಾಸ್ತ್ರಗಳನ್ನು ಮೋಕ್ಷ ಚಿಂತಾರತ್ನ ಸ್ವರೂಪವಾಗಿ ಸುಜ್ಞಾನ ದೀಪಿಕೆಯಂತೆ ರಚಿಸಿದ್ದಾರೆ. ಅವುಗಳು ಕನ್ನಡವೆಂದುಪೇಕ್ಷಿಸದೆ ನೋಡಬೇಕು.

ಆದ್ಯರ ವಚನಗಳು ಮತ್ತು ಜ್ಞಾನೋತ್ಕರ್ಷವಾದ ಪ್ರಬಲ ಶಾಸ್ತ್ರಗಳು ಕನ್ನಡದಿಂದಿದ್ದರೆ, ಅವುಗಳನ್ನು ಉಪೇಕ್ಷಿಸಲಾಗದು. ಯಾಕಂದರೆ, ಆದ್ಯರುಗಳಾದ ಬಸವಾದಿ ಪುರಾತನರು ವೇದಾದಿ ಸಕಲ ಶೃತಿ ಸ್ಮೃತಿಗಳೆಲ್ಲ ತಮ್ಮ ಮನೆಯ ಮುಂದಿರುವ ಶುನಕಗಳಿಂದೋದಿಸಿದ ಸಮರ್ಥರಿಗೆ ಸಂಸ್ಕೃತವೇನಾಶ್ಚರ್ಯವು? ಅವರಿಗೆ ಸಂಸ್ಕೃತದಿಂದ ಹೇಳುವ ಸಾಮರ್ಥ್ಯವು ಇದ್ದಿಲ್ಲವೇ ಹ್ಯಾಗೆ? ಕನ್ನಡದಿಂದ ಹೇಳಿದಾಗ್ಯಾದರೂ ಒಂದೊಂದು ವಚನದಲ್ಲಿ ಕೋಟಿ ಕೋಟಿ ಶೃತ್ಯಾಗಮ ಗ್ರಂಥಗಳ ಸಾರವು ಗೂಢವಾಗಿದೆ. ಆದರೆ ಬಸವರಾಜದೇವರಿಗೆ ಸಂಗಮೇಶ್ವರ ದೇವರು ವೇದಾಂತದೊಳಗ್ಗೋಪ್ಯವಾದ ನಿಜೈಕ್ಯ ಭಕ್ತಿಯನ್ನೆ ಪ್ರಕಟಿಸೆಂದು ಉಪದೇಶವಿತ್ತ ಕಾರಣ ನಾಲ್ಕು ಲಕ್ಷ ಮೂವತ್ತಾರುಸಾವಿರ ವಚನಗಳಿಂದ ನಿಜೈಕ್ಯ ಭಕ್ತಿಯ ಚಾತುರ್ಯದ ತಾತ್ಪರ್ಯವನ್ನೇ ಲೋಕಹಿತಾರ್ಥವಾಗಿ ಕನ್ನಡದಲ್ಲಿ ಬೆಳುಗನ್ನಡ ತಿಳಿಗನ್ನಡವಾಗಿ ಬೋಧಿಸಿದರು.

ಬಸವಾದಿ ಪ್ರಭುದೇವರಂತ್ಯಮಾದ ಏಳುನೂರೆಪ್ಪತ್ತು ಪ್ರಮಥಗಣಂಗಳು ಅರವತ್ತುಮೂರು ಪುರಾತನರು ಮತ್ತು ನೂತನ ಪುರಾತನರುಗಳೆಲ್ಲರು ನಡೆದಂತೆ ನುಡಿದು ನುಡಿದಂತೆ ನಡೆದು ಭಕ್ತಿಜ್ಞಾನ ವೈರಾಗ್ಯವಿಡಿದಾಚರಿಸಿ ತೋರಿದ ವೀರಶೈವ ಜ್ಞಾನವೇ ವೇದಾಂತ ಜನ್ಯ ಜ್ಞಾನವಾಗಿ ಸುಜ್ಞಾನವೆನಿಸಿತ್ತು.

ಈ ಸುಜ್ಞಾನದಿಂದ ನಿಜಮೋಕ್ಷವಾಗುವದಲ್ಲದೆ ವೀರಶೈವ ಸುಜ್ಞಾನ ಹೀನವಾದ ಶೃತಿ ವಿರಹಿತವಾಗಿ ಅನ್ಯ ಮತದವರು ಹೇಳುವಂಥ ಬಹುಮುಖದ ಜ್ಞಾನವೆಲ್ಲ ಜಡಕರ್ಮದಿಂದ ಭಿನ್ನಜ್ಞಾನವಾಗಿ ಮೋಕ್ಷಕ್ಕೆ ಪ್ರಯೋಜನವಲ್ಲವು. ಮತ್ತು ಮೋಕ್ಷಾಪೇಕ್ಷೆಯುಳ್ಳವರು ಇದಲ್ಲದೆ ಲೌಕಿಕ ಭೋಗ ಭುಕ್ತಾಪೇಕ್ಷೆಯುಳ್ಳವರು ಈ ಜ್ಞಾನವನ್ನೇ ದೃಢವಾಗಿ ನಂಬಬೇಕು. ಈ ಸುಜ್ಞಾನದಿಂದ ಸಕಲ ಕಾಮ್ಯಾರ್ಥಂಗಳು ಕಾಮಿಯಾದವನಿಗೆ ಸಂಭವಿಸುತ್ತಿಹವು. ನಿಷ್ಕಾಮಿಗೆ ನಿಜಮೋಕ್ಷ ಸಂಭವಿಸುವದು.

ಈ ಸುಜ್ಞಾನವೆಂಬುವದು ಗೋಚರವಾಗಿ ನಿದರ್ಶನಕ್ಕೆ ನಿಲ್ಲಬೇಕಾದರೆ, ಸಕಲ ಶಾಸ್ತ್ರಂಗಳ ಬಲವಿಲ್ಲದೇ ಘಟಿಸದಾಗಿ ಜಗದ ಜನರು ತಿಳಿಯಲೆಂದು ವೇದಾದಿ ಸಕಲ ಶಾಸ್ತ್ರಂಗಳ ಸಾರವೆಲ್ಲಾ ಸರ್ವರಿಗೆ ತಿಳಿದು ಕೃತಾರ್ಥರಾಗಲೆಂದು ನಿಜಗುಣ ಶಿವಯೋಗಿಗಳು ಕನ್ನಡದಿಂದ ರಚಿಸಿದ ಷಟ್ಶಾಸ್ತ್ರವನ್ನು ಮೊದಲು ನೋಡಬೇಕು. ತರುವಾಯದಲ್ಲಿ ಆದ್ಯರ

ವಚನಂಗಳ ನೋಡಿ ಷಟ್‌ಸ್ಥಲ ಬ್ರಹ್ಮಿಯಾಗಿ ಜ್ಞಾನ ಕ್ರಿಯೆಗಳಿಂದ ವರ್ತಿಸಬೇಕು. ಯಾಕಂದರೆ "ಗುರು ವಚನದಿಂದಧಿಕ ಸುಧೆಯುಂಟೆ" ಎಂದು ನಿಜಗುಣಾರಾಧ್ಯರು ಹೇಳಿದ್ದಾರೆ.

ಸುಜ್ಞಾನವೆಂಬುದು ಕೇವಲ ಶಿವತತ್ವದಂಶವು. ಅದು ಕಾರಣ ಅದಕ್ಕೆ ಶಿವಜ್ಞಾನವೆಂಬ ಹೆಸರಾಯಿತು. ಸುಜ್ಞಾನವೆಂಬುದು ಬಚ್ಚ ಬರಿಯ ಅಚ್ಚ ಪ್ರಕಾಶವು. ಈ ಪ್ರಕಾಶಕ್ಕೆ ಅನಂತ ಕೋಟಿ ಸೂರ್ಯ ಚಂದ್ರರುಗಳ ಪ್ರಕಾಶವು ಸಮಬಾರದು. ಈ ಪರಮ ಪ್ರಕಾಶರೂಪವಾದ ಶಿವಜ್ಞಾನವೆನಿಪ ಸುಜ್ಞಾನಕ್ಕೆ ಪರಂಜ್ಯೋತಿ ಎಂದೂ ನಿರುಪಾಧಿ ಜ್ಯೋತಿ ಎಂದೂ ಶೃತಿಗಳು ಸಾರುತ್ತವೆ.

ಈ ಸುಜ್ಞಾನವೆಂಬ ಮೋಕ್ಷ ಚಿಂತಾರತ್ನವನ್ನು ವೇದಾದಿ ಸಕಲ ಶೃತಿ ಸ್ಮೃತಿಗಳು ಹಲವು ರೀತಿಯಿಂದ ಬಣ್ಣಿಸುತ್ತಿಹವು. ಹ್ಯಾಗೆಂದರೆ, ಈ ಶಿವಜ್ಞಾನವು ದುರಿತ ಕಾನನವಗ್ನಿ। ಪರಿಭವ ಘನಚಂದ ಮರುತ। ಅಜ್ಞಾನ ತಿಮಿರ ತರಣಿ। ಮಾನಸ ಕುಲಗಿರಿ ವಜ್ರ। ಅನುತಾಪ ಸರಸಿಜ ಹಿಮವಿದೆಂದು॥ ಮತ್ತು, ಸಾರ ಸುಖದ ಸುಧಾವಾರಿದಿ ಸುಕೃತದ ಮೇರು ಮುಕ್ತಿಯ ಜನ್ಮಭೂಮಿ ಚಾರು ಸಿದ್ಧಿಗಳ ಮಂದಾರ ದಿರವಿನ ಮೂಲ ಕಾರಣವಿದೆಂದು ನಿಗಮಂಗಳರಸುವವು, ಮುನಿ ಜನರು ಧ್ಯಾನಿಸುವರು, ಸುರೋರುಗರ ಜಾಣ್ಮೆಗೆ ಶಿಲುಕದು, ಜಗದಾಗು ಹೋಗೆನಿಪ ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಂಗಳೊಳು ಸಿಲುಕದೆ ವಿಲಕ್ಷಣವಾಗಿ ಅವಿರಳ ಸಾಕ್ಷಿ ಚೈತನ್ಯ ಸ್ವರೂಪವಾದ ಶಿವಲಿಂಗದಗಣಿತನಿಜವಿದೆಂದು, ಸಕಲ ವೇದಾದಿ ಶೃತಿ ಸ್ಮೃತ್ಯರ್ಥಂಗಳು ಸರ್ವ ಶಾಸ್ತ್ರಾಗಮಂಗಳು ಜ್ಞಾನೋತ್ಕರ್ಷವನ್ನೇ ಬಣ್ಣಿಸುತ್ತಿಹವಾಗಿ "ಜ್ಞಾನಮಾನಂದಮವ್ಯಯಂ"॥ ಎಂದು "ಜ್ಞಾನೇನ ವಿನಾ ನಾನ್ಯ ಪಂಥಃ" ಎಂದು ಈ ಸುಜ್ಞಾನದ ವರ್ಣನೆಯುಂಟು. "ಆಹಾರ ನಿದ್ರಾ ಭಯ ಮೈಥುನಂ ಚ। ಸಮಾನ ಮೇತತ್ಪಶುಭಿರ್ನರಾಣಾಂ॥ ಜ್ಞಾನೀ ನರಾಣಾಂ ಅಧಿಕೋ ವಿಶೇಷಃ। ಜ್ಞಾನೇನ ಹೀನಃ ಪಶುಭಿಃ ಸಮಾನಃ॥ ಎಂಬ ಪ್ರಮಾಣಗಳುಂಟಾಗಿ ಸುಜ್ಞಾನ ಹೀನರಾದ ನರ ಸುರೋರುಗರೆಲ್ಲರು ಪಶುಗಳೆಂದೇ ಹೇಳತಕ್ಕದ್ದು.

ಈ ಸುಜ್ಞಾನೋತ್ಪತ್ತಿಗೆ ಮೊದಲು ಗುರುಕಾರುಣ್ಯವಿಲ್ಲದೆ ಸಿದ್ಧಿಸದಾಗಿ ಗುರುಕಾರುಣ್ಯದಿಂದ ಜೀವ ಸಂಬೋಧನವದರಿಂ ಮೇಲೆ ನೀತಿ ಕ್ರಿಯಾಚರಣೆ, ಆ ಬಳಿಕ ಶಿವಯೋಗ ಸಾಧನ, ಅದರಿಂ ಬಳಿಕ ಸುಜ್ಞಾನ

ನಿಯೋಗವೆನಿಪ ನಿಜಾನಂದ ಜ್ಞಾನೈಶ್ವರ್ಯ ರೂಪವಾದ ಸದ್ಯೋನ್ಮುಕ್ತಿ ಎಂಬ ಶಿವೈಕ್ಯ ಸಂಪದ ನಿಜಮೋಕ್ಷವಹುದಾಗಿ "ನಂಬೋ ಜ್ಞಾನವನ್ನೇ" ಎಂದು ಬಲ್ಲ ಮಹಾತ್ಮರು ಹೇಳಿದ್ದಾರೆ. ಮತ್ತು ಸಕಲ ಶಾಸ್ತ್ರಗಳಾದರೂ ಇದರಂತೆ ಬೋಧಿಸುತ್ತವೆ.

## ಸುಜ್ಞಾನಸಾರದಲ್ಲಿಯ ಯುಕ್ತೀಕೃತವು.

॥ಶ್ಲೋಕ॥ ಲೋಕಸಿದ್ಧಿ ನಿರಾಪೇಕ್ಷಂ । ಜ್ಞಾನಸಿದ್ಧಿ ದಯಾಪರಃ ॥ ಕಾಯಸಿದ್ಧೀ ಸದಾಚಾರಂ । ವಿದ್ಯಾಸಿದ್ಧಿ ನಿಗರ್ವತಾ ॥ ಎಂದಲ್ಲಿ ಈ ಸುಜ್ಞಾನ ಕೃಷಿಯಲ್ಲಿ ಭಕ್ತದೇಹವೆಂಬ ಶಿವಕ್ಷೇತ್ರವನ್ನು ಶ್ರೀಗುರುವೆಂಬ ಕೃಷಿಕನು, ಕುಂಟೆಯ ಕಟ್ಟಿ ಹರಗಿ ಬಿತ್ತಬೇಕಾದರೆ, ಸತ್ಕ್ರಿಯೆ ಸದಾಚಾರಗಳ ವರ್ತನೆಯಿಂದ ಹಸನಾದ ಭೂಮಿಯಾದರೆ ಬಿತ್ತುವನಲ್ಲದೆ, ಕಲ್ಲುಮೊರಡಿಗಳೆನಿಪ ಕಾಡುಭೂಮಿಯಾದ ಜಾಲಿ ಬೊಬ್ಬಲಿ ನಟ್ಟು ಬೆಳೆದ ಬೀಳುಭೂಮಿಯಿಂದ ಅನಾಚಾರಿಗಳ ಹೃದಯದಲ್ಲಿ ಮಾಂಗಲ್ಯ ಸ್ವರೂಪವಾದ ಶಂಕರ ಭಕ್ತಿಯೆಂಬ ಪ್ರಣವ ಬೀಜವನ್ನು ಬಿತ್ತುವನೇ ? ಬಿತ್ತಲರಿಯನು. ಅದು ಕಾರಣ ಜೀವನೆಂಬ ರಾಜನು ಶರೀರವೆಂಬ ಕ್ಷೇತ್ರವನ್ನು ಶ್ರೀಗುರುವೆಂಬ ಬಾದಶಹ ರೈತನಿಗೆ ಸಮರ್ಪಿಸಿ ಕೌಲು ಕರಾರು ಕೊಟ್ಟಲ್ಲಿ, ಸಾಗುಮಾಡಿ, ಸುಜ್ಞಾನ ಬೀಜವ ಬಿತ್ತುವನಲ್ಲದೆ, ಸುಮ್ಮನೆ ತನ್ನ ವಶಕ್ಕೆ ಬಾರದ ಬೀಳು ಭೂಮಿಯಲ್ಲಿ ಬಿತ್ತಲರಿಯನು. ಈ ದೃಷ್ಟಾಂತದ ತಾತ್ಪರ್ಯವೇನಂದರೆ, ಮೋಕ್ಷಾಪೇಕ್ಷೆಯುಳ್ಳವರುಗಳು ಸುಜ್ಞಾನದ ಬೆಳೆಯನ್ನು ಮಾಡಿಕೊಳ್ಳಬೇಕಾದರೆ ಕೌಲು ಕರಾರು ಕೊಡಬೇಕೆಂಬುದೇ ಯತ್ನವು. ಯತ್ನಮಾಡಿ ಜ್ಞಾನವನ್ನು ಪಡೆದರೆ, ಮುಕ್ತರಾದಾರಲ್ಲದೆ, ಜ್ಞಾನ ಹೀನರಾಗಿ ಅಲ್ಪ ಸ್ವಲ್ಪ ಸತ್ಕ್ರಿಯೆಗಳಿಂದೆ ತನ್ನಿಂದ ತಾನೇ ಮುಕ್ತಿಯಾದೀತೆಂದರೆ, ಆಗಬಹುದೆ ? ಆಗಲರಿಯದು. ಸಾಕ್ಷಿ. "ಕರ್ಮಕೋಟಿಗಳಿಂದ ಮುಕ್ತಿಯಾಗುವದುಂಟೆ ? ॥ " ಎಂಬ ಪದದಲ್ಲಿ ಸರ್ಪಭೂಷಣ ಕವಿಗಳು ಹೇಳಿದ್ದಾರೆ. ಇದಲ್ಲದೆ, "ಕರ್ಮವೆಂಬ ಜಾಲದೊಳು ಸಿಲುಕಿ ಹಂಬಲಿಸದಿರು ಮುಕ್ತಿಯ ॥ ಬೇರೆ ಬಯಸಿ ಮನುಜಾ॥ ನಂಬೋ ಜ್ಞಾನವನ್ನೆ॥ " ಎಂಬ ಪದದಲ್ಲಿ ನಿಜಗುಣಾರ್ಯರು ಹೇಳಿದ್ದಾರೆ.

ಕೆಲವು ಸತ್ಕರ್ಮಯುತರಾದವರು ಜ್ಞಾನ ಹೀನರಾಗಿ ಅಂಬು ವದೇನಂದರೆ ಮೋಕ್ಷಕ್ಕೆ ಯತ್ನವೇತಕ್ಕೆ ಬೇಕು, ಯತ್ನದಿಂದ ಸುಜ್ಞಾನಿ ಯಾಗಬೇಕಾದರೆ ಭಕ್ತಿಜ್ಞಾನ ವೈರಾಗ್ಯದಿಂದಾಚರಿಸಿ ಲೋಕದಂತಿರದೆ, ಲೋಕವಿರುದ್ಧನಾಗದೆ ನಡೆನುಡಿಗಳಲ್ಲಿ ಬಹು ಎಚ್ಚರದಿಂದ ವರ್ತಿಸಬೇಕಾ ಗುತ್ತದೆ. ಆದರೆ ಇಷ್ಟು ಪ್ರಯತ್ನವೇತಕೆ? ಹಿಂದೆ ಸ್ವಲ್ಪ ಸ್ವಲ್ಪ ಸತ್ಕ ರ್ಮಗಳಿಂದ ಶ್ವೇತಾದಿಗಳಿಗೆ ಮುಕ್ತಿಯೋಗವಿಲ್ಲವೆ? ಎಂದು ನಿಜಗು ಣಾರಾಧ್ಯರು ಹೇಳಿದ ಒಂದು ಮಾತಿನಾಧಾರದಿಂದ ಸಮ್ಮತ ಮಾಡಿ ಕೊಂಡು ಯತ್ನಹೀನರಾಗುತ್ತಾರೆ. ಹೇಗೆಂದರೆ "ಶಲಬಜಾಯಿಲಾನೆ ಪಂದಿ ಮಲ ನಿರುಂಪಿ," ಹದ್ದು ಹಕ್ಕಿಗಳನ್ನು ಶಂಭುಲಿಂಗವಮರ ಕುಲಕೆ ಮಿಗಿಲೆನಿಸಿದನಾಗಿ ಎಂದು ನಿಜಗುಣಾರ್ಯರು ಹೇಳಲಿಲ್ಲವೇ? ಎಂದೆನ್ನು ತ್ತಾರೆ. ಇದಕ್ಕುತ್ತರವೇನಂದರೆ, " ಸದರವಲ್ಲವೇ ತಿಳಿಯೆ ಸದರವಲ್ಲವೇ ಮದನವೈರಿ ತನ್ನವರ್ಗೆ ಪದುಳದಿಂದ ಕೊಡುವ ಮುಕ್ತಿ ಸದರವಲ್ಲವೆ" ಎಂದು ಪದದ ಪಲ್ಲವಿಯಲ್ಲಿ ನಿಜಗುಣಾರಾಧ್ಯರು ಹೇಳಿದ್ದಾರೆ. ಇದರ ಅಭಿಪ್ರಾ ಯವೇನಂದರೆ, ಈ ಶ್ವೇತಾದಿಗಳಾದರೂ ಹಿಂದೆ ಹೇಳಿದ ಮೃಗಪಕ್ಷಿಗಳಾ ದರೂ ಪರಶಿವಮೂರ್ತಿಗೆ ಸಾನ್ನಿಧ್ಯರಾಗಿ ಸುಜ್ಞಾನದಿಂದ ಶಿವನವರಾದ ಕಾರಣ ತನ್ನವರಿಗೆ ಕೊಡುವ ಮುಕ್ತಿ ಸುಲಭವೆಂದು ಹೇಳಿದ್ದಾರಲ್ಲದೆ ಈ ಲೋಕದ ಜಡಕರ್ಮಿಗಳು ಅಲ್ಪಸ್ವಲ್ಪ ಭಿನ್ನಕರ್ಮಗಳನ್ನು ಮಾಡಿ ನಿಜ ಯತ್ನವಿಲ್ಲದೆ ನಾವು ಮುಕ್ತರಾಗುವೆವೆಂದರೆ ಮುಕ್ತರಾಗುವದುಂಟೆ? ಇದಕ್ಕೆ ಜ್ಞಾನ ಸಾಧನದಿಂದ ಪ್ರಯತ್ನಮಾಡಿ ಅಭಿನ್ನ ಕ್ರಿಯೆಗಳಿಂದ ಶ್ರೀ ವೀರಶೈವಾಚಾರ ಹಿಡಿದು ನಿರಾಭಾರತ್ವದಿಂದ ಪರಿಪೂರ್ಣ ಮಹಾಜ್ಞಾನಿ ಎನಿಸಿ ಶಿವೈಕ್ಯವಂ ಪಡೆದರೆ ಬಂದೀತಲ್ಲದೆ, ಯತ್ನವಿಲ್ಲದೆ ಭವಹಿಂಗುವ ದುಂಟೆ?

ಬಹು ಜನ್ಮಕೃತೈಃ ಪುಣ್ಯೈಃ। ಪ್ರಕ್ಷೀಣೈಃ ಪಾಪ ಪಂಜರೈಃ॥ ಶುದ್ಧಾಂತಃಕರಣೋ ದೇಹಿ। ಪಿಂಡ ಶಬ್ದೇನ ಗೀಯತೆ॥ ಮತ್ತು॥ ಅನೇಕ ಜನ್ಮಸಂಪ್ರಾಪ್ತಿ। ಕರ್ಮಧ್ಯಾನ ಸಮಾಧಿಭಿಃ॥ ನರಾಣಾಂ ಕ್ಷೀಣ ಪಾಪಾ ನಾಂ। ಶಿವಭಕ್ತಿ ಪ್ರಜಾಯತೆ॥ ಎಂದುಂಟಾಗಿ ಸದ್ಭಕ್ತಿ ಸದಾಚಾರ ಸಮ್ಯಜ್ಞಾನಂಗಳು ಹುಟ್ಟಬೇಕಾದರೆ, ಹಿಂದೆ ಅನಂತ ಜನ್ಮಂಗಳಲ್ಲಿ ಮಾಡಿದ ಸುಕೃತದಿಂದ ಶಿವಭಕ್ತಿ ಹುಟ್ಟುತ್ತಿಹುದು. ಅದರಲ್ಲಿ ಯಾವ ಬೀಜವನ್ನು ಬಿತ್ತಿದರೆ ಆ ಫಲವಾಗುವಂತೆ ಕರ್ಮವನ್ನು ಮಾಡಿ ಕರ್ಮಸಂಬಂಧದ

ಪುಣ್ಯ ಸಂಗ್ರಹದಿಂದ ಕರ್ಮಫಲವೇ ಪ್ರಾಪ್ತಿಸುವದು. ನಿರಾಭಾರ ಪರಮ ವೀರಶೈವ ಪಥವಿಡಿದು ಮಾಡಿದ ಅಭಿನ್ನ ಸತ್ಕ್ರಿಯೆಗಳಿಂದ ನಿಜ ಮೋಕ್ಷ ವಾಗುವದು. ಅದು ಕಾರಣ ಯತ್ನವಿಲ್ಲದೆ, ಯಾವ ಕಾರ್ಯವೂ ಫಲಿ ಸಲರಿಯದು. ಸಾಕ್ಷಿ "ಉದ್ಯೋಗಿನಂ ಪುರುಷ ಸಿಂಹಮುಪೈತಿ ಲಕ್ಷ್ಮೀಃ ದೈವ ಪ್ರಧಾನ ಇತಿ ಕೆಪುರುಷಾವದಂತಿ॥ ದೈವಂ ವಿಹಾಯಕುರು ಪೌರುಷ ಮಾತ್ಮ ಶಕ್ತ್ಯಾ ॥ ಯತ್ನೀಕೃತೆ ಯದಿ ನ ಸಿಧ್ಯತಿ ಕೋತ್ರ ದೋಷಃ ॥ ಉದ್ಯೋಗವನ್ನು ಮಾಡುವ ಪುರುಷ ಶ್ರೇಷ್ಠನನ್ನು ಮೆಚ್ಚಿ ಪ್ರಸನ್ನಳಾಗಿ ಅವನ ವಶೀಕೃತಳಾಗುತ್ತಾಳೆ. ಇದಲ್ಲದೆ ಕೆಲವು ಪುರುಷರು ದೈವ ಪ್ರಧಾನವೆನ್ನುತ್ತಾರೆ. ಆ ಮಾತನ್ನು ನಂಬದೆ ತಮ್ಮಾತ್ಮಶಕ್ತಿ ಇದ್ದಷ್ಟು ಪೂರ್ತಿಗಾದರು ಪ್ರಯತ್ನ ಮಾಡೇನು, ಪಡೆದೇನು ಎಂಬ ಪರಾಕ್ರಮ ದಿಂದ ಪರಮಾತ್ಮನನ್ನು ಕುರಿತು ಧ್ಯಾನ ಪೂಜಾ ನಮಸ್ಕಾರ ಸ್ತೋತ್ರಂಗ ಳಿಂದ ಒಲಿಸಿ ಭೋಗ ಭುಕ್ತಾಪೇಕ್ಷಿತರಾಗಿ ಸಕಲ ಪ್ರಯತ್ನಾದಿಗಳನ್ನು ಮಾಡಿ ಮಹದೈಶ್ವರ್ಯಗಳನ್ನು ಪಡೆಯಬೇಕು. ಮತ್ತು ಅಧಿಕಾರಿಗಳಾ ದರೆ ವೀರತ್ವದಿಂದ ವೀರ ಭಕ್ತಿಯನ್ನು ಮಾಡಿ ವೀರಶೈವಾಚಾರ ತತ್ಪರರಾಗಿ ನಿಜ ಮೋಕ್ಷವನ್ನು ಪಡೆಯಬೇಕು.

## ಸುಜ್ಞಾನ ಸಂಪಾದನೆ.

ಸುಜ್ಞಾನದ ಲಕ್ಷಣವೆಂತೆಂದಡೆ, "ಅದಿದೆಂಬುದಖಿಳ ತತ್ವವ ನೇತಿ ಗಳೆದುಳಿದ ಪದಮಳ ಚಿದಾನಂದ ಪೂರ್ಣ ತಾನೆಂದು ಹೃದಯದೊಳು ನಂಬಿ ಬಹು ಮತವನೆಣಿಸದೆ ಮತ್ತೆ ಪದುಳದಿಂದಿರದೇ ಸಹಜ ಸುಜ್ಞಾನ" ಈ ಪ್ರಕಾರ ನಿಜಗುಣ ಶಿವಯೋಗಿಗಳು ಸುಜ್ಞಾನದ ಕುರುಹನ್ನು ಹೇಳಿ ದ್ದಾರೆ- ಅದು ಹ್ಯಾಗೆಂದರೆ, ತನಗೆ ಅಂತರ್ಬಾಹ್ಯದಲ್ಲಿ ಕರಣಾದಿ ಇಂದ್ರಿಯಂಗಳಿಗೆ ಸ್ಥೂಲ ಸೂಕ್ಷ್ಮ ರೂಪದಿಂದ ಎದುರಾಗಿ ಕಾಣಿಸುವ ಪಿಂಡ ಬ್ರಹ್ಮಾಂಡಗಳಲ್ಲಿರುವ ಸಕಲ ತತ್ವಗಳನ್ನು ಜಡರೂಪವೆಂದು ನೇತಿಗಳೆದು ತನಗೆದುರಾಗಿ ಕಾಣಿಸದೆ ಉಳಿದಿರುವ ತತ್ವವಾವುದುಂಟೋ ಆ ತತ್ವವೇ ತಾನೆಂದು ನಿಶ್ಚಯಿಸತಕ್ಕದ್ದು. ಆದರೆ ಆ ವಸ್ತುವು ನಿಜವ ಹುದೋ ಅಲ್ಲವೋ ಎಂಬ ಪರೀಕ್ಷೆಗೆ ಸತ್ ಚಿತ್ ಆನಂದ ನಿತ್ಯ ಪರಿ ಪೂರ್ಣವೆಂಬ ಪಂಚ ಲಕ್ಷಣಗಳುಂಟು. ಆ ಪಂಚಲಕ್ಷಣಗಳುಳ್ಳದ್ದೇ ವಸ್ತುವಹುದೆಂದು ನಿರ್ಧರಿಸತಕ್ಕದ್ದು. ಈ ಪಂಚಲಕ್ಷಣಗಳ ಆಧಾರದ ಊಹೆಯಿಂದ ಅಪರೋಕ್ಷ ಜ್ಞಾನದಲ್ಲಿ ವಸ್ತು ನಿರ್ದೇಶವಾದಾಗಲೇ ಆ

ವಸ್ತುವೇ ಸತ್ ಚಿತ್ ಆನಂದ ಪರಿಪೂರ್ಣ ತಾನೆಂದು ಹೃದಯ ದೊಳು ನಂಬಿ, ಬಹಳವಾದ ಭಿನ್ನ ಜ್ಞಾನ ಮತಗಳನ್ನು ಗಣನೆಗೆ ತಾರದೆ, ವೇದ ಸಮ್ಮತವಾದ ಶಿವಮತದ ಸಕಲ ಶಿವಾಗಮಂಗಳಿಗ ನುಸಾರವಾಗಿ ಆದ್ಯರ ವಚನಾನುಭಾವವಿಡಿದು, ಆಚರಿಸುತ್ತ ಆನಂದ ಮಯನಾಗಿ ಪೂರ್ಣ ತಾನಾಗಿ ಏಕಾತ್ಮನಾಗಿ ತನಗನ್ಯವೇನೇನು ತೋರದೆ ಸರ್ವ ಸಮತಾಭಾವಿಯಾಗಿ ಅಣು ರೇಣು ತೃಣಗಳಲ್ಲಾದರೂ ತನ್ನನೇ ಕಾಣುತ್ತ ಇರುವದೇ ಸಹಜ ಸುಜ್ಞಾನವು. ಈ ಮಹಾ ಜ್ಞಾನವೇ ನಿರಾಭಾರಿ ವೀರಶೈವಾಚಾರ ಸ್ಥಿತಿ ಎಂದೆನಿಸುತ್ತದೆ. ಸಾಕ್ಷಿಃ—"ನ ಕರ್ಮಣಾ ನ ತಪಸಾ। ನ ಜಪೇನ ಸಮಾಧಿಭಿಃ॥ ಆಮಾಯ ಶಿವಮಾರ್ಗೇಽಸ್ಮಿನ್। ಭಕ್ತಿರೇಕಾ ಪ್ರದರ್ಶ್ಯತೇ॥ ಮತ್ತು॥ ನ ಯೋಗೋ ನ ತಪೋನಾರ್ಚನೋ। ಕ್ರಮೊ ಕೋಪಿ ನ ವಿದ್ಯತೇ॥ ಅಮೋಯ ಶಿವ ಮಾರ್ಗೇಽಸ್ಮಿನ್। ಭಕ್ತಿರೇಕ ಪ್ರದರ್ಶ್ಯತೇ॥ ಇಂತೆಂಬ ಶೃತಿ ವಾಕ್ಯ ಪ್ರಮಾಣದಿಂದ ಪೂರ್ಣ ನಂದನಾ ಗಿರ್ಪುದೆ ಸುಜ್ಞಾನವೆನಿಸುವದು. ಇದುವೇ ಜೀವನ್ಮುಕ್ತಿ ಲಕ್ಷಣವು.

ಈ ಸುಜ್ಞಾನವು ತನಗೆ ಗೋಚರಿಸಿ ದೃಢವಾಗಬೇಕಾದರೆ, ಜಗ ದುಪಕಾರಿಗಳಾದ ನಿಜಗುಣ ಶಿವಯೋಗಿಗಳಿಂದ ರಚಿಸಲ್ಪಟ್ಟ ಅನು ಭವಸಾರದ ಅರ್ಥಾನ್ವಯವನ್ನು ಚನ್ನಾಗಿ ತಿಳಿದರೆ ಆ ಗ್ರಂಥದ ಎರಡನೇ ಅಧ್ಯಾಯದಲ್ಲಿ ವಸ್ತುನಿರ್ದೆಶವಾಗುವದು. ಮತ್ತು ಪರಮಾನುಭವ ಬೋಧೆಯ ಪ್ರಥಮದ ಮೂರು ಅಧ್ಯಾಯಗಳಲ್ಲಿ ತತ್ವಜ್ಞಾನದ ಬಲಿಕೆ ಯಾಗುವದು. ಗೀತೆಯಲ್ಲಿ ಸಕಲ ತತ್ವಾದಿಗಳುದಯವು. ಮತ್ತು ಪಂಚೀ ಕರಣಗಳ ಕುರುಹು ಸಪ್ತ ಭೂಮಿಕೆ ಎಂಬ ಜೀವನ್ಮುಕ್ತರ ಸಪ್ತ ವಿಧ ಸ್ಥಿತಿಗಳು, ಹೃದ್ವೇದ್ಯವಾಗುವವು. ಪಾರಮಾರ್ಥ ಪ್ರಕಾಶದಲ್ಲಿ ಸಕಲಯೋಗ ಲಕ್ಷಣಗಳು ಮಂತ್ರ ಜಪಾನುಷ್ಠಾನದ ಕ್ರಮಗಳು ಸಮಸ್ತ ಸಿದ್ಧಿಗಳು ತಿಳಿಯಲ್ಪಡುವವು. ವಿವೇಕ ಚಿಂತಾಮಣಿಯಲ್ಲಿ ಸಕಲ ಲಕ್ಷಣ ಗಳು ಸಕಲಾಗಮಂಗಳು ವೀರಶೈವ ನಿರಾಭಾರಿ ವೀರಶೈವ ಲಕ್ಷಣಗಳು ಮತ್ತು ಬ್ರಹ್ಮಾಂಡದ ಸಕಲ ಲಕ್ಷಣಗಳು ಮನನವಾಗುವವು. ಕೈವಲ್ಯ ಪದ್ಧತಿಯಲ್ಲಿ ಜ್ಞಾನಸಿದ್ಧಿ ಜೀವನ್ಮುಕ್ತಿ ಸ್ಥಿತಿಯನ್ನು ನಿರ್ಧರಗೊಳಿಸುವದು. ಈ ರೀತಿಯಿಂದ ಸುಜ್ಞಾನೋದಯಕ್ಕೆ ಸಕಲ ಶೃತಿ ಸ್ಮೃತಿ ವೇದಾಗಮ ಸಮ್ಮತವಾದ ಸಾರ ತರದ ಪ್ರಬಲ ಶಾಸ್ತ್ರಗಳಿರಲಾಗಿ ಅವುಗಳ ಸಾರ ವನ್ನು ಸುಜ್ಞಾನ ಪ್ರಕರಣದಲ್ಲಿ ಬರೆಯಬೇಕೆಂಬ ಪ್ರಯೋಜನವಿಲ್ಲ.

ಆದಾಗ್ಯೂ ನಿಜಗುಣಯೋಗಿಗಳ ಷಟ್‌ಶಾಸ್ತ್ರಂಗಳ ಸಾರವನ್ನೆಲ್ಲಾ ಸಂಕ್ಷೇಪಕ್ಕೆ ತಂದು ಸುಲಭದಿಂದ ತಿಳಿಯುವ ಹಾಗೆ ಬರೆದರೂ ಉತ್ತಮವೇ ಸರಿ.

ಈ ನಿಜಗುಣಯೋಗಿಗಳ ಷಟ್ಛಾಸ್ತ್ರಂಗಳನಾದರೂ ಸಹಜವಾಗಿ ಅರ್ಥ ಮಾಡಿ ಇದ್ದಕಿದ್ದ ಹಾಗೆ ಅರ್ಥ ಮಾಡಿ ತಿಳಿಯಲರಿಯದೆ ವಾಗ್ಬ್ರಹ್ಮತ್ವದ ಚಾಪಲ್ಯದ ಮಾತು ಕಲಿತು ತಮ್ಮ ದುರ್ಗುಣವನ್ನು ಮರೆಸಿಕೊಂಬುವದಕ್ಕೆ ತಮ್ಮ ತಮ್ಮ ದುರ್ವರ್ತನೆಗೆ ಸರಿಯಾಗಿ ವಿಪರೀತಾರ್ಥದಿಂದ ಸಮ್ಮತ ಮಾಡಿಕೊಳ್ಳುತ್ತಾರೆ. ಹೇಗಂದರೆ, "ನನ್ನ ಮನೆಗೆ ನಾನೇ ದಾಸ, ಬೆಕ್ಕಿಗಿಡೋ ಪೆಂಗಿ ನಾವು" ಎಂಬ ಸೂಳೆಯರ ಗಾದೆಯಂತೆ ಶ್ರುತ್ಯಾಗಮಂಗಳಿಗೆ ವಿರೋಧವಾಗಿ ತಮ್ಮಿಚ್ಛೆಯಾಗಿ ತಮ್ಮ ಮನ ಬಂದ ಪರಿಯಲ್ಲಿ ಅರ್ಥ ಮಾಡಿ ಶಾಸ್ತ್ರ ಕೆಡಿಸುತ್ತಾರೆ. ಮತ್ತು ಸೂಳೆಯರ ಸಭೆಯಲ್ಲಿ ಕುಂಟದಾಸನೇ ಪಂಡಿತನೆಂಬಂತೆ, ಮೂರ್ಖಜನರ ಸಭೆಯಲ್ಲಿ ವಿಪರೀತಾರ್ಥವ ಹೇಳಿ ಮರುಳುಗೊಳಿಸುವರು. ಈ ವಾಗ್ಬ್ರಹ್ಮಿಗಳಾದ ಶುಷ್ಕ ವೇದಾಂತಿಗಳು "ಹುಲ್ಲು ಕಿಚ್ಚು ಹೊಲೆಯರ ಮೇಳದಂತೆ ನುಡಿ ಒಂದು ಪರಿ, ನಡೆ ಒಂದು ಪರಿ, ಪದ ಒಂದು ಪರಿ, ಅರ್ಥ ಒಂದು ಪರಿಯಾಗಿರ್ಪುದು" ಹೇಗಂದರೆ ಹೊಲೆಯರ ಮೇಳದಲ್ಲಿ ಡೊಳ್ಳೊಂದು ಕಡೆಗೆ ಕೊಳಲೊಂದು ಕಡೆಗೆ ನರ್ತನ ಒತ್ತಟ್ಟಿಗೆ ಪದ ಒತ್ತಟ್ಟಿಗೆ ಅಭಿನಯ ಒತ್ತಟ್ಟಿಗೆ ಹೀಗಾಗಿ ತಾಳ ಕೂಡದೆ ಮೇಳ ಕೂಡದೆ, ನರ್ತನ ಮಾಡುವಲ್ಲಿ ಸಂಗೀತ ಬಲ್ಲವರ ಮುಂದೆ ಹಾಸ್ಯವಲ್ಲವೇ? ಹೀಗೆ ವಾಗ್ಬ್ರಹ್ಮಜ್ಞಾನದಲ್ಲಿ ಮೇಳವಿಲ್ಲವು. ಇವರಿಗೆ ಶುಷ್ಕ ವೇದಾಂತಿಗಳೆಂಬ ಹೆಸರು.

. ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳು ಶಿವಾಗಮಂಗಳ ಪುಂಜವು. ಪರಮ ವೀರಶೈವಾಚಾರ ಸ್ಥಿತಿಗೆ ಜ್ಞಾನದರ್ಪಣವು. ಹೀಗಿದ್ದು ಆದ್ಯರ ವಚನಕ್ಕನುಸಾರವಾಗಿಪ್ಪ ದಿವ್ಯಜ್ಞಾನಮಯವಾದ ಮೋಕ್ಷ ಚಿಂತಾರತ್ನವಾಗಿ ಮುಮುಕ್ಷು ಜನರ ಕರ ದೀಪಿಕೆಯಾಗಿ ಒಪ್ಪಲ್ಪಟ್ಟ ಪ್ರಬಲ ಶಾಸ್ತ್ರಗಳರ್ಥವನ್ನು ಕೆಡಿಸಿ ಅನರ್ಥ ಮಾಡಿ ದುರ್ಬೋಧೆಯನ್ನು ಬೋಧಿಸುವ ದುಷ್ಟರನ್ನು ನಂಬಲಾಗದು. ಮತ್ತು ಆದ್ಯರ ವಚನಕ್ಕನುಸಾರವಾಗಿ ಶಿವಾಗಮಂಗಳನುಮತವಾಗಿ ಶ್ರುತಿ ಸ್ಮೃತಿಗಳಂ ಮೇಳೈಸಿ ವಚನಗಳರ್ಥಾನುಭವದಂತೆ, ಅರ್ಥೈಸಿ ಶಿಷ್ಯನ ಸಂಕಲ್ಪಾದಿಗಳಂ ಸಿರಸನದ್ವಾರದಿಂ ಕಳೆದು ಶಿಷ್ಯ ಸಂತಾಪ ಹರಣ ಮಾಡಿ ಗುರುತ್ವಾಭಿಮಾನ

ರಹಿತನಪ್ಪಾತನೇ ಶ್ರೀಗುರುವೆಂದರಿದು, ಇಂತಪ್ಪ ಸದ್ಗುರುಗಳಿಂದ ನಿಜ ಗುಣ ಶಾಸ್ತ್ರದರ್ಥಂಗಳ ಕೇಳಿ ತಿಳಿಯಬೇಕು. ಇದಲ್ಲದೆ ಶಿಷ್ಯವಿತ್ತಾಪ ಹಾರಕರಾದ ದುರಭಿಮಾನಿಗಳ ಮುಖದಿಂದ ಕೇಳಲಾಗದು. ಏಕೆಂದರೆ ನಡೆನುಡಿಗಳಲ್ಲಿ ತಾನೇ ಶುದ್ಧನಲ್ಲದಿದ್ದರೆ, ಶಿಷ್ಯರನ್ನು ಪರಿಶುದ್ಧ ಮಾಡುವ ಪರಿ ಎಂತು? ಇವರು ದುರ್ಬೋಧೆಯಂ ಬೋಧಿಸುವರಲ್ಲದೆ, ಸದ್ಬೋಧೆಯಂ ಬೋಧಿಸಲರಿಯದು.

ಬುದ್ಧಿಯನ್ನು ಹೇಳುವದಕ್ಕೆ ಆದ್ಯರುಗಳ ವಚನ ಉಂಟು. "ಉದ್ಧರಿಸುವಡೆಮಗೆ ಶಿವನ ಮಂತ್ರ ಉಂಟಲ್ಲೈ" ಎಂದು ವೈರಾಗ್ಯ ಷಡಕ್ಷರಿ ದೇವರ ವಚನ ಉಂಟಾಗಿ ಜಗದೋಪಕಾರ ನಿಮಿತ್ಯದಿಂದ ಸಕಲಾಗಮಂಗಳ ಸಾರವೆಲ್ಲಾ ಏಕ ಮುಹೂರ್ತದಲ್ಲಿ ತಿಳಿಯುಂತೆ ಒಂದೊಂದು ವಚನ ದಲ್ಲಿ ಕೋಟಿ ಕೋಟಿ ಗ್ರಂಥಂಗಳ ಸಾರವನ್ನೇ ಸಂಗ್ರಹಿಸಿ ಅನೇಕ ಶೃತಿ ಸ್ಮೃತಿಗಳ ದುಷ್ಟಧಾರಿಷ್ಟ್ಯಾದಿಗಳಿಂದ ಪರಿಪೂರ್ಣ ಜ್ಞಾನವು ಸ್ಥಿರವಾಗುವಂತೆ, ಪಾರಮಾರ್ಥದ ನಿಜವನ್ನೇ ಗಟ್ಟಿಗೊಳಿಸಿ, ಸುಲಿದ ಬಾಳೆಯ ಹಣ್ಣಿನಂತೆ ಆಯಾಸವಿಲ್ಲದೆ, ಕೇಳಿದ ಮಾತ್ರದಲ್ಲಿಯೇ ಜ್ಞಾನೋದಯ ವಾಗುವ ಹಾಗೆ ಪರಮಾರಾಧ್ಯರಾದ ಬಸವಾದಿ ಪುರಾತನರು ಹೇಳಿದ ವಚನಗಳನಂತವುಂಟು. ಅಂತಪ್ಪ "ಶ್ರೀಗುರು ವಚನೋಪದೇಶವ ನಾಲಿಸಿದಾಗಳಾಹುದು ನರರಿಗೆ ಮುಕುತಿ" ಎಂದು ಮತ್ತು "ಶ್ರೀಗುರು ವಚನದಿಂದಧಿಕ ಸುಧೆಯುಂಟೆ?" ಎಂದು ನಿಜಗುಣ ವಾಕ್ಯ ಉಂಟಾಗಿ ಜಗದಾರಾಧ್ಯರಾದ ಬಸವಾದಿ ಪುರಾತನರ ವಚನಾನುಭಾವವನ್ನು ವಿಶ್ವಾಸಿಸಿಕೊಂಡು ಸಕಲ ತತ್ವಂಗಳ ವಿಚಾರವನ್ನು ತಿಳಿದು ಶ್ರೀ ವೀರಶೈವಾಚಾರ ಮಾರ್ಗಸ್ಥಿತಿಯೊಳ್ ಜ್ಞಾನಕ್ರಿಯೆಗಳೊಂದಾಗಿ ಜಡನಾಗದೆ ಅಜಡನಾಗದೆ, ಪಿಂಡಾದಿ ಜ್ಞಾನಶೂನ್ಯಾಂತವಾದ ನೂರಾ ಒಂದು ಸ್ಥಲದಾಚರಣೆ ಅಂಗಗೊಂಡು ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಲಮಾರ್ಗದಲ್ಲಿ ಪ್ರವರ್ತಿಸುತೆ, ನಡೆನುಡಿ ಸಿದ್ಧಾಂತವಾಗಿ ಅಂತರಂಗದ ಮಹಾಜ್ಞಾನವನ್ನೇ ಬಹಿರಂಗದಲ್ಲಿ ಕ್ರಿಯಾರೂಪಕ್ಕೆ ತಂದು ಮತ್ತು ಬಹಿರಂಗದ ಸಮಸ್ತ ಕ್ರಿಯೆಗಳನ್ನೆಲ್ಲಾ ಅಂತರಂಗದ ಮಹಾಜ್ಞಾನದಲ್ಲಿ ಸಂಬಂಧಿಸಿ ಲೋಕಾಚಾರ ವರ್ತನವಾದ ಷಟ್ಕೃಷಿ ಲೋಕವ್ಯವಹಾರಂಗಳಲ್ಲಾದರೂ ಸತ್ಯ ಸದಾಚಾರವಿಡಿದು ಸತ್ಕಾಯಕವೆಂದೆನಿಸಿ ಗುರುಮಾರ್ಗಾಚಾರವಾಗಿ ಮಾರ್ಗ ಕ್ರಿಯೆ ಮೀರಿದ ಕ್ರಿಯೆಗಳಿಂದೆ ವ್ಯವಹರಿಸುತ್ತ ಲೌಕಿಕರಂತೆ ಇರದೆ, ಭಕ್ತಿ ದಾಸೋಹ ಮುಂದುಗೊಂಡು ಸಕಲ ಕಾರ್ಯಂಗಳನೆಲ್ಲ ಜ್ಞಾನ

ರೂಪದಿಂದ ಗುರುಲಿಂಗಜಂಗಮ ದಾಸೋಹ ಮುಖಾಂತರವಾಗಿ ನಾಗಿ ಸುತ್ತ ಪರಮ ಜ್ಞಾನಿಗಳೆನಿಸಿ ಪ್ರಪಂಚದಲ್ಲಿರ್ದರೂ ಲೋಕಾಪವಾದವನ್ನು ಹೊರದೆ ನಿವೃತ್ತಿ ಮುಖದಿಂದ ನಿಷ್ಪ್ರಪಂಚಿಗಳಾಗಿ ಸುಜ್ಞಾನದಿಂದ ಸತ್ಕಾರ್ಯವನ್ನು ಅಂತರ್ಧ್ಯಾನ ಬಹಿಃಕ್ರಿಯೆಗಳಲ್ಲಿ ಸರಿಯಾಗಿ ಮಾಡುತ್ತಿರಬೇಕು. ಹೇಗಂದರೆ "ಶರೀರವೆಂದೆಂಬುವ ಹೊಲನ ಹಸನ ಮಾಡಿ ಪರತತ್ವ ಬೆಳೆಯನ್ನು ಬೆಳೆದುಣ್ಣಿರೋ" ಎಂದು ಷಪ್ಪಣ್ಣ ಶಾಸ್ತ್ರಿಗಳು ಹೇಳಿದ್ದಾರೆ. ಇದಲ್ಲದೆ, ಅನಂತ ಶಿವಕವಿಗಳು ಮತ್ತು ಪೂರ್ವ ಪುರಾತನರು ಬಸವಾದಿ ಪ್ರಮಥರು ನೂತನ ಪುರಾತನರು ಸುಜ್ಞಾನ ಕೃಷಿಗನುಸಾರವಾಗಿ ಪಾರಮಾರ್ಥ ಕೃಷಿವಚನಗಳಲ್ಲಿ ತಮ್ಮ ನಿಜದರವಿನ ನೆಲೆಯನ್ನು ಸೂಚಿಸಿದ್ದಾರೆ. ಕೆಲವರು ಪದರೂಪವಾಗಿ ಹೇಳಿದ್ದಾರೆ.

ಆದ್ಯರ ವಚನದಂತೆ ನಡೆ ನುಡಿ ಸಿದ್ಧಾಂತಕ್ಕೆ ಪ್ರಾಮಾಣ್ಯವಾಗಿ ಗುರುವಚನಂಗಳಾದ ಜಗದ್ಗುರು ಬಸವಾದಿ ಪುರಾತನರ ವಚನಂಗಳನ್ನು ಕೇಳಿ ತಿಳಿದು ಆಚರಿಸಿದರೆ, ವೀರಶೈವಾಚಾರ ತತ್ಪರರಾಗಿ ಪರಿಪೂರ್ಣ ಭಾವದಿಂದ ಸುಜ್ಞಾನ ಸಂಪನ್ನರಾಗಿ ನಿಜೈಕ್ಯ ಸಂಪದವನ್ನು ಪಡೆದು ನಿಜಾನಂದದಲ್ಲಿ ಪರಮುಕ್ತರಾಗುವದಕ್ಕೆ ಸಂಶಯವಿಲ್ಲವು.

ಮನುಷ್ಯ ಮಾತ್ರ ಯಾವತ್ತರಲ್ಲಿ ಜ್ಞಾನಾಂಕುರವು ಇದ್ದದ್ದೇ ಸರಿ. ಆಜ್ಞಾನ ಸಸಿಯನ್ನು ವರ್ಧನ ಮಾಡಬೇಕಾದರೆ ದುರ್ಗುಣವೆಂಬ ಕಸವ ತೆಗೆದು ಸತ್ಕ್ರಿಯೆ ಎಂಬ ವಡ್ಡು ಕಟ್ಟಿ ಚತುರ್ವಿಧ ಭಕ್ತಿ ಎಂಬ ಚೌಕು ಮಡಿಗಳ ಮಾಡಿ ಸದ್ವಿವೇಕವೆಂಬ ನೀರನುಣಿಸಿ ಸಮತೆ ಸ್ಮರಣೆ ಎಂಬ ಗೊಬ್ಬರವನಿಟ್ಟು ದುರ್ವಿವೇಕವೆಂಬ ಅಜ ಪಶುಗಳು ಮುಟ್ಟದಂತೆ ಸತ್ಸಂಗವೆಂಬ ಬೇಲಿಯನಿಕ್ಕಿ ಸಸಿಯು ಸಲಹಿದರೆ ಪಸುರಾಗಿ ಪಲ್ಲೈಸಿ ಸುಜ್ಞಾನವೆಂಬ ಹೂವಾಗಿ ಮಹಾಜ್ಞಾನವೆಂಬ ಹಣ್ಣಾಗಿ ಪರಿಪೂರ್ಣ ಜ್ಞಾನನೆಂಬ ತೊಟ್ಟು ಬಿಟ್ಟು ಆನಂದವೆಂಬ ರಸ ಒಸರು ತ್ತಿರ್ಪುದು. ಇದಕ್ಕೆ ಸಾಕ್ಷಿ, ವಚನ— "ಬೆಳೆನ ಭೂಮಿಯೊಳೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯದು ಎಚ್ಚರಲೀಯದು. ಎನ್ನವ ಗುಣವೆಂಬ ಕಸವ ಕಿತ್ತು ಸಲಹಯ್ಯ ಲಿಂಗ ತಂದೆ. ಸುಳಿದೆಗೆದು ಬೆಳೆವೆನು ಕೂಡಲಸಂಗಮದೇವಾ" ಎಂದು ಬಸವರಾಜದೇವರು ಜ್ಞಾನ ಪಸಿಯನ್ನು ವರ್ಧನ ಮಾಡಬೇಕೆಂದು ಲೌಕಿಕರು ಗುರೂಪಾವಸ್ಥೆಯ ಮಾಡುವ ರೀತಿಯನ್ನು ಸೂಚಿಸುವದಕ್ಕಾಗಿ ನುಡಿದುಕೊಂಡಿದ್ದಾರೆ.

ವೃತ್ತಿ ಜ್ಞಾನವು ಸಕಲ ಪ್ರಾಣಿಗಳಲ್ಲಿ ತಕ್ಕ ಮಟ್ಟಿಗೆ ಇದ್ದದ್ದು. ಆ ಜ್ಞಾನವು ಸ್ಥಿರಚರ ಪ್ರಾಣಿಗಳಲ್ಲಿ ಪರೆ ಪಶ್ಯಂತಿ ಮಧ್ಯಮೆ ವೈಖರಿ ಎಂದು ನಾಲ್ಕು ಪ್ರಕಾರ ಬೇರೆ ಬೇರೆಯಾಗಿ ವೃಕ್ಷಾದಿಗಳಲ್ಲಿ ಪರೆ ಎನಿಸಿ ಸರ್ಪಾದಿಗಳಲ್ಲಿ ಪಶ್ಯಂತಿ ಎನಿಸಿ ಪಶುವಾದಿಗಳಲ್ಲಿ ಮಧ್ಯಮೆಯಾಗಿ ಮನುಷ್ಯರುಗಳಲ್ಲಿ ವೈಖರಿಯಾಗಿ ತಾಲವ್ಯ ದಂತವ್ಯ ಮೂಲವ್ಯದಿಂದ ಅಕ್ಷರಾತ್ಮಕ ರೂಪವಾಗಿರ್ದು ಸಕಲವೆಲ್ಲವನು ಅರಿದು, ಅದರ ಅರ್ಥ ತಿಳಿಯುವಂತೆ ನುಡಿದು ಆದರಂತೆ ಬರೆದು ಮತ್ತೂ ಹೇಳಿ ಕೇಳಿ ಮಾಡಿ ತೋರಿಸುವ ಸರ್ವ ಲಕ್ಷಣ ಸಂಪನ್ನತ್ವವಿರ್ದು ಅನುಭಾವ ಮುಖಾಂತರದಲ್ಲಿ ಪ್ರತ್ಯಕ್ಷ ಮಾಡಿಕೊಡುತ್ತ ಇರ್ಪುದು. ಆ ವೈಖರಿಯು ಆಯಾಯ ಪ್ರಾಣಿಗಳಿಗೆ ತಕ್ಕ ತಕ್ಕ ಹಾಗೆ ಆದರದರ ಸ್ವಭಾವದಿಂದ ಜೀವನೋಪಾಯಕ್ಕೆ ಆಹಾರವನ್ನೇ ತಿಂದುಕೊಂಡು ಪರಿಣಾಮಿಸುವಷ್ಟಕ್ಕೆ ಪ್ರವೃತ್ತಿಯಾಗಿ ವೃತ್ತಿಜ್ಞಾನವೆಂದು ಹೇಳಿಸಿಕೊಂಬುವುದು. ಆದರೆ ಮನುಷ್ಯರಲ್ಲಿ ಮಾತ್ರ ವಿಚಿತ್ರ ವೈಖರ್ಯಾದಿ ಚಾತುರ್ಯದಿಂದ ಅಜ್ಞಾನವು ತಾನು ತನ್ನರಿವು ಶಿವತ್ವವು ಬೇರೆ ಎಂಬ ತ್ರಿಪುಟಿರೂಪವಾಗಿ ಭಿನ್ನ ಜ್ಞಾನವೆನಿಸಿಕೊಂಡು ಜ್ಞಾತೃ ಜ್ಞಾನ ಜ್ಞೇಯವೆಂಬ ಪೆಸರಂ ಪಡೆದು ಆವಾವ ಕಾರ್ಯವನ್ನಾದರೂ ಸಾಧಿಸಿ ಕೊಡುವದಕ್ಕೆ ತಾನೇ ಮುಖ್ಯ ಸಾಧನವಾಗಿದೆ.

ಆ ವೃತ್ತಿಜ್ಞಾನವು ಆಹಾರವ್ಯವಹಾರಂಗಳ ಪೂರ್ತಿಗೆ ಎಷ್ಟು ಚಾತುರ್ಯವಾಗಿ ಕಂಡ ಕಾಲಕ್ಕೂ ಜೀವನ ಸಂರಕ್ಷಣೋಪಾಯಕ್ಕೆ ಉಪಯೋಗವಾಗುವದಲ್ಲದೆ ಸುಜ್ಞಾನವಾಗಲರಿಯದು. ತನ್ನ ತಾನರಿಯದ ಕಾರಣ ಅಜ್ಞಾನವೆನಿಸುವದು. ಆ ಭಿನ್ನ ಜ್ಞಾನವಾದರೂ ಸುಜ್ಞಾನದಂಶವಾದ ಕಾರಣ ವಿಚಿತ್ರ ವೈಖರ್ಯಾದಿ ವಾಚ್ಯರೂಪದಿಂದಿರ್ದು ಅಕ್ಷರಾತ್ಮಕವಾಗಿ ಸಕಲವೆಲ್ಲವನು ಅರುಹಿ ಕೊಡುವಲ್ಲಿ ಪ್ರಕಾಶ ರೂಪವಾಗಿರ್ದ ಕಾರಣ ಮನುಷ್ಯರಲ್ಲಿ ಮಾತ್ರ ಆ ವೃತ್ತಿಜ್ಞಾನವನ್ನೇ ಪ್ರವೃತ್ತಿ ಎಂದು ಹೇಳಬೇಕಾಯಿತು.

ಸುಜ್ಞಾನವೆಂಬುದು ಈ ವೃತ್ತಿಜ್ಞಾನಕ್ಕೆ ವಿಲಕ್ಷಣವಾಗಿ ತೇಜೋಮಯವಾಗಿ ಪರಂಜ್ಯೋತಿ ಸ್ವರೂಪವಾಗಿ ನಿರುಪಾಧಿಕ ಜ್ಯೋತಿ ಎನಿಸಿ ಅಜ್ಞಾನವೆಂಬ ಮಾಯಾಂಧಕಾರವನು ಸಂಹರಿಸಿ, ಮಹಾ ಪ್ರಭೆಯಿಂದ ತನ್ನ ನಿಜವನರುಹಿಸಿಕೊಡುವಲ್ಲಿ ನಿತ್ಯಾನಿತ್ಯ ವಸ್ತು ವಿವೇಕ ಇಹಮೋ

ತ್ತರ ಫಲಭೋಗ ವಿರಾಗ ಶಮೆ ದಮೆ ತಿತೀಕ್ಷೆ ಉಪರತಿ ಶ್ರದ್ಧೆ ಸಮಾಧಿಗಳೆಂಬ ಸಮಾಧಿ ಷಟ್ಕಂಪತ್ತು ಮುಮುಕ್ಷತ್ವವೆಂಬ ಸ್ಥಿತಿಯು ನ್ನುಂಟುಮಾಡಿಕೊಟ್ಟು ಸರ್ವಜ್ಞತ್ವವಾಗಿ ಸುಜ್ಞಾನವೆನಿಸಿತ್ತು. ಆದರೆ ಆ ಅಜ್ಞಾನದಲ್ಲಿ ಅನಂತ ಪ್ರಕಾರದ ಭೇದಂಗಳುಂಟು. ಅವುಗಳೆಲ್ಲ ಸುಜ್ಞಾನಕ್ಕೆ ದೂರಾಗಿ ಕಾಣಬರುತ್ತಿಹವು. ಹ್ಯಾಗೆಂದರೆ, ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನ, ಮರ್ಕಟಜ್ಞಾನ, ವಿಹಂಗಮಜ್ಞಾನ ಮೊದಲಾದವು ಜ್ಞಾನಂಗಳು ಅಹುದಾದಾಗ್ಯೂ ಮತ್ಸ್ಯ ಕೂರ್ಮ ಗಾರ್ದಭಾದಿ ಮೃಗ ಪಶು ಪಕ್ಷಿ ಜಲಜಂತುಗಳಲ್ಲಿ ಆಶ್ಚರ್ಯರೂಪದಿಂದ ಇದ್ದಾಗ್ಯಾದರೂ ಅವುಗಳೆಲ್ಲ ಅಜ್ಞಾನವೇ ಹೊರತು ಸುಜ್ಞಾನವಾಗಲರಿಯುವು.

ಈ ಸುಜ್ಞಾನವೆಂಬುದು ಬಹಿರಂತರಂಗದಲ್ಲಿ ಒಳಹೊರಗೆ ಒಂದಾಗಿ ಸಕಲೇಂದ್ರಿಯ ಸಮಸ್ತ ಕರಣಾದಿಗಳ ಮುಖಂಗಳಿಗೆ ತಾನೇ ನೇತ್ರವಾಗಿರ್ದು ತನಗಾವ ಮೇರೆ ಇಲ್ಲದೆ, ಸಕಲವೆಲ್ಲವನು ಅರಿವಲ್ಲಿ ಅಣುವಿಗಣುವಾಗಿ ಮಹತ್ತಿಗೆ ಮಹತ್ತಾಗಿ ಅಣೋರಣೀಯಾನ್ ಮಹತೋ ಮಹೀಯಾನ್ ಎಂಬ ಶೃತಿಪ್ರಮಾಣದಿಂದ ಸಕಲಚರಾಚರಂಗಳಲ್ಲಿ ವ್ಯಾಪಕವಾಗಿರ್ದು ಜಗತ್ಪರಿಪೂರ್ಣವಾಗಿ ಜಗದ್ವಿಲಕ್ಷಣವಾಗಿ ಪಂಚಭೂತಂಗಳ ತತ್ವ ಸಮುದಾಯಕ್ಕೆ ಅವಿರಳವಾಗಿ ಹೊಂದಿ ಹೊಂದದ ಹಾಗಿರ್ದು ಸಕಲವೆಲ್ಲಕ್ಕೂ ತಾನೇ ಸಾಕ್ಷಿರೂಪನಾಗಿರ್ದು ತಾನೊಂದರಿಂದರುಹಿಸಿಕೊಳ್ಳದೆ ತಾನೇ ತನ್ನಯ ಮತ್ತು ತನಗೆದುರಾದ ಸಮಸ್ತ ಜಡಾಜಡತ್ವಂಗಳ ನರಿಯುಬಹುದಾದುದರಿಂದ ನಿಜದರುಹೆನಿಸಿ ಅರುಹಿನೊಳಿನಿತಾದರೂ ಮರವೆ ಇಲ್ಲದುದರಿಂದ ಮಹಾಜ್ಞಾನವೆಂದು ಹೇಳಿಸಿಕೊಂಬುತ್ತಿಹುದು.

ಅರಿವೇ ಸಮಸ್ತ ಪ್ರಾಣಿಗಳಲ್ಲಿ ಪರಿಪೂರ್ಣವಾಗಿರ್ದು ಅವರವರಿಗವರಂತೆಯಾಗಿ, ಆಯಾಯ ಘಟಂಗಳಲ್ಲಿ ಅದರದರಂತೆಯಾಗಿ ಇದ್ದಾಗ್ಯಾದರೂ ತಾನು ವಿಲಕ್ಷಣವಾಗಿದೆ. ವೃತ್ತ॥— "ಅರಿವೇ ಸಮಸ್ತ ವಿಷಯಾಗಮ ಮುಖ್ಯವದೇ ವಿಮುಕ್ತಿದಂ। ಪೊರಗಣವೇದಾಚರಣೆ ಭಾವಿಪ್ಪೊಡೇಂ ವೃಥಾ। ಜರಿವುದು ಬುದ್ಧಿಯೇ ಶರಣರೆಂತಿಹರೆಂಬುದ ನೊಲ್ದು ನೋಡದೆ। ಬರುತನದುಕ್ತಿ ಚಾಪಲದ ಗೌರವದಿಂ ಫಲವೇನು ಶಿವಾಧವಾ॥" ಎಂದುಂಟಾಗಿ ಮತ್ತು "ಅರಿವೇ ಬರೆಯರಿವೆನಿನ್ನ ತೆರನರಿಯೆ ಮುಕ್ತಿಯಹುದು ನಿಶ್ಚಯವಂತೆ॥ ಅರಿವೆಬರೆಯರಿವೆ॥ ಎಂಬ ಪದ್ಯದಲ್ಲಿ ನಿಜಗುಣಾರಾಧ್ಯರು ಜ್ಞಾನೋತ್ಕರ್ಷವನ್ನು ಬಣ್ಣಿಸಿದ್ದಾರೆ.

"ಯಥಾಬೀಜಂ ತಥಾಂಕುರಂ" ಎಂದ ಹಾಗೆ ಈ ಸುಜ್ಞಾನವು ಸ್ಫಟಿಕದ ಘಟದಂತೆ, ನಿರ್ಮಲವಾಗಿರ್ದು ಜಲದಂತೆ ಯಾವ ವರ್ಣದಲ್ಲಿ ಕಲಿಸಿದರೂ ಆ ವರ್ಣವಾಗಿ ಒಪ್ಪುವಂತೆ, ಮನೋವರ್ತನವಿದ್ದ ಹಾಗೆ, ಸಕಾಮಿಗಳಿಗೆ ಸಕಾಮುವಾಗಿ ಭಿನ್ನಜ್ಞಾನವೆನಿಸಿ, ನಿಷ್ಕಾಮಿಗಳಲ್ಲಿ ಸಹಜ ಸುಜ್ಞಾನವಾಗಿ ಶಿವತತ್ವ ಸ್ವರೂಪವಾಗಿರ್ಪುದು.

ಪರಶಿವ ಮೂರ್ತಿಯು ನಿಜವನರಿಯಬೇಕೆಂಬು ಬೇರೆ ಬೇರೆ ಭಿನ್ನ ಕರ್ಮಿಗಳು ಆಯಾಯ ಮತದ ಶಾಸ್ತ್ರಾನುಸಾರದಂತೆ, ಭಿನ್ನ ಜ್ಞಾನ ಕರ್ಮಗಳಿಂದ ಯೋಗ ದಾನ ಜಪ ನೀತಿ ಯೋಗ ಪೂಜಾದಿಗಳು ಮೊದಲಾದ ಕರ್ಮಗಳಿಂದ ಶಿವನ ನಿಜವನರಿದೆನಂದರೆ, ಆ ನಿಜವು ಸಾಧ್ಯವಾಗದು. ಆ ಭಿನ್ನ ಕರ್ಮಂಗಳಲ್ಲಾದರೂ ಪೂರ್ವ ಭಾಗದ ಶಾಸ್ತ್ರ ಪ್ರಮಾಣದಂತೆ ಅವರದರ ತಕ್ಕಮಟ್ಟಿಗೆ ಫಲ ಪದಂಗಳ ಕೊಟ್ಟು ಶಿವನು ಮರೆಯಾಗಿರ್ಪನಲ್ಲದೆ, ಸುಜ್ಞಾನಿಗಳಿಗೆ ಕರತಳಾಮಳಕವಾಗಿ, ಪ್ರತ್ಯಕ್ಷವಾದಂತೆ ಬಹು ಮತದ ಭಿನ್ನ ಕರ್ಮಿಗಳಿಗೆ, ಪ್ರತ್ಯಕ್ಷವಾಗಲರಿಯನು. ಅದು ಕಾರಣ "ಜ್ಞಾನೇನ ವಿನಾ ನಾನ್ಯಃ ಪಂಥಃ" ಎಂಬ ಶೃತಿಗನುಸಾರವಾಗಿ" "ನಂಬೋ ಜ್ಞಾನವನ್ನೇ" ಎಂದು ನಿಜಗುಣ ಶಿವಯೋಗಿಗಳು ಹೇಳಿದ್ದಾರೆ. ಅದಾಗ್ಯೂ ಜ್ಞಾನದಲ್ಲಿ ಕಾಲಜ್ಞಾನ ಖಂಡಜ್ಞಾನ ಶಾಸ್ತ್ರಜ್ಞಾನ, ಅಕ್ಷರಜ್ಞಾನ ಪದಾರ್ಥಜ್ಞಾನ, ಮೊದಲಾದ ಅನಂತಜ್ಞಾನಭೇದಗಳುಂಟು. ಆದರೆ, ವೀರಶೈವ ಸುಜ್ಞಾನಕ್ಕೆ ಸಮವಾದಾವೆ? ಆಗಲರಿಯವು.

ಕೆಲ ಕೆಲವು ಭಿನ್ನ ಜ್ಞಾನದ ಅಲ್ಪ ಮತದವರಿಗೆ ಕಿಂಚಿಜ್ಞತ್ವದಿಂದ ಅಷ್ಟಕ್ಕಷ್ಟೆಯಾಗಿ ಅಲ್ಪಜ್ಞಾನವಾಗಿರುತ್ತಿಹುದು. ಅವರಿಂದ ಮುಕ್ತಿಯಾಗಲಾರದು. ಅಥವಾ ಕರ್ಮದಿಂದ ಮುಕ್ತಿಯಾಗುವದೆಂದು ಯಾವ ಶಾಸ್ತ್ರಗಳಲ್ಲಾದರೂ ಹೇಳಿರುವದಿಲ್ಲ. ಕರ್ಮದಿಂದ ಫಲಪದಂಗಳುಂಟಲ್ಲದೆ ನಿಜ ಮೋಕ್ಷವಿಲ್ಲವು. ಸಾಕ್ಷಿ "ಶೀತ ಗೃಹೀತ ವಾನರ ಗಣಂ ಜ್ವಲಿತಾನಲ ಕಾಂಕ್ಷೆಯಿಂ ಪ್ರಯ। ತ್ನಾತುರವಾಗಿ ಮಿಂಚು ಪುಳುವಂ ಪರಿಕಲ್ಪಿಸುವಂತೆ ವೀರಶೈ। ವೇತರ ಧರ್ಮ ಮಾರ್ಗವಿಡಿದೂರ್ಜಿತಮುಪ್ಪವಿಶಿಷ್ಟ ಮುಕ್ತಿ ಸೌ। ಖ್ಯಾತಿಶಯಾಭಿರಾಮ ಪದಂ ಬಿಡದೈದುವರ್ ಶಿವಾಧವಾ॥ ಎಂದು ಮಾಯಿದೇವ ಪ್ರಭುಗಳು ಹೇಳಿದ್ದಾರೆ. ಮತ್ತು ಕೋಟಿ ಜನ್ಮಾಂತರಂಗಳಿಗೆ ಆದ ಮೋಕ್ಷಾಪೇಕ್ಷೆಯಿಂದ ವೀರಶೈವೇತರ ಧರ್ಮ ಮಾರ್ಗದಿಂದಾಚರಿಸಿ ಕೋಟಲೆಗೊಳ್ಳುತ್ತಿಹರು. "ಏಕೇನ ಜನ್ಮ ಮುಕ್ತಿ

ವಿರೀರಾಣಾಂ ತು ಮಹೇಶ್ವರಿ "॥ ಎಂಬಾಗವು ವಾಕ್ಯ ಉಂಟು. ಮತ್ತು "ಅನ್ಯಶೈವಂತು ತತ್ಸರ್ವಂ। ಫಲಮಲ್ಪ ಕ್ರಿಯಾ ಬಹು ಫಲಂ ವೀರಶೈವಂತು ಶಾಂಕರೀ "॥ ಎಂಬಾಗವು ಉಂಟು. ಮತ್ತು "ಬಹು ವಿಧ ದುಃಖ ಸಾಧ್ಯ ವಹ ಮುಕ್ತಿ ಪದಂ ಭವಕೋಟಿಯಲ್ಲಿ ನಿ। ರ್ವಹಿಸುವದಕ್ಕೆ ಕೋಟಲೆಗೊಳ್ಳುತ್ತಿಹರೊಯ್ಯನೆ ಜನ್ಮ ಒಂದರೊಳ್। ವಿಹಿತ ಸುಖೈಕ ಸಾಧ್ಯ ವಹ ಮುಕ್ತಿ ಪದಂ ದೊರೆಕೊಂಡೊಡೊಲ್ಲೆನೆಂದಿಹುದಿದು ಪಾಪ ಶೇಷದ ಫಲವೈಸೆ ವಿಚಾರವದೇಂ ಶಿವಾಥವಾ" ಎಂದುಂಟಾಗಿ, ಸುಜ್ಞಾನ ಒಂದಿಲ್ಲದೆ ಏನೇನು ಪ್ರಯತ್ನಂಗಳ ಮಾಡಿದರೂ ಅಜ್ಞಾನಿಗಳಾಗಿ ಕೆಟ್ಟು ಹೋಗುತ್ತಿಹರು. ಸುಜ್ಞಾನ ಉದಯವಾದ ಮಾತ್ರದಲ್ಲಿಯೇ ಸ್ವಪ್ನದಲ್ಲಿ ಕಂಡ ಅನಂತ ದುಃಖಂಗಳೆಲ್ಲಾ ಎಚ್ಚರವಾದಲ್ಲಿ ಇಲ್ಲದಾದಂತೆ, ಅನಂತ ಕೋಟಿ ಭವಬಂಧನಾದಿ ದುಃಖಂಗಳೆಲ್ಲ ತನ್ನ ತಾ ತಿಳಿದ ಮಾತ್ರದಲ್ಲಿಯೇ ನಾಶವಾಗುತ್ತಿರುವ ಈ ಸುಜ್ಞಾನವನ್ನು ಶಿವಾಂಶೀಭೂತರಾದ ಸತ್ಯ ಸದ್ಭಕ್ತ ಜ್ಞಾನಿಗಳಿಗೆ ಕಾಣಬಹುದು. ಉಳಿದ ಅನ್ಯ ಮತಸ್ಥರಿಗೆ ಅಶಕ್ಯವಾಗಿರ್ಪುದು.

"ಅಧಮಂ ತು ಕುಲಾಚಾರಂ। ಶೃತ್ಯಾಚಾರಂತು ಮಧ್ಯಮಂ॥ ಉತ್ತಮಂ ಜ್ಞಾನಮಾಚಾರಂ। ಸ್ವೇಚ್ಛಾಚಾರಂ ಮಹಾತ್ಮನಾಂ"॥ ಎಂದು ಶಿವಜ್ಞಾನಿಗಳಾದ ಶರಣರು ಸ್ವತಂತ್ರ ಶೀಲರಾಗಿ, ಅಜ್ಞಾನವನ್ನೇ ಕ್ರಿಯಾ ರೂಪದಿಂದ ಬಹಿರಂಗದ ಕಾಯಕವ ಮಾಡಿಕೊಂಡು ಸಕಲ ಮಹತ್ವಾತಿಶಯವನ್ನು ಮೆರೆವುತ್ತ ಅನಂತ ರೀತಿಯ ಕಾಯಕಗಳಿಂದ "ದಾಸೋಹಂ ಸ್ವಯಂ ಶಿವಃ" ಎಂಬ ಪ್ರಮಾಣದಂತೆ ಶಿವದಾಸೋಹಿಗಳಾಗಿರುತ್ತಿಹರು. ಅದೆಂತೆಂದಡೆ, ಕಟ್ಟಿಗೆಯನ್ನು ಮಾರಿ ಮೊದಿಯ ನುಲಿಯ ಹೊಸೆದು ಬಿದ್ದಕ್ಕಿಯನಾಯ್ದು ಹೊಡೆ ಹುಲ್ಲ ತರುತ್ತ ಸುಂಕದ ಗುತ್ತಿಗೆಯ ಮಾಡುತ್ತ ಹಾಸ್ಯವನಾಡುತ್ತ ಕೋಡಗವನಾಡಿಸುತ್ತ ಢಕ್ಕೆಯ ಬಾರಿಸುತ್ತ ಬುದ್ದಲಿಯ ಮಾಡುತ್ತ ಕೆರವ ಹೊಲಿಯುತ್ತ ಕೈಕೂಲಿ ಮಾಡುತ್ತ ಕೃಷಿಯ ಮಾಡುತ್ತ ಅಸಿಯ ಮಾಡುತ್ತ ವಾಣಿಜ್ಯಾದಿ ವ್ಯಾಪಾರ ಮಾಡುತ್ತ ರಾಜ್ಯವನಾಳುತ್ತ ಮಂತ್ರಿ ಪಟ್ಟವನಾಳುತ್ತ ನೇಯುತ್ತ ಪಶುಗಳ ಕಾಯುತ್ತ ಕೊಟ್ಟಣವ ಕುಟ್ಟುತ್ತ ಕೊಡ ನೀರು ಹೊರುತ್ತ ಈ ಪ್ರಕಾರವಾದ ಅನಂತ ಕೃತ್ಯಾದಿಗಳಿಂದ ಭಕ್ತಿ ಸತ್ಪಥ ಮಾರ್ಗವಾಗಿ ಸತ್ಯ ಶುದ್ಧ ಕಾಯಕವೆಂದು ಶಿವ ಮಹಿಮಾತಿಶಯವನ್ನು ಮೆರೆಯುತ್ತ ಶಿವಭಕ್ತಿ ಪ್ರಭಾವದುನ್ನತಿಯಂ ಪಸರಿಸುತ್ತ ಕೊಡುವಾತ ಕೊಂಬಾತ ಶಿವನೆಂಬ

ಭಾವದಿಂದ ಪರಿಪೂರ್ಣ ಜ್ಞಾನವೆನಿಪ ಸುಜ್ಞಾನವನ್ನೇ ಸತ್ಕಾಯಕವಾಗಿ ಆಚರಿಸಿದರಲ್ಲದೆ, ಭವಿಗಳಂತೆ ದೇಹೋಪಾಧಿಯಿಂದ ಘಟರಕ್ಷಣಾರ್ಥಕ್ಕಾಗಿ ದುರಾಶೆಯಿಂದ ಅಜ್ಞಾನಿಗಳಾಗಿ, ಭವಭವಾಂತರದಲ್ಲಿ ತಿರುಗುತ್ತಿರುವ ಸಂಸಾರವನ್ನು ಶರಣರು ಮಾಡಲಿಲ್ಲ.

ಆ ಶರಣರ ಕಾಯಕವೇ ಪಾರಮಾರ್ಥ ಜ್ಞಾನ ಸತ್ಕಾಯಕವಾದ ಕಾರಣ ಈ ಲೋಕದ ಸದ್ಭಕ್ತ ಸದಾಚಾರಗಳಿಗೆ ಮುಕ್ತಿ ಸೋಪಾನವಾಗಿ ಅವರ ಚಾರಿತ್ರಂಗಳೇ ಮೋಕ್ಷಮಾರ್ಗಕ್ಕೆ ದೀವಿಗೆಯಾಗಿ, ಅವರು ನುಡಿದ ವಚನಂಗಳೇ ಮಂತ್ರಮಯವಾಗಿ ಅವರು ಮೆಟ್ಟಿದ ಭೂಮಿಯೇ ಪುಣ್ಯಕ್ಷೇತ್ರವಾಗಿ ಅವರು ಮಿಂದ ಉದಕಂಗಳೇ ಎಂಭತ್ತೆಂಟು ಕೋಟಿ ಪುಣ್ಯತೀರ್ಥಂಗಳಾಗಿ ಅವರ ಸತಿಯರೇ ಮಹಾಜ್ಞಾನ ಶಕ್ತಿಯರಾಗಿ ಅವರ ಸುತರೇ ಮಹಾ ವೀರಗಣರಾಗಿ ಕೊಡುವಲ್ಲಿ ಕೊಂಬಲ್ಲಿ ನಡೆವಲ್ಲಿ ನುಡಿವಲ್ಲಿ ಸರ್ವದರಲ್ಲಿ ಸುಜ್ಞಾನವನ್ನೇ ಪ್ರಕಟಿಸುತ್ತ ಶಿವಹೃದಯರಾದ ಕಾರಣ ಸಕಲ ಕಾರ್ಯಂಗಳಲ್ಲಿ ಶಿವಾಜ್ಞೆ ಎನುತ ಶಿವಜ್ಞಾನಸಾರಾಯರಾದ ಕಾರಣ ಶಿವಜ್ಞಾನವನ್ನೇ ಸ್ಥಾಪಿಸುತ್ತ ಸ್ಫಟಿಕದೊಳಗಣ ದೀಪದಂತೆ ಒಳಹೊರಗೆ ಜ್ಞಾನಮಯರಾಗಿ ಕಾಣಬರುತ್ತಿಹರು. "ಸ್ವಯಮೇವ ಭವೇದ್ದೇಹಿ । ಸ್ವಯಮೇವ ವಿಲೀಯತೆ ॥ ವೃಕ್ಷೋತ್ಪತ್ತಿ ಬೀಜಾನಾಂ । ತದ್ವೃಕ್ಷಂ ಲೀಯತೆ ಪುನಃ ॥ ಎಂದುಂಟಾಗಿ ಮತ್ತು "ರುದ್ರಲೋಕ ಗಮಿಷ್ಯತೆ॥" ಎಂಬ ವಾಕ್ಯ ಪ್ರಮಾಣದಂತೆ ಸಕಲ ಜನಹಿತೋಪಕಾರಾರ್ಥವಾಗಿ ಲೋಕ ಪಾವನ ಕಾರ್ಯ ಸಮರ್ಥತ್ವದಿಂದ ರುದ್ರಲೋಕದಿಂದ ಭೂಲೋಕಕ್ಕೆ ಅವತರಿಸಿ ಸಕಲರಿಗೂ ಸನ್ಮಾರ್ಗ ಸದ್ಬೋಧೆಯಂ ಬೋಧಿಸಿ ಬೋಧಿಸಿದಂತೆ ಈ ಲೋಕದ ಭಕ್ತರಿಗೆ ನಡೆನುಡಿ ಸಿದ್ಧಾಂತವಾಗುವ ಹಾಗೆ ತಾವು ಅದರಂತೆ ಆಚರಿಸಿ ತೋರಿಸಿ ಸಂಸಾರದಲ್ಲಿರ್ದರೂ ನಿಃಸಂಸಾರಿಗಳಾಗಿ ಷಟ್ಕೃಷಿ ಲೋಕ ವ್ಯವಹಾರಂಗಳ ಮಾಡಿದಾಗ್ಯಾದರೂ ಭಕ್ತಿ ಸತ್ಕಾಯಕವೆಂದೆನಿಸಿ ಮಾಡಿ ನೀಡಿ ದೃಷ್ಟಧಾರಿಷ್ಟ್ಯಾದಿಗಳಿಂದ ತಾವಾಚರಿಸಿ ಇದರಂತೆ ಮಾಡಿ ಸಮಸ್ತರೂ ಮುಕ್ತರಾಗಲೆಂದು ತೋರಿಕೊಟ್ಟು ಮತ್ತನಂತ ರೀತಿಯಿಂದ ಅವರವರ ಪಾಪಕರ್ಮಂಗಳಂ ಪರಿಹರಿಸಿ ಲೋಕಪಾವನ ಮಾಡಿ ಪುನಃ ತಮ್ಮ ನಿಜದೊಳ್ಬೆರೆದು ಶಿವಲೋಕವನ್ನೈದುತಿಹರು.

ಈಗಲಾದರೂ ಜ್ಞಾನ ಕಲಾತ್ಮಕರಾದ ಸುಜ್ಞಾನಿಗಳೆಂದೆನಿಸಲ್ಪಟ್ಟ ಶ್ರೀ ವೀರಶೈವಾಚಾರ ಸದ್ಭಕ್ತರು ಆದ್ಯರ ವಚನ ಪ್ರಮಾಣದಂತೆ ಜ್ಞಾನ

ಮಯರಾಗಿ ಆಚರಿಸಿ ನಡೆನುಡಿ ಸಿದ್ಧಾಂತರಾಗಿ ಮಹಾಜ್ಞಾನವೇ ಕ್ರಿಯೆಯಾಗಿ ಸಹಜಾನಂದದಿಂದ ಲೌಕಿಕರೊಡನೆ ಕೂಡಿ ಲೌಕಿಕ ವರ್ತನದಿಂದಿದ್ದರೂ ಮಾಯಾ ಮೋಹದಿಂದ ಜಡ ಸಂಸಾರಿಗಳಾಗದೆ ನಿರ್ಮೋಹದಿಂದ ಕಮಲ ಪತ್ರದಂತೆ ತಾವು ಸಂಸಾರದೊಳಗಿರ್ದರೂ ಜ್ಞಾನ ಸಾಮರ್ಥ್ಯದ ಬಲದಿಂದ ತಮ್ಮೊಳಗೆ ಸಂಸಾರವಿಲ್ಲದಂತೆ ಮಹಾ ಜಾಗ್ರತರಾಗಿ "ಜ್ಞಾನೀ ಸರ್ವತ್ರ ಲೋಚನಃ" ಎಂದ ಹಾಗೆ ತಾವು ಸರ್ವ ಕಾರ್ಯಂಗಳಲ್ಲಿ ಜ್ಞಾನವನ್ನೇ ಮುಂದುಗೊಂಡು ಆಚರಿಸಬೇಕು.

ಸುಜ್ಞಾನಿಗಳಾದ ಜ್ಞಾನ ಕಲಾತ್ಮರು ಲೌಕಿಕರ ಮಧ್ಯದಲ್ಲಿರ್ದು ತಾವು ಲೌಕಿಕರಂತೆ ವರ್ತಿಸಬೇಕಾದರೆ ತಾವು ಪರಿಪೂರ್ಣ ಜ್ಞಾನಿಗಳಾಗಿ ಜಗತ್ತೆಲ್ಲ ಏಕರೂಪಾಗಿ ಏಕಾತ್ಮರಾಗಿ ತಾನೊರ್ವನಲ್ಲದೆ ತನಗೆ ದೂರಾಗಿ ಜ್ಞಾನ ದೃಷ್ಟಿಗೆ ಇನ್ನೊಂದೇನೂ ತೋರದಾಗಿ ಕಂಡರೂ ಪರಮ ಜ್ಞಾನಿಯಾದ ಪೂರ್ಣನೆನಿಪ್ಪ ಶಿವಾದ್ವೈತನಾದ ಷಟ್‌ಸ್ಥಲ ಬ್ರಹ್ಮಿಯಾದ ನಿರಾಭಾರಿ ವೀರಶೈವಾವಧೂತನ ಅಂತರಂಗದ ಪೂರ್ಣ ಜ್ಞಾನ ಸ್ಥಿತಿ ಹೇಗಿರಬೇಕೆಂದರೆ ಶೃತಿ ಸಾಕ್ಷಿ "ನೈವ ಶುದ್ಧಿರ್ನ ಚ ಶುದ್ಧಿರ್ನೈವ ವಂದಿತ ವಂದಿತಃ ॥ ನ ಪೂಜ್ಯ ಪೂಜಕ ವಿಧಿ । ರ್ನ ಶಿಷ್ಯೋರ್ನ ಗುರುಃ ಶಿವೆ ॥ ನ ಮಾತಾ ನ ಪಿತಾ ಭಾರ್ಯಾ । ನ ಚಾಂಡಾಲೋ ನ ಭೂಸುರಃ ॥ ನ ಗೌರ್ನ ಶುನಕೋ ಹಸ್ತಿ । ಗಾರ್ದಭೋ ವಾಪಿ ಭೇದತಃ ॥ ಉತ್ತಮಂ ಮಧ್ಯಮಂ ನೀಚಂ ಅನ್ಯೋನ್ಯ ಮಧಿಕಂ ಸಮಂ ॥ ವೀರಶೈವಾವಧೂತಶ್ಚ । ನಮೋವಾಖಿಲಂ ಶಿವೆ ॥ ಎಂಬ ಶ್ರುತಿ ಪ್ರಮಾಣದಂತೆ ಅಂತಜ್ಞಾನವುಳ್ಳಾತನಾಗಿ ಬಹಿರಂಗದ ವರ್ತನದಲ್ಲಿ ಅದ್ವೈತಮಂ ಪ್ರಕಟಿಸದೆ ಸತ್ಕ್ರಿಯಾ ಸಮ್ಯಜ್ಞಾನದಿಂದ ವರ್ತಿಸುತ್ತ ಲೌಕಿಕರ ಮಧ್ಯದಲ್ಲಿರ್ದು ಲೋಕಾಚಾರದ ಸದ್ಭಕ್ತರುಗಳಿಗೆ ಪೂರ್ವಕ್ರಿಯೆಗಳಿಂದಾಚರಿಸುವ ಮಾರ್ಗವನ್ನು ತಾನೇ ನಡೆದು ತೋರಿಸಬೇಕಾದಲ್ಲಿ ಸದ್ವರ್ತನೆ ಸತ್ಕ್ರಿಯಾಚಾರದಿಂದ ನಡೆದು ತೋರಿಸಬೇಕಲ್ಲದೆ ಅಂತರಂಗದ ಅದ್ವೈತ ವರ್ತನವನ್ನು ಬಹಿರಂಗದ ಕ್ರಿಯೆಗಳಲ್ಲಿ ಬಳಸಬಾರದು. ಜ್ಞಾನಿಗಳೆಂಬ ಮಹಾ ಪುರುಷರೇ ಸದಾಚಾರ ಸತ್ಕ್ರಿಯೆಗಳಿಂದ ವರ್ತಿಸದಿದ್ದರೆ ಲೌಕಿಕರು ಅನಾಚಾರಿಗಳಾಗಿ ಕೆಟ್ಟು ಹೋದಾರೆಂಬ ಕಾರುಣ್ಯದಿಂದ ಅಂತಜ್ಞಾನದ ಜ್ಞಾನವರ್ತನೆಯಲ್ಲಿ ಜ್ಞಾನದೃಷ್ಟಿಯಿಂದ ಸರ್ವ ಜೀವದಯಾಪಾರಿಯಾಗಿ ತನ್ನನು ಪರಿಪೂರ್ಣನಾಗಿ ಕಂಡಾಗ್ಯಾದರೂ ಬಹಿರಂಗದ ವರ್ತನೆಯಲ್ಲಿ ಸತ್ಕ್ರಿಯೆಯಿಂದ ಆಚರಿಸತಕ್ಕದ್ದಾಗಿದೆ.

"ಬಳಸದಿರದ್ವೈತವನು ಬಾಹ್ಯದಲ್ಲಿ ನಿನ್ನೊಳಗೇಕೋ ಭಾವನೆಯೊಡಗೂಡು । ತಿಳಿದು ಸಮಯ ನಿಷ್ಠೆಗಲಿ ವೇದವಿದ ಭಕ್ತಿಗಳನಗಲದಿರು" ಎಂದು ನಿಜಗುಣ ಶಿವಯೋಗಿಗಳ ವಾಕ್ಯ ಉಂಟಾಗಿ ಎಷ್ಟು ಪೂರ್ಣ ಸ್ಥಿತಿಯು ಬಂದಾಗ್ಯಾದರೂ ಜ್ಞಾನದಲ್ಲದ್ವೈತವಲ್ಲದೆ ಜಡಭೂತ ಕಾಯ ವರ್ತನೆಯ ಕ್ರಿಯೆಗಳಲ್ಲದ್ವೈತ ಉಂಟೇ? ಇಲ್ಲವು. "ಗುಪ್ತೋ ಮುಕ್ತ ಪ್ರಕಟೋ ಭ್ರಷ್ಟ" ಎಂಬ ಪ್ರಮಾಣ ಉಂಟಾಗಿ ಅದ್ವೈತವನ್ನು ಜ್ಞಾನದಲ್ಲಿಟ್ಟು ಗುಪ್ತವಾಗಿದ್ದರೆ ಮುಕ್ತನೇ ಅಹುದು. ಆ ಅದ್ವೈತವನ್ನು ಪ್ರಕಟಿಸಿ ಬಹಿರಂಗದ ಕ್ರಮಗಳಲ್ಲಿ ಬಳಸಿದರೆ ಭ್ರಷ್ಟನೇ ಅಹುದು. ಇದು ಸರ್ವರಿಗೂ ಪ್ರತ್ಯಕ್ಷ ಪ್ರಮಾಣವಾಗಿ ಕಾಣಿಸುತ್ತಿಹುದು. ಹೇಗಂದರೆ ಪಶುಗಳಂತೆ ಮಾಯಾ ವರ್ತನವಿಲ್ಲದೆ ದುರಾಚಾರಿಯಾಗಿ ಅಕ್ಕ ತಂಗಿ, ತಾಯಿ, ಆಯಿ, ಅತ್ತೆ, ಅತ್ತಿಗೆ, ನಾದಿನಿ, ಸೊಸೆ ಎನ್ನದೆ ಮತ್ತು ಉತ್ತಮ ಮಧ್ಯಮ ನೀಚ ಚಾಂಡಾಲಾದಿ ಜಾತಿಯ ಸ್ತ್ರೀಯರೆನ್ನದೆ ಕಾಮಾತುರನಾಗಿ ದನಗಳಂತೆ ಕಂಡ ಕಂಡ ಸ್ತ್ರೀಯರನ್ನು ಭೋಗಿಸುತ್ತಿರುವ ಅಧಮ ಅನಾಚಾರಿಗಳಿಗೆ ಎಷ್ಟು ಪೂರ್ಣದ ಮಾತಗಳನ್ನಾಡಿದಾಗ್ಯಾದರೂ ಭ್ರಷ್ಟರೆಂದಾರಲ್ಲದೆ ಜ್ಞಾನಿಗಳಹುದೆಂದು ಮೆಚ್ಚಬಹುದೇ? ಮೆಚ್ಚಲರಿಯರು. ಮತ್ತು ಪಿಶಾಚಿಗಳಂತೆ ಬತ್ತಲೆ ಇದ್ದು ಸ್ಮಶಾನದ ಅರಿವೆಯನುಟ್ಟು ತಿಪ್ಪೆಯೊಳು ಹೊರಳಾಡಿ ರಾಕ್ಷಸಾಹಾರವಾದ ಸುರೆ ಮಾಂಸಗಳಂ ಭುಂಜಿಸುತ್ತ ಭಂಗಿ ದತ್ತೂರಿ ಅಫು ಗಾಂಜಿ ಮೊದಲಾದ ಅಮಲಿನಲ್ಲಿ ಕಣ್ಣು ಮುಚ್ಚುತ್ತಲಿರುವ ಮಾದಿಗಾಚಾರದ ಮೂಳ ಹೊಲೆಯರ ವರ್ತನವು ಅದ್ವೈತವೆನಬಹುದೆ? ಈ ದುರ್ವ್ಯಸನಿಗಳಾದ ಅಜ್ಞಾನಿಗಳಿಗೆ ಯಾರಾದರೂ ಮೆಚ್ಚಾರೆ? ಮೆಚ್ಚಲರಿಯರು. ಇದಲ್ಲದೆ ಬಾಲಕರಂತೆ ಮಲವ ಭುಂಜಿಸುತ್ತ ಮೂತ್ರದೊಳು ಹೊರಳಾಡುತ್ತ ಮಾನಾಪಮಾನದ ಹಂಗಿಲ್ಲದೆ ಬತ್ತಲೆ ಇರುತ ಜ್ಞಾನ ಹೀನರಾಗಿ ವರ್ತಿಸುವ ದುರಾಚಾರಿಗಳಿಗೆ ಯಾರಾದರೂ ಸುಜ್ಞಾನಿಗಳೆಂದಾರೇ? ಎನ್ನಲರಿಯರು. ಮತ್ತು ವಿಟ ಪುರುಷರಂತೆ ಸ್ತ್ರೀಲಂಪಟಗಳಾಗಿ ಚಾತುರ್ಯದ ಜ್ಞಾನದ ಮಾತುಗಳನ್ನಾಡಿ ಮರುಳುಗೊಳಿಸಿ ಸ್ತ್ರೀಯರಿಗುಪದೇಶ ಮಾಡುವೆವೆಂದು ಏಕಾಂತ ವಾಸಕ್ಕೊಯ್ದು ತನು, ಮನ, ಧನವ ಗುರುವಿಗೆ ಸಮರ್ಪಿಸಬೇಕೆಂದು ಹೇಳಿ ಆ ಸ್ತ್ರೀಯರಂ ಭೋಗಿಸಿ ಆ ಸವಿಯಿಂದ ಪರಸ್ತ್ರೀಗಮನದ ಲಂಪಟವು ತಲೆಗೇರಿ ಅನ್ಯ ಸ್ತ್ರೀಗಮನ ಅನ್ಯ ದ್ರವ್ಯಾಪಹಾರಿಗಳಾಗಿ ಬ್ರಹ್ಮಜ್ಞಾನದ ಭ್ರಷ್ಟ ಹೊಲೆ ಮಾದಿಗರಿಗೆ ಯಾರು ಮೆಚ್ಚ

ಬೇಕು? ಆದರೆ ಆ ಜೀವನ್ಮುಕ್ತನ ಸ್ಥಿತಿಯು ಪಶುವಿನಂತೆ ಪೈಶಾಚಿಗಳಂತೆ ಬಾಲಕರಂತೆ ವಿಟ ಪುರುಷರಂತೆ ಇರುವದೆಂದು ನಿಜಗುಣಾರಾಧ್ಯರು ಹೇಳಿದ್ದಾರೆ. ಈ ಶೃತ್ಯರ್ಥವು ಈ ಜಿಹ್ವಾ ಲಂಪಟ ಗುಹ್ಯಾಲಂಪಟವುಳ್ಳ ಕಾಮಾಂಧ ಹೊಲೆಯರಾದ ಅಜ್ಞಾನಿಗಳಿಗೆ ಸಹಜವಾಗುವದೆ? ಹೇಗಂದರೆ ವಿಟಬಾಲೋನ್ಮತ್ತ ಪಿಶಾಚಿ ಪಶುಗಳ ಸ್ಥಿತಿಗಳಲ್ಲಿ ಒಂದೊಂದು ಮಹಾಜ್ಞಾನ ಲಕ್ಷಣದ ಚಿಹ್ನ ಉಂಟು. ಆ ಜ್ಞಾನ ಲಕ್ಷಣದಿಂದ ಸರ್ವಜ್ಞನಾಗಿ ಸಕಲ ಜಗತ್ಪೂಜ್ಯನಾಗಿ ವರ್ತಿಸಬೇಕಲ್ಲದೆ ಅಜ್ಞಾನ ದುರ್ವರ್ತನದಿಂದ ಆಚರಿಸುವದು ಅಧಮಾಚಾರವೇ ಹೊರತು ಜ್ಞಾನಾಚಾರವಾಗಲರಿಯದು. ಈ ಅನಾಚಾರಿಗಳಿಗೆ ಅದ್ವೈತ ಮತದ ಆರೂಢಜ್ಞಾನಿಗಳೆಂದು ಯಾರೂ ತಿಳಿಯಬಾರದು. ಇದು ಶಿವಾದ್ವೈತ ಮಾರ್ಗವಲ್ಲವು. ಇದು ಫ್ರೇಂಚ ದೇಶದ ಸನ್ಯಾಸಿಗಳಿಂದ ಹುಟ್ಟಿದ ಮಾದಿಗಾಚರಣೆ ಎಂದು ಸ್ಪಷ್ಟವಾಗಿ ತಿಳಿಯಬೇಕು. ಜ್ಞಾನದಲ್ಲಿ ಅದ್ವೈತವಲ್ಲದೆ ಕ್ರಿಯೆಯಲ್ಲಿ ಅದ್ವೈತ ಉಂಟೆ? ಸಹಜಾರ್ಥವ ಕೆಡಿಸಿ ಅನರ್ಥ ಮಾಡಿದ ಕಾರಣ ಹೀಗಾಗಿ ಕೆಟ್ಟು ಭ್ರಷ್ಟರಾದರಲ್ಲದೆ. ಭ್ರಷ್ಟರಿಗೆ ಗತಿಯುಂಟೆ? "ಭ್ರಷ್ಟಸ್ಯ ಕಾ ವಾ ಗತಿಃ" ಎಂಬ ಪ್ರಮಾಣವಿಹುದು.

ಮನೆಗಳಿಗೆ ಮೇರೆ, ಹೊಲಗಳಿಗೆ ಮೇರೆ, ಕುಲಗಳಿಗೆ ಮೇರೆ, ಮತಗಳ್ಳಿಗೆ ಮೇರೆ, ಶಾಸ್ತ್ರಗಳಿಗೆ ಮೇರೆ, ನಡೆಯಲ್ಲಿ ಮೇರೆ, ನುಡಿಯಲ್ಲಿ ಮೇರೆಗಳುಂಟು. ಇದಲ್ಲದೆ, ಪೃಥ್ವಿಗೆ ಮೇರೆ, ಆಕಾಶಕ್ಕೆ ಮೇರೆ, ಸಮುದ್ರಾದಿ ಉದಕಂಗಳಿಗೆ ಮೇರೆ, ವಾಯು ಅಗ್ನಿಗಳಿಗೆ ಮೇರೆಯುಂಟು. ಸೂರ್ಯ-ಚಂದ್ರ-ನಕ್ಷತ್ರಂಗಳಿಗಾದರೂ ಮೇರೆಯುಂಟು. ಇವುಗಳು ಮೇರೆ ದಪ್ಪಿದಾಗಲೆ ಪ್ರಳಯವೇ ಹೊರತು ಪರಿಣಾಮವಿಲ್ಲವು.

ಜ್ಞಾನಿಯಾದ ಮೇಲೆ ಕುಂದುಪಡೆಯದಿರಬೇಕು. ಸಾಕ್ಷಿ "ನಿಂದಿಸಿ ನುಡಿಯದಿರಾರನು ಮನಸಿಗೆ ಬಂದಂತೆ ನಡೆಯದಿರಿಹದಲ್ಲಿ ಕುಂದುಪಡೆಯದಿರು ಕಾಮಾದಿಗಳ ಜಯಿಸೆಂದು ಕೈವಿಡಿದನುಗ್ರಹಿಸುವ" ಎಂದು ನಿಜಗುಣ ವಾಕ್ಯ ಉಂಟಾಗಿ, ಲೋಕಾಪವಾದದಲ್ಲಿ ಭೀತಿ ಇರಬೇಕು. ಯಾಕಂದರೆ ಅಪವಾದ ಬಂದ ಮೇಲೆ ಹೋಗಲರಿಯದು. ಇದಕ್ಕೆ ಇಂದ್ರ ಚಂದ್ರರ ಕುಂದೇ ಸಾಕ್ಷಿ. ಮತ್ತು "ಪಡೆದಪವಾದದಿಂ ಮರಣವಿನ್ನುಂಟೆ" ಎಂಬ ವಾಕ್ಯ ಉಂಟು. ಮತ್ತು ಜ್ಞಾನಿಯಾದ ಮೇಲೆ "ಎಲ್ಲರೊಡನೆ ವೈರವಿಲ್ಲದೇ ಇರ್ಪುದೇ ಚಂದ" ಎಂದ ಹಾಗೆ ಸರ್ವತ್ರರಿಗೂ ಹಿತಕಾರಿಯಾಗಿ ಲೋಕೋಪಕಾರಿ ಎನಿಸುತ್ತ ವರ್ತಿಸಬೇಕು.

ಜ್ಞಾನಿಯಾದವರು ಕುಟುಂಬ ಉಳ್ಳವರಾಗಿದ್ದರೆ, ಬಹಿರಂಗದ ವರ್ತನೆಯಲ್ಲಿ ಏಕಕುಟುಂಬಿಗಳಾಗಿ ವರ್ತಿಸಿದಾಗ್ಯಾದರೂ ಅಂತರಂಗದ ಮಹಾಜ್ಞಾನದಲ್ಲಿ ತಾವು ವಿಶ್ವಕುಟುಂಬಿಗಳೆಂದೇ ತಿಳಿದಿರಬೇಕು. ತನ್ನ ಕೈಯಿಂದಾದಷ್ಟು ಸಹಾಯದಿಂದ ಸರ್ವರಿಗೂ ಹಿತವನ್ನು ಮಾಡುತಿರಬೇಕು. ಲೌಕಿಕರೆದುರಿಗೆ ತನ್ನಂತರಂಗದ ಸಹಜ ಜ್ಞಾನಸ್ಥಿತಿಯನ್ನು ಪ್ರಕಟಿಸದೆ ಗುಪ್ತಜ್ಞಾನಿಗಳಾಗಿ ಸತ್ಕ್ರಿಯೆ ಸದಾಚಾರಂಗಳ ಪ್ರಕಟಿಸಬೇಕು. ಯಾತಕ್ಕೆಂದರೆ, "ನಿಜವನಾಡಲು ಗಾದು ನೀಚಾತ್ಮರೊಲು" ಎಂದು ತೆಲಗಿನಲ್ಲಿ ಒಬ್ಬ ಪರಮ ಜ್ಞಾನಿಗಳು ಹೇಳಿದ್ದಾರೆ.

ಜ್ಞಾನಿಗಳು ಸತ್ಯವಂತರಾಗಬೇಕಲ್ಲದೆ, ಅಸತ್ಯಕ್ಕೆ ಮೈಗೊಡಬಾರದು. ಜ್ಞಾನಿಗಳಾದವರಲ್ಲಿ ಅಸತ್ಯ ವರ್ತನವಿಲ್ಲದಿದ್ದರೂ ಲೌಕಿಕರ ಭಿಡೆಯಿಂದ ತಾವು ಅಸತ್ಯವ ನುಡಿದರೆ ಜ್ಞಾನಿಗಳಾದರೂ ಅಜ್ಞಾನಿಗಳೆನಿಸುವರು. ಅಸತ್ಯವು ಅನರ್ಥಕ್ಕೆ ಸಾಧನವದೆ. ಸಾಕ್ಷಿ "ಉತ್ತರಿಯು ಸುರಿಯದಿರೆ, ಹೆತ್ತವ್ವ ಪ್ರೊರೆಯದಿರೆ, ಸತ್ಯವಂತರು ಹುಸಿದರೆ ಮರ್ತ್ಯಕ್ಕೆ ಅತ್ತಳಕೊತ್ತಾವು ಸರ್ವಜ್ಞ" ಎಂದು ಸರ್ವಜ್ಞ ಜ್ಞಾನಿಗಳ ವಾಕ್ಯ ಉಂಟು.

ಪರಮಸುಜ್ಞಾನಿಗಳಾದ ದಿವ್ಯಜ್ಞಾನಿಗಳಾದವರು ಈ ಲೋಕದಲ್ಲಿ ಲೌಕಿಕರಂತೆ, ಲೋಕಾಚಾರದ ಕೃಷಿ ಮೊದಲಾದ ಷಟ್ಕೃಷಿ ಲೋಕ ವ್ಯವಹಾರದಿಂದ ಸಂಸಾರದೊಳಗಿರ್ದರೂ ತಮ್ಮ ಮಹಾಜ್ಞಾನದಲ್ಲಿ ಭಕ್ತಿ ಜ್ಞಾನ ವೈರಾಗ್ಯದ ಬಲದಿಂದ ನಿಃಸಂಸಾರಿಗಳಂತೆ ನಿರ್ಲೇಪಿಗಳಾಗಿರಬೇಕು.

ಸಂಸಾರದೊಳಗಿರ್ದು ಕಮಲ ಪತ್ರದಂತೆ, ನಿಃಸಂಸಾರಿಯಾಗಿರಬೇಕಾದರೆ ಸರ್ವ ಜ್ಞಾನಿಗಳಾದ ಪರಮ ಜ್ಞಾನಿಗಳಿಗೆ ಸುಲಭವು. ಅಲ್ಪ ಜ್ಞಾನಿಗಳಿಗೆ ದುರ್ಲಭವಾಗಿರುವದು. ಸಾಕ್ಷಿ "ಜಾಣನು ಲೌಕಿಕ ಪಾರಮಾರ್ಥವೆರಡನು ಮಾಣದೆ ಕೂಡಿ ನಡಿಸುತಿಹನಿಂತು" ಎಂಬ ನಿಜಗುಣಾರ್ಯರ ಪದವೇ ಸಾಕ್ಷಿಯಾಗಿದೆ.

ಈ ಗ್ರಂಥವು ಭೋಗ ಮೋಕ್ಷಗಳೆರಡರ ವಿಷಯದಲ್ಲಿ ಅನಂತ ರೀತಿಯ ಸದ್ಬೋಧೆಯನ್ನು ಬೋಧಿಸುವದಾಗಿ ಪ್ರಬಲವೇ ಹೊರ್ತು ಅಬಲ ವಲ್ಲವು. ಇದರಲ್ಲಿ ನೀತಿ ಕ್ರಿಯಾಚಾರ ಸತ್ಯಸದಾಚಾರ ಸುಜ್ಞಾನ ಜ್ಞಾನಾಚಾರ ವಿಷಯದಲ್ಲಿ ವೇದಾದಿ ಶ್ರುತಿ ಸಮ್ಮತವಾಗಿ ಜಗತ್ಪ್ರಖ್ಯಾತನಾದ ಪ್ರಬಲಶಾಸ್ತ್ರಂಗಳೆನಿಸಲ್ಪಟ್ಟ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳ ವಾಕ್ಯಗಳ ದೃಷ್ಟಾಂತಂಗಳಿಂದ ಮತ್ತು ಶ್ರುತಿ ಸ್ಮೃತಿ ಆಗಮ ಪುರಾಣಂಗಳ ಗ್ರಂಥ ಸಾಕ್ಷಿಗಳನ್ನು ಕೊಟ್ಟು, ಸದ್ಬೋಧೆಯನ್ನು ಬೋಧಿಸುತ್ತ ಇರುವದರಿಂದ ಪ್ರಬಲವೆಂದು ತಿಳಿಯತಕ್ಕದ್ದು.

---

# ಪ್ರಾಣಲಿಂಗಾನುಸಂಧಾನ.

(ಲೇಖಕ:— ಶರಣಸೇವಕ ಬಸವನ ಬಳಗ.)



[ಶ್ರೀ ಚೆನ್ನಬಸವೇಶನು ಬಸವೇಶ್ವರನಿಗೆ ತನ್ನ ಪ್ರಾಣಲಿಂಗದ ಅನುಭವವನ್ನು ಅರುಹಿದ್ದು.]

ಬಸವೇಶ ನೀನೆನ್ನ ಕರದಿತ್ತ ಲಿಂಗವನು ।
ಅಸಮತರ ಭಕ್ತಿಯಿಂ ಪೂಜಿಸುತ್ತಿರಲಾನು ॥ ೧ ॥

ಕೊರಡುಕೊರಡಿಗೆ ತಿಕ್ಕಿ ಬೆಂಕಿ ಹೊರಡುವ ತೆರದಿ ।
ಪರತರದ ಲಿಂಗವುಂ ಮನದೃಷ್ಟಿಗಳ್ಮಥಿಸೆ ॥ ೨ ॥

ಎನ್ನಂತರಂಗದೊಳಗೊಮ್ಮೆ ಝಗ್ಗನೆ ಜ್ಯೋತಿ ।
ರನ್ನ ದೀವಿಗೆಯಂತೆ ಬೆಳಕ ಕೆಡವಲು ಜವದಿ ॥ ೩ ॥

ಆಗ ನನ್ನ ಜ್ಞಾನ ಕತ್ತಲೆಯು ತಾ ಪರಿದು ।
ಬೇಗದಿಂ ಸುಜ್ಞಾನ ದೀಪ ಹೊಳೆದಂತಾಗೆ ॥ ೪ ॥

ಒಳಗಿನೀ ಬೆಳಕೆನ್ನ ಹೊರಮೂಡಿ ಮೊಗದಲ್ಲಿ ।
ಕಳೆವೆತ್ತು ತೋರುತಿರೆ ಜನವೆಲ್ಲ ಬೆರಗಾಗಿ ॥ ೫ ॥

ಎನ್ನನ್ನು ಬಹು ಭಕ್ತಿಭಾವದಿಂ ನೋಡುತಲಿ ।
ಎನ್ನ ನಡುವಳಿಯಂತೆ ತಾವೆಲ್ಲ ನಡೆಯುತಲಿ ॥ ೬ ॥

ಎನ್ನಲ್ಲಿ ಗೌರವವ ಹೆಚ್ಚಾಗಿ ಬೆಳಿಸಿದರು ।
ಎನ್ನನ್ನು ತಲೆಯ ಮೇಲ್ಪೊತ್ತು ಕುಣಿದಾಡಿದರು ॥ ೭ ॥

ಆ ಲಿಂಗದುಪಕಾರವನ್ನೆಂತು ನಾ ಮರೆವೆ ।
ನಾಲಿಗೆಯು ಬಣ್ಣಿಸಲ್ಕರಿದದರ ಮಹಿಮೆಯನು ॥ ೮ ॥

ಲಿಂಗವೇ ಶಿವನೆಂದು ನಾನೆ ಭಕ್ತನು ಯೆಂದು ।
ಸಿಂಗರದಿ ಮನದಲ್ಲಿ ನಂಬಿ ನಾ ಸಾಗಿರಲು ॥ ೯ ॥

ಗುರುವು ನೀ ನನಗೆಂಬ ಭಾವ ತಾ ಬಲಿದಿರಲು ।
ಕರದಿಷ್ಟ ಲಿಂಗದೋಳ್ಭಕ್ತಿ ಕರಿಗೊಂಡಿರಲು ॥ ೧೦ ॥

ಎನ್ನಂತರಂಗದಿಂದರಿವು ಜಾಗ್ರತವಾಗಿ ।
ಎನ್ನ ಶ್ರೀಗುರುವಾಗಿ ಪೇಳ್ದುದೀ ಪರಿಯಲ್ಲಿ ॥ ೧೧ ॥

"ನಿನ್ನ ಬಾಹ್ಯದ ಲಿಂಗಕಿಷ್ಟೇಕೆ ಮನ್ನಣೆಯು ।
ಚೆನ್ನ ನಿನ್ನಯ ಪ್ರಾಣವೇ ಲಿಂಗವಾಗಿಹುದು ॥ ೧೨ ॥

ಮನದೊಳಗೆ ಜನಿಯಿಸಿರುವೀ ವಾಣಿಯಂ ಕೇಳಿ ।
ಜನಿತ ಹರ್ಷದಿ ದೃಷ್ಟಿ ಯೆನ್ನೊಳಗೆ ನಾನಿರಿಸಿ ॥ ೧೩ ॥
ಅರಿವೆ ನೀ ಗುರುವೆಂದು ಭಕುತಿಯಿಂ ಕುಂಬಿಟ್ಟೆ ।
ಪರಮ ಪ್ರಾಣವೆ ಲಿಂಗವೆಂದು ನಾ ಪೊಡಮಟ್ಟೆ ॥ ೧೪ ॥
ಅರಿವು ಗುರುವಾಗಿರಲು ಪ್ರಾಣಲಿಂಗಾಗಿರಲು ।
ಹೊರಗೆ ನೀ ಗುರುವೇಕೆ? ಬಾಹ್ಯ ಲಿಂಗವದೇಕೆ? ॥ ೧೫ ॥
ಇಂತೆಂಬ ಸಂಶಯಪಿಶಾಚಿ ಯೆನ್ನಯ ಮನವ ।
ಸಂತತಂ ನೋಯಿಸಲು ನಾನದಕೆ ವಶನಾದೆ ॥ ೧೬ ॥
ಎನ್ನ ಗುರು ಶ್ರೀ ಬಸವನೆಂಬುದಂ ನಾ ಮರೆತೆ ।
ಚೆನ್ನ ಕೂಡಲಸಂಗಲಿಂಗವೆಂಬುದ ಮರೆತೆ ॥ ೧೭ ॥
ಬಸವ ಮಾನವನಲ್ಲೆ? ಲಿಂಗ ತಾ ಶಿಲೆಯಲ್ಲೆ? ।
ಮಿಸುಪುದೆಂಬೀ ಭಕ್ತಿಯ ಜ್ಞಾನಕುರುಹಲ್ಲೆ? ॥ ೧೮ ॥
ಎನ್ನೊಳಗೆ ಸತ್ಯವಿರಲನ್ಯರನು ನಾ ನಂಬಿ ।
ಇನ್ನೆಗಂ ಕೆಟ್ಟೆನಕಟಾ ಯೆಂದು ಬಹು ನೊಂದೆ ॥ ೧೯ ॥
ಬಸವ ನಿನ್ನೊಳಗೆನ್ನ ಗುರುಭಕ್ತಿ ಲಯವಾಯ್ತು ।
ಎಸೆವ ಲಿಂಗದಿ ಭಕ್ತಿಭಾವನೆಗೆ ಯಳಿವಾಯ್ತು ॥ ೨೦ ॥
ಭಾವನೆಯ ನೆರೆ ತೂರಿ ಬುದ್ಧಿಯಂ ಬೆಂಬತ್ತಿ ।
ಸಾವಕಾಶದಿ ನಾನು ಸಾಗಿರಲು ಬಸವೇಶ ॥ ೨೧ ॥
ಎನ್ನ ಮನ ಸಂಶಯತರಂಗದಿಂ ತುಂಬಿಹುದು ।
ಎನ್ನ ತರ್ಕವಿತರ್ಕ ಚನ್ನದಿಂ ಸಾಗಿಹುದು ॥ ೨೨ ॥
ವಾದದೊಳ್ಬಹುಕುಶಲ ನಾನಾದೆ ಚಚ್ಚರದಿ ।
ವಾದದಲಿ ನಾ ಗೆದ್ದೆ ಬಹು ಶಾಸ್ತ್ರಿ ಪಂಡಿತರ ॥ ೨೩ ॥
ಎನ್ನೊಳಗಹಂಭಾವ ಬೆಳೆಯಿತಾಕ್ಷಣದಲ್ಲಿ ।
ನನ್ನಿಷ್ಟಲಿಂಗಪೂಜಾಫಲಕೆ ಕೊನೆಯಾಯ್ತು ॥ ೨೪ ॥
ಎನಗಾಗ ತೊಂದರೆಗಳೊಂದೊಂದೆ ಕಾಡಿದವು ।
ಮನವು ಚಿಂತಾತುರಗಳಿಂ ನೊಂದು ಬೆಂದಿಹುದು ॥ ೨೫ ॥
ಎಣ್ಣೆಯಿಲ್ಲದ ದೀಪ ಕಣ್ಣುಯಿಲ್ಲದ ದೇಹ ।
ಹಣ್ಣುಯಿಲ್ಲದ ರುಚಿಯು ಕಾಷ್ಠವಿಲ್ಲದ ಅಗ್ನಿ ॥ ೨೬ ॥

ಯಂದದೊಳೆನ್ನ ಜ್ಞಾನದ ಜ್ಯೋತಿ ಮಸಕಾಯ್ತು ।
ಅಂದಿನಿಂದೆನ್ನ ಮೊದಲಿನ ಕಾಂತಿಗಳಿವಾಯ್ತು ॥ ೨೭ ॥
ನಾನೊಬ್ಬ ಸಾಮಾನ್ಯಜೀವಿಯೆಂದುಂ ಜನವು।
ಹೀನದೃಷ್ಟಿಯೊಳೆನ್ನ ಕಾಣುತಿರಲಾಗೆನ್ನ ॥ ೨೮ ॥
ಎದೆಯು ಕೈಕಾಲುಗಳು ಗದಗದನೆ ನಡುಗಿದವು।
ಬಿದಿ ಯೆನಗೆ ಕಾಡುವದೆ ಯೆಂದಾನು ತಳಮಳದಿ ॥ ೨೯ ॥
ಬಸವೇಶ ನಿನ್ನನ್ನು ನೆನೆನೆನಿಸಿ ನಾನತ್ತೆ ।
ಮಿಸುಕಿ ಲಿಂಗವ ಸ್ಮರಿಸಿ ಮತ್ತೊಮ್ಮೆ ನಾನತ್ತೆ ॥ ೩೦ ॥
ಹೀಗಿರಲು ಬಸವೇಶ ನೀನೆನ್ನ ಕನಸಿನೊಳು।
ಬೇಗದಿಂ ಬಂದೆನಗೆಯಿಂತೆಂದೆ ಪ್ರೇಮದೊಳು ॥ ೩೧ ॥
"ಚಿಂತೆಯಂ ಬಿಡು ಚನ್ನ ಸಂತೈಸುವೆನು ನಿನ್ನ ।
ಕಂತುಹರಗರಿವಾಯ್ತು ನಿನ್ನ ಮನದನುತಾಪ ॥ ೩೨ ॥
ನಿಜವಾದ ಕರದಿಷ್ಟಲಿಂಗಮಂ ನೀ ತೊರೆದು।
ಭಜಿಸಿರ್ಪೆ ಪ್ರಾಣಲಿಂಗದ ಕಳೆಯನೊಂದನ್ನೆ ॥ ೩೩ ॥
ಅದರಿಂದ ನಿನಗಿಂತ ಕಷ್ಟ ತಾನೊದಗಿಹುದು।
ಇದನರಿದು ನೀನಿನ್ನು ಗುರುಲಿಂಗದೊಳ್ಬೆಕುತಿ ॥ ೩೪ ॥
ಇರಿಸಿ ಪ್ರಾಣದಿ ಲಿಂಗಸಂಧಾನಮಂ ಮಾಡು।
ಪರವಸ್ತುವಿನ ಕೃಪೆಯು ದೊರೆಯುವದು ಮತ್ತೊಮ್ಮೆ ॥ ೩೫ ॥
ಜ್ಞಾನಜ್ಯೋತಿಗೆ ಭಕ್ತಿರಸತೈಲ ತಾ ಬೇಕು।
ನೀನು ಭಕ್ತಿಯ ಬಿಡಲು ಜ್ಞಾನ ತಾನಳವಡದು ॥ ೩೬ ॥
ಜ್ಞಾನಪ್ರಾಪ್ತಿಗೆ ಭಕ್ತಿ ಬೇಕೆಂಬುದನ್ನರಿದು।
ಜ್ಞಾನವಂತನೆ ಭಕ್ತಿಯಂ ಮಾಡೊ ನೀನಿನ್ನು" ॥ ೩೭ ॥
ಬಸವೇಶ ತಾ ಕನಸಿನೊಳ್ಪೇಳಿದೀ ನುಡಿಯ।
ಹೊಸಹುರುಪಿನಿಂ ನಾನು ಪಾಲಿಸಲು ಜವದಲ್ಲಿ ॥ ೩೮ ॥
ಕಳೆದ ಎನ್ನಯ ಕಾಂತಿ ತಿಳಿಯಾಗಿ ನಿಂದಿತ್ತು।
ಅಳಿದೆನ್ನ ಗೌರವವು ಮರಳಿ ತಾ ಸುತ್ತಿತ್ತು ॥ ೩೯ ॥
ಇಷ್ಟಲಿಂಗದ ಭಕ್ತಿರಸತೈಲದಿಂದೆನ್ನ।
ಅಷ್ಟಸೌಭಾಗ್ಯಯುತ ಪ್ರಾಣಲಿಂಗದ ಜ್ಯೋತಿ ॥ ೪೦ ॥

ಜಗಜಗಿಸಿ ಬೆಳಗೆ ಮನವೇಕಾಗ್ರವಾಯಿತ್ತು ।
ಸೊಗದಿಂದ ಶಾಂತಿಗುಣಸ್ಫೈರಣೆಯು ಹೆಚ್ಚಿತ್ತು ॥ ೪೧ ॥
ಅಣಿಮಾದಿಅಷ್ಟಸಿದ್ಧಿಗಳೆನಗೆ ವಶವಾಗೆ ।
ಘನಯೋಗಮಾರ್ಗಸಾಧನೆ ತಾನೆ ಕೈಸೇರೆ ॥ ೪೨ ॥
ನಾನು ಹಾವಾಡಿಗನೊ ಮಾಂತ್ರಿಕನೊ ಡಾಂಭಿಕನೊ ।
ಯಾನಾಡ ಕುಡಗಾಡಸಿದ್ಧನೋಯೆಂಬಂತೆ ॥ ೪೩ ॥
ನೂರೆಂಟುಪಾವಾಡಗಳ ಮಿಕ್ಕಿ ನಾಗೆಯ್ದೆ ।
ಪಾರಮಾರ್ಥದ ಸೀಮೆ ಮೀರಿತೆಂದಾನರಿದೆ ॥ ೪೪ ॥
ಪರಮತದ ವಾದಿಗಳ ಗೆದ್ದು ದೀಕ್ಷೆಯ ಕೊಟ್ಟು ।
ಪರಮಪರತರ ವೀರಶೈವರಂ ನಾಗೆಯ್ದೆ ॥ ೪೫ ॥
ಚಿಕ್ಕದಣ್ಣಾಯಕರ ಸರಿಯಾರು ಇಹರೆಂದು ।
ಅಕ್ಕರದಿ ಜನರಾಡಿಕೊಳುತಿರಲು ನಾನುಬ್ಬಿ ॥ ೪೬ ॥
ಪರಬೊಮ್ಮ ನಾನಾದೆನೆಂದು ಹಿರಿಹಿರಿ ಹಿಗ್ಗಿ ।
ಮರೆದು ವೈಮರೆದಿರ್ದೆ ಇಷ್ಟಪ್ರಾಣಗಳಿರವ ॥ ೪೭ ॥
ಅನಿತರೊಳೆನ್ನ ಗರ್ವವ ಕುಗ್ಗುಬಡೆವಂಥ ।
ಘನಮೂರ್ತಿ ಪ್ರಭುವರ್ಯ ಬಂದೆನ್ನ ವಾದದಲಿ ॥ ೪೮ ॥
ಗೆದ್ದು ನೀರಿಳಿಸಿದಾ ಕ್ಷಣದಲ್ಲಿ ನನ್ನೆದೆಯು ।
ಗದ್ಗದನೆ ತಾ ನಡುಗಿ ಹಮ್ಮದಂ ತಾ ಪೋಗಿ ॥ ೪೯ ॥
ಸೊಕ್ಕಿದಾನೆಯು ಮದವು ಅಂಕುಶದ ಹೊಡತದಿಂ ।
ದಿಕ್ಕೆಟ್ಟು ಪೋಪಂತೆ ಎನ್ನ ಬುದ್ಧಿಯ ಗರ್ವ ॥ ೫೦ ॥
ಆ ಮಹಾಪ್ರಭುರಾಯನಮಳಜ್ಞಾನಾಂಕುಶದಿ ।
ಭೂಮಿಯೊಳಿಲ್ಲೆಸಿಸಿತಾಕ್ಷಣದಿ ಸೋಜಿಗವು! ॥ ೫೧ ॥
ಸಿದ್ಧಪುರುಷರು ಅವರು ಜನ್ಮದಿಂ ಜ್ಞಾನಿಗಳು ।
ಶುದ್ಧಮತಿಗಳು ಅವರ ಪಾದಕ್ಕೆ ನಾ ಸರಿಯೆ ॥ ೫೨ ॥
ಜಂಗಮವು ಸುಜ್ಞಾನನಿಧಿಯೆಂಬುದಂ ನಾನು ।
ಲಿಂಗಮೂರುತಿ ಪ್ರಭುವ ನೆರೆ ನೋಡಿ ಮನಗಂಡೆ ॥ ೫೩ ॥
ಬಸವೇಶ ನೀನವರ ಮುಖದಿಂದೆ ದಯವಿಟ್ಟು ।
ಅಸಮತರ ಭಾವಲಿಂಗದ ಕುರುಹನರುಹಯ್ಯ ॥ ೫೪ ॥

---

# ನಾಸ್ತಿಕತ್ವದ ದುಷ್ಪರಿಣಾಮಗಳು.

(ಲೇಖಕ:— ಆಸ್ತಿಕ.)



ಈ ಜಗತ್ತಿನಲ್ಲಿ ಚಾರ್ವಾಕರು ನಾಸ್ತಿಕರು ಮೊದಲಾದ ಕೆಲವು ಪಂಥದವರು ದೇವರು ಇದ್ದಾನೆಂಬ ಮಾತನ್ನು ಒಪ್ಪುವದಿಲ್ಲ. 'ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ' "ಋಣಂ ಕೃತ್ವಾ ಘೃತಂ ಪಿಬೇತ್" ಎಂಬ ಯಥೇಷ್ಟ ವೃತ್ತಿಯ ತತ್ವಗಳಿಂದ ನಾಸ್ತಿಕ ಮತವು ತುಂಬಿಕೊಂಡಿರುವದರಿಂದ ಅವರಲ್ಲಿ ಆಸುರೀ ಪ್ರವೃತ್ತಿಯೇ ಎದ್ದು ಕಾಣುವದಲ್ಲದೆ ಅಂತಃಕರಣ ಪ್ರವೃತ್ತಿಯು ಲೋಪವಾಗಿರುತ್ತದೆ.

ನಾಸ್ತಿಕರು ಒಪ್ಪದೆ ಇರತಕ್ಕ ವಿಷಯಗಳು ಪ್ರಾಮುಖ್ಯವಾಗಿ ಆರು ಇರುತ್ತವೆ. ಅವು ಯಾವುವೆಂದರೆ:— (೧) ದೇವರ ಅಸ್ತಿತ್ವದ ನಿರಾಕರಣೆ (೨) ಜೀವಾತ್ಮನ ಅಸ್ತಿತ್ವದ ನಿರಾಕರಣೆ (೩) ಆತ್ಮನ ಅಮರತ್ವದ ನಿರಾಕರಣೆ (೪) ಮಾನವೀ ಶಕ್ತಿಗೆ ಮೀರಿದ ಬುದ್ಧಿ ಶಕ್ತಿಯ ನಿರಾಕರಣೆ (೫) ವಿಶ್ವದಲ್ಲಿದ್ದ ಚೈತನ್ಯದ ನಿರಾಕರಣೆ (೬) ಆಧ್ಯಾತ್ಮ ಜಗತ್ತಿನ ಸತ್ಯತೆಯ ನಿರಾಕರಣೆ.

ಮಾನವನ ಉದ್ಧಾರಕ್ಕೂ ಸುಖಕ್ಕೂ ಪ್ರಗತಿಗೂ ಆಸ್ತಿಕವಾದವು ಅನುಕೂಲವಾಗಿದ್ದರೆ ನಾಸ್ತಿಕವಾದವು ಪ್ರತಿಕೂಲವಾಗಿದೆ. ತಂದೆಯೇ ಇಲ್ಲೆನ್ನುವ ಅನಾಥ ಕೂಸಿನಂತೆ ದೇವರೇ ಇಲ್ಲೆನ್ನುವ ನಾಸ್ತಿಕರು ಆಧ್ಯಾತ್ಮಿಕಾನಂದಕ್ಕೆ ಎರವಾಗಿಬಿಟ್ಟಿದ್ದಾರೆ. ದೇವರಿದ್ದಾನೆಂಬುದೇ ನಾಸ್ತಿಕರಿಗೆ ಮೂಢಭಾವನೆಯಂತೆ ಕಾಣುತ್ತದೆ. ಆ ವಿಚಾರದಲ್ಲಿಯೇ ಅವರು ತಮ್ಮ ಜಾಣತನವನ್ನು ಹೊಗಳಿಕೊಳ್ಳುತ್ತಿದ್ದಾರೆ. ಆದರೆ ದೈವೀ ಭಾವಶೂನ್ಯತೆಯಿಂದ ತಮ್ಮ ನಿಜಾನಂದ ರಹಸ್ಯದ ರಸವೇ ಬತ್ತಿ ಹೋಗಿರುವದೆಂಬ ಮಾತನ್ನು ಮರೆತಿದ್ದಾರೆ. ಆಸ್ತಿಕರ ಮತದಲ್ಲಿ ನಾಸ್ತಿಕ ವಾದವು ಘೋರ ಪಾಪವೆಂದೆನಿಸಲ್ಪಡುತ್ತದೆ. ಅದು ವಿಶ್ವವನ್ನೇ ಅಧೋಗತಿಗೆ ಒಯ್ಯುವಂತಹದು. ಅದು ಮನುಷ್ಯನನ್ನು ಹೀನಾವಸ್ಥೆಗೆಳಿಸುವದು. ನಾಸ್ತಿಕನು

ಏನೋ ಪ್ರಸಂಗವಶಾತ್ ಭೂಮಿಗೆ ಜಾರಿ ಬಿದ್ದ ಪರದೇಶಿ ಕೂಸಾಗಿದ್ದಾನೆ. ಅವನು ಚೈತನ್ಯಶೂನ್ಯನಾಗಿದ್ದಾನೆ. ಅವನ ಅಸ್ತಿತ್ವಕ್ಕೆಷ್ಟು ಮಾತ್ರವೂ ಬೆಲೆಯಿಲ್ಲ. ಆತನು ನಿರ್ಜೀವಾಂಧಕಾರಗಳ ಮೂರ್ತಿಯಾಗಿರುವನು. ಯಾವಾಗ ಒಡೆದು ಹೋದೀತೋ ಎಂಬ ನೇಮವಿಲ್ಲದ ನೀರಿನ ಗುಳ್ಳೆಯಂತೆ ಅವನ ಜನ್ಮವಿರುವದು. ಐಹಿಕ ಸುಖೋಪಭೋಗವೇ ನಾಸ್ತಿಕನ ಇಡಿಗಂಟು. ಪಾರಮಾರ್ಥಿಕ ಕ್ಷೇತ್ರಕ್ಕೆ ಆತನು ದೂರಸ್ಥನು. ಆತನ ಧರ್ಮವು ರೆಕ್ಕೆಯಿಲ್ಲದ ಪಕ್ಷಿಯಂತಿರುವದು. ಆ ಪಕ್ಷಿಯು ಭೂಮಿಯ ಮೇಲೆ ಸಂಚರಿಸುತ್ತಿರುವದೇನೋ ನಿಜ. ಆದರೆ ಆಕಾಶದಲ್ಲಿ ಹಾರಾಡಿ ಆನಂದ ಹೊಂದುವ ಪುಣ್ಯವು ಅದರ ಹಣೆಯಲ್ಲಿ ಬರೆದಿಲ್ಲ. ನಾಸ್ತಿಕನಿಗೆ ದೇವರ ಸುತ್ತು ಬಿದ್ದಿರುವ ಅಧ್ಯಾತ್ಮಿಕ ಪ್ರಕಾಶವೂ ಆತ್ಮೋದ್ಧಾರದ ಕಲ್ಪನೆಯೂ ಶೂನ್ಯವಾಗಿವೆ. ತಿನ್ನು, ಕುಡಿ, ಯಥೇಚ್ಛವಾಗಿ ನಡೆ ಎಂಬ ಎಪಿಕ್ಯುರಿಯನ್ ತತ್ವಗಳೇ ಆತನ ಪ್ರತಿನಿತ್ಯದ ಆಚಾರಗಳು.

ಇದಕ್ಕೆ ವಿಪರೀತವಾಗಿ ಆಸ್ತಿಕನ ಪರಿಸ್ಥಿತಿಯೇ ಬೇರೆ. ಆಸ್ತಿಕನು ದೇವರ ವಿಷಯವಾಗಿಯೂ ಮಾನವ ಪ್ರಾಣಿಗಳ ವಿಷಯವಾಗಿಯೂ ಪ್ರೇಮಭರಿತನಾಗಿರುವನು. ದೇವರು ತಂದೆಯೆಂದೂ ಮಾನವರು ಬಂಧುಗಳೆಂದೂ ಭಾವಿಸುವನು. ಎಲ್ಲ ಸದ್ಗುಣಶಾಲಿಗಳಾದ ಜನರೊಡನೆ ಕೂಡಿ ಪರಮಾತ್ಮನ ಸೇವಾ ಕಾರ್ಯವನ್ನು ಮುಂದುವರಿಸಲು ಆತನು ಹೆಣಗಾಡುವನು. ಆತನ ಗೌರವವೂ ಯೋಗ್ಯತೆಯೂ ಅಧಿಕವಾದವುಗಳು. ಅವನ ಚೇತನಾಶಕ್ತಿಯು ಅಪಾರವಾದುದು. ಜಗತ್ತಿನ ಉತ್ಕ್ರಾಂತಿಯಿಂದ ಪರವಸ್ತುವಿನ ಪ್ರಕಾಶವನ್ನು ಬೆಳಗುವಂತೆ ಮಾಡುವ ಧೀರನವನು. ಆತನು ದೇವರಿಗಿಂತ ಕಿಂಚಿತ್ ಕಡಿಮೆಯಾದರೂ ಸಾಕ್ಷಾತ್ ದೇವರೆಂದು ತಿಳಿದರೂ ವಿಶೇಷ ತಪ್ಪಾಗದು. ಆಸ್ತಿಕತ್ವವೇ ಪರಮಾತ್ಮನ ಸಂದೇಶವು. ನಾಸ್ತಿಕತ್ವವು ಪಿಶಾಚಿಯ ಸಂದೇಶವು. ಜಗತ್ತಿಗೆ ಏನಾದರೂ ಕಲ್ಯಾಣ ಮಾಡಿದವರೂ ಮಾಡುವವರೂ ವಿಶೇಷತಃ ಆಸ್ತಿಕರೇ ಹೆಚ್ಚಾಗಿದ್ದಾರೆ. ಭೌತಿಕ ಪ್ರಿಯರಾದ ನಾಸ್ತಿಕರು ಸಹ ಸಾಮಾಜಿಕ ಹಾಗೂ ಆದಿ ಭೌತಿಕ ದೃಷ್ಟಿಯಿಂದ ಲೋಕಕ್ಕೆ ಕೆಲಮಟ್ಟಿಗೆ ಉಪಕಾರಗಳನ್ನು ಮಾಡಿರಬಹುದು. ಆದರೆ ಮಾನವ ಜೀವನಕ್ಕೆ ಅತ್ಯವಶ್ಯವಾದ ಅಧ್ಯಾತ್ಮಿಕ ಜೀವಾ

ಳವನ್ನೇ ಅವರು ತೂರಿದುಬಿಟ್ಟಿರುವದರಿಂದ ಅವರು ಮಾಡಿರುವ ಸತ್ಕೃತ್ಯ ಕಾರ್ಯಗಳಿಗಾದರೂ ಅಷ್ಟೊಂದು ಪ್ರಶಸ್ತಿಯುಂಟಾಗಲಾರದು. ಮನುಷ್ಯನಿಗೆ ಅಸ್ತಿತ್ವವಿದ್ದಂತೆ ದೇವರಿಗೂ ಅಸ್ತಿತ್ವವುಂಟು. ದೇವರು ಇಲ್ಲೆನ್ನುವ ಮನುಷ್ಯನಿಗೆ ಸ್ವತಃ ನಾಸ್ತಿಕತ್ವವುಂಟಾಗಬೇಕಾದೀತು.

---

# ವಿಶ್ವಬಂಧುತ್ವ.

( ಲೇಖಕ:. ಓರ್ವ ಸಮಾಜಸೇವಕ. )



ಅಯಂ ನಿಜಃ ಪರೋ ವೇತಿ ಗಣನಾ ಲಘು ಚೇತಸಾಂ ।
ಉದಾರಚರಿತಾನಾಂ ತು ವಸುಧೈವ ಕುಟುಂಬಕಂ ॥

ಸಣ್ಣ ಮನಸ್ಸಿನವರು ಇದು ನನ್ನದು ಅದು ಅನ್ಯರದು ಎಂದು ಎಣಿಕೆ ಹಾಕುತ್ತಾರೆ. ದೊಡ್ಡ ಮನಸ್ಸಿನವರು ಇಡೀ ವಿಶ್ವವೇ ನಮ್ಮದೆಂಬ ಭಾವದಿಂದ ಆಚರಿಸುತ್ತಾರೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಉದಾರಿಗಳು. ಜಗತ್ತಿಗೆಲ್ಲ ಒಬ್ಬನೇ ದೇವರೆಂತಲೂ ನಾವೆಲ್ಲ ಆತನ ಮಕ್ಕಳೆಂತಲೂ ಪರಸ್ಪರ ಬಂಧುಗಳೆಂತಲೂ ಅನೇಕ ಧರ್ಮಗಳು ತಮ್ಮ ಉದಾರ ತತ್ವಗಳನ್ನು ಸಾರುತ್ತಿರುವವಷ್ಟೇ. ಆದರೆ ನಿಜವಾಗಿ ನೋಡಿದರೆ ಆ ಧರ್ಮಗಳು ಆಚರಣೆಯ ಪ್ರಶ್ನೆ ಬಂದಾಗ ನಾ ಹೆಚ್ಚು ನೀ ಹೆಚ್ಚು ಎಂದು ಹೊಡೆದಾಡುತ್ತಿರುತ್ತವೆ. ಜಗತ್ತಿನವರೆಲ್ಲರೂ ನಮ್ಮ ಬಂಧುಗಳೆಂಬ ಭಾವನೆಯು ಆಚಾರದಲ್ಲಿ ಅಳವಟ್ಟಿದ್ದರೆ ಜಗತ್ತು ಒಳ್ಳೇ ಸುಖಶಾಂತಿಯಿಂದ ಜೀವಿಸಬಹುದಾಗಿದ್ದಿತು. ಆದರೆ ಆ ಮಾತು ಕ್ರಿಯೆಯಲ್ಲಿರದೆ ಮಾತಿನಲ್ಲಿ ಮಾತ್ರ ಇರುವದರಿಂದ ಪರಸ್ಪರರಲ್ಲಿ ಯುದ್ಧ, ಹೋರಾಟ, ಸ್ಪರ್ಧೆ, ಅಶಾಂತಿಗಳು ಬೆಳೆದು ಜಗತ್ತಿನ ಜೀವನ ಸ್ವಾರಸ್ಯವೇ ಹೇಳಹೆಸರಿಲ್ಲದಂತಾಗಿದೆ.

ಜಗತ್ತಿನ ಎಲ್ಲ ಧರ್ಮಗಳನ್ನು ವಿಚಾರಿಸಿದರೂ ಅವುಗಳಲ್ಲಿ ವಿಶ್ವಬಂಧುತ್ವದ ಉದಾರ ತತ್ವವಿರುವದೇನೋ ನಿಜ. ಆದರೆ ವ್ಯವಹಾರದಲ್ಲಿ

ಆವು ತೋರಿಸುವ ಕ್ರಿಯೆಯೇ ಬೇರೆ. ನಮ್ಮ ಕುಲದೇವರಷ್ಟೇ ನಮಗೆ ಮಾತ್ರ ಧರ್ಮದ ಸತ್ಯಾಂಶವನ್ನು ಹೇಳಿಕೊಡುವರೇ ಹೊರತು ಪರ ಧರ್ಮಿಗಳಿಗೆ ಆ ಧಾರ್ಮಿಕ ರಹಸ್ಯವು ತಿಳಿಯಲಾರದೆಂದು ನಾವು ನಂಬಿದ್ದೇವೆ. ದಿವ್ಯವಾದ ಆಧ್ಯಾತ್ಮಿಕ ಜ್ಯೋತಿಯು ನಮ್ಮ ಋಷಿಗಳ ಲ್ಲಿಯೂ ಯೋಗಿಗಳಲ್ಲಿಯೂ ಧರ್ಮ ಗುರುಗಳಲ್ಲಿಯೂ ಮಾತ್ರ ಮನೆ ಮಾಡಿಕೊಂಡಿರುವದಲ್ಲದೆ ಉಳಿದ ಸಾಧು ಸಜ್ಜನರಲ್ಲಿ ಅದರ ಗಂಧವು ಕೂಡ ಇಲ್ಲನೆಂಬುದು ನಮ್ಮಗಳ ತಿಳುವಳಿಕೆ. ನಮ್ಮ ಧರ್ಮ ಗ್ರಂಥ ಗಳು ಮಾತ್ರ ನಿಜವಾದ ಆಧ್ಯಾತ್ಮಿಕ ಜ್ಞಾನವನ್ನು ಪ್ರತಿಪಾದಿಸತಕ್ಕವು ಗಳೆಂದೂ ಉಳಿದವರ ಧರ್ಮಗ್ರಂಥಗಳು ಅಸತ್ಯಗಳಿಂದ ತುಂಬಿಕೊಂ ಡಿರುವವೆಂದೂ ನಮ್ಮ ಗ್ರಹಿಕೆ. ನಮ್ಮ ಧರ್ಮ ಗುರುಗಳು ಹೇಳಿಕೊಟ್ಟ ಮಾರ್ಗವೇ ಮೋಕ್ಷಕ್ಕೆ ಸಾಧನವಾಗಿರುವದೆಂದೂ ಇತರ ಧರ್ಮ ಗುರು ಗಳು ಹೇಳುವದು ಅಧೋಗತಿಗೊಯ್ಯುವದೆಂದೂ ನಮ್ಮ ಕ್ಷುದ್ರ ಭಾವನೆಯು.

ಈ ತರಹದ ಸಕುಂಚಿತ ವಿಚಾರಗಳ ಮೂಲಕ ಪರಸ್ಪರ ಧರ್ಮ ದವರಲ್ಲಿ ವಿಶ್ವಬಂಧುತ್ವದ ಆಚಾರಗಳು ತಲೆದೋರುವದು ಕಷ್ಟಕರವಾ ಗಿದೆ. ನಿಜವಾಗಿ ನೋಡಿದರೆ ಪರಮಾತ್ಮನ ಕಣ್ಣಿನಲ್ಲಿ ಎಲ್ಲರೂ ಸರಿ ಸಮಾನರು. ಅವನಿಗೆ ಒಂದು ಧರ್ಮವು ಹೆಚ್ಚಲ್ಲ, ಇನ್ನೊಂದು ಧರ್ಮವು ಕಡಿಮೆಯಲ್ಲ. ಎಲ್ಲ ದೇಶ ಭಾಷೆಗಳ ಜನರಿಗೂ ಆತನು ತಂದೆಯಾ ಗಿದ್ದಾನೆ. ಎಲ್ಲರೂ ಆತನ ಮಕ್ಕಳು. ಆತನ ದಯಾಗುಣವೂ ಕ್ಷಮಾ ಗುಣವೂ ದೇಶಕಾಲಗಳಿಂದ ಮರ್ಯಾದಿತವಾಗಿರದೆ ವಿಶ್ವವ್ಯಾಪಕವಾ ಗಿವೆ. ಒಂದೇ ಒಂದು ಧರ್ಮಗ್ರಂಥವು ಆತನ ಎಲ್ಲ ಸತ್ಯಾಂಶವನ್ನು ಸಂಪೂರ್ಣವಾಗಿ ಹೊರಪಡಿಸಲಾರದು. ಋಷಿಗಳೂ ಗುರುಗಳೂ ಯೋಗಿ ಗಳೂ ಎಲ್ಲ ಸೀಮೆಗಳಲ್ಲಿಯೂ ಅವತರಿಸಿದ್ದಾರೆ. ತನ್ನದೇ ಸತ್ಯವೆಂದೂ ಉಳಿದವುಗಳು ಮಿಥ್ಯವೆಂದೂ ಹೇಳಿಕೊಳ್ಳಲಿಕ್ಕೆ ಯಾವ ಧರ್ಮಕ್ಕೂ ಅಧಿಕಾರವಿಲ್ಲ. ಆದುದರಿಂದ ಜನಗಳು ಕ್ಷುದ್ರವಾದ ಸಂಕುಚಿತ ವಿಚಾ ರಗಳನ್ನು ಬದಿಗಿಟ್ಟು ಉದಾರ ಹೃದಯವುಳ್ಳವರಾದರೆ ಧಾರ್ಮಿಕ ವಿಶ್ವ ಬಂಧುತ್ವವೂ ಪ್ರೇಮವೂ ಪರಸ್ಪರರಲ್ಲಿ ಬೆಳೆದು ಅವರು ಸುಖಶಾಂತಿಯಿಂದ ಜೀವಿಸಲು ಅನುವಾಗುವದು.

ಈಗ ಜಗತ್ತಿನಲ್ಲಿ ಕಂಡು ಬರುವ ಯಾವದೇ ಧರ್ಮವಾಗಲಿ ಉಳಿದ ಧರ್ಮದವರನ್ನು ತನ್ನ ಬಂಧುಗಳಂತೆ ಕಾಣುತ್ತಿರುವದಿಲ್ಲ. ಕ್ರಿಸ್ತಿಯನ್ನರು ಉಳಿದ ಹಿಂದೂ, ಮುಸಲ್ಮಾನ, ಬೌದ್ಧ ಧರ್ಮದವರನ್ನು ತಮ್ಮ ಬಂಧುಗಳೆಂದು ಭಾವಿಸುವದಿಲ್ಲ. ಹಿಂದೂ ಧರ್ಮದವರು ಮುಸಲ್ಮಾನರನ್ನು ತಮ್ಮ ಬಂಧುಗಳೆಂದು ತಿಳಿಯುವದಿಲ್ಲ. ಅದರಂತೆ ಮುಸಲ್ಮಾನರಾದರೂ ಅನ್ಯಮತೀಯರನ್ನು ತಮ್ಮ ಬಂಧು ವರ್ಗಕ್ಕೆ ಸೇರಿಸುವದಿಲ್ಲ. ಒಂದೇ ಧರ್ಮವನ್ನವಲಂಬಿಸುವ ಎರಡು ರಾಷ್ಟ್ರಗಳು ಬಂಧುಭಾವವನ್ನು ತ್ಯಜಿಸಿ ವೈರಭಾವವನ್ನು ತಾಳಿ ಪರಸ್ಪರ ಹೋರಾಡುವವು. ಹಿಂದೂ ಧರ್ಮದಲ್ಲಿಯೂ ಕೂಡ ಅಸ್ಪೃಶ್ಯರನ್ನು ತಮ್ಮ ಬಂಧುಗಳಂತೆ ಕಾಣಲು ಜನರು ಹೆದರುತ್ತಾರೆ. ಹೀಗೆ ಎಷ್ಟೋ ಮತಮತಾಂತರಗಳಲ್ಲಿ ಸಹ ಬಂಧುಭಾವವಡಗಿ ವೈರಭಾವವೇ ಹೆಚ್ಚಾಗಿ ಕಂಡು ಬರುತ್ತಿದೆ. ಎಷ್ಟೋ ಧರ್ಮಗಳು ಜಗತ್ತಿನಲ್ಲಿರುವ ಉಳಿದ ಧರ್ಮಗಳು ಹಾಳಾಗಿ ತನ್ನದೊಂದೇ ಧರ್ಮವು ಸ್ಥಿರವಾಗಿ ಉಳಿಯಬೇಕೆಂದು ಹರಿಕೆಯನ್ನು ಕೋರುತ್ತಲಿವೆ.

ಯಾವ ಧರ್ಮವೂ ನಿರ್ದುಷ್ಟವಾದುದಲ್ಲ. ಅದರಲ್ಲಿ ಒಂದಿಲ್ಲೊಂದು ಕುಂದುಕೊರತೆಯು ಇದ್ದೇ ಇರುತ್ತದೆ. ಸಾವಿರಾರು ವರ್ಷಗಳಿಂದ ಜನತೆಯ ಸಂಸ್ಕೃತಿ ಸುಧಾರಣೆಗಳನ್ನು ಬೆಳೆಯಿಸಿದ ಧರ್ಮದಲ್ಲಿಯೂ ಕೂಡ ಒಂದಿಲ್ಲೊಂದು ತಪ್ಪು ಸಿಕ್ಕೇ ಸಿಗುವದು. ಈಗ ಸದ್ಯಕ್ಕೆ ನಾವು ಅನ್ಯ ಧರ್ಮಗಳ ನಿಂದೆ ಮಾಡುವದು ಅನುಚಿತವಾದುದು. ಅವುಗಳೊಳಗಿನ ಉತ್ತಮ ಹಾಗೂ ಉದಾತ್ತವಾದ ತತ್ವಗಳನ್ನು ಸಹೃದಯರಾಗಿ ಪರಿಶೀಲಿಸಲಿಕ್ಕೆ ನಾವು ಕಲಿಯಬೇಕು. ಸಹಾನುಭೂತಿಯಿಂದ ಅವುಗಳನ್ನು ನಾವು ಗ್ರಹಿಸಬೇಕು. ಖಡ್ಗವನ್ನು ಹಿರಿದಾಗಲಿ, ವೈರವನ್ನು ಬೆಳೆಯಿಸಿಯಾಗಲಿ, ಬುದ್ಧಿ ಬಲದಿಂದ ಅನ್ಯಮತಗಳನ್ನು ಖಂಡಿಸಿಯಾಗಲಿ ನಮ್ಮ ಮತವನ್ನು ಪ್ರಸಾರಗೊಳಿಸುವದು ನಾಗರಿಕತನದ ನಿಯಮಕ್ಕೆ ವಿರೋಧವಾಗಿದೆ. ಆದರೆ ನಮ್ಮ ಧರ್ಮ ತತ್ವಗಳ ಸತ್ಯ, ಸೌಂದರ್ಯ, ಪವಿತ್ರತೆ, ಪ್ರೇಮ, ಗ್ರಂಥಗಳ ಪ್ರಶಸ್ತಿ ಇವುಗಳನ್ನು ಪ್ರಚಾರಗೊಳಿಸುವದು ಸ್ತುತ್ಯವಾದ ಉಪಾಯವು. ಈ ರೀತಿಯಾಗಿ ಮತ ಪ್ರಸಾರ ಮಾಡಿದರೆ ಅದು ಜನರ ಮನಸ್ಸಿನಲ್ಲಿ ನಟ್ಟು, ಯುದ್ಧ

ಹೋರಾಟಗಳಿಗೆ ಅವಕಾಶವಿಲ್ಲದಂತಾಗುವದು. ಪರಸ್ಪರರಲ್ಲಿ ದ್ವೇಷಾಸೂಯಗಳೂ ಧರ್ಮಲಂಡತೆಯೂ ನಿರ್ಮೂಲವಾಗುವವು.

ಈಗ ಹಿಂದೂ ಜನರಲ್ಲಿ ಸಂಘಟನೆಯನ್ನು ಮಾಡಬೇಕೆಂದು ನಮ್ಮ ಮುಂದಾಳುಗಳು ಪ್ರಯತ್ನಿಸುತ್ತಿರುವರಷ್ಟೇ. ಆ ಸಂಘಟನೆಗೆ ಉದಾರವಾದ ವಿಶ್ವ ಬಂಧುತ್ವದ ವಿಚಾರಗಳು ಅತ್ಯಾವಶ್ಯಕವಾಗಿ ಬೇಕು. ಪರಸ್ಪರ ಮತಪಂಥಗಳಲ್ಲಿ ಸಹಾನುಭೂತಿಯನ್ನೂ ಪ್ರೇಮವನ್ನೂ ವ್ಯಕ್ತಗೊಳಿಸಿದರೆ ಸಾಕು. ಸಂಘಟನೆಗೆ ಒಳ್ಳೇ ಬೆಂಬಲವು ದೊರೆತಂತಾಗುವದು. ನಮ್ಮನಮ್ಮೊಳಗೆ ನಾವು ಬಂಧುತ್ವವನ್ನು ಪ್ರಸ್ಥಾಪಿಸಲು ಅಸಮರ್ಥರಾದರೆ ವಿಶ್ವಬಂಧುತ್ವವನ್ನು ನೆಲೆಗೊಳಿಸುವದು ಶಕ್ಯವಾಗುವದೇ ?

---

ಶಿರದೊಳಗಾನುತ ಶಿಂಧುವಿ ।
ನೊರೆಯಲಿ ಇರಿಸಿದರು ಬೇಗ ಹರಿ ಅಜರಾಗ ॥ ೫೨ ॥

ತಡವೇತಕೆ ಕೇಳಿರೆಲ್ಲರು ।
ಕಡೆಯಲ್ಕನು ವಾಗಿರೆಂದು ಗಡಬಡಿಸುತ್ತಂ ॥
ಜಡಧಿಯೊಳಿರಿಸಲು ಮೆಲ್ಲನೆ ।
ಹೊಡೆಯುರಿಯುತ ಹೊಕ್ಕುದಾಗ ಕಡಲನು ಬೇಗದಿ ॥ ೫೩ ॥

ಇನ್ನೇನ ಗೈವೆವೆನುತೆ ।
ಪನ್ನಗಧರನನ್ನು ಕೇಳೆ ಫಣಿಶಿರಮಣಿಯಾಂ ।
ತಿನ್ನಿದೆಕೋ ಎನಲು ಶೀಘ್ರದಿ ।
ಬಿನ್ನಾಣದೊಳೊದಗಿ ಇತ್ತ ಭುಜಗನಸುತ್ತ ॥ ೫೪ ॥

ಮುತ್ತಿ ಒಕ್ಕಿಡಿಯೆ ಶಿರವನು ।
ಸುತ್ತುತಲಿರೆ ಬಾಲ ಭಯವೇನ್ಹುತ್ತದೆ ಮನದೋ ॥
ಳ್ತುತ್ತರಗೊಳ್ಳದೆ ತಂದರು ।
ಸುತ್ತಿದರದ ಸುರಗಿಯಂತೆ ಇತ್ತೆರನಿಂತೆ ॥ ೫೫ ॥

ಗಿರಿಗಾಗ ಹರಿಯು ಬಿಗಿದಿ ।
ನ್ನರುಪಿರಿ ಪಿರಿದಾದ ಕಜ್ಜಂದಿರವೆಂದೆನಲಾ ॥
ಶಿರವಿಡಿಯಲು ಸುರರಲ್ಲದೆ ।
ಸರಿಯಾರಿಹರೆಂದ ನಗುತಾ ಹರಿ ಮಾಯೆಲಿ ತಾ ॥ ೫೬ ॥

ನುಡಿಗೇಳಿ ಕಿಡಿಯನುಗುಳುತ ।
ಫಡಫಡ ಪಡಿಯಾರು ನಮಗೆ ಬಿಡು ಮುಖವೆನ್ನುತ ॥
ಜಡ ಭಾವದಿಂದಾ ದೈತ್ಯರು ।
ಸಡಬಡ ಗುಟ್ಟುತ ತಲೆಯ ಪಿಡಿದರೆ ಕಡೆಯ ॥ ೫೭ ॥

ಬಲು ಭಾರ ಬಾಲವೆನ್ನುತ ।
ಹಲು ಗಿರಿಯುತಲಾಗ ಸತ್ವಗ್ಗಳಿಯುವ ತಾಳುತ ॥
ಮಲ ಹರನ ಮನದಿ ಧ್ಯಾನಿಸುತ ।
ತೆಳೆದರು ಸುಮನಸರು ನಿಂತು, ಬಲುಗೈ ಯಾಂತು ॥ ೫೮ ॥

ವನಧಿಯೊಳು ಜನಿಸಿತಾಗಳು ।
ಘನತರ ಗೌರವದ ವಸ್ತು ಸ್ವರ್ಗ ಪ್ರಶಸ್ತು ॥

ಎನಲೆಲ್ಲ ಯಾರಿಗೆಂದೆನೆ ।
ತನಗಿದು ನನಗೆನುತ ಕುದುಕೆ ತೆಗೆದರು ಹುಡುಕಿ ॥ ೫೯ ॥

ವನಜಾಂಬಕನೊಲಿದು ಸರ್ವವ ।
ನನುವಿಷರಿಗೆ ಅಧಿಕಗೊಳಿಸಲ್ ಕನಲುತ ದುರ್ಜಯ ॥
ರುರವಣಿಸಲಾಗ ವಿನಯುದಿ ।
ಸನುಮತಿಸಿದ ಶೌರಿ ಸಿಮಗೆ ಸುಧೆಯಿದೆ ಒಳಗೆ ॥ ೬೦ ॥

ಎಲೆಲೆ ಏಳೇಳಿರೆನ್ನುತ ।
ಬಲು ಚಳಕದಿ ಬಳಸಿ ಹಿಡಿದು ಬೊಬ್ಬೆಯನಿಕ್ಕುತ ॥
ಇಳೆಯುದುರಲೆಳೆದು ಕಡೆದರು ।
ತಳಪಳನುರೆ ಕುದಿದುದಬ್ಧಿ ತರುಣಿ ದಶಬ್ಧಿ ॥ ೬೧ ॥

ಬರಲೆನುತ ಬೆಳ್ಳಗಿರದಲೆ ।
ಕರಗುತ ಕಪ್ಪಾದ ತೆರದಲಿ ಕಡಲೊಪ್ಪಿರೆದು ॥
ರ್ಧರದ ಭಯಂಕರ ದುರಗನು ।
ಸೊರಗುತ ಸೋಜಿಗದ ವಿಷವ ಕಾರಲ್‌ಕಾವ ॥ ೬೨ ॥

ಸುರಗಿರಿಯೊ ಸತ್ಯ ಲೋಕವೋ ।
ತೆರಳಿರೋ ವೈಕುಂಠಕ್ಕೆಂದು ಹರಿದರು ಗರಳವು ॥
ಭರದೊಳು ತಾಗುತ ಸಕಲರ ।
ಉರುಳಿಸುತಲೆ ಉರಿದು ಬರುತೆ ಜನವನು ಸುಡುತೆ ॥ ೬೩ ॥

ಬರಬರಲು ಮುಂದೆ ಬಾಯ್ಬಿಡು ।
ತರಿದರು ತಮಗೆ ಅಯ್ಯೋ ಪೊರೆವರಿಲ್ಲ ॥
ಧರೆಗಗನ ಧಗಧಗಿಸುತಿದೆ ।
ಹರಿಯುಜರೇನಾದರೆಂದು ಹೊರಳಿದರಂದು ॥ ೬೪ ॥

ಗದಗದಿಸಿ ಗರುಡ ಯಾನನು ।
ಇದು ಏನದ್ಭುತವೊ ಎನುತ ಹೆದರುತ ಮನದೊಳು ॥
ಹದನೇನು ಅಧಿಕ ಅಭವನ ।
ಪದಯುಗವ ಸ್ಮರಿಸಿ ನಿಂದು ಪೊರೆ ನೀನೆಂದು ॥ ೬೫ ॥

ಅನುಪಮನೆ ಅಖಿಳ ಜಗಕಿದು ।
ಕೊನೆಗಾಲದ ಕಡಲಿನಂತೆ ಕಡೆವೊದಲಿಲ್ಲದ ॥

ಘೆನ ವಿಷದಿ ತನುವು ಕಂದಿತು ।
ನೆನೆದೆವು ಈಗ ಭಯವು ಇನ್ನಳಿಯದು ದೇವ ॥ ೬೬ ॥

ಪದ್ಮಜನು ಪದ್ಮನಾಭನು ।
ಸಿರ್ಧರದಲಿ ನುತಿಸಲಿಂತು ಅದ್ರಿಜಾಧವ ತಾ ॥
ಒದಿ್ದ ಆ ಓಹೋ ನಿಲಿ ನಿಲಿ ।
ಗೆದ್ದಿರಿ ಗೆಲವಾಯಿತಿನ್ನು ನನ್ನನೇ ಮುನ್ನು ॥ ೬೭ ॥

ಹೆದರಿಸಿತು ಹೆಚ್ಚುಗೆಯಲಿದು ।
ಗದಗದಿಸುತ ಹೋದೆನಿದರ ಹದನದು ಬೇ ॥
ರೆಂದದುಭುತದಿ ದಹಿಪ ವಿಷವನು ।
ಸುಧೆಯಂದದಿ ಸೇವಿಸಿದನು ಪದರದೆ ತಾನು ॥ ೬೮ ॥

ಎಲೆಲೆ ಬಲು ಮೂಢರಾದೆವು ।
ಮಲಹರ ಸಲಿಸಿದನು ತಾನೆ ಗೆಲುವೆಂತಹುದು ॥
ಬಲು ಲೋಕವೊಳಗೆ ಬೇವುದೋ ।
ಅಳಿವನೋ ಹರನೆನುತ ಅಲ್ಲಿ ಹಲುಬಿದರೆಲ್ಲ ॥ ೬೯ ॥

ಶಿವನಾಣೆ ಶಿಂಧು ವಿಷವನು ।
ಸವಿಯದಿರೆಂದೆನುತ ಕರವ ಕವಳಿಕೆಯಾಂತಿ ॥
ಧವನಳಿವ ಧರ್ಮವೆಯೆನು ।
ತವಚಿದಳಗಜಾತೆಗಳವ ಬದುಕುವನಾವ ॥ ೭೦ ॥

ಕಲಹಂಸ ಗಮನೆ ಕೇಳಿದು ।
ಫಲಿತವು ತನಗಹುದುಳಯಲ್ಕಿಳೆಯನೆ ನಾನೀ ॥
ಗಳದಲೆ ನಿಲಿಸುವೆ ಗರಳವ ।
ಕಳವಳಗೊಳಬೇಡವೆಂದ ಹರನೊಲವಿಂದ ॥ ೭೧ ॥

ಇದು ಭೂಷಣಾಯ್ತು ವಿಷ್ಣಾದಿ ।
ಗಳುರೆ ನುತಿಸುತ್ತ ಇದರ ಹದನೇನೆನಲು ॥
ಮುದವಾಂತು ಮುನ್ನಲೆಲ್ಲವ ।
ಸದು ಹೃದಯನು ಪೇಳ್ದನಂದು ಸತ್ವವಿದೆಂದು ॥ ೭೨ ॥

ಎನಲೆಲ್ಲ ಯಾರಿಗೆಂದೆನೆ ।
ತನಗಿದು ನನಗೆನುತ ಕುದುಕೆ ತೆಗೆದರು ಹುಡುಕಿ ॥ ೫೯ ॥

ವನಜಾಂಬಕನೊಲಿದು ಸರ್ವವ ।
ನನುವಿುಷರಿಗೆ ಅಧಿಕಗೊಳಿಸಲ್ ಕನಲುತ ದುರ್ಜಯ ॥
ರುರವಣಿಸಲಾಗ ವಿನಯದಿ ।
ಸನುಮತಿಸಿದ ಶೌರಿ ನಿಮಗೆ ಸುಧೆಯಿದೆ ಒಳಗೆ ॥ ೬೦ ॥

ಎಲೆಲೆ ಏಳೇಳಿರೆನ್ನುತ ।
ಬಲು ಚಳಕದಿ ಬಳಸಿ ಹಿಡಿದು ಬೊಬ್ಬೆಯನಿಕ್ಕುತ ॥
ಇಳೆಯುದುರಲೆಳೆದು ಕಡೆದರು ।
ತಳಪಳನುರೆ ಕುದಿದುದಬ್ಧಿ ತರುಣಿ ದಶಬ್ಧಿ ॥ ೬೧ ॥

ಬರಲೆನುತ ಬೆಳ್ಳಗಿರದಲೆ ।
ಕರಗುತ ಕಪ್ಪಾದ ತೆರದಲಿ ಕಡಲೊಪ್ಪಿರೆದು ॥
ರ್ಧರದ ಭಯಂಕರ ದುರಗನು ।
ಸೊರಗುತ ಸೋಜಿಗದ ವಿಷವ ಕಾರಲ್ಕಾವ ॥ ೬೨ ॥

ಸುರಗಿರಿಯೊ ಸತ್ಯ ಲೋಕವೋ ।
ತೆರಳಿರೋ ವೈಕುಂಠಕ್ಕೆಂದು ಹರಿದರು ಗರಳವು ॥
ಭರದೊಳು ತಾಗುತ ಸಕಲರ ।
ಉರುಳಿಸುತಲಿ ಉರಿದು ಬರುತೆ ಜನವನು ಸುಡುತೆ ॥ ೬೩ ॥

ಬರಬರಲು ಮುಂದೆ ಬಾಯ್ಬಿಡು ।
ತರಿದರು ತಮಗೆ ಅಯ್ಯೋ ಪೊರೆವರಿಲ್ಲ ॥
ಧರೆಗಗನ ಧಗಧಗಿಸುತಿದೆ ।
ಹರಿಯಜರೇನಾದರೆಂದು ಹೊರಳಿದರಂದು ॥ ೬೪ ॥

ಗದಗದಿಸಿ ಗರುಡ ಯಾನನು ।
ಇದು ಏನದ್ಭುತವೊ ಎನುತ ಹೆದರುತ ಮನದೊಳು ॥
ಹದನೇನು ಅಧಿಕ ಅಭವನ ।
ಪದಯುಗವ ಸ್ಮರಿಸಿ ನಿಂದು ಪೊರೆ ನೀನೆಂದು ॥ ೬೫ ॥

ಅನುಪಮನೆ ಅಖಿಳ ಜಗಕಿದು ।
ಕೊನೆಗಾಲದ ಕಡಲಿನಂತೆ ಕಡೆವೊದಲಿಲ್ಲದ ॥

ಘನ ವಿಷದಿ ತನುವು ಕುಂದಿತು ।
ನೆನೆದೆವು ಈಗ ಭಯವು ಇನ್ನುಳಿಯದು ದೇವ ॥ ೬೬ ॥

ಪದ್ಮಜನು ಪದ್ಮನಾಭನು ।
ಸಿರ್ಧರದಲಿ ನುತಿಸಲಿಂತು ಅದ್ರಿಜಾಧವ ತಾ ॥
ಒದ್ದು ತಾ ಓಹೋ ನಿಲಿ ನಿಲಿ ।
ಗೆದ್ದಿರಿ ಗೆಲುವಾಯಿತಿನ್ನು ನನ್ನನೇ ಮುನ್ನು ॥ ೬೭ ॥

ಹೆದರಿಸಿತು ಹೆಚ್ಚುಗೆಯುಲಿದು ।
ಗದಗದಿಸುತ ಹೋದೆನಿದರ ಹದನದು ಬೇ ॥
ರೆಂದದುಭುತದಿ ದಹಿಪ ವಿಷವನು ।
ಸುಧೆಯಂದದಿ ಸೇವಿಸಿದನು ಪದರದೆ ತಾನು ॥ ೬೮ ॥

ಎಲೆಲೆ ಬಲು ಮೂಢರಾದೆವು ।
ವಾಲಹರ ಸಲಿಸಿದನು ತಾನೆ ಗೆಲುವೆಂತಹುದು ॥
ಬಲು ಲೋಕವೊಳಗೆ ಬೇವುದೋ ।
ಅಳಿವನೋ ಹರನೆನುತ ಅಲ್ಲಿ ಹಲುಬಿದರೆಲ್ಲ ॥ ೬೯ ॥

ಶಿವನಾಣೆ ಶಿಂಧು ವಿಷವನು ।
ಸವಿಯದಿರೆಂದೆನುತ ಕರವ ಕವಳಿಕೆಯಾಂತಿ ॥
ಧವನಳಿವ ಧರ್ಮವೆಯೆನು ।
ತವಚಿದಳಗಜಾತೆಗಳವ ಬದುಕುವನಾವ ॥ ೭೦ ॥

ಕಲಹಂಸ ಗಮನೆ ಕೇಳಿದು ।
ಫಲಿತವು ತನಗಹುದುಳಿಯುಲ್ಕಿಳಿಯನೆ ನಾನೀ ॥
ಗಳದಲೆ ನಿಲಿಸುವೆ ಗರಳವ ।
ಕಳವಳಗೊಳಬೇಡವೆಂದ ಹರನೊಲವಿಂದ ॥ ೭೧ ॥

ಇದು ಭೂಷಣಾಯ್ತು ವಿಷ್ಣ್ವಾದಿ ।
ಗಳುರೆ ನುತಿಸುತ್ತ ಇದರ ಹದನೇನೆನಲು ॥
ಮುದವಾಂತು ಮುನ್ನಲೆಲ್ಲವ ।
ಸದು ಹೃದಯನು ಪೇಳ್ದನಂದು ಸತ್ವವಿದೆಂದು ॥ ೭೨ ॥

ಅಂಬುಧಿ ಮಥನದಿ ಶಂಭುವು ।
ಜಂಬೂಫಲ ವರ್ಣವನಾಂತನೆಂಬುದು ಜಗ ನಾ ॥
ನೆಂಬೆನೆ ಎನಲು ಅಂಬಿಕೆ ।
ಗಂಬುಜ ಸಹ ನೇತ್ರ ನುಡಿದ ಶಿವೆ ನೀ ಪಡೆದ ॥ ೭೩ ॥

ವರ ಕುವರ ಕರಿ ಮುಖಾದನು ।
ತರುಣಿಯೆ ನಿನ್ನಂಗ ತಮದ ಪರಿ ಕರಿದಿರಲು ॥
ಜರಿಯದೆ ಜಗದೊಳಗೆಂದಿದ ।
ಮರೆಸಲು ವಿಷಮಹಿಮೆಯಾಂತೆ ಗಳದೊಳು ಕಾಂತೆ ॥ ೭೪ ॥

ಈಶನಸುತ ಇಂತಿರುತಿರೆ ।
ಲೇಸನು ಲೋಕದರಿಗಿಂತು ಸೂಸುವೆನೆಂದೆ ॥
ದೂಷಿಸದಿರುವರೆ ಸಕಲರು ।
ಆಶೆಲಿ ಶ್ರೀವರ್ಣವಾಂತನೆಂಬರು ಕಾಂತ ॥ ೭೫ ॥

ಅಹುದಹುದು ಆಶೆ ಹೆಣ್ಣಿನ ।
ಮಹಿಮೆಯೆ ಮದಮುಖದಿ ನಿಂತು ತೋರುವ ಭ್ರಾಂತು ॥
ಸಹಜ ಸರ್ವಜ್ಞನೊಳಗಿದು ।
ಇಹುದೆಂಬುದೆ ನಿನ್ನ ಮೋಸ ಕಡೆಗಾಭಾಸ ॥ ೭೬ ॥

ಆಸೆ ಮೋಸೇನು ಇರದಿರೆ ।
ದೋಷದ ಮಾನಿನಿಯು ಧರ್ಮಸತಿಯುಳ ವಂಚಿಸಿ ॥
ನೀ ಶಿರದೊಳಿಡಲು ನಿಜಕಿದು ।
ಲೇಸೆಂಬರೆ ಲಲನೆ ಗಂಗೆ ಬಿಟ್ಟೆಯೊ ಹ್ಯಾಂಗೆ ॥ ೭೭ ॥

ಬಿಡಲಹುದೆ ಮಡದಿ ಜಾಹ್ನವಿ ।
ಒಡೆಯನ ವಾಮಾಂಗ ವಿಡಿದು ತಡೆಯದೆ ಫಲಪದವ ॥
ಕೊಡುತಿರುವಳೆಂದು ಪೊಡವಿಲಿ ।
ನುಡಿಯಲು ಬಡಿವಾರವಿನಿತೆ ಪಿತಗತಿ ಮರೆತೆ ॥ ೭೮ ॥

ಗತಿಯೇನು ಗುರುವರಲ್ಲವೆ ।
ಕೃತಹದಿ ಕಬ್ಬಿಗರ ಕುಲದಾಸತಿ ನಿಮಗಹುದೆ ॥

ಮತಿಹೀನರಾವು ಮನಸಿಲಿ ।
ಖತಿಗೊಳದೆ ಕರುಣಿಸೀಗ ನಿಜದನುರಾಗ ॥ ೭೯ ॥

ನಿಜವೆನಲುಗಜರಲೊಲ್ಲೆವು ।
ಭಜನೆಯು ಬಹುಬಳಗನವುಗೆ ಭಕ್ತಿಯೆಸಲುಗೆ ॥
ಅಜನೇನು ಕುಜನರೇಸಿದು ।
ತ್ರಿಜಗವ ರಕ್ಷಿಪುದೇ ಧರ್ಮ ತಿಳಿಯಿದುಮರ್ಮ ॥ ೮೦ ॥

ವಾದಿಸುತ ಹೊಲಬು ತಪ್ಪುವ ।
ಭೇದದ ಭಯಕೇಕೆ ನನಗೆ ನೀ ದಯಾನಿಧಿಸಂ ॥
ವಾದವ ಬಿಸುಟಿನು ವರ್ಣದ ।
ಆದಿಯನು ಕೇಳುವೆನು ದೇವ ತಿಳಿಸಿರಿ ಭಾವ ॥ ೮೧ ॥

ಕೇಳು ಏನದನು ಕಾಮಿನಿ ।
ಪೇಳುವೆ ತಳುವದಲ್ಲಿ ಅದರ ಮೂಲವನೆಲ್ಲವ ॥
ವೇಳೆಯಾಕಿನ್ನು ವಂದಕ ।
ರೋಲೈಸಲು ಒದಗುತಿಹರು ಪ್ರಮಥಾಗ್ರಜರು ॥ ೮೨ ॥

ವರದೀಪ್ಯಮಾನವಾಂತಿದು ।
ಕರಿದಾಗಲ್ ಕಾರಣವೇಂ ಎನೆ ಪೇಳ್ದ ಭವ ॥
ಕರಕಷ್ಟದಂಷ್ಟ್ರವದನದಿ ।
ಸುರಿಯುಲ್ಕಿಂತಾಯ್ತುತ್ತರಳೆ ಸರಿಸದೆ ಹೆರಳೆ ॥ ೮೩ ॥

ಮರಿಯಂತೆಹಾರಿ ಮತ್ತರ ।
ನರಿರ್ಝಾಡಿಸಿ ನಮ್ಮಕೊರಳ ಕರಿಯೆಂತಾಯಿತು ॥
ಪರಮಾರ್ಥ ಸಿದ್ಧಿ ತಾಳಿದ ।
ಪರಿಯಿದು ಬಸವಪ್ರಸಾದ ತಿಳಿಯುಲು ಭೇದ ॥ ೮೪ ॥

ಇರದಿಲ್ಲಿ ಇರ್ದುದಾದೊಡೆ ।
ಉರಗನ ವಿಷಸೋಂಕಿದಂತೆ ಉರುಳುವರೆಂದೆ ॥
ಅರಿನಿನ್ನ ಆತ್ಮದಲ್ಲಿಯೆ ।
ಪರಿಕಿಪಬಗೆ ಬೇರೆ ಮುಖ್ಯಕರಿದಾಧಿಕ್ಯ ॥ ೮೫ ॥

ನೀಲಕಂಠನಿತು ಪೇಳಲು ।
ಆಲಿಸಿ ಅಧಿಕೋತ್ಸವದೊಳು ಅನಿಮಿಷರಾಗ ॥

ಮೂಲಬಸವಾಕ್ಷರೆಂತೆನೆ ;
ಭಾಳಾಕ್ಷನುಸುರ್ದಭಜಿಸಿ ಬಲು ಸುಖವೆನಿಸಿ ॥ ೮೬ ॥

ಏನೆಂಬೆನಿದರ ಎಳೆಯು ।
ನಾನುಸುರಲಳವೆ ನಿತ್ಯ ಅದ್ವೈತಸ್ವರೂಪವ ॥
ಮೌನಿಗಳ ಮಾನಸಾಗ್ರದಿ ।
ಭಾನುವಿನೋಳ್ಬೆಳಗುತಿಹುದ ಬಣ್ಣಿಸಲರಿದಾ ॥ ೮೭ ॥

ತಾನಧಿಕನಹುದು ತನಗೆಯು ।
ಮಾನಸಮಾರ್ತಾಂಡನಂತೆ ತಾನೆ ನಿಂತೆ ॥
ನ್ಯೂನೇನಿಲ್ಲದ ನಿಜವಿದು ।
ಆನನದಂತಿಹುದು ಕಳೆಗೆ ಕಾಂತಿಯು ಬೆಳಗೆ ॥ ೮೮ ॥

"ಬ" ಎನೆ ಸತ್ವದ ಬತ್ತಿಯು ।
"ಸ" ಎನೆ ತೈಲಿದುವೆ ಚಿತ್ತಸಹಿತಾರ್ಥದೊಳು ॥
"ವ" ಎನೆ ಹೊಳೆವ ಜ್ಯೋತಿಯಿದ ।
ರಾಯುತದೊಳು ರಮಿಸೆ ಮುಕ್ತಿಪಣತೆಯೆ ಭಕ್ತಿ ॥ ೮೯ ॥

ಬಲುಕಂಟಕಗಳಿವು ಭಾಗ್ಯದ ।
ಫಲವಾಂತಿದು ಭಕ್ತಿಯಿಂದ ಒಲಿಸಿದರಾದೊಡೆ ॥
ಪೊಳಲೊಳಗೆ ಪೂಜ್ಯರಹರು ।
ಗೆಲುವರು ಭವಬಾಧೆಯಿಂದ ಗೆದ್ದರೆ ಚಂದ ॥ ೯೦ ॥

ಇದು ಮೂಲ ಪ್ರಣವದೊಂದಿಲಿ ।
ಉದಿಸಿತು ಆಉಮಾಕ್ಷರೊಂದೆ ಅಧಿಕವ ತಾಳೆ ॥
ಅದು ತನ್ನ ಸ್ವಸ್ವರೂಪವ ।
ಬೆದಕಲ್ಕಿದು ಭಸಿತಮಯದಿ ಬಸವಾಯುತದಿ ॥ ೯೧ ॥

ಉದಯಿಸಿತು ಊರ್ಧ್ವರೇತ ।
ಸ್ಸಿದು ಕಪ್ಪಾಂತಿರುವುದಿದರ ಪಮಳದ ನಾಮಾ ॥
ಭ್ಯುದಯದಿ ಪಠಿಸಲದೆಂತೆನೆ ।
ಸದರವೆ ಸದೆಬಡಿಕರಿಂಗೆ ಸಹಜವೊ ಹ್ಯಾಗೆ ॥ ೯೨ ॥

ಅರಿದಹುದು ಅವುವು ಆದೊಡೆ ।
ಒರೆವೆನು ನಾನಲ್ಲದಿದನು ಅರಿವಿನ ಮರೆಯ ||
ಸುರರರಿಯದಿರ್ದ ಸುಂದರ ।
ಕರಿಬಸವ ಎನಲು ಬೋಧೆ ದುರಿತಕೆ ವೇಧೆ ॥ ೯೩ ॥

ಸುರರಾಗ ಹರುಷದಾಳುತ ।
ಕರಿಬಸವನ ಸ್ತುತಿಸಲೊಡನೆ ಪರಿಹರವಾದುದು ॥
ಕರಕಷ್ಟಕರ್ಮದಾದಿ, ದಿವಿ ।
ಜರುಘಿಸೆ ಜಲಜಾಪ್ತನಂತೆ ಶುಭಕರವಾಂತೆ ॥ ೯೪ ॥

ಜಯ ಜಯತು ಎನುತೆಲ್ಲರು ।
ಭಯಪೂರಿತ ಭಕ್ತಿಯಿಂದ ಭಜಿಸುತ್ತಿರಲಾ ॥
ದಯಭರಿತನಾಗಿ ಶಂಕರ ।
ಸ್ವಯಕೈಲಾಸಕೆಂದು ತೆರಳಿದನಂದು ॥ ೯೫ ॥

ಭಜಿಸುವರ ಭಕ್ತಿಭಾವದ ।
ಗಜಬಿಜಿ ಗೌಸಣಿಗೆ ಹರಿಯಲ್ ತ್ರಿಜಗದ್ದೈವವು ॥
ನಿಜರೂಪವ ತಾಳಿ ಬಂದಿರೆ ।
ಮಝಭಾಪೆನೆ ಮಲ್ಲಪುಂದಿ ಪೊಗಳಿದ ಮುದದಿ ॥ ೯೬ ॥

ಮೊದಲಾದನು ಮುರುಳಾರ್ಯರ ।
ಸದನದಿ ಸಪಿಂಡವೆಂದು ತದನಂತರದೊಳು ॥
ಅದನುಳಿದು ಅಧಿಕವೆನ್ನುತ ।
ಇದು ತಾಳಿದ ಲೀಲೆ ಚಂದ ಯತಿ ಮೊದಲಿಂದ ॥ ೯೭ ॥

ಇವನನುಗ್ರಹವು ಇರುತಿರೆ ।
ತವ ಧನ್ಯನೆ ತಪ್ಪದೆನುತ ತವಕದಿ ಸತತ ॥
ಭುವನದಿ ಬಲುಮೆಯನಾಂತರು ।
ಶಿವನೊಲಿಪುದೆ ಶಿಷ್ಯವೆಂದು ಗುರುದಯವಿಂದು ॥ ೯೮ ॥

ಎನಗಾಗಲೆಲ್ಲ ಕಾಲದಿ ।
ಮನದೊಳ್ ಭಜಿಸುತಲಿ ಮರಳೇನೊರೆಯದೆ ನಿತ್ಯ ॥

ಘನಗುರುವೆ ಸತ್ಯವೆನ್ನುತ ।
ತನುಮನಧನ ಕರ್ತೃವೆಂದೆ ನಂಬುಗೆಯೊಂದೆ ॥ ೯೯ ॥

ಜನರಿಷ್ಟ ಧರ್ಮನಿಷ್ಠೆಯು ।
ಸನುಮತಿ ಸಹಜಾತ್ಮ ಸತ್ಯಾಭ್ಯುದಯಾಂ ॥
ತಿನಿತು ಗುಣಮುಳ್ಳ ವಂಶಿದು ।
ಅನುಪಮಾರಾಧ್ಯಗೋತ್ರ ಮೊದಲೆ ಪವಿತ್ರ ॥ ೧೦೦ ॥

ಗುಣವೇನು ಕುಲವದೇನಿದು ।
ಅಣುವಿನ ಸಮವರಿಯಬೇಕು ಎಣಿಸದೆ ತಾನೆ ॥
ಗಣಿಸಲು ತಾ ತಕ್ಕುದು ಎನೆ ।
ಮಣಿದುಸುರುವೆ ಮಾನ್ಯರಿಂಗೆ ಅಣುಗನ ಹಾಂಗೆ ॥ ೧೦೧ ॥

ಜನನಿ ಜನಕಾತ್ಮಜಂಗೆಯು ।
ಘನಗುರುವಹುದೆನುತ ಶಾಸ್ತ್ರಸನುಮತಿಯಿರಲಾ ॥
ಅನುವಿನಲಿ ಆವರ ಏಳ್ಗೆಯ ।
ಮನದೋರಿದನೆಲ್ಲ ಮನ್ನಿಸಿರೆಲ್ಲ ॥ ೧೦೨ ॥

ಇಳೆಯೊಳು ಹೇಳಲ್ ಕೇಳಲ್ ।
ತಿಳಿಯಲ್ ಪಠಿಸಲ್ ಮೋಣರ್ಥವನುರೆ ಅರಿಯಲ್ ॥
ಸುಲಭದಿ ಶುಭವೆಂಬೆಲ್ಲವು ।
ತಳುವದೆ ತಾ ಬಹುದು ಸಿದ್ಧ ಕುಹಕಿಗಬದ್ಧ ॥ ೧೦೩ ॥

ಇದು ಭಕ್ತಿಭಾವದವರಿಗೆ ।
ಇದು ತತ್ವದವರಿಗೆ ಮುಖ್ಯಸದನೊಪ್ಪುದು ॥
ಇದುವೆ ಜಗದಾದಿ ಬೀಜವು ।
ಇದನರಿಯಲ್ಕವನೆ ಧನ್ಯ ಭಜಿಸಲು ಪುಣ್ಯ ॥ ೧೦೪ ॥

ಬರುತಿಹುದು ಭಂಗವಿಲ್ಲವು ।
ಹರಕರುಣವು ಅಧಿಕವಹುದು ಮರೆದಾದರುತಾ ॥
ಕರಿಬಸವನ ನೆನೆಯಲು ಕಷ್ಟವು ।
ಪರಿದೋಹುದು ಪರಿಕಿಸಿಂತು ಗುರುಬಲವಂತು ॥ ೧೦೫ ॥

---

**ಭಾವ:—** ಈ ವಚನದಲ್ಲಿ ವಚನಕಾರನು ದಾಸೋಹದ ಮಹತ್ವವನ್ನು ವಿವರಿಸಿರುವನು. ದಾಸೋಹಿಯೇ ಶ್ರೇಷ್ಠನು, ಆತನೇ ವಿದ್ವಾಂಸನು ಆತನೇ ಜ್ಞಾನಿಯು, ಆತನೇ ಷಟ್‌ಸ್ಥಲ ಜ್ಞಾನಿಯು ಎಂದು ಅವನನ್ನು ಹೊಗಳಿರುವನು. ದಾಸೋಹ ಮಾಡಲರಿಯದವನು ಅಹಂಕಾರಿಯು, ಅಜ್ಞಾನಿಯು. ಅವನು ಯಾವ ಕೆಲಸಕ್ಕೂ ಬಾರದವನು ಎಂದು ವಚನಕಾರನು ಅವನನ್ನು ಹಳಿದಿದ್ದಾನೆ.

---

# ಪ್ರಸಾದ.



**ವಿವಿರಣೆಃ—** ಮುಂದಿನ ವಚನಗಳಲ್ಲಿ ವಚನಕಾರನು ಪ್ರಸಾದದ ಸ್ವರೂಪವನ್ನು ಹೇಳುತ್ತಿದ್ದಾನೆ. ಪ್ರಸಾದವೆಂದರೆ ಭೋಗ್ಯವಸ್ತುಗಳನ್ನು ಪರಮಾತ್ಮನಿಗೆ ಅರ್ಪಿಸಿ ಅವುಗಳನ್ನು ಸೇವಿಸುವದೇ ಇರುತ್ತದೆ. ಈ ಬಗೆಯಾಗಿ ಆಚರಿಸುವದೇ ವೀರಶೈವನ ಧರ್ಮವಾಗಿದೆ. ಆದರೆ ಅವನ ಅರ್ಪಣದ ರೀತಿಯು ಮಾತ್ರ ವಿಶಿಷ್ಟತೆರನಾಗಿರುವದು. ಅವನು ಲಿಂಗ ಧಾರಿಯಾದ್ದರಿಂದ ಅವನು ಮಂತ್ರಮಯನಾಗಿರುತ್ತಾನೆ. ಈ ಮಂತ್ರ ಶಕ್ತಿಯು ಅವನ ಶರೀರವನ್ನೆಲ್ಲ ಆವರಿಸಿಕೊಂಡಿರುತ್ತದೆ. ಈ ಶಕ್ತಿಯು ಅವನ ಆಯಾ ಚಕ್ರಗಳಿರುವ ಸ್ಥಾನಗಳಲ್ಲಿ ಲಿಂಗರೂಪಾಗಿ ಅವನಲ್ಲಿ ಸ್ಥಾಪ್ಯಗೊಂಡಿರುತ್ತದೆ. ಮನುಷ್ಯನು ತಾನು ಅನುಭವಿಸುವ ವಸ್ತುಗಳನ್ನು ಈ ಲಿಂಗಗಳಿಗೆ ಅರ್ಪಿಸಿ ಭೋಗಿಸಬೇಕು. ಹೀಗೆ ಅರ್ಪಿಸಲ್ಪಟ್ಟಿದ್ದು ಪವಿತ್ರವಾಗಿರುತ್ತದೆ. ಇಲ್ಲದಿದ್ದರೆ ಅದು ಕಿಲ್ಬಿಷವು. ಷಟ್ಸ್ಥಲ ಜ್ಞಾನಿಯು ಈ ಹದವನ್ನು ಅರಿತು ವರ್ತಿಸಬೇಕು. ಆದರೆ ಇದು ಅವನ ಶಿವಾನುಭವಕ್ಕೆ ಮಾತ್ರ ಗೋಚರಿಸತಕ್ಕ ವಿಷಯವಾಗಿರುತ್ತದೆ.

**ವಚನಃ—** ೧೦೦. ಲಿಂಗವಂತಂಗೆ ಲಿಂಗವು ಮಾಡಿದ ಪದವಿಯನು ಲಿಂಗವಂತರೇ ಬಲ್ಲರು. ಕೇವಲ ಸಾಕ್ಷಾತ್ ಪರವಸ್ತುವನು ಕರಸ್ಥಲಕ್ಕೆ ಬಿಜಯಂಗೈಸಿಕೊಟ್ಟನಾಗಿ ಸಾಲೋಕ್ಯಪದ. ಅಂಗದ ಮೇಲೆ ನಿರಂತರ ಪೂಜೆಗೊಳ್ಳುತ್ತಿಹನಾಗಿ ಸಾಮೀಪ್ಯಪದ. ಸದ್ಭಕ್ತಿರೂಪನ ಮಾಡಿದನಾಗಿ ಸಾರೂಪ್ಯಪದ. ಪ್ರಾಣಲಿಂಗವ ಮಾಡಿ ಅವಿನಾಭಾವವ ಮಾಡಿದನಾಗಿ ಸಾಯುಜ್ಯಪದ. ಲಿಂಗಮಧ್ಯೇ ಶರಣ, ಶರಣಮಧ್ಯೇ ಲಿಂಗವೆಂದುದಾಗಿ ಸರ್ವ ಭೋಗಂಗಳು ಸಹವಾಗಿ ಭೋಗಿಸಿ ಪ್ರಸಾದವನಿಕ್ಕಿ ಸಲಹಿದನು. ಸದ್ಯನ್ಮುಕ್ತನಾದೆನು. ಸರ್ವಾಂಗವು ಲಿಂಗ. ಈ ತಾತ್ಪರ್ಯದ ಮರ್ಮವ ಲೋಕದ ಜೀವರೆತ್ತಬಲ್ಲರು ? ಬಲ್ಲಡೆ ಲಿಂಗಾನುಭಾವಿಗಳು ಬಲ್ಲರಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ—** ವಚನಕಾರನು ಈ ವಚನದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದಗಳು ಲಿಂಗವಂತನಿಗೆ ಹ್ಯಾಗೆ ಲಭಿಸುತ್ತವೆಂಬದನ್ನು ಹೇಳಿರುವನು. ಈ ನಾಲ್ಕೂ ಪದಗಳು ಅವನಲ್ಲಿ ನೆಲೆಗೊಂಡಿರು

ತ್ಸವೆ ಇಷ್ಟಲಿಂಗವನ್ನು ಹಸ್ತದಲ್ಲಿ ಧರಿಸಿ ಆಲೋಕಿಸುವವನಾದ್ದರಿಂದ ಸಾಲೋಕ್ಯಪದವು, ಆ ಲಿಂಗವನ್ನು ಅನೇಕ ಸಾಧನೆಗಳಿಂದ ಪೂಜಿಸುವವನಾದ್ದರಿಂದ ಸಾಮೀಪ್ಯಪದವು, ಹೀಗೆ ಪೂಜಿಸುತ್ತ ತನ್ನ ಭಕ್ತಿಯ ಮೂಲಕ ತನ್ನಲ್ಲಿ ಲಿಂಗವನ್ನು ಹಿಡಿದೆಳೆಯುವವನಾದ್ದರಿಂದ ಸಾರೂಪ್ಯಪದವು, ಕಡೆಗೆ ಆ ಲಿಂಗವನ್ನು ತನ್ನಲ್ಲಿ ಒಳಪಡಿಸಿಕೊಂಡು ಅದರಲ್ಲಿ ಬೆರೆಯುವವನಾದ್ದರಿಂದ ಸಾಯುಜ್ಯಪದವು ಹೀಗೆ ಈ ಎಲ್ಲ ಪದಗಳೂ ಅವನಲ್ಲಿ ಪ್ರಾಪ್ತವಾಗುವವು. ಹೀಗೆ ಲಿಂಗದಲ್ಲಿ ಬೆರೆತುಕೊಂಡವನಾದ್ದರಿಂದ ಲಿಂಗದಲ್ಲಿ ಶರಣ, ಶರಣನಲ್ಲಿ ಲಿಂಗ ಎನ್ನುವ ಬಗೆಯು ಪ್ರಾಪ್ತವಾಗುವದು. ಈ ಸ್ಥಿತಿಯಲ್ಲಿ ಶರಣನ ಭೋಗಗಳು ಲಿಂಗಕ್ಕೆ ಸಲ್ಲುವವು. ಮತ್ತು ಲಿಂಗದ ಭೋಗವು ಶರಣನಿಗೆ ಸಲ್ಲುವದು. ಇದೇ ಪ್ರಸಾದವೆನಿಸಿಕೊಳ್ಳುವದು. ಈ ಪ್ರಸಾದದ ಮರ್ಮವನ್ನು ಲೋಕದ ಜಡಜೀವಿಗಳು ತಿಳಿಯಲಾರರು.

**ವಚನ**:— ೧೦೧. ಬ್ರಹ್ಮಸೃಷ್ಟಿ ಪಂಚಭೂತ ಸಮ್ಮಿಶ್ರದಿಂದಾದ ಕಾಯವು ಭೂತಕಾಯವು. ವಾಯು ಪ್ರಾಣಿ, ಉತ್ಪತ್ತಿ ಸ್ಥಿತಿಲಯ ಕಾರಣ ಕಾಯವು. ಈ ಪರಿಯು ಉತ್ಪತ್ತಿಯು ದೇವದಾನವಮಾನವರಿಗೆಯೂ ಒಂದೇ ಪರಿ ಶ್ರೀಗುರುವಿನ ಸೃಷ್ಟಿಯಿಂದಲೂ ಮಹಾ ಪ್ರಸಾದದಿಂದಲೂ ಮಹಾ ಮಂತ್ರ ಸಮ್ಮಿಶ್ರದಿಂದಾದ ಕಾಯವು ಪ್ರಸಾದ ಕಾಯವು, ಮಹಾಮಂತ್ರ ಪಿಂಡವು, ಭಕ್ತಿಕಾಯವು. ಲಿಂಗಪ್ರಾಣಿಗೆ ಉತ್ಪತ್ತಿಸ್ಥಿತಿಲಯವಿಲ್ಲ, ಸತ್ಯನು ಸದ್ಯೋನ್ಮುಕ್ತನು. ಈ ಪರಿಯು ಶ್ರೀಗುರುಕಾರುಣ್ಯವ ಪಡೆದ ಮಹಾತ್ಮರಿಗೆ ಒಂದೇ ಪರಿ. ಶ್ರೀಗುರುವಿನ ಕಾರುಣ್ಯದ ಪರಿ, ಶಿವಭಕ್ತನ ಇರವಿನ ಪರಿ. ಇಂತುಟಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ. ನಿಮ್ಮ ಶರಣರಿಗೆ ಲೋಕದ ಮಾನವರು ಸರಿ ಎಂದರೆ ನಾಯಕ ನರಕ ತಪ್ಪದು.

**ಭಾವ**:— ಈ ವಚನದಲ್ಲಿ ವಚನಕಾರನು ಪಂಚಭೂತದಿಂದಾದ ಕಾಯ ಮತ್ತು ಮಂತ್ರಮಯ ಕಾಯ ಇವುಗಳಲ್ಲಿಯ ಭೇದವನ್ನು ವಿವರಿಸಿ ನುಡಿದಿರುವನು. ಪಂಚಭೂತದಿಂದಾದ ಕಾಯವು ಬ್ರಹ್ಮಸೃಷ್ಟಿ ಎಂದೆನಿಸಿಕೊಳ್ಳುತ್ತದೆ. ಇದು ದೇವದಾನವ ಮಾನವರಲ್ಲಿ ಉಂಟು. ಆದರೆ ಶ್ರೀಗುರುವಿನ ಮಂತ್ರಶಕ್ತಿಯಿಂದಾದ ಕಾಯವು ಪ್ರಸಾದ ಕಾಯವೆನಿಸಿಕೊಳ್ಳುತ್ತದೆ. ಇದು ಮಂತ್ರಪಿಂಡವು. ಭಕ್ತಿಕಾಯವು ಇದಕ್ಕೆ ಉತ್ಪತ್ತಿ, ಸ್ಥಿತಿ, ಲಯಗಳೆಂಬುವು ಇಲ್ಲ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನಃ**— ೧೦೨. ಆದಿಲಿಂಗ ಅನಾದಿಶರಣನೆಂಬುದು ತನ್ನಿಂದ ತಾನಾಯಿತ್ತು ಕೇಳಿರಣ್ಣಾ. ಆದಿಕಾಯ ಅನಾದಿಪ್ರಾಣ ಈ ಉಭಯದ ಭೇದವ ತಿಳಿದು ವಿಚಾರಿಸಿ ನೋಡಿರಣ್ಣಾ. ಅಂತು ಅನಾದಿಯ ಪ್ರಸಾದ ಆದಿಗೆ ಸಲುವುದು. ಅದೆಂತೆಂದರೆ ಅನಾದಿ ಜಂಗಮುಚ್ಚಿಷ್ಟ । ಆದಿಲಿಂಗಸ್ಥ ಲಂಭವೇತ್ । ಅನಾದಿಶ್ಚ ವಿರೋಧೇನ । ಉಚ್ಛಿಷ್ಟಂತು ಕಿಲ್ಬಿಷಂ । ಇಂತೆಂದುದಾಗಿ ಪ್ರಾಣಪ್ರಸಾದ ವಿರೋಧವಾಗಿ ಪಿಂಡಪ್ರಸಾದವ ಕೊಂಡರೆ ಕೊಂಡುದು ಕಿಲ್ಬಿಷ ಕೂಡಲಸಂಗಮದೇವಾ.

**ಭಾವಃ**— ಇದರಲ್ಲಿ ವಚನಕಾರನು ಲಿಂಗ ಮತ್ತು ಶರಣ, ಕಾಯ ಮತ್ತು ಜೀವ ಇವುಗಳಲ್ಲಿಯ ತಾರತಮ್ಯವನ್ನು ಬೇರೊಂದು ರೀತಿಯಿಂದ ಹೇಳಿದ್ದಾನೆ. ಲಿಂಗವೆಂಬುದು ಗುರುವಿನಿಂದಾದದ್ದು. ಆದ್ದರಿಂದ ಅದಕ್ಕೆ ಆದಿ ಇದೆ. ಆದರೆ ಶರಣನು ಲಿಂಗಮಯನಾದ್ದರಿಂದ ಅವನು ಅನಾದಿ ಎಂದೆನಿಸಿಕೊಳ್ಳುತ್ತಾನೆ. ಕಾಯಕ್ಕೆ ಮೂಲವಿರುವ ಕಾರಣ ಅದು ಆದಿಯು. ಆದರೆ ಅವನ ಪ್ರಾಣವು ಎಂದಿನಿಂದಲೂ ಇರುವದರಿಂದ ಅದು ಅನಾದಿಯು. ಕಾರಣ ಆದಿಯು ಇದ್ದದ್ದಕ್ಕೆ ಅನಾದಿಯ ಪ್ರಸಾದವು ಸಲ್ಲುವದು. ಆದರೆ ಆದಿಯ ಪ್ರಸಾದವು ಅನಾದಿಗೆ ಸಲ್ಲದು. ಆದಿಯು ಇದ್ದದ್ದೇ ಪಿಂಡ ಪ್ರಸಾದವು, ಅನಾದಿಯಾಗಿರುವದೇ ಪ್ರಾಣ ಪ್ರಸಾದವು. ಇವುಗಳಲ್ಲಿ ಪ್ರಾಣ ಪ್ರಸಾದವೇ ಶ್ರೇಷ್ಠತರವಾದದ್ದು. ಈ ಪ್ರಸಾದವನ್ನು ಪಡೆದು ಅದರ ಅನುಭವದಲ್ಲಿಯೇ ಶರಣನು ಸುಖಿಯಾಗಿ ಮೋಕ್ಷವನ್ನು ಹೊಂದತಕ್ಕದ್ದು.

**ವಚನಃ**— ೧೦೩. ಎನ್ನ ಕರಸ್ಥಲದ ಲಿಂಗಕ್ಕೆ ಬಂದ ಪದಾರ್ಥಂಗಳನರ್ಪಿಸುವೆನೆ? ಅರ್ಪಿಸಲಮ್ಮೆ. ಅದೇನು ಕಾರಣವೆಂದರೆ, ಎನ್ನ ಕಂಗಳು ಕಂಡವಾಗಿ, ಎನ್ನಶ್ರೋತ್ರಗಳು ಕೇಳಿದವಾಗಿ, ಎನ್ನ ಕೈಗಳು ಮುಟ್ಟಿದವಾಗಿ, ಎನ್ನ ನಾಸಿಕ ವಾಸಿಸಿತ್ತಾಗಿ, ಎನ್ನ ಜಿಹ್ವೆ ರುಚಿಸಿತ್ತಾಗಿ, ಇಂತಪ್ಪ ಎನ್ನ ಅಂಜಿಕೆಯ ನಿಮ್ಮ ಶರಣರು ಬಿಡಿಸಿದರಾಗಿ, ಅದೆಂತೆಂದರೆ, ಎನ್ನ ಶ್ರೋತ್ರದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ನೇತ್ರದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ತ್ವಕ್ಕಿನಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ಜಿಹ್ವೆಯಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಎನ್ನ ನಾಸಿಕದಲ್ಲಿ ನಿಮ್ಮ ಸಾಹಿತ್ಯವ ಮಾಡಿದರಾಗಿ, ಅಲ್ಲಲ್ಲಿ ಅರ್ಪಿತಂಗಳಾಗುತ್ತಿರ್ದನಾಗಿ, ಇನ್ನಂಜೆನಂಜೆನುರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಈ ವರೆಗೆ ಹೇಳಿದಂತೆ ಲಿಂಗಕ್ಕೆ ಅರ್ಪಣವಮಾಡುವದು ಅಶಕ್ಯವೆಂದು ಅನೇಕರು ಭಾವಿಸುವದುಂಟು. ಯಾಕಂದರೆ ಭೋಗವಸ್ತುಗಳು ಮನುಷ್ಯನ ಇಂದ್ರಿಯಗಳನ್ನು ಮೊದಲು ಮುಟ್ಟಿರುವದರಿಂದ ಅವುಗಳನ್ನು ಅತ್ಯಂತ ಪವಿತ್ರವಾದ ಪರಮಾತ್ಮನಿಗೆ ಕೊಡುವದು ಹೇಗೆ ? ಕೊಟ್ಟಿದ್ದಾದರೆ, ಅಯೋಗ್ಯ ವಸ್ತುವನ್ನು ಕೊಟ್ಟಂತಾಗುವದೆಂದು ಅನ್ನುವದುಂಟು. ಆದರೆ ಮಂತ್ರಮಯನಾದ ಲಿಂಗವಂತನಿಗೆ ಇದು ಅನ್ವಯಿಸುವದಿಲ್ಲ. ಯಾಕಂದರೆ ಅವನ ಇಂದ್ರಿಯಗಳಲ್ಲೆಲ್ಲ ಪರಮಾತ್ಮನ ಕಳೆಯಾದ ಲಿಂಗ ಶಕ್ತಿಯು ವಿಹರಿಸುವದರಿಂದ ಅವನಲ್ಲಿ ಇಂಥ ಅಪವಿತ್ರತೆಯು ಇರಲಾರದೆಂದು ವಚನಕಾರನ ಮತವು.

**ವಚನಃ—**೧೧೪. ಸತ್ಕ್ರಿಯಿಂದ ಸಕಲ ಪದಾರ್ಥಂಗಳು ಭಾಜನ ತೀವಿ ತನ್ನ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳೆನೆಂಬ ಅಚ್ಚಪ್ರಸಾದಿಗಳಿಗೆ ಹುಸಿ ಹೊದ್ದಿತಲ್ಲಾ. ಪೃಥ್ವಿಯಪ್ಪು, ತೇಜ, ವಾಯು, ಆಕಾಶ, ಕತ್ತಲೆ, ಬಿಸಿಲು, ಬೆಳದಿಂಗಳು ಮುಂತಾದ ಪದಾರ್ಥಂಗಳು ತನ್ನಂಗವ ಸೋಂಕಿ ಅಲ್ಲಿ ಅರ್ಪಿತವೆಂದು ಕೊಳ್ಳಬಾರದು. ಅನರ್ಪಿತವೆಂದು ಕಳೆಯಬಾರದು. ಇದು ಕಾರಣವದಂತಿರಲಿ. ಆವ ವೇಳೆಯಲ್ಲಿ ಆವ ಠಾವಿನಲ್ಲಿ ತನಗೆ ಬೇಕಾದ ಪದಾರ್ಥಂಗಳನು ತನ್ನ ಪ್ರಾಣಲಿಂಗ ವಿರಹಿತನಾಗಿ ಉಂಡೊಡೆ ಭವದುಃಖವನುಂಬುದು ತಪ್ಪದಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ—** ಅರ್ಪಣದ ರೀತಿಯನ್ನು ವಚನಕಾರನು ಇಲ್ಲಿ ಹೇಳುತ್ತಾನೆ. ಅದರಲ್ಲಿ ಅರ್ಪಿತ ಅನರ್ಪಿತವೆಂಬುವಿಲ್ಲ. ಈ ಬಗೆಯ ರೀತಿಯು ಹೊಳೆದ ಸಂಗಡಲೇ ಅಲ್ಲಿ ಪ್ರಸಾದವು ಒದಗಲಾರದು. ಪ್ರಾಣದಲ್ಲಿ ಲಿಂಗವಿರುವದರಿಂದ ಅವುಗಳ ವ್ಯಾಪಾರಗಳು ಸಮರಸವಾಗಿ ನಡೆಯುವದರಿಂದ ಪ್ರಸಾದವು ಹುಸಿಯಾಗಲಾರದೆಂದು ವಚನಕಾರನ ಮುಖ್ಯ ಅಭಿಪ್ರಾಯವಿದೆ.

**ವಚನಃ—** ೧೧೫. ಧರ್ಮದೊಳಗೆ ಶಿವಧರ್ಮವೇ ಧರ್ಮವೆಂದರಿದೆನಾಗಿ, ಧರ್ಮಸಾಧ್ಯವಾಯಿತ್ತೆನಗೆ. ಗುರುಲಿಂಗಜಂಗಮವ ಪಡೆದೆನಾಗಿ, ಅರ್ಥಸಾಧ್ಯವಾಯಿತ್ತೆನಗೆ. ಶರಣಸತಿ ಲಿಂಗಪತಿ ಎಂದರಿದೆನಾಗಿ, ಕಾಮ ಸಾಧ್ಯವಾಯಿತ್ತೆನಗೆ. ಮಹಾಪ್ರಸಾದವ ಸಿಂಬುಗೊಂಡು ಧರಿಸಿದೆನಾಗಿ, ಮೋಕ್ಷಸಾಧ್ಯವಾಯಿತ್ತೆನಗೆ. ಇಂತೀ ಧರ್ಮಾರ್ಥಕಾಮಮೋಕ್ಷಂಗಳೆಂಬ ಚತುರ್ವಿಧಫಲವೆನಗಾಯಿತ್ತು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ—** ಯಾವನು ಪ್ರಸಾದಗ್ರಾಹಿಯಾಗಿ ವರ್ತಿಸುತ್ತಾನೋ ಅವನು ಧರ್ಮಾರ್ಥ ಕಾಮಮೋಕ್ಷಗಳ ಶ್ರೇಷ್ಠ ಪರಿಣಾಮಗಳ ಅನು ಭವವನ್ನು ಪಡೆದು ಸುಖಿಸುತ್ತಾನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಲಿಂಗಿಯಾದವನು ಶಿವಧರ್ಮವೇ ನಿಜವಾದ ಧರ್ಮವೆಂಬ ವಿಶ್ವಾಸಭಾ ವವನ್ನು ತಾಳಿರುತ್ತಾನೆ. ಗುರುಲಿಂಗಜಂಗಮವನ್ನು ತನ್ನ ತನು, ಮನ, ಧನಗಳಲ್ಲಿ ಸಮರ್ಪಿಸಿಕೊಂಡು ವ್ಯವಹರಿಸುತ್ತಾನೆ. ಶರಣಸತಿ ಲಿಂಗಪತಿ ಎಂಬ ಭಾವವನ್ನು ಹೊಂದಿರುತ್ತಾನೆ. ಮತ್ತು ಲಿಂಗದೊಳಗೆ ಬೆರೆದು ಲಿಂಗದ ಸುಖದಲ್ಲಿ ಓಲಾಡುತ್ತಾನೆ. ಹೀಗೆ ಈ ನಾಲ್ಕೂ ಕ್ರಿಯೆಗಳಲ್ಲಿ ದೃಢಭಾವ ವುಳ್ಳವನಾದ್ದರಿಂದ ಧರ್ಮಾರ್ಥ ಕಾಮಮೋಕ್ಷಗಳೆಂಬ ಚತುರ್ವಿಧ ಫಲಗ ಳನ್ನು ಪಡೆದು ತನ್ನ ಜೀವಿತದ ಸಾರ್ಥಕತೆಯನ್ನುಂಟುಮಾಡಿಕೊಳ್ಳುತ್ತಾ ನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

---

# ಗುರುಲಿಂಗ ಜಂಗಮ.

**ವಿವರಣೆ:**— ಅರ್ಪಣವನ್ನು ಮಾಡಿ ಪ್ರಸಾದವನ್ನು ಭೋಗಿಸುವದನ್ನು ಗುರುಲಿಂಗ ಜಂಗಮದ ಮುಖಾಂತರವಾಗಿ ಜರಗಿಸಬೇಕೆಂದು ಷಟ್‌ಸ್ಥಲ ಶಾಸ್ತ್ರವು ಹೇಳುತ್ತಿದೆ. ಈ ರೀತಿಯನ್ನು ವಚನಕಾರನು ಮುಂದಿನ ವಚನಗಳಲ್ಲಿ ಹೇಳಿದ್ದಾನೆ. ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳೆಂಬವಿದ್ದು ಅವುಗಳಲ್ಲಿ ಅನುಕ್ರಮವಾಗಿ ಗುರುಲಿಂಗ ಜಂಗಮಗಳು ಸ್ಥಾಪ್ಯವಾಗಿರುತ್ತವೆ. ಇವುಗಳಿಗೆ ಭಕ್ತನು ತನ್ನ ಉಪಭೋಗ್ಯವಸ್ತುಗಳನ್ನು ಅರ್ಪಣಮಾಡತಕ್ಕದ್ದು. ಈ ವಸ್ತುಗಳೆಂದರೆ ತನು, ಮನ, ಧನಗಳೇ ಇವೆ. ಇವುಗಳನ್ನು ಭಕ್ತನು ಗುರುಲಿಂಗ ಜಂಗಮಕ್ಕೆ ನಿವೇದಿಸಿ ಪ್ರಸಾದ ರೂಪವಾಗಿ ಅವುಗಳನ್ನು ಗ್ರಹಿಸತಕ್ಕದ್ದು. ಇದರಿಂದ ಮನುಷ್ಯನ ಇಂದ್ರಿಯಗಳೆಲ್ಲ ಶುದ್ಧವಾಗುವವು. ಇದರಿಂದ ಭಕ್ತನ ಪ್ರಗತಿಯು ಉಂಟಾಗುವದೆಂಬ ಭಾವವು ಮುಂದಿನ ವಚನಗಳಲ್ಲಿ ನಿವೇದಿಸಲ್ಪಟ್ಟಿದೆ.

**ವಚನ:**— ೧೧೬. ಅರ್ಪಿತದನುವನು, ಪ್ರಸಾದದ ಮಹಿಮೆಯನು, ಆರಿಗೆಯೂ ಅರಿಯಬಾರದು ನೋಡಾ. ಬ್ರಹ್ಮ ವಿಷ್ಣು ದೇವಾದಿದೇವತೆಗಳಿಗೆಯೂ ಅರಿಯಬಾರದು ನೋಡಾ. ಋಷಿ ಜನಂಗಳಿಗೆಯೂ ಅರಿಯಬಾರದು, ದೇವದಾನವ ಮಾನವರಿಗೆಯೂ ಅರಿಯಬಾರದು, ಕಿಂಚಿತ್ತರಿದಡೆಯೂ ಅರ್ಪಿಸಬಾರದು. ಕಿಂಚಿತ್ತರ್ಪಿಸಿದಡೆಯೂ ಪ್ರಸಾದವ ಪಡೆಯಬಾರದು. ಕಿಂಚಿತ್‌ಪ್ರಸಾದ ಪಡೆದಡೆಯೂ ಆ ಪ್ರಸಾದವ ಭೋಗಿಸಿ ಮುಕ್ತರಾಗಬಾರದು. ಅದೆಂತೆಂದರೆ ತನುವ ಗುರುವಿಂಗರ್ಪಿಸಿ ಗುರುಪ್ರಸಾದವ ಪಡೆಯಲರಿಯರು ನೋಡಾ. ಮನವ ಲಿಂಗಕ್ಕರ್ಪಿಸಿ ಲಿಂಗಪ್ರಸಾದವ ಪಡೆಯಲರಿಯರು ನೋಡಾ. ಧನವ ಜಂಗಮಕ್ಕರ್ಪಿಸಿ ಜಂಗಮ ಪ್ರಸಾದವ ಪಡೆಯಲರಿಯರು ನೋಡಾ. ತನುಮನಧನವನು ಗುರುಲಿಂಗ ಜಂಗಮಕ್ಕೆ ಕೊಟ್ಟು, ಆ ತ್ರಿವಿಧಲಿಂಗವ ಏಕೀಕರಿಸಿ ಭಾವಸ್ಥಾನದಲ್ಲಿ ಧರಿಸಿ ಪರಿಣಾಮ ಪದಾರ್ಥವ–ನರ್ಪಿಸಿ ಭಾವಲಿಂಗ ಪ್ರಸಾದವ ಪಡೆಯಲರಿಯರು ನೋಡಾ. ಆ ಮಹಾಭಾವಲಿಂಗಮಂ ಮನೋಮಧ್ಯದಲ್ಲಿರಿಸಿ ಸಕಲ ನಿಷ್ಕಲ ದ್ರವ್ಯಂಗಳನರ್ಪಿಸಿ ಮನೋಮಯಲಿಂಗ ಪ್ರಸಾದಮಂ ಪಡೆಯಲರಿಯರು ನೋಡಾ. ಮನೋಮಯ

ಲಿಂಗಮೂರ್ತಿಯು ತಂದು ಶ್ರೋತ್ರದ ಬಾಗಿಲಲ್ಲಿ ಕುಳ್ಳಿರಿಸಿ ಘಂಟಾದಿ ನಾದಂಗಳಂ ಸಮರ್ಪಿಸಿ ಶಬ್ದಪ್ರಸಾದಮಂ ಪಡೆಯಲರಿಯರು ನೋಡಾ. ಆ ಮನೋಮಯಮೂರ್ತಿ ಲಿಂಗಮಂ ತಂದು ತ್ವಕ್ಕಿನ ಬಾಗಿಲಲ್ಲಿ ಕುಳ್ಳಿರಿಸಿ ಕಠಿಣಾದಿ ಸ್ಪರ್ಶನಂಗಳಂ ಸಮರ್ಪಿಸಿ ಸ್ಪರ್ಶನ ಪ್ರಸಾದಮಂ ಪಡೆಯಲರಿಯರು ನೋಡಾ. ಆ ಮನೋಮಯ ಮೂರ್ತಿಲಿಂಗಮಂ ತಂದು ನೇತ್ರದ ಬಾಗಿಲಲ್ಲಿ ಕುಳ್ಳಿರಿಸಿ ಶ್ವೇತಾದಿವರ್ಣಂಗಳಂ ಅರ್ಪಿಸಿ ವರ್ಣ ಪ್ರಸಾದಮಂ ಪಡೆಯಲರಿಯರು ನೋಡಾ. ಆ ಮನೋಮಯಮೂರ್ತಿ ಲಿಂಗಮಂ ಜಿಹ್ವೆಯ ಬಾಗಿಲಲ್ಲಿ ಕುಳ್ಳಿರಿಸಿ ಮಧುರಾದಿ ರಸಂಗಳನರ್ಪಿಸಿ, ರಸಪ್ರಸಾದಮಂ ಪಡೆಯಲರಿಯರು ನೋಡಾ. ಆ ಮನೋಮಯ ಮೂರ್ತಿ ಲಿಂಗಮಂ ಘ್ರಾಣದ ಬಾಗಿಲಲ್ಲಿ ಕುಳ್ಳಿರಿಸಿ ಗಂಧಾದಿ ಪರಿಮಳಂಗಳನರ್ಪಿಸಿ ಗಂಧಪ್ರಸಾದಮಂ ಪಡೆಯಲರಿಯರು ನೋಡಾ. ಆ ಮನೋಮಯಮೂರ್ತಿಲಿಂಗಮಂ ತಂದು ವಾಙ್ಮೂರ್ತಿಯಂ ಮಾಡಿ ಸತ್ಯಸುಭಾಷೆಗಳನರ್ಪಿಸಿ ವಚನ ಪ್ರಸಾದಮಂ ಪಡೆಯಲರಿಯರು ನೋಡಾ. ಇಂತಿಪ್ಪ ಏಕಾದಶಸ್ಥಾನದಲ್ಲಿ ಏಕಾದಶಾರ್ಪಣವಂ ಮಾಡಿ ಪ್ರಸಾದಮಂ ಪಡೆಯಲರಿಯದ ಕಾರಣ ಪ್ರಸಾದ ಭೋಗದಿಂದಪ್ಪ ಕೇವಲ ಮುಕ್ತಿ ಯಾರಿಗೆಯೂ ಸಂಭವಿಸದು. ಇದು ಕಾರಣ ಇಂತಪ್ಪ ಮಹಾ ಪ್ರಸಾದಸ್ಥಳಕುಳವನು ನಿಮ್ಮ ಪ್ರಸಾದಿ ಚನ್ನಬಸವಣ್ಣಂಗೊಬ್ಬಂಗಲ್ಲದೆ ಮತ್ತಾರಿಗೆಯೂ ಅರಿಯಬಾರದಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ಮನುಷ್ಯನಿಗೆ ಸ್ಥೂಲ ಸೂಕ್ಷ್ಮ, ಶರೀರಗಳೂ ಪಂಚೇಂದ್ರಿಯಗಳೂ, ತನು, ಮನ, ಧನಗಳೂ ಇದ್ದು ಇವುಗಳನ್ನು ಲಿಂಗಕ್ಕೆ ಅರ್ಪಿಸಿ, ಪರಿಶುದ್ಧನಾಗಿ ವರ್ತಿಸುವ ರೀತಿಯನ್ನು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:**— ೧೦೭. ಗುರುಸ್ವರೂಪನಾಗಿ ಮಹಾಸ್ಥಾನದಲ್ಲಿರುತಿರ್ದೆ, ಲಿಂಗಸ್ವರೂಪನಾಗಿ ಭ್ರೂಮಧ್ಯದಲ್ಲಿರುತಿರ್ದೆ, ಜಂಗಮಸ್ವರೂಪನಾಗಿ ಹೃದಯಕಮಲಮಧ್ಯದಲ್ಲಿರುತಿರ್ದೆ, ಈ ಪರಿಯಲ್ಲಿ ಅಂತರಂಗದಲ್ಲಿ ಭರಿತನಾಗಿರ್ದೆಯಯ್ಯ! ಬಹಿರಂಗದಲ್ಲಿ ಶ್ರೀಗುರುಲಿಂಗವಾಗಿ ದೀಕ್ಷಿಸಿ ರಕ್ಷಿಸಿದೆ. ಶಿವಲಿಂಗವಾಗಿ ಕರಸ್ಥಲದಲ್ಲಿ ಪೂಜೆಗೊಂಡು ರಕ್ಷಿಸಿದೆ. ಜಂಗಮಲಿಂಗವಾಗಿ ಅವಗುಣಂಗಳೆಲ್ಲವ ಕಳೆದು ಶಿಕ್ಷಿಸಿ ರಕ್ಷಿಸಿದೆ. ಈ ತ್ರಿವಿಧವು ಒಂದೇ ಸ್ವರೂಪವಾಗಿ ಎನ್ನಂತರಂಗ ಬಹಿರಂಗಭರಿತನಾಗಿ ಪ್ರಸಾದವ ಕರುಣಿಸಿ ಮುಕ್ತನ ಮಾಡಿದಿರಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:—** ಲಿಂಗವು ಗುರುಲಿಂಗ ಜಂಗಮರೂಪವಾಗಿ ಮನುಷ್ಯ ನಲ್ಲಿ ವಾಸಿಸುತ್ತದೆ. ದೀಕ್ಷಾ ಕಾಲದಲ್ಲಿ ಗುರುವು ಹಸ್ತ ಮಸ್ತಕ ಸಂಯೋಗವನ್ನು ಮಾಡಿ ಬ್ರಹ್ಮರಂಧ್ರದಲ್ಲಿ ಮೊದಲು ಅದನ್ನು ಸ್ಥಾಪಿಸುತ್ತಾನೆ. ಮುಂದೆ ಅಂಗರೂಪವಾಗಿ ಭ್ರೂಮಧ್ಯದಲ್ಲಿ ವಾಸಿಸುತ್ತಾನೆ. ಅಲ್ಲಿಯ ಲಿಂಗಧ್ಯಾನದ ಮೂಲಕ ಮಹಾಲಿಂಗವು ಚೈತನ್ಯಗೊಳ್ಳುತ್ತದೆ. ಮುಂದೆ ಜಂಗಮ ರೂಪವಾಗಿ ಅದು ಹೃದಯ ಸ್ಥಾನದಲ್ಲಿ ವಾಸಿಸುತ್ತದೆ. ಹೀಗೆ ಸ್ಥಾಪ್ಯ ವಾದ ಕೂಡಲೆ ಲಿಂಗವು ಇಂದ್ರಿಯಂಗಳಲ್ಲೆಲ್ಲ ಚರಿಸಿ ಅಂತರಂಗ ಬಹಿ ರಂಗ ಭರಿತವಾಗುತ್ತದೆ. ಇದರಿಂದ ಅವಗುಣಂಗಳೆಲ್ಲ ಕೆಟ್ಟು ಹೋಗುವವು. ಮತ್ತು ಭಕ್ತನು ಪ್ರಸಾದ ಶರೀರಿಯಾಗಿ ಮೋಕ್ಷವನ್ನು ಹೊಂದುವನೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

**ವಚನ:—** ೧೦೮. ಪ್ರಕೃತಿವಿಡಿದಿಹುದು ಪ್ರಾಣ, ಪ್ರಾಣವಿಡಿದಿಹುದು ಜ್ಞಾನ, ಜ್ಞಾನವಿಡಿದಿಹುದು ಗುರುಲಿಂಗಜಂಗಮ. ಇಂತೀ ಪ್ರಸಾದ ಸಗುಣವೆಂದು ಹಿಡಿದು, ನಿರ್ಗುಣವೆಂದು ಬಿಡುವ ವ್ರತಗೇಡಿಗಳ ತೋರದಿರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಲಿಂಗಿಯಲ್ಲಿ ಸಮರಸಾಚಾರವೇ ವಿಹಿತವಾಗಿರುತ್ತದೆ. ಅವನಲ್ಲಿ ಭಿನ್ನಾಚಾರವಿಲ್ಲ. ಸಗುಣ ನಿರ್ಗುಣವೆಂಬ ಭೇದಭಾವವಿಲ್ಲ. ಒಂದನ್ನು ಹಿಡಿದು ಮತ್ತೊಂದನ್ನು ಬಿಡುವುದೆಂಬುದಿಲ್ಲ. ಅವೆರಡೂ ಒಂದನ್ನೊಂದು ಬಿಟ್ಟು ವ್ಯವಹರಿಸಲಾರವು. ಆದ್ದರಿಂದ ಸಗುಣವನ್ನು ನಿರ್ಗುಣಕ್ಕೆ ಅರ್ಪಿಸಿ ಪ್ರಸಾದವನ್ನು ಪಡೆಯಬೇಕೆಂಬ ಭಾವವು ಇದರಲ್ಲಿ ಗರ್ಭಿತವಾಗಿದೆ.

**ವಚನ:—** ೧೦೯. ಅಗ್ನಿ ಮುಟ್ಟಲು ತೃಣವು ಅಗ್ನಿಯಪ್ಪುದು ತಪ್ಪದಯ್ಯ. ಶ್ರೀಗುರು ಪ್ರಸಾದವಂಗವ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯಾ. ಲಿಂಗಪ್ರಸಾದ ಮನ ಸೋಂಕಿದಲ್ಲಿ ಮನ ಲಿಂಗವಪ್ಪುದು ತಪ್ಪದಯ್ಯಾ. ಜಂಗಮ ಪ್ರಸಾದ ಅರಿವ ಸೋಂಕಿದಲ್ಲಿ ಅಖಂಡಿತ ಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯಾ. ಶಿವ ಶಿವಾ ಮಹಾಪ್ರಸಾದದ ಮಹಿಮೆಯ ನೇನೆಂದುಪಮಿಸಬಹುದಯ್ಯಾ? ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಮಾನಂದ, ಪ್ರಸಾದವೇ ಪರಮಾಮೃತ, ಪ್ರಸಾದವೇ ಪರಮಜ್ಞಾನ, ಪ್ರಸಾದವೇ

ಜ್ಞಾನಾತೀತ, ಪ್ರಸಾದವೇ ನಿತ್ಯ ಪರಿಪೂರ್ಣ, ಇಂತಪ್ಪ ಪ್ರಸಾದವ ಕೊಂಡು ನಾನು ಬದುಕಿದೆನಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಪ್ರಸಾದವನ್ನು ಹೊಂದಿದ ಕೂಡಲೆ ತೃಣವು ಅಗ್ನಿಯನ್ನು ಮುಟ್ಟಿದ್ದಾದರೆ ಹ್ಯಾಗೆ ಅದು ತನ್ನ ಮೊದಲಿನ ಗುಣವನ್ನು ಬಿಟ್ಟು ಪ್ರಕಾಶಮಾನವಾಗುತ್ತದೋ ಹಾಗೆ ಮನುಷ್ಯನು ಪ್ರಕಾಶಮಯನಾಗುವನು, ಅಂದರೆ ಭಕ್ತನು ಪ್ರಸಾದದಿಂದ ಗುರುವಾಗುವನು. ಲಿಂಗವಾಗುವನು, ಜಂಗಮವಾಗುವನು. ತನು ಸೋಂಕಿದ ಕೂಡಲೆ ಅವನು ಗುರುವಾಗುವನು. ಮನ ಸೋಂಕಿದ ಕೂಡಲೆ ಅವನು ಲಿಂಗವಾಗುವನು. ಅರಿವು ಸೋಂಕಿದ ಕೂಡಲೆ ಅವನು ಜಂಗಮವಾಗುವನು. ಹೀಗೆ ಪ್ರಸಾದದ ಮಹಿಮೆ ಇದೆ ಎಂದು ವಚನಕಾರನು ಅದನ್ನು ಇಲ್ಲಿ ಬಣ್ಣಿಸಿರುವನು.

**ವಚನಃ**— ೧೧೦. ಲಿಂಗವನರಿತು ಲಿಂಗಾರ್ಚನೆಯ ಮಾಡಿ, ಗುರುಲಿಂಗ ಜಂಗಮಕ್ಕೆ ತನುಮನಧನವ ಸವಿಸಿ ಲಿಂಗವಲ್ಲದನ್ಯವನರಿಯದಿರ್ಪ ಮಹಾ ಮಹಿಮನ ನಿಲವು ಸರ್ವಾಂಗ ಲಿಂಗಮೂರ್ತಿ. ಆತನ ನುಡಿಯೇ ವೇದ, ನಡೆಯೇ ಆಗಮ, ಮಾಡಿತ್ತೇ ಶಾಸ್ತ್ರ, ಹೇಳಿತ್ತೇ ಪುರಾಣ, ಆತನಿದ್ದುದೇ ದೇವಲೋಕ, ಆತನ ದರ್ಶನ ಸ್ಪರ್ಶನದಿಂದ ಪಾಪ ಕ್ಷಯ, ಆತನ ಪಾದತೀರ್ಥ ಪ್ರಸಾದದಿಂದ ದೇವದಾನವ ಮಾನವರೆಲ್ಲರೂ ಜೀವನ್ಮುಕ್ತರು. ಆ ಮಹಾ ಮಹಿಮನ ಶೃತ ದೃಷ್ಟಾನುಮಾನದಿಂದ ವಿಚಾರಿಸಿ ನೋಡಿದರೆ ಬಸವರಾಜದೇವರು ಮೊದಲಾದ ಪುರಾತನರ ಚಾರಿತ್ರವು ಹಿಂಗಲ್ಲದೆ, ಲಿಂಗವನರಿಯದೆ, ಲಿಂಗಾರ್ಚನೆಯ ಮಾಡದೆ, ಗುರುಲಿಂಗ ಜಂಗಮಕ್ಕೆ ತನು, ಮನ, ಧನವ ಸವಿಸದೆ ಇನ್ನು ಆವನಾನೊಬ್ಬನು ವೇದಾದಿ ಅಷ್ಟಾದಶ ಪುರಾಣಂಗಳನೋದಿ ಹೇಳಿ ಕೇಳಿದಡೇನೊ, ಗಿಳಿಯೋದಿದಂತೆ? ಸರ್ವಸಂಗ ಪರಿತ್ಯಾಗವ ಮಾಡಿ ಅರಣ್ಯದಲ್ಲಿ ಚರಿಸಿದಡೇನೋ ವನಚರ ವ್ಯಾಧರುಗಳಂತೆ? ಅಶನವ ಬಿಟ್ಟರೇನೋ ಪರಾಕಿಯಂತೆ? ವಿಷಯವ ಬಿಟ್ಟರೇನೊ ಅಶಕ್ತ ನಪುಂಸಕನಂತೆ? ನಿದ್ರೆಯ ಬಿಟ್ಟರೇನೊ ಜಾರಚೋರರಂತೆ? ಸಾಮರ್ಥ್ಯ ಪುರುಷನೆಂದು ಖೇಚರತ್ವದಲ್ಲಿ ಬಂದರೇನೋ ಪಕ್ಷಿಗಳಂತೆ? ಜಲದಲ್ಲಿ ಚರಿಸಿದಡೇನು ಮತ್ಸ್ಯಾದಿಗಳಂತೆ? ಭೂಪ್ರದಕ್ಷಿಣ ಬಂದಡೇನು ಮೃಗಾದಿಗಳಂತೆ? ದಾನಾದಿಗಳ ಕೊಟ್ಟರೇನು ಕ್ಷತ್ರಿಯರಂತೆ? ಅದೆಂತೆಂದಡೆ, ಶಿವನ ವಾಕ್ಯ "ಪಯೋಹಾರೇತು ಮಾರ್ಜಾಲಃ ನಗ್ನೋಮುಗ್ಧಃ ಪಿಶಾಚವತ್ ।

ನಿತ್ಯ ಸ್ನಾನಶ್ಚಕಾಃಕಶ್ಚನಾಲ್ಮೀಕಿಸರ್ಪ ಜಾತಯಃ ॥ ತೃಣಂಭಕ್ಷ್ಯಂತಿ ಪಶವಃ ವನವಾಸೀ ಮೃಗಸ್ತಥಾ । ಯೆನ ಚೈತಾನಿ ಕಾರ್ಯಾಣಿ ನ ಕರೊತಿಹಿಪಾರ್ವತಿ ಎಂದುದಾಗಿ ಆವ ಸಿದ್ಧಿಗಳಿಂದಲೂ ಫಲ್ಲವಿಲ್ಲ; ಇಂತೀ ಏನನೋದಿ ಏನ ಕೇಳಿ ಏನ ಹೇಳಿಯೂ ಫಲವಿಲ್ಲ. ಇವು ಭಕ್ತಿಯೊಳಗಲ್ಲ. ಮುಕ್ತಿಗೆ ಸಲ್ಲವು. ಇದನರಿದು ಆವನಾನೊಬ್ಬನು ಲಿಂಗವರಿತು ಲಿಂಗಾರ್ಚನೆಯಂ ಮಾಡಿ, ಗುರುಲಿಂಗಜಂಗಮಕ್ಕೆ ತನುಮನಧನವ ಸವಿಸಿದಡೆ ಅದೇ ಚೆಲ್ವ ಭಕ್ತಿ, ಅದೇ ಚೆಲ್ವ ಮುಕ್ತಿ, ಅದೇ ಸರ್ವಸಿದ್ಧಿ, ಅದೇ ಸರ್ವಕಾರಣ ವಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಪ್ರಸಾದದ ಮಹತ್ವವನ್ನು ವಚನಕಾರನು ಹೇಳಿದ್ದಾನೆ. ಅದರ ಮಹತ್ವವು ಬರೇ ಯೋಗಾಭ್ಯಾಸಕ್ಕಿಂತಲೂ ಬಹಳ ಹೆಚ್ಚಿನದು. ಯೋಗಾಭ್ಯಾಸದಿಂದ ಅನೇಕ ಮಹತ್ವಗಳನ್ನು ಮಾಡಬಹುದು. ಆದರೂ ಇಂಥವನಗಿಂತಲೂ ಪ್ರಸಾದಿಯು ಶ್ರೇಷ್ಠನಾಗಿದ್ದಾನೆ. ಯಾಕಂದರೆ ಇವನು ಮೋಕ್ಷಕ್ಕೆ ಸಲ್ಲುತ್ತಾನೆ.

**ವಚನಃ**— ೧೧೧. ಅಂಗಯ್ಯ ಲಿಂಗಕ್ಕೆ ಹಿಂಗದೆ ಮಜ್ಜನಕ್ಕೆರೆಯಿರೋ. ಅರ್ಪಿತ ಮುಖಂಗಳಲ್ಲಿ ಅರ್ಪಿಸುವಿರಿ. ಅರ್ಪಿತ ಸವಿಯಿತೋ, ಲಿಂಗ ಸವಿಯಿತೋ ? ಕರ್ಮಣಾ ಮನಸಾ ವಾ ಗುರೂಣಾಂ ಭಕ್ತ ವತ್ಸಲ । ಶರೀರಮರ್ಥಪ್ರಾಣಂಚ । ಸದ್ಗುರುಭ್ಯೋ ನಿವೇದಯೇತ್. ತನುವರ್ಪಿತ ಗುರುವಿಗೆ ಮನವರ್ಪಿತ ಲಿಂಗಕ್ಕೆ ಧನವರ್ಪಿತ ಜಂಗಮಕ್ಕೆ ಇಂತೀ ತ್ರಿವಿಧವನರ್ಪಿಸಿದ ಅರ್ಪಣೆಯನು ಮರಳಿ ಆಸೆಗೈದನಾದಡೆ ನರಕದಲ್ಲಿಕುವ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಪ್ರಸಾದವನ್ನು ಅರ್ಪಿಸುವಲ್ಲಿ ಲಿಂಗ ಮತ್ತು ಅರ್ಪಣ ಇವುಗಳಲ್ಲಿ ಸಮರಸಭಾವವಿರುತ್ತದೆ. ಈ ರೀತಿಯಾಗಿ ಗುರುಲಿಂಗ ಜಂಗಮಕ್ಕೆ ತನು ಮನ ಧನಗಳನ್ನು ಅರ್ಪಿಸಬೇಕು. ಆದರೆ ಹೀಗೆ ಅರ್ಪಿಸುವಲ್ಲಿ ಕಾಮರಹಿತನಾಗಿರಬೇಕು.

**ವಚನಃ**— ೧೧೨. ಲಿಂಗಪ್ರಸಾದದಲ್ಲಿ ಸುಯಿಧಾನಿಯಾಗದವರಲ್ಲಿ ಜಂಗಮವೆಂದು ಪ್ರಸಾದವ ಕೊಳ್ಳಲಾಗದು. ಅದೇನು ಕಾರಣವೆಂದರೆ ತಾನುಂಬುವುದು ಎಂಜಲು. ಪರರಿಗಿಕ್ಕುವದು ಪ್ರಸಾದವೇ ? ಬಿಡುಬಿಡು, ಸುಡುಸುಡು. ಈ ಕಷ್ಟದ ನುಡಿಯು ಕೇಳಲಾಗದು. ಪರುಷ ನಿರ್ಮಲವಾ

ವಲ್ಲದೆ, ಅದು ಲೋಹದ ದುರ್ಗುಣವ ಕೆಡಿಸಲರಿಯದು. ಜಂಗಮ ನಾಗಿಯಲ್ಲದೆ ತಾ ಭಕ್ತನಾಗಲರಿಯ. ಮಡಿಯರ್ಥ, ವೈಲಿಗೆಯರ್ಥ ವಾದರೆ ಕೆಡಹಿ ನಾಯಕ ನರಕದಲ್ಲಿಕ್ಕದೆ ಬಿಡುವನೆ ನಮ್ಮ ಉರಿಲಿಂಗ ಸಿದ್ಧಿಪ್ರಿಯವಿಶ್ವೇಶ್ವರಾ?

**ಭಾವ:**— ಪ್ರಸಾದದಲ್ಲಿ ಗುರುಪ್ರಸಾದ, ಲಿಂಗಪ್ರಸಾದ, ಜಂಗಮ ಪ್ರಸಾದವೆಂದು ತ್ರಿವಿಧಗಳುಂಟು. ಜಂಗಮವು ಲಿಂಗಪ್ರಸಾದದಲ್ಲಿ ಪರಿ ಣಾಮಿಯಾಗಬೇಕು. ಅಂದರೆ ಮಾತ್ರ ಜಂಗಮಪ್ರಸಾದವು ಸಲ್ಲುವದು. ಇಲ್ಲದಿದ್ದರೆ ಅದು ಎಂಜಲು ಮಾತ್ರವೇ ಹೊರ್ತು ಪವಿತ್ರವಾದುದಲ್ಲ. ಹೀಗೆ ಪವಿತ್ರವಾದುದನ್ನು ಭಕ್ತನು ಸೇವಿಸಿದ್ದಾದರೆ ಅವನಲ್ಲಿ ಜಂಗಮವು ನೆಲೆಗೊಂಡು ನಿಜಭಕ್ತನೆನಿಸಿಕೊಳ್ಳುವನು.

**ವಚನ:**— ೧೧೩. ಲಿಂಗದೊಡನೆ ಸಹಭೋಜನವ ಮಾಡುವ ಸದ್ಭಕ್ತನ ಆಚರಣೆ-ಕ್ರಿಯೆಗಳೆಂತುಟಯ್ಯಾ ಎಂದರೆ ಲಿಂಗಜಂಗಮದ ಕುಂದು ನಿಂದೆಯುಂ ಕೇಳಲಾಗದು. ಕೇಳಿದಡೆ ಆ ನಿಂದಕನಂ ಕೊಲುವುದು. ಕೊಲ ಲಾರದಿರ್ದಡೆ ತನ್ನ ತಾನಿರಿದುಕೊಂಡು ಸಾವುದು. ಸಾಯಲಾರದಿರ್ದೊಡೆ ಅವನ ಬಯ್ಯುವುದು. ತನ್ನ ಅರ್ಥಪ್ರಾಣಾಭಿಮಾನವು ಶಿವಾರ್ಪಣವಾಯಿ ತ್ತೆಂದು ಮನದಲ್ಲಿ ಸಂತೋಷವ ತಾಳಿದಡೆ ಪ್ರಸಾದವುಂಟು, ಇಂತಲ್ಲದೆ ಮನದಲ್ಲಿ ನೋವ ತಾಳಿದಡೆ ಆಚಾರಭ್ರಷ್ಟನು. ಎನ್ನ ಮನೆ, ಎನ್ನ ಧನ, ಎನ್ನ ಸತಿಯೆಂಬನ್ನಕ್ಕರ ಅವನು ಭವಿಯ ಸಮಾನ. ಭಕ್ತನಲ್ಲ, ಪ್ರಸಾದಿ ಯಲ್ಲ, ಶೀಲವಂತನಲ್ಲ. ಅವಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದತೀರ್ಥವಿಲ್ಲ, ಪ್ರಸಾದ ಮುನ್ನವೇ ಇಲ್ಲ. ಅವಗೆ ಕುಂಭೀಪಾತಕ ನಾಯಕ ನರಕ ತಪ್ಪದು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ಪ್ರಸಾದವನ್ನು ಅನುಭವಿಸುವಂಥ ಲಿಂಗಾನುಭಾವಿಯು ಗುರುಲಿಂಗಜಂಗಮದ ನಿಂದೆಯನ್ನು ಕೇಳಲಾಗದು. ಅವನು ಧೈರ್ಯ ಶಾಲಿಯಾಗಿರತಕ್ಕದ್ದು. ಪ್ರಸಾದನಿಂದಕರನ್ನು ಸಂಹರಿಸಲು ಹಿಂಜರಿಯ ಕೂಡದು. ಹೀಗೆ ಸಂಹರಿಸಲಾರದಿದ್ದಡೆ, ತನ್ನನ್ನೇ ಇರಿದುಕೊಂಡು ಸಾಯುವುದು. ಇಂಥವರಿಗೆ ಪ್ರಸಾದವಿದೆ. ಇಲ್ಲದಿದ್ದರೆ ಅವರು ಆಚಾರ ಭ್ರಷ್ಟರು ಎಂದು ಹೇಳಿರುವನು.

**ವಚನ:**— ೧೧೪. ವಿಶ್ವಾಸವೇ ಭಕ್ತಿ, ಗುರುಲಿಂಗಜಂಗಮ ಒಂದೆಂದರಿವುದೇ ಜ್ಞಾನ, ತ್ರಿವಿಧದಲ್ಲಿ ನಿರ್ವಂಚನೆಯೇ ವೈರಾಗ್ಯ, ಪ್ರಸಾ

ದವೇ ಮುಕ್ತಿ. ಇದು ಸತ್ಯ ಶಿವ ಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ವಿಶ್ವಾಸವುಳ್ಳವನಾಗಿರಬೇಕು. ಗುರುಲಿಂಗ ಜಂಗಮಗಳು ಒಂದೇ ಎಂದು ಅರಿಯಬೇಕು. ಅವುಗಳಲ್ಲಿ ನಿರ್ವಂಚಕನಾಗಿ ವ್ಯವಹರಿಸಬೇಕು. ಇದೇ ವೈರಾಗ್ಯವು. ಅವುಗಳ ಪ್ರಸಾದಸೇವನೆಯೇ ಮುಕ್ತಿ. ಇದು ಸತ್ಯವೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

---

# ಕರಣಾರ್ಪಣ.

**ವಿವರಣೆ:**— ಗುರುಲಿಂಗ ಜಂಗಮದಲ್ಲಿ ಸಮರಸವಾದವನಲ್ಲಿ ಲಿಂಗವು ನೆಲೆಗೊಳ್ಳುವದು. ಈ ಸ್ಥಿತಿಯಲ್ಲಿ ಅವನ ಷಡಿಂದ್ರಿಯ ವಿಷಯಗಳು ಆಯಾ ಇಂದ್ರಿಯಗಳ ಮುಖಾಂತರವಾಗಿ ಆಯಾ ಲಿಂಗಗಳಿಗೆ ಅರ್ಪಿತವಾಗುತ್ತವೆ. ಹೀಗೆ ಅರ್ಪಿತವಾಗಿ ಅನುಭವಿಸಿದ್ದಾದರೆ ಲೌಕಿಕೇಚ್ಛೆಗಳು ಉಳಿಯುವು. ಸಹಜಸುಖವೆಂಬುದು ನೆಲೆಗೊಳ್ಳುವದು. ಹಾಗೂ ಷಟ್‌ಸ್ಥಲಗಳು ಅವನಲ್ಲಿ ಪರಿಪೂರ್ಣತೆಯನ್ನು ಹೊಂದುವವು.

**ವಚನ:**— ೧೧೫. ಪೃಥ್ವಿಯಂಗ ಚಿತ್ತ ಹಸ್ತ ನಾಸಿಕ ಮುಖ ಗಂಧ ಪದಾರ್ಥ ಆಚಾರಲಿಂಗಕರ್ಪಿತ, ಭಕ್ತ. ಅಪ್ಪುವಂಗ ಬುದ್ಧಿ ಹಸ್ತ ಜಿಹ್ವೆ ಮುಖ ರುಚಿ ಪದಾರ್ಥ ಗುರುಲಿಂಗಕರ್ಪಿತ, ಮಹೇಶ್ವರ. ಅನಲಸಂಗ ನಿರಹಂಕಾರ ಹಸ್ತ ನೇತ್ರ ಮುಖ ರೂಪು ಪದಾರ್ಥ ಶಿವಲಿಂಗಕರ್ಪಿತ, ಪ್ರಸಾದಿ. ಪವನನಂಗ, ತ್ವಕ್ಕು ಮುಖ, ಸ್ಪರ್ಶ ಪದಾರ್ಥ ಜಂಗಮಲಿಂಗಕರ್ಪಿತ, ಪ್ರಾಣಲಿಂಗಿ. ವ್ಯೋಮಾಂಗ ಜ್ಞಾನಹಸ್ತ ಶ್ರೋತ್ರ ಮುಖ ಶಬ್ದ ಪದಾರ್ಥ ಪ್ರಸಾದಲಿಂಗಕರ್ಪಿತ, ಶರಣ. ಹೃದಯಾಂಗ ಭಾವ ಹಸ್ತ, ಅರ್ಥಮುಖ, ಪರಿಣಾಮ ಪದಾರ್ಥ, ಮಹಾಲಿಂಗಕರ್ಪಿತ, ಐಕ್ಯ. ಇಂತೀ ಷಟ್‌ಸ್ಥಲವಳವಟ್ಟಾತನು ಪರಶಕ್ತಿ ಸ್ವರೂಪನು ಆತನು ನಿಜ ಶಿವಯೋಗಸಂಪನ್ನನು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ಗಂಧ, ರುಚಿ, ರೂಪು, ಸ್ಪರ್ಶ, ಶಬ್ದ, ಮತ್ತು ಪರಿಣಾಮಗಳು ಮನುಷ್ಯನಿಗೆ ತಟ್ಟುತ್ತವೆ. ಅವು ತಟ್ಟಿದ ಹಾಗೆ ಅವುಗಳಲ್ಲಿ ಲೋಲುಪನಾಗದೆ ಅವುಗಳನ್ನು ಲಿಂಗಗಳಿಗೆ ಅರ್ಪಿಸಿ ಅನುಭವಿಸಬೇಕು. ಈ ಅರ್ಪಣವನ್ನು ನಾಸಿಕಮುಖವಾದ ಆಚಾರಲಿಂಗ, ಜಿಹ್ವಾಮುಖವಾದ ಗುರುಲಿಂಗ, ನೇತ್ರಮುಖವಾದ ಶಿವಲಿಂಗ, ತ್ವಕ್ಕುಮುಖವಾದ ಜಂಗಮಲಿಂಗ, ಶ್ರೋತ್ರಮುಖವಾದ ಪ್ರಸಾದಲಿಂಗ, ಅರ್ಥಮುಖವಾದ ಮಹಾಲಿಂಗ ಇವುಗಳಿಗೆ ಮಾಡಬೇಕು. ಹೀಗೆ ಅರ್ಪಣ ಮಾಡುವಲ್ಲಿ ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನ, ಭಾವ ಇವುಗಳ ಕ್ರಿಯೆಗಳಿಂದಲೇ ಅದು ಆಗಬೇಕು. ಹೀಗೆ ಮಾಡಿದ್ದಾದರೆ ಪಂಚ ಭೂತಗಳಿಂದ ಆದ ಶರೀರವು ನಷ್ಟವಾಗಿ ಷಟ್‌ಸ್ಥಲಗಳು ಅವನಲ್ಲಿ ನೆಲೆಗೊಳ್ಳುತ್ತವೆ. ಹೀಗೆ ಆಚರಿಸುವವನೇ ಶಿವಯೋಗಿಯು ಎಂದು ವಚನಕಾರನು ಹೇಳಿದ್ದಾನೆ.

**ವಚನ**:— ೧೧೬. ನೇತ್ರದಲ್ಲಿ ಷಡುವರ್ಣ ಸಂಬಂಧವಹ ಪವಿತ್ರ ಅಪವಿತ್ರವನರಿದು ಮಹತ್ಪವಿತ್ರವ ಮಾಡಿ ನೇತ್ರದ ಕೈಯ್ಯಲ್ಲಿ ಲಿಂಗನೇತ್ರಕ್ಕೆ ಅಪ್ಪಿ ಸುಳಿವಲ್ಲಿ ನೇತ್ರೋದಕವು. ಶ್ರೋತ್ರದಲ್ಲಿ ಶಬ್ದ ಕುಶಬ್ದವ ನರಿದು ಮಹಾಶಬ್ದದಲ್ಲಿ ವರ್ತಿಸಿ ಶ್ರೋತ್ರದ ಕೈಯಲ್ಲಿ ಲಿಂಗಶ್ರೋತ್ರಕ್ಕೆ ಅರ್ಪಿಸುವಲ್ಲಿ ಶ್ರೋತ್ರೋದಕವು. ಘ್ರಾಣದಿಂದ ಸುಗಂಧ ದುರ್ಗಂಧವ ನರಿದು ಮಹಾಗಂಧವ ಮಾಡಿ ಘ್ರಾಣದ ಕೈಯ್ಯಲ್ಲಿ ಲಿಂಗ ಘ್ರಾಣಕ್ಕರ್ಪಿ ಸುವಲ್ಲಿ ಘ್ರಾಣೋದಕವು. ಜಿಹ್ವೆಯಿಂದ ಮಧುರ ಆಮ್ಲ ಲವಣ ತಿಕ್ತ ಕಟು ಕಷಾಯವೆಂಬ ಷಡ್ರುಚಿಯನರಿದು ಮಹಾ ರುಚಿಯ ಮಾಡಿ ಜಿಹ್ವೆಯ ಕೈಯ್ಯಲ್ಲಿ ಲಿಂಗ ಜಿಹ್ವೆಗರ್ಪಿಸುವಲ್ಲಿ ಜಿಹ್ವೋದಕವು. ಸ್ಪರ್ಶನದಿಂದ ಸುಶೀ ತೋಷ್ಣವನರಿದು ಇಚ್ಛೆಯ ಕಾಲವನರಿದು ಮಹಾ ಸ್ಪರ್ಶನವ ಮಾಡಿ ಸ್ಪರ್ಶ ನದ ಕೈಯ್ಯಲ್ಲಿ ಲಿಂಗಸ್ಪರ್ಶನಕ್ಕರ್ಪಿಸುವಲ್ಲಿ ಸ್ಪರ್ಶನೋದಕವು. ಸದ್ಭಕ್ತಿಯಿಂದ ಪಾದಾರ್ಚನೆಯ ಮಾಡುವಲ್ಲಿ ಪಾದೋದಕವು. ಸ್ನೇಹದಿಂದ ಮಜ್ಜನಕ್ಕೆ ರೆವಲ್ಲಿ ಮಜ್ಜನೋದಕವು. ಆರೋಗಣೆಯಲ್ಲಿ ಅರ್ಪಿಸಿದುದು ಅರ್ಪಿತೋ ದಕವು. ಆರೋಗಣೆಯ ಮೇಲೆ ಹಸ್ತಕ್ಕೆರೆದುದು ಹಸ್ತೋದಕವು. ಗುರುಲಿಂಗ ಶಿವಲಿಂಗ ಜಂಗಮಲಿಂಗ ಒಂದೇ ಎಂದರಿದು ಸರ್ವಕ್ರಿಯಾ ಕರ್ಮವೆಲ್ಲ ಸಂಬಂಧವ ಮಾಡಿ ಪ್ರಯೋಗಿಸುವುದು ಸತ್ಯೋದಕವು. ಈ ದಶೋದಕದ ಕ್ರಮವರಿದು ವರ್ತಿಸುವುದು ಆಗಮಾಚಾರ, ಕ್ರಿಯಾ ಸಂಪತ್ತು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ**:— ಈ ವಚನವು ಕ್ರಿಯಾ ವಿಷಯಕವಾಗಿರುವದು. ಅರ್ಪ ಣವನ್ನು ಪೂಜಾ ಕಾಲದಲ್ಲಿ ಹೇಗೆ ಮಾಡಬೇಕೆಂಬದನ್ನು ಇಲ್ಲಿ ವಚನ ಕಾರನು ವಿವರಿಸಿದ್ದಾನೆ. ಉದಕದ ಮುಖಾಂತರ ಅರ್ಪಣ ಮಾಡುವ ವಿಧವು ಇದರಲ್ಲಿ ಹೇಳಲ್ಪಟ್ಟಿದೆ. ಈ ಉದಕವು ಪೂಜಾ ಕಾಲದಲ್ಲಿ ಹತ್ತು ವಿಧವಾಗುತ್ತದೆ. ಈ ವಿಧಗಳು ಯಾವವೆಂದರೆ, ನೇತ್ರೋದಕ ಶ್ರೋತ್ರೋದಕ, ಘ್ರಾಣೋದಕ, ಜಿಹ್ವೋದಕ, ಸ್ಪರ್ಶನೋದಕ, ಪಾದೋ ದಕ, ಮಜ್ಜನೋದಕ, ಅರ್ಪಿತೋದಕ, ಹಸ್ತೋದಕ, ಸತ್ಯೋದಕ ಎಂದು ಇವೆ.

**ವಚನ**:— ೧೧೭. ಸ್ತನಾಮೃತವ ಸೇವಿಸುವ ಶಿಸು ಸಕ್ಕರೆಯ ನಿಚ್ಛೈಸುವುದೇ? ಪರುಷ ದೊರೆಕೊಂಡ ಪುರುಷನು ಜಲಗರವ ತೊಳೆಯ ಲಿಚ್ಛೈಸುವನೇ? ಸೋಹವ ಮಾಡುವ ಭಕ್ತನು ಮುಕ್ತಿಯನಿಚ್ಛೈಸುವನೇ? ಇವರು ಮೂವರಿಗಿನ್ನಾವುದೂ ಇಚ್ಛೆ ಇಲ್ಲ. ರುಚಿ ಪದಾರ್ಥವಿದ್ದಂತೆ ಇದ್ದ ಪರಿಯು ಸಹಜ ಸುಖವಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ—** ಉಚ್ಚ ಧ್ಯೇಯವುಳ್ಳವನು ಕಿರಿದಾದುದನ್ನು ಬಯಸನು. ಕಿರಿದಾದುದನ್ನು ತನ್ನ ಮೇಲ್ಮೆಗಾಗಿ ಉಪಯೋಗಿಸುವನೇ ಹೊರ್ತು ಅದರೊಳಗಿರುವದಿಲ್ಲ. ಇದೇ ಅವನ ಸಹಜ ಸುಖವಾಗಿದೆ.

**ವಚನಃ—** ೧೧೮. ಆಸರಿನ ಭಕ್ತಿಯು ಜಡರುಗಳು ಬೇಸತ್ತು ಜಂಗಮುಕ್ಕೆರಗಿ ಪಾದಪ್ರಕ್ಷಾಲನವಂ ಮಾಡಿ ಪಾದೋದಕವ ಧರಿಸುತ್ತಿಪ್ಪರು. ಆವುದು ಕ್ರಮವೆಂದರಿಯರು. ಅರಿವರೆ ಪಾದೋದಕ. ಅರಿಯದಿದ್ದರೆ ಬರಿ ನೀರೆಂದರಿಯರು. ಆರಿದರಿದು ಬರುದೊರೆವೋದರು ಮಾನವರೆಲ್ಲರು. ಅರಿವು ಸಾಮಾನ್ಯವೆ? ಅಂದೆಂತೆಂದರೆ, ಶಿವಾತ್ಮಕ ಪದದ್ವಂದ್ವಂ। ಪ್ರಕ್ಷಾಲನ ಜಲಂ ನರಾಃ। ಏ ಪಿಬಂತಿ ಪುನಸ್ತಸ್ಯ। ನ ಪಿಬಂತಿ ಕದಾಚನ। ಇಂತೆಂದುದಾಗಿ ಇದ ಕೇಳಿ ನಂಬುವುದು. ನಂಬದಿರ್ದಡೆ ಮುಂದೆ ಭವ ಘೋರ ನರಕ ತಪ್ಪದು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಉಚ್ಚ ನೀಚ ಭಾವವು ಮನಸಿದ್ದಂತೆ ಇರುತ್ತದೆ. ಪಾದೋದಕದ ರೀತಿಯು ಹೀಗೆಯೇ ಇದೆ. ನಂಬಿದರೆ ಅದು ಪಾದೋದಕವೆನಿಸಿಕೊಳ್ಳುವದು. ಅದೊಂದು ಶ್ರೇಷ್ಠ ವಸ್ತುವು. ನಂಬದಿದ್ದರೆ ಅದು ಬರೀ ನೀರು. ನಂಬದೆ ಪಾದೋದಕವನ್ನು ಕೊಂಡರೆ ನಾಯಕ ನರಕ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನಃ—** ೧೧೯. ಅರಿಷಡ್ವರ್ಗದುರವಣೆಗೊಳಗಾಗನಾಗಿ ಭಕ್ತ ಕಾಯನಾದ. ಪಂಚೇಂದ್ರಿಯಂಗಳ ಬಳಸನಾಗಿ ಗುರು ಭಕ್ತನಾದ. ಸಪ್ತ ಧಾತುವಿನ ಗುಣವಿಡಿಯನಾಗಿ ಸಮಯಾಚಾರಿಯಾದ. ಅಷ್ಟ ಮದಗಜದ ಬಟ್ಟೆಯ ಮೆಟ್ಟನಾಗಿ ಆಚಾರವಂತನಾದ. ಕರ್ಮಕಾಂಡದಲ್ಲಿ ಬಳಿಸಲ್ಲನಾಗಿ ಸತ್ಯ ನಿತ್ಯ ನಿರ್ಮಳನಾದ. ಜ್ಞಾನಕಾಂಡದಲ್ಲಿ ಹೂಣು ಹೊಕ್ಕನಾಗಿ ಭಕ್ತಿಯೆಂಬಚ್ಚಾದ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಯ್ಯನು.

**ಭಾವಃ—** ಮನುಷ್ಯನನ್ನು ಅರಿಷಡ್ವರ್ಗಗಳು, ಪಂಚೇಂದ್ರಿಯಗಳು, ಅಷ್ಟಮದಗಳು, ನಾನಾ ಬಗೆಯ ಕರ್ಮಗಳು ಸುತ್ತಿ ಬಳಲಿಸುತ್ತವೆ. ಆದರೆ ಶರಣನು ಇವುಗಳ ಹಿಡಿತಕ್ಕೆ ಒಳಗಾಗದೆ, ಜ್ಞಾನದಲ್ಲಿ ಸುಳಿಯುತ್ತಾನೆ. ಮತ್ತು ಭಕ್ತಿಯಲ್ಲಿ ನೆಲೆಯೂರಿರುತ್ತಾನೆಂದು ಇಲ್ಲಿ ವಚನಕಾರನು ಹೇಳಿದ್ದಾನೆ.

# ಜಾತಿಭೇದ.

**ವಿವರಣೆ:—** ವೀರಶೈವರಲ್ಲಿ ಜಾತಿ ಭೇದವಿಲ್ಲ. ಈ ಅಭಿಪ್ರಾಯವನ್ನು ಎಲ್ಲ ವಚನಕಾರರು ತಮ್ಮ ವಚನಗಳಲ್ಲಿ ಸಮರ್ಥಿಸುವದುಂಟು. ಅವರಲ್ಲಿ ಈ ಬಗ್ಗೆ ಯಾವ ಬಗೆಯ ಮತಭೇದವು ಇರುವದಿಲ್ಲ. ಉರಿಲಿಂಗ ಪೆದ್ದಿಯು ಈ ವಿಷಯದ ಬಗ್ಗೆ ಕೆಳಗಿನ ವಚನಗಳಲ್ಲಿ ಅನೇಕ ಆಧಾರಗಳೊಡನೆ ಹೇಳಿರುವನು.

**ವಚನ:—** ೧೨೦. ವಶಿಷ್ಠಗೋತ್ರದಲ್ಲಿ ಹುಟ್ಟಿದವನು ವಶಿಷ್ಠಗೋತ್ರನೆಂಬಂತೆ, ಬಾರದ್ವಾಜಗೋತ್ರದಲ್ಲಿ ಹುಟ್ಟಿದವನು ಭಾರದ್ವಾಜಗೋತ್ರದವನೆಂಬಂತೆ, ಕಾಶ್ಯಪ ಗೋತ್ರದಲ್ಲಿ ಹುಟ್ಟಿದವನು ಕಾಶ್ಯಪಗೋತ್ರದವನೆಂಬಂತೆ, ವಿಶ್ವಾಮಿತ್ರ ಗೋತ್ರದಲ್ಲಿ ಹುಟ್ಟಿದವನು ವಿಶ್ವಾಮಿತ್ರ ಗೋತ್ರದವನೆಂಬಂತೆ, ಆ ಪರಿ ಆವಾವ ಗೋತ್ರದಲ್ಲಿ ಆವಾವ ಋಷಿಗಳ ವಂಶದಲ್ಲಿ ಜನಿಸಿದವರನು ಆ ಗೋತ್ರ, ಆ ಸಂತತಿ, ಆ ಸುತನು ಎಂಬುದು ಉಪಚರ್ಯವೇ? ಅಸತ್ಯವೇ ಹೇಳಿರಣ್ಣಾ? ಅದು ತಾತ್ಪರ್ಯ, ಅದು ಸತ್ಯ. ಆ ಪರಿ ಬ್ರಾಹ್ಮಣನ ಮಗ ಬ್ರಾಹ್ಮಣನು; ಕ್ಷತ್ರಿಯನ ಮಗ ಕ್ಷತ್ರಿಯನು; ವೈಶ್ಯನ ಮಗ ವೈಶ್ಯನು; ಶೂದ್ರನ ಮಗ ಶೂದ್ರನು; ಆ ಪರಿ ತಪ್ಪದು. ದಿಟದಿಟ ವಿಚಾರಿಸಿ ನೋಡಿರೇ. ಅದು ಹೇಗೆಂದರೆ! ಶೃತಿ ॥ಶ್ಲೋ॥ "ಮಹಾ ಬ್ರಾಹ್ಮಣ ಮೀಶಾನಂ" ಎಂದುದಾಗಿ ಮತ್ತಂ। "ವಿರೂಪಾಕ್ಷಂ ದ್ವಿಜೋತ್ತಮಂ" ಎಂದುದಾಗಿ ಮಹಾಬ್ರಾಹ್ಮಣನೇ ಮಹಾದೇವನು. ಇದಕ್ಕೆ ಮತ್ತೆ ಶಿವರಹಸ್ಯದಲ್ಲಿ ॥ ಗುರುದೇವೊ ಮಹಾದೇವೋ ಗುರುದೇವಸ್ಸದಾಶಿವಃ। ಗುರುದೇವಃ ಪರಂ ತತ್ವಂ ತಸ್ಮೈ ಶ್ರೀಗುರವೆ ನಮಃ ಎಂದುದಾಗಿ, ಮಹಾದೇವನೇ ಶ್ರೀಗುರು ಕಾಣರಣ್ಣಾ! ಆ ಶ್ರೀಗುರುವಿನ ಕರಕಮಲದಲ್ಲಿ ಉದ್ಭವಿಸಿದ ತಚ್ಛಿಷ್ಯನೇ ಮಹಾ ಬ್ರಾಹ್ಮಣನು ಇಂತೆಂಬುದು ಹುಸಿಯಲ್ಲ, ಜಾತಿ ಅಜಾತಿ ಎಂದು ಅಷ್ಟಾದಶಜಾತಿಯೊಳಗೆ ಇಕ್ಕಲಾಗದು. ಅಷ್ಟಾದಶ ಜಾತಿಯೊಳಗೊಂದೂ ಭಾವಿಸಲಾಗದು. ಆ ಮಹಿಮನೇ ಸತ್ಕುಲಜನು. ಇದಕ್ಕೆ ಮತ್ತಂ "ಬ್ರಹ್ಮಚರತಿ ಬ್ರಾಹ್ಮಣಃ" ಎಂದುದಾಗಿ ಆ ಮಹಾಮಹಿಮನು ಬ್ರಹ್ಮವ ಆಚರಿಸುವನಾತ ಬ್ರಾಹ್ಮಣ. ಮತ್ತಂ ಕೂರ್ಮ ಪೂರಾಣದಲ್ಲಿ ॥ "ಸ ಏವ ಭಸ್ಮ

ಜ್ಯೋತಿಃ" ಎಂದುದಾಗಿ ವಿಭೂತಿಯ ಧರಿಸಿಪ್ಪವನಾಗಿ ಆ ಮಹಾತ್ಮನೇ ಜ್ಯೋತಿರ್ಲಿಂಗವು. ಮತ್ತಂ ಶಿವಧರ್ಮದಲ್ಲಿ "ರುದ್ರಾಕ್ಷಂ ಧಾರಯನ್ನಿತ್ಯಂ ರುದ್ರಸ್ಸಾಕ್ಷಾದಿವ ಸ್ಮೃತಃ" ಎಂದುದಾಗಿ ರುದ್ರಾಕ್ಷಿಯಂ ಧರಿಸಿಪ್ಪನಾಗಿ ಆ ಮಹಾಮಹಿಮನೇ ರುದ್ರನು. ಮತ್ತಂ ಕಾಳಿಕಾಗಮದಲ್ಲಿ "ತಸ್ಮಿ ನ್ವೇದಾಶ್ಚ ಶಾಸ್ತ್ರಾಣಿ ಮಂತ್ರ ಪಂಚಾಕ್ಷರೀ ತಥಾ" ಎಂದುದಾಗಿ ಶ್ರೀಪಂಚಾಕ್ಷರಿಯ ಜಪಿಸುವನಾಗಿ ಆ ಮಹಾಮಹಿಮನೇ ವೇದವಿತ್ತು, ಶಾಸ್ತ್ರಜ್ಞನು. ಮತ್ತಂ ಲೈಂಗ್ಯೆ ॥ಶ್ಲೋ॥ ಮೂಢನಾಮಪ್ಯಯುಕ್ತಾನಾಂ ಪಾಪಿನಾಂ ಚಾಭಿಚಾರಿಣಾಂ॥ ಯಮಲೋಕೋ ನ ವಿದ್ಯತೆ ಸದಾ ವೈ ಲಿಂಗ ಧಾರಣಾತ್ ॥ ಎಂದುದಾಗಿ ಲಿಂಗವ ಧರಿಸಿಪ್ಪನಾಗಿ ಆ ಮಹಾಮಹಿಮನೇ ಲಿಂಗದೇಹಿ, ಲಿಂಗಕಾಯನು, ಲಿಂಗಪ್ರಾಣನು. ಶಿವಲಿಂಗಾರ್ಚನೆಯಂ ಮಾಡುವನಾಗಿ ಆ ಮಹಾಮಹಿಮನೇ ಶಿವನು. ಮತ್ತಂ, ಆದಿತ್ಯ ಪುರಾಣೇ "ಅಕೃತ್ವಾ ಪೂಜನಂ ಶಂಭೋಃ ಯೋ ಭುಂಕ್ತೆ ಪಾಪಕೃದ್ದ್ವಿಜಃ। ಕುಣಪಂಚ ಮಲಂ ಚೈವ ಸಮಶ್ನಾತಿ ದಿನೇ ದಿನೇ" ಎಂದುದಾಗಿ ಶಿವ ಲಿಂಗಕ್ಕೆ ಅರ್ಪಿಸದೆ ಕೊಳ್ಳನಾಗಿ ಆ ಮಹಾ ಮಹಿಮನೇ ರುದ್ರನು. ಮತ್ತಂ ಶಾಂಕರ ಸಂಹಿತೆಯಲ್ಲಿ ॥ಶ್ಲೋ॥ ತಿಲಷೋಡಶಭಾಗಂ ತು ತೃಣಾಗ್ರಾಂಬು ಕಣೋಪಮಂ। ಪಾದೋದಕ ಪ್ರಸಾದಾನಾಂ ಸೇವನಾ ನ್ಮೋಕ್ಷಮಾಪ್ನುಯಾತ್ ॥ ಎಂದುದಾಗಿ ಪಾದೋದಕ ಪ್ರಸಾದವಂ ಕೊಂಬನಾಗಿ ಆ ಮಹಾತ್ಮನು ತಾನೇ ಲಿಂಗೈಕ್ಯನು. ಇನ್ನು ನಾನಾ ವೇದ ಶಾಸ್ತ್ರ ಪುರಾಣಾಗಮಂಗಳ ಸಮ್ಮತ ದೃಷ್ಟ ವಾಕ್ಯಂಗಳನು ವಿಚಾರಿಸಿ ನೋಡಿದರೆಯೂ ಶಿವಭಕ್ತನೇ ಕುಲಜನು. ಶಿವಭಕ್ತನೇ ಉತ್ತಮನು. ಇಂಥಾ ಶಿವಭಕ್ತನನು ಜಾತಿ ವಿಜಾತಿ ಎಂದು ಭಾವಿಸಿದರೆ, ಮರ್ತ್ಯ ನೆಂದು ಭಾವಿಸಿದರೆ, ನರಕ ತಪ್ಪದು. ವಶಿಷ್ಠ ಪುರಾಣದಲ್ಲಿ ಕೇಳಿರೇ ॥ಶ್ಲೋ॥ ಮರ್ತ್ಯವನ್ಮನುತೆ ಯಸ್ತು ಶಿವನಿಷ್ಠಂ ದ್ವಿಜಂ ನರಃ। ಕುಂಭೀ ಪಾಕೇಷು ಪತತಿ ನರಕೆ ಕಾಲಮಕ್ಷಯಂ॥ ಎಂದುದಾಗಿ ಇದು ಕಾರಣ ಅಷ್ಟಾದಶ ವಿದ್ಯಂಗಳನು ವಿಚಾರಿಸಿ ತಿಳಿದು ನೋಡಿದರೆ ಋಷಿ ಪುತ್ರನ ಋಷಿ ಎಂಬಂತೆ ಶ್ರೀಗುರು ಪುತ್ರನನು ಶ್ರೀಗುರು ಎಂಬುದಯ್ಯಾ. ಆ ಮಹಾಮಹಿಮನ ದರ್ಶನವ ಮಾಡಿ ಪಾದೋದಕ ಪ್ರಸಾದವ ಕೊಂಡು ಮುಕ್ತರಪ್ಪುದಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:—** ವಚನಕಾರನು ಯಾರಲ್ಲಿ ಯಾವನು ಹುಟ್ಟಿರುವನೋ ಅವನು ಅವರ ಮಗನೆನ್ನುವದು ಸತ್ಯವು ಎಂದು ಹೇಳಿ, ವೀರಶೈವನು ಗುರುವಿನಲ್ಲಿ ಹುಟ್ಟಿರುವನಾದ್ದರಿಂದ ಅವನು ಗುರುವಿನ ಮಗನಾಗುವನು. ಇಂಥವನನ್ನು ಹದಿನೆಂಟು ಜಾತಿಗಳಲ್ಲಿ ಒಂದು ಜಾತಿಯುವನೆಂದು ಭಾವಿಸ ಬಾರದು. ಅವನು ಶ್ರೇಷ್ಠ ಕುಲದವನು. ಅವನು ಲಿಂಗದೇಹಿಯಾದ್ದರಿಂದ ಅವನು ಮಹಿಮನೆಂದು ತಿಳಿಯಬೇಕು. ಅವನ ಪಾದೋಕವನ್ನು ಸ್ವೀಕ ಸಬೇಕೆಂದು ಇಲ್ಲಿ ಹೇಳಿರುವನು.

**ವಚನ:—** ೧೨೧. ಶಿವಶಿವಾ ಭಕ್ತಿ ಹೀನನ ಬಟ್ಟೆಯಲ್ಲಿ ಕಂಡು ನೆಟ್ಟನೆ ಶಿವಭಕ್ತ ಜೋಹಾರ ಎಂದಡೆ, ಸುರಾಪಾನದಲ್ಲಿ ಮಜ್ಜನ ಮಾಡಿದಂತಾಯಿತ್ತು ಅವನ ಶಿವಪೂಜೆ. ಕಟ್ಟಿದ ಕೆರೆಯನೊಡೆದಂತಾಯಿ ತ್ತವನ ಶಿವಪೂಜೆ. ಅಮೇಧ್ಯವ ಭುಂಜಿಸಿದಂತಾಯಿತ್ತು ಅವನ ಶಿವ ಪೂಜೆ. ಹೇರೊಳಗಣ ಹುಳವ ಕೋಳಿ ಕೆದರಿದಂತಾಯಿತ್ತದವನ ಶಿವ ಪೂಜೆ. ಒಣಗಿದೆಲುವ ಸೊಣಗ ಕಡಿದು ತನ್ನ ರಕ್ತವ ತಾನೇ ಭುಂಜಿಸಿ ದಂತಾಯಿತ್ತವನ ಶಿವಪೂಜೆ. ಅವನ ಸರ್ವಾಂಗವು ಪಾಕುಳದ ಕುಳಿಯಂತಾ ಯಿತ್ತು, ಕನ್ನಡಿಯ ಮೇಲೆ ಉದ್ಧುರುಳಿದಂತಾಯಿತ್ತವನ ಶಿವಪೂಜೆ. ಆರೆಯ ಮೇಲೆ ಆಡು ಹಿಕ್ಕೆಯನಿಟ್ಟಂತಾಯಿತ್ತು ಅವನ ಶಿವಪೂಜೆ. ಲೋಳಿಸರದ ಮೇಲೆ ಬಂಡಿ ಹರಿದಂತಾಯಿತ್ತವನ ಶಿವಪೂಜೆ. ಅದೆಂತೆಂದಡೆ, ವಿಷ್ಣು ಪುರಾಣೆ ॥ಶ್ಲೋ॥ ಬ್ರಹ್ಮಬೀಜ ತೃಣಂ ನಾಸ್ತಿ ಕೇಶವೊ ಅಧಿದೇವತಾ ಗುರುಭ್ರಷ್ಟಶ್ಚ ಚಾಂಡಾಲೋ ವಿಪ್ರಶ್ವಾನೋಪಿ ಜಾಯತೆ ॥ ಬ್ರಾಹ್ಮಣಂ ದರ್ಶನಂ ಚೈವ ಪಾಪಪಂಜರಮೇವ ಚ । ಬ್ರಾಹ್ಮಣಂ ವಂದನಂ ಚೈವ ಕೋಟಿ ಜನ್ಮಸು ಸೂಕರಃ ॥ ಎಂದುದಾಗಿ ರೇಣುಕಾದೇವಿಯ ಮಗನೇ ಬ್ರಾಹ್ಮಣನು. ಮಾತಂಗಿಯ ಮಗನೇ ಹೊಲೆಯನು. ಇವರಿಬ್ಬರೂ ಜಮದಗ್ನಿಗೆ ಹುಟ್ಟಿದರಾಗಿ. ಇದಕ್ಕೆ ಸಾಕ್ಷಿ, ಭಾರದ್ವಾಜ ವಿಶ್ವಾಮಿತ್ರ ಅಗಸ್ತ್ಯ ನಾರದ ಕೌಂಡಿಲ್ಯ ಈಯೈವರು ಸಾಕ್ಷಿಯಲ್ಲಿ ನಿಮ್ಮೊಳಗೆ ನೀವು ಸಂವಾದವು ಬೇಡೆಂದು ವಿಭಾಗವಂ ಮಾಡಿಕೊಟ್ಟ ವಿವರಮಂ ಕೇಳಿರಣ್ಣಾ! ಗ್ರಾಮದೊಳಗಣ ಸೀಮೆಯ ಗೃಹವನೇ ಹೊಲೆಯರಿಗೆ ಕೊಟ್ಟರು. ಸತ್ತ ಹಸುವ ನೆಳದುಕೊಂಡು ಹೋಹವರನೇ ಹೊಲೆಯರ ಮಾಡಿದರು ಜೀವದ ಹಸುವ ಹದಿನೆಂಟು ಜಾತಿಯ ಮಂಚದಡಿಯಲ್ಲಿ ನುಸಿದು ಗೋದಾನ ಮುಖದಲ್ಲಿ ಕೊಂಡು ಹೋಹರನೇ ಬ್ರಾಹ್ಮಣರ ಮಾಡಿದರು.

ಇನ್ನು ನಿಮಗೂ ತಮಗೂ ಸೊಮ್ಮು ಸಂಬಂಧವಿಲ್ಲನೆಂದು ಕಂಡಾಗ ತೊಲಗುವಂತೆ ಸಂಭೋಳಿಯೆಂಬ ನಾಮಾಂಕಿತವಂ ಕೊಟ್ಟು ತೊರೆ ಪತ್ರವಂ ಬರೆದರಾಗಿ. ಇದನರಿಯದಿದ್ದರೆ ಇನ್ನು ಕೇಳಿರಣ್ಣಾ. ನಳ ಚಕ್ರವರ್ತಿರಾಯನು ಪಿಂಡ ಪಿತೃ ಕಾರ್ಯವ ಮಾಡುವಲ್ಲಿ ಹೊನ್ನ ಗೋವಂ ತಂದು ಬಿನ್ನಾಣದಲ್ಲಿ ದಾನವ ಕೊಟ್ಟಲ್ಲಿ ಹೊಲೆಯರು ನಾಡಕೂಟ ವಕೂಡಿ ಅಸ್ಥಲ ತಾರ್ಕಣೆಯಲ್ಲಿ ಪೂರ್ವಸಾಧನ ಸಂಬಂಧದಿಂದ ನ್ಯಾಯವ ನಾಡಿ ಇತ್ತಂಡವ ಹಂಚಿಕೊಂಡ ವಿವರವ ಕೇಳಿರಣ್ಣಾ. ಕೊಂಬು ಕೊಳಗನೇ ತೆಗೆದು ಏಳುನೂರೆಪ್ಪತ್ತು ತೂಕ ಚಿನ್ನವ ಹಂಚಿಕೊಂಡು ಉಳಿದ ಕೊಂಬು ಕೊಳಗವ ವಿಪ್ರರು ಎತ್ತಿಕೊಂಡರಾಗಿ, ಈ ಹೊನ್ನು ಗೋವನಳಿದು ತಿಂಬ ಕುನ್ನಿಗಳ ಕಂಡು ಕೇಳಿಯೂ ಅರಿದು ಮರೆದು ಉತ್ತಮ ಕುಲ ದ್ವಿಜರೆಂದು ಅಲ್ಲಿ ಉಪದೇಶವಂ ಕೊಂಡು ನಮಸ್ಕರಿಸುವ ಅಜ್ಞಾನಿ ಹೊಲೆಯರ ನಾನೇನೆಂಬೆನಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

**ಭಾವಃ**— ಭಕ್ತಿಯುಳ್ಳವನೇ ಶ್ರೇಷ್ಠನು. ಅವನ ಪೂಜೆಯೇ ನಿಜ ವಾದ ಪೂಜೆಯು. ಭಕ್ತಿ ಹೀನನ ಪೂಜೆಯು ಯಾತಕ್ಕೂ ಬಾರದೆಂದು ವಚನಕಾರನು ಬಹು ದೃಢವಾಗಿ ಇಲ್ಲಿ ಹೇಳಿರುವನು. ಇಲ್ಲಿ ಬ್ರಾಹ್ಮ ಣರ ಕರ್ಮಗಳು ಮತ್ತು ನಿಜಭಕ್ತರ ಕರ್ಮಗಳು ಇವುಗಳಲ್ಲಿರುವ ತಾರ ತಮ್ಯವನ್ನು ಅನೇಕ ಪುರಾಣೋಕ್ತಿಗಳಿಂದ ವಿವರಿಸಿ ಹೇಳಿರುವನು.

---

# ಏಕಭುಕ್ತೋಪವಾಸಾದಿಗಳು.

**ವಿವರಣೆ:—** ವೀರಶೈವನಿಗೆ ಒಪ್ಪತ್ತು ಉಣ್ಣುವದು' ಉಪವಾಸ ಮಾಡುವದು ಇಂಥ ಕ್ರಿಯೆಗಳು ಸಲ್ಲವು. ಯಾಕಂದರೆ ಅವನ ಕ್ರಿಯಾ ಕರ್ಮಗಳು ಭಿನ್ನಾಚಾರಿಗಳಿಂದ ತೀರ ಬೇರೆ ವಿಧವಾಗಿರುತ್ತವೆ. ಅವನು ಲಿಂಗ ದೇಹಿಯು. ಆದ್ದರಿಂದ ಇಂಥವನ ಕ್ರಿಯೆಗಳಲ್ಲಿ ಲಿಂಗಾಂಗಸಮರಸ ಭಾವವಿರುತ್ತದೆ. ಇವನು ಪ್ರಸಾದವನ್ನು ಸ್ವೀಕರಿಸಿ ಲಿಂಗಭೋಗೋಪ ಭೋಗಿಯಾಗಿರಬೇಕು.

**ವಚನ:—** ೧೨೨. ಪ್ರಾಣಲಿಂಗಿ ಸಂಬಂಧಿಯಾದ ಲಿಂಗವಂತನು ಏಕಭುಕ್ತ ಉಪವಾಸಂಗಳನ್ನು ಮಾಡಲಾಗದು. ಅದೇನುಕಾರಣವೆಂದಡೆ, ದೇವರಾರೋಗಣೆ ತಪ್ಪುವದಾಗಿ, ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳು ತಪ್ಪುವದಾಗಿ, ಆಗಮ ಮಾರ್ಗವು ತಪ್ಪುವದಾಗಿ, ಶ್ರೀಗುರು ವಿನಾಜ್ಞೆಯು ತಪ್ಪುವದಾಗಿ, ತನಗೆ ಮುಂದೆ ಪ್ರಸಾದವಿಲ್ಲವಾಗಿ, ಮುಕ್ತಿ ಇಲ್ಲ, ದೋಷಕಾರಿಯಪ್ಪನು ಕೇಳಿರಣ್ಣಾ. ಅದೆಂತೆಂದಡೆ, ॥ಶ್ಲೋ॥ ಪ್ರಾಣಲಿಂಗ ಸಮಾಯುಕ್ತಸ್ಯೈಕಭುಕ್ತೋಪವಾಸಿನಃ। ಪ್ರಸಾದ ನಿಷ್ಫಲಂ ಚೈವ ರೌರವಂ ನರಕಂ ವ್ರಜೇತ್॥ ಎಂದುದಾಗಿ ಇದು ಕಾರಣ ನಿತ್ಯ ನೈಮಿತ್ತಿಕ ಪಂಚಪರ್ವತಿಥಿಗಳಲ್ಲಿ ಆವ ದಿನದಲ್ಲಿಯೂ ಎಂದೆಂದೂ ಅಷ್ಟ ವಿಧಾರ್ಚನೆ ಷೋಡಶೋಪಚಾರವೇ ಕರ್ತವ್ಯ ನೋಡಾ. ದೇವರಾರೋ ಗಣೆಯಂ ಮಾಡಿಸಿ ಪ್ರಸನ್ನತ್ವವಂ ಪಡೆದು ಪ್ರಸಾದಮಂ ಧರಿಸಿ ಮುಕ್ತ ರಪ್ಪರಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:—** ಪ್ರಾಣಲಿಂಗಿಯಾದವನು ಜಪ ಏಕಭುಕ್ತ ಉಪವಾಸಗ ಳನ್ನು ಮಾಡಕೂಡದು. ಯಾಕಂದರೆ ಇದರಿಂದ ಅವನಿಗೆ ಪ್ರಸಾದವು ತಪ್ಪುವದು. ಪ್ರಸಾದವು ತಪ್ಪಿದಲ್ಲಿ ತನ್ನಲ್ಲಿರುವ ಆಚಾರಲಿಂಗ, ಗುರು ಲಿಂಗ ಮೊದಲಾದ ಲಿಂಗಗಳಲ್ಲಿ ಜಾಗ್ರತಿಯನ್ನುಂಟು ಮಾಡುವ ಕಾರ್ಯವೂ ತಪ್ಪುವದು. ಇದು ಆಗಮ ಮಾರ್ಗವಲ್ಲ, ಗುರುವಾಜ್ಞೆ ಯಲ್ಲ. ಎಂಥ ಪರ್ವತಿಥಿಗಳಲ್ಲಿಯೂ ಕೂಡ ಅಷ್ಟವಿಧಾರ್ಚನೆ ಷೋಡ ಶೋಪಚಾರಗಳನ್ನು ಮಾಡಬೇಕಾದುದು ಅವಶ್ಯವು. ಆದರೆ ಏಕಭು ಕ್ತೋಪವಾಸಾದಿಗಳನ್ನು ಮಾಡಿದ್ದಾದರೆ ಪ್ರಸಾದವು ತಪ್ಪಿ ಹೋಗುವದು. ಆದ್ದರಿಂದ ಈ ಬಗೆಯ ಭಿನ್ನಕ್ರಿಯಾಚರಣೆಯು ವೀರಶೈವರಿಗೆ ಸಲ್ಲದ್ದು ಎಂದು ವಚನಕಾರನ ಮುಖ್ಯ ಅಭಿಪ್ರಾಯವು.

# ವಿಭೂತಿಯ ಮಹತ್ವ.

**ವಚನ:—** ೧೨೩. ಅನಾದಿ ಶಾಶ್ವತಂ ನಿತ್ಯಂ ಚೈತನ್ಯಂ ಚಿತ್ಸ್ವರೂಪಕಂ। ಚಿದಂಗ ವೃಷಭಾಕಾರಂ ಚಿದ್ಭಸ್ಮ ಲಿಂಗಧಾರಣಂ॥ ಪ್ರಥಮ ಗೂಢನಿರ್ನಾಮಂ ದ್ವಿತೀಯಂ ಚಿತ್ಸ್ವರೂಪಕಂ। ತೃತೀಯಂ ಚಿದ್ವಿಲಾಸಂ ಚ ಚತುರ್ಥಂ ಭಸ್ಮಧಾರಣಾತ್ ॥೧॥ ರೋಮ ರೋಮೆ ಭವೇತ್ ಶಿವಂ ಸ್ವಕಾರ್ಯಮುಚ್ಯತೆ ಲಿಂಗಂ ವಿಭೂತಿಧೂಳನಾದ್ಭವೇತ್ ॥೨॥ ಎಂದುದಾಗಿ ಬಸವಾ ಬಸವಾ ಎನುತಿಪ್ಪವರೆಲ್ಲರು ಬಸವನ ಘನವನಾರು ಅರಿಯರಲ್ಲಾ. ಅನಾದಿ ಪರಶಿವನಲ್ಲಿ ಅಂತರ್ಗತವಾಗಿರ್ದ ಮಹಾ ಪ್ರಕಾಶವೇ ಬಹಿಷ್ಕರಿಸಿ ಚಿತ್ತು ಎನಿಸಿತ್ತು. ಆ ಚಿತ್ತು ಚಿದಂಗ ಬಸವ. ಆ ಚಿದಂಗ ಬಸವನಿಂದುದಯಿಸಿದ ಚಿದ್ವಿಭೂತಿಯನೊಲಿದು ಧರಿಸಿದ ಶರಣರೆಲ್ಲರೂ ಜ್ಯೋತಿರ್ಮಯ ಲಿಂಗವಪ್ಪುದು ತಪ್ಪದು ಕಾಣಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:—** ಅನಾದಿ ಪರಶಿವನಲ್ಲಿ ಅಂತರ್ಗತವಾದ ಮಹಾ ಪ್ರಕಾಶವೇ ಚಿತ್ ಎನಿಸಿಕೊಂಡಿತ್ತು. ಈ ಚಿತ್ತಿನ ಅಂಗಸ್ವರೂಪವೇ ಚಿದ್ವಿಭೂತಿಯು. ಈ ವಿಭೂತಿಯ ಮೂಲಕವಾಗಿಯೇ ಲಿಂಗ ಪ್ರಕಾಶವು ಭಕ್ತನಲ್ಲಿ ಬೆಳಗುವದು.

---

# ಮಂತ್ರ.

**ವಿವರಣೆಃ—** ಷಟ್‌ಸ್ಥಲ ಶಾಸ್ತ್ರದಲ್ಲಿ ಪಂಚಾಕ್ಷರಿಯ ಮಹತ್ವವು ವಿಶೇಷವಾಗಿದೆ. ಅದರ ಉಲ್ಲೇಖವು ವಚನ ಗ್ರಂಥಗಳಲ್ಲಿ ಮೇಲಿಂದ ಮೇಲೆ ಬರುತ್ತದೆ. ಆದರೆ ಅದರ ಮರ್ಮವನ್ನು ವಚನಕಾರರು ಬಹಿರಂಗಗೊಳಿಸಲು ಇಷ್ಟ ಪಡುವದಿಲ್ಲ. ಅದನ್ನು ಅವರು ಗೂಢವಾಗಿಟ್ಟುಕೊಂಡಿರುತ್ತಾರೆ. ಗುರುಮುಖದಿಂದಲೇ ಅದನ್ನು ಅರಿಯಬೇಕೆಂದು ಅವರ ಅಭಿಪ್ರಾಯವಿರುತ್ತದೆ. ಆದ್ದರಿಂದ ಪಂಚಾಕ್ಷರಿಯ ವಿವರಣೆ ಮಾಡುವಲ್ಲಿ ವಚನಕಾರರು ಸಾಮಾನ್ಯವಾಗಿ ಅದರ ಮಹತ್ವವನ್ನು ಮಾತ್ರ ವಿವರಿಸುವದುಂಟು. ಅಂತರ್ಗತ ವಿಷಯಗಳನ್ನು ಹೇಳುವದಿಲ್ಲ.

**ವಚನಃ—** ೧೨೪. ನಿರಾಳದ ಅಷ್ಟದಳಕಮಲದೊಳಗೆ ನಿರಂಜನ ಚೌಕ ಮಧ್ಯನೋಡಾ! ಇದರ ಬೀಜಾಕ್ಷರದ ಭೇದವನರಿಯೆ, ನಿರಂಜನ ಪ್ರಣವು, ಅವಾಚ್ಯ ಪ್ರಣವು, ಕಲಾಪ್ರಣವು, ಆದಿಪ್ರಣವು, ಅನಾದಿ ಪ್ರಣವು, ಅಕಾರಪ್ರಣವು, ಉಕಾರಪ್ರಣವು, ಮಕಾರಪ್ರಣವು, ಜ್ಯೋತಿ ಪ್ರಣವು, ಅಖಂಡಜ್ಯೋತಿಪ್ರಣವು, ಅಖಂಡಮಹಾಜ್ಯೋತಿಪ್ರಣವು, ಗೋಳಾಕಾಕಾರಪ್ರಣವು, ಅಖಂಡಗೋಳಕಾಕಾರಪ್ರಣವು, ಅಖಂಡಮಹಾ ಗೋಳಕಾಕಾರಪ್ರಣವು, ಇಂತೀ ನಿರಾಳದ ಅಷ್ಟದಳ ಕಮಲದೊಳಗೆ ನಿರಂಜನ ಚೌಕಮಧ್ಯ ನೋಡಾ! ಇದರ ಬೀಜಾಕ್ಷರದ ಭೇದವನೆನಗೆ ಕರುಣಿಸಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ—** ಇಲ್ಲಿ ವಚನಕಾರರು ಪ್ರಣವುಗಳ ಅನೇಕ ವಿಧಗಳನ್ನು ಹೇಳಿರುವನು. ಅವುಗಳ ಸ್ವರೂಪವನ್ನು ಅವನು ತಿಳಿಸದೆ ಗುಪ್ತವಾಗಿಟ್ಟಿರುವನು. ಇಂಥ ವಿಷಯಗಳನ್ನು ಗುರುಮುಖದಿಂದಲೇ ಅರಿಯಬೇಕೆಂದು ಆತನನ್ನು ಬೇಡಿಕೊಳ್ಳುತ್ತಾನೆ.

**ವಚನಃ—** ೧೨೫. ಶ್ರೀಪಂಚಾಕ್ಷರಿಯೇ ಸರ್ವ ಮಂತ್ರವೆಲ್ಲಕ್ಕೆ ಉತ್ಪತ್ತ ಸ್ಥಿತಿಲಯಸ್ಥಾನ, ಸರ್ವ ಕಾರಣಕ್ಕೆ ಮೂಲ. ಅದೆಂತೆಂದಡೆ ಸಪ್ತಕೋಟಿ ಮಹಾ ಮಂತ್ರಂ ಉಪಮಂತ್ರಸ್ಸನೇಕಧಾ। ಪಂಚಾಕ್ಷರೀ ಪ್ರಲೀಯಂತೆ। ಘನಸ್ತತ್ರೈವ ನಿರ್ಗತಃ। ತಸ್ಮಾತ್‌ವೇದಾಶ್ಚ ಶಾಸ್ತ್ರಾಣಿ। ಮಂತ್ರೆ ಪಂಚಾಕ್ಷರೀ ಸ್ಥಿತಾ। ಎಂದುದಾಗಿ, ಇದುಕಾರಣ ಶ್ರೀ ಪಂಚಾ

ಕ್ಷರಿಯುಳ್ಳ ಸದ್ಭಕ್ತನೇ ವೇದವಿತ್ತು. ಆ ಸದ್ಭಕ್ತನೇ ಶಾಸ್ತ್ರವಾನ್ ಆ ಮಹಾ ಮಹಿಮನೇ ಪುರಾಣಿಕನು, ಆಗಮಿಕನು, ಆತನೇ ಸರ್ವಜ್ಞನಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ**:— ಮಂತ್ರದ ಅರ್ಥವನ್ನು ತಿಳಿಯಬೇಕು. ಅದನ್ನು ಬರೀ ಜಪಿಸುವದರಿಂದ ಏನೂ ಪರಿಣಾಮವಾಗಲಾರದು. ಆದರೆ ಅರ್ಥವನ್ನು ತಿಳಿದು ಆಚರಿಸಿದ್ದಾದರೆ, ಅವನು ಮಹಿಮನಾಗುವನು. ಮತ್ತು ಎಲ್ಲ ಶಾಸ್ತ್ರಗಳಲ್ಲಿ ಬಲ್ಲಿದನೂ ಆಗುವನು.

**ವಚನ**:— ೧೨೬. ಓಂಕಾರವೆಂಬ ವೃಕ್ಷದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣವೇದಗಳೆಂಬ ನಾಲ್ಕು ಶಾಖೆಗಳು ವೇದಾಂಗಗಳೆಂಬ ಉಪಶಾಖೆಗಳು ಶಾಸ್ತ್ರಂಗಳೆಂಬ ಅಂಕುರಪಲ್ಲವಗಳು ಪುರಾಣಂಗಳೆಂಬ ಪುಷ್ಪಗಳು ಆಗಮಂಗಳೆಂಬ ಕಾಯಿ ಬಲಿದು ಶ್ರೀ ಪಂಚಾಕ್ಷರಿ ಎಂಬ ಮಧುರಸ ಹಣ್ಣುಗಳು ಅಗಣಿತ ಫಲವನು ಅನಂತಕಾಲ ಭೋಗಿಸಲು ಮತ್ತು ಜಿಹ್ವೆಯೊಳಗೆ ಬಂದಿರಲು ಭೋಗಿಸಿ ಸುಖಿಯಹುದಲ್ಲದೆ ಇತರ ವಿದ್ಯಂಗಳೆಂಬ ಸಸಿಯು ಸಾಕಿ ಸಲಹಲುಂಟೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?.

**ಭಾವ**:— ಈ ವಚನದಲ್ಲಿ ಪಂಚಾಕ್ಷರಿಯ ಮಹತ್ವವನ್ನು ಹೇಳಿರುವನು. ಪಂಚಾಕ್ಷರಿಯನ್ನು ತಿಳಿಯುವದೆಂದರೆ ಮಧುರವಾದ ಹಣ್ಣಿನ ರಸವನ್ನು ಆಸ್ವಾದಿಸಿದಂತೆಯೇ ಸರಿ. ಈ ಆಸ್ವಾದನೆಯ ಸುಖವು ಎಂದಿಗೂ ಹೋಗಲಾರದು. ಇದೇ ನಿಜವಾದ ಸುಖವು.

**ವಚನ**:— ೧೨೭. ಓಂ ನಮಃ ಶಿವಾಯ ಎಂಬುದೇ ತಂದೆ, ಓಂ ನಮಃ ಶಿವಾಯ ಎಂಬುದೇ ಋಷಿ, ಓಂ ನಮಃ ಶಿವಾಯ ಎಂಬುದೇ ಅಧಿದೇವತೆ. ಓಂ ನಮಃ ಶಿವಾಯ, ಓಂ ನಮಃ ಶಿವಾಯ ಎಂದೆನಲು ಸದ್ಯೋನ್ಮುಕ್ತಿ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ**:— ಪಂಚಾಕ್ಷರೀ ಮಂತ್ರವೇ ನಿಜವಾದ ದೇವತೆಯು ಅದರಲ್ಲಿ ಎಲ್ಲ ದೇವತೆಗಳು ಅಡಗಿರುವವು. ಅದರ ಮೂಲಕವಾಗಿ ಮುಕ್ತಿಯು ಲಭಿಸುವದು.

R. N. B. 2554.

# ಶಿವಾನುಭವ.



ಸಂಪುಟ ೧೦.] ಫೆಬ್ರುವರಿ ೧೯೩೬. [ಸಂಚಿಕೆ ೫.

# ವಿಷಯಾನುಕ್ರಮಣಿಕೆ.

ಶಿವಾನುಭವ.

ವರ್ಷ ೧೦]　　ಫೇಬ್ರುವಾರಿ. ೧೯೩೬　　[ಸಂಚಿಕೆ ೫.

# ಶೂನ್ಯಸಂಪಾದನೆಯ ರಹಸ್ಯ.

( ಲೇಖಕರು:— ಮಿ|| ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. )



## ಮೋಳಿಗೆಯ ಮಾರಯ್ಯಗಳ ಸಂಪಾದನೆ.

ಕಂದ. ಹೊನ್ನಿನ ಜಾಳಿಗೆಗಳ ಬಸ
ವಣ್ಣಂ ನಿರ್ಧನಿಕರೆಂದು ಇರಿಸಲ್ಕಾ ಮಾ ।
ರಣ್ಣಂ ತಾನದ ಜರೆಯುತೆ
ಚಿನ್ನದ ದಂಡಗಳ ಗಣಕೆಯಿತ್ತುದನುಸುರ್ವೆಂ ।

ಮೋಳಿಗೆಯ ಮಾರಯ್ಯನೆಂಬ ಶಿವಶರಣನ ಮನೆಯಲ್ಲಿ ಬಸವಣ್ಣನವರು ಶಿವಾರ್ಚನೆ ಶಿವ ಪ್ರಸಾದಗಳನ್ನು ತೀರಿಸಿ ಆತನ ಮಡದಿಗೆ ಗೊತ್ತಾಗದಂತೆ ಎರಡು ಜಾಳಿಗೆ ಹೊನ್ನನ್ನು ಮುಚ್ಚಿಟ್ಟು ಹೊರಟು ಹೋದರು. ಮಾರಯ್ಯನವರು ಮನೆಗೆ ಬಂದು ಎರಡು ಜಾಳಿಗೆ ಹೊನ್ನನ್ನು ನೋಡಿ ಅದು ಬಸವಣ್ಣನವರ ಆಟವೆಂದರಿದು ಅದನ್ನು ಮನೆಯಲ್ಲಿಟ್ಟುಕೊಳ್ಳದೆ ಜಂಗಮ ಮೂರ್ತಿಗಳಿಗೆ ದಾನ ಮಾಡಿಬಿಟ್ಟರು. ಆ ಬಳಿಕ ಮಾರಯ್ಯ ತಂದೆಗಳು ಒಂದು ಲಕ್ಷ ತೊಂಭತ್ತಾರು ಸಾವಿರ ಮಹಾ ಗಣಂಗಳಿಗೆ ಬಿನ್ನಹ ಮಾಡಿ ಪ್ರಸಾದವನ್ನುಣಬಡಿಸಿ ಅವರಿಗೆ ಒಂದೊಂದು ಕಟ್ಟಿಗೆಯ ತುಂಡನ್ನು ಭಿಕ್ಷೆಯಾಗಿ ಕೊಟ್ಟರು. ಅದನ್ನು ಗಣಂಗಳು ಸುವರ್ಣಕ್ಕಿಂತಲೂ ಅಧಿಕವಾಗಿ ಭಾವಿಸಿದರು. ಈ ಕಥೆಯು ಈ ಸಂಪಾದನೆಯಲ್ಲಿ ಪ್ರಸ್ತಾಪಿತವಾಗಿರುವದರಿಂದ ಇದಕ್ಕೆ “ಮೋಳಿಗೆಯ ಮಾರಯ್ಯಗಳ ಸಂಪಾದನೆ” ಎಂಬ ಹೆಸರು ಕೊಡಲ್ಪಟ್ಟಿದೆ.

ಮೋಳಿಗೆಯ ಮಾರಿ ತಂದೆಗಳು ಮೊದಲು ಕಾಶ್ಮೀರ ದೇಶದ ರಾಜರಾಗಿದ್ದರು. ಅವರು ಬಸವೇಶ್ವರನ ಭಕ್ತಿಯ ಮಹಿಮೆಯನ್ನು ಕೇಳಿ ತಮ್ಮ ದೇಶಾಧಿಪತ್ಯವನ್ನು ಪರಿತ್ಯಜಿಸಿ ತಮ್ಮ ಸತಿಯಳಾದ ಮಹಾದೇವಿಯಮ್ಮನೊಡನೆ ಕಲ್ಯಾಣ ಪಟ್ಟಣಕ್ಕೆ ಬಂದು ಕಟ್ಟಿಗೆಯ ಹೊರೆಯನ್ನು ಹೊತ್ತು ಮಾರಿ ಬಂದ ಹಣದಿಂದ ಗುರುಲಿಂಗ ಜಂಗಮದಾಸೋಹ ಮಾಡುವ ಪವಿತ್ರ ಕಾಯಕವನ್ನು ಕೈಕೊಂಡಿದ್ದರು. ಬಸವಣ್ಣನವರ ಅರಮನೆಯಲ್ಲಿ ಮಿಷ್ಟಾನ್ನಭೋಜನ ಮಾಡಿದ ಗಣಂಗಳು ಮೋಳಿಗೆಯ ಮಾರಯ್ಯಗಳ ಮನೆಯಲ್ಲಿ ಅಂಬಲಿಯ ಸವಿಯನ್ನು ನೋಡದೆ ಹಾಗೆಯೇ ಹೋಗುತ್ತಿರಲಿಲ್ಲ. ಆ ಗಣಂಗಳು ಬಸವಣ್ಣನವರೆದುರಿಗೆ ಮಾರಯ್ಯನವರ ಅಂಬಲಿಯ ಸವಿಯನ್ನು ಬಹು ಪರಿಯಾಗಿ ಕೊಂಡಾಡುತ್ತಿದ್ದರು.

ಹೀಗಿರಲು ಒಂದಾನೊಂದು ದಿವಸ ಬಸವಣ್ಣನವರು ಅಂಥ ಸದ್ಭಕ್ತನ ಮನೆಯ ಪ್ರಸಾದವನ್ನು ಸ್ವೀಕರಿಸಿದರೆ ಸಮಸ್ತ ಪಾಪಗಳು ಕ್ಷಯವಾಗುವವೆಂದು ಭಾವಿಸಿ ಅವರ ಮನೆಗೆ ಭಕ್ತನ ವೇಷದಿಂದ ಬಿಜಯಂಗೈದರು. ಆ ಕಾಲಕ್ಕೆ ಮಾರಯ್ಯ ತಂದೆಗಳು ಮೋಳಿಗೆಯ ಕಾಯಕಕ್ಕೆ ಹೊರಗೆ ಹೋಗಿದ್ದರು. ಮನೆಯೊಳಗೆ ಅವರ ಮಡದಿಯವರೊಬ್ಬರೇ ಇದ್ದರು. ಅವರು ಬಸವಣ್ಣನವರ ಪಾದಾರ್ಚನೆಗೆ ಅಗ್ಗವಣಿಯನ್ನು ಕೊಟ್ಟು ಲಿಂಗಾರ್ಚನೆಯನ್ನು ಮಾಡಿಸಿ ಮಾಡಿದ ಅಡಿಗೆಯನ್ನು ನೀಡಲು ಬಸವಣ್ಣನವರು ಲಿಂಗಾರ್ಪಿತವ ಮಾಡಿ ತಾವು ತಂದಿದ್ದ ಎರಡು ಜಾಳಿಗೆ ಹೊನ್ನನ್ನು ಮಜ್ಜನ ಸಾಲೆಯ ಮರೆಗಿಟ್ಟು ಹೊರಟು ಹೋದರು.

ಕೆಲವು ಹೊತ್ತಿನ ಮೇಲೆ ಮಾರಯ್ಯ ತಂದೆಗಳು ಮನೆಗೆ ಬಂದು ಲಿಂಗಾರ್ಚನೆ ಮಾಡುವ ಕಾಲಕ್ಕೆ ಆ ಹೊನ್ನನ್ನು ನೋಡಿ ಮನೆಗೆ ಯಾರು ಬಂದಿದ್ದರೆಂದು ಹೆಂಡತಿಯನ್ನು ಕೇಳಿದರು. ಆಗ ಆಕೆಯು ಒಬ್ಬ ಭಕ್ತರು ಬಂದು ಲಿಂಗಾರ್ಚನೆಯನ್ನು ಮಾಡಿಕೊಂಡು ಹೋದರೆಂದುಸುರಿದಳು. ಆ ಮೇಲೆ ಮೋಳಿಗೆಯ ಮಾರಯ್ಯಗಳು ಬಸವಣ್ಣನು ನಾವು ಬಡವರೆಂದು ಈ ಹೊನ್ನನ್ನು ಇಲ್ಲಿರಿಸಿ ಹೋಗಿದ್ದಾನೆಂದು ತಿಳಿದು ಸಿಟ್ಟಾಗಿ ನುಡಿದುದೇನಂದರೆ— "ಗುರುಲಿಂಗ ಜಂಗಮಕ್ಕೆ ತನುಮನಧನಗಳನ್ನು ನಿರ್ವಂಚನೆಯಿಂದೀಯಬೇಕು. ಜನರು ಮೆಚ್ಚಬೇಕೆಂದು

ವೃಡನ ಭಕ್ತರಿಗೆ ಸಂಪತ್ತನ್ನು ಕೊಡಬಹುದೇ? ಅಹುದೆನಿಸಿಕೊಂಡಿಹೆನೆಂಬ ಧಾರುಣಿಯು ಚೋರರಿಗೆ ಎಲ್ಲಿಹುದೋ ನಿಜಭಕ್ತಿ ನಿಃಕಳಂಕ ಮಲ್ಲಿಕಾರ್ಜುನಾ "

ಆನಂತರ ಮಾರಯ್ಯನವರು ಆ ಧನವನ್ನು ಇಬ್ಬರು ಜಂಗಮ ಮೂರ್ತಿಗಳಿಗೆ ಸಮರ್ಪಿಸಿ ಬಸವಣ್ಣನವರ ಮನೆಗೆ ಹೋಗಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳಿಗೆ ಬಿನ್ನಹ ಮಾಡಿ ಕರೆತಂದು ಅವರ ಇಷ್ಟಾನುಸಾರವಾಗಿ ಪದಾರ್ಥಗಳನುಣಬಡಿಸಿ ತಾವು ತಂದ ಕಟ್ಟಿಗೆಯ ಹೊರೆಯ ಮೇಲೆ ಪಾದೋದಕವನ್ನು ಸಿಂಪಡಿಸಿ ಅವುಗಳನ್ನು ಸುವರ್ಣ ದಂಡಗಳನ್ನು ಮಾಡಿ ಎಲ್ಲ ಜಂಗಮ ದೇವರುಗಳಿಗೆ ಒಂದೊಂದನ್ನು ಕೊಡಲು ಅವರು ಬಸವಣ್ಣನವರ ಬಳಿಗೆ ಹೋಗಿ ಇದನ್ನು ನಿವೇದಿಸಲು ಅವರು "ಮಾರಯ್ಯನವರು ಇಂತಹ ನಿರಾಶಾ ಮಹಾತ್ಮರೆಂದರಿಯದೆ ಕೆಟ್ಟೆನಲಾ" ಎಂದು ಹಳಹಳಿಬಟ್ಟು ನುಡಿದುದೇನಂದರೆ "ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ಇದಾರಿಂಗಳವಡುವುದಯ್ಯಾ? ನಿಧಾನವು ತಪ್ಪಿಬಂದರೆ ಒಲ್ಲೆನೆಂಬವರಿಲ್ಲ. ಪ್ರಮಾದವಶದಿಂ ಬಂದರೆ ಹುಸಿಯದಂತವರಿಲ್ಲ. ನಿರಾಶ ನಿರ್ಭಯ ಕೂಡಲಸಂಗಮದೇವಾ ನೀನೊಲಿದ ಶರಣರು." ಇದಲ್ಲದೆ "ಮನೆಯ ನೋಡಾ ಬಡವರು. ಮನವ ನೋಡಾ ಧೀರರು. ಸೋಂಕಿಲ್ಲದ ಶುಚಿಗಳು. ಸರ್ವಾಂಗಧೀರರು. ಪಸಾರವ ನೋಡಿದೊಡೇನೂ ಇಲ್ಲ. ಸಮಯೋಚಿತಕ್ಕೆ ಸಕಲ ಪದಾರ್ಥಂಗಳ ತಂದೀವರು. ಕೂಡಲಸಂಗಮದೇವಾ ನಿಮ್ಮ ಶರಣ ಮೋಳಿಗೆಯ ಮಾರಯ್ಯ ಸರ್ವಾಂಗ ಧೀರ ನೋಡಾ."

ಆನಂತರ ಚನ್ನಬಸವಣ್ಣನವರು ಹೊಲೆ ಹದಿನೆಂಟು ಜಾತಿಗೆ ತೊತ್ತಾದ ಲಕ್ಷ್ಮಿಯನ್ನು ಶಿವಶರಣರ ಮನೆಯಲ್ಲಿರಿಸಬಹುದೇ? ಎಂದು ಬಸವಣ್ಣನವರನ್ನು ಕುರಿತು ಹೀಗೆ ಮಾತನಾಡಿದರು. "ಬಸವಣ್ಣಾ, ಹಸಿವು ತೃಷೆಗಳನ್ನು ಮರೆದ, ಅರಿಷಡ್ವರ್ಗಗಳನ್ನು ಹುರಿದ ಅಷ್ಟಮದಗಳನ್ನು ಸೀಳಿದ ಮಹಾಮಹಿಮ ಮೋಳಿಗೆಯ ಮಾರಯ್ಯ ತಂದೆಗಳಿಗೆ ಆಶೆಯಾಮಿಷವ ತೋರಿಸಬಹುದೇ? ಅಯ್ಯಾ, ಇಂತಹ ಮಹಾಶರಣರ ಮನೆಯಲ್ಲಿ ಜಗದ ಹಾದರಗಿತ್ತಿಯಾದ ಭೋಗಲಕ್ಷ್ಮಿಯು ತಂದಿರಿಸಬಹುದೇ? ಹದಿನೆಂಟು ಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿ ಬೆಳೆದ ಶಿವದ್ರೋಹಿಯಾದ ಲಕ್ಷ್ಮಿಯನ್ನು ಲಿಂಗವಂತರ ಮನೆಯ ಹೊಗಿಸುವರೇ? ಇದಕ್ಕೆ ನಮ್ಮ ಕೂಡಲ ಚೆನ್ನಸಂಗಮದೇವ ಮೆಚ್ಚುವನೇ?"

ಈ ಮಾತನ್ನು ಕೇಳಿ ಮೋಳಿಗೆಯ ಮಾರಯ್ಯಗಳು ಅರವು ಮರವೆಯಿಂದ ಮಾಡುವ ಭಕ್ತಿ ಸ್ಥಿರವಲ್ಲವೆಂದೂ ಅರಿದವರಾದ ಬಸವಣ್ಣನವರಿಗೆ ಅರಿಕೆಯ ನಾರು ಹೇಳಬೇಕೆಂದೂ ಈ ರೀತಿಯಾಗಿ ವಿಶದಪಡಿಸಿದರು. "ಬಯಲು ಬತ್ತಲೆಯಾದರೆ ಹೊದಿಸುವವರಿನ್ನಾರು? ಏರಿ ನೀರು ಕುಡಿದರೆ ಬಿಡಿಸುವವರಿನ್ನಾರು? ಮಹಾಮೇರು ನಡೆದು ಬಂದರೆ ಪಥಕಿಂಬು ಕೊಡುವವರಾರು? ಅರಿದವನು ಮರೆದನಾದಡೆ ಅರಿಕೆಯ ಹೇಳುವವರಾರು? ನಿಮ್ಮ ನಿಜವ ನೀವೇಬಲ್ಲಿರಿ. ನಾನಂಜುವೆ ನಿಃಕಳಂಕ ಮಲ್ಲಿಕಾರ್ಜುನಾ."

ಆಗ ಬಸವಣ್ಣನವರು ನಿರಹಂಭಾವದಿಂದ ನುಡಿದುದೇನಂದರೆ "ಅಯ್ಯಾ, ನಾನು ಸಕಲ ಪದಾರ್ಥಂಗಳ ಕೊಟ್ಟು ಭಕ್ತನಾದವನಲ್ಲ. ಆದರೆ ನಿಮ್ಮ ಮನವ ನಿಮಗರ್ಪಿಸಿ ಶುದ್ಧನಾಗಿರ್ಪೆ ನೋಡಾ. ಅರ್ಥ ಪ್ರಾಣಾಭಿಮಾನಗಳನ್ನೊಪ್ಪಿಸಿದಲ್ಲಿ ಭಕ್ತನಪ್ಪನೇ? ಅಲ್ಲ. ಆದಿರುದ್ರನ ಮಗಳು ಆದಿಶಕ್ತಿ. ಆದಿಶಕ್ತಿಯ ಮಗ ವಿಷ್ಣು. ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ. ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೇ? ಅಲ್ಲ. ಎನ್ನ ಮನದೊಡೆಯ ಮಹಾದೇವ, ನಿಮ್ಮ ಮನವ ನಿಮಗೊಪ್ಪಿಸಿ ನಾನು ಶುದ್ಧ ಕಾಣಾ ಕೂಡಲ ಸಂಗಮದೇವಾ."

ಈ ಮಾತನ್ನು ಕೇಳಿ ಮೋಳಿಗೆಯ ಮಾರಿತಂದೆಗಳು ಆನಂದಭರಿತರಾಗಿ ಬಸವಣ್ಣನವರ ಸ್ತೋತ್ರವನ್ನು ಹೀಗೆ ಮಾಡಿದ್ದರು. "ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣಾ. ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣಾ. ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯ ಬಸವಣ್ಣಾ. ಎನ್ನ ಮನಕ್ಕೆ ವಕಾರವಾಗಿ ಬಂದೆಯಯ್ಯ ಬಸವಣ್ಣಾ. ಎನ್ನ ಜ್ಞಾನಕ್ಕೆ ಯಕಾರವಾಗಿ ಬಂದೆಯಯ್ಯ ಬಸವಣ್ಣಾ. ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣಾ. ಇಂತಪ್ಪ ಪ್ರಣವ ಪಂಚಾಕ್ಷರ ಮಂತ್ರವೇ ನೀನಾಗಿ ತನ್ನ ಮಠಕ್ಕೆ ತಾನೇ ಬಂದು ವಸ್ತುವನಿತ್ತೊಡೆ ಅದನ್ನು ನಾನು ನಿಃಕಳಂಗ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯ ಬಸವಣ್ಣಾ."

ಆಬಳಿಕ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮಯ್ಯಗಳು ಕೆಲ ಹೊತ್ತು ಮಾರಯ್ಯನವರೊಂದಿಗೆ ಶಿವಾನುಭವ ಗೋಷ್ಠಿಯ ಮಾಡಿ

ತಮ್ಮ ತಮ್ಮ ಗೃಹಂಗಳಿಗೆ ಬಿಜಯಂಗೈದರು. ಕೆಲವು ವರ್ಷಗಳು ಗತಿಸಲು ಕಲ್ಯಾಣ ಪಟ್ಟಣಕ್ಕೆ ಮಹಾಸಂಕಟವು ಪ್ರಾಪ್ತವಾಗಿ ಅನೇಕ ಶರಣರು ಅಲ್ಲಲ್ಲಿಗೆ ಹೋಗಿ ಶಿವೈಕ್ಯರಾದರು. ಮಾರಯ್ಯನವರು ಎಂದಿನಂತೆ ಕಲ್ಯಾಣ ಪಟ್ಟಣದಲ್ಲಿಯೇ ಕಟ್ಟಿಗೆಯ ಕಾಯಕವನ್ನು ಹಾಗೆಯೇ ಸಾಗಿಸಿದ್ದರು. ಬಸವಾದಿ ಪ್ರಮಥರ ಲಿಂಗೈಕ್ಯದ ಸುದ್ದಿಯನ್ನು ಕೇಳಿ ತಾವೂ ಯಾವಾಗ ಲಿಂಗೈಕ್ಯರಾದೇವೆಂಬ ಹಂಬಲವು ಅವರಲ್ಲಿ ಹೆಚ್ಚಾಗಿ ಬೆಳೆಯಿತು. ಆಗ ಅವರು ನುಡಿದುದೇನಂದರೆ "ಊರ ಸುಟ್ಟು ಸೂರೆ ಮಾಡುವಲ್ಲಿ ಆರಿಗಾರು ಇಲ್ಲ. ಬಸವಣ್ಣ ಸಂಗಮುಕ್ಕೆ, ಚನ್ನಬಸವಣ್ಣ ಉಳುವಿಗೆ, ಪ್ರಭು ಕದಳಿಗೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ತಮ್ಮ ಲಕ್ಷಕ್ಕೆ ಬಂದಲ್ಲಿಗೆ ಹೋಗಿ ಮುಕ್ತಿಯನೈದಿದರು. ಎನಗೊಂದು ಬಟ್ಟೆಯ ಹೇಳಾ. ಶಿವಭಕ್ತರ ಮನೆಗೆ ಕಟ್ಟಿಗ ಮಾರಬೇಕೆಂದು ನೀವು ಹಾಕಿ ಕೊಟ್ಟ ಕಾಯಕದ ಕೆಲಸವು ಇನ್ನೆಷ್ಟು ದಿನ ಹೇಳಾ ನಿಃಕಳಂಕಮಲ್ಲಿಕಾರ್ಜುನಾ."

ಮತ್ತು "ನಾನು ಕಾಯಸಮಾಧಿಯನೊಲ್ಲೆ. ಜೀವ ನೆನಹು ಸಮಾಧಿಯನೊಲ್ಲೆ. ಕೈಲಾಸವೆಂಬ ಭವಸಾಗರವನೊಲ್ಲೆ. ನೀನೆನ್ನನು ಅಲ್ಲಲ್ಲಿಗೆಳೆಯದೆ ನಿನ್ನಲ್ಲಿಯೇ ಕೂಟಸ್ಥನ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ. ನಿನ್ನರುವಿನ ಬಾಗಿಲವ ತೆರೆದೊಮ್ಮೆ ತೋರಾ." ಮತ್ತು "ನಿನ್ನನರಿವುದಕ್ಕೆ ಹೊನ್ನು ಹೆಣ್ಣು ಮಣ್ಣೆಂಬುದ ತೊರೆಯಬೇಕು. ಈ ಮೂರರ ಹಂಗು ಹರಿದವಂಗಲ್ಲದೆ ನಿನ್ನ ಚರಣದ ಬಾಗಿಲ ಬಾದಳವನೇರಬಾರದು ನೋಡಾ ನಿಃಕಳಂಕಮಲ್ಲಿಕಾರ್ಜುನಾ."

ಈ ಮಾತನ್ನು ಕೇಳಿ ಮಾರಯ್ಯ ತಂದೆಗಳ ಪುಣ್ಯಾಂಗನೆಯಾದ ಮಹಾದೇವಿಯಮ್ಮನು ಗಂಡು ಹೆಣ್ಣೆಂಬ ಭಿನ್ನಭಾವದಿಂದ ನುಡಿದುದನ್ನು ಧಿಕ್ಕರಿಸಿ ಪತಿಯನ್ನು ಕುರಿತು ಬಹು ಸ್ವಾರಸ್ಯವಾಗಿ ಮಾತನಾಡಿದಳು.

## ಮಹಾದೇವಿಯಮ್ಮನ ಉದ್ಗಾರ.

"ಅದೇತಕಯ್ಯ, ಶಿವನೊಳಗೆ ಕೂಟಸ್ಥನಾದಿಹೆನೆಂಬ ಬಲು ಬೇಟ? ಹೆಣ್ಣನ್ನು ತೊರೆಯುವದು ಸತ್ಯಭಕ್ತಿಯ ಆಟವಲ್ಲ. ಮುನ್ನ ನೀನಾರಿಂದಾದೆ ಹೇಳಾ? ಆ ಭಾವವನರಿದು ನಿನ್ನ ನೀನೇ ತಿಳಿ. ಅದೇ ನಿಜಭಕ್ತಿ. ಕಾಷ್ಟವ ಸುವರ್ಣವ ಮಾಡಿದೆನೆಂಬ ಮಾಟವು ಭಕ್ತಿಯೇ? ನಿಮ್ಮ

ಅರುವಿಂಗೆ ಇದಿರಿನಲ್ಲಿ ಕೂಡಿಹೆನೆಂಬ ಭಿನ್ನಭಾವವುಂಟೆ? ನಿಮ್ಮ ಕೂಟಕ್ಕೆ ಎನ್ನ ನಾಚಿಕೆಯು ಬಿಡಿಸಿದ ತೆರನ ತಿಳಿದುಕೊಳ್ಳಿ. ಶಕ್ತಿಯ ಮಾತೆಂದು ಧಿಕ್ಕರಿಸಬೇಡಿ. ಹೊರಗೆ ಕೂಡಿಹೆನೆಂಬುದು ನಿಮ್ಮ ಅರುವಿಂಗೆ ಹಾನಿ. ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ನಿಮ್ಮ ಶರಣರ ನೆಲೆಯ ನೀವೇ ನೋಡಿಕೊಳ್ಳಿ."

ಇದಲ್ಲದೆ ಇದ್ದಲ್ಲಿಯೇ ಮೋಕ್ಷವಿರಲು ಇತರ ಶರಣರಂತೆ ಅಲ್ಲಲ್ಲಿ ಮೋಕ್ಷವನ್ನರಸುವದೇಕೆಂದು ಪತಿಗೆ ಈಪ್ರಕಾರ ಉಸುರಿದರು. "ಪರು ಷವಿರಲು ಹೇಮವನರಸುವರೇ ಅಯ್ಯ? ಸ್ವಯಂ ಜ್ಯೋತಿಯಿರಲು ದೀಪವನರಸುವರೇ ಅಯ್ಯ? ನೀವು ಅಲ್ಲಿ ಇಲ್ಲಿ ಕೂಡಿಹೆನೆಂಬ ದಂದುಗವೇಕಯ್ಯಾ? ಕಣ್ಣಿದ್ದು ಕುರುಡರಂತಾದಿರಲ್ಲ? ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಬಳಿಯಲ್ಲಿರಲು ಬೇರೆ ಸ್ಥಾನವೇಕೆ ಹೇಳಾ ಎಲೆ ಅಯ್ಯಾ."

ಇದಲ್ಲದೆ "ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬ ಕುರುಹು ಇರುತ್ತಿರಲು ಆ ನಿಜಲಿಂಗದ ಸಂಗವನರಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹೆನೆಂಬ ಗೊಂದಣವೇತಕ್ಕೆ? ತಾ ನಿಂದಲ್ಲಿ ಕೆಡಹಿದ ಒಡವೆಯ ಬಿಟ್ಟು ಆಚೆಯಲಿ ನೆನೆದು ಅರಸಲುಂಟೆ? ನೀ ನಿಂದ ನಿಜವ ನಿಂದಲ್ಲಿಯೇ ತಿಳಿದುಕೋ. ನಿನ್ನಂಗವೇ ಕೈಲಾಸವು. ಆ ಲಿಂಗದ ಕೂಟವೇ ನಿರ್ವಾಣವು ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ"

ಹೀಗೆಂದು ಮಹಾದೇವಿಯಮ್ಮನು ನುಡಿಯಲು ಮೋಳಿಗೆಯ ಮಾರಿತಂದೆಗಳು ನುಡಿದುದೇನಂದರೆ "ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗು ಬೇಕು. ಆತ್ಮವುಳ್ಳನ್ನಕ್ಕ ಅರಿವೆಂಬುದ ವಿಚಾರಿಸಬೇಕು. ನಾ ಮರ್ತ್ಯನಾದ ಕಾರಣ ಜಗತ್ತು ಕರ್ಕಶವಾಗಿದೆ. ಇದು ಕಾರಣ ಕೈಲಾಸವೆಂಬ ಬಟ್ಟೆಯನರಸಬೇಕು. ಎನ್ನ ಸತ್ಯಕ್ಕೆ, ಎನ್ನ ಭಕ್ತಿಗೆ, ಎನ್ನ ಮನಕ್ಕೆ ಎನ್ನ ಮುಕ್ತ್ಯಂಗನೆ ಎನ್ನ ನಿಶ್ಚಯಕ್ಕೆ ಒಂದು ಗೊತ್ತು ತೋರಾ. ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಪೇಳಾ."

ಇದನ್ನು ಕೇಳಿ ಮಹಾದೇವಿಯಮ್ಮನು ಹೇಳಿದುದೇನಂದರೆ "ಕಾಲಿರಲು ತಲೆ ನಡೆಯುವದುಂಟೆ ಅಯ್ಯ? ಕಣ್ಣಿಲ್ಲದೆ ಕರ್ಣ ನೋಡಿದುದುಂಟೆ ಅಯ್ಯಾ? ಬಾಯಿ ಇರಲು ಮೂಗು ಉಂಡುದುಂಟೆ ಅಯ್ಯ? ತಾಯಿ

ಇಲ್ಲದೆ ಮಕ್ಕಳು ಬಂದ ತೆರನುಂಟೆ ಅಯ್ಯ? ನಿಮ್ಮ ಸೇವೆಯ ತೊತ್ತಿನ ಅನುಭಾವವ ಕೇಳಲೇತಕ್ಕೆ? ನಿಮ್ಮಲ್ಲಿ ಎನ್ನ ಭಾವ ಲೇಪ. ಮಹಾಘನ ಲಿಂಗಸ್ವರೂಪ ನೀವಾದ ಕಾರಣ ಎನಗೆ ಸ್ವಾತಂತ್ರ್ಯವುಂಟೆ? ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ನಿಮ್ಮ ಭಕ್ತಿ ಸೂತ್ರದಿಂದ ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡಗಿತ್ತು."

ಈ ಮಾತಿಗೆ ಮಾರಯ್ಯನವರು "ತಲೆ ಇಲ್ಲದೆ ಕಾಲು ನಡೆಯ ಬಲ್ಲುದೆ? ಕುಕ್ಷಿ ಇಲ್ಲದೆ ಬಾಯಿಯುಣ ಬಲ್ಲುದೆ? ಆತ್ಮನಿಲ್ಲದೆ ಕರಚರ ಣಾದಿಗಳಿಗೆ ಏತರ ಹೊಲಬು? ನಿನ್ನ ಭಕ್ತಿಯ ಬೆಳೆಯೇ ಎನ್ನ ಸತ್ಯದ ಹಾದಿ. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ ಎನ್ನ ಸತ್ಯಕ್ಕೆ ನೀ ಸತಿ ಯಾದ ಕಾರಣ ಎನ್ನ ಸುಖದುಃಖ ನಿನ್ನ ಸುಖದುಃಖ ಅನ್ಯವಿಲ್ಲ-" ಎಂದು ನುಡಿದರು.

ಅದಕ್ಕೆ ಮಹಾದೇವಿಯಮ್ಮನು ಪತಿಯನ್ನು ಕುರಿತು "ಆತ್ಮಕ್ಕೆ ಅರುಹಾದುದನರಿಯದೆ ಕೈಲಾಸವೆಂಬ ಸೂತ್ರಕ್ಕೆ ಮನ ಸೋತಿರಲ್ಲ? ಅಂಧ ಕನ ಕೈಯ್ಯ ರತ್ನದಂತಾದಿರಲ್ಲ? ಪಂಗುಳನ ಕೈಯ್ಯ ಶಸ್ತ್ರದಂತೆ ಆದಿ ರಲ್ಲ? ತಾನಿದ್ದಲ್ಲಿಯೇ ನಿಜಕೂಟ. ತಿಳಿದಲ್ಲಿಯೇ ನಿರಂಗ. ಇಷ್ಟದಲ್ಲಿ ನೋಟ, ಜ್ಞಾನದಲ್ಲಿ ಕೂಟ ಇವು ಏಕಾರ್ಥವಾದಲ್ಲಿ ಕಾಯವೆಂಬ ಕದ ಳಿಯ ಬಿಟ್ಟದು. ಭಾವವೆಂಬ ಕುರುಹ ಮರೆದುದು. ಕಾಯಕ್ಕೆ ಕೈಲಾ ಸವೆಂಬುದಿಲ್ಲ. ಭಾವಕ್ಕೆ ಬಯಲೆಂಬುದಿಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ." ಎಂದು ಮಾತನಾಡಿದರು.

ಇದಲ್ಲದೆ "ಗುರುವನರಿದು ಲಿಂಗವನರಿವರುಂಟು. ಲಿಂಗವನರಿದು ಪಂಚಾಚಾರವನರಿವರುಂಟು. ಪಂಚಾಚಾರವನರಿದು ಜಂಗಮವನರಿವ ರುಂಟು. ಆ ಜಂಗಮವನರಿವಲ್ಲಿ ಷಟ್‌ಸ್ಥಲಸಂಬಂಧವಾಯಿತ್ತು. ಇದನ್ನ ರಿತವಂಗೆ ಇಹಪರವೆಂಬ ಭಿನ್ನಭಾವವಿಲ್ಲ. ಕಾಯವುಳ್ಳನ್ನಕ್ಕ ಲಿಂಗಪೂಜೆ ಆತ್ಮವುಳ್ಳನ್ನಕ್ಕ ಅರುವಿನ ವಿಚಾರ, ಪುರುಷ ನೀ ಸತಿ ನಾನೆಂಬಲ್ಲಿ ಉಭಯ ಬೀಜ. ನಾ ನೀನೆಂಬನ್ನಕ್ಕ ಲಿಂಗವು ಅಂಗದಲ್ಲಿಯೇ ನಿರಂಗವಾಗಬೇಕು. ಆದುದರಿಂದ ಕಾಯವೆರಿಸಿ ಕೈಲಾಸಕ್ಕೆ ಹೋದಿಹೆನೆಂಬುದು ಮತವಲ್ಲ. ಘನಲಿಂಗ ಕರಸ್ಥಲದಲ್ಲಿಪ್ಪ ಅನುವನರಿಯದೆ ಕೈಲಾಸಕ್ಕೆ ಹಂಬಲಿಸು ವರೇ? ಆತ್ಮ ನಿಶ್ಚಯವಾದಲ್ಲಿಯೇ ಕೈಲಾಸ. ಮಮತ್ವವಾದಲ್ಲಿಯೇ ಮರ್ತ್ಯ

ದೊಳಗು ಎನ್ನಯ್ಯಪ್ರಿಯ ಇಮ್ಮಡಿನಿಃಕಳಂಕ ಮಲ್ಲಿಕಾರ್ಜುನಾ." ಎಂದು ನುಡಿದರು.

ಮತ್ತು "ಸುಮ್ಮಾನಸುಬುದ್ಧಿ ಭಕ್ತಸ್ಥಲ. ಮಲಾಮಲ ಮಹೇಶ್ವರಸ್ಥಲ. ಅಜ್ಞಾನ ಸುಜ್ಞಾನ ಪ್ರಸಾದಿಸ್ಥಲ. ಉಭಯ ಕೂಟಸ್ಥವೆಂಬುದ ಪರಿಹರಿಸಿ ದಲ್ಲಿ ಪ್ರಾಣಲಿಂಗಿಸ್ಥಳ. ಸ್ತುತಿ-ನಿಂದ್ಯಾದಿಗಳಲ್ಲಿ ಒಡಲಳಿದು ನಿಂದುದು ಶರಣಸ್ಥಲ. ಇಂತೀ ಭೇದವನರಿದು ಪರುಷಪಾಷಾಣದಂತೆ ಭಿನ್ನಭಾವ ವಿಲ್ಲದೆ ಏಕವಾದಲ್ಲಿ ಐಕ್ಯಸ್ಥಲ. ಅದು ಎನ್ನ ನಿನ್ನ ಕೂಟದ ಸುಖ ದಂತೆ. ಇದನ್ನು ಚನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ ಇಲ್ಲಿ ಎಂಬ ಗೆಲ್ಲಗುಳಿತನ ಬೇಡ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ಎಂದು ನುಡಿದರು.

ಇನಿಯಳ ಇನಿದಾದ ನುಡಿ ಕೇಳಿ ಮೋಳಿಗೆಯ ಮಾರಯ್ಯ ತಂದೆ ಗಳು ಸಂತುಷ್ಟರಾಗಿ ಅವಳ ಮಾತಿನ ಮೇಲೆ ವಿಶ್ವಾಸವಿಟ್ಟು ಕರಸ್ಥಲದ ಇಷ್ಟಲಿಂಗದಲ್ಲಿಯೇ ನಿಷ್ಠೆಯನ್ನರಿಸಿ ಯಾವ ಕಡೆಗೂ ಹೋಗದೆ ಕೆಲದಿನ ಗಳ ಮೇಲೆ ಕಲ್ಯಾಣ ಪಟ್ಟಣದಲ್ಲಿಯೇ ಬಯಲಾದರು.

ಈ ಸಂಪಾದನೆಯಿಂದ ನಮಗೆ ತಿಳಿದು ಬರುವ ಮುಖ್ಯ ಸಂಗತಿ ಗಳಾವವೆಂದರೆಃ— ಮೋಳಿಗೆಯಮಾರಯ್ಯನವರು ಕಾಶ್ಮೀರದ ಅರಸರಾ ಗಿದ್ದರು. ಆ ರಾಜ್ಯಭೋಗವನ್ನು ತೊರೆದು ಶರಣ ಸಂಗವೇ ಮಿಗಿಲೆಂದು ಭಾವಿಸಿ ಸಪತ್ನೀಕರಾಗಿ ಕಲ್ಯಾಣ ಪಟ್ಟಣದಲ್ಲಿ ಕಟ್ಟಿಗೆ ಮಾರುವ ಕಾಯ ಕವನ್ನು ಕೈಕೊಂಡದ್ದು ಅತ್ಯಂತ ಮಹತ್ವದ್ದು. ಕಾಯಕವು ನಮ್ಮ ಶರ ಣರ ವಿಶಿಷ್ಟ ಗುಣವು. ಒಂದು ವೇಳೆ ರಾಜರು ಕಾಲವಶದಿಂದ ಕಟ್ಟಿ ಗೆಯನ್ನು ಹೊತ್ತು ಮಾರುವ ಪ್ರಸಂಗ ಬರಬಹುದು. ಆದರೆ ಸ್ವತಃ ರಾಜರು ಶರಣರ ಸಹವಾಸಕ್ಕೆಳಸಿ ಕಟ್ಟಿಗೆ ಹೊತ್ತು ಮಾರುವ ಕೆಲಸವನ್ನು ಆನಂದ ದಿಂದ ಕೈಕೊಂಡ ಉದಾಹರಣೆಗಳು ಬಹು ವಿರಳ. ವಿದ್ಯಾರ್ಥಿದೆಶೆಯ ಲ್ಲಿದ್ದಾಗ ರಾಜಪುತ್ರರೇನೋ ಗುರುಕುಲಗಳಲ್ಲಿ ಸೇವಾಕಾರ್ಯಗಳನ್ನು ಮಾಡುತ್ತಿದ್ದರಂತೆ. ಆದರೆ ನಮ್ಮ ಶರಣರ ಶಿವಾನುಭವ ಮಂಟಪದಲ್ಲಿ ರಾಜ್ಯವನ್ನಾಳುವ ಭೂಪಾಲರೂ ದೊಡ್ಡ ದೊಡ್ಡ ಪಂಡಿತರೂ ಕೂಡ ಯಾವ ಸಂಕೋಚವಿಲ್ಲದೆ ಸಣ್ಣಪುಟ್ಟ ಕಾಯಕಗಳನ್ನು ಮಾಡುತ್ತಿದ್ದುದು ಮನನೀಯವಾಗಿದೆ.

ಈ ಸಂಪಾದನೆಯಿಂದ ನೆನಪಿಡತಕ್ಕ ೨ ನೆಯ ಸಂಗತಿಯೆಂದರೆ ಮಾರಯ್ಯನವರ ನಿರಾಶಾಗುಣವು. ಬಡವರಾಗಿ ಜೀವಿಸುವ ಮಾರಯ್ಯನವರ ಮನೆಯಲ್ಲಿ ಬಸವಣ್ಣನವರು ಹೊನ್ನಿನ ಚೀಲಗಳನ್ನಿರಿಸಿರಲು ಅವರು ಅದನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳದೆ ಜಂಗಮ ಮೂರ್ತಿಗಳಿಗೆ ದಾನ ಮಾಡಿ ಬಿಟ್ಟರು. ತಾನಾಗಿಯೇ ಬಂದ ಸುಖವನ್ನು ನೆರೆ ಹಿಂಗಿದವರುಂಟೇ ಜಗದಲ್ಲಿ? ಆದರೆ ರಾಜ್ಯವನ್ನೇ ತ್ಯಾಗಮಾಡಿ ಬಂದ ನಮ್ಮ ಯೋಗಿಗಳಿಗೆ ಭೋಗದಾಶೆಯುಂಟಾದೀತೇ? ಈ ಜಗತ್ತಿನಲ್ಲಿ ಪಾಪದ ಭೀತಿಯಿಲ್ಲದೆ ಪರರ ದುಡ್ಡನ್ನು ಸೆಳೆಯುವ ಉಪಾಯಗಳು ನಾನಾ ಪ್ರಕಾರದವಿರುವವು. ಆದರೆ ತಾನಾಗಿಯೇ ಬಂದ ಸಂಪತ್ತನ್ನು ದೂರೀಕರಿಸುವವರು ಬಹು ವಿರಳ. "ಬಂಗಾರ ಕಬ್ಬಿಣವು ಹಿರಿಕಿರಿದು ಸಮಗೊಂಡ ಲಿಂಗಮಾಂತೇಶ್ವರ ಜಗತ್ಪಾತ್ರಗೆ ಹರಗೆ। ಜಯಮಂಗಳಂ ನಿತ್ಯ ಶುಭಮಂಗಳಂ॥" ಎಂಬೀ ಬಾಲಲೀಲಾಮಹಾಂತಸ್ವಾಮಿಗಳು ಹಾಡಿದ ತತ್ವವು ನಮ್ಮ ಮಾರಯ್ಯನವರ ಆಚರಣೆಯಲ್ಲಿ ಚನ್ನಾಗಿ ಅಳವಟ್ಟಿದ್ದಿತು.

ಈ ಸಂಪಾದನೆಯಿಂದ ಲಕ್ಷಿಸತಕ್ಕ ೩ ನೆಯ ಸಂಗತಿಯೆಂದರೆ ಮಾರಯ್ಯನವರ ಪುಣ್ಯಾಂಗನೆಯಾದ ಮಹಾದೇವಿಯಮ್ಮನವರ ದಿವ್ಯವಾದ ಉದ್ಗಾರಗಳು. ಅವರು ತಮ್ಮ ಪತಿಗೆ ಇದ್ದಲ್ಲಿಯೇ ಕೈಲಾಸವುಂಟು, ಕರಸ್ಥಳದ ಲಿಂಗದಲ್ಲಿಯೇ ಮನಮಗ್ನವಾಗಿರುವದು ಕೈಲಾಸವು, ಬೇರೆ ಕೈಲಾಸವೆಂಬುವದಿಲ್ಲ, ಇತರ ಶರಣರಂತೆ ಸಂಗಮ, ಉಳವಿ, ಕದಳಿ ಮೊದಲಾದ ಸ್ಥಳಗಳಿಗೆ ಹೋಗುವದು ವ್ಯರ್ಥ ಎಂಬ ತತ್ವಗಳನ್ನು ಒಳ್ಳೆ ರಸಿಕತನದಿಂದ ಪ್ರತಿಪಾದಿಸಿದ್ದುದನ್ನು ನೋಡಿದರೆ ನಮ್ಮ ಶರಣರ ಪತ್ನಿಯರಾದರೂ ಮಹಾ ತತ್ವಜ್ಞಾನಿಗಳಾಗಿದ್ದರೆಂದು ಸ್ಪಷ್ಟವಾಗಿ ತೋರುವದು. ಮಹಾದೇವಿಯಮ್ಮನು ಅಂಥ ದಿವ್ಯಜ್ಞಾನಿಯಾಗಿರದಿದ್ದರೆ ರಾಜ್ಯಭೋಗವನ್ನು ತೊರೆದು ಪತಿಯ ಬೆನ್ನುಹತ್ತಿ ಕಲ್ಯಾಣ ಪಟ್ಟಣಕ್ಕೆ ಬಂದು ಬಡತನದಿಂದ ಸಂಸಾರ ಮಾಡುತ್ತಿರಲಿಲ್ಲ. ಹಿಂದಕ್ಕೆ ಋಷಿ ಪತ್ನಿಯರು ತಮ್ಮ ಪತಿಗಳೊಡನೆ ಆತ್ಮಾನಾತ್ಮ ವಿವೇಚನೆಯನ್ನು ಮಾಡುತ್ತಿದ್ದರೆಂದು ನಾವು ಕೇಳುತ್ತೇವೆ. ಆದರೆ ಮೈತ್ರೇಯಿ ಗಾರ್ಗಿ ಮೊದಲಾದ ಸ್ವಲ್ಪ ಉದಾಹರಣೆಗಳು ಮಾತ್ರ ನಮಗೆ ಕಂಡುಬರುವವು. ಆದರೆ ಶಿವಾನುಭವ ಮಂಟಪದಲ್ಲಿ ಆಧ್ಯಾತ್ಮ ವಿಷಯದ ಬಗ್ಗೆ ಸಂವಾದ ಮಾಡಿದಂಥ ನಮ್ಮ ಶಿವಶರಣೆಯರು ಅನೇಕರಾಗಿ ಹೋದರು.

---

# ಶ್ರೀಯುತ ಪುರಾಣೀಕರ ಆಕ್ಷೇಪಣೆಗಳಿಗೆ ಉತ್ತರ.

(ಶ್ರೀಯುತ ಎಮ್. ಆರ್. ಶ್ರೀನಿವಾಸ ಮೂರ್ತಿ ಬಿ. ಏ

ಬೆಂಗಳೂರು.)

ನನ್ನ ಮಿತ್ರರಾದ ಶ್ರೀಯುತ ಬಿ. ಎಂ. ಪುರಾಣೀಕರು ಶಿವಾನುಭವ ದ್ವೈಮಾಸಿಕ ಪತ್ರಿಕೆಯ ಡಿಸೆಂಬರ ೧೯೩೫ ನೆಯ ಸಂಚಿಕೆಯಲ್ಲಿ "ತೇರದಾಳದಲ್ಲಿ ಶ್ರೀಪ್ರಭುದೇವರ ಐಕ್ಯ" ಎಂಬ ಲೇಖವನ್ನು ಬರೆಯುತ್ತ, "ಪ್ರಭುಲಿಂಗಲೀಲೆಯ ಸಂಗ್ರಹ" ದಲ್ಲಿ ನಾನು ಬರೆದಿರುವ ಪೀಠಿಕೆಯ ವಿಚಾರವನ್ನೆತ್ತಿ ಕೆಲವು ಟೀಕೆಗಳನ್ನು ಮಾಡಿದ್ದಾರೆ. ನಾನು ಬರೆದಿರುವುದರಲ್ಲಿ ತಪ್ಪುಗಳನ್ನು ತೋರಿಸಿ ತಿದ್ದುವುದರ ಅಧಿಕಾರ ಎಲ್ಲರಿಗೂ ಇದೆ. ಆದರಲ್ಲಿಯೂ ನನ್ನ ಮಿತ್ರರೂ ನನಗೆ ಗೌರವಾಸ್ಪದರೂ ಆದ ಶ್ರೀಯುತ ಪುರಾಣಿಕರಿಗೆ ಹೆಚ್ಚಾಗಿಯೇ ಇದೆ. ಆದರೆ ಹೀಗೆ ತಪ್ಪುಗಳನ್ನು ತೋರಿಸಿಕೊಡುವುದರಲ್ಲಿ ನಾನು ಯಾವುದನ್ನು ಹೇಳಿದ್ದೇನೆ? ಹೇಗೆ ಹೇಳಿದ್ದೇನೆ? ಯಾವುದನ್ನು ಪ್ರತಿಪಾದನೆ ಮಾಡಿದ್ದೇನೆ? ಎನ್ನುವುದನ್ನೆಲ್ಲ ಯಥಾವತ್ತಾಗಿ ತೋರಿಸುವುದು ಧರ್ಮ; ಹಾಗೆ ಮಾಡದೆ ಇಲ್ಲದ ದೋಷಗಳನ್ನು ಹೊರಿಸುವುದು ಧರ್ಮವಲ್ಲ.

ಪುಟ ೩೨೭ ರಲ್ಲಿ ಶ್ರೀಯುತ ಪುರಾಣೀಕರು ಹೀಗೆ ಬರೆದಿದ್ದಾರೆ. "ಇನ್ನು ಕಾವ್ಯಗಳಲ್ಲಿ ಇಲ್ಲದ ಸಂಗತಿಗಳ ಬಗ್ಗೆ ಚರ್ಚಿಸುವುದೆಂದರೆ 'ಅವ್ಯಾಪಾರೇಷು ವ್ಯಾಪಾರಃ' ವಾಗುವುದು. ಇದರಲ್ಲಿ ಶ್ರೀಯುತ ಶ್ರೀನಿವಾಸಮೂರ್ತಿಗಳದಾದರೂ ಅದೇ ಹಾಡಾಗಿರುವುದು. ಅದು ಹೇಗೆಂದರೆ (೧) ಚಾಮರಸನು ತನ್ನ ಗ್ರಂಥದಲ್ಲೆಲ್ಲಿಯೂ ಶ್ರೀ ಪ್ರಭುವಿನ ಬೈಲಾದ ವಿಷಯಕ್ಕೆ ಹೇಳಿಲ್ಲವು. ಇದನ್ನು ಶ್ರೀಯುತ ಶ್ರೀನಿವಾಸಮೂರ್ತಿಗಳು ೩೭ ನೇ ಪುಟದಲ್ಲಿ ಒಪ್ಪಿ, ಪುನಃ ಅದರ ಬಗ್ಗೆಯೇ ಚರ್ಚಿಸುವುದೂ, (೨) ಅಲ್ಲಮಪ್ರಭುವಿಗೆ ಅಲ್ಲಯ್ಯನೆಂದು ಬೇರೆ ಹೆಸರು ಚಾಮರಸನು ಹೇಳದಿರುವುದರಿಂದ ಅಲ್ಲಯ್ಯ ಈ ಹೆಸರು ಬೇರೊಬ್ಬ ಶಿವಶರಣರದು ಇರಬಹುದೆಂದೂ, (೩) ಚಾಮರಸನ ಕಾವ್ಯದಲ್ಲಿ ಅಕ್ಕಮಹಾದೇವಿಯು ಕುಮಾರಿ ಎಂದು ಇದ್ದದ್ದು ಅವಳ ಲಗ್ನವಾಗಿತ್ತೆಂದು ಹೇಳಿ ದುರ್ಬಲ

ಪ್ರಮಾಣಗಳನ್ನು ಕೊಟ್ಟು ಅವುಗಳನ್ನು ಸಿದ್ಧಪಡಿಸಲಿಕ್ಕೆ ಯತ್ನಿಸಿರುವರು. ಅದು ಹೇಗೆ ಸಾಧ್ಯವು? ಬೇಕಾದರೆ ಇವುಗಳ ವಿಷಯವಾಗಿ ಐತಿಹಾಸಿಕ ದೃಷ್ಟಿಯಿಂದ ಸ್ವತಂತ್ರ ಗ್ರಂಥಗಳನ್ನು ಬರೆದು ಸಿದ್ಧಮಾಡಬೇಕು. ಇದನ್ನು ಬಿಟ್ಟು ನುರಿತ ಲೇಖಕರು ಹೀಗೆ ಮಾಡುವುದು ಒಳಿತಲ್ಲವು. ಒಟ್ಟಿನ ಮೇಲೆ ಪ್ರ. ಲೀ. ಸಂಗ್ರಹದ ಪೀಠಿಕೆಯಿಂದ 'ಕವಡಿ ಚಾಘಾಯು ದಾನಾಹಿ, ಆಣಾ ಘಟಕೇಚ ಘಸರತ ನಾಹಿ' ಎಂಬಂತೆಯಾಗಿದೆ"

ಮೇಲೆ ಉದ್ಧರಿಸಿರುವ ಭಾಗದಲ್ಲಿ ಮೂರು ಅಂಶಗಳಿಗೆ ಇವುಗಳ ವಿಚಾರದಲ್ಲಿ ನಾನು ಹೇಳಬೇಕಾದ ಸಮಾಧಾನಗಳು ಕೆಲವಿವೆ.

(೧) ಶ್ರೀ ಪ್ರಭುವಿನ ಬಯಲಾದ ವಿಷಯ— ಚಾಮರಸನು ಪ್ರಭು ಬಯಲಾದ ವಿಷಯವನ್ನು ಹೇಳಿಲ್ಲ ಎನ್ನುವುದನ್ನು ನಾನು ತಿಳಿಸಿ ಪುಟ ೩೭ ರಲ್ಲಿ ಅಡಿ ಟಿಪ್ಪಣಿ ೪೮ ರಲ್ಲಿ ಹೀಗೆ ಬರೆದಿದ್ದೇನೆ "ಅಲ್ಲಮಪ್ರಭು ಲಿಂಗೈಕ್ಯನಾದ ಸಮಾಚಾರವನ್ನು ಚಾಮರಸನು ಹೇಳಿಲ್ಲ. ಆತನು ಬಯಲಾದ ಸ್ಥಳ ಶ್ರೀಪರ್ವತವೆಂದೂ ತೇರದಾಳವೆಂದೂ ಬಳ್ಳಿಗಾವೆಯೆಂದೂ ತಾಳಗುಂದವೆಂದೂ ಭಿನ್ನಾಭಿಪ್ರಾಯಗಳಿವೆ. ಪರಿಶಿಷ್ಟ *I* (*VI*) ನೋಡಿ" ಹೀಗೆ ಬರೆದು ಪರಿಶಿಷ್ಟದಲ್ಲಿ ಗ್ರಂಥಾಂತರಗಳಲ್ಲಿ ಹೇಳಿರುವುದನ್ನು ತಿಳಿಸಿದ್ದೇನೆ; ಆ ಗ್ರಂಥಗಳ ಹೆಸರುಗಳನ್ನೂ ತಿಳಿಸಿದ್ದೇನೆ. ಈ ಬಗ್ಗೆ ಚರ್ಚೆ ಮಾಡಿ ನನ್ನ ತೀರ್ಮಾನವನ್ನೇನೂ ಹೇಳಿಲ್ಲ. ಚಾಮರಸನು ಹೇಳಿರುವುದನ್ನು ನಾನು ಒಪ್ಪಿರುವನೆಂದು ಹೇಳುವುದು ಸರಿಯಲ್ಲ. ಪ್ರಭುವಿನ ಚರಿತ್ರೆಯನ್ನು ಪ್ರಸ್ತಾಪ ಮಾಡುವಾಗ ಬಯಲಾದ ಸ್ಥಳದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರುವುವೆಂದು ವಾಚಕರ ಸೌಕರ್ಯಕ್ಕಾಗಿ ತಿಳಿಸುವುದು ಹೇಗೆ ತಪ್ಪಾಗುವುದೋ ಶ್ರೀಯುತರು ಹೇಳಬೇಕು. (೨) ಅಲ್ಲಯ್ಯನ ವಿಚಾರ— ಇದನ್ನು ಶ್ರೀಯುತ ಪುರಾಣೀಕರು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ಪುಟ ೧೪ ರಲ್ಲಿ "ಪ್ರಭುಲಿಂಗಲೀಲೆ ಅಲ್ಲಮನ ಚರಿತ್ರೆಯಾಗಿದೆ" ಎಂದು ಹೇಳಿ ಅದೇ ಪುಟದ ಅಡಿಟಿಪ್ಪಣಿ ೨೪ ರಲ್ಲಿ "ಶಿವಶರಣನಾದ ಅಲ್ಲಯ್ಯನೆಂಬವನು ಬೇರೆ ಇದ್ದಾನೆ. ಇವನ ವಿಚಾರ ಶಿ. ಕ. ಸಾ. ಕಥೆ ೮೬ ರಲ್ಲಿದೆ" ಎಂದು ತಿಳಿಸಿದ್ದೇನೆ. ಅಲ್ಲಮ, ಅಲ್ಲಮಪ್ರಭು, ಅಲ್ಲಯ್ಯ ಎಂದು ಮುಂತಾಗಿ ಹೆಸರುಗಳು ಬರುವಾಗ ನಮಗೆಲ್ಲ ಪರಿಚಿತನಾದ ಪೂಜ್ಯನಾದ ಪ್ರಭುದೇವರೆಂದು (ಸಾಮಾನ್ಯವಾಗಿ) ಅರ್ಥವಾಗುವದು ಸಹಜ. ಆದರೆ ಒಂದೇ ಹೆಸರಿನ

ಶರಣರು ಬೇರೆ ಬೇರೆ ಇರುತ್ತಾರೆ. ಸುಪ್ರಸಿದ್ಧನಾದ ಅಲ್ಲಮನ ಜೊತೆಗೆ ಇಷ್ಟೊಂದು ಪ್ರಸಿದ್ಧನಲ್ಲದ ಅಲ್ಲಯ್ಯನೆಂಬ ಶರಣನ ಹೆಸರು ಬೆರಕೆಯಾಗಿ ವಾಚಕರಿಗೆ ಸಂದೇಹ ಬರಬಾರದೆಂದು ಅಡಿಟಿಪ್ಪಣಿಯಲ್ಲಿ ಎಚ್ಚರಿಕೆ ಕೊಡಲಾಯಿತು. ಅಲ್ಲಮಪ್ರಭು ಅಲ್ಲದೆ ಅಲ್ಲಯ್ಯ ಎಂಬ ಶರಣ ಬೇರೆ ಇದ್ದಾನೆ.

ಅವನ ಕಥೆ ಶಿವಕಥಾ ಸಾಗರದಲ್ಲಿ ಹೀಗಿದೆಃ- ಅಲ್ಲಯ್ಯನೆಂಬ ಶರಣರು ವಿಭೂತಿ ರುದ್ರಾಕ್ಷ ಮೊದಲಾದ ಆತ್ಮಾವರಣದಲ್ಲಿ ಸಾವಧಾನವಾಗಿರುತ್ತ ದಿನದಿನವೂ ಕೈಲಾಸಕ್ಕೆ ಹೋಗಿ ಶಿವನ ಕೂಡ ಏಕಾಂತವ ಮಾಡಿ ಬರುತ್ತಿರಲು; ಮತ್ತೊಂದು ದಿವಸ ಎಂದಿನಂತೆ ಶಿವನ ಬಳಿಗೆ ಹೋಗಿ ಮಾತಾಡಲು ಶಿವನು ಸುಮ್ಮಗಿರಲು; ಆಗ ನಮ್ಮಲ್ಲಿ ಮಹಾದೇವನು ಏನು ತಪ್ಪು ಕಂಡನೋ ಆದ ಕಾರಣ ಮಾತಾಡಲಿಲ್ಲವೆಂದು ತಮ್ಮ ಪ್ರಾಣವಂ ಬಿಡುತ್ತಿರಲು; ಎಲೆ ಅಲ್ಲಯ್ಯ! ನಿಮ್ಮ ನಿಷ್ಠೆಯು ನೋಡುವರೆ ಸುಮ್ಮನಿರ್ದೆವಲ್ಲದೆ ಮತ್ತೊಂದಿಲ್ಲವೆಂದು ತಮ್ಮೊಳಿಂಬಿಟ್ಟುಕೊಂಡರು ".

ಇದರಿಂದ ಶ್ರೀಯುತರು ಅಲ್ಲಯ್ಯ, ಅಲ್ಲಮ ಎಂದು ಬರುವುದನ್ನೆಲ್ಲ ಮೂಲ ಅಲ್ಲಮಪ್ರಭುವೆಂದು ಭ್ರಮಿಸಬಾರದು. ಇನ್ನೂ ಒಂದು ಉದಾಹರಣೆಯನ್ನು ಕೊಡುತ್ತೇನೆ. "ಬಿಟ್ಟ ಮಂಡೆಯ ಅಲ್ಲಮಪ್ರಭು" ಎಂಬ ಶರಣ ಇನ್ನೊಬ್ಬನಿದ್ದಾನೆ. ವೀರಶೈವಾಮೃತ ಮಹಾಪುರಣ ಎಂಟನೆಯ ಕಾಂಡ ಎಂಟನೆಯ ಸಂಧಿ ೨೭ ನೆಯ ಪದ್ಯದಲ್ಲಿ ಈತನ ವಿಚಾರವನ್ನು ಶ್ರೀಯುತರು ಓದಿ ತಿಳಿದುಕೊಳ್ಳಬಹುದು. ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. 'ಗುಹೇಶ್ವರನಲ್ಲಯ್ಯ' ಎಂಬ ಅಂಕಿತ, ವಚನಗಳಲ್ಲಿ ಬಂದರೆ ಸಾಮಾನ್ಯವಾಗಿ ಮೂಲ ಅಲ್ಲಮ ಪ್ರಭುವಿನ ಕಡೆಗೆ ನಮ್ಮ ದೃಷ್ಟಿ ಹೋಗುವದು ಸಹಜ. ಆದರೆ ಗ್ರಂಥಗಳನ್ನು ಪರಿಶೀಲಿಸಿದರೆ ಈ ಅಂಕಿತ ಗಾಣದ ಕಣ್ಣಪ್ಪನದೆಂದು ತಿಳಿಯುತ್ತದೆ. ವಚನ ಶಾಸ್ತ್ರಸಾರವನ್ನು ಶಿವಯೋಗಮಂದಿರದಲ್ಲಿರುವ " ಸರ್ವ ಪುರಾತನರ ವಚನ " ಎಂಬ ಗ್ರಂಥವನ್ನು ನೋಡಿದರೆ ಈ ವಿಷಯ ಮಂದಟ್ಟಾಗುತ್ತದೆ. ಆದುದರಿಂದ ಒಂದೇ ಹೆಸರಿನ ಶರಣರನ್ನು ವಿಂಗಡಿಸುವದರಲ್ಲಿ ಬಹಳ ಎಚ್ಚರಿಕೆ ಬೇಕಾದೀತು.

( ೨ ) ಅಕ್ಕ ಮಹಾದೇವಿಯ ವಿಚಾರಃ— ಪ್ರಭುಲಿಂಗಲೀಲೆಯಲ್ಲಿ ಬಸವಣ್ಣನವರ ವಿಚಾರ, ಅಕ್ಕ ಮಹಾದೇವಿಯ ವಿಚಾರ ಮುಂತಾದವು ಬರುತ್ತವೆ. ಬಸವಣ್ಣನವರ ಮತ್ತು ಅಕ್ಕ ಮಹಾದೇವಿಯರ ವಿಚಾರ

ಗಳಲ್ಲಿ ಸಂಪೂರ್ಣವಾದ ಬೇರೆ ಸ್ವತಂತ್ರ ಗ್ರಂಥಗಳೂ ಇವೆ. ಬಸವಣ್ಣನವರ ವಿಚಾರದಲ್ಲಿ ಬಸವ ಪುರಾಣಾದಿಗಳು ಪ್ರಸಿದ್ಧವಾಗುವವು. ಅಕ್ಕ ಮಹಾದೇವಿಯ ವಿಚಾರದಲ್ಲಿ ಮಹದೇವಿಯಕ್ಕನ ರಗಳೆ ಮತ್ತು ಮಹದೇವಿಯಕ್ಕನ ಪುರಾಣ ಪ್ರಸಿದ್ಧವಾದುವು. ಪ್ರಭುಲಿಂಗಲೀಲೆಯಲ್ಲಿ ಬರುವ ಬಸವಣ್ಣನವರ ಮತ್ತು ಅಕ್ಕ ಮಹಾದೇವಿಯರ ಭಾಗಗಳನ್ನು ಚಾಮರಸನು ಹೇಳಿದಂತೆ ಬರೆಯುವಾಗ ಪುಟ ೨೬ ಅಡಿ ಟಿಪ್ಪಣಿ ೩೫ ರಲ್ಲಿ "ಬಸವಣ್ಣನವರು, ಮಹದೇವಿಯಕ್ಕ ಮುಂತಾದವರ ಜನ್ಮ ಕಾರಣಗಳು ವೀರಶೈವ ಗ್ರಂಥಗಳಲ್ಲಿ ಒಂದೇ ರೀತಿಯಾಗಿಲ್ಲ" ಎಂದು ಸೂಚಿಸಿದ್ದೇನೆ. ಮುಂದೆ ಬರುವ ಕಥೆಯ ವ್ಯತ್ಯಾಸಗಳನ್ನು ಅಲ್ಲಲ್ಲಿ ಅಡಿ ಟಿಪ್ಪಣಿಗಳಲ್ಲಿ ಹೇಳಿದ್ದೇನೆ. ಹೀಗೆಯೇ ಪುಟ ೨೭ ಅಡಿ ಟಿಪ್ಪಣಿ ೩೭ ರಲ್ಲಿ "ಮಹದೇವಿಯಕ್ಕ ಮತ್ತು ಕೌಶಿಕ ಇವರಿಗೆ ವಿವಾಹವಾಯಿತೇ? ಎಂಬದನ್ನು ಚಾಮರಸನು ಹೇಳಿಲ್ಲ. ಈ ವಿಚಾರದಲ್ಲಿ ಗ್ರಂಥಗಳಲ್ಲಿ ಏಕಾಭಿಪ್ರಾಯವಿಲ್ಲ. ಪರಿಶಿಷ್ಟ *I (IV)* ನೋಡಿ" ಎಂದು ಹೇಳಿ ಪರಿಶಿಷ್ಟದಲ್ಲಿ ಗ್ರಂಥಗಳಲ್ಲಿರುವುದನ್ನು ತಿಳಿಸಿದ್ದೇನೆ. ಈ ಗ್ರಂಥಗಳೆಲ್ಲ ವೀರಶೈವ ಗ್ರಂಥಗಳೇ. ನಾನು ಇವುಗಳನ್ನೆಲ್ಲ ಇಟ್ಟುಕೊಂಡು ಚರ್ಚೆ ಮಾಡಿಯೂ ಇಲ್ಲ. ಯಾವುದನ್ನೂ ಸಿದ್ಧ ಮಾಡಿಯೂ ಇಲ್ಲ. ಬೇಕಾದವರು ಪೀಠಿಕೆಯನ್ನೂ ಪರಿಶಿಷ್ಟವನ್ನೂ ನೋಡಬಹುದು.

ಪುರಾತನ ಗ್ರಂಥವನ್ನು ಪರಿಷ್ಕರಿಸಿ ಪೀಠಿಕೆಯೊಂದಿಗೆ ಪ್ರಕಟಿಸುವಾಗ ಕಥೆಗೆ ಮೂಲವು ಯಾವುದಿರಬಹುದು? ಇದೇ ವಿಚಾರವನ್ನು ಹೇಳಿರುವ ಇತರ ಗ್ರಂಥಗಳಲ್ಲಿ ಯಾವ ವ್ಯತ್ಯಾಸಗಳಿರಬಹುದು? ಎಲ್ಲೆಲ್ಲಿ ಭಿನ್ನಾಭಿಪ್ರಾಯಗಳು ಬಂದಿವೆ? ಎಂಬವನ್ನೆಲ್ಲ ತೋರಿಸಿ ವಿದ್ಯಾರ್ಥಿಗಳಾಗಲಿ ಸಾಮಾನ್ಯ ಸಾಹಿತಿಗಳಾಗಲಿ ವ್ಯಾಸಂಗ ಮಾಡುವದಕ್ಕೆ ಅನುಕೂಲಿಸುವಂತೆ ಪ್ರಕಟಿಸುವದು ಪದ್ಧತಿಯೆನ್ನುವುದು ಇತರ ಭಾಷೆಗಳಲ್ಲಿನ ಇಂಥ ಗ್ರಂಥಗಳನ್ನು ನೋಡುವುದರಿಂದ ತಿಳಿಯಬಹುದು. ನಾನು ಮಾಡಿರುವುದು ಅಷ್ಟೇ ಅಲ್ಲದೆ ಗ್ರಂಥಗಳಲ್ಲಿ ಇಲ್ಲದ್ದನ್ನು ಹೇಳುವುದನ್ನಾಗಲಿ, ನನ್ನ ಮನಸ್ಸಿಗೆ ಬಂದಂತೆ ಸಿದ್ಧಾಂತ ಮಾಡುವುದನ್ನಾಗಲಿ ಮಾಡಿಲ್ಲ.

ಪ್ರಭು ದೇವರು ಐಕ್ಯವಾದ ಸ್ಥಳದ ವಿಚಾರದಲ್ಲಿ ಶ್ರೀಯುತರು ತಮ್ಮ ಲೇಖಗಳನ್ನು ಮುಗಿಸಿದ ಮೇಲೆ ಆ ವಿಷಯವನ್ನು ಚರ್ಚೆಗೆ ತೆಗೆದುಕೊಳ್ಳುತ್ತೇನೆ.

---

# ಕಲ್ಯಾಣ ಪಟ್ಟಣ.

(ಲೇ:— ಶ್ರೀಯುತ ವೀರಭದ್ರಪ್ಪ ಬಸಪ್ಪ ಹಾಲಭಾವಿ. ಬಿ. ಎ. ಎಲ್. ಎಲ್ ಬಿ.
ರಿಟಾಯರ್ಡ ಫಸ್ಟ್‌ಕ್ಲಾಸ ಸಬ್‌ಜಜ್ಜ ಧಾರವಾಡ. )



ಬಹಳ ದಿವಸಗಳಿಂದ ನನಗೆ ಕಲ್ಯಾಣ ಪಟ್ಟಣವನ್ನು ನೋಡುವ ಕುತೂಹಲವಿತ್ತು. ಒಬ್ಬಂಟಿಗನಾಗಿ ಪ್ರವಾಸ ಮಾಡುವದು ತ್ರಾಸದಾಯಕವು. ನನಗಂತೂ ಬಹುತರ ಅಶಕ್ಯವು. ನನ್ನ ಮಿತ್ರರಾದ ಶ್ರೀ. ರಾ. ಬುದ್ಧಯ್ಯ ಸ್ವಾಮಿ ಪುರಾಣಿಕ ಇವರು ಸೊಲ್ಲಾಪುರಕ್ಕೆ ಗೃಹಕೃತ್ಯದ ಸಲುವಾಗಿ ಹೋಗಬೇಕಾಯಿತು. ಅವರನ್ನು ಕೇಳಲಾಗಿ ಮುಂದೆ ಕಲ್ಯಾಣವನ್ನು ನೋಡಲಿಕ್ಕೆ ಬರುತ್ತೇವೆಂದು ಅವರು ಒಪ್ಪಿಕೊಂಡರು. ನಾವಿಬ್ಬರೂ ಕೂಡಿ ಸೊಲ್ಲಾಪುರಕ್ಕೆ ಹೋಗಿ ಅಲ್ಲಿಯ ಪವಿತ್ರ ಐತಿಹಾಸಿಕ ಸ್ಥಾನಗಳಾದ ಶ್ರೀ ಸಿದ್ಧರಾಮೇಶ್ವರನ ದೇವಾಲಯ, ಅವನಿಗೆ ಶ್ರೀ ಮಲ್ಲಿಕಾರ್ಜುನ ಮತ್ತು ಶ್ರೀಮದಲ್ಲಮ ಪ್ರಭುದೇವರು ದರ್ಶನಕೊಟ್ಟ ಸ್ಥಳಗಳು, ಶ್ರೀ ರೇವಣಸಿದ್ಧೇಶ್ವರನ ದೇವಾಲಯ, ಸೊನ್ನಲಿಗೆಯಲ್ಲಿ ಸಿದ್ಧರಾಮೇಶ್ವರನ ತಾಯಿಯಾದ ಸುಗ್ಗಲದೇವಿಯನ್ನು ರೇವಣಸಿದ್ಧೇಶ್ವರನು ಕಂಡು ಆಕೆಯ ಗರ್ಭಕ್ಕೆ ನಮಸ್ಕರಿಸಿ ಆಕೆಯಿಂದ ಸಿದ್ಧರಾಮೇಶ್ವರನು ಹುಟ್ಟುವದನ್ನು ಅರುಹಿದ ಸ್ಥಾನ, ಮುಂತಾದವುಗಳನ್ನು ನೋಡಿ ಸೊಲ್ಲಾಪುರದಲ್ಲಿ ವಾಸಿಸುವ ನಾಲ್ವತ್ತವಾಡ ಶ್ರೀ ಶಿವಶರಣ ವೀರಪ್ಪಯ್ಯನವರ ಸುಪುತ್ರಿಯರಾದ ಶರಣಮ್ಮನವರ ದರ್ಶನವನ್ನು ತೆಗೆದುಕೊಂಡೆವು. ಮರುದಿವಸ ರೇಲ್ವೆಯ ಮಾರ್ಗವಾಗಿ ಕಲಬುರ್ಗಿಗೆ ಹೋಗಿ ಶ್ರೀ ಶರಣ ಬಸವೇಶ್ವರನ ದರ್ಶನ ತೆಗೆದುಕೊಂಡು ಗದ್ದುಗೆಮಠದಲ್ಲಿ ಸ್ಥಾಪಿಸಿರುವ ಶ್ರೀಮದ್ವೀರಶೈವ ಬಸವರಾಜ ಫ್ರೀ ಬೋರ್ಡಿಂಗ ಮುಂತಾದ ಸಂಸ್ಥೆಗಳನ್ನು ಸಂದರ್ಶಿಸಿದೆವು. ಅಲ್ಲಿಯ ವೀರಶೈವ ತರುಣ ಸಂಘದವರ ವಿನಂತಿಯ ಮೇರೆಗೆ 'ವೀರಶೈವ ಮತತತ್ವ ಮತ್ತು ಭಕ್ತಿ' ಈ ವಿಷಯಗಳ ಮೇಲೆ ಗದ್ದಿಗಿ ಮಠದಲ್ಲಿ ಶ್ರೀ. ರಾ. ಬುದ್ಧಯ್ಯ ಸ್ವಾಮಿಗಳು ರಾತ್ರಿ ೮ ರಿಂದ ೧೦ ಘಂಟೆಯ ವರೆಗೆ ಕೂಡಿದ ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಉಪದೇಶ ಮಾಡಿದರು. ಮರುದಿವಸ ಸರ್ವಿಸ ಮೋಟಾರದಿಂದ ಕಲ್ಯಾಣಕ್ಕೆ ಹೋದೆವು. ಈ ಸರ್ವಿಸ ಮೋಟಾರದ

ಒಡೆಯರು ಗಡಗಿನ ರಾ ರಾ. ಭೂಮರಡ್ಡಿ ಬಸಪ್ಪನವರು. ಆ ಭಾಗದಲ್ಲಿ ಕೆಲವು ಮಾರ್ಗಗಳ ಮೇಲೆ ಇವರ ಒಂದೇ ಮೋಟರ ಸರ್ವಿಸ ಇರುವದು. ಕಲ್ಯಾಣದಲ್ಲಿ ಯಾತ್ರಿಕರಿಗೆ ಇಳಕೊಳ್ಳಲಿಕ್ಕೆ ಅನುಕೂಲತೆಯೇ ಇರುವದಿಲ್ಲ. ರಾ. ಭೂಮರಡ್ಡಿ ಬಸಪ್ಪನವರ ಪುತ್ರರಾದ ರಾ. ತೋಟಪ್ಪನವರೂ ಮತ್ತು ಹುಮನಾಬಾದದಲ್ಲಿರುವ ಇದೇ ಮೋಟರ ಸರ್ವಿಸದ ವ್ಯವಸ್ಥಾಪಕರಾದ ಮೆಣಸಿನಕಾಯಿ ಪರಪ್ಪನವರೂ ನಮಗೆ ಕಲ್ಯಾಣದಲ್ಲಿ ಇಳಕೊಳ್ಳುವ ಮತ್ತು ಅಲ್ಲಿಯ ಎಲ್ಲ ಸ್ಥಳಗಳನ್ನು ತೋರಿಸುವ ವ್ಯವಸ್ಥೆಯನ್ನು ಮಾಡಿ ನಮಗೆ ಬಹಳೇ ಉಪಕಾರ ಮಾಡಿದರು.

ಕಲ್ಯಾಣ ಪಟ್ಟಣವು ಸೋಲ್ಲಾಪುರಕ್ಕೆ ೮೨ ಮೈಲುಗಳ ಮತ್ತು ಕಲಬುರ್ಗಿಯಿಂದ ಉತ್ತರಕ್ಕೆ ೫೮ ಮೈಲುಗಳ ಅಂತರದಲ್ಲಿದೆ. ಈ ಪಟ್ಟಣಕ್ಕೆ ಈ ಎರಡೂ ಮಾರ್ಗಗಳಿಂದ ಸರ್ವಿಸ ಮೋಟಾರದಲ್ಲಿ ಪ್ರಯಾಣ ಮಾಡಲು ಅನುಕೂಲವದೆ. ಇದು ನಿಜಾಮರಾಜ್ಯದೊಳಗಿನ ಒಂದು ಜಹಾಗಿರಿಯ ಮುಖ್ಯ ಸ್ಥಳವದೆ. ಈ ಜಹಾಗಿರಿಯ ಮುಖ್ಯಸ್ಥರಿಗೆ ನವಾಬರೆನ್ನುತ್ತಾರೆ. ಅವರ ಹೆಸರು ಮೈದಿ ಹುಸೇನಖಾನ. ಇವರಿಗೆ ಜಮಾಲುದ್ದೀನಖಾನನೆಂಬ ಒಬ್ಬ ತಮ್ಮನಿದ್ದಾನೆ. ಜಹಾಗೀರಿನ ಆಡಳಿತವು ಈಗ ನಿಜಾಮ ಸರಕಾರದ ಕೈಕೆಳಗಿದೆ. ಇದರ ವಾರ್ಷಿಕ ಉತ್ಪನ್ನವು ಸುಮಾರು ೨॥ ಲಕ್ಷ ರೂಪಾಯಿ. ಇಲ್ಲಿಯ ಈಗಿನ ಜನವಸ್ತಿಯು ಸುಮಾರು ೨೦ ಸಾವಿರ ಇದ್ದು ಅದರಲ್ಲಿ ತುರುಕರ ಸಂಖ್ಯೆಯೇ ಹೆಚ್ಚಿ ಇರುವುದು. ಉಳಿದಿದ್ದರಲ್ಲಿ ಲಿಂಗಾಯತರ ಸಂಖ್ಯೆಯು ಅರ್ಧದಷ್ಟು ಇದೆ.

ಪಟ್ಟಣದ ಅರ್ಧದಷ್ಟು ಭಾಗವು ಮೇಲಿಂದ ಮೇಲೆ ಒದಗಿದ ಪ್ಲೇಗಿನ ಹಾವಳಿಯಿಂದ ಹಾಳು ಬಿದ್ದು ಬಿಟ್ಟದೆ. ಇದರ ಸುತ್ತಲಿರುವ ಪೂರ್ವಕಾಲದ ಕುರುಹುಗಳ ಮೇಲಿಂದ ಶ್ರೀ ಬಸವೇಶ್ವರನ ಕಾಲದಲ್ಲಿ ಇದರ ವಿಸ್ತಾರವು ೩೬ ಚೌರಸ ಮೈಲು ಇದ್ದಿತೆಂಬುದು ನಿಜವೆಂದು ಕಾಣುತ್ತದೆ. ಇದರ ಈಗಿನ ಸ್ಥಿತಿಯನ್ನು ನೋಡಲಾಗಿ ಇದು ಸಮಾಜ ಸುಧಾರಣೆಯಲ್ಲಿಯೂ ಮತ್ತು ವಿದ್ಯೆಯಲ್ಲಿಯೂ ಬಹಳೇ ಹಿಂದುಳಿದಂತೆ ಕಾಣಿಸುತ್ತದೆ.

ಇಲ್ಲಿಯ ಮುಖ್ಯ ಉದ್ಯೋಗವು ಕಣಗಳನ್ನು ನೇಯುವುದಿದು ಸುಮಾರು ೫೦೦೦ ಮಗ್ಗಗಳಿವೆ. ಈ ಪಟ್ಟಣದ ಸುತ್ತು ಮುತ್ತು ಮರಡಿ

ಭೂಮಿ ವಿಶೇಷವಿದ್ದದರಿಂದ ಒಕ್ಕತನವು ಹೆಚ್ಚಾಗಿ ನಡೆಯುವದಿಲ್ಲ. ಐತಿಹಾಸಿಕ ನೋಡತಕ್ಕಂಥ ಸ್ಥಳಗಳು ಅನೇಕ ಇರುತ್ತವೆ. ಇವುಗಳಲ್ಲಿ ಮುಖ್ಯವಾದವುಗಳು ಯಾವವೆಂದರೆ—

ಬಿಜ್ಜಳರಾಜನ ಕಾಲದ ಊರೊಳಗಿನ ಕಿಲ್ಲೆಯು ನೆಲಸಮವಾಗಿದೆ. ಆತನ ತರುವಾಯ ಈ ಪ್ರಾಂತವನ್ನು ಆಳಿದ ರಾಜರು ಕಟ್ಟಿಸಿದ ಕೋಟೆಯು ಪಟ್ಟಣದ ಉತ್ತರ ದಿಕ್ಕಿಗೆ ಊರ ಸಮೀಪದಲ್ಲಿಯೇ ಇರುವುದು. ಅದು ಈಗಲೂ ಒಳ್ಳೆಯ ಸ್ಥಿತಿಯಲ್ಲಿದ್ದು ನವಾಬರ ವಾಸಸ್ಥಳವೂ ಮತ್ತು ಈ ಜಹಾಗೀರಿನ ಮುಖ್ಯ ಕಚೇರಿಯ ಸ್ಥಳವೂ ಆಗಿರುತ್ತದೆ.

ಪಟ್ಟಣದ ಮಧ್ಯದಲ್ಲಿ ಶ್ರೀ ಬಸವೇಶನ ದೇವಸ್ಥಾನವಿದ್ದು ಅಲ್ಲಿ ದ್ವಿಕಾಲ ಪೂಜೆಯನ್ನು ಬಾಳೆಹಳ್ಳಿಯ ಶಾಖೆಗೆ ಸೇರಿದ ಶ್ರೀ ವಿರುಪಾಕ್ಷ ಸ್ವಾಮಿಯೆಂಬ ಪಟ್ಟಾಧಿಕಾರಿಗಳು ಮಾಡುತ್ತಿರುವರು. ಅಲ್ಲಿಂದ ಉತ್ತರಕ್ಕೆ ಸ್ವಲ್ಪ ಅಂತರದ ಮೇಲೆ ಬಸವೇಶ್ವರನ ಪರುಷಗಟ್ಟೆಯು ಸ್ಥಾನವಿದ್ದು ಆ ಕಟ್ಟೆಯು ಈಗ ನಾಶವಾಗಿ ಅಲ್ಲಿ ಕಟಕರು ಒಂದು ಹೊಸ ಕಟ್ಟೆಯನ್ನು ಕಟ್ಟಿಸಿಕೊಂಡು ಅದರ ಮೇಲೆ ಮಾಂಸ ಮಾರುವ ಉದ್ಯೋಗವನ್ನು ಸಾಗಿಸಿರುತ್ತಾರೆ. ಈ ಕಟ್ಟೆಯ ತುರುಕರು ಈಗಲೂ ಇದು ಬಸವಣ್ಣನವರ ಕಟ್ಟೆಯೆಂದೇ ಹೇಳುತ್ತಾರೆ. ಇದರ ಸಮೀಪದಲ್ಲಿಯೇ ಬಸವೇಶ್ವರನ ಕಾಲದ ಕರಿಮಲ್ಲಿಗೆಯ ಕಂಟಿ ಇದ್ದುದನ್ನು ಈಗಲೂ ಜನರು ಹೇಳುತ್ತಾರೆ.

ಈ ಪಟ್ಟಣಕ್ಕೆ ದಕ್ಷಿಣಕ್ಕೆ ೨ ಮೈಲುಗಳ ಮೇಲೆ ತ್ರಿಪುರಾಂತವೆಂಬ ಒಂದು ಸಣ್ಣ ಹಳ್ಳಿಯು ಇರುವುದು. ಅದರ ಪಶ್ಚಿಮಕ್ಕೆ ಪಕ್ಕದಲ್ಲಿಯೇ ಸುಮಾರು ೪ ಮೈಲು ಸುತ್ತಳತೆಯುಳ್ಳ ತ್ರಿಪುರಾಂತಕವೆಂಬ ಹೆಸರಿನ ಕೆರೆಯು ನೀರಿನಿಂದ ತುಂಬಿರುವುದು. ಈ ಕೆರೆಯ ನೀರನ್ನೇ ೭—೮ ಮೈಲುಗಳ ವರೆಗಿನ ಭೂಮಿಯು ಸಾಗುವಳಿಗೆ ಉಪಯೋಗಿಸುತ್ತಾರೆ. ಈ ಕೆರೆಯು ಪಶ್ಚಿಮ ದಂಡೆಯ ಮೇಲೆ ಅತಿ ವಿಶಾಲವಾದ ಪತ್ರಿಯ ಬನವಿದ್ದು ಅದರ ಮಧ್ಯದಲ್ಲಿ ಶ್ರೀ ರೇವಣಸಿದ್ಧೇಶ್ವರರ ಮಕ್ಕಳಾದ ಶ್ರೀ ಘನಲಿಂಗ ರುದ್ರಮುನಿಗಳ ಗವಿಯು ಇರುವುದು. ಇದರ ಮುಂಭಾಗದಲ್ಲಿ ೭ ಕಮಾನುಗಳುಳ್ಳ ೭ ಅಂಕಣಗಳಿದ್ದು ಮಧ್ಯದಲ್ಲಿ ೫೦ ಅಡಿಗಳ ಉದ್ದವಾದ ಗವಿಯು ಇರುವುದು. ಈ ಗವಿಯಲ್ಲಿ ಒಂದು ಲಿಂಗವಿದೆ. ಮುಂಭಾಗದಲ್ಲಿ ದಕ್ಷಿಣ ದಿಕ್ಕಿನ ಕೊನೆಯಲ್ಲಿ ಶ್ರೀ ರುದ್ರಮುನಿಗಳ ಶಿಷ್ಯ

ರಾದ ಶ್ರೀ ಮರಿದೇವರ ಗದ್ದುಗೆ ಇದೆ. ದೇವಾಲಯದ ಮುಂದೆಯೇ ೧೦-೧೨ ದೊಡ್ಡ ಹುಣಸಿ ಮರಗಳಿದ್ದು ಅವುಗಳ ಮಧ್ಯದಲ್ಲಿ ಒಂದು ಸೀ ನೀರಿನ ಬಾವಿ ಇರುತ್ತದೆ. ಈ ದೇವಸ್ಥಾನದ ಪೂಜೆಯು ತ್ರಿಪುರಾಂತದ ಭಕ್ತರ ಸಹಾಯದಿಂದ ನಡೆಯುತ್ತಿದೆ. ಈ ಗವಿಯ ಹಿಂಭಾದಲ್ಲಿ ಶ್ರೀ ಬಸವೇಶ್ವರನ ಅನುಭವ ಮಂಟಪವಿದ್ದು ಅದು ಈಗ ನೆಲಸಮವಾಗಿದೆ ಯೆಂದು ಹೇಳುತ್ತಾರೆ.

ಕೆರೆಯ ಉತ್ತರ ದಂಡೆಯಮೇಲೆ ಒಂದು ಪುರಾತನ ವಿಶಾಲವಾದ ಧರ್ಮಶಾಲೆ ಇದೆ. ಅದರ ಸಮೀಪದಲ್ಲಿಯೇ ಅಕ್ಕನಾಗಮ್ಮನ ಗವಿಯು ಇರುವುದು. ಈ ಗವಿಯ ಮಹಾದ್ವಾರವು ಉತ್ತರಕ್ಕಿದ್ದು ಅದರ ಎದು ರಿಗೆ ೫ ಅಂಕಣಗಳ ಪಡಸಾಲೆ ಇರುವುದು. ಗವಿಯ ಒಳಗೆ ಹೋಗುವ ಬಾಗಿಲವು ಪಶ್ಚಿಮ ದಿಕ್ಕಿಗಿದೆ. ಬಾಗಿಲದ ಅಳತೆಯು ಒಬ್ಬ ಮನುಷ್ಯನು ಮಾತ್ರ ಕುಳಿತುಕೊಂಡು ಹೋಗುವಷ್ಟಿದೆ. ಒಳಗೆ ಗವಿಯು ದಕ್ಷಿಣ ದಿಕ್ಕಿಗೆ ಸಾಗಿ ಮುಂದೆ ಮತ್ತೆ ಪಶ್ಚಿಮಕ್ಕೆ ತಿರುಗಿರುತ್ತದೆ. ಅಲ್ಲಿ ಮಧ್ಯ ದಲ್ಲಿ ಒಂದು ಲಿಂಗವಿದ್ದು ಲಿಂಗದ ಎರಡೂ ಮಗ್ಗಲಿಗೆ ಪಾರ್ವತಿ ಸಮೇತವಾದ ಈಶ್ವರನ ಕಲ್ಲಿನ ಮೂರ್ತಿಯು ಇರುವುದು. ಈ ಗವಿ ಯಲ್ಲಿಯ ಯಾವ ಮೂರ್ತಿಗಳಿಗೂ ಪೂಜೆಯು ನಡೆಯುವಂತೆ ಕಾಣು ವುದಿಲ್ಲ. ಗವಿಯ ತುಂಬೆಲ್ಲ ಕತ್ತಲೆ ಇದ್ದು ಕಣ್ಣು ಕಪ್ಪಡಿಗಳ ವಾಸಸ್ಥಾನ ವಾಗಿದೆ. ದೀಪದ ಸಹಾಯವಿಲ್ಲದೆ ಒಳಗೆ ಹೋಗಲು ಸಾಧ್ಯವಿಲ್ಲ.

ತ್ರಿಪುರಾಂತಕನ ಕರೆಯ ವಾಯುವ್ಯ ದಿಕ್ಕಿಗೆ ಶ್ರೀ ಮಡಿವಳ ಮಾಚಿದೇವನ ೯ ಅಂಕಣಗಳ ಗುಡಿಯಿದೆ. ಗುಡಿಯ ಸುತ್ತಲೂ ಹೊಂ ಡವಿದೆ. ಹೊಂಡದ ತುಂಬೆಲ್ಲ ಸಹಸ್ರ ದಳದ ಬಿಳೀ ಕಮಲದ ಬಳ್ಳಿ ಗಳಿವೆ. ಗುಡಿಯಲ್ಲಿ ಒಂದೇ ಪಾನ ಬಟ್ಟಲದಲ್ಲಿ ಎರಡು ಲಿಂಗಗಳಿದ್ದು ಅವು ಗುರು ಶಿಷ್ಯರವು ಎಂದು ಹೇಳುತ್ತಾರೆ. ಗುಡಿಯ ಮುಂದಿನ ಅಂ ಗಳದಲ್ಲಿ ಒಂದು ಬಾವಿಯಿದ್ದು ಅಲ್ಲಿಯೇ ಮಾಚಿದೇವನು ಶರಣರ ಬಟ್ಟೆಗಳನ್ನು ತೊಳೆಯುತ್ತಿದ್ದನೆಂದು ಹೇಳುತ್ತಾರೆ.

ಈ ಗುಡಿಯ ಈಶ್ಯಾನಕ್ಕೆ ಗದ್ದಗಿಮಠವೆಂಬ ಶ್ರೀ ಅಲ್ಲಮಪ್ರಭುವಿನ ಮಠವಿದೆ. ಇಲ್ಲಿ ಒಬ್ಬ ವಿರಕ್ತ ಮೂರ್ತಿಗಳಿರುತ್ತಾರೆ. ಇದಕ್ಕೆ ಸ್ಥಿರಚರ ವಾದ ಯಾವ ಆಸ್ತಿಯೂ ಇರುವದಿಲ್ಲ. ಇಲ್ಲಿ ನಿತ್ಯ ಪೂಜೆಯು ನಡೆ ಯುತ್ತಿರುತ್ತದೆ. ಇದರ ಆಗ್ನೆಯಕ್ಕಿರುವ ಮರಡಿಯ ಮೇಲೆ ಶ್ರೀ ಬಸ

ವೇಶ್ವರನ ಅರಮನೆಯಿತ್ತೆಂದು ಹೇಳುತ್ತಾರೆ. ಅದರ ಕೆಳಬದಿಗೆ ಗಂಜೀ ಕೆರೆಯ ಸ್ಥಾನವಿದೆ. ಬಸವೇಶ್ವರನ ಕಾಲದಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳ ಸಲುವಾಗಿ ಮಾಡಿದ ಬೋನವನ್ನು ಬಸಿದ ನೀರು ಬಂದು ಇಲ್ಲಿ ನಿಲ್ಲುತ್ತಿದ್ದುದರಿಂದ ಇದಕ್ಕೆ ಗಂಜೀಕೆರೆಯೆಂದು ಕರೆಯು ತ್ತಿದ್ದರೆಂದು ಹೇಳುತ್ತಾರೆ. ಕಲ್ಯಾಣದ ಪೂರ್ವ ದಿಕ್ಕಿಗೆ ಸುಮಾರು ೧॥ ಮೈಲು ಅಂತರದ ಮೇಲೆ ಶ್ರೀ ಪೋಳಗಿ ಮಾರಯ್ಯನ ಗವಿಯು ಈಗ್ಯೂ ಒಳ್ಳೇ ಸ್ಥಿತಿಯಲ್ಲಿದೆ. ಅದರ ಹತ್ತರ ಒಂದು ಹಳೇ ಹೆಸರು ಗೊತ್ತಿಲ್ಲದ ದೊಡ್ಡ ಮರವಿದೆ. ಇದು ಮಾರಯ್ಯನು ತಂದಿಟ್ಟ ಕಟ್ಟಿ ಗೆಯ ಹೊರೆಯು ಚಿಗಿತು ಬೆಳೆದಿರುವದೆಂದು ಜನರು ಹೇಳುತ್ತಾರೆ.

ಈ ಪಟ್ಟಣದ ಪೂರ್ವ ಭಾಗದಲ್ಲಿ ಪೀರ ಪಾಚ್ಛಾನ ಬಂಗ್ಲೆಯೆಂದು ಒಂದು ವಿಶಾಲವಾದ ಮುಸಲ್ಮಾನ ಸತ್ಪುರುಷನ ಗೋರಿಯು ಸ್ಥಾನವಿದೆ. ಇದರ ವಿಷಯವಾಗಿ ಜನರು ಹೇಳುವದೇನಂದರೆ—

"ಕಲ್ಯಾಣ ಪ್ರಾಂತವು ಇಂತರದೌಲಾ ಎಂಬ ಫಕೀರನಿಗೆ ಜಹಾಗೀರು ದೊರೆಯಿತು. ಈತನ ಗುರು ನಿಲಂಗಿ ಎಂಬ ಗ್ರಾಮದ ಪೀರಪಾಚ್ಛಾ ಎಂಬವನು ಈತನ ಗೋರಿಯನ್ನು ಕಲ್ಯಾಣದ ಶಿವಾನುಭವ ಮಂಟಪದ ಕಲ್ಲುಗಳಿಂದ ಮಾಡಿದ ಮಂಟಪದಲ್ಲಿ ಮಾಡಬೇಕೆಂದು ಇಂತರದೌಲಾ ಫಕೀರನು ಯೋಚಿಸಿ ಅದರಂತೆ ಮಂಟಪವನ್ನು ಮಾಡಿ ಸಿದನು. ಪೀರ ಪಾಚ್ಛಾನು ನಿಲಂಗಿಯಲ್ಲಿ ತೀರಲು ಅವನ ದೇಹವನ್ನು ಕಲ್ಯಾಣಕ್ಕೆ ತರುವಾಗ ದಾರಿಯಲ್ಲಿ ಅದನ್ನಿಟ್ಟು ಅದನ್ನು ತರುವವರು ನಮಾಜ ಮಾಡಿ ನೋಡುವಷ್ಟರಲ್ಲಿ ಪಿಂಜರದಲ್ಲಿ ಪೀರಪಾಚ್ಛಾನ ಶರೀ ರವು ಇಲ್ಲದಂತಾಗಿ ಅದರ ಬದಲಾಗಿ ಒಂದು ಜತಿ ಆವಿಗಿ, ಒಂದು ಬೆತ್ತ, ಒಂದು ಕಾವಿಯ ಕಪನಿ ಕಂಡವು. ಮತ್ತು ಇತ್ತ ಕಲ್ಯಾಣ ದಲ್ಲಿ ಇಂತರದೌಲಾನಿಗೆ ಆವಿಗಿ, ಬೆತ್ತ, ಕಾವಿಯ ಕಪನಿಗಳನ್ನೇ ಗೋರಿ ಯಲ್ಲಿಟ್ಟು ಕಬರಸ್ಥಾನವನ್ನು ಮಾಡೆಂದು ಸ್ವಪ್ನ ಬಿತ್ತು. ಅದರಂತೆ ಆತನು ಮಾಡಿದನು.

ಮಂಟಪವು ೪೪ ಕಂಬಗಳುಳ್ಳದ್ದಿದ್ದು ಕಬರಸ್ಥಾನದ ಮೇಲೆ ಕಾವಿಯ ಬಟ್ಟೆಯನ್ನೇ ಹಾಕಿರುತ್ತಾರೆ. ಇದರ ಪೂರ್ವಕ್ಕೆ ಇಂತರ ದೌಲಾನ ಕಬರಸ್ಥಾನವಿದ್ದು ಅದಕ್ಕೂ ಕಾವಿಯ ಬಟ್ಟೆಯನ್ನೇ ಹೊದಿಸಿರುತ್ತಾರೆ. ಇದೇ ಆವಾರದಲ್ಲಿಯೇ ಇಂತರದೌಲಾನಾ ವಂಶಜರ ಅನೇಕ ಕಬರ

ಸ್ಥಾನಗಳಿದ್ದು ಮಧ್ಯದಲ್ಲಿ ಒಂದು ವಿಶಾಲವಾದ ಮಸೀದಿಯಿದೆ. ಪೀರ ಪಾಚ್ಛಾನ ಗೋರಿಯ ಮುಂಭಾಗದ ಫರಿಸಿಯ ಮಧ್ಯದಲ್ಲಿ ಒಂದು ದೊಡ್ಡ ಹಳೇ ಕನ್ನಡ ಶಿಲಾಲಿಪಿಯ ಕಲ್ಲನ್ನು ಕೂಡ್ರಿಸಿರುವರು. ಈ ಶಿಲಾಲಿಪಿಯು ಈಗ ಬಹಳ ಸವೆದು ಹೋಗಿರುವುದರಿಂದ ಅಕ್ಷರಗಳು ಸ್ಪಷ್ಟ ಕಾಣುವಂತಿಲ್ಲ.

ಹಳೇ ಕಟ್ಟಡಗಳ ಸಂರಕ್ಷಣೆಯ ಕಾಯದೆಯು ಬ್ರಿಟಿಷ್ ಇಂಡಿಯಾದಲ್ಲಿ ಅಮಲಿನಲ್ಲಿ ಇರುವಂತೆ ನಿಜಾಮ ಇಲಾಖೆಯಲ್ಲಿ ಅಂಥ ಕಾಯದೆಯು ಇದ್ದರೆ ಆ ಖಾತೆಯವರು ಆ ಕಾಯದೆಯನ್ನು ಈ ಕಟ್ಟಡಗಳಿಗೆ ಅನ್ವಯಿಸುವಂತೆ ಮಾಡಿದರೆ ವೀರಶೈವರಿಗೆ ಮಹದುಪಕಾರ ಮಾಡಿದಂತಾಗುವುದು.

ಕಲ್ಯಾಣಕ್ಕೆ ಮುಟ್ಟಬೇಕಾದರೆ ಪುಣೆಯಿಂದ ಕಲಬುರ್ಗಿಗೆ ಹೋಗುವ ದೊಡ್ಡ ಮಾರ್ಗದಿಂದ ಕಲ್ಯಾಣದಿಂದ ಸುಮಾರು ೬ ಮೈಲಿನ ಮೇಲೆ ದಾರಿಯು ಒಡೆಯುತ್ತದೆ. ಈ ೬ ಮೈಲು ದಾರಿಯು ಕಾಡುದಾರಿ ಇರುವದರಿಂದ ಪ್ರವಾಸಕ್ಕೆ ತೊಂದರೆಯಾಗುತ್ತದೆ. ಈ ದಾರಿಯನ್ನು ಸರಕಾರದವರು ಸರಿಯಾಗಿ ಮಾಡಿದರೆ ಪ್ರವಾಸಿಕರಿಗೆ ಬಹಳ ಅನುಕೂಲವಾಗುವದು.

---

# ವೀರಶೈವ ಕ್ಷೇತ್ರಗಳು.

ಲೇಖಾಂಕ ೨.

## (ರೇವಣಸಿದ್ಧೇಶ್ವರ ಬೆಟ್ಟ, ದನುಗೂರು, ಶಂಭುಲಿಂಗನ ಬೆಟ್ಟ, ಪ್ರಭುಲಿಂಗನ ಬೆಟ್ಟ, ಯಳಂದೂರು, ಸೋಸಲೆ. ಈ ಕ್ಷೇತ್ರಗಳ ವರ್ಣನೆ.)

(ಲೇಖಕ:- ಕೀರ್ತನಕೇಸರಿ, ಕವಿರತ್ನ, ಕೀರ್ತನ ವಿಚಕ್ಷಣ. ಕೀರ್ತನಶಿರೋಮಣಿ ಶಿವಕೀರ್ತನ ಕವಿರಾಜ ಬಿ. ಶಿವಮೂರ್ತಿ ಶಾಸ್ತ್ರಿ,
ಹುಲ್ಕುಂಟೆ ಮಠ ತುಮುಕೂರು.)

ಶಿವಾನುಭವದ ಸಂ. ೯ ಸಂ. ೪ ರಲ್ಲಿ "ವೀರಶೈವ ಕ್ಷೇತ್ರಗಳು" ಎಂಬ ತಲೆಬರೆಹದಿಂದ ನಾನೊಂದು ಲೇಖನವನ್ನು ಪ್ರಕಟಿಸಿದ್ದೆ. ಆಗ ನಾನು ಉತ್ತರ ಕರ್ನಾಟಕದ ಗಡಿನಾಡಿನಲ್ಲಿ ಸಂಚರಿಸುವಾಗ ಆ ಕ್ಷೇತ್ರಗಳ ವಿಚಾರವನ್ನು ಸಂಗ್ರಹಿಸಿದ್ದೆ. ಈಗ ಕರ್ನಾಟಕದ ದಕ್ಷಿಣಾಭಾಗದಲ್ಲಿ ಸಂಚರಿಸುವಾಗ ನಾ ಕಂಡ ಕೆಲವು ಕ್ಷೇತ್ರಗಳ ವಿಚಾರವನ್ನು ಶಿವಾನುಭವ ವಾಚಕರ ಸಲುವಾಗಿ ಈ ಮುಂದೆ ಸಂಗ್ರಹಿಸಿ ಪ್ರಕಟಿಸಿರುವೆನು.

## ರೇವಣಸಿದ್ಧೇಶ್ವರನ ಬೆಟ್ಟ.

ವೀರಶೈವ ಧರ್ಮದಲ್ಲಿ ಆಗಿ ಹೋದ ಮಹಾ ಮಹಾ ವಿಭೂತಿಗಳಲ್ಲಿ ಶ್ರೀ ರೇವಣಸಿದ್ಧೇಶ್ವರನು ಒಬ್ಬನಾಗಿದ್ದಾನೆ. ಶಿರಿವಾಳದ ಶಿಲಾಶಾಸನವು ಹೊರಬಿದ್ದ ಮೇಲೆ ಈತನ ಚರಿತ್ರೆಯ ಮೇಲೆ ಇತಿಹಾಸದ ಬೆಳಕು ಬಿದ್ದಂತಾಗಿದೆ.

ಶ್ರೀ ರೇಣುಕಾಚಾರ್ಯನೂ ರೇವಣಸಿದ್ಧನೂ ಓರ್ವನೇ ಎಂದು ಹಲವು ವೀರಶೈವ ಗ್ರಂಥಕಾರರು ಹೇಳಿದ್ದಾರೆ. ರೇವಣಸಿದ್ಧರೆಂಬ ಹಲವು ಮಂದಿ ಪ್ರಸಿದ್ಧ ಪುರುಷರು ವೀರಶೈವ ಚರಿತ್ರೆಯಲ್ಲಿ ಆಗಿ ಹೋಗಿದ್ದಾರೆಂದು ತೋರಿಬರುತ್ತದೆ. ರೇವಣಸಿದ್ಧೇಶ್ವರನಿಗಿಂತಲೂ ಭಿನ್ನನಾದ ರೇಣುಕಾಚಾರ್ಯನೆಂಬೊಬ್ಬನು ಆಗಿಹೋಗಿರಬಹುದೆಂಬುದಕ್ಕೂ ಆಧಾರಗಳಿವೆ.

ಈ ವಿಚಾರವನ್ನು ದೀರ್ಘವಾಗಿ ಚರ್ಚಿಸಲಿಕ್ಕೆ ಮತ್ತೊಂದು ಸಮಯವನ್ನು ಸಾಧಿಸಬೇಕಾಗಿದೆ.

ಭರತಖಂಡದಲ್ಲಿ ಶ್ರೀ ರೇವಣಸಿದ್ಧನ ಸಂಬಂಧವಾದ ಕ್ಷೇತ್ರಗಳು ಬಹಳವಾಗಿವೆ. ಶಿವಾನುಭವದಲ್ಲಿಯೇ ಈ ಹಿಂದೆ ರೇವಣಸಿದ್ಧನ ಸಂಬಂಧವಾದ ಹಲವು ಕ್ಷೇತ್ರಗಳ ವರ್ಣನೆಗಳು ಬಂದಿವೆ.

ಸುಮಾರು ೭೫೦ ವರ್ಷಗಳ ಹಿಂದೆ ಬಾಳೆಹಳ್ಳಿ ಮಠವನ್ನು ಸ್ಥಾಪಿಸಿದ ದಿಗಂಬರ ಮುಕ್ತಿಮುನಿ ಸ್ವಾಮಿಯ ಗುರುವಾದ ರುದ್ರಮುನಿಸ್ವಾಮಿಯ (ಇವನು ಬಸವೇಶ್ವರನ ಶಿಷ್ಯನಾಗಿದ್ದನೆಂದು ತೋರುತ್ತದೆ.) ತಂದೆಯಾದ ರೇವಣಸಿದ್ಧೇಶ್ವರನೇ ಈ ಹೆಸರಿನಲ್ಲಿ ಪ್ರಸಿದ್ಧರಾದವರಲ್ಲಿ ಅಗ್ರಗಣ್ಯನೆಂದೂ, ಮಹಿಮಾಶಾಲಿಯೆಂದೂ, ವೀರಶೈವ ಮತಪ್ರಚಾರಕನೆಂದೂ ಹಲವು ಕ್ಷೇತ್ರಗಳಲ್ಲಿ ತನ್ನ ಮಹಿಮೆಯನ್ನು ಪ್ರಕಟಿಸಿದವನೆಂದೂ ಹೇಳಬಹುದಾಗಿದೆ.

ಬೆಂಗಳೂರಿನಿಂದ ಮೈಸೂರಿಗೆ ಹೋಗುವ ರೈಲು ರಸ್ತೆಯಲ್ಲಿ ಕ್ಲೋಸಪೇಟೆ ಎಂಬ ಸ್ಟೇಷನ್ ಒಂದು ಸಿಕ್ಕುತ್ತದೆ. ಇಲ್ಲಿಂದ ೮ ಮೈಲು ದೂರದಲ್ಲಿ (ಕಾನ್‌ಕಾನ್ ಹಳ್ಳಿ ಮಾರ್ಗ) ರೇವಣಸಿದ್ಧೇಶ್ವರನ ಬೆಟ್ಟವೆಂಬ ವೀರಶೈವ ಕ್ಷೇತ್ರವೊಂದಿದೆ.

ಇಲ್ಲಿಗೆ ಪ್ರತಿವರ್ಷವೂ ಅಸಂಖ್ಯ ಭಕ್ತರು ಬಂದು ಹೋಗುತ್ತಾರೆ. ವೀರಶೈವರೇ ಅಲ್ಲದೆ ಭಾವಿಕರಾದ ಎಲ್ಲ ಹಿಂದುಗಳೂ ಈ ಸುಕ್ಷೇತ್ರಕ್ಕೆ ಯಾತ್ರೆಗೆ ಬಂದು ಹೋಗುತ್ತಿದ್ದಾರೆ. ಇಲ್ಲಿ ಭೂತ-ಪಿಶಾಚಿಗಳ ಬಾಧೆ ಪರಿಹಾರವಾಗುತ್ತದೆಂದು ಬಹು ಜನರು ನಂಬಿದ್ದಾರೆ. ಹಲವರಿಗೆ ಸುಖವೂ ಆಗಿದೆ.

ಇಲ್ಲಿಗೆ ಬಂದು ಹೋಗಲು ಪ್ರಯಾಣ ಸೌಕರ್ಯವೂ ಚನ್ನಾಗಿದೆ. ಕ್ಲೋಸಪೇಟೆಯಿಂದ ಇಲ್ಲಿಗೆ ಬರುವ ವರೆಗೆ ಗಾಡಿಗಳೂ ಮೋಟರುಗಳೂ ಸಿಕ್ಕುತ್ತವೆ. ಬೆಟ್ಟವು ಕಾಡುಪ್ರದೇಶದಲ್ಲಿರುವುದರಿಂದ ಯಾತ್ರಿಕರು ಸಾಮಾನುಗಳನ್ನು ಕ್ಲೊಸ ಪೇಟೆಯಿಂದಲೇ ತರುವುದೊಳ್ಳೆಯದು.

ಬೆಟ್ಟದ ಬುಡದಲ್ಲಿ ಬಾಳೆಹಳ್ಳಿ ಸಂಸ್ಥಾನಮಠದ ಶಾಖಾಮಠವೊಂದಿದೆ. ಅಲ್ಲಿ ಪಟ್ಟದಸ್ವಾಮಿಗಳೊಬ್ಬರಿದ್ದಾರೆ. ಯಾತ್ರಿಕರಿಗೆ ಮಠದಲ್ಲಿ

ಅಡಿಗೆ ವಗೈರೆ ಮಾಡಿಕೊಳ್ಳಲಿಕ್ಕೆ ಅನುಕೂಲವಿದೆ. ಶ್ರೀಗಳು ತಕ್ಕಮಟ್ಟಿಗೆ ಅನುಕೂಲ ಕಲ್ಪಿಸಿಕೊಡುತ್ತಾರೆ. ಇಲ್ಲಿ ಯಥಾಶಕ್ತಿ ದಾಸೋಹವೂ ನಡೆಯುತ್ತದೆ.

ಶ್ರೀ ರೇವಣಸಿದ್ಧೇಶ್ವರ ಬೆಟ್ಟವಿರುವ ಪ್ರದೇಶವು ಸುಂದರವಾಗಿಯೂ ಪ್ರಶಾಂತವಾಗಿಯೂ ಇದೆ. ಈ ಬೆಟ್ಟದ ಸುತ್ತಮುತ್ತಲೂ ಮತ್ತೆ ಕೆಲವು ಬೆಟ್ಟ ಗುಡ್ಡಗಳಿವೆ. ಅರ್ಕಾವತೀ ನದಿಯು ಇಲ್ಲಿಗೆ ಅನತಿ ದೂರದಲ್ಲಿ ಹರಿಯುತ್ತಿದೆ.

ಬೆಟ್ಟದ ಬುಡದಲ್ಲಿ ರೇವಾಂಬೆ ಎಂಬ ಸ್ತ್ರೀ ವಿಗ್ರಹವಿದೆ. ಈಕೆ ಮಂಗಳ ವಾಡದ ಮಾಯಾದೇವಿಯ ಮಗಳು. ಇವಳು ರೇವಣಸಿದ್ಧನವರ ಪುತ್ರಿ ಯೆಂದು ಪುರಾಣಗಳು ಹೇಳುತ್ತವೆ.

ಬೆಟ್ಟವು ಲಿಂಗಾಕಾರವಾಗಿದೆ. ವಿಶೇಷವಾಗಿ ಗಿಡಮರಗಳಿಲ್ಲ. ಬೆಟ್ಟಕ್ಕೆ ಹತ್ತಲಿಕ್ಕೆ ಮೆಟ್ಟಲುಗಳಿವೆ. ಕೆಲವು ಕಡೆ ಬೆಟ್ಟವು ಕಡಿದಾಗಿದೆ. ಅಲ್ಲಿ ಸರಕಾರದವರು ಯಾತ್ರಿಕರಿಗೆ ಅಪಾಯವಾಗದ ಹಾಗೆ ಕಬ್ಬಿಣದ ಕಂಬಿ ಗಳನ್ನು ಹಾಕಿಸಿದ್ದಾರೆ.

## ಭೀಮೇಶ್ವರ ದೇವಾಲಯ.

ಬೆಟ್ಟವನ್ನು ಹತ್ತಿದರೆ ನಮಗೆ ಮೊದಲು ಭೀಮೇಶ್ವರನ ದೇವಾ ಲಯ ಸಿಕ್ಕುತ್ತದೆ. ಇಲ್ಲಿ ಮನೋಹರವಾದ ದೊಣೆಯೊಂದಿದೆ. § ಇಲ್ಲಿ ಯಾತ್ರಿಕರಿಗೆ ಅಡಿಗೆ ಮೊದಲಾದವುಗಳಿಗೆ ಅನುಕೂಲವಿದೆ. ಇಲ್ಲಿ ವೀರ ಶೈವ ಅರ್ಚಕರಿದ್ದಾರೆ.

ದೇವಾಲಯದಲ್ಲಿ ಭೀಮೇಶ್ವರ ಲಿಂಗವಿದೆ. ಮರುಳಸಿದ್ಧೇಶ್ವರವೆಂಬ ಮತ್ತೊಂದು ಲಿಂಗವಿದೆ. ಮತ್ತು ಕೆಲವು ಉಪದೇವತೆಗಳಿವೆ.

ಇಲ್ಲಿಂದ ಮೇಲೆ ಹತ್ತಿಹೋದರೆ ಬೆಟ್ಟದ ಮೇಲ್ಭಾಗದಲ್ಲಿ ಎರಡು ಗೋಪುರಯುಕ್ತ ಮಂಟಪಗಳಿವೆ. ಇವನ್ನು ಜನರು ೧ ರುದ್ರಮುನಿ ಸ್ವಾಮಿಯ ಗುಡಿ. ೨ ಸಿದ್ಧರಾಮೇಶ್ವರ ಗುಡಿ ಎಂದು ಕರೆಯುತ್ತಾರೆ. ಈ ಎರಡು ಪುಟ್ಟಗುಡಿಗಳಲ್ಲಿ ದೇವರುಗಳು ಮಾತ್ರವಿಲ್ಲ. ಈ ಮಹಾ

---

§ ಟಿಪ್ಪಣೆಯೊಂದರೆ, ಬೆಟ್ಟಗಳಲ್ಲಿ ಸ್ವಾಭಾವಿಕವಾಗಿ ಆಗಿರುವ ನೀರಿನ ಕೊಳ್ಳ.

ತ್ಮರು ಪದವಿಟ್ಟು ಹೋದ ಗುರುತುಗಳು ಮಾತ್ರವಿವೆ. ದೂರದಿಂದ ಬೆಟ್ಟವನ್ನು ನೋಡುವವರಿಗೆ ಈ ಗೋಳುರಗಳೆರಡೂ ಬಸವನ ಕೋಡು ಗಳಂತೆ ಕಾಣುತ್ತವೆ. ಈ ಬೆಟ್ಟದ ಮೇಲ್ಭಾಗದಲ್ಲಿ ನಿಂತು ನೋಡಿದರೆ ಸುತ್ತಮುತ್ತಣ ಪ್ರದೇಶವು ಬಹಳ ರಮಣೀಯವಾಗಿ ಕಾಣುತ್ತದೆ. ಇಲ್ಲಿಂದ ಬೆಟ್ಟದ ಮತ್ತೊಂದು ಪಾರ್ಶ್ವಕ್ಕೆ ಇಳಿದು ಹೋದರೆ ಅಲ್ಲಿ ರೇವಣಸಿದ್ಧೇಶ್ವರನ ತಪೋಭೂಮಿಯಾದ ಗವಿ ಸಿಕ್ಕುತ್ತದೆ. ಇದುವೇ ಯಾತ್ರಿಕರು ದರ್ಶಿಸಬೇಕಾದ ಮುಖ್ಯ ಸ್ಥಳ.

## ರೇವಣಸಿದ್ಧ ಗವಿ.

ಈ ಗವಿ ಅತ್ಯಂತ ಶ್ಲಾಘನೀಯವಾಗಿದೆ. ಇಲ್ಲಿ ಮತ್ತೊಂದು ದೊಣೆಯಿದೆ. ಇದರಲ್ಲಿನ ನೀರು ಪಾನಯೋಗ್ಯವಾಗಿವೆ. ಯಾತ್ರಿಕರು ಇಲ್ಲಿ ಭಕ್ತಿಯಿಂದ ಪಾನ ಮಾಡುತ್ತಾರೆ. ಈ ದೊಣೆಯೆಂಬ ಸರೋವರದ ಮೇಲ್ಭಾಗದಲ್ಲಿಯೇ ರೇವಣಸಿದ್ಧನ ಗವಿಯಿದೆ.

ಈ ಗವಿ ತಪಸ್ವಿಗಳಿಗುಚಿತವಾಗಿದೆ. ಎಂತಹ ನಾಸ್ತಿಕನಿಗೂ ಭಕ್ತಿಯನ್ನುಂಟುಮಾಡುವಂತಿದೆ. ಈ ಸ್ಥಳದ ಮಹತ್ವ. ಇಲ್ಲಿ ಶಿವಸಮಾಧಿಯಲ್ಲಿ ಕುಳಿತ ರೇವಣಸಿದ್ಧಸ್ವಾಮಿಯ ಮೂರ್ತಿಯೊಂದಿದೆ. ಈ ವಿಗ್ರಹವು ಪಂಚಲೋಹಗಳಿಂದ ನಿರ್ಮಿತವಾದಂತೆ ಕಾಣುತ್ತದೆ. ಶಾಂತ ರಸವುಳ್ಳ ಮುಖಮುದ್ರೆಯಿಂದ ಯುಕ್ತವಾಗಿದೆ. ಜಟಾ ಮಕುಟರಾರಾಜಿತವಾಗಿದೆ. ಅಂತು ಭವ್ಯ ವಿಗ್ರಹ. ಯಾತ್ರಿಕರು ಈ ಮೂರ್ತಿಯ ದರ್ಶನದಿಂದ ತೃಪ್ತರಾಗುತ್ತಾರೆ.

## ಜಾತ್ರೆ ವಿಚಾರ.

ಪ್ರತಿವರ್ಷವೂ ಈ ಕ್ಷೇತ್ರದಲ್ಲಿ ವೈಶಾಖ ಶುದ್ಧ ಹುಣ್ಣಿಮೆದಿನ ರಥೋತ್ಸವವಾಗುತ್ತದೆ. ಆಗ ಸಾವಿರಗಟ್ಟಲೆ ಜನರು ಸೇರುತ್ತಾರೆಂದೂ ವ್ಯಾಪಾರಾದಿಗಳೂ ಚನ್ನಾಗಿ ನಡೆಯುತ್ತವೆಂದೂ ತಿಳಿದುಬರುತ್ತದೆ.

ಸಾರಾಂಶಃ-- ಈ ರೇವಣಸಿದ್ಧೇಶ್ವರ ಬೆಟ್ಟವು ಪ್ರತಿಯೊಬ್ಬ ಭಾವಿಕನಿಗೂ ತತ್ರಾಪಿ ಲಿಂಗವಂತನಿಗೂ ದರ್ಶನೀಯವಾಗಿದೆ. ಈಚಗೆ ಪಂಚಾಚಾರ್ಯರ ಚಳುವಳಿ ಪ್ರಾರಂಭವಾದಮೇಲೆ ಕೆಲವರು ಈ ಬೆಟ್ಟವನ್ನು "ರೇಣುಕಗಿರಿ" ಎಂಬ ಸಂಸ್ಕೃತ ನಾಮದಿಂದ ಕರೆಯಲು ಪ್ರಾರಂಭಿಸಿದಂತೆ ತೋರುತ್ತದೆ. ಶ್ರೀ ರೇವಣಸಿದ್ಧನು ಇಲ್ಲಿಗೆ ಎಂದೂ ಬಾರನೆಂದೂ

ಇಲ್ಲಿ ಅವನು ನಡೆಸಿದ ಕಾರ್ಯಗಳೇನೆಂದೂ ಸಂಶೋಧಕ ದೃಷ್ಟಿಯಿಂದ ಹುಡುಕತಕ್ಕದ್ದು ಲಿಂಗಾಂಗೀ ವಿದ್ವಾಂಸರ ಕರ್ತವ್ಯವಾಗಿದೆ.

## ಸೋಸಲೆ.

ವೀರಶೈವ ಸಾಹಿತ್ಯಪ್ರಪಂಚದಲ್ಲಿ ವಿಖ್ಯಾತರಾದ ಪಂಡಿತರಲ್ಲಿ ಸೋಸಲೆ ರೇವಣಾರಾಧ್ಯನೊಬ್ಬನೆನಿಸಿದ್ದಾನೆ. ಇವನಿಗೆ ಕವಿರೇಣುಕಾಚಾರ್ಯ ಎಂಬ ಹೆಸರೂ ಪ್ರಸಿದ್ಧವಾಗಿದೆ. ಇವನು ಕ್ರಿ. ಶ. ೧೬೨೩ರ ಸುಮಾರಿನಲ್ಲಿದ್ದನೆಂದು ಕನ್ನಡ ಕವಿಚರಿತ್ರಕಾರರು ನಿರ್ಧರಿಸಿದ್ದಾರೆ. ಇವನು ಶ್ರೀ ರೇಣುಕಾಚಾರ್ಯನ ವಂಶಪರಂಪರೆಯವನೆಂದೂ ಇವನ ಹಿರಿಯರು ಮಹಾ ವಿದ್ವಾಂಸರಾಗಿದ್ದಾರೆಂದೂ, ವೀರಮಾಹೇಶ್ವರನೆಂದೂ ತಿಳಿದುಬರುತ್ತದೆ.

ಈ ವಿದ್ಯಾನಿಧಿಯು ಪಿತಾಮಹ ವೀರಣಾರ್ಯನು.

೧. ಶಿವಮಹಿಮ್ನಸ್ತವ
೨. ಸಿದ್ಧಾಂತ ಶಿಖಾಮಣಿ.
೩. ಸದ್ಗುರು ರಗಳೆ.
೪. ದಶಗ್ರಂಥಿ.

ಎಂಬ ಗ್ರಂಥಗಳಿಗೆ ವ್ಯಾಖ್ಯಾನ ಬರೆದಂತೆ ತಿಳಿದುಬರುತ್ತದೆ. ಇವನ ವಂಶೀಯನೂ ಪ್ರಾಚೀನನೂ ಆದ ವಿಶ್ವನಾಥಾಚಾರ್ಯನು ದಶಗ್ರಂಥಿ ಎಂಬ ಸಂಸ್ಕೃತ ಗ್ರಂಥ ಬರೆದಿದ್ದಾನೆ.

ಸೋಸಲೆ ರೇವಣಾರಾಧ್ಯನು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಹಲವು ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ,

೧. ಚೋಳ ರೇಣುಕ ಸಂವಾದ.
೨. ರಾಜಯೋಗ ತಾರಾವಳಿ.
೩. ಶ್ರೀ ರುದ್ರ ಭಾಷ್ಯ
೪. ಶಾಂತಮೂರ್ತಿ ಪ್ರಕಾಶಿಕಾ
೫. ಸ್ವಸ್ವರೂಪ ಪ್ರಕಾಶಿಕಾ
೬. ಪರಮಾತ್ಮ ಪ್ರಕಾಶಿಕಾ
೭. ಅಂತಃಕರಣ ಪ್ರಕಾಶಿಕಾ
೮. ಶಾರೀರ ಪ್ರಕಾಶಿಕಾ

೯. ಸಿಜದೀಪ್ತಿ ಪ್ರಕಾಶಿಕಾ
೧೦. ಪರಮುಕ್ತಿ ಪ್ರಕಾಶಿಕಾ

ಎಂಬವುಗಳು ಮಾತ್ರ ದೃಗ್ಗೋಚರವಾಗಿವೆ. ಈ ಮಹಾನುಭಾವ ರೇವಣಾರಾಧ್ಯನು ಹುಟ್ಟಿ ಬೆಳೆದ ಸ್ಥಳ ಸೋಸಲೆ ಎಂಬ ಗ್ರಾಮ.

## ಸೋಸಲೆ.

ಮೈಸೂರು ಜಿಲ್ಲೆಯಲ್ಲಿ ಕಾವೇರಿ ಕಪಿನೀ ನದಿಗಳ ಸಂಗಮ ಸ್ಥಳವಾದ ತಿರುಮಕೂಡಲು ನರಸೀಪುರಕ್ಕೆ ಮೂರು ಮೈಲಿನ ದೂರದಲ್ಲಿ "ಸೋಸಲೆ'' ಎಂಬ ಊರಿದೆ. ಇದು ಕಾವೇರಿ ನದೀ ತೀರದಲ್ಲಿದೆ. ಈ ಊರಿನ ಸುತ್ತಲೂ ಭತ್ತದ ಗದ್ದೆಗಳು ರಮಣೀಯವಾಗಿವೆ. ಇಲ್ಲಿ ಶ್ರೀ ವ್ಯಾಸರಾಯ ಸ್ವಾಮಿಗಳ ಪ್ರಸಿದ್ಧವಾದ ಮಠವೊಂದಿದೆ.

ಮಹಾಪಂಡಿತನೂ ಉಭಯ ಭಾಷಾಕೋವಿದನೂ ಕವಿಶ್ರೇಷ್ಠನೂ ಆದ ರೇವಣಾರಾಧ್ಯನ ಜನ್ಮಸ್ಥಳದಲ್ಲಿ ಅವನ ಸ್ಮಾರಕಗಳೇನಾದರೂ ಇರಬಹುದೆಂಬ ಆಶೆಯಿಂದ ನಾನು ಅಲ್ಲಿಗೆ ಹೋದೆನು. ನನ್ನ ನಿರೀಕ್ಷಣೆ ಮಾತ್ರ ಅಲ್ಲಿ ಸಫಲವಾಗಲಿಲ್ಲ.

ಸೋಸಲೆಯನ್ನೆಲ್ಲಾ ಶೋಧಿಸಿ ನೋಡಿದ್ದಾಯ್ತು. ಅಲ್ಲಿ ರೇವಣಾರಾಧ್ಯನ ಬಗ್ಗೆ ಯಾವ ಗುರುತೂ ಸಿಕ್ಕಲಿಲ್ಲ.

ಗುಬ್ಬಿಯಲ್ಲಿ ಮಲ್ಲಣಾರ್ಯನಿದ್ದ ಬಗ್ಗೆ ಗೂಳೂರಿನಲ್ಲಿ ಸಿದ್ಧವೀರಾಚಾರ್ಯ ಮೊದಲಾದ ಕವಿಗಳಿದ್ದ ಬಗ್ಗೆ ಹೇಗೆ ಅಲ್ಲಿನ ಜನರಿಗೆ ವಿಸ್ಮೃತಿಯುಂಟಾಗಿದೆಯೋ ಈ ಸ್ಥಳಗಳಲ್ಲಿ ಈ ಕವಿಗಳ ನಿವಾಸಸ್ಥಾನ ಮೊದಲಾದವುಗಳು ಹೇಗೆ ಲಭಿಸಲಾರವೋ ಸೋಸಲೆಯ ಸ್ಥಿತಿಯೂ ಹೀಗೆಯೇ ಎಂದು ಹೇಳಿಕೊಂಡು ಮುಂದೆ ಹೊರಟೆನು. ಒಂದು ಕಾಲದಲ್ಲಿ ಇಲ್ಲಿ ವೀರಶೈವರು ಪ್ರಬಲರಾಗಿದ್ದರೆಂಬುದಕ್ಕೆ ಇಲ್ಲಿ ಕೆಲವು ಗುರುತುಗಳಿವೆ.

## ದನುಗೂರು.

ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಅಸದೃಶ ಕವಿಯೆಂದು ಹೆಸರಾಗಿರುವ ಷಡಕ್ಷರದೇವನ ಹೆಸರನ್ನು ಕೇಳದವರು ವಿರಳ. ಇವನು

ಉಭಯ ಕವಿತಾವಿಶಾರದನೆಂದೂ ಕವಿಶಾರ್ದೂಲನೆಂದೂ ವಿಖ್ಯಾತನಾಗಿದ್ದಾನೆ. ಇವನು ಕನ್ನಡ ಸಂಸ್ಕೃತ ಭಾಷೆಗಳಲ್ಲಿ

೧. ಕವಿಕರ್ಣರಸಾಯನ
೨. ಶಿವಾಧಿಕ್ಯ ರತ್ನಾವಳಿ
೩. ಭಕ್ತಾಧಿಕ್ಯ ರತ್ನಾವಳಿ
೪. ವೀರಭದ್ರ ದಂಡಕ
೫. ಶಿವಸ್ತವ ಪೂಜಾ ಸ್ತೋತ್ರ
೬. ರಾಜಶೇಖರ ವಿಳಾಸ
೭. ಶಬರಶಂಕರ ವಿಳಾಸ
೮. ವೃಷಭೇಂದ್ರ ವಿಜಯ

ಎಂಬ ಗ್ರಂಥಗಳನ್ನು ವೀರಭದ್ರೋದಾಹರಣ ಗದ್ಯ ಮಾತಿನ ಮಾಲಿಕೆ, ತೋಂಟದಾರ್ಯಸ್ತವ, ಲಿಂಗಾಷ್ಟಕ, ನೀಲಾಂಬಿಕಾಷ್ಟಕ, ಬಸವೇಶ್ವರಾಷ್ಟಕ ಇತ್ಯಾದಿ ಕವಿತೆಗಳನ್ನು ಬರೆದು ಪ್ರಸಿದ್ಧನಾಗಿದ್ದಾನೆ

ಈತನು ತನ್ನ ಗ್ರಂಥಗಳಲ್ಲಿ ತಾನು ದನುಗೂರುವಿನ ಮಠಾಧಿಪನೆಂದು ಹೇಳಿಕೊಂಡಿದ್ದಾನೆ. ಈತನ ಕಾವ್ಯಗಳಲ್ಲಿ ಅಪಾರವಾದ ಮಮತೆಯುಳ್ಳ ನನಗೆ ಈ ದನುಗೂರನ್ನು ನೋಡಬೇಕೆಂಬಾಶೆ ಬಹುದಿನಗಳಿಂದ ಬಾಧಿಸುತ್ತಿತ್ತು. ಆ ಬಯಕೆಯೇ ನನ್ನನ್ನು ಕರೆದೊಯ್ದಿತು.

ದನುಗೂರಿಗೆ ಸಂಸ್ಕೃತದಲ್ಲಿ 'ಧನ್ವಪುರಿ' ಎಂಬುದಾಗಿ ಹೆಸರು. ಇದು ಮೈಸೂರು ಜಿಲ್ಲೆಯಲ್ಲಿ ಮಳವಳ್ಳಿ ತಾಲೂಕಿನಲ್ಲಿ ಮಳವಳ್ಳಿಗೆ ೮ ಮೈಲು ದೂರದಲ್ಲಿದೆ. ಇಲ್ಲಿಗೆ (ದನುಗೂರಿಗೆ) ಕಾವೇರೀ ಪುಣ್ಯ ನದಿಯು ೪ ಮೈಲು ದೂರದಲ್ಲಿ ಮಾತ್ರವಿದೆ. ತನಗೆ ಸಮೀಪಗತವಾದ ಕಾವೇರಿಯನ್ನು ಷಡಕ್ಷರದೇವನು ತನ್ನ ಗ್ರಂಥಗಳಲ್ಲಿ ಬಹಳವಾಗಿ ವರ್ಣಿಸಿದಂತೆ ಕಾಣುತ್ತದೆ.

ದನುಗೂರು ಈಗ ಒಂದು ಚಿಕ್ಕ ಹಳ್ಳಿಯಾಗಿದೆ. ಕವಿ ಷಡಕ್ಷರನ ಕಾಲದಲ್ಲಿ ದೊಡ್ಡ ಊರಾಗಿತ್ತೆಂದು ಹೇಳಬಹುದು. ಇಲ್ಲಿ ಪ್ರಾಚೀನ ಕಾಲದ ಸ್ಮಾರಕಗಳು ಬಹಳವಾಗಿವೆ. ಅವನ್ನು ಮುಂದೆ ಸಂಗ್ರಹವಾಗಿ ವಿವರಿಸಿದೆ.

ದನುಗೂರು ಪಟ್ಟದ ಮಠ:— ಶ್ರೀಷಡಕ್ಷರದೇವನಿದ್ದ ಮಠಕ್ಕೆ ಪಟ್ಟದ ಗುರುಮಠವೆಂದು ಹೆಸರು. ಇದು ದನುಗೂರು ಕೆರೆಯ ಪಕ್ಕದಲ್ಲಿದೆ. ಕವಿಯ ಕಾಲದ ಭವ್ಯವಾದ ಕಲ್ಲಿನ ಮಠದ ಬಹುಭಾಗ ಬಿದ್ದು ಹೋಗಿದೆ. ಆ ಪ್ರಾಚೀನ ಮಠದ ನೆಲಗಟ್ಟು ಮಾತ್ರವಿದೆ. ಕಲ್ಲು ಕಂಭಗಳು ನೆಲದಲ್ಲಿ ಬಿದ್ದಿವೆ. ಈ ಅವಶೇಷಗಳ ಮೇಲಿಂದ ಮಠವು ಹಿಂದೆ ವೈಭವದಿಂದಿದ್ದಿತೆನ್ನಬಹುದು. ಈಗ ಹೊಸದಾಗಿ ಹೆಂಚಿನ ಮಠವನ್ನು ಹಳೆಯ ಮಠಕ್ಕೆ ಹೊಂದಿಸಿ ಕಟ್ಟಿಕೊಂಡಿದ್ದಾರೆ. ಸರ್ಕಾರದಿಂದ ಈ ಮಠಕ್ಕೆ ೧೪ ಎಕರೆ ಹೊಲವನ್ನು ಮಾನ್ಯವಾಗಿ ಕೊಟ್ಟಿದ್ದಾರೆ.

ಈ ದನುಗೂರು ಮಠದಲ್ಲಿ ವೀರಭದ್ರ ದೇವರಿದೆ. ಇದು ಬಾಳೆಹಳ್ಳಿ ಮಠಕ್ಕೆ ಶಾಖಾ ಮಠವೆಂಬುದಕ್ಕೆ ಈ ಮೂರ್ತಿ ಸಾಕ್ಷಿ. ಈ ಮಠದಲ್ಲಿ ಷಡಕ್ಷರ ಕವಿ ಶಿವ ಪೂಜೆಗೆ ಕುಳಿತುಕೊಳ್ಳುತ್ತಿದ್ದ ಗವಿಯೊಂದಿದೆ. ಈ ಮಠದಲ್ಲಿ ಷಡಕ್ಷರದೇವನ ಗುರುಪರಂಪರೆಯವರಾದ ಉದ್ಧಾನಸ್ವಾಮಿ, ಅನ್ನದಾನಸ್ವಾಮಿ, ರೇವಣಸಿದ್ಧದೇಶಿಕ, ಚಿಕ್ಕವೀರ ದೇಶಿಕರೆಂಬ ನಾಲ್ವರ ಗದ್ದಿಗೆಗಳಿವೆ. ಈ ನಾಲ್ವರ ಹೆಸರನ್ನು ನಾವು ರಾಜಶೇಖರ ವಿಳಾಸದ ಪೀಠಿಕಾ ಪ್ರಕರಣದಲ್ಲಿ ಕಾಣಬಹುದು.

ಈ ಮಠದಲ್ಲಿಯೇ ಮೊದಲು ಒಂದು ಶಿವಲಿಂಗ ದೇವಾಲಯವಿತ್ತೆಂದು ಹೇಳುತ್ತಾರೆ. ಅದಕ್ಕೆ ಸಾಕ್ಷಿಯಾಗಿ ಈಗಲೂ ಹಾಳು ಬಿದ್ದಿರುವ ಮಠದ ಭಾಗದಲ್ಲಿ ಲಿಂಗ ಪೀಠವೊಂದು ಬಿದ್ದಿದೆ. ಈ ಶಿವದೇವರಿಗೆ ಶಿವಲಿಂಗೇಶ್ವರನೆಂಬ ಹೆಸರಿತ್ತೆಂದು ಹೇಳುತ್ತಾರೆ. ಈ ಶಿವದೇವಾಲಯವು ಪೂರ್ವದ ಮಠದ ಆವರಣದಲ್ಲಿ ಪೂರ್ವಾಭಿಮುಖವಾಗಿತ್ತು. ಇದರ ಮುಂದಿನ ವೃಷಭನ ಮಂಟಪವು ಈಗಲೂ ಪಶ್ಚಿಮಾಭಿಮುಖವಾಗಿ ಈಗಿನ ಮಠದ ಆವರಣದಲ್ಲಿ ಸೇರಿದೆ.

ಷಡಕ್ಷರ ಕವಿಯು ತನ್ನ ರಾಜಶೇಖರ ವಿಳಾಸ ಶಬರಶಂಕರ ವಿಳಾಸ ಮತ್ತು ವೃಷಭೇಂದ್ರ ವಿಜಯಗಳ ಪ್ರತಿಯೊಂದು ಆಶ್ವಾಸದ ಪ್ರಾರಂಭದಲ್ಲಿಯೂ "ಪಾಲಿಸೆಮ್ಮನುರೆ ಶಿವಲಿಂಗಂ" ಎಂಬ ಶಿವಲಿಂಗಾಂಕಿತವಾದ ಕಂದ ಪದ್ಯವನ್ನು ಬರೆದಿದ್ದಾನೆ. ಈ ಅಂಕಿತವು ಪ್ರಾಯೇಣ ಈ ಕವಿಯ ಮಠದಲ್ಲಿಯೇ ಇದ್ದ ಶಿವಲಿಂಗೇಶ್ವರನೆಂಬ ಸ್ಥಾವರಲಿಂಗದ ಅಂಕಿತವಾಗಿರಬಹುದೆಂದು ನನ್ನ ಭಾವನೆ.

ಈಗ ಈ ಮಠದಲ್ಲಿ ಶ್ರೀರುದ್ರಮುನಿ ಶಿವಾಚಾರ್ಯರೆಂಬ ಸ್ವಾಮಿಗಳೊಬ್ಬರಿದ್ದಾರೆ. ಇವರು ಷಡಕ್ಷರದೇವನ ಶಿಷ್ಯ ಪರಂಪರೆಗೆ ಸೇರಿದ ಪಟ್ಟದ ಸ್ವಾಮಿಗಳು. ಈ ಮಠಕ್ಕೆ ಸಾವಿರಾರು ಶಿಷ್ಯರ ಮನೆಗಳಿವೆಯೆಂದು ಶ್ರೀಗಳು ಹೇಳುತ್ತಾರೆ. ಪೂರ್ವದ ಮಠದ ಬಾಗಿಲು ಪೂರ್ವ ದಿಕ್ಕಿಗಿತ್ತು. ಈಗಿನ ಮಠದ ದ್ವಾರವು ದಕ್ಷಿಣಾಭಿಮುಖವಾಗಿದೆ.

ಗೌರೀಶ್ವರ ದೇವಾಲಯಃ— ಕವಿಯ ಮಠದ ಮುಂಭಾಗದ ಕೆರೆಯ ಮತ್ತೊಂದು ಪಾರ್ಶ್ವದಲ್ಲಿ ಈ ದೇವಾಲಯವಿದೆ. ಈ ಊರಿನಲ್ಲಿ ಇದೇ ಉತ್ತಮ ದೇವಾಲಯ. ಕಲಾ ದೃಷ್ಟಿಯಿಂದಲೂ ಶ್ರೇಷ್ಠವಾಗಿದೆ. ಈ ಮನೋಹರವಾದ ಶಿವ ದೇವಾಲಯವು ಈಗ ಜೀರ್ಣವಾಗಿ ಹೋಗಿದೆ. ಇಲ್ಲಿ ಒಂದು ಕನ್ನಡ ಶಿಲಾಲಿಪಿಯಿದೆ.

ವೀರಭದ್ರ ದೇವಾಲಯಃ- ಪೂರ್ವದಲ್ಲಿ ಈ ಗುಡಿಯು ಬಹಳ ವೈಭದಲ್ಲಿತ್ತೆಂದು ತೋರುತ್ತದೆ. ಈಗ ಈ ದೇವಾಲಯವೂ ಶಿಥಿಲವಾಗಿದೆ. ಇವುಗಳಲ್ಲದೆ ಮಾರುತಿ ಗುಡಿ, ಬಸವೇಶ ಗುಡಿ, ಉಪ್ಪರಿಗೆ ಬಸವಣ್ಣನ ಗುಡಿ, ಗಣಪತಿ ಗುಡಿ ಇತ್ಯಾದಿ ಕೆಲವು ದೇವಾಲಯಗಳೂ ಶಿಥಿಲವಾಗಿವೆ.

ಈಗ ದನಗೂರಿನಲ್ಲಿ ನಾಲ್ಕೇ ನಾಲ್ಕು ಲಿಂಗವಂತರ ಮನೆಗಳವೆ. ಮುಸಲ್ಮಾನರ ಮನೆಗಳು ಮಾತ್ರ ಊರ ತುಂಬಿವೆ. ಇದೊಂದು ದೈವಲೀಲೆ.

ಆಳಸಳ್ಳಿ ಗವಿಃ- ದನಗೂರಿಗೆ ಒಂದು ಮೈಲಿ ದೂರದಲ್ಲಿ ಆಳಸಳ್ಳಿ ಎಂಬ ಗ್ರಾಮವೊಂದಿದೆ. ಇಲ್ಲಿ ಅಳಸಳ್ಳಿ ಗುಡ್ಡವೆಂಬ ಕಿರುಪೆಟ್ಟವೊಂದಿದೆ. ಇದನ್ನು ಷಡಕ್ಷರ ಗುಡ್ಡವೆಂದೂ ಹೇಳುತ್ತಾರೆ. ಇಲ್ಲಿ ಒಂದು ಗವಿಯಿದೆ. ಈಚೆಗೆ ಅಲ್ಲೊಂದು ಮಠವನ್ನು ಕಟ್ಟಿದ್ದಾರೆ. ಇಲ್ಲಿ ಸ್ವಾಮಿಗಳೊಬ್ಬರು ದಾಸೋಹ ನಡೆಸುತ್ತಿದ್ದಾರೆ. § ಈ ಗವಿ ಇರುವ ಮಠವು ದನುಗೂರು ಷಡಕ್ಷರ ದೇವನ ಮಠಕ್ಕೆ ಸೇರಿದೆ. ಷಡಕ್ಷರ ಕವಿಯು ಇಲ್ಲಿ ತಪಸ್ಸು ಮಾಡುತ್ತಿದ್ದನೆಂದೂ, ಗ್ರಂಥಗಳನ್ನು ಬರೆಯುತ್ತಿದ್ದನೆಂದೂ ಜನರು ಪರಂಪರಾಗತವಾಗಿ ಹೇಳಿಕೊಂಡು ಬರುತ್ತಿದ್ದಾರೆ. ದನುಗೂರಲ್ಲಿಯಾಗಲೀ ಇಲ್ಲಾಗಲೀ ನನ್ನ ಕಣ್ಣಿಗೆ ಶಿಲಾಲಿಪಿಗಳಾವೂ ಬೀಳಲಿಲ್ಲ.

---

§ **ಟಿಪ್ಪಣಿ:**— ಶ್ರೀ ಬಸವಪ್ಪ ದೇವರೆಂಬು ವಿರಕ್ತ ಮೂರ್ತಿಗಳು ಗವಿಯ ಮಠದಲ್ಲಿ ದಾಸೋಹ ಮಾಡುತ್ತಿದ್ದಾರೆ.

## ಯಳಂದೂರು.

ಮೈಸೂರು ಜಿಲ್ಲೆಯ ದಕ್ಷಿಣದಲ್ಲಿ ಯಳಂದೂರು ಎಂಬ ತಾಲೂಕು ಸ್ಥಳವಿದೆ. ಇದು ಕೈ॥ ದಿವಾನ್ ಪೂರ್ಣಯ್ಯನವರ ಜಹಗೀರಿಯಾಗಿದೆ. ತುರುಷ್ಕರಾಹು ಮುಖದಿಂದ ಮೈಸೂರು ಸಿಂಹಾಸನವನ್ನು ಪೂರ್ವದ ಅರಸು ಮನೆತನಕ್ಕೆ ಹಿಂದಿರುಗಿ ಬರುವಂತೆ ಸಾಹಸ ಮಾಡಿದವರೀ ಪೂರ್ಣಯ್ಯನವರು. ಆ ಉಪಕಾರ ಸ್ಮರಣೆಗಾಗಿ ಈ ತಾಲೂಕನ್ನು ಮೈಸೂರು ಅರಮನೆಯವರು ( ಯಳಂದೂರು ತಾಲೂಕನ್ನು ) ಜಹಗೀರನ್ನಾಗಿ ಪೂರ್ಣಯ್ಯನವರ ಮನೆತನಕ್ಕೆ ಬಿಟ್ಟುಕೊಟ್ಟಿದ್ದಾರೆ. ಈ ಯಳಂದೂರು ಮೈಸೂರಿಗೆ ಸುಮಾರು ೪೫ ಮೈಲಿ ದೂರದಲ್ಲಿದೆ. ಈ ಊರಿನ ಮಧ್ಯೆ ಸುವರ್ಣಾವತೀ ನದಿ ಹರಿಯುತ್ತದೆ.

ಶ್ರೀ ಷಡಕ್ಷರ ದೇವನ ಕಾಲದಲ್ಲಿ ( ಕ್ರಿ. ಶ. ೧೬೫೫ ) ಈ ಯಳಂದೂರಿನಲ್ಲಿ ಮುದ್ದು ರಾಜನೆಂಬ ಅರಸನಿದ್ದನೆಂದೂ ಅವನಿಗೆ ಈ ಕವಿ ಗುರುವಾಗಿದ್ದನೆಂದೂ ತಿಳಿದು ಬರುತ್ತದೆ. ಅಲ್ಲದೆ ಶ್ರಿ ಷಡಕ್ಷರ ಕವಿಯ ಸಮಾಧಿಯೂ ಇಲ್ಲಿಯೇ ಇದೆ.

ಶ್ರೀ ಗೌರೀಶ್ವರ ದೇವಾಲಯಃ- ಇದನ್ನು ಮುದ್ದು ರಾಜನೇ ಕಟ್ಟಿಸಿದನೆಂದು ಹೇಳುತ್ತಾರೆ. ಈ ದೇವಾಲಯವು ನೋಡತಕ್ಕದ್ದಾಗಿದೆ. ದೇವಾಲಯದ ಮಹಾದ್ವಾರವು ಕಲಾಭರಿತವಾಗಿದೆ. ಇಲ್ಲಿ ಒಂದು ಶಿಲಾಲಿಪಿಯಿದೆ. ಇದನ್ನು ಷಡಕ್ಷರ ಕವಿಯೇ ಬರೆದನೆಂದು ಪ್ರತೀತಿಯಿದೆ. ಇದರ ಶೈಲಿ ಈ ಕವಿಯ ಕಾವ್ಯ ಶೈಲಿಯನ್ನು ಹೋಲುತ್ತದೆ.

ಷಡಕ್ಷರ ದೇವನ ಸಮಾಧಿಃ- ಈ ಮಹಾಕವಿಯು ಸಮಾಧಿಸ್ಥನಾದ ಸ್ಥಳವನ್ನು ನಾವು ಇಲ್ಲಿ ಕಾಣಬಹುದು. ಸಮಾಧಿಯ ಮೇಲಣ ಮಂಟಪವು ಈಗ ಶಿಥಿಲವಾಗಿದೆ. ಈ ಸ್ಥಲವನ್ನು ಜನರು " ದನಗೂರು ದೇವರ ಮಠ " ಎಂದು ಕರೆಯುತ್ತಾರೆ. ವೀರಶೈವ ಪ್ರಪಂಚಕ್ಕೆ ಕ್ಷೇತ್ರವೆನಿಸಿದ ಈ ಸ್ಥಳವು ಇಂದು ಅವ್ಯವಸ್ಥೆಗೆ ಈಡಾಗಿದೆ. ಈಗ ಈ ಮಠದ ಪ್ರದೇಶವು ವೀರಶೈವೇತರರ ಹಸ್ತಗತವಾಗಿದೆ. ವಿಷಾದ ವಾರ್ತೆ.

ನಾನಿಲ್ಲಿಗೆ ಹೋದಾಗ ಈ ಸ್ಥಳವನ್ನು ವೀರಶೈವರು ನ್ಯಾಯವಾದ ಮಾರ್ಗದಿಂದ ವಶಪಡಿಸಿಕೊಂಡು ಇದನ್ನು ಉತ್ತಮ ಸ್ಥಿತಿಯಲ್ಲಿಡಬೇಕೆಂದು ಅಲ್ಲಿನ ವೀರಶೈವರಿಗೆ ಹೇಳಿ ಬಂದಿದ್ದೇನೆ. ಅವರು ಪ್ರಯತ್ನ ಮಾಡಿದರೆ ಅದು ಸಾಧ್ಯವೂ ಆಗುತ್ತದೆ.

ಈ ಯಳಂದೂರಿಗೆ ಮೂರು ಮೈಲಿ ದೂರದಲ್ಲಿರುವ ಯರಗಂಬಳ್ಳಿ ಎನ್ನುವ ಗ್ರಾಮದಲ್ಲಿ ಷಡಕ್ಷರ ದೇವನ ಮೂರ್ತಿಯೊಂದಿದೆಯೆಂದೂ ಅದೂ ಈಗ ಪಾಳು ಬಿದ್ದಿದೆಯೆಂದೂ ತಿಳಿದು ಬರುತ್ತದೆ.

ಹೀಗೆ ಯಳಂದೂರು ಶ್ರೀ ಷಡಕ್ಷರ ಕವಿಯ ಸಮಾಧಿಯನ್ನುಳ್ಳುದರಿಂದ ವೀರಶೈವ ಕ್ಷೇತ್ರ ಪಂಙ್ತಿಗೆ ಸೇರಲರ್ಹವಾಗಿದೆ. ಇದಕ್ಕೆ ಸಂಸ್ಕೃತದಲ್ಲಿ "ಬಾಲೇಂದು ಪುರ" ಎಂದೂ ಕರೆಯುತ್ತಾರೆ. ವೀರಶೈವ ಸಂಸ್ಕೃತಿಯಲ್ಲಿಯೂ ಷಡಕ್ಷರ ಕವಿಯಲ್ಲಿಯೂ ಪ್ರೀತಿಯುಳ್ಳ ವ್ಯಕ್ತಿಯು ಒಮ್ಮೆಯಾದರೂ ಈ ಸ್ಥಳಗಳನ್ನು ನೋಡುವುದವಶ್ಯಕ.

## ಪ್ರಭುಲಿಂಗನ ಬೆಟ್ಟ.

ಯಳಂದೂರಿಗೆ ನಾಲ್ಕಾರು ಮೈಲಿ ದೂರದಲ್ಲಿ ಪ್ರಭುಲಿಂಗನಬೆಟ್ಟ ಎಂಬ ದಿವ್ಯಸ್ಥಳವೊಂದಿದೆ. ಇದು ಕಾವೇರೀ ನದಿ ತೀರದಲ್ಲಿಯೇ ಇದೆ.

ವೀರಶೈವ ಪ್ರಪಂಚಕ್ಕೆ ಪರಮಪೂಜ್ಯನಾದ ಶ್ರೀ ಅಲ್ಲಮ ಪ್ರಭುವು ಕೆಲವು ಕಾಲ ಈ ಬೆಟ್ಟದಲ್ಲಿ ತಪಸ್ಸು ಮಾಡಿದನೆಂದೂ ಅದರಿಂದಲೇ ಈ ಬೆಟ್ಟಕ್ಕೆ ಪ್ರಭುಲಿಂಗನ ಬೆಟ್ಟವೆಂದು ಹೆಸರಾಯಿತೆಂದೂ ಹೇಳುತ್ತಾರೆ.

ಈ ಬೆಟ್ಟದಲ್ಲಿ ತಪಸ್ಸಿಗೆ ಅನುಕೂಲವಾದ ಗವಿಗಳನೇಕವಿವೆ. ಬೆಟ್ಟದ ಮೇಲೆ ಪ್ರಭುಲಿಂಗೇಶ್ವರನೆಂಬ ಶಿವಾಲಯವಿದೆ. ಇಲ್ಲಿಂದ ಒಂದು ಮೈಲಿ ದೂರದಲ್ಲಿ ಸುಪ್ರಸಿದ್ಧವಾದ ಶಂಭುಲಿಂಗನ ಬೆಟ್ಟವಿದೆ.

## ಶಂಭುಲಿಂಗನ ಬೆಟ್ಟ.

ಶ್ರೀ ನಿಜಗುಣಶಿವಯೋಗಿಯ ಹೆಸರನ್ನು ಕೇಳದವರು ಕನ್ನಡಿಗರಲ್ಲಿ ವಿರಳ. ವೇದಾಂತಿಗಳಿಗಂತೂ ಇವನು ಪ್ರಾಣಸ್ವರೂಪ. ಕೀರ್ತನಕಾರರಿಗೆ ಇವನು ಮೂಲಾಧಾರ. ವಿದ್ವಾಂಸರಿಗೆ ಈತನ ಗ್ರಂಥಗಳು ಪರಮ ಪ್ರಮಾಣ. ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ಹಾಡುಗಬ್ಬವನ್ನು ಬರೆದವನು ನಿಜಗುಣ ಶಿವಯೋಗಿ. ಕನ್ನಡದಲ್ಲಿ ವಸ್ತುಕೋಶ ಬರೆದವನೂ ಈತನೇ. ವೇದಾಂತ ಗ್ರಂಥಗಳನ್ನು ಬರೆದವನೂ ಈ ಕವಿ ಸಾರ್ವಭೌಮನೇ ಆಗಿದ್ದಾನೆ. ಶ್ರೀನಿಜಗುಣಶಿವಯೋಗಿಯು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಗ್ರಂಥ ನಿರ್ಮಾಣ ಮಾಡಿದ್ದಾನೆ.

೧. ಕೈವಲ್ಯ ಪದ್ಧತಿ.
೨. ವಿವೇಕ ಚಿಂತಾಮಣಿ.
೩. ಅನುಭವಸಾರ.
೪. ಅನುಭವಗೀತೆ.
೫. ಅನುಭಾವ ಬೋಧೆ.
೬. ಪರಮಾರ್ಥ ಪ್ರಕಾಶಿಕೆ.
೭. ಪುರಾತನರ ತ್ರಿವಿಧಿ.

ಎಂಬ ಈ ಮಹಾತ್ಮನ ಗ್ರಂಥಗಳು ಲೋಕಪೂಜ್ಯವಾಗಿವೆ. ಸಂಸ್ಕೃತದಲ್ಲಿಯೂ ಈತನು.

೧. ಆತ್ಮತರ್ಕ ಚಿಂತಾಮಣಿ.
೨. ದರ್ಶನಸಾರ.

ಎಂಬೆರಡು ಗ್ರಂಥಗಳನ್ನು ಬರೆದಿದ್ದಾನೆಂದು ಪ್ರತೀತಿಯಿದೆ. ಈ ಸಕ್ಕದದ ಹೊತ್ತಿಗೆಗಳು ಮಾತ್ರ ನಮ್ಮ ಹಸ್ತಗತವಾಗಿಲ್ಲ.

ಇಂತಹ ಮಹಾ ಕವಿಯೂ ಮಹಾ ದಾರ್ಶನಿಕನೂ ಶಿವಯೋಗಿಶ್ರೇಷ್ಠನೂ ಆದ ಶ್ರೀ ನಿಜಗುಣಶಿವಯೋಗಿಯ ತಪೋಭೂಮಿಯೇ ಶಂಭುಲಿಂಗನ ಬೆಟ್ಟ. ಈ ಕಾರಣದಿಂದ ನಾನು ವೀರಶೈವ ಕ್ಷೇತ್ರವೆಂಬ ಭಾವನೆಯಿಂದ ಈ ಸ್ಥಳವನ್ನು ನೋಡಲಿಕ್ಕೆ ಹೋದೆನು.

ಮೈಸೂರಿನಿಂದ ಚಾಮರಾಜನಗರದ ಮಾರ್ಗವಾಗಿ ಕೊಳ್ಳೇಗಾಲಕ್ಕೆ ಹೋಗುವ ರಾಜಮಾರ್ಗದಲ್ಲಿ (ಕೊಳ್ಳೇಗಾಲಕ್ಕೆ ೬ ಮೈಲಿ ದೂರದಲ್ಲಿ) ಶಂಭುಲಿಂಗನ ಬೆಟ್ಟವಿದೆ. ಇದು ಚಿಲಕವಾಡಿ ಎಂಬ ಗ್ರಾಮಕ್ಕೆ ಸಮೀಪದಲ್ಲಿರುವುದರಿಂದ ಇದಕ್ಕೆ ಚಿಲಕವಾಡಿ ಬೆಟ್ಟವೆಂದೂ ಜನರು ಕರೆಯುತ್ತಾರೆ. ಇದು ನಿಜವಾಗಿಯೂ ಬಹು ಚಿಕ್ಕ ಗುಡ್ಡವಾಗಿದೆ. ಬೊಂಬಾಯಿನ ಏಳಂತಸ್ತಿನ ಮನೆಯಷ್ಟು ಇದು ಎತ್ತರವಾಗಿಲ್ಲವೆನ್ನಬಹುದು. ಪುಣೆಯ ಪರ್ವತೀ ಗುಡ್ಡಕ್ಕಿಂತ ಇದನ್ನು ಚಿಕ್ಕದೆಂದೂ ಹೇಳಬಹುದು.

ಈ ಶಂಭುಲಿಂಗನ ಬೆಟ್ಟವು ಚಿಕ್ಕದಾದರೂ ಸುಂದರವಾಗಿದೆ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬ ಗಾದೆಯ ಮಾತು ಈ ಬೆಟ್ಟಕ್ಕೆ ಚನ್ನಾಗಿ ಒಪ್ಪುತ್ತದೆ. ಈ ಬೆಟ್ಟದ ಸುತ್ತಮುತ್ತಣ ಪ್ರಕೃತಿಯು ರಮಣೀಯವಾಗಿದೆ. ಬೆಟ್ಟದ ಮೇಲೆ ನಿಂತು ನೋಡುವ ನೋಟವು ಹೃದ

ಯಂಗಮವಾಗಿರುತ್ತದೆ. ಈ ಬೆಟ್ಟದಲ್ಲಿ ಮುಂದೆ ಹೇಳುವ ಮಹತ್ವದ ಸ್ಥಳಗಳಿವೆ. ಬೆಟ್ಟದ ಬುಡದಲ್ಲಿರುವ ಸೀನೀರಿನ ಸರೋವರವು ಮನೋಹರವಾಗಿದೆ. ಇದರ ಸುತ್ತಣ ಹೂಗಿಡಗಳು ಇದರ ರಮಣೀಯತೆಯನ್ನು ಹೆಚ್ಚಿಸಿವೆ. ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆ ನಡೆಯುತ್ತದೆ.

ಶಂಭುಲಿಂಗನ ಗುಡಿ:— ಶ್ರೀ. ನಿಜಗುಣಶಿವಯೋಗಿಗಳು ತಮ್ಮ ಗ್ರಂಥಗಳನ್ನೆಲ್ಲಾ "ಶಂಭುಲಿಂಗ" ಎಂಬ ಅಂಕಿತದಲ್ಲಿ ಮಾಡಿದ್ದಾರೆ. ಈ ಶಂಭುಲಿಂಗ ದೇವಾಲಯವು ಬೆಟ್ಟದ ಬುಡದಲ್ಲಿದೆ. ಈ ದೇವಾಲಯವು ವಿಶಾಲವಾಗಿಯೂ ಪ್ರಶಾಂತವಾಗಿಯೂ ಇದೆ. ಈ ಲಿಂಗವು ಮಾತ್ರ ಸ್ವಯಂಭುವಾಗಿದೆ. ಇಲ್ಲಿಗೆ ದಿನವೂ ಯಾತ್ರಿಕರು ಬಂದುಹೋಗುತ್ತಾರೆ. ಇಲ್ಲಿ ವೀರಶೈವರಾದ ಅರ್ಚಕರಿದ್ದಾರೆ. ಇವರನ್ನು ತಮ್ಮಡಿಗಳೆಂದು ಕರೆಯುತ್ತಾರೆ. ಇವರು ಲಿಂಗವನ್ನೂ ಯಜ್ಞೋಪವೀತವನ್ನೂ ಧರಿಸುತ್ತಾರೆ. ಈ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಅಲ್ಲದೆ ಈ ಗುಡಿಗೆ ಪೂರ್ವದ ಬಾಗಿಲೊಂದೂ ಇದೆ. ಇದೇ ಕ್ಷೇತ್ರಾಧಿದೇವತೆ.

ಕಲ್ಯಾಣ ಮಂಟಪ:— ದೇವಾಲಯದ ಮೇಲುಭಾಗದಲ್ಲಿ ಈ ಕಲ್ಲು ಮಂಟಪವಿದೆ. ಪ್ರಯಾಣಿಕರಿಗೆ ಇಳಿದುಕೊಳ್ಳಲಿಕ್ಕೆ ಅನುಕೂಲವಾಗಿದೆ. ಈ ಮಂಟಪದ ಕಂಬಗಳಮೇಲೆ ಹಲವು ವೀರಶೈವ ತಪಸ್ವಿಗಳ ಚಿತ್ರಗಳನ್ನು ಕೆತ್ತಿದ್ದಾರೆ.

ನಿಜಗುಣ ಗವಿ:— ನಿಜಗುಣಶಿವಯೋಗಿ ತಪಸ್ಸು ಮಾಡುತ್ತಿದ್ದದ್ದು ಈ ಗವಿಯಲ್ಲಿಯೇ ಎಂದು ಹೇಳುತ್ತಾರೆ. ಇದು ಅತ್ಯಂತ ದರ್ಶನೀಯವಾಗಿದೆ. ಈಗ ಇದನ್ನು ಉತ್ತಮ ಸ್ಥಿತಿಯಲ್ಲಿಟ್ಟಿದ್ದಾರೆ.

ಷಡಕ್ಷರ ಗವಿ:— ಶ್ರೀ. ನಿಜಗುಣಶಿವಯೋಗಿಯ ಸಮಕಾಲೀನನೂ ಮಹಾನುಭಾವನೂ ವೈರಾಗ್ಯ ಪ್ರಧಾನವಾದ ಹಾಡುಗಳನ್ನು ಹಾಡಿದವನೂ ಆದ ಮುಪ್ಪಿನ ಷಡಕ್ಷರ ಸ್ವಾಮಿಯು ಈ ಗವಿಯಲ್ಲಿ ತಪಸ್ಸು ಮಾಡಿದನೆಂದು ಹೇಳುತ್ತಾರೆ. ಈಗಲೂ ಇಲ್ಲಿ ಒಬ್ಬ ಶರಣರು ತಪಸ್ಸು ಮಾಡಿದ್ದಾರೆ. ನಿಜಗುಣ ಗವಿಯಂತೆಯೇ ದರ್ಶನಾರ್ಹವಾಗಿದೆ. ಹಾಗೂ ಸುವ್ಯವಸ್ಥಿತವಾಗಿದೆ.

ದಾಸೋಹದ ಮಠ:— ಇದೊಂದು ಲಿಂಗವಂತರ ಮಠ. ಬೆಟ್ಟದ ಕೆಳಭಾಗದಲ್ಲಿದೆ. ಇಲ್ಲಿ ಯಾತ್ರಿಕರಿಗೆ ವಾಸಕ್ಕೆ ಅನುಕೂಲವಾಗಿದೆ. ಈ

ಮಠದ ಸ್ವಾಮಿಗಳ ಗದ್ದಿಗೆಗಳು ಕೆಲವು ಕೆಳಭಾಗದಲ್ಲಿವೆ. ಇದರಲ್ಲಿ ನಿಜಗುಣ ಸಮಾಧಿಯೂ ಇದೆ ಎನ್ನುತ್ತಾರೆ. ಆದರೆ ಈ ಮಾತನ್ನು ಚನ್ನಾಗಿ ಪರಿಶೀಲಿಸಬೇಕಾಗಿದೆ. ಈ ಬೆಟ್ಟದಲ್ಲಿ ದುರ್ಗಿಯ ಗುಡಿಯೊಂದು ಇದೆ. ದಾಸೋಹಮಠವನ್ನು ಭಿಕ್ಷದ ಮಠವೆಂದೂ ಕರೆಯುತ್ತಾರೆ

ವೀರಭದ್ರ ದೇವಾಲಯಃ— ಇದು ವಿಶಾಲವಾದ ಗುಡಿ. ಶಂಭು ಲಿಂಗನ ಗುಡಿಯಷ್ಟೇ ಪ್ರಾಚೀನವೆಂದು ಕಾಣುತ್ತದೆ. ಮೂರ್ತಿ ಭವ್ಯವಾಗಿದೆ. ಶಂಭುಲಿಂಗನ ಗುಡಿ ಪಕ್ಕದಲ್ಲಿದೆ.

(ಶಿವಂಭೂಯಾತ್.)

---

# ಶ್ರೀ.
# ಘನಮಠದಾರ್ಯರ ಧಾರ್ಮಿಕ ವಿಚಾರಗಳು.



[ಶ್ರೀ. ಘನಮಠದಾರ್ಯರು ಸುಮಾರು ೧೦೦ ವರ್ಷಗಳ ಹಿಂದೆ ಬಹು ಪ್ರಖ್ಯಾತ ಧಾರ್ಮಿಕ ಪುರುಷರಾಗಿ ಹೋದರು. ಅವರು ಪುರಾತನ ಕಾಲದಿಂದಲೂ ವೀರಶೈವರಲ್ಲಿ ನಡೆದುಬಂದ ಪದ್ಧತಿಗನುಸಾರವಾಗಿ ಧರ್ಮಗ್ರಂಥಗಳನ್ನು ಪರಿಶೀಲಿಸಿದವರಾಗಿ ಅವುಗಳ ತತ್ವಗಳನ್ನು ತಮ್ಮ ಆಚರಣೆಯಲ್ಲಿ ತಂದುಕೊಂಡವರಾಗಿದ್ದರು. ಇಂಥವರ ವಿಚಾರಗಳನ್ನು ಅರಿಯುವದು ಬಹು ಮಹತ್ವವಾದದ್ದು. ಶಿವಾನುಭವದ ಜ್ಞಾನವನ್ನು ಮುಂದುವರಿಸುವ ಪೂರ್ವ ಪದ್ಧತಿಯು ಈಗ ವೀರಶೈವ ಸಮಾಜದಲ್ಲಿ ಲೋಪವಾಗಹತ್ತಿದೆ. ಅಥವಾ ಇಲ್ಲೆಂದರೂ ಸಲ್ಲುವದು. ವೀರಶೈವರು ತಮ್ಮ ಸಂಸ್ಕೃತಿಗೆ ಹೊರತಾದ ವಾಙ್ಮಯವನ್ನು ಹೆಚ್ಚಾಗಿ ಅಭ್ಯಾಸ ಮಾಡುವ ಪ್ರವೃತ್ತಿಯು ಈಗ ಹೆಚ್ಚಾಗಿದ್ದದ್ದೇ ಇದಕ್ಕೆ ಮುಖ್ಯ ಕಾರಣವಾಗಿದೆ. ಈ ಸ್ಥಿತಿಯಲ್ಲಿ ಶ್ರೀ. ಘನಮಠದಾರ್ಯರಂಥ ಮಹಾನುಭಾವರ ವಿಚಾರಗಳನ್ನು ಅರಿಯುವದು ಮಹತ್ವದ್ದಾಗಿದೆ.

ಶ್ರೀ. ಘನಮಠದಾರ್ಯರು (೧) ಷಟ್‌ಸ್ಥಲ. (೨) ಕಾಯಕಗಳು. (೩) ಮತ್ತು ಪಾರಮಾರ್ಥ ಈ ವಿಷಯಗಳ ಸಂಬಂಧವಾಗಿ ಬಹು ಮಾರ್ಮಿಕ ವಿಚಾರಗಳನ್ನು ತಮ್ಮ "ಕೃಷಿಜ್ಞಾನ ಪ್ರದೀಪಿಕೆ" ಎಂಬ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ. ಅವುಗಳನ್ನೇ ನಾವು ಶಿವಾನುಭವದ ವಾಚಕರಿದುರಿಗೆ ಇಲ್ಲಿ ಇಟ್ಟಿದ್ದೇವೆ .......................... **ಸಂಪಾದಕ.** ]

## ಷಟ್‌ಸ್ಥಲ.

ಸಹಜ ಸದ್ಭಕ್ತರಾಚರಣೆಯಾದ ಷಟ್‌ಸ್ಥಲದ ವರ್ತನೆಯು ಎಂತೆಂದೊಡೆ ಗುರುಲಿಂಗಜಂಗಮದಲ್ಲಿ ಭೇದವಿಲ್ಲದ ತ್ರಿವಿಧಮೂರ್ತಿಗಳೊಂದೇ ಎಂದು ಗುರುಲಿಂಗದ ಮುಖವೇ ಜಂಗಮವೆಂದು ನಿಸ್ಸಂಶಯದಿಂದ ಸುವರ್ಣ ವಸನಾನ್ನ ಮೊದಲಾದ ಸಮಸ್ತ ಭೋಗಪದಾದಾರ್ಥಗಳನೆಲ್ಲ ಸದ್ಭಕ್ತಿಪೂರ್ವಕದಿಂದ ಚನ್ನಾಗಿ ಸಮರ್ಪಿಸಿ ವೀರಶೈವಾಗಮಂಗಳಲ್ಲಿ ಹೇಳಿದ ಸದ್ವೀರಮಾಹೇಶ್ವರ ಕುರುಹಂ ಕಂಡು ಶರಣಾಗತನಾಗುವದೇ ಭಕ್ತಿ ಲಕ್ಷಣವು ಆ ಆಚರಣೆಯಲ್ಲಿ ಆಚರಿಸುತಿರ್ಪ ಸಹಜ ಸದ್ಭಕ್ತನಾಚರಣೆಯೇ ಭಕ್ತಸ್ಥಲವೆನಿಸುವದು.

ಈ ಭಕ್ತಸ್ಥಲವು ನಿಜವಾದ ಆ ಸದ್ಭಕ್ತಗೆ ಮುಂದಿನ ಐದು ಸ್ಥಲವು ತನ್ನಿಂದ ತಾನೇ ಸಾಧ್ಯವಾಗುವವು. ಹೇಗಂದರೆ ಸಾಕ್ಷಿ "ಪರವಧುವಂ ಪರದ್ರವಿಣಮಂ ಪರಹಿಂಸೆಯನ್ನೈದೆ ದೂರದಿಂ। ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪ ಷಡರ್ಥ ಸಂಗ್ರಹಾ। ಚರಣೆಯೊಳೇಕಲಿಂಗ ನಿಜನಿಷ್ಠೆ ಸಮಾಹಿತಮಾದಡಂತದೇ ಪರಮ ಮಹೇಶ್ವರ ಸ್ಥಲದ ಲಕ್ಷಣ ವೃತ್ತಿಪದಂ ಶಿವಾಧವಾ" ಎಂಬ ಮಾಯಿದೇವ ಪ್ರಭುಗಳ ವಾಕ್ಯದ ಅನ್ವಯವು ಹೇಗೆಂದರೆ, ಸಹಜ ಸದ್ಭಕ್ತರ ವರ್ತನೆಯಲ್ಲಿ ಪರಸತಿ, ಪರಾರ್ಥ, ಪರಹಿಂಸೆಗಳಂ ಬಿಟ್ಟು ಸದ್ಗುರುನಾಥನುಪದೇಶಕ್ರಮದಂತೆ, ಷಡರ್ಥ ಸಂಗ್ರಹಾಚರಣೆಯಲ್ಲಿ, "ಏಕಮೂರ್ತಿಸ್ತ್ರಯೋ ಭಾಗಂ ಗುರುಲಿಂಗಂ ತು ಜಂಗಮಂ॥ ಜಂಗಮಂ ಗುರುಲಿಂಗಂ ಚ। ತ್ರಿವಿಧಂ ಲಿಂಗಮುಚ್ಯತೆ॥" ಎಂಬಾಗಮ ಪ್ರಮಾಣದಂತೆ, ಏಕಲಿಂಗನಿಜನೈಷ್ಠೆಯಲ್ಲಿ ಕೂಡಿದ ಭಕ್ತಸ್ಥಲದಾಚರಣೆಯಲ್ಲಿ ಮಹೇಶ್ವರ ಸ್ಥಲವಡಗಿಪ್ಪದು. ಸದ್ಭಕ್ತರಲ್ಲಿ ಅನಸ್ತ್ರೀಯರ ವ್ಯಸನ, ಅನ್ಯ ದ್ರವ್ಯ ಕಾಂಕ್ಷೆ, ಅನ್ಯ ಪ್ರಾಣ ಹಿಂಸೆ, ಅನ್ಯ ದೈವದ ಭಜನೆಗಳಂ ತಿರಸ್ಕರಿಸುತ್ತ ಸದ್ಗುಣಗಳಿಂದ ಲೋಕೋಪಕಾರೀ

ಗಳಾಗಿ ವರ್ತಿಸಬೇಕೆಂಬಾಶೆಯುಂಟಾಗಿ, ಜಗದೋಪಕಾರಿಗಳಾಗಿರುತ್ತ ದುಷ್ಟರಾದ ದುರ್ಜನರಂ ತಿರಸ್ಕರಿಸಿ, ಹಿಡಿದಾಚಾರವುಂ ಬಿಡದೆ ನಡಿಸ ಬೇಕೆಂಬ ಛಲದ ನೈಷ್ಠೆಯಲ್ಲಿ ಪಂಚಾಚಾರವೇ ಪ್ರಾಣವಾಗಿ ವರ್ತಿಸುವ ವೀರಮಾಹೇಶ್ವರಾಚಾರ್ಯ ಸ್ಥಿತಿಯೇ ಮಹೇಶ್ವರ ಸ್ಥಲವೆನಿಸುವದು.

ಆ ಮಹೇಶ್ವರ ಸ್ಥಲದಲ್ಲಿ ಪ್ರಸಾದಿ ಸ್ಥಲವಡಗಿಪ್ಪದು. ಹೇಗಂದರೆ ಮಹೇಶ್ವರ ಸ್ಥಲದಾಚರಣೆಯು ನಿಜವಾಗಿ ಸಕಲ ಪದಾರ್ಥಂಗಳನ್ನು ಅಂತರಂಗ ಬಹಿರಂಗದಲ್ಲಿ ಜ್ಞಾನಕ್ರಿಯಾರೂಪ ಸಕಲ ಭೋಗೋಪ ಭೋಗಂಗಳನೆಲ್ಲ ಲಿಂಗವಿರಹಿತವಾಗಿ ಅಣುಮಾತ್ರವಾದರೂ ಕೊಳ್ಳದೆ, ಸಕಲವೆಲ್ಲವನು ಲಿಂಗಕ್ಕರ್ಪಿಸಿ ಲಿಂಗ ಭೋಗೋಪಭೋಗಿಯಾಗಿರ್ದಲ್ಲಿ ಆ ಭಕ್ತನೇ ಅನಾದಿ ಪ್ರಸಾದಿ ಎನಿಸಿಕೊಂಬುವನು.

ಆ ಪ್ರಸಾದಿಯ ಸ್ಥಲದಲ್ಲಿ ಪ್ರಾಣಲಿಂಗಿಸ್ಥಲವಡಗಿರ್ಪುದು ಹೇಗೆಂದರೆ "ಪರಿಪೂರ್ಣ ಪ್ರಸನ್ನೇತಿ" ಎಂದುಂಟಾಗಿ, ತಾನು ಪೂರ್ಣಪ್ರಸಾದ ಕಾಯ ನಾದಲ್ಲಿ ಲಿಂಗ ಬೇರೆ ತಾ ಬೇರೆಂಬ ಭಿನ್ನತ್ವವಿಲ್ಲ. ಸರ್ವಾಂಗ ಲಿಂಗಮ ಯವಾಗಿ, ವಾಯುಪ್ರಾಣವಳಿದು, ಲಿಂಗಪ್ರಾಣವಾಗಿರ್ಪಲ್ಲಿ, ಆ ಭಕ್ತನೇ ಪ್ರಾಣಲಿಂಗಿ ಎನಿಸಿರ್ಪನು.

ಪ್ರಾಣಲಿಂಗಿ ಸ್ಥಲದಲ್ಲಿ ಶರಣಸ್ಥಲವಡಗಿರ್ಪುದು ಹೇಗಂದರೆ ಪಂ ಚೇಂದ್ರಿಯ ಸಕಲ ಸುಖಭೋಗಂಗಳನೆಲ್ಲ ಲಿಂಗಕ್ಕೆ ಕೊಟ್ಟು ಭೋಗಿ ಸುವಲ್ಲಿ, ಶರಣಸತಿ ಲಿಂಗಪತಿ ಭಾವದಿಂದ ನಿರ್ವಂಚಕ ನಿರಭಿಮಾನ ದಿಂದ ಲಿಂಗ ಭೋಗದಲ್ಲಿ ತೆರೆ ಮರೆ ಇಲ್ಲದೆ ಪರಮ ಪತಿವ್ರತಾಂಗ ನೆಯು ತನ್ನಂಗ ಸುಖವನ್ನು ಪುರುಷಂಗಿತ್ತು ಮಮಕಾರದಿಂದಪ್ಪಿದಲ್ಲಿ ನಿಜವಲ್ಲಭನಂಗ ಭೋಗದ ಸರ್ವ ಸುಖವು ತನುಗುಪಭೋಗದಾನಂದ ವಾಗುವಂತೆ ಶರಣ ಲಿಂಗಭೋಗೋಪಭೋಗದ ಪರಿ ಇಪ್ಪುದಾಗಿ ಈ ರೀತಿಯಿಂದ ಸಕಲ ಸುಖಭೋಗಂಗಳನ್ನೆಲ್ಲ ಸರ್ವೇಂದ್ರಿಯ ಮುಖ ಗಳಿಂದ ವೀರಶೈವಾಗಮೋಚಿತ ಕ್ರಮದಿಂದ ಅರ್ಪಿಸುತ್ತ ಲಿಂಗದ ಸರ್ವಾ ನಂದವೇ ತನಗೆ ಪ್ರಸಾದ ಭೋಗವಾಗಿ ಸರ್ವಾಂಗಲಿಂಗಮಯನಾಗಿ ವರ್ತಿಸುವ ಭಕ್ತನೇ ಶರಣನೆನಿಸಿರ್ಪನು.

ಶರಣ ಸ್ಥಲದಲ್ಲಿ ಐಕ್ಯಸ್ಥಲವಡಗಿಪ್ಪುದು ಹೇಗೆಂದರೆ ತನಗವಸಾನ ಭೂಮಿಯೇ ಶಿವಲಿಂಗ ಆ ಶಿವಲಿಂಗಕ್ಕವಸಾನಭೂಮಿಯೇ ತಾನಾಗಿ, ಸಕಲ

ಪ್ರಪಂಚ ರಚನಾ ಕ್ರಿಯೆಯಂ ನೆರೆ ಬಿಟ್ಟು, ಅಷ್ಟವಿಧಾರ್ಚನ ಷೋಡ ಶೋಪಚಾರ ಕ್ರಿಯೆಗಳನೆಲ್ಲವ ನಷ್ಟವ ಮಾಡಿ, ನಿರ್ಭಾವ ಸ್ವರೂಪ ನಾಗಿ, ಶಿಖಿ ಕರ್ಪುರ ಸಂಯೋಗದಂತೆ, ಸ್ವಯಂಜ್ಯೋತಿ ಸ್ವರೂಪನಾಗಿ, ಲಿಂಗದೊಳ್ ಬೆರೆದು, ಲಿಂಗಾಂಗಸಾಮರಸ್ಯನಾಗಿರ್ಪಲ್ಲಿ ಆ ಭಕ್ತನೇ ಐಕ್ಯನಾಗಿರ್ಪನು.

ಈ ಷಟ್‌ಸ್ಥಲ ಜ್ಞಾನ ಪೂರ್ಣನಾದ ಸದ್ಭಕ್ತನ ಸಹಜ ಭಕ್ತಿಯ ನಿಲವ ತಿಳಿಯಬೇಕಾದರೆ, ಬಹುಜ್ಞಾನಾರ್ಜಿತ ಪುಣ್ಯಾದಿಂದಲ್ಲದೆ ತಿಳಿ ಯದು. "ಏಕೇನ ಜನ್ಮ ಸಂಪ್ರಾಪ್ಯ। ಕರ್ಮಜ್ಞಾನ ಸಮಾಧಿಭಿಃ॥ ನರಾಣಾಂ ಕ್ಷೀಣ ಪಾಪಾನಾಂ। ಶಿವಭಕ್ತಿ ಪ್ರಜಾಯತೆ" ಎಂದು ಮತ್ತು "ದುರ್ಲಭಂ ನರ ಜನ್ಮಾನಿ। ವಿವೇಕಮತಿ ದುರ್ಲಭಾ ದುರ್ಲಭಂ ಶಿವಭ ಕ್ತಾನಾಂ। ಜ್ಞಾನೀ ತ್ರೈಲೋಕ್ಯ ದುರ್ಲಭಂ" ಎಂದುಂಟಾಗಿ, ಈ ಶಿವ ಸದ್ಭಕ್ತಿಯು ಪ್ರಾಪ್ತಿಸಬೇಕಾದರೆ, ಬಹು ಜನ್ಮದ ಸುಕೃತದಿಂದಲ್ಲದೆ ಪ್ರಾಪ್ತಿಸದು.

---

## ಕಾಯಕ.

ಸದ್ಭಕ್ತರಾದವರು ಸತ್ಯ ಶುದ್ಧ ಕಾಯಕದಿಂದ ಮಾಡಿ ನೀಡಿ ಮುಕ್ತ ರಾಗಬೇಕು. ಈ ಸತ್ಯ ಶುದ್ಧ ಕಾಯಕವೇ ಕೈಲಾಸವೆಂದರಿಯದೇ, ಕೆಲವು ಕೆಲವು ಭಿನ್ನವ್ರತ ನೇಮಾಚಾರದಿಂದಾಚರಿಸಿ, ಪೂರ್ಣ ಭಕ್ತಿಗೆ ವಿಲಕ್ಷಣರಾಗಿ, ಕೈಲಾಸಾದಿ ಚತುರ್ವಿಧ ಫಲಗಳ ಧರ್ಮಾಚಾರ ಪದ ಗಳಾದ ಧರ್ಮಾದಿ ಮೋಕ್ಷಾಂತ್ಯಮಾದ ಚತುರ್ವಿಧ ಫಲಂಗಳ ಪಡೆವ ಭಿನ್ನ ಭ್ರಾಂತರಾಗಿರ್ದವರು ಕೈಲಸಾದಲ್ಲಿರ್ದರೂ ಭಿನ್ನ ಭವಿತ್ವವೇ ಮುಂದುಗೊಂಡಿರ್ದ ಕಾರಣ ಆ ಕೈಲಾಸದಲ್ಲಿರ್ದರೂ ಶಿವನ ಸಾನ್ನಿಧ್ಯವಿಲ್ಲದೆ ಭವ ಹಿಂಗದೇ ಇರ್ಪರು. ಅದು ಹೇಗಂದರೆ ಒಬ್ಬಾನೊಬ್ಬ ರಾಜನ ಪಟ್ಟಣದಲ್ಲಿ ಒಬ್ಬ ದರಿದ್ರನು ನೆಲೆಗೊಂಡಿರ್ದರೂ ರಾಜ ಬಹು ಮಾನ ವಿಲ್ಲದೆ ರಾಜ ಸಂಗ ಸಮರಸವಿಲ್ಲದೆ ದಾರಿದ್ರ್ಯವನ್ನನುಭವಿಸುತ್ತಲಿರ್ದಂತೆ, ಷಟ್‌ಸ್ಥಲ ಜ್ಞಾನಹೀನರಾಗಿದ್ದವರು ಕೈಲಾಸದಲ್ಲಿರ್ದರೂ ನಿಜಸುಖ ಸಾಧ್ಯವಾಗದೆ ಭವ ದುಃಖಿಗಳಾಗಿಯೇ ಇರ್ಪರು.

ಷಟ್‌ಸ್ಥಲ ಜ್ಞಾನ ಸಂಬಂಧವಾದ ಸದ್ಭಕ್ತಗಣಂಗಳು ಈ ಲೋಕದಲ್ಲಿರ್ದರೂ, ಪರಶಿವನ ಚಿದಾನಂದ ಮೂರ್ತಿಗಳು ಆ ಲೋಕದಲ್ಲಿರ್ದರೂ ಪರಶಿವನ ಸ್ವಯಾನಂದ ಮೂರ್ತಿಗಳು "ಭಾಸಿತೇ ರಾಜ ಪುತ್ರವತ್" ಎಂಬಂತೆ ರಾಜನಿಗೆ ಮಗನಾಗಿ ಪುಟ್ಟಿದಲ್ಲಿ ಲೋಕದ ಭಿನ್ನಾತ್ಮರಿಗೆ ರಾಜಭಯ ರಾಜಮಾನ್ಯಗಳುಂಟಲ್ಲದೆ ರಾಜಕುಮಾರನಿಗೆ ರಾಜಭಯಾದಿಗಳುಂಟೇ? ಹಾಗೆ ಸದ್ಭಕ್ತರು ಶಿವನಿಗೆ ಕಾಯಕಗಳಿಂದ ಸಲುಗಿಗರಾಗಿರುವದರಿಂದ ಭಯವಿಲ್ಲದೆ ಸ್ವತಂತ್ರರಾಗಿ ಸ್ವಲೀಲಾನಂದ ಭಕ್ತಿ ಕಾಯಕವನಾಚರಿಸುತ್ತಿರ್ಪರು.

ಇಂಥ ಸದ್ಭಕ್ತನಿಪ್ಪ ಲೋಕವೇ ಕೈಲಾಸ. ಆತನಿರ್ದಲ್ಲಿರುವದೇ ಸಾಲೋಕ್ಯ ಪದವು. ಆತನ ಸಮೀಪದಲ್ಲಿರ್ದ ಸೇವಕರಾದವರೇ ಸಾಮೀಪ್ಯ ಪದಸ್ಥರು. ಆ ಭಕ್ತನಾಚರಣೆಯುಳ್ಳವರೇ ಸಾರೂಪ್ಯ ಪದಸ್ಥರು. ಆ ಸದ್ಭಕ್ತನ ಸಾಮರಸ್ಯಾನಂದ ಗೋಷ್ಠಿಯಲ್ಲಿಪ್ಪವರೇ ಸಾಯುಜ್ಯಪದಸ್ಥರು. ಇದನರಿಯದೆ, ಧರ್ಮಾರ್ಥ ಕಾಮಮೋಕ್ಷಂಗಳಂ ಬಯಸಿ, ಕರ್ಮನಿಷ್ಠರಾಗಿರ್ದವರು ಭವಿಗಳೆನಿಸುವರು. ಕಾಯಕಗಳನ್ನವಲಂಬಿಸಿರ್ದವರು ಭಕ್ತರೆನಿಸುವರು. ಸಾಕ್ಷಿ "ಕೈಲಾಸಾದಿ ಪದೇಷ್ವಾಶಾ। ಯಸ್ತಸ್ಯ ಭವಿನೋ ಭವೇತ್॥ ಭವಿ ಶೈವಪದಂ ಸರ್ವಂ। ತದ್ಗಣೋ ಭವಿನೋ ಗಣಾಃ"॥ ಎಂದುಂಟಾಗಿ, ಧರ್ಮದಿಂದ ಅರ್ಥ. ಅರ್ಥಪ್ರಯೋಜನವಾದುದೇ ಕಾಮ. ಕಾಮದಲ್ಲಿ ಜ್ಞಾನೋದಯದಿಂದ ಮೋಕ್ಷಾಪೇಕ್ಷೆ. ಅದು ಕಾರಣ ಈ ಚತುರ್ವಿಧ ಫಲಪದತ್ವಂಗಳನಿಚ್ಛೈಸದೆ ಶಿವದಿಂದಿರ್ಪುದೇ ಧರ್ಮ. ಆ ಶಿವಕಾಯಕ ಧರ್ಮ ಭಕ್ತಿಯಿಂದ ಪಾರಮಾರ್ಥ ಜ್ಞಾನಿಯಾಗಿರ್ಪುದೇ ಅರ್ಥ ಕಾಮಾದಿ ಅರಿಷಡ್ವರ್ಗಂಗಳಿಗೆ ವಿಲಕ್ಷಣ ಬ್ರಹ್ಮವನಪ್ಪಿ ನಿಷ್ಕಾಮಿಯಾಗಿಪ್ಪೆನೆಂಬಾಪೇಕ್ಷೆಯೇ ಕಾಮ. ಸ್ವಸ್ವರೂಪ ಸಾಕ್ಷಾತ್ಕಾರದಿಂದಾ ಭಕ್ತನ ಸಾಮರಸ್ಯವೇ ಮೋಕ್ಷ. ಈ ಪ್ರಕಾರವಾದ ಆಚರಣೆಯಿಂದಿರ್ಪುದೇ ಸದ್ಭಕ್ತಿಯೆನಿಸುವದು.

## ಪಾರಮಾರ್ಥ.

"ಪಿಂಡ ಬ್ರಹ್ಮಾಂಡಯೋರೈಕ್ಯಂ" ಎಂಬ ಶೃತಿ ಪ್ರಮಾಣ ಉಂಟಾಗಿ ತನ್ನಂಗದೊಳಗಜಾಂಡವೆಲ್ಲವಂ ಕಂಡ ಪರಿ ಎಂತೆಂದರೆ, ಪಾದಂಗಳೇ

ಪಾತಾಳಂಗಳು. ಕಟಿಯಿಂದ ಕಂಠ ಪರ್ಯಂತರ ಮರ್ತ್ಯಲೋಕವು. ಮಸ್ತಕವೇ ಸ್ವರ್ಗವೆಂದೆನಿಸುವದು. ಅಷ್ಟಮದವೇ ದಿಗ್ದಂತಿಗಳು. ತಲೆಯ ಚಿಪ್ಪೆಂಬುದೇ ಊರ್ಧ್ವಕಟಾಹ. ಪಾದತಳವೇ ಅಧೋಕಟಾಹವೆನಿಸು ವದು. ಕಠಿಣ ದ್ರವ್ಯಾದಿಗಳೈದು ಭೂತಂಗಳು. ವದನ ಗುಣಂಗಳೇ ಸ್ವರ್ಗ ನರಕಂಗಳು. ವಾಮಭಾಗದ ನೇತ್ರವೇ ಚಂದ್ರ. ದಕ್ಷಿಣ ಭಾಗದ ನೇತ್ರವೇ ಸೂರ್ಯನು. ಉಸುರಿಡೆಯೂಟವೇ ವಾಯು. ಏಳು ಧಾತು ಗಳೇ ಸಪ್ತದ್ವೀಪಂಗಳು. ದೇಹಾದ್ಯಂತವಾಗಿರುವ ಸಮಸ್ತ ಕೇಶಂಗಳೇ ತರುಲತೆಗಳು. ಏಳಾವರ್ತಿಯೇ ಸಪ್ತಸಮುದ್ರಂಗಳು. ಗ್ರಂಥಿಗಳೆಲ್ಲವೂ ಗುಡ್ಡ ಬೆಟ್ಟಂಗಳು. ಸುಳಿಯುತ್ತಿಹ ಸಕಲ ಕರಣಾದಿಗಳೇ ಸಮಸ್ತ ಖಗಮೃಗಾದಿಗಳು. ಪುಣ್ಯ ಪಾಪಂಗಳೇ ದನುಜ ದಿವಿಜರು. ಜನನವೇ ಸೃಷ್ಟಿ. ಮರಣವೇ ಲಯವೆಂದೆನಿಸುವದು. ಅಜ್ಞಾನವೆಂಬುದೇ ಕಾರ್ಗತ್ತಲು. ಅರಿವೇ ಬೆಳಕು. ನಿದ್ರೆಯೇ ರಾತ್ರಿ. ಜಾಗ್ರವೇ ಹಗಲು. ದುಃಖವೇ ಇಹ. ಸುಖವೇ ಪರ. ಜನನೀಜನಕರೇ ಪಾರ್ವತೀಪರ ಮೇಶ್ವರರುಗಳು. ಮುಖವೇ ಮೂಡಲು. ಬೆನ್ನೇ ಪಡುವಲು. ಎಡವೇ ಉತ್ತರ ದಿಕ್ಕು. ಬಲವೇ ದಕ್ಷಿಣ ದಿಕ್ಕು. ಜ್ಞಾನೇಂದ್ರಿಯ ಸಮುದಾಯವೇ ಸುಜನರು. ಕರ್ಮೇಂದ್ರಿಯ ಪ್ರಸರವೇ ಖಲಜನರು. ಸಮಸ್ತ ರೋಗಂಗಳೇ ಉತ್ಪಾತಂಗಳು. ಮನವೇ ದೊರೆಯು. ಉಳಿದ ಕರಣಂಗಳೇ ಜನರು. ಅಶುಚಿಯೇ ಶೂದ್ರತ್ವವು. ಆಚಾರವೇ ಬ್ರಾಹ್ಮಣ್ಯ. ಅಶನವೇ ಸುಗ್ಗಿ. ಹೊಟ್ಟೆಯೇ ಹಗೆ. ದಶಮಲವೇ ಕಸವು. ಪುಸಿಯೇ ಹೊಲೆತನ. ಸಿರಿ ದಾರಿದ್ರ್ಯಂಗಳೇ ಸುಭಿಕ್ಷ ದುರ್ಭಿಕ್ಷಂಗಳು. ಸತ್ವ ರಜ ತಮಾದಿ ತ್ರಿವಿಧ ಗುಣಗಳೇ ತ್ರೈಮೂರ್ತಿಗಳು. ಐದು ಅವಸ್ಥೆಗಳೇ ಪಂಚಕೃತ್ಯಂಗಳು. ಆದಿಯೇ ಮೃತ್ಯು. ಮಾರಾಗ್ನಿ ಮುಖ್ಯವೇ ದಾವಾಗ್ನಿ ಮೊದಲಾದ ಪಂಚಾಗ್ನಿಗಳು. ಶೀತೋಷ್ಣಂಗಳೇ ಚಳಿ ಬಿಸಿಲು. ಆರಯ್ಯೆ ಸಿರಿಯೇ ಷಡೃತುಗಳು. ನೈಬೆವರೇ ವೃಷ್ಟಿಯು. ಆಧಾರ ಮೊದಲಾದ ದಶವಿಧ ಚಕ್ರಂಗಳೇ ಕ್ಷೇತ್ರಂಗಳು. ಈಡಾದಿ ನಾಡಿಗಳೇ ತೀರ್ಥಂಗಳು. ಮಿಕ್ಕ ನಾಡಿಗಳೇ ತಟಿನಿಗಳು. ಬಾಲ್ಯಾದಿಗಳೇ ಮಜಗಂಗಳು. ಸಿರವೇ ಮೇರು. ಆ ಸಿರದೊಳ್ ಸೇರಿ ಸುಸ್ಥಿರವಾದ ಸುಷುಮ್ನವೇ ರಜತ ಶೃಂಗವು. ಅಲ್ಲಿಪ್ಪ ಜೀವನೇ ಶಿವನು. ಇತ್ಯಾದಿ ಬ್ರಹ್ಮಾಂಡದ ಅಖಿಳ ಲಕ್ಷಣಗಳನ್ನು ಪರಿಕಿಸುತ ತನ್ನಯ ಶರೀರದೊಳು ಕಂಡು, ಮತ್ತೆ ಘನಮಠಾದಿಗಳ ಒಳಹೊರಗೆ ತುಂಬಿರ್ದ ಗಗನದೋಪಾದಿಯೊಳು,

ಶರೀರ ಕೋಟಿಗಳ ನುಂಗಿರುತಿರ್ದ ಬ್ರಹ್ಮಾಂಡದೊಳ ಹೊರಗೆ ಇನಿತಾದರೂ ತೆರಹಿಲ್ಲದೆ, ಇಡಿಕಿರಿದಾಗಿ ತೋರುತ್ತಿರ್ದ ಚಿದ್ಘನ ಶೇಷಭೂಷಣ ಪ್ರಭು ಪದದ್ವಯ ಬ್ರಹ್ಮವದು ಪರಿಪೂರ್ಣವೆನಿಸಿರ್ಪುದು.

ಪರಿಪೂರ್ಣ ಬ್ರಹ್ಮದಲ್ಲಿ ಇಂತನಂತ ಬ್ರಹ್ಮಾಂಡಂಗಳಂತೆ ಅನಂತ ಪಿಂಡಾಂಡಗಳುಂಟು. ಅವುಗಳಲ್ಲಿ ಜಡಪಿಂಡಗಳಾದರೆ ಶಿವತತ್ವಕ್ಕೆ ಕಾರಣವಲ್ಲಾಗಿ, ಈ ಬ್ರಹ್ಮಾಂಡದಲ್ಲಿ ಕೆಲವು ಭೂಮಿಗಳು ಕಲ್ಲು ಮೊರಡಿಗಳಾಗಿ, ಏನೇನೂ ಫಲಿಸದೆ, ಭೂತ ಪ್ರೇತ ಪಿಶಾಚಾದಿ ನಿಶಾಚರ ಪ್ರಾಣಿಗಳು ಮತ್ತು ಕ್ರೂರ ಮೃಗ ಪಶುಗಳ ವಾಸಸ್ಥಾನವಾದ ದುರಾರಣ್ಯದಂತಾಗಿ ಕೆಟ್ಟು ಹೋಗುತ್ತಿಹವು. ಹೇಗಂದರೆ, ಸಕಲ ದುರ್ಗುಣಂಗಳ ಸಮುದಾಯದಿಂದ ತುಂಬಿದ ಅಜ್ಞಾನಾಂಧಕಾರ ಭರಿತವಾದ ಖಲಜನರ ಶರೀರವೆಂಬ ಜಡಪಿಂಡಂಗಳೇ ದುರಾರಣ್ಯವೆನಿಸಿರ್ಪುವು.

ಪುಣ್ಯಮಯರಾದ ಸದ್ಗುಣ ಸದಾಚಾರ ಸುಜ್ಞಾನ ಸದ್ಭಕ್ತರೆನಿಪ ಜ್ಞಾನ ಕಲಾತ್ಮರ ಹೃದಯವು ಜ್ಞಾನ ಸೂರ್ಯಪ್ರಭಾಮಯವಾಗಿರುವದರಿಂದ, ಚಿತ್ಪಿಂಡವೆಂಬ ಪುಣ್ಯ ಭೂಮಿ ಎನಿಸಿ, ಸಮಸ್ತೋತ್ತಮ ಧಾನ್ಯಾದಿ ಸಕಲ ಫಲ ಪದಾರ್ಥಂಗಳನ್ನು ಬೆಳಿಸತಕ್ಕ ದಿವ್ಯ ಕ್ಷೇತ್ರ, ಉದ್ಯಾನವನ, ಪುಣ್ಯವನ, ಪುಷ್ಪವನ, ಬಿಲ್ವವನ, ಕದಳೀಚೂತವನ, ಲಿಂಬಿ ದ್ರಾಕ್ಷವನಗಳೆಂಬ ಪೆಸರಂ ಪಡೆದು ಲಿಂಗಕ್ಷೇತ್ರಂಗಳೆನಿಸಿರ್ಪ ಚಿತ್ಪಿಂಡಂಗಳಲ್ಲಿ ಆದಿಪಿಂಡ ಮಧ್ಯಪಿಂಡ ಚಿತ್ಪಿಂಡವೆಂಬ ಪಿಂಡತ್ರಯ ಭೇದಂಗಳುಂಟು. ಅವುಗಳಲ್ಲಿ ಸಕಲ ತತ್ವಂಗಳಿಂ ಕೂಡಿರ್ದುದೇ ಆದಿಪಿಂಡ. ಈ ಪಿಂಡವು ಮನುಷ್ಯರುಗಳಲ್ಲಿ ಜ್ಞಾನ ಕಲಾತ್ಮರು ಧರಿಸಿದ ಪಿಂಡವು ಸಕಲ ನಿಃಕಲ ತತ್ವಂಗಳೊಡನೇ ಕೂಡಿರ್ದುದೆ ಮಧ್ಯಪಿಂಡವು. ಇದು ಬಸವಾದಿ ಪುರಾತನರು ಧರಿಸಿದ ಪಿಂಡವು. ಕೇವಲ ನಿಃಕಲತತ್ವವಾದದ್ದೇ ಚಿತ್ಪಿಂಡವು. ಇದು ನೂರಾವೊಂದು ವಿರಕ್ತರು ಧರಿಸಿದ ಪಿಂಡವು.

ಈ ತ್ರಿವಿಧ ಭೇದವಾದ ಜ್ಞಾನಪಿಂಡಂಗಳಲ್ಲಿ ಶಿವತತ್ವ ಜ್ಞಾನವೆಂಬ ಪಾರಮಾರ್ಥ ಬೆಳೆಯಾದ ಕೃಷಿಗೆ ಮುಖ್ಯವಾದ ಮಹಾಕ್ಷೇತ್ರವಾಗಿ ಪುಷ್ಪವಾಟಿ ಎನಿಸಿ, ಪುಣ್ಯ ಭೂಮಿ ಎನಿಸಿ, ಹೊಲಗದ್ದೆ ಕ್ಷೇತ್ರಂಗಳೆನಿಸಿ, ಸತ್ಫಲ ಪ್ರದರಾಗಿ, ತೋಂಟದಾರ್ಯರೆನಿಪ ಪರಶಿವಮೂರ್ತಿಯ ವಾಸಸ್ಥಾನವಾದ ಚಿದ್ ಬ್ರಹ್ಮಾಂಡವೆಂಬ ದಿವ್ಯತೋಂಟದೊಳ್ ಪರಿ

ಶೋಭಿಸುತ್ತಿರ್ಪ, ಬ್ರಹ್ಮ ಕ್ಷೇತ್ರವೆನಿಸಿಪ, ಸಹಸ್ರದಳ ಕಮಲ ಪುಷ್ಪವನದ ಮಧ್ಯಭಾಗದಲ್ಲಿ, ಪಶ್ಚಿಮ ಚಕ್ರವೆಂಬ ಚೌಕಿಯ ಮಠಂಗಳಲ್ಲಿ, ಆಜ್ಞಾ ಚಕ್ರವೆಂಬ ಸಿಂಹಾಸನದ ಮೇಲೆ ನಿಃಕಲತತ್ವವೆಂಬ ನಿರಂಜನ ಜಂಗಮ ವೆನಿಪ ತೋಂಟದ ಸಿದ್ಧೇಶ್ವರ ದೇವರೆನಿಸಿರ್ಪ ಪರಶಿವಮೂರ್ತಿಗಳ ನಿಜಾನಂದ ನಿಳಯವಾದ ಭಕ್ತಹೃನ್ಮಂದಿರವೆಂಬ ದಿವ್ಯಕ್ಷೇತ್ರವು ಶ್ರೀಗುರು ವೆಂಬ ಒಕ್ಕಲುಮಗನ ವಶವಾಗಿರ್ಪುದು.

ಆ ಶ್ರೀಗುರುದೇವನೆಂಬ ಪಾರಮಾರ್ಥ ಕೃಷಿಕನೇ ಬ್ರಹ್ಮಾಂಡಂಗಳ ನಂತಕ್ಕೆಲ್ಲ ತಾನೇ ಕರ್ತೃವಾದ ಕಾರಣ ಈ ಲೋಕದ ಕೃಷಿಕರಿಗೆ ಬಾದಶಹ ರೈತರೆಂಬ ಪೆಸರಾಯಿತು. ಪಾರಮಾರ್ಥ ಕೃಷಿಕನಾದ ಶ್ರೀಗುರುದೇವನೆಂಬ ಪರಶಿವಮೂರ್ತಿಹಲಾಯುಧಂಗೆ, ಬ್ರಹ್ಮೇಂದ್ರಾದಿ ದೇವತಾ ಸಾರ್ವಭೌಮರಾದ ರಾಜಾಧಿರಾಜರೆಲ್ಲರು, ಮತ್ತು ಕಿನ್ನರ ಗರುಡ ಗಂಧರ್ವ ಉರಗ ಮಯೂರ ವಿದ್ಯಾಧರಾಪ್ಸರ ಕುಲದ ರಾಜ ಶ್ರೇಷ್ಠರೆಲ್ಲರು ಸೇವಕರಾಗಿರ್ಪರು.

ಈ ಲೋಕದಲ್ಲಿ ಸದ್ಗುಣ ಸನ್ಮಾರ್ಗದಾಚರಣೆಯುಳ್ಳವರಾದ ಕೃಷಿ ಜ್ಞಾನ ಪರಿಣತರಾದ ಕೃಷಿ ಕೃತ್ಯ ಚಾತುರ್ಯ ಧುರೀಣರಾದ ಲೌಕಿಕ ಕೃಷಿಕರೆಂಬ ರೈತ ಜನರೇ ಭೂಲೋಕಕ್ಕೆ ಬಾದಶಹರಾದ ಕಾರಣ ಈ ಲೋಕದ ಸಮಸ್ತ ರಾಜರೆಲ್ಲರು ಬಾದಶಹ ರೈತರ ಸೇವಕರಲ್ಲದೆ ರಾಜ ರೆಂಬವರೆಲ್ಲರು ಸ್ವತಂತ್ರ ಅಧಿಕಾರಿಗಳಲ್ಲ. ರೈತ ಜನರಲ್ಲಿ ಗಂಭೀರತನದ ಸದ್ಬುದ್ಧಿಯುಳ್ಳ ಸರ್ವ ಜೀವದಯಾಪಾರಿಗಳಾದ ಲೋಕಹಿತಕಾರಿಗಳೆನಿಸ ಸರ್ವ ಕಲ್ಯಾಣಗುಣ ಸಮುದಾಯದ ಸದ್ಗುಣದ ಪಂಚರೇ ಈ ಲೋಕದಲ್ಲಿ ಸ್ವತಂತ್ರಾಧಿಕಾರಿಗಳು. ಅವರ ಅಪ್ಪಣೆಯಂತೆ ಸಮಸ್ತರಾಜರೆಲ್ಲರು ವರ್ತಿ ಸತಕ್ಕದ್ದು.

ಬ್ರಹ್ಮಾಂಡವೆಂಬ ಸುಕ್ಷೇತ್ರಕ್ಕೆ ಅಧಿಕಾರಿಯಾದ ಪರಶಿವಲಿಂಗವೆಂಬ ಹಲಾಯುಧನು ಶ್ರೀಗುರುದೇವನೆಂಬ ಒಕ್ಕಲಿಗನಾಗಿ ಬಂದು ಭಕ್ತ ಹೃತ್ಕಮಲವೆಂಬ ಭೂಮಿಯನ್ನು ಹಿಡಿದು, ಜ್ಞಾನಾಚರಣೆ ಎಂಬ ಕುಂಟೆಯ ಕಟ್ಟಿ ಹರಗಿ, ಹಸನ ಮಾಡಿ, ಶಿವೈಕ್ಯ ಭಕ್ತಿ ಎಂಬ ಮೂಲ ಪ್ರಣವ ಪಂಚಾಕ್ಷರವೆಂಬ ಜಗದಾದಿ ಬೀಜವನ್ನು ಬಿತ್ತಿ ಸಚ್ಚಿದಾನಂದ ಪರಿಪೂರ್ಣ ಪ್ರಸಾದವೆಂಬ ಖಂಡಿತ ಫಲ ಪದಾರ್ಥದ ಘನರಾಶಿಯಂ ಪಡೆದುಂಡು, ಪಾರಮಾರ್ಥವೆಂಬ ಮಹದೈಶ್ವರ್ಯ ಸಂಪನ್ನನಾಗಿ, ವಿಶ್ವ

ಕುಟುಂಬಿಯಾಗಿರ್ದಪನು. ಸಾಕ್ಷಿ ಪದ "ಗುರುವು ಎಂಬೋ ಒಕ್ಕಲ ಮಗ ತನ್ನ। ಶರೀರವೆಂಬೋ ಭೂಮಿಯ ಹಿಡಿದು। ಹರಗಿ ಬಿತ್ತಿ ಹಸನ ಮಾಡಿದನು। ಶ್ರೀಗುರುರಾಯ ಹಸನವಾದ ಪರಿ ಎನಗ್ಹೇಳಿದನು ॥ಪಲ್ಲ॥ ಜಾಲಿ ಬೊಬ್ಬಲಿ ಬೆಳದೈತಣ್ಣಾ। ಬಾಳ ಹುಲ್ಲು ತುಂಬೈತಣ್ಣಾ। ಮೇಲೆ ದೊಡ್ಡ ನೇಗಿಲ ಕಟ್ಟಿದನು ॥ ಶ್ರೀಗುರುರಾಯ ; ಬೀಳು ಭೂಮಿಯ ಹಸನವ ಮಾಡಿದನು ॥೧॥ ಎಂಟು ಎತ್ತು ಬಿಟ್ಟಾನಣ್ಣಾ। ಒಂಟಿ ಕೋಣನ ಕಟ್ಯಾನಣ್ಣಾ। ಕುಂಟೆ ಕಟ್ಟಿ ಮೆಟ್ಟಿ ಹರಗಿದನು ॥ ಶ್ರೀಗುರುರಾಯ ॥ ಒಂಟ ನಮ್ಮ ಭಾವರೇರನ್ನೇ ಶ್ರೀಗುರುರಾಯ ॥೨॥ ಮೂರು ಬೀಜವ ಬಿತ್ತಿದನಣ್ಣಾ। ಮೇರೆದಪ್ಪಿ ಬೆಳೆದ ಮೊಳಕೆ ॥ ತೋರಿದ್ಹಾಂಗ ಕೊಯ್ದು ಹಾಕಿದನು। ಶ್ರೀಗುರುರಾಯ ॥ ತೂರಿ ಒಮ್ಮೆ ರಾಶಿ ಮಾಡಿದನೊ। ಶ್ರೀ ಗುರುರಾಯ ॥೩॥ ಮತ್ತೆ ಬಿತ್ತಲು ಬೀಜಿಲ್ಲಣ್ಣಾ। ಭತ್ತ ತುಂಬಲು ಗುಮ್ಮಿಲ್ಲಣ್ಣಾ। ಎತ್ತ ನೋಡಲು ಬತ್ತ ತುಂಬೈತೆ ಶ್ರೀಗುರುರಾಯ ॥ ಚಿತ್ತಜ ವೈರಿ ಸಂಗಮೇಶನು ಶ್ರೀಗುರುರಾಯ ॥೪॥ ಹೊಲದಾಗ ಒಂದ್ಹಕ್ಕಿಲ್ಲಣ್ಣಾ। ತಿಳಿದು ನೋಡಿದರೇನಿಲ್ಲಣ್ಣಾ। ಹಕ್ಕಿ ಹಿಡಿದು ತಾನೇ ಸಲಹಿದನೋ ಶ್ರೀಗುರುರಾಯ। ಹಕ್ಕಿ ಹಿಡಿದು ಸಲಹಿದನಣ್ಣಾ। ಬದುಕೆಂದೆನಗೆ ಕೊಟ್ಟಾನಣ್ಣಾ। ಕರ್ತನಿಂದ ಒಡತಾನ್ಹಿಂಗೀತೊ ಶ್ರೀಗುರುರಾಯ ॥ ಕರ್ತೃ ನಮ್ಮ ಕೂಡಲ ಸಂಗನು। ಶ್ರೀಗುರುರಾಯ ॥೫॥ ಈ ಪದದ ಅನ್ವಯ ಭಾವದಂತೆ ಅಂತರಂಗದ ಪಾರಮಾರ್ಥ ಕೃಷಿಯಿಂದ ಜ್ಞಾನದ ಬೆಳೆಯನ್ನು ಮಾಡಿಕೊಂಡು, ಆ ಮಹಾಜ್ಞಾನವನ್ನೇ ಬಹಿರಂಗ ಕ್ರಿಯೆಗಳಲ್ಲಿ ಸತ್ಕಾಯಕವ ಮಾಡಿ, ಸಂಬಂಧಿಸಿಕೊಂಡು, ಲೋಕಾಚಾರದ ಲೌಕಿಕ ಕೃಷಿಯ ಕಾಯಕವನ್ನು ಮಾಡುವಲ್ಲಿ ಪಾಲ್ಕುರಿಕೆ ಸೋಮನಾರಾಧ್ಯರು, ಏಲೇಶ್ವರದ ಕೇತಯ್ಯಗಳು ಲಿಂಗಧಾರಣ ಬಸವಗಳ ಕಟ್ಟಿ ಲಿಂಗ ಮುದ್ರೆಯ ಭೂಮಿಯ ಮಾಡಿ, ಕೃಷಿಯ ಕಾಯಕವ ನಡಿಸಿದರು. "ಗೃಹ ಕ್ಷೇತ್ರಂ ಚ ಧಾನ್ಯಾನಿ। ಗೋಕುಲಾನಿ ಧನಾನಿಗೌಃ। ಏತಲ್ಲಿಂಗಾಂಕಿತೇನ ಕೃತ್ವಾ। ಶಿವಭಕ್ತಿ ಸಮಾಚರೇತ್ ॥" ಎಂಬ ಆಗಮ ಪ್ರಮಾಣದಿಂದ ನಡೆದು ನುಡಿದು, ನಡೆ-ನುಡಿಯೊಂದಾಗಿ. ಆಚರಿಸಿದುದೇ ಚಿತ್ಪಿಂಡವೆನಿಸುವದು.

---

# ಅಮುಗಿ ದೇವ.



ಲೇಖಕ:— ರಾ|| ಸಾ|| ಪಿ. ಜಿ. ಹಳಕಟ್ಟಿ. ವಿಜಾಪುರ.

ಪುರಾತನ ಕಾಲದಲ್ಲಿ ರಚಿಸಲ್ಪಟ್ಟ ವಚನಗಳಲ್ಲಿ ಒಂದು ಬಗೆ ಓಜಸ್ಸು ಮತ್ತು ಸ್ಫೂರ್ತಿಯು ಇರುವದಾಗಿ ಕಂಡುಬರುತ್ತದೆ. ಇದು ಆಯಾವಚನಕಾರರು ತಮ್ಮ ಶಿವಾನುಭವ ವಾಕ್ಯಗಳನ್ನು ನಡೆಯಲ್ಲಿ ತೋರಿಸಿದ್ದರ ಕುರುಹೆಂತಲೇ ಹೇಳಬೇಕು. ಅನೇಕ ವಚನಗಳಲ್ಲಿ ಸ್ಥಿರ ಬುದ್ಧಿ, ಸ್ಥೈರ್ಯ, ಧೈರ್ಯಾದಿಗಳು ಪ್ರತಿಬಿಂಬಿತವಾಗಿರುತ್ತವೆ. ಇದು ತಮ್ಮ ಜೀವಿತ ಕಾಲದಲ್ಲಿ ಬಂದೊದಗಿದ ಅನೇಕ ಕಷ್ಟಗಳನ್ನು ಅತಿಸಾಹಸದಿಂದ ನಿವಾರಣೆ ಮಾಡುತ್ತಿರುವ ಸಮಯದಲ್ಲಿ ಹೊರಹೊರಟ ಉದ್ಗಾರಗಳೋ ಏನೋ ಎಂಬಂತೆ ಭಾಸವಾಗುತ್ತದೆ.

ಆದುದರಿಂದ ವಚನಕಾರರ ಚರಿತ್ರೆಗಳನ್ನು ಸಂಶೋಧಿಸುವದು ಅತಿ ಮಹತ್ವದ್ದೆಂದು ತೋರಿ ಬರದೆ ಇರಲಾರದು. ಇವರ ಚರಿತ್ರೆಗಳನ್ನು ನಾವು ಇನ್ನೂ ನಮ್ಮಲ್ಲಿ ಉಪಲಬ್ಧವಿರುವ ಪುರಾಣಗಳು, ಸಾಂಗತ್ಯಗಳು, ರಗಳೆಗಳು, ಇವುಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಇವುಗಳನ್ನೆಲ್ಲ ಒತ್ತಟ್ಟಿಗೆ ಸಂಗ್ರಹಿಸಿ ಆ ವಚನಕಾರರ ಚರಿತ್ರೆಗಳ ಮೇಲೆ ಏನಾದರೂ ಪ್ರಕಾಶವು ಬೀಳುತ್ತದೋ ಹೇಗೆಂಬುದನ್ನು ನಾವು ನಿರೀಕ್ಷಿಸಬೇಕು. ಅಲ್ಲದೆ ವಚನಕಾರರು ವಾಸವಾಗಿದ್ದ ಗ್ರಾಮಗಳಾವವೆಂಬದನ್ನು ಸಹ ಕಂಡು ಹಿಡಿದು ಅಲ್ಲಿಗೆ ಹೋಗಿ ಅಲ್ಲಿ ಉಪಲಬ್ಧವಿರುವ ಅವರ ಐತಿಹ್ಯಗಳನ್ನು ಮತ್ತು ಜನರ ಹೇಳಿಕೆಗಳನ್ನು ಸಹ ಸಂಶೋಧಿಸಬೇಕು. ಅಲ್ಲದೆ ಅಲ್ಲಿ ಯಾವವಾದರೂ ಶಿಲಾಶಾಸನಗಳಿದ್ದರೆ ಅವುಗಳನ್ನು ನೋಡಬೇಕು. ಹೀಗೆ ನಾವು ಪರೀಕ್ಷಿಸಿ ವಚನಕಾರರ ಚರಿತ್ರೆಗಳ ಮೇಲೆ ಯಾವ ಬಗೆಯ ಪ್ರಕಾಶವು ಬೀಳುತ್ತದೆಂಬದನ್ನು ನಿರೀಕ್ಷಿಸಬೇಕು. ಅಲ್ಲದೆ ಅವರು ಬರೆದ ಗ್ರಂಥಗಳನ್ನು ಸಹ ಚನ್ನಾಗಿ ಪರಿಶೀಲಿಸಬೇಕು. ಅವುಗಳಲ್ಲಿ ಯಾವ ಬಗೆಯ ವಿಚಾರಗಳು ಮತ್ತು ಉದ್ಗಾರಗಳು ಹೊರಡುತ್ತವೆಂಬದನ್ನು ಕಂಡುಕೊಳ್ಳಬೇಕು. ಹೀಗೆ ವಚನಕಾರರ ಚರಿತ್ರೆಗಳನ್ನು ಸಂಶೋಧಿಸಿದಲ್ಲಿ ವೀರಶೈವರ ಧಾರ್ಮಿಕ ಇತಿಹಾಸದ ಮೇಲೂ ಕರ್ನಾ

ಟಕದ ರಾಜಕೀಯ ಮತ್ತು ಸಾಮಾಜಿಕ ಇತಿಹಾಸದ ಮೇಲೂ ವಿಶೇಷ ಪ್ರಕಾಶವು ಬೀಳಬಹುದೆಂದು ತೋರುತ್ತದೆ.

ಈ ದೃಷ್ಟಿಯಿಂದ ನಾನು ವೀರಶೈವರ ಹಿಂದಿನ ಧಾರ್ಮಿಕ ಮಹಾ ಪುರುಷರ ಚರಿತ್ರೆಗಳಿದ್ದ ಗ್ರಂಥಗಳನ್ನು ಸಂಶೋಧಿಸುವಲ್ಲಿ ಅಮುಗಿದೇವ ನೆಂಬ ವಚನಕಾರನ ಬಗ್ಗೆ ವಿವರಣೆಗಳು ಕೆಲವು ಗ್ರಂಥಗಳಲ್ಲಿರುವದು ಕಂಡು ಬಂದಿತು. ಅವುಗಳನ್ನು ನಾನು ಇಲ್ಲಿ ವಿವರಿಸುತ್ತೇನೆ. ಅಮುಗಿ ದೇವನ ಉಲ್ಲೇಖವಿದ್ದ ಶಿಲಾಶಾಸನವು ದೊರೆತದ್ದರಿಂದ ಅವನ ಚರಿತ್ರೆಗೆ ಮಹತ್ವ ಕೊಡಬೇಕಾಗಿದೆ. ಈ ಶಿಲಾಶಾಸನದ ವಿಷಯವಾಗಿ ನಾನು ಶಿವಾನುಭವ ಪತ್ರಿಕೆಯ ೯ ನೇ ಸಂಪುಟ ೬ ನೇ ಸಂಚಿಕೆಯಲ್ಲಿ ಒಂದು ವಿಸ್ತೃತ ಲೇಖವನ್ನು ಬರೆದದ್ದು ವಾಚಕರ ಸ್ಮರಣೆಯಲ್ಲಿರಬಹುದು. ಈ ಶಾಸನವು ಕ್ರಿ. ಶ. ೧೨೦೦ ನೇ ಇಸ್ವಿಯದು ಅದೆ. ಅವನ ಬಗ್ಗೆ ಈ ಶಿಲಾಶಾಸನದಲ್ಲಿ ಬಂದ ಉಲ್ಲೇಖಗಳ ಮೇಲಿಂದ ಅವನು ವೀರಶೈವ ನಾಗಿದ್ದನೆಂತಲೂ ಸೊಲ್ಲಾಪುರದ ಸಮೀಪದಲ್ಲಿದ್ದ ಪುಳುಜ ಎಂಬ ಗ್ರಾಮ ದಲ್ಲಿದ್ದನೆಂತಲೂ ವಿಟೆ ಎಂಬ ಗ್ರಾಮವನ್ನು ಅವನಿಗೆ ದೇವಗಿರಿಯ ಪ್ರಸಿದ್ಧ ಯಾದವ ರಾಜನಾದ ಸಿಂಘಣನು ಉಂಬಳಿ ಹಾಕಿ ಕೊಟ್ಟಿದ್ದ ನೆಂತಲೂ ಇವನು ಕುರುಬ ಸಮಾಜದವರು ಅತ್ಯಂತವಾಗಿ ಮನ್ನಣೆ ಕೊಡುತ್ತಿದ್ದ ಅಮಾಕಸಿದ್ಧನು ಇರಬಹುದೆಂತೂ ಇದರಲ್ಲಿ ವಿವರಿಸಿದ್ದೇನೆ.

ಆದರೆ ನಮಗೆ ಈಗ ದೊರೆದ ಪುರಾತನ ಗ್ರಂಥಗಳಲ್ಲಿ ಅಮುಗಿ ದೇವನ ಚರಿತ್ರೆಯು ಉಪಲಬ್ಧವಿರುತ್ತದೆ. ಅವುಗಳನ್ನು ನಾವು ನೋಡಿ ದಲ್ಲಿ ಈ ವಚನಕಾರನು ಅಮಾಕಸಿದ್ಧನೆಂದು ತಿಳಿಯುವ ಸಂದೇಹಾಸ್ಪ ದವೆಂದು ತೋರಹತ್ತುತ್ತದೆ. ಇದನ್ನು ನಾನು ಬಹಿರಂಗಪಡಿಸದೆ ಇದ್ದ ದ್ದಾದರೆ ಸಂಶೋಧಕರಿಗೆ ತಪ್ಪು ದಾರಿಯನ್ನು ತೋರಿಸಿದಂತಾಗುವ ದೆಂದು ತಿಳಿದು ಅವುಗಳನ್ನೆಲ್ಲ ನಾನು ಇಲ್ಲಿ ವಿವರಿಸುತ್ತೇವೆ. ಅವು ವಾಚ ಕರಿಗೆ ಬೋಧಪ್ರದವಾಗಲಾರದೆ ಇರವು.

ಅಮುಗಿದೇವನ ಚರಿತ್ರೆಗಳು (೧) ಭೈರವೇಶ್ವರ ಕಾವ್ಯದ ಕಥಾ ಮಣಿ ಸೂತ್ರ ರತ್ನಾಕರ[೧] ಎಂಬ ಗ್ರಂಥದಲ್ಲಿ ಬಂದಿರುತ್ತದೆ. (೨) ಅಮುಗಿ

---

೧ ಈ ಗ್ರಂಥವನ್ನು ಬಾಗಲಕೋಟೆಯ ವೇ॥ ಮುರಗಯ್ಯ ಜಂಗಿನ ಇವರು ಕಳಿಸಿರುವರು.

ದೇವನ ರಗಳೆಯೆಂತಲೂ ಒಂದು ರಗಳೆಯು[೨] ಉಪಲಬ್ಧವಿದೆ. (೩) ಈತನ ಒಂದು ಸಾಂಗತ್ಯವೂ ಕೂಡ ಉಪಲಬ್ಧವಿದೆ. ಇದರಲ್ಲಿ ೭ ಸಂಧಿಗಳು ಇದ್ದು ಒಟ್ಟು ೮೪೩ ಸಾಂಗತ್ಯ ಪದ್ಯಗಳು ಇವೆ. ಆದರೆ ಅಮುಗಿದೇವನು ಇದರಲ್ಲಿ ಅವುಗಿ ದೇವಯ್ಯ ಎಂದು ಕರೆಯಲ್ಪಟ್ಟಿದ್ದಾನೆ. ಈ ಚರಿತ್ರೆಗಳ ಅಂಶಗಳನ್ನು ನಾನು ಇಲ್ಲಿ ಅನುಕ್ರಮವಾಗಿ ಕೊಡುತ್ತೇನೆ.

## ಭೈರವೇಶ್ವರನ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ.

ಇದರಲ್ಲಿ ಬಂದ ಕಥೆಯನ್ನೇ ಗ್ರಂಥಕಾರನು ವಿವರಿಸಿದಂತೆ ಇದ್ದಕ್ಕಿದ್ದ ಹಾಗೆ ನಾನು ಕೆಳಗೆ ಕೊಡುತ್ತೇನೆ.

### ಅಮುಗಿದೇವನ ಚರಿತ್ರೆ.

"ಸೊನ್ನಲಪುರದಲ್ಲಿ ಅಮುಗಿದೇವನ ಸತಿ ವರದಾನಿಯಮ್ಮನು ಸಹವಾಗಿ ಸತಿಪತಿಗಳು ನೇಗೆಯ ಕಾಯಕವಂ ಮಾಡಿ ಜಂಗಮ ದಾಸೋಹವಂ ಮಾಡುತ್ತಿರಲು ಬಳಿಕಲೊಂದು ದಿನ ಸಿದ್ಧರಾಮಯ್ಯನು ಕಪಿಲಸಿದ್ಧ ಮಲ್ಲಿಕಾರ್ಜುನನ ಪರ್ವವ ಮಾಡುವದಕ್ಕೆ ಎಂದು ಹತ್ತು ಕೊಳಗ ಬತ್ತವಂ ಕುಟ್ಟುವುದಕ್ಕೆ ಬಿಟ್ಟಿಯ ಕೊಟ್ಟಣವ ಅಮುಗಿದೇವಯ್ಯಗಳ ಮನೆಗೆ ಕಳುಹಲು ಅಮುಗಿದೇವಯ್ಯನು ಸ್ಥಾವರ ಲಿಂಗವ ಪೂಜಿಸುವವಗೆ ನಾವೇಕೆ ಕೊಟ್ಟಣವ ಕುಟ್ಟಿಹೆವೆನಲು ಬತ್ತವನು ಬಿಟ್ಟಿಯ ಕೊಟ್ಟಣಕ್ಕೆ ತಂದವರು ಬಲುಮೆಯಿಂದ ಸುರಿವಿ ಪೋಗಲಾಗ ತಿಪ್ಪಿಗೆ ಚಲ್ಲಲದಂ ರಾಯ ಕೇಳಿ ನನಗೆ ರೋಮಗಳೆಲ್ಲ ಲಿಂಗಾಂಗಳಾಗಿರಲು ನನಗಿಂತೆಂದು ನುಡಿವರೇ? ನಮ್ಮೂರೊಳಗಿರಬೇಡವೆನಲಾಗ ಅಮುಗಿದೇವಯ್ಯಂ ತಮ್ಮ ಮನೆಯಲ್ಲಿರ್ದ ನೇಗೆಯ ಮುಟ್ಟು ಭಾಂಡಭಾಜನ ದವಸ ಗೃಹಸಾಧನಗಳನೆಲ್ಲ ಮೂರು ಹೊರೆಯ ಕಟ್ಟಿ ಸತಿಪತಿಗಳು ಎರಡು ಹೊರೆಯಂ ಹೊತ್ತುಕೊಂಡು ಹೋಗುವಾಗ ಒಂದು ಹೊರೆ ಉಳಿಯಲಾಗ ಸತಿ ಇದಂ ಆರು ಹೊತ್ತು ತರುವರೆಂದು ಪತಿಯ ಕೇಳಲು ಶಿವನು ತಾನೇ ಹೊತ್ತುಕೊಂಡು ಬರುವನು. ಬಾರದಿದ್ದಡೆ ಆತನಿಗೆ ಹೊರಿಸಿದ ಹೊರೆ ಆತನಲ್ಲಿ ಇರಲಿ ಎನಲಾಗ ಕಪಿಲಸಿದ್ಧ ಮಲ್ಲಿಕಾರ್ಜುನ

---

[೨] ಶ್ರೀ ಜಗದ್ಗುರು ಹುಬ್ಬಳ್ಳಿ ಮೂರುಸಾವಿರ ಸ್ವಾಮಿಗಳವರು ೧೦೧ ರಗಳೆ ಎಂಬ ಹೆಸರಿನ ತಾಡವಾಲೆಯ ಗ್ರಂಥವನ್ನು ಕಳಿಸಿದ್ದು ಅದರಲ್ಲಿ ಈ ರಗಳೆಯು ಬಂದಿದೆ. ಇದರಲ್ಲಿ ಹರಿಹರನ ಮತ್ತು ಇನ್ನು ಅನೇಕ ಕವಿಗಳ ರಗಳೆಗಳು ಇವೆ.

ತಾನೇ ಹೊತ್ತು ತಂದು ಮುಂದು ಗಾವುದದಲ್ಲಿದ್ದ ಶಿವಪುರದಲ್ಲಿ ಇರಿಸಿದಲ್ಲಿ ಅಮುಗಿದೇವಯ್ಯಗಳಿರಲು ಇತ್ತಲು ಸಿದ್ಧರಾಮೇಶ್ವರನು ಕಪಿಲಸಿದ್ಧಮಲ್ಲಿಕಾರ್ಜುನಂಗೆ ಎಣ್ಣೆ ಮಜ್ಜನವ ಮಾಡುವಾಗ ತಲೆಯಂ ಮುಟ್ಟಬೇಡ, ನೋವುತಿದೆ ರಾಮಯ್ಯ ಎನಲು ಸತ್ಯಲೋಕದಿಂದತ್ತಲಿರ್ದ ಮುಕುಟಕ್ಕೆ ತಾಗಿದುದೇನೋ? ಯಾತಕ್ಕೆ ತಾಗಿದುದೇನೋ? ಯಾತಕ್ಕೆ ನೊಂದಿತೆನಲು ಅಮುಗಿದೇವರ ಹೊರೆ ಬಿಟ್ಟದಂತಾಯಿತ್ತು. ತಾನು ಬಿಟ್ಟು ಹೋಗುವಾಗ ಒಂದು ಹೊರೆಯು ನನಗೆ ಕೊಟ್ಟು ಹೋದನು. ಭಕ್ತರ ಸಂಸಾರವೆನಗೆ ಭಾರವಾಗಿ ನೋವುತಿದೆನಲು ಆಗ ರಾಮಯ್ಯನು ನಿಮ್ಮ ಶಿರದಲ್ಲಿರ್ದ ಚಂದ್ರ ಗಂಗೆ ಶೇಷ ಮೊದಲಾದವರು ನೊಂದ ಬೆವರಿಂದ ನೊಸಲ ಕಣ್ಣು ನೊಂದಿತೆ ಅಯ್ಯ? ಅಂದು ನಂಬಣ್ಣನ ಹಡಪವಂ ಹೊತ್ತಿರಿಸಿ ಬಾಣನ ಬಾಗಿಲಂ ಕಾದಿರಿ, ಪಿಟ್ಟವ್ವೆಗಾಳಾಗಿ ಕಟ್ಟೆಗೆ ಮಣ್ಣು ಹೊತ್ತಿರಿ, ಚಂದಯ್ಯಗೆ ನುಲಿಯು ಹೊಸೆದು ನೀರು ಕುಚ್ಚರಿಯಗೆ ಹೊತ್ತಂದು ನೋವಾದುದಿಲ್ಲ, ಎಂದು ಮರುಗಿ ಅಮುಗಿದೇವಯ್ಯನ ಮಹಿಮೆಗೆ ರಾಮಯ್ಯ ಬೆರಗಾಗಿ ಕರೆಯ ಬರಲು ಬಂದಲ್ಲಿ ಬಾರೆವು ಹಿಂದಕ್ಕೆ ಬರುವವರಲ್ಲ ಎನಲು, ರಾಮಯ್ಯಂ ಕೈಲಾಸಕ್ಕೆ ಪೋಗಿ ಶಿವನಿಗೆ ಪೇಳಲು ಶಿವನು ನಿನ್ನೂರಲ್ಲಿ ಮುನಿದರೆ ನನ್ನೂರಿಗೆ ಬರಲಿ ಎಂದು ನಂದೀಶ್ವರ ವೀರಭದ್ರೇಶ್ವರ ಮೊದಲಾದ ಗಣಂಗಳನು ಕಳುಹಿ ಅಮುಗಿದೇವಯ್ಯಗಳ ಕರಿಸುವೆವು ಎನಲಾಗಲತ್ತ ಅಮುಗಿದೇವಯ್ಯಗಳು ಶಿವಪುರದಲ್ಲಿ ದಾಸೋಹವ ಮಾಡುತ್ತಿರಲು ಚರಮೂರ್ತಿಗಳು ಬಂದು ಕೈಲಾಸಕ್ಕೆ ಬಾರೆನಲು ನಾವು ಒಲ್ಲೆವೆನಲು, ಶಿವನ ನೆನೆವುದರಿಂದ ನೋಡುವುದೊಳ್ಳಿತಲ್ಲವೇ ಬಾರಯ್ಯ ಎನಲು, ಭಕ್ತಿ ಇಲ್ಲದವನು ಶಿವನ ನೆನೆದಡೆ ಭವ ಹಿಂಗುವದೇ? ಜ್ಯೋತಿಯ ನೆನೆದಡೆ ಕತ್ತಲೆ ಹರಿಯಿತೇ? ಮೃಷ್ಟಾನ್ನವ ನೆನೆದಡೆ ಹೊಟ್ಟೆ ತುಂಬಿತೇ? ರಂಭೆಯ ನೆನೆದಡೆ ಕಾಮವಡಗಿತೇ? ಸಮರಸ ಭಕ್ತಿ ಇಲ್ಲದವ ಲಿಂಗವ ನೆನೆದಡಾಗದು, ನಿರ್ಧರಿಸಿದಡಾಗದು ಎಂದು ಮರ್ತ್ಯವೇ ಕೈಲಾಸವೆಂದು ಸದ್ಗುರು ಸೋಮನಾಥನೆಂಬ ತಮ್ಮಿಷ್ಟಲಿಂಗದಲ್ಲಿ ಇಹಪರ ಲೋಕಂಗಳುಂಟೆಂದು ತಮ್ಮ ಲಿಂಗದಲ್ಲಿ ನಿರವಯುಲಾದರು."

ಮೇಲೆ ವಿವರಿಸಿದ ಸಂಗತಿಗಳ ಮೇಲಿಂದ ಅಮುಗಿ ದೇವನು ಸಿದ್ಧರಾಮೇಶ್ವರನ ಸಮಕಾಲೀನನಾಗಿ ಸೊನ್ನಲಾಪುರದಲ್ಲಿ ಅಂದರೆ

ಈಗಿನ ಸೊಲ್ಲಾಪುರದಲ್ಲಿ ಇರುತ್ತಿದ್ದನು. ಅವನ ಹೆಂಡತಿಯು ಹೆಸರು ವರದಾನಿಯಮ್ಮನು. ಅವರು ಇಷ್ಟಲಿಂಗದಲ್ಲಿ ಅತ್ಯಂತ ಭಕ್ತಿಯು ಳ್ಳವರಾಗಿ ನೇಗೆಯ ಕಾಯಕವನ್ನು ಮಾಡುತ್ತ ಜೀವಿಸುತ್ತಿದ್ದರು. ಅವರು ಸ್ಥಾವರಲಿಂಗ ಪೂಜಕನಾದ ಸಿದ್ಧರಾಮೇಶ್ವರನ ಸೇವೆಯನ್ನು ಒಂದು ಸಮಯದಲ್ಲಿ ಮಾಡಲೊಪ್ಪದ್ದರಿಂದ ಮನಸ್ತಾಪ ಉಂಟಾಗಲು ಅಮುಗಿದೇವನು ಸೊನ್ನಲಾಪುರವನ್ನೇ ಬಿಟ್ಟುಕೊಟ್ಟು ಶಿವಪುರ ಎಂಬಲ್ಲಿ ಇರತೊಡಗಿದನು. ಮುಂದೆ ಸಿದ್ಧರಾಮನು ಪಶ್ಚಾತ್ತಾಪಪಟ್ಟು ಅಮುಗಿ ದೇವನಿದ್ದಲ್ಲಿಗೆ ಹೋಗಿ ಸೊನ್ನಲಾಪುರಕ್ಕೆ ತಿರುಗಿ ಬರಲು ಹೇಳಲು ಅವನು ಆದಕ್ಕೆ ಒಪ್ಪಲಿಲ್ಲ. ಶಿವನು ಸಹ ಕರೆಯ ಕಳುಹಿಸಿದರೂ ಕೈಲಾಸಕ್ಕೆ ಹೋಗಲಿಲ್ಲ. ಕಡೆಗೆ ಉಭಯ ದಂಪತಿಗಳು ಮರ್ತ್ಯವೇ ಕೈಲಾಸವೆಂದು ತಿಳಿದು ತಮ್ಮ ಕಾಯಕವನ್ನೇ ನಡೆಯಿಸುತ್ತ ಸದ್ಗುರು ಸೋಮನಾಥ ನೆಂಬ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.

ಮೇಲ್ಕಂಡ ಅವತರಣಿಕೆಯಲ್ಲಿ ಚರಿತ್ರೆಕಾರನು ಒಂದು ವಚನವನ್ನು ಕೊಟ್ಟಿದ್ದನ್ನು ವಾಚಕರು ಕಾಣಬಹುದು. ಅದು "ಭಕ್ತಿ ಇಲ್ಲದವನು" ಎಂಬ ಶಬ್ದಗಳಿಂದ "ನಿರ್ಧರಿಸಿದಡಾಗದು." ಎಂಬ ಶಬ್ದಗಳ ವರೆಗೆ ಇದೆ. ನಮಗೆ ದೊರೆದ ಅಮುಗಿದೇವನ ಕೆಲವು ವಚನಗಳಲ್ಲಿ ಈ ವಚನವು ಉಪಲಬ್ಧವಿದೆ. ಇದನ್ನು ನಾವು ಶಿವಾನುಭವದ ೯ ನೇ ಸಂಪು ಟದಲ್ಲಿ ಪುಟ ೪೧೮ ಇದರಲ್ಲಿ ಕೊಟ್ಟಿದ್ದೇವೆ. ಅದು ಕೆಳಗೆ ಬರೆದ ಮೇರೆಗೆ ಇದೆ. "ಶಿವನ ನೆನೆದರೆ ಭವಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ ಜ್ಯೋತಿಯ ನೆನೆದರೆ ಕತ್ತಲೆ ಹರಿವುದೇ? ವೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ? ರಂಭೆಯ ನೆನೆದರೆ ಕಾಮದ ಕಳವಳ ಹಿಂಗುವುದೇ? ನೆನೆದಡಾಗದು. ನಿಜದಲ್ಲಿ ನಿಂದು ನಿರ್ಧರಿಸದನ್ನಕ್ಕ ಸದ್ಗುರುಸಿದ್ಧ ಸೋಮನಾಥನೆಂಬ ಲಿಂಗವ ನೆನೆಯಬಾರದು.

## ಅಮುಗಿ ದೇವನ ರಗಳೆ.

ಹರಿಹರನ ರಗಳೆಗಳೆಂದು ನಮಗೆ ಶ್ರೀ ಜಗದ್ಗುರು ಮೂರುಸಾವಿರ ಸ್ವಾಮಿಗಳವರು ಕಳಿಸಿಕೊಟ್ಟ ತಾಡವಾಲೆ ಗ್ರಂಥದಲ್ಲಿ ಅಮುಗಿ ದೇವ ಯ್ಯಗಳ ರಗಳೆ ಎಂಬ ರಗಳೆಯು ದೊರೆಯುತ್ತದೆ. ಆದರೆ ಇದನ್ನು ನೋಡಿ

ದಲ್ಲಿ ಇದು ಹರಿಹರನಿಂದ ರಚಿತವಾದುದಲ್ಲವೆಂದು ತತ್ಕ್ಷಣವೇ ಗೊತ್ತಾಗುವಂತಿದೆ. ಈ ರಗಳೆಯ ಆರಂಭದಲ್ಲಿಯೂ ಕೊನೆಯಲ್ಲಿಯೂ ಹರಿಹರನ ರಗಳೆಗಳಲ್ಲಿ ಕಂಡುಬರುವ ಹಂಪೆಯ ವಿರೂಪಾಕ್ಷನ ಸ್ತುತಿ ಪರ ಪದ್ಯಗಳು ಯಾವೂ ಇರುವದಿಲ್ಲ. ಆದರೆ ಅಂತ್ಯದಲ್ಲಿ "ಪ್ರಸನ್ನ ಶಂಕರಲಿಂಗಾ" ಎಂಬ ಮುದ್ರಿಕೆಯುಕ್ತ ರಗಳೆಯ ಓಳಿಯು ಬಂದಿರುತ್ತದೆ. ಇದರ ಮೇಲಿಂದ ಈ ರಗಳೆಯು ಹರಿಹರನದಿರದೆ ಬೇರೊಬ್ಬ ಕವಿಯದಿರುತ್ತದೆಂಬದು ಸ್ಪಷ್ಟವಾಗುತ್ತದೆ. ರಗಳೆಯಲ್ಲಿಯ ಕವಿತ್ವ ಪ್ರತಿಭೆಯೂ ವರ್ಣನಾಯುಕ್ತ ಭಾಗಗಳೂ ಹರಿಹರನ ರಗಳೆಗಳ ಯೋಗ್ಯತೆಗೆ ಸ್ವಲ್ಪಾದರೂ ಸರಿಗಟ್ಟಲಾರವು. ಆದರೂ ಕವಿಯು ಅಮುಗಿ ದೇವನ ಚರಿತ್ರೆಯನ್ನು ಬಹು ಸುಲಭವಾಗಿಯೂ ಸಂಕ್ಷಿಪ್ತವಾಗಿಯೂ ವಿವರಿಸಲು ಯತ್ನಿಸಿದ್ದಾನೆ. ಅಲ್ಲಲ್ಲಿ ಹರಿಹರನ ಅನುಕರಣ ಮಾಡಲೂ ಯತ್ನಿಸಿದ್ದಾನೆ. ಇದರಲ್ಲಿ ಬಂದ ಕಥಾ ಭಾಗವು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಬಂದ ಕಥೆಗಿಂತಲೂ ಕೆಲವು ಸಂದರ್ಭಗಳಲ್ಲಿ ಭಿನ್ನವಾಗಿರುತ್ತದೆ. ಇದರಲ್ಲಿ ವರ್ಣಿಸಲ್ಪಟ್ಟ ವಿವರಗಳೇನೆಂದರೆಃ-

ಅಮುಗಿದೇವನು ಸೊನ್ನಲಾಪುರದಲ್ಲಿ ಇರುತ್ತಿದ್ದನು. ಅವನ ಸತಿಯ ಹೆಸರು ವರದಾನಿಯು. ಅವನು ವೀರಶೈವ ವಿಚಕ್ಷಣನೂ ವಿಮಲ ಲಕ್ಷಣನೂ ಆಗಿ ಇಷ್ಟಲಿಂಗಾರ್ಚಕರನಲ್ಲದೆ ಹೆರರನ್ನು ಆರಾಧಿಸನು. ಕೇವಲ ಇಷ್ಟಲಿಂಗದಲ್ಲಿ ಭಕ್ತಿಯುಳ್ಳವನೂ ವೀರಮಾಹೇಶ್ವರನೂ ವೀರಶೈವ ಪ್ರಾಣಿಯೂ ಆಗಿ ಅಲ್ಲಿ ವಾಸಿಸುತ್ತಿದ್ದನು. ಅವನು ದುಗ್ಗಳೆಯ ರಮಣ ಮಾಡುವ ಕಾಯಕ ಅಂದರೆ ನೇಗೆಯ ಕಾಯಕವನ್ನು ಅಪ್ಪಿಕೊಂಡವನಾಗಿದ್ದನು. ಅವನ ಕರಪೀಠದರಸನು ಅಂದರೆ ಇಷ್ಟ ದೇವತೆಯು ಗುರುಚನ್ನಸೋಮಯ್ಯನೆಂದು ಇದರಲ್ಲಿ ಹೇಳಲ್ಪಟ್ಟಿದೆ. ಹೀಗಿರುತ್ತಿರಲು ಒಂದಾನೊಂದು ದಿನ ಸೊನ್ನಲಾಪುರದ ಸಿದ್ಧರಾಮ ವಿಭುವು ಕಪಿಲಸಿದ್ಧಮಲ್ಲೇಶ್ವರನಿಗೆ ಕ್ಷೇತ್ರ ಪೂಜೆಯ ಮಾಳ್ಪೆನೆಂದು ಮನದಲ್ಲಿ ನೆನೆದು ಅದಕ್ಕೋಸ್ಕರ ಅವನ ಸೇವಕರು ಅಮುಗಿ ದೇವಗಳ ನಿಳಯದ ಮುಂದೆ ಹತ್ತು ಕೊಳಗ ಭತ್ತವನು ಕುಟ್ಟಲು ಇಟ್ಟು ಹೋದರು. ಆದರೆ ಅಮುಗಿ ದೇವನು ಸ್ಥಾವರಲಿಂಗ ಪೂಜಕನ ಸೇವೆ ಮಾಡಲಾರೆನೆಂದು ಬತ್ತವನ್ನು ಕುಟ್ಟದೆ ಬಿಸುಡುವನು. ಆಗ ಸಿದ್ಧರಾಮನು ನಾನು ಸರ್ವಾಂಗಲಿಂಗಿ, ಎನಗೊಂದು ಲಿಂಗವೇ, ಸರ್ವಮಯನಪ್ಪ ಎನಗೆ

ಬೇರೆ ಲಿಂಗಾಂಗವೇ, ಎಂದು ಕೇಳುವನು. ಅದಕ್ಕೆ ಅಮುಗಿ ದೇವನು ಸೊನ್ನಲಾಪುರವನ್ನು ಬಿಟ್ಟು ಹೋಗಬೇಕೆಂದು ನಿಶ್ಚಯಿಸಿ ತನ್ನ ನೇಗೆಯ ಮುಟ್ಟುಗಳನ್ನೆಲ್ಲ ಮೂರು ಗಂಟುಗಳಾಗಿ ಕಟ್ಟಿ ಅವುಗಳಲ್ಲಿ ಒಂದನ್ನು ತಾನು, ಮತ್ತೊಂದನ್ನು ತನ್ನ ಹೆಂಡತಿಯು ಹೀಗೆ ಹೊತ್ತುಕೊಂಡು ಉಭಯತರು ಕಲ್ಯಾಣಕ್ಕೆ ಬರುವರು. ಮೂರನೆಯ ಗಂಟನ್ನು ಕಪಿಲಸಿದ್ಧಮಲ್ಲಿಕಾರ್ಜುನನೇ ಹೊತ್ತುಕೊಂಡು ಅಮುಗಿ ದೇವಯ್ಯನಿದ್ದಲ್ಲಿಗೆ ತಂದು ಮುಟ್ಟಿಸುವನು.

ಮರುದಿನ ಸಿದ್ಧರಾಮನು ಕಪಿಲಸಿದ್ಧನಿಗೆ ತೈಲಾಭ್ಯಂಗನ ಸ್ನಾನ ಮಾಡಿಸುವಲ್ಲಿ ಕಪಿಲಸಿದ್ಧನು ತನ್ನ ಗೋಣು ನೋಯುತ್ತಿದೆ, ಕೈ ಹಚ್ಚ ಬೇಡೆಂದು ಸಿದ್ಧರಾಮನಿಗೆ ಹೇಳಲು ಸಿದ್ಧರಾಮನು ಇದರ ಕಾರಣ ವೇನೆಂದು ಕೇಳಲು ಕಪಿಲಸಿದ್ಧಮಲ್ಲಿಕಾರ್ಜುನನು ಅಮುಗಿ ದೇವನ ಹೊರೆಯನ್ನು ಹೊತ್ತುಕೊಂಡು ಹೋಗುವಲ್ಲಿ ಅದರ ಭಾರದಿಂದ ಗೋಣು ನೋಯುತ್ತದೆ, ಈ ನೋವಿಗೆ ನೀನೇ ಕಾರಣನೆಂದು ಸಿದ್ಧರಾಮನಿಗೆ ಹೇಳಿದನು. ಸಿದ್ಧರಾಮನು ಪಶ್ಚಾತ್ತಾಪಬಟ್ಟು ಅಮುಗಿ ದೇವನನ್ನು ಕರೆತರಲು ಕಲ್ಯಾಣಕ್ಕೆ ಹೋಗುವನು. ಆದರೆ ಅಮುಗಿದೇವನು ನೀನು ಲಿಂಗಿಯಲ್ಲ, ನಿನ್ನ ಪಟ್ಟಣಕ್ಕೆ ಬಾರೆನೆಂದು ಹೇಳಲು ಸಿದ್ಧರಾಮನು ತಿರುಗಿ ಸೊನ್ನಲಾಪುರಕ್ಕೆ ಬಂದು ಕಪಿಲಸಿದ್ಧಮಲ್ಲಿಕಾರ್ಜುನನಿಗೆ ಈ ವಿಷಯವನ್ನು ನಿವೇದಿಸಿಕೊಳ್ಳುವನು. ಆಗ ಕಪಿಲಸಿದ್ಧಮಲ್ಲಿಕಾರ್ಜುನನು ಜಂಗಮರೂಪ ತಾಳಿ ಸಿದ್ಧರಾಮನಿಗೆ ಲಿಂಗಧಾರಣೆಯನ್ನು ಮಾಡಲು ಆ ಮೇಲೆ ಅಮುಗಿ ದೇವನನ್ನು ಸಿದ್ಧರಾಮನು ಕಾಣಲಿಕ್ಕೆ ಹೋಗುವನು ಆಗ ಅಮುಗಿ ದೇವನು ಸಿದ್ಧರಾಮನನ್ನು ಬಹು ಪ್ರೀತಿಯಿಂದ ಸತ್ಕರಿಸುವನು. ಪರಮಾತ್ಮನು ಅಮುಗಿದೇವನ ವರ್ತನೆಗೆ ಪ್ರೀತನಾಗಿ ಪುಷ್ಪಕವಿಮಾನದಿಂದ ಕೈಲಾಸಕ್ಕೆ ಅವನನ್ನು ಬರಮಾಡಿಕೊಳ್ಳುವನು. ಹೀಗೆ ಕಥಾಸಂದರ್ಭವು ಇದೆ.

ಇದರಲ್ಲಿ ಅಮುಗಿ ದೇವನ ಹೆಂಡತಿಯು ವರದಾನಿ ಎಂತಲೂ ಅವನ ಇಷ್ಟದೇವತೆಯು ಚನ್ನಸೋಮಯ್ಯನೆಂತಲೂ ನೇಗಿಯ ಕಾಯಕವನ್ನೇ ಅವನು ಮಾಡುತ್ತ ಸೊನ್ನಲಾಪುರದಲ್ಲಿ ಇದ್ದನೆಂತಲೂ ಕಡೆಗೆ ಅವನ ಮೂಲಕವಾಗಿಯೇ ಸಿದ್ಧರಾಮನು ಕಪಿಲಸಿದ್ಧಮಲ್ಲಿಕಾರ್ಜುನನಿಂದ ವೀರಶೈವ ದೀಕ್ಷೆಯನ್ನು ಹೊಂದಿದನೆಂತಲೂ ತಿಳಿದು ಬರುತ್ತದೆ.

# ಆವುಗಿದೇವಯ್ಯಗಳ ಸಾಂಗತ್ಯ.

ಆವುಗಿದೇವಯ್ಯಗಳ ಸಾಂಗತ್ಯ ಎಂಬುದೊಂದು ತಾಡವಾಲೆ ಗ್ರಂಥ ವಿದೆ. ಇದರಲ್ಲಿ ನಾವು ಹಿಂದೆ ವಿವರಿಸಿದಂತೆ ೮೪೦ ಪದ್ಯಗಳು ಇದ್ದು ಕಥಾ ಭಾಗದ ಮೇಲಿಂದ "ಆವುಗಿದೇವಯ್ಯ" ಮತ್ತು "ಅಮುಗಿದೇವಯ್ಯ" ಇವರಿಬ್ಬರೂ ಒಂದೇ ಎಂದು ತೋರಿಬರುತ್ತದೆ. ಈ ಆವುಗಿದೇವಯ್ಯ ಗಳ ಸಾಂಗತ್ಯ ಗ್ರಂಥದ ಬಗ್ಗೆ ಶ್ರೀಯುತ ಭೀಮಾಚಾರ್ಯ ಒಡವಿ (ಕಾವ್ಯರತ್ನ) ಮಾಸ್ತರ ತುಮ್ಮಿನಕಟ್ಟಿ ಇವರು ಬರೆದ ಒಂದು ಲೇಖವು ೧೯೨೮ ನೇ ವರ್ಷದ ಶಿವಾನುಭವದ ಸಪ್ಟಂಬರ ತಿಂಗಳದ ಸಂಚಿಕೆಯಲ್ಲಿ ಬಂದಿರುತ್ತದೆ- ಅದನ್ನು ವಾಚಕರು ಅವಶ್ಯವಾಗಿ ನೋಡಬೇಕು. ಈ ಕಾವ್ಯವನ್ನು ಸುತ್ತೂರು ಸಿಂಹಾಸನಧೀಶ ಕಪ್ಪಿನ। ಮುಕ್ತಿದಾಯಕ ನಂಜೇಶ್ವರನಾಹಸ್ತದಿ ಜನಿಸಿದ ಭೃತ್ಯ ಶಿವಾನಂದ। ವಿಸ್ತರಿಸಿದ ನಿಜ ಕಥೆಯು॥ ಕಲ್ಲೋಸರವೆ ಕಡಿದೊಣಗಿ ಬಿದ್ದಿಹ ಮರ। ಘುಲ್ಲೈಸವೆ ಕೊಯಿ-ಕೊಯಿದು। ಪುಲ್ಲೆಲ್ಲ ಚಿಗುರವೆ ಶಿವಲಿಂಗಾರಾಧ್ಯನ। ಸೊಲ್ಲಿನ ಕೃತಿಯ ರಚನೆಗೆ॥ ಎಂದು ಇದ್ದು ಇದರ ಮೇಲಿಂದ ಶಿವಲಿಂಗ ಎಂಬ ಕವಿಯು ಈ ಗ್ರಂಥವನ್ನು ರಚಿಸಿರುವದಾಗಿ ತಿಳಿದು ಬರುತ್ತದೆ. ಈ ಸಾಂಗತ್ಯ ವನ್ನು ಬರೆದ ಓಲೆಯ ಪ್ರತಿಯಲ್ಲಿ ಹಳಗನ್ನಡ ಅ,ಳ ಅಕ್ಷರಗಳು ಕಾಣು ಬರುವದರಿಂದ ಇದು ಪ್ರಾಚೀನವಾಗಿರಬಹುದೆಂದು ಶ್ರೀಯುತ ಭೀಮಾ ಚಾರ್ಯ ಒಡವಿ ಇವರು ಅಭಿಪ್ರಾಯ ಪಡುತ್ತಾರೆ. ಇದರಿಂದ ಕಂಡು ಬರುವ ಸಂಗತಿಗಳೇನಂದರೆ—

ಸೊನ್ನಲಾಪುರ ಗ್ರಾಮದೊಳಗೆ ಸಿದ್ಧರಾಮನೆಂಬ ಅರಸನು ಆಳು ತ್ತಿದ್ದನು. ಅವನಲ್ಲಿ ದಂಡಿನ ಬಲವು ಅಧಿಕವಾಗಿದ್ದದ್ದನ್ನು ಲಾಳದೇಶದ ದೊರೆಯು ತಿಳಿದು ಇವನ ಸೊಕ್ಕು ಮುರಿಯಬೇಕೆಂದು ಸಮಸ್ತ ದೇಶ ಗಳ ಅರಸರನ್ನು ಕೂಡಿಕೊಂಡು ಸಿದ್ಧರಾಮನೊಡನೆ ಯುದ್ಧಕ್ಕೆ ಬರು ವನು. ಎರಡು ಸಾರೆ ಯುದ್ಧವಾಗಿ ಸಿದ್ಧರಾಮನೇ ಅವುಗಳಲ್ಲಿ ಗೆಲ್ಲು ವನು. ಸೊನ್ನಲಾಪುರದಲ್ಲಿ ಆವುಗಿದೇವಯ್ಯನೆಂಬ ಶಿವಭಕ್ತನಿರುತ್ತಿದ್ದನು. ಅವನಿಗೆ ರುದ್ರಾಣಿ ಎಂಬ ಹೆಂಡತಿ ಇದ್ದಳು. ಸಿದ್ಧರಾಮನು ಹರ ದೇವಾಲಯವನ್ನು ಕಟ್ಟಿಸಿ ಪುರಜನರಿಗೆಲ್ಲ ಧಾನ್ಯದ ಕೊಟ್ಟಣವನ್ನು ಕುಟ್ಟಿಸಲಿಕ್ಕೆ ಹಾಕಿದನು. ಅದರಂತೆ ಆವುಗಿದೇವಯ್ಯನ ಮನೆಗೂ ಬತ್ತ ವನ್ನು ಹಾಕಿಸಲು ಈತನು ನರರ ಸೇವೆಗೆ ಈ ದೇಹವನ್ನು ಬಳಲಿಸ

ಲಾರೆನೆಂದು ಹೇಳಿದನು. ಸಿದ್ಧರಾಮಪ್ರಭುವು ಇದನ್ನು ಕೇಳಿ ಮುನಿಯಲು ಆವುಗಿದೇವಯ್ಯನು ಕಲ್ಯಾಣಕ್ಕೆ ಹೊರಟನು. ಅವನು ತನ್ನ ನೇಗಿಯ ಸಾಮಾನುಗಳನ್ನೆಲ್ಲ ಮೂರು ಹೊರೆ ಮಾಡಿ ಅವುಗಳಲ್ಲಿ ಎರಡು ಹೊರೆಗಳನ್ನು ತಾವು ಗಂಡಹೆಂಡರು ತೆಗೆದುಕೊಂಡು ಹೊರಟರು. ಇನ್ನೊಂದನ್ನು ಶಿವನಿಂದ ತರಿಸಿಕೊಂಡನು. ಆಗ ಈಶ್ವರನೇ ಆವುಗಿದೇವಯ್ಯನ ವೇಷದಿಂದ ಸೊನ್ನಲಾಪುರದಲ್ಲಿ ಇರಹತ್ತಿದನಂತೆ. ಇದು ಸಿದ್ಧರಾಮನಿಗೆ ತಿಳಿದು ಪಶ್ಚಾತ್ತಾಪಬಟ್ಟು ಅವನು ತನ್ನ ಬಲಸಹಿತ ಕಲ್ಯಾಣಕ್ಕೆ ಹೋಗಿ ಆವುಗಿದೇವಯ್ಯನನ್ನು ಕಂಡು ಶರಣಾಗತನಾಗುವನು. ಆಗ ಆವುಗಿದೇವಯ್ಯನು ಸಿದ್ಧರಾಮನಿಗೆ ಜ್ಞಾನ ಬಂದಿತೆಂದು ಸಂತೋಷಪಟ್ಟು ಆತನಿಗೆ ಬುದ್ಧಿ ವಾದವನ್ನು ಹೇಳುವನು. ಮುಂದೆ ಹೆಂಡತಿ ಸಹಿತ ಅವನು ಶಿವನ ದೇಹದಲ್ಲಿ ಐಕ್ಯನಾಗುವನು ಎಂದು ಈ ಸಾಂಗತ್ಯದಲ್ಲಿ ವಿವರಣೆಗಳು ಬಂದಿರುತ್ತವೆ. ಈ ವಿವರಣೆಯನ್ನು ಕೊಡುವಲ್ಲಿ ಶ್ರೀ. ಘೀವಮಾಚಾರ್ಯರು ತಮ್ಮ ಲೇಖದಲ್ಲಿ ಬಹುಭಾಗ ಬಿಟ್ಟಿರಬಹುದೆಂದು ನಮಗೆ ತೋರುತ್ತದೆ.

## ಚರಿತ್ರೆಯ ಬಗ್ಗೆ ಅನುಮಾನಗಳು.

ಈ ಪ್ರಕಾರ ವೀರಶೈವ ಗ್ರಂಥಗಳಲ್ಲಿ ಅಮುಗಿದೇವನ ವೃತ್ತಾಂತಗಳು ದೊರೆಯುತ್ತವೆ. ಈತನೇ ಪುಳುಜ ಗ್ರಾಮದಲ್ಲಿಯ ಶಿಲಾಲೇಖದಲ್ಲಿ ಉಲ್ಲೇಖಿಸಲ್ಪಟ್ಟ ಅಮುಗಿದೇವನೇ ಹ್ಯಾಗೆ ಎಂಬ ಪ್ರಶ್ನೆಯು ಈಗ ಉದ್ಭವಿಸುತ್ತದೆ. ಅವರಿಬ್ಬರೂ ಒಂದೇ ಎಂದು ಗ್ರಹಿಸದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ನಿಜವೆಂದು ನಾವು ನಂಬಬೇಕಾಗುತ್ತದೆ.

(೧) ಅಮುಗಿದೇವನು ಮೊದಲು ಸೊಲ್ಲಾಪುರದಲ್ಲಿ ನೇಗಿಯ ಕಾಯಕವನ್ನು ಮಾಡುತ್ತ ಇದ್ದನು. ಆಗ ಅಲ್ಲಿ ಸಿದ್ಧರಾಮನು ಸಹ ಇದ್ದದದರಿಂದ ಇದು ೧೧೫೫ ರ ಸುಮಾರಿನಲ್ಲಿ ಇರಬಹುದು. ಅಮುಗಿದೇವನ ಇಷ್ಟ ದೇವತೆಯು ಪುಳುಜ ಗ್ರಾಮದ ಸಿದ್ಧಸೋಮನಾಥನು. ಈ ದೇವಾಲಯಕ್ಕೆ ಸಿಂಘಣರಾಜನು ಭೂಮಿಯನ್ನು ದಾನ ಕೊಟ್ಟಿದ್ದರಿಂದ ಇದು ಆ ಕಾಲಕ್ಕೆ ಬಹು ಪ್ರಸಿದ್ಧ ಸ್ಥಾನವಾಗಿರಬೇಕು. ಮುಂದೆ ಅಮುಗಿದೇವನಿಗೂ ಸಿದ್ಧರಾಮನಿಗೂ ಕೆಲವೊಂದು ಕಾರಣಕ್ಕೋಸ್ಕರ ಮನಸ್ತಾಪ ಉಂಟಾದ್ದರಿಂದ ಅಮುಗಿದೇವನು ಸೊಲ್ಲಾಪುರವನ್ನು ಬಿಟ್ಟು ಕಲ್ಯಾಣದಲ್ಲಿ ಬಂದು ಬಸವೇಶ್ವರನ ಶಿವಾನುಭವ ಮಂಟಪದಲ್ಲಿ ಸೇರ್ಪ

ಡೆಯಾದನು. ಯಾಕೆಂದರೆ ಅಲ್ಲಿ ನಡೆದ ವಾಗ್ವಾದಗಳಲ್ಲಿ ಅಮುಗಿ ದೇವನ ಉಲ್ಲೇಖವು ಮೇಲಿಂದ ಮೇಲೆ ಬರುತ್ತದೆ. ಮುಂದೆ ಕಲ್ಯಾಣ ಪಟ್ಟಣದಲ್ಲಿ ಕ್ರಾಂತಿಯು ಉದ್ಭವಿಸಲಾಗಿ ಅಲ್ಲಿಯ ಶಿವಶರಣರು ಕಲ್ಯಾಣವನ್ನು ಬಿಟ್ಟು ಬೇರೆ ಬೇರೆ ಸ್ಥಳಗಳಿಗೆ ಚದರಿ ಹೋದರು. ಈ ಪರಿಸ್ಥಿತಿಯಲ್ಲಿ ಅಮುಗಿ ದೇವನು ತನ್ನ ಮೂಲಸ್ಥಾನವಾದ ಸೊಲ್ಲಾಪುರಕ್ಕೆ ಹೋಗದೆ ತನ್ನ ಇಷ್ಟ ದೇವತೆಯ ಸ್ಥಾನವಾದ ಪುಳುಜು ಗ್ರಾಮದಲ್ಲಿ ಬಂದು ಇರಹತ್ತಿದನು. ಹೀಗೆ ಅಲ್ಲಿ ಅವನು ವಾಸಮಾಡುತ್ತಿರುವಾಗ್ಗೆ ಸಿಂಘಣ ನೃಪಾಲನು ಅಲ್ಲಿಗೆ ಬರಲು ನೃಪಾಲನು ಅವನಿಗೆ ಒಂದು ಗ್ರಾಮವನ್ನು ಉಂಬಳಿಹಾಕಿಕೊಟ್ಟನು. ಆದರೆ ಈ ಶಿಲಾಶಾಸನವು ೧೨೦೦ ನೇ ಇಸ್ವಿಯದು ಇರುವದರಿಂದ ಆಗ ಅಮುಗಿದೇವನು ಬಹು ಮುಪ್ಪಿನವನಾಗಿರಬೇಕು. ಅಂದರೆ ಅವನ ವಯಸ್ಸು ಆಗ ೮೦-೯೦ ವರ್ಷವಿರಬೇಕು. ಅಲ್ಲಿಯೇ ಲಿಂಗೈಕ್ಯನಾಗಿರಬೇಕು. ಹೀಗೆ ಅಮುಗಿದೇವನ ಚರಿತ್ರೆಯನ್ನು ನಾವು ಕಲ್ಪಿಸಿದ್ದಾದರೆ ಇದು ನಂಬಲು ಅರ್ಹವೋ ಹ್ಯಾಗೆ ಎಂಬ ವಿಷಯುವನ್ನು ನಾವು ಸಂಶೋಧಕರ ಕಡೆಗೆ ಬಿಟ್ಟುಕೊಡುತ್ತೇವೆ.

ಮೇಲ್ಕಂಡ ವಿವರಣೆಯು ನಂಬಲು ಅರ್ಹವಿರದಿದ್ದರೆ,

(೨) ಬಸವೇಶ್ವರನ ಕಾಲದಲ್ಲಿಯ ಅಮುಗಿದೇವನು ಬೇರೆ ಮತ್ತು ಸಿಂಘಣನ ಕಾಲದ ಅಮುಗಿ ದೇವನು ಬೇರೆ ಎಂದು ನಾವು ಗ್ರಹಿಸಬೇಕಾಗುತ್ತದೆ. ಮತ್ತು ಈ ಉಭಯತರು ಪುಳುಜ ಗ್ರಾಮದ ಸಿದ್ಧಸೋಮನಾಥನ ಭಕ್ತರಾಗಿದ್ದರು. ಈ ಉಭಯತರು ವಿದ್ವಾಂಸರಾಗಿದ್ದು ಆ ಕಾಲಕ್ಕೆ ಬಹು ಮನ್ನಣೆಯನ್ನು ಹೊಂದಿದವರಾಗಿದ್ದರು. ಈ ಚರಿತ್ರೆಯೂ ಕೂಡ ಸಂಭವನೀಯವಿರುತ್ತದೆ.

ಈ ಎರಡು ಅನುಮಾನಗಳಲ್ಲಿ ಯಾವದು ನಿಜವೆಂಬುದನ್ನು ಗೊತ್ತು ಪಡಿಸಬೇಕಾದರೆ ನಾವು ಅಮುಗಿದೇವನ ವಿಷಯುವಾಗಿ ಗ್ರಂಥಗಳಲ್ಲಿಯೂ ಪುಳುಜಗ್ರಾಮದ ಸುತ್ತು ಮುತ್ತಲಿನ ಪ್ರದೇಶಗಳಲ್ಲಿಯೂ ಇನ್ನೂ ಹೆಚ್ಚಿಗೆ ಶೋಧಿಸಬೇಕು.

ನಾವು ಇಷ್ಟರ ಮಟ್ಟಿಗೆ ಹೇಳಿ ಸದ್ಯಕ್ಕೆ ಈ ಲೇಖವನ್ನು ಪೂರ್ತಿಗೊಳಿಸುತ್ತೇವೆ.



# ಹಿಂದೂ ಸಮಾಜದಲ್ಲಿ ಸಂಘಟನೆ.



ಲೇಖಕ:- ಓರ್ವ ವೀರಶೈವ.

## (೧) ಸಾಂಸ್ಕೃತಿಕ ಸಂಘಟನೆ.

ಹಿಂದೂ ಮಹಾಸಭೆಯ ಮುಖ್ಯ ಉದ್ದೇಶವು ಹಿಂದೂ ಜನರಲ್ಲಿ ಸಂಘಟನೆಯನ್ನುಂಟು ಮಾಡುವದಾಗಿರುತ್ತದೆ. ನಾವು ಆ ಮಹಾ ಸಭೆಯಲ್ಲಿ ಭಾಗಿಗಳಾಗಬೇಕೋ ಹ್ಯಾಗೆ ಎಂಬ ಪ್ರಶ್ನದ ಅವಗಾಹನೆಗಾಗಿ ಕೆಲವು ಸಂಗತಿಗಳನ್ನು ವಿಶದಪಡಿಸುವದು ಯುಕ್ತವಾಗಿ ತೋರಿದ್ದರಿಂದ ನನ್ನ ಅಲ್ಪ ಮತಿಗೆ ತಿಳಿದಷ್ಟು ಇಲ್ಲಿ ಪ್ರಯತ್ನಿಸುತ್ತಿದ್ದೇನೆ. ಸುಜ್ಞರು ಅವುಗಳಲ್ಲಿ ಯುಕ್ತವಾದವುಗಳನ್ನು ಗ್ರಹಿಸಬಹುದು. ಯುಕ್ತ ಕಾಣದಿದ್ದಲ್ಲಿ ತಿಳಿಸಿ ಹೇಳಬಹುದು.

ಹಿಂದೂ ಸಂಘಟನೆಯ ಪ್ರಶ್ನೆಯು ಒಂದು ಭಾಷೆ ಜಾತಿ, ಪಕ್ಷ ಅಥವಾ ಪ್ರಾಂತಕ್ಕೆ ಸಂಬಂಧಿಸದೆ ಇಡೀ ಭರತಖಂಡದ ಹಿಂದುಗಳಿಗೆ ಸಂಬಂಧಿಸಿದ್ದಾಗಿದೆ. ಆದುದರಿಂದ ಹಿಂದುಗಳಲ್ಲಿ ಸಂಘಟನೆಯು ಹೇಗಾಗಬೇಕು, ಹಿಂದೂ ಸಂಘಟನೆಯ ಸಾಮಾನ್ಯ ನಿಯಮಗಳಾವವು, ಹಿಂದೂ ಸಂಘಟನೆಯ ಬಗ್ಗೆ ಜನರ ಮನಸ್ಸಿನಲ್ಲಿ ಮೂಡಿರುವ ತಪ್ಪು ತಿಳುವಳಿಕೆಗಳಾವವು, ಹಿಂದೂ ಸಂಘಟನೆಯಲ್ಲಿ ವಿಶೇಷತಃ ವೀರಶೈವರ ಸ್ಥಾನವಾವುದು, ಈ ವಿಷಯಗಳನ್ನು ಕುರಿತು ಪ್ರತಿಪಾದಿಸುವದು ಅಗತ್ಯವಾಗಿದೆ. ಮೊದಲು ಹಿಂದುಗಳಲ್ಲಿ ಸಂಘಟನೆಯು ಹೇಗಾಗಬೇಕೆಂಬ ವಿಷಯವನ್ನು ಕುರಿತು ಆಲೋಚಿಸೋಣ.

### ಹಿಂದುಗಳಲ್ಲಿ ಸಂಘಟನೆಯು ಹೇಗಾಗಬೇಕು?

ಕೆಲವರು ಹೇಗೆ ಅಭಿಪ್ರಾಯಪಡುವರು, “ಹಿಂದೂ ಎಂಬದು ಕ್ರಿಸ್ತ ಮುಸಲ್ಮಾನ ಸಮಾಜಗಳಂತೆ ಒಂದೇ ಸಮಾಜವಲ್ಲ. ಅನೇಕ ಭಿನ್ನ ಭಿನ್ನ ಸಮಾಜಗಳಿಂದ ಕೂಡಿದ ದೊಡ್ಡದೊಂದು ಸಮಾಜವು. ಇದರಲ್ಲಿ ಭಿನ್ನ ಭಿನ್ನ ಮತ ಪಂಥಗಳುಂಟು. ಬೇರೆ ಬೇರೆ ಭಾಷೆಗಳನ್ನಾಡುವವರಿದ್ದಾರೆ. ಆಯಾಯ ಪ್ರಾಂತದ ಹಿಂದುಗಳ ವೈಶಿಷ್ಟ್ಯ ಆಕಾಂಕ್ಷೆಗಳೇ

ಬೇರೆ. ಸಾಮಾಜಿಕ ರಾಜಕೀಯ ದೃಷ್ಟಿಯಿಂದ ಅನೇಕ ಭಿನ್ನ ಭಿನ್ನಾಭಿಪ್ರಾಯಗಳುಳ್ಳ ಪಕ್ಷ-ಪಂಗಡಗಳುಂಟು.

ವೈದಿಕ ಧರ್ಮದಲ್ಲಿ ಸ್ಥೂಲಮಾನದಿಂದ ಸಾಂಪ್ರದಾಯಿಕ ಪ್ರಾಗತಿಕ ಮತಗಳೆಂಬೆರಡು ಭೇದಗಳಿರುವವು. ಸಾಂಪ್ರದಾಯಿಕರು ಅಥವಾ ಸನಾತನಿಗಳು ಬಹು ದಿವಸಗಳಿಂದ ರೂಢವಾಗಿರುವ ಆಚಾರ ವಿಚಾರಗಳನ್ನು ವ್ಯತ್ಯಾಸಗೊಳಿಸಬಾರದೆಂದು ಒಂದು ಕಡೆಗೆ ಹಟ ಹಿಡಿದರೆ ಇನ್ನೊಂದು ಕಡೆಗೆ ಪ್ರಾಗತಿಕರು ಮೂಢವಾದ ರೂಢಾಚಾರಗಳನ್ನು ಕಿತ್ತೊಗೆದು ಲೋಕಹಿತದ ಹಾಗೂ ರಾಷ್ಟ್ರೋನ್ನತಿಯ ಕಾರ್ಯಗಳನ್ನು ಪ್ರಚಾರದಲ್ಲಿ ತರಬೇಕೆಂದು ಸಾರುತ್ತಿರುವರು. ಉದಾಹರಣಾರ್ಥವಾಗಿ ಅಸ್ಪೃಶ್ಯತಾ ನಿವಾರಣೆಯ ಪ್ರಶ್ನೆಯು ಸದ್ಯಕ್ಕೆ ಉಭಯಪಕ್ಷಗಳಲ್ಲಿ ದೊಡ್ಡದೊಂದು ಗೊಂದಲವನ್ನೇ ಎಬ್ಬಿಸಿದೆ. ಇಂಥ ಪ್ರಸಂಗದಲ್ಲಿ ಸಂಘಟನೆಯು ಹೇಗಾಗಬೇಕು? ಸೂಕ್ಷ್ಮ ದೃಷ್ಟಿಯಿಂದ ವಿಚಾರಿಸಲು ವೈದಿಕ ಧರ್ಮದಲ್ಲಿ ಸ್ಮಾರ್ತ, ವೈಷ್ಣವ, ಶೈವ, ವೀರಶೈವ, ಶಾಕ್ತ, ಸೌರ, ಗಾಣಪತ್ಯ ಇತ್ಯಾದಿ ಹತ್ತೆಂಟು ಮತಗಳಿರುವವು. ಇದಲ್ಲದೆ ಅವುಗಳೊಳಗೆ ನೂರಾಯೆಂಟು ಜಾತಿಗಳಿರುವವು. ಅವುಗಳಲ್ಲಿ ಐಕ್ಯತೆಯು ನೆಲೆಗೊಳ್ಳಲು ಶಕ್ಯವೇ? ಐಕ್ಯತೆಯಾಗದೆ ಸಂಘಟನೆಯು ಶಕ್ಯವೇ? ಇದಲ್ಲದೆ ರಾಜಕೀಯ ದೃಷ್ಟಿಯಿಂದ ವಿಚಾರಿಸಲಾಗಿ ಹಿಂದುಗಳಲ್ಲಿ ಕಾಂಗ್ರೆಸ ಪಕ್ಷ, ಬ್ರಾಹ್ಮಣೇತರ ಪಕ್ಷ, ಸಮಾಜ ಸುಧಾರಕ ಪಕ್ಷ, ಸೌಮ್ಯ ಪಕ್ಷ, ಉಗ್ರ ಪಕ್ಷ ಇತ್ಯಾದಿ ಪಕ್ಷಗಳು ಸಂಘಟನೆಗೆ ವಿಘ್ನ ಮಾಡಲಿಕ್ಕಿಲ್ಲವೇ? ಅಂದಮೇಲೆ ಹಿಂದುಗಳಲ್ಲಿ ಸಂಘಟನೆಯು ಸಾಧ್ಯವೆ?

ಮೇಲಿನ ಎಲ್ಲ ಪ್ರಶ್ನೆಗಳನ್ನು ವಿಚಾರಿಸಿ ನೋಡಲಾಗಿ ಯಾರಿಗಾದರೂ ಸಂಘಟನೆಯು ಅಸಾಧ್ಯವೆಂದೇ ಸಹಜವಾಗಿ ಹೊಳೆಯುವದು. ಆದರೆ ಅಸಾಧ್ಯವೆಂದು ತಿಳಿದು ಕೈ ಬಿಡಲಿಕ್ಕೆ ಬರುವಂತಿಲ್ಲ. ಅಸಾಧ್ಯವಾದದ್ದನ್ನು ಸಾಧ್ಯಮಾಡಬೇಕಾಗಿದೆ. ಅನೇಕತ್ವಗಳಲ್ಲಿ ಏಕತ್ವವನ್ನು ಹುಡುಕಿ ತೆಗೆಯಬೇಕಾದರೆ ಹಿಂದುಗಳೆಲ್ಲರೂ ಒಂದೇ ಎಂಬ ಭಾವವನ್ನು ಸ್ಥಿರಗೊಳಿಸಬೇಕಾಗಿದೆ ನಾವೆಲ್ಲರೂ ಹಿಂದೂ ಧರ್ಮ ಮಾತೆಯ ಮಕ್ಕಳು, ಪರಸ್ಪರ ಬಂಧುಬಾಂಧವರು ಎಂಬ ವಿಚಾರವನ್ನು ಎಲ್ಲ ಹಿಂದುಗಳ ಮನಸ್ಸಿನಲ್ಲಿ ನೆಲೆಗೊಳಿಸಬೇಕಾಗಿದೆ. ನಮ್ಮ ಕೈಕಾಲು, ಕಣ್ಣು, ಕಿವಿ, ಮೂಗು ಮೊದಲಾದ ಅವಯವಗಳು ಭಿನ್ನವಾದಾಗ್ಯೂ ದೇಹವೆಂಬ ಒಂದೇ ಭಾಗಕ್ಕೆ ಸಂಬಂಧಪಟ್ಟಿರುವದಿಲ್ಲವೇ? ಎಲೆ, ಹೂ, ಕಾಯಿ,

ಹಣ್ಣು, ಟೊಂಗೆ ಮುಂತಾದವುಗಳು ಭಿನ್ನವಾದಾಗ್ಯೂ ಗಿಡವೆಂಬ ಮುಖ್ಯ ವಸ್ತುವಿಗೆ ಅವು ಸಂಬಂಧಪಟ್ಟಿಲ್ಲವೇ? ಅದೇ ಮೇರೆಗೆ ನಮ್ಮಲ್ಲಿ ನೆಲೆಗೊಂಡ ವಿವಿಧ ಮತಪಂಥಗಳೂ ಪಕ್ಷಗಳೂ ನಿಜವಾಗಿ ಹಿಂದೂ ಸಮಾಜದಲ್ಲಿಯೇ ಸಮಾವೇಶವಾಗುತ್ತವೆ. *There is unity in diversity* ಎಂಬ ತತ್ವವು ನಮ್ಮ ಹಿಂದೂ ಸಮಾಜಕ್ಕೂ ಸಮನ್ವಯಿಸುವದು.

ತತ್ವವೇನೋ ಹೇಳಲಿಕ್ಕೆ ಬಹು ಸುಲಭ. ಆದರೆ ಅವನ್ನು ಆಚರಣೆಯಲ್ಲಿ ತರಲಿಕ್ಕೆ ಹೋದಾಗ ವಿಘ್ನಗಳು ಪರಂಪರೆಯಾಗಿ ಬಂದು ನಮ್ಮ ಮುಂದೆ ನಿಲ್ಲುವವು. ಸಂಘಟನೆಯ ಪ್ರಶ್ನೆಯು ತಾತ್ವಿಕ ದೃಷ್ಟಿಯಿಂದ ಹೇಳಿಬಿಡುವ ಸುಲಭವಾದ ಮಾತಲ್ಲ. ಆಚರಣೆಯಲ್ಲಿ ತೋರಿಸುವ ದುಸ್ತರವಾದ ಕೆಲಸವಾಗಿರುವದು.

ಈಗ ನಮ್ಮ ಮುಂದೆ ಸಂಘಟನೆಗೆ ಅನುಕೂಲವಾದ ಎರಡು ಮುಖ್ಯವಾದ ವಿಷಯಗಳಿರುವವು. ಅವು ಯಾವವೆಂದರೆ (೧) ರಾಜಕೀಯ (೨) ಸಾಂಸ್ಕೃತಿಕ. ರಾಜಕೀಯ ದೃಷ್ಟಿಯಿಂದ ಸಂಘಟನೆ ಯಾಗುವದೋ, ಸಾಂಸ್ಕೃತಿಕ ದೃಷ್ಟಿಯಿಂದ ಸಂಘಟನೆಯಾಗುವದೋ, ಎಂಬದನ್ನು ನಾವು ಲಕ್ಷಪೂರ್ವಕವಾಗಿ ವಿಚಾರಿಸಬೇಕಾಗಿದೆ. ರಾಜಕೀಯ ದೃಷ್ಟಿಯಿಂದ ಸಂಘಟನೆಯ ವಿಷಯವಾಗಿ ನನಗೆ ಹೊಳೆದದ್ದನ್ನು ಮುಂದಿಟ್ಟಿದ್ದೇನೆ.

ಪರರಾಷ್ಟ್ರಗಳಲ್ಲಿ ಭಿನ್ನ ಭಿನ್ನ ರಾಜಕೀಯ ಪ್ರಶ್ನೆಗಳಿದ್ದರೂ ಅವುಗಳಲ್ಲಿ ಕ್ರಮಬದ್ಧತೆಯೂ ವಿಶಿಷ್ಟ ಉಚ್ಚಹೇತುಗಳನ್ನೊಳಕೊಂಡ ಪಕ್ಷಗಳೂ ವ್ಯಕ್ತವಾಗುತ್ತವೆ. ಅವರು ಈ ಪದ್ಧತಿಯನ್ನು ಸಾಗಿಸಿಕೊಂಡು ಹೋಗಲು ನುರಿತವರೂ ಸಮರ್ಥರೂ ಆಗಿರುತ್ತಾರೆ. ಆದರೆ ನಮ್ಮ ಹಿಂದೂ ಸಮಾಜದಲ್ಲಿ ತಲೆಗೊಬ್ಬರು ಹಿರಿಯರು. ಸ್ವಾರ್ಥಸಾಧನೆಗಾಗಿ ತಮ್ಮ ಸಮಾಜವನ್ನೂ ರಾಷ್ಟ್ರವನ್ನೂ ಮಣ್ಣುಗೂಡಿಸುವವರೇ ಬಹು ಜನರು. ರಾಜಕಾರಣದಲ್ಲಿಯಾದರೂ ನಮ್ಮ ಜನಹಿತ, ಸಮಾಜಹಿತ, ರಾಷ್ಟ್ರಹಿತ, ಇವುಗಳ ಕಡೆಗೆ ಲಕ್ಷ ಕೊಡುವದಕ್ಕಿಂತಲೂ ಅವುಗಳ ಹೆಸರಿನಿಂದ ನಮ್ಮ ಪ್ರತಿಷ್ಠೆ, ನಮ್ಮ ಸ್ವಾರ್ಥ, ನಮ್ಮ ಗೌರವವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಹವಣಿಸುನವರೇ ಸಂಸ್ಥೆಗಳಲ್ಲಿ ತುಂಬಹತ್ತಿರುತ್ತಾರೆ. ಇದಕ್ಕೆ ಮುನಸಿಪಾಲ್ಟಿ, ಲೋಕಲ್‌ಬೋರ್ಡ, ಕಾಯಿದೆ ಕೌನ್ಸಿಲ್‌ಗಳೇ ಸಾಕ್ಷಿಯಾಗಿವೆ.

“ನಮಗೆ ಮುಂದೆ ಸ್ವರಾಜ್ಯ ದೊರೆತರೆ ನಾವು ನಮ್ಮನಮ್ಮೊಳಗೆ ಬಡಿದಾಡಿ ಸಾಯುವವರೇ ಹೊರತು ಅದನ್ನು ಭದ್ರವಾಗಿ ಕಾಪಾಡಿಕೊಂಡು ಹೋಗಲಾರೆವೆಂದು” ಕೆಲವರು ಅಭಿಪ್ರಾಯಪಡುವರು. ಯಾಕಂದರೆ ನಮ್ಮ ರಕ್ತನಾಳಗಳಲ್ಲಿ ಈಗಿನ ರಾಜ್ಯಕರ್ತೃತ್ವದ ವಿಚಾರಗಳು ಪಾಶ್ಚಾತ್ಯರಂತೆ ಇನ್ನೂ ಚನ್ನಾಗಿ ಬೇರೂರಿಲ್ಲ. ಬಹುಜನ ಅಶಿಕ್ಷಿತರು ಇನ್ನೂ ಅಜ್ಞಾನಾಂಧಕಾರದಲ್ಲಿಯೇ ಮುಳುಗಿರುವದು. ಆದ್ದರಿಂದ ಸುಶಿಕ್ಷಿತರು ಹೆಚ್ಚಾಗಿ ಸ್ವಾರ್ಥಿಗಳಾಗಿರುವರೇ ಹೊರತು ಸಮಾಜ ಹಿತೈಷಿಗಳಾಗಲಿ ರಾಷ್ಟ್ರ ಹಿತೈಷಿಗಳಾಗಲಿ ಆಗಿರುವದಿಲ್ಲ. ಏನೋ ಕೈ ಬೆರಳುಗಳಿಂದ ಎಣಿಸುವಷ್ಟು ಸುಶಿಕ್ಷಿತರು ಈಗಿನ ಪರಿಸ್ಥಿತಿಯಲ್ಲಿ ರಾಜ್ಯಕಾರಣದ ದೃಷ್ಟಿಯಿಂದ ಹಿಂದೂ ಸಮಾಜದಲ್ಲಿ ಸಂಘಟನೆಯನ್ನುಂಟುಮಾಡಿಯಾರೆಂದು ನನಗೆ ಭರವಸೆ ಎನಿಸದು. ಕಾರಣ ನಮ್ಮ ಹಿಂದೂ ಸಮಾಜದಲ್ಲಿ ಸಂಘಟನೆಯಾಗಬೇಕಾದರೆ ಸಾಂಸ್ಕೃತಿಕ ದೃಷ್ಟಿಯಿಂದಲೇ ಹೊರತು ರಾಜಕಾರಣ ದೃಷ್ಟಿಯಿಂದ ಸದ್ಯಕ್ಕೆ ಆಗುವದು ಬಹು ಕಠಿಣವಾಗಿರುತ್ತದೆ.

ನಮ್ಮ ಹಿಂದೂ ಸಮಾಜದಲ್ಲಿ ಕಾಲಕಾಲಕ್ಕೆ ಕ್ರಾಂತಿಗಳಾಗುತ್ತ ಬಂದಿವೆ. ಆಯಾಯ ಕಾಲಕ್ಕೆ ಸಂಘಟನೆಗಳಾಗದ ವಿನಾ ಆ ಕ್ರಾಂತಿಗಳಿಗೆಂದೂ ಬಲಬರುತ್ತಿದ್ದಿಲ್ಲ. ಆದರೆ ಆ ಸಂಘಟನೆಗಳು ರಾಜಕೀಯ ಸ್ವರೂಪದವಾಗಿರದೆ ಆರಂಭದಲ್ಲಿ ಸಾಮಾಜಿಕ ಸುಧಾರಣೆಯನ್ನೇ ತಮ್ಮ ಉದ್ದೇಶವಾಗಿಟ್ಟುಕೊಂಡು ಸಮಾಜವನ್ನು ಸಂಘಟಿತ ಮಾಡಿದವು. ಮುಂದೆ ಇದರಿಂದ ರಾಜಕೀಯ ಕ್ರಾಂತಿಗಳಾದವು. ಜನತೆಯ ಆಚಾರ ವಿಚಾರಗಳನ್ನೇ ಕಾಲಪರಿಸ್ಥಿತಿಗೆ ಸರಿಯಾಗಿ ಒಳ್ಳೆಯದರ ಕಡೆಗೆ ತಿರುಗಿಸುವದೇ ಸಾಂಸ್ಕೃತಿಕ ಸುಧಾರಣೆ ಎನಿಸುತ್ತದೆ. ಇದು ಜನರಿಗೂ ಬೇಕಾಗುತ್ತದೆ. ಭಗವಾನ್ ಬುದ್ಧ ದೇವನು ವೈದಿಕ ಧರ್ಮದಲ್ಲಿ ಜನ್ಮ ತಾಳಿದ್ದರೂ ಹಿಂಸಾಯುಕ್ತವಾದ ಯಜ್ಞಯಾಗಾದಿಗಳನ್ನು ಕಿತ್ತೊಗೆಯಬೇಕೆಂಬ ಮುಖ್ಯ ಧ್ಯೇಯ ತಾಳಿದನು. ಇದರಿಂದ ದೊಡ್ಡ ಸಾಮಾಜಿಕ ಕ್ರಾಂತಿಯಾಗಿ ಎಂಥ ಎಂಥ ವೈಭವಶಾಲೀ ಅರಸರಾಗಿ ಹೋದರೆಂಬುದು ಇತಿಹಾಸ ಪ್ರಸಿದ್ಧವದೆ. ಜೈನ ಧರ್ಮವಾದರೂ ವೈದಿಕ ಧರ್ಮದಲ್ಲಿರುವ ಅತಿಕ್ರಮಣವನ್ನು ಬಗ್ಗುಬಡಿದು ಸಾಮಾಜಿಕ ಕ್ರಾಂತಿಯನ್ನು ಮಾಡಿತು. ಇದರಿಂದ ಜೈನರು ರಾಜ್ಯಪದಾರೂಢರಾದರು. ಬಸವೇಶ್ವರನ ಪಂಥವಾದರೂ ಕಾಯಕ ಗುಣಗಳಿಗೆ ಮಹತ್ವಕೊಟ್ಟು ಜಾತಿಬಂಧನಗಳನ್ನು

ಹೊರದೂಡಿ ಸಮಾಜದಲ್ಲಿ ಸಂಘಟನೆ ಮಾಡಿತು. ಆಗಿನ ರಾಜ್ಯಾಧಿಕಾರಿಗಳು ಅದನ್ನು ಆಗ ನಷ್ಟಗೊಳಿಸಲು ಪ್ರಯತ್ನಿಸಿದರು. ಆದರೆ ಕಡೆಗೆ ತಾವೇ ನಷ್ಟರಾದರು.

ಈ ಮೇರೆಗೆ ಅಯಾಯ ಮತಪಂಥಗಳು ಜನತೆಯ ಸಾಂಸ್ಕೃತಿಕ ಸುಧಾರಣೆಗಾಗಿ ಪ್ರಯತ್ನಿಸಿದವು. ಆ ದೃಷ್ಟಿಯಿಂದಲೇ ಸಂಘಟನೆಯಾಗಲು ಶಕ್ಯವಾಯಿತು. ಅದಕ್ಕೆ ನಿಸ್ವಾರ್ಥಿಗಳಾದ ವಿಭೂತಿಗಳು ಹೆಬ್ಬರಿಯಾಳಾಗಿ ನಿಲ್ಲಬೇಕು. ಅಂದರೆ ಸಾಮಾನ್ಯರು ಆ ವಿಭೂತಿಗಳು ಹಾಕಿ ಕೊಟ್ಟ ಉದಾಹರಣೆಯನ್ನು ಹಿಂಬಾಲಿಸುವರು. ಆ ಮೂಲಕ ಸಂಘಟನೆಯು ಭದ್ರವಾಗಿ ಚಿರಕಾಲ ಬಾಳುವದು. ಸಾಂಸ್ಕೃತಿಕ ಸುಧಾರಣೆಯು ಮೊದಲು ಸಾಮುದಾಯಿಕ ರೀತಿಯಲ್ಲಿ ನಡೆಯದೆ ಒಬ್ಬ ಅಸಾಧಾರಣ ವ್ಯಕ್ತಿಯ ಅವತಾರದಿಂದಲೇ ನಡೆಯುವದೆಂದು ನಮ್ಮಲ್ಲಿ ತಿಳುವಳಿಕೆಯಿದೆ. ಆದರೆ ಅಂಥ ದಿವ್ಯ ವ್ಯಕ್ತಿಯ ಅವತಾರ ನಿರೀಕ್ಷಣೆಮಾಡುವದು ನಮ್ಮ ಸದ್ಯದ ಕೆಲಸವಲ್ಲ. ನಮ್ಮ ಮನಸ್ಸನ್ನು ನಾವು ಸಿದ್ಧಗೊಳಿಸಿ ಎಲ್ಲ ಪಂಥಗಳಲ್ಲಿ ಶ್ರೇಷ್ಠವಾದ ಹಾಗು ಸರ್ವಸಾಧಾರಣವಾದ ಆಚಾರವಿಚಾರಗಳನ್ನು ಏಕೀಕರಿಸಿ ಸಂಘಟನೆ ಮಾಡಲು ಪ್ರಯತ್ನಿಸಬೇಕು. ಅಷ್ಟರಲ್ಲಿ ಒಬ್ಬ ವಿಭೂತಿಯು ಉದಯವಾಗಿ ಅವುಗಳಲ್ಲಿ ಕ್ರಮಬದ್ಧತೆಯನ್ನುಂಟುಮಾಡಿ ಜನತೆಯಲ್ಲಿ ಕ್ರಾಂತಿಯನ್ನುಂಟುಮಾಡುವನು. ಆಗ ಹಿಂದೂ ಸಮಾಜವು ಒಂದಾಗುವದು ಖಂಡಿತವೇ.

## (೨) ಹಿಂದೂ ಸಂಘಟನೆಯ ಬಗ್ಗೆ ಕೆಲವು ಆಕ್ಷೇಪಗಳು.

ಕೆಲವರು ಹಿಂದೂ ಸಂಘಟನೆಯ ಬಗ್ಗೆ ಬಹು ಸಂಶಯವುಳ್ಳವರೂ ಭಯಭೀತರೂ ಆಗಿದ್ದಾರೆ. ಅವರು ಹಿಂದುಗಳಲ್ಲಿ ಸಂಘಟನೆಯೇ ಬೇಡವೆಂಬದನ್ನು ಕುರಿತು ಕೆಲವು ಆಕ್ಷೇಪಗಳನ್ನು ಮುಂದು ಮಾಡುತ್ತಿರುವರು. ಅವುಗಳಲ್ಲಿ ಮೊದಲನೆಯ ಆಕ್ಷೇಪವೆಂದರೆ:—"ಹಿಂದೂ ಸಂಘಟನೆಯ ಉದ್ದೇಶವು ಮುಸಲ್ಮಾನರನ್ನು ಬಗ್ಗುಬಡಿಯುವದಕ್ಕಾಗಿಯೇ ಇರುತ್ತದೆ. ಇದರಿಂದ ರಾಷ್ಟ್ರದೊಳಗೆ ಹಿಂದೂ ಮುಸಲ್ಮಾನರಲ್ಲಿ ಮತ್ತಿಷ್ಟು ವೈರಭಾವವು ಬೆಳೆಯುವದು. ಹಿಂದೂ ಮುಸಲ್ಮಾನರಲ್ಲಿ ಐಕ್ಯತೆಯನ್ನುಂಟು ಮಾಡಬೇಕೆಂದು ನಮ್ಮ ರಾಷ್ಟ್ರದ ಮುಂದಾಳುಗಳು ಪ್ರಯತ್ನಿಸುವಾಗ ನಡುವೆ ಇದೊಂದು ವಿಪರೀತ ನಾಟಕವನ್ನು ಹೂಡಿ ಹಿಂದೂ ಮುಸಲ್ಮಾನರಲ್ಲಿ ಅನೈಕ್ಯತೆಯನ್ನು ಬೆಳೆಸಿದಂತಾಗುವದು."

ಈ ಆಕ್ಷೇಪವು ದೋಷಯುಕ್ತವಾದುದು. ಒಂದು ಮನೆಯಲ್ಲಿ ಅಣ್ಣ ತಮ್ಮಂದಿರು ಒಬ್ಬರಿಗೊಬ್ಬರು ಹೊಡೆದಾಡುವದನ್ನು ಬಿಟ್ಟು ಪ್ರೇಮದಿಂದಲೂ ಐಕ್ಯದಿಂದಲೂ ಇರಲಿಕ್ಕೆ ಪ್ರಯತ್ನಿಸಿದರೆ ನೆರೆಮನೆಯ ಬೇರೊಬ್ಬ ಗೃಹಸ್ಥನು ಅದನ್ನು ನೋಡಿ ಸಿಟ್ಟಿಗೇಳುವದು ಹುಚ್ಚುತನವು. ನೆರೆಯವನು ಸಭ್ಯನಾಗಿದ್ದರೆ ಅವರ ಒಕ್ಕಟ್ಟಿನಿಂದ ಅವನಿಗೇನೂ ಬಾಧಕವಿಲ್ಲ. ಒಂದು ವೇಳೆ ಆತನು ಆ ಅಣ್ಣತಮ್ಮಂದಿರ ಅನೈಕ್ಯತೆಯ ದುರುಪಯೋಗವನ್ನು ಹೊಂದಿ ತನ್ನ ಸ್ವಾರ್ಥವನ್ನು ಸಾಧಿಸುತ್ತಿದ್ದರೆ ಆತನ ದುಷ್ಟತನವನ್ನು ತಗ್ಗಿಸಲಿಕ್ಕೆ ಆ ಅಣ್ಣತಮ್ಮಂದಿರು ಒಕ್ಕಟ್ಟಿನಿಂದಿರುವದು ಬಹು ಲೇಸು. ಅದೇ ಮೇರೆಗೆ ಮುಸಲ್ಮಾನರು ಹಿಂದುಗಳಲ್ಲಿ ಪರಸ್ಪರ ಐಕ್ಯತೆಯುಂಟಾಗುವದನ್ನು ನೋಡಿ ಸಂತೋಷಪಡುವದು ಸಭ್ಯತನದ ಲಕ್ಷಣವು. ಆದರೆ ಹಿಂದುಗಳ ಅನೈಕ್ಯತೆಯ ದುರುಪಯೋಗ ಮಾಡಿಕೊಂಡು ಅವರು ಹಿಂದುಗಳ ಮೇಲೆ ಬಲಾತ್ಕಾರ, ಅತ್ಯಾಚಾರ, ಅನಾಚಾರ ಮುಂತಾದ ಹ್ಯೇಯ ಕೆಲಸಗಳನ್ನು ಮಾಡುತ್ತಿದ್ದರೆ ಅವುಗಳನ್ನು ಹಿಂದುಗಳೆಲ್ಲರೂ ಒಕ್ಕಟ್ಟಿನಿಂದಲೂ ಧೈರ್ಯದಿಂದಲೂ ನಿರಾಕರಿಸುವದು ಆದ್ಯ ಕರ್ತವ್ಯವಾಗಿದೆ. ಒಮ್ಮೆ ಕೌರವ ಪಾಂಡವರಲ್ಲಿ ಜಗಳ ನಡೆದ ಕಾಲಕ್ಕೆ ಧರ್ಮರಾಯನು ಹೀಗೆ ಹೇಳಿದ್ದಾನೆ. “ಮನೆಯ ಜಗಳಕ್ಕೆ ನಾವೈವರು ಒತ್ತಟ್ಟಿಗೆ ಕೌರವರು ನೂರುಮಂದಿ ಒತ್ತಟ್ಟಿಗೆ, ಹೊರಗಿನ ಜಗಳಕ್ಕೆ ನಾವು ನೂರಾಐದು ಮಂದಿ ಒತ್ತಟ್ಟಿಗೆ” ಈ ಮಾತು ಹಿಂದೂ ಮುಸಲ್ಮಾನರಿಗೂ ಸಮನ್ವಯಿಸುವದು.

ಮುಸಲ್ಮಾನರಿಂದ ಹಿಂದುಗಳಿಗೇನಾದರೂ ಅಂಥ ಅನಾಹುತ ಪ್ರಸಂಗಗಳು ಸಂಭವಿಸಿದರೆ ಹಿಂದುಗಳೆಲ್ಲರೂ ಕೂಡಿ ತಮ್ಮ ಧರ್ಮ ಪಾವಿತ್ರತೆ ಗೌರವ ಅಧಿಕಾರಗಳನ್ನು ಕಾಪಾಡಿಕೊಳ್ಳಲು ಮುಸಲ್ಮಾನರ ವಿರುದ್ಧ ನಿಲ್ಲಬೇಕಾಗುವದು. ಅದರಂತೆಯೇ ಹಿಂದುಗಳಿಂದ ಮುಸಲ್ಮಾನರಿಗೇನಾದರೂ ಕೇಡಕು ಸಂಭವಿಸಿದರೆ ಅವರಾದರೂ ಹಿಂದುಗಳನ್ನೆದುರಿಸುವದು ಧರ್ಮವೇ ಆಗಿದೆ. ಅದೇ ಮೇರೆಗೆ ಹಿಂದೂ ಮುಸಲ್ಮಾನರಿಬ್ಬರೂ ಅನರಿಂದ ತೊಂದರೆಗಳುಂಟಾಗುತ್ತಿದ್ದರೆ ಉಭಯತರೂ ಬಂಧುಗಳಾಗಿ ಆ ತೊಂದರೆಗಳನ್ನು ನೀಗಿಕೊಳ್ಳಲೇಬೇಕಾಗುತ್ತದೆ. ಈ ದೃಷ್ಟಿಯಿಂದವಿಚಾರಿಸಲು ಹಿಂದೂ ಸಂಘಟನೆಯಿಂದ ಹಿಂದೂ ಮುಸಲ್ಮಾನರಲ್ಲಿ ಅನೈಕ್ಯತೆಯುಂಟಾಗಲು ಆಸ್ಪದವೇ ಇಲ್ಲ. ಹಿಂದುಗಳಲ್ಲಿ ಸಹ ಒಂದು ಮತ

ದವರು ಇನ್ನೊಂದು ಮತಕ್ಕೆ ನಿಂದ್ಯವನ್ನಾಡಿದರೆ ಅದನ್ನು ನಿಷೇಧಿಸುವದೂ ಧರ್ಮವೇ ಆಗಿದೆ.

ಎರಡನೆಯ ಆಕ್ಷೇಪವೆಂದರೆ:— "ಹಿಂದೂ ಸಂಘಟನೆಯ ಉದ್ದೇಶವು ಹಿಂದುಗಳಲ್ಲಿ ಬಹುಕಾಲದಿಂದ ರೂಢವಾಗಿರುವ ಸಾಂಪ್ರದಾಯಗಳನ್ನೆಲ್ಲ ಕಿತ್ತಿ ಹಾಕಿ ಹೊಲೆ ಹದಿನೆಂಟು ಜಾತಿಗಳನ್ನೆಲ್ಲ ಒಂದು ಮಾಡಿ ಅವುಗಳನ್ನು ಒಂದೇ ಸಾಮಾನ್ಯ ಧರ್ಮಕ್ಕೆ ಅಧೀನ ಮಾಡಿ ಪರಸ್ಪರರಲ್ಲಿ ಊಟ ಉಡಿಗೆ ಹೆಣ್ಣು ಗಂಡು ಪೂಜೆ ಪುನಸ್ಕಾರ ಮುಂತಾದವುಗಳು ನಡೆಯುವಂತೆ ಮಾಡುವದಿರುತ್ತದೆ." ಈ ಆಕ್ಷೇಪವಾದರೂ ತಪ್ಪಾದುದೆಂದೇ ಹೇಳಬೇಕಾಗುತ್ತದೆ. ಯಾಕಂದರೆ ಸಂಘಟನೆ ಮಾಡುವವರು ಸಾಧ್ಯವಲ್ಲದ ಕೆಲಸಗಳನ್ನುಂಟುಮಾಡಬೇಕೆಂಬ ಇಚ್ಛೆಯುಳ್ಳವರಾಗಿಲ್ಲ.

ಹಿಂದೂ ಮತ ಪಂಥಗಳಲ್ಲಿ ನೆಲಿಸಿದ ಸಾಂಪ್ರದಾಯಗಳೆಲ್ಲವೂ ಸಾಧುವಾದವುಗಳೆಂದು ಹೇಳಲಿಕ್ಕಾಗುವದಿಲ್ಲ. ಅವುಗಳಲ್ಲಿ ಎಷ್ಟೋ ಸಾಂಪ್ರದಾಯಗಳು ಸಾರ್ವಜನಿಕ ಹಾಗೂ ರಾಷ್ಟ್ರಹಿತದ ದೃಷ್ಟಿಯಿಂದ ಕೆಡಜೆಕಾಗಿರುತ್ತವೆ ಅಂಥವುಗಳನ್ನು ಕಿತ್ತೊಗೆದರೆ ತಪ್ಪೇನು? ಆ ದುಷ್ಟ ಸಾಂಪ್ರದಾಯಗಳು ಇದ್ದಕ್ಕಿದ್ದ ಹಾಗೆಯೇ ಇರಬೇಕೆಂದು ನಾವೇಕೆ ಆಗ್ರಹತೊಡಬೇಕು? ಉದಾಹರಣಾರ್ಥವಾಗಿ ನಾವು ಅಸ್ಪೃಶ್ಯರ ಕೂಡ ಕೂಡಿ ಅನ್ನಪಾನ ಶರೀರಸಂಬಂಧ ಪೂಜಾನಮಸ್ಕಾರಾದಿಗಳನ್ನು ಮಾಡುವದು ಒಂದು ವೇಳೆ ಬೇಡ. ಆದರೆ ಅಸ್ಪೃಶ್ಯರನ್ನು ಮುಟ್ಟಬಾರದೇಕೆ? ಉಳಿದ ಹಿಂದುಗಳು ಪರಸ್ಪರ ವ್ಯವಹರಿಸುವಂತೆ ಅವರೊಡನೇಕೆ ವ್ಯವಹರಿಸಬಾರದು? ಅವರನ್ನು ಮುಟ್ಟಬಾರದೆಂಬದಕ್ಕೆ ಕೆಲವರು ಸುಲಭವಾದ ಕಾರಣಗಳನ್ನು ಹೇಳಬಹುದು. ಕೆಲವರು ಮುಟ್ಟಬೇಕೆಂಬುವದಕ್ಕೆ ಅಷ್ಟೇ ಸಬಲ ಕಾರಣಗಳನ್ನು ಹೇಳಬಹುದು. ಅಂದರೆ ಹಿಂದೂ ಜನಾಂಗದ ಹಿತದ ದೃಷ್ಟಿಯಿಂದ ಮತ್ತು ಅದು ಇಡೀ ರಾಷ್ಟ್ರದ ಪ್ರಶ್ನೆಯಾಗಿರುವದರಿಂದ ನಮ್ಮ ಇತರ ಬಂಧುಗಳಂತೆ ಅವರೊಡನೆ ವ್ಯವಹರಿಸಿ ನಮ್ಮ ಅತ್ಯಲ್ಪವಾದ ಔದಾರ್ಯವನ್ನೇಕೆ ತೋರಿಸಬಾರದು? ಅದೇನೂ ಅಸಾಧ್ಯವಾದ ಮಾತಲ್ಲ.

ಇದರಂತೆಯೇ ಕ್ಷುಲ್ಲಕವಾದ ಇನ್ನೂ ಅನೇಕ ಸಾಂಪ್ರದಾಯಗಳನ್ನು ಸಾಮಾನ್ಯಹಿತದ ದೃಷ್ಟಿಯಿಂದ ದೂರೀಕರಿಸಿ ಪರಸ್ಪರರು ಕೂಡಿಕೊಂಡು ವ್ಯವಹರಿಸಲು ಸಾಧ್ಯವದೆ. ಅಸಾಧ್ಯ ಕೆಲಸಕ್ಕೆ ಕೈಹಾಕಿ ಅರಾಜಕತೆ

ಯನ್ನೆಬ್ಬಿಸಬಾರದೇನೋ ನಿಜ. ಆದರೆ ಸಾಧ್ಯವಾದುದನ್ನು ಮಾಡಲೇ ಬೇಕು. ಆದುದರಿಂದ ಹಿಂದುಗಳೆಲ್ಲರೂ ತಮ್ಮ ಮತಪಂಥಗಳನ್ನು ಬಿಟ್ಟು ಒಂದೇ ಧರ್ಮಕ್ಕೆ ಸೇರಬೇಕಾಗುತ್ತದೆಂದು ಯಾರೂ ತಿಳಿದು ಭಯಪಡಬಾರದು. ಒಂದೇ ಧರ್ಮವನ್ನು ಮಾಡುವದು ಸದ್ಯಕ್ಕೆ ಸಾಧ್ಯವಿಲ್ಲ. ಹಿಂದೂ ಸಂಘಟನೆಯ ಧ್ಯೇಯವು ಸಾಧ್ಯವಾದ ದುಷ್ಟಸಾಂಪ್ರದಾಯಗಳನ್ನು ನೀಗಿ ಎಲ್ಲ ಮತಪಂಥಗಳಲ್ಲಿರುವ ಶಿಷ್ಟವಾದ ಸಾಂಪ್ರದಾಯಗಳನ್ನೇಕೀಕರಿಸಿ ಅವುಗಳನ್ನು ಹಿಂದುಗಳೆಲ್ಲರೂ ಅನುಸರಿಸುವಂತೆ ಮಾಡುವದಾಗಿರುತ್ತದೆ.

ಮೂರನೆಯ ಆಕ್ಷೇಪವೆಂದರೆ— "ಹಿಂದೂ ಸಂಘಟನೆಯ ಧ್ಯೇಯವು ಹಿಂದುಗಳು ತಮ್ಮೊಳಗೆ ಬಹುಮತವನ್ನು ಮಾಡಿಸುವದೇ ಇದೆ. ರಾಜಕೀಯ ವಿಷಯಗಳ ಬಗ್ಗೆ ಅಲ್ಪ ಸಂಖ್ಯಾಕ ಸಮಾಜಗಳ ಹಿತಕ್ಕೆ ಪೆಟ್ಟನ್ನು ತಗಲಿಸಿದಂತಾಗುವದು. ಈ ಆಕ್ಷೇಪವಾದರೂ ತಪ್ಪಾದುದೇ. ಯಾಕಂದರೆ ಅಲ್ಪ ಸಂಖ್ಯಾಕರ ಹಿತಚಿಂತನೆಯನ್ನು ಮೊದಲು ಮಾಡಿ ನಂತರ ಬಹು ಸಂಖ್ಯಾಕ ಸಮಾಜದ ಹಿತಾಹಿತಗಳ ಬಗ್ಗೆ ಯೋಚಿಸುವದು ನಮ್ಮ ಕರ್ತವ್ಯವು.

ಒಂದು ದೊಡ್ಡ ಮನೆತನದಲ್ಲಿ ರೊಟ್ಟಿ ಚಟ್ಣಿಯೇ ಸಿಗಲಿ ಅಣ್ಣ ತಮ್ಮಂದಿರು ಕೂಡಿಕೊಂಡಿದ್ದರೆ ಆ ಮನೆತನಕ್ಕೆ ಗೌರವವೂ ವರ್ಚಸ್ಸೂ ಬರುವದು. ಆ ಮನೆಯವರಿಗೆ ಜನರು ಅಂಜಿ ನಡೆಯುವರು. ಆದರೆ ಸ್ವಾರ್ಥಕ್ಕಾಗಿ ಹೊಡೆದಾಡಿ ಅವರು ಬೇರೆಯಾದರೆ ಅವರ ಗೌರವವೇ ನಾಶವಾಗಿ ಅವರನ್ನು ಯಾರೂ ಲಕ್ಷಿಸುವದಿಲ್ಲ. ಆದುದರಿಂದ ಸ್ವಾರ್ಥಸಾಧನೆಗಿಂತ ಕೂಡಿಕೊಂಡಿರುವುದೇ ಮೇಲು. ಕೂಡಿಕೊಂಡು ಅಲ್ಪಸಂಖ್ಯಾಕ ಸಮಾಜದವರಿಗೆ ಔದಾರ್ಯ ತೋರಿಸುವದು ಹಿಂದೂ ಸಂಘಟನೆಗೆ ಭೂಷಣವೇ ಸರಿ. ಆದುದರಿಂದ ಹಿಂದೂ ಸಂಘಟನೆಯ ಧ್ಯೇಯವು ಸ್ವಾರ್ಥಸಾಧನೆಗಾಗಿ ಇರಲಾರದು. ಎಲ್ಲ ಮತಪಂಥಗಳು ಪ್ರೇಮದಿಂದ ಕೂಡಿಕೊಂಡಿರುವದಕ್ಕಾಗಿ ಇರುತ್ತದೆ.

ನಾಲ್ಕನೆಯ ಆಕ್ಷೇಪವೆಂದರೆ— ಹಿಂದೂ ಸಂಘಟನೆಯವರು ಮತಾಂತರ ಹೊಂದಿದ ಜನರನ್ನು ಶುದ್ಧೀ ಸಂಸ್ಕಾರದಿಂದ ತಿರುಗಿ ತಮ್ಮ ಧರ್ಮದಲ್ಲಿ ಸೇರಿಸಿಕೊಳ್ಳಬೇಕೆಂಬ ಧೋರಣವುಳ್ಳವರಾಗಿದ್ದಾರೆ. ಇದರಿಂದ

ಕ್ರಿಸ್ತೀ ಮುಸಲ್ಮಾನ ಮತಗಳಿಗೆ ಮನಸ್ತಾಪವಾಗದಿರದು. ಈ ಆಕ್ಷೇಪವು ಯುಕ್ತವಾದುದೆಂದು ಹೇಳಲಾಗುವದಿಲ್ಲ. ಯಾಕಂದರೆ ಮನುಷ್ಯನಿಗೆ ತನಗೆ ಯುಕ್ತ ಕಂಡ ಬೇಕಾದ ಧರ್ಮದಲ್ಲಿ ಸೇರಲು ಸ್ವಾತಂತ್ರ್ಯವಿರುವದಷ್ಟೇ. ಆದರೆ ಆ ವ್ಯಕ್ತಿಯನ್ನು ಬಲಾತ್ಕಾರದಿಂದಾಗಲೀ, ಆಶೆ ಹಚ್ಚಿಯಾಗಲೀ, ಅವನಿಗೇನಾದರೂ ಆಪತ್ತನ್ನುಂಟುಮಾಡಿಯಾಗಲಿ ಮತಾಂತರ ಮಾಡಿಸುವದು ಪಾಪವು. ಆದರೆ ಯೋಗ್ಯವಾದ ಮತತತ್ವಗಳ ಪ್ರಸಾರ ಮಾಡಿ ಜನರು ತಾವಾಗಿಯೇ ಆ ಮತವನ್ನಂಗೀಕರಿಸುತ್ತೇವೆಂದು ಬಂದರೆ ಅವರನ್ನು ವಿಚಾರಮಾಡಿ ಸೇರಿಸಿಕೊಳ್ಳುವದು ಧರ್ಮವಾಗಿದೆ.

ಆ ಪ್ರಕಾರ ಹಿಂದುಗಳಲ್ಲಿ ಅನೇಕರು ತಮ್ಮತಮ್ಮೊಳಗೆ ಮತಾಂತರ ಹೊಂದಿರುವರು. ಎಷ್ಟೋ ಜನ ಜೈನರು, ಬ್ರಾಹ್ಮಣರು, ಹಾಲು ಮತದವರು ಹಿಂದಕ್ಕೆ ವೀರಶೈವರಾಗಿದ್ದಾರೆ. ಜೈನರು ಬ್ರಾಹ್ಮಣರಾಗಿರುವರು. ಬ್ರಾಹ್ಮಣರು ಜೈನ ಮತದಲ್ಲಿ ಸೇರಿರುವರು. ಹೀಗಿರುವಾಗ ಮತಾಂತರ ಹೊಂದಿದ ನಮ್ಮ ಬಂಧುಗಳು ತಿರುಗಿ ನಮ್ಮ ಧರ್ಮದಲ್ಲಿ ಬಂದರೆ ಉಳಿದ ಧರ್ಮದವರಿಗೆ ಮನಸ್ತಾಪವಾಗುವ ಕಾರಣವಿಲ್ಲ. ಒತ್ತಾಯದಿಂದ ಮತಾಂತರ ಮಾಡದಿದ್ದರೆ ತೀರಿತು.

ಸದಿಚ್ಛೆಯಿಂದ ಹಿಂದುಗಳು ಮತಾಂತರ ಹೊಂದಿದರೆ ಸೈರಿಸುವದು ಧರ್ಮವು. ಆದರೆ ಅಜ್ಞಾನ, ದುರಾಶೆ ಬಲಾತ್ಕಾರಗಳ ಮೂಲಕ ಮತಾಂತರ ಹೊಂದಿದ್ದರೆ ಅಂಥವರನ್ನು ತಿರುಗಿ ಸಾಧುಮಾರ್ಗದಿಂದ ಹಿಂದೂ ಧರ್ಮದಲ್ಲಿ ಸೇರಿಸುವದೇನೂ ಅಪರಾಧವಲ್ಲ. ಹಿಂದೂ ಧರ್ಮದೊಳಗಿನ ಆಯಾಯ ಮತಗಳು ತಮ್ಮ ಉಚ್ಚ ತತ್ವಗಳ ಬಲದಿಂದ ಮತಭ್ರಷ್ಟರನ್ನೂ ಅನ್ಯಮತೀಯರನ್ನೂ ಶುದ್ಧೀಕರಣ ಮಾಡಿ ತಮ್ಮ ಮತದಲ್ಲಿ ಸೇರಿಸಿಕೊಳ್ಳಲು ಯಾವ ಪ್ರತ್ಯವಾಯವೂ ಇಲ್ಲ. ಒಂದು ವೇಳೆ ಶುದ್ಧೀಕರಣವನ್ನು ಬಿಟ್ಟರೆ ಮಹಾ ಅಪರಾಧವಾಗುತ್ತದೆ. ಯಾಕಂದರೆ ಹಿಂದಕ್ಕೆ ೬೦ ಕೋಟಿ ಇದ್ದ ಹಿಂದುಗಳ ಸಂಖ್ಯೆಯು ಈಗ ೨೨ ಕೋಟಿಗೆ ಬಂದಿದೆ. ಇನ್ನು ಮುಂದೆ ಹತ್ತೆಂಟು ಕೋಟಿಗೆಲ್ಲಿ ಬರುವದೋ ಸಂಶಯವಿದೆ. ಆದುದರಿಂದ ಅನ್ಯಮತೀಯರನ್ನು ಹಿಂದುಮತದಲ್ಲಿ ಸೇರಿಸುವದೊತ್ತಟ್ಟಿಗಿರಲಿ, ನಮ್ಮ ಮತಬಾಂಧವರು ನಮ್ಮ ಕೈಬಿಟ್ಟು ಹೋಗದಂತೆ ನೋಡಿಕೊಳ್ಳುವದು ಪ್ರತಿಯೊಬ್ಬ ಹಿಂದೂ ಮತಸ್ಥನ ಪ್ರಾಮುಖ್ಯವಾದ ಕರ್ತವ್ಯವಾಗಿದೆ.

## (೩) ಹಿಂದೂ ಸಂಘಟನೆಯಲ್ಲಿ ವೀರಶೈವರ ಸ್ಥಾನವು.

ವೀರಶೈವ ಮತವು ಹಿಂದೂ ಧರ್ಮದ ಒಂದು ಅಂಗವಾಗಿರುವದಷ್ಟೇ. ಹಿಂದೂ ಸಂಘಟನೆಯ ಉದ್ದೇಶವು ಆಯಾಯ ಮತಗಳಲ್ಲಿರುವ ಉದಾತ್ತ ಹಾಗೂ ಉದಾರವಾದ ತತ್ವಗಳನ್ನು ಒತ್ತಟ್ಟಿಗೆ ಸೇರಿಸಿ ಹಿಂದುಗಳೆಲ್ಲರೂ ಅವುಗಳನ್ನನುಸರಿಸಬೇಕೆಂದಿದ್ದರೆ ಕರ್ನಾಟಕದಲ್ಲಿ ನಮ್ಮ ವೀರಶೈವ ಮತವು ಹಿಂದೂ ಸಂಘಟನೆಗೆ ತನ್ನ ಪಾಲಿನ ಬಹು ಭಾಗವನ್ನು ಸಲ್ಲಿಸಲು ಸಿದ್ಧವಾಗಿಯೇ ಇದೆ. ಸ್ವಲ್ಪ ಸೂಕ್ಷ್ಮ ರೀತಿಯಿಂದ ವಿಚಾರಿಸಿದರೆ ವೀರಶೈವ ಮತವು ಸಂಘಟನೆಗೆ ಒಳ್ಳೆ ಅನುಕೂಲವಾದ ಹಾಗೂ ಪೋಷಕವಾದ ಅಂಗವಾಗಿರುವದೆಂದು ನಿರ್ವಿವಾದವಾಗಿ ಹೇಳಬಹುದು. ವೀರಶೈವ ಸಂಸ್ಕೃತಿ ಸುಧಾರಣೆಗಳೆಲ್ಲ ಲಿಂಗ ಈ ವಿಷಯವಾಗಿ ಇರುವ ದಿವ್ಯ ತತ್ವಗಳ ಮೇಲೆ ಅವಲಂಬಿಸಿವೆ. ಭಕ್ತಿಮಾರ್ಗದಿಂದ ಜನಸಾಮಾನ್ಯರಲ್ಲಿ ಐಕ್ಯತೆಯನ್ನು ಬೆಳಿಸಲಿಕ್ಕೆ ಈ ವೀರಶೈವ ಪದ್ಧತಿಯು ಒಳ್ಳೆ ಚತುರೋಪಾಯವಾಗಿದೆ. ಇದರಿಂದ ಸಮಾಜದಲ್ಲಿ ಎಂಥ ಬಂಧುರವಾದ ಸುವ್ಯವಸ್ಥೆಯು ನಡೆದಿರುವದೆಂಬದನ್ನು ಇಲ್ಲಿ ಆಲೋಚಿಸೋಣ.

"ಲಿಂಗಧಾರಕರೆಲ್ಲರೂ ಸರಿಸಮಾನರು. ಅವರಲ್ಲಿ ಜಾತಿಭೇದವನ್ನೆಣಿಸಕೂಡದು" ಎಂದು ವೀರಶೈವ ತತ್ವವಿರುವದು. ಜಾತಿಭೇದವನ್ನು ಹೊಡೆದು ಹಾಕಿ ಎಲ್ಲರನ್ನು ಒಂದು ಗೂಡಿಸಲು ಇದು ಒಳ್ಳೇ ಸುಗಮವಾದ ಹಾಗೂ ಉತ್ತಮವಾದ ಉಪಾಯವಾಗಿರುವದು. ಲಿಂಗಧಾರೀ ಸ್ತ್ರೀ ಪುರುಷರು ಆತ್ಮೋದ್ಧಾರ ಮಾಡಿಕೊಳ್ಳಲು ಸಮಾನಾಧಿಕಾರಿಗಳಾಗಿರುವದರಿಂದ ಪುರುಷ ಹೆಚ್ಚು ಸ್ತ್ರೀ ಕಡಿಮೆ ಎಂಬ ಸಂಕುಚಿತ ವಿಚಾರಕ್ಕೆ ಆಸ್ಪದವೇ ಇಲ್ಲ. ನಮ್ಮವರು ಭಕ್ತಿ ಎಂಬ ಉಚ್ಚ ತತ್ವವನ್ನು ಎಲ್ಲ ಜಾತಿಗಳ ಸಾಮಾನ್ಯ ಧರ್ಮವನ್ನಾಗಿ ಮಾಡಿದರು. ಆ ಭಕ್ತಿಯ ಕುರುಹೇ ಲಿಂಗವು. ಬಹು ಸಂಖ್ಯಾಕರಾದ ಸಾಮಾನ್ಯ ಜನರಲ್ಲಿ ಕರ್ಮ ಜ್ಞಾನಗಳಿಗಿಂತಲೂ ಭಕ್ತಿ ಭಾವನೆಯೇ ಅಧಿಕವಾಗಿರುತ್ತದೆ. ಆ ಭಕ್ತಿಗೆ ಒಂದು ಮೂರ್ತ ಸ್ವರೂಪವನ್ನು ತಂದು ಕೊಟ್ಟರೆ ಸಾಮಾನ್ಯರು ಹೆಚ್ಚು ಆನಂದವನ್ನು ಪಡೆಯುವರು.

ಈ ಭಕ್ತಿ ಪಂಥದಿಂದ ನಮ್ಮವರು ವರ್ಣಾಶ್ರಮ ಧರ್ಮಗಳನ್ನು ಹೊಡೆದೋಡಿಸಿದರು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತ

ರಾದವರನ್ನೆಲ್ಲ ಒಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಗಳಾದವರನ್ನೆಲ್ಲ ಒಂದೇ ಎಂಬೆ ಕೂಡಲ ಸಂಗಮದೇವಾ" ಎಂದು ಬಸವಣ್ಣನವರು ಹೇಳಿರುವದನ್ನು ನೋಡಿದರೆ ವೀರಶೈವರಲ್ಲಿ ಶಿವಕುಲ ಅರ್ಥಾತ್ ಸಜ್ಜನರ ಸಮೂಹ, ಭವಿಕುಲ ಅರ್ಥಾತ್ ದುರ್ಜನರ ಸಮೂಹ ಎಂಬೆರಡೇ ಭಾಗಗಳಿರುವವೆಂದು ತಿಳಿಯುವದು. ಲಿಂಗಧಾರಿಗಳೆಲ್ಲ ಸಜ್ಜನರಾಗಿರತಕ್ಕದ್ದು. ಸಜ್ಜನರಾದ ಎಷ್ಟೋ ಅನ್ಯಮತೀಯರು ಹಿಂದಕ್ಕೆ ಲಿಂಗಾಯತರಾದರು. ಅಂಥವರಲ್ಲಿ ಪರಸ್ಪರ ಶರೀರ ಸಂಬಂಧಗಳಾಗದಿದ್ದರೂ ಊಟೋಪಚಾರಗಳೂ ಸಮಾಜ ಕಾರ್ಯಗಳೂ ಸಂಘಟಿತವಾಗಿ ಈಗಲೂ ನಡೆದಿರುತ್ತವೆ.

ಸಮುದಾಯಕ್ಕೆ ಸಂಬಂಧಿಸಿದ ಗುಡಿಗುಂಡಾರದೊಳಗಿನ ದೇವರುಗಳಿಗಿಂತಲೂ ವ್ಯಕ್ತಿಗತವಾದ ಇಷ್ಟಲಿಂಗವು ಭಕ್ತಿಯ ದೃಷ್ಟಿಯಿಂದ ಹೆಚ್ಚು ಅನುಕೂಲವು. ಗುಡಿಗಳಲ್ಲಿರುವ ದೇವರುಗಳ ದರ್ಶನ ಲಾಭವು ಅನೇಕರಿಗೆ ದುರ್ಲಭ. ನಮ್ಮ ದೇಹದ ಮೇಲಿನ ಲಿಂಗ ದರ್ಶನವು ನಮಗೆ ಬೇಕಾದ ಹಾಗೆ ಸುಲಭ. ಗುಡಿಯ ದೇವರ ಪೂಜೆ ಮಾಡುವದು ಮತ್ತಿಷ್ಟು ದುರ್ಲಭ. ಬೇರೆ ಬೇರೆ ಗುಡಿಗಳಲ್ಲಿ ಬೇರೆ ಬೇರೆ ದೇವರುಗಳಿರುವದರಿಂದ ಭಕ್ತಿಯು ಹರಿದು ಹಂಚಿ ಹೋಗುವದು. ಇಷ್ಟಲಿಂಗವು ಒಂದೇ ಇರುವದರಿಂದ ಭಕ್ತಿಯು ಏಕಾಗ್ರವಾಗುವದು. ಪರಸ್ಥಳಕ್ಕೆ ಹೋದರೆ ನಮ್ಮ ದೇವರಗುಡಿಯ ದರ್ಶನವು ತಪ್ಪಬಹುದು. ಆದರೆ ಇಷ್ಟಲಿಂಗವು ನಾವು ಹೋದಲ್ಲೆಲ್ಲ ನಮ್ಮ ಮೈಮೇಲೆಯೇ ಇರುವದು. ಗುಡಿಗಳಲ್ಲಿ ಪೂಜೆ ಮಾಡಬೇಕಾದರೆ ಪೂಜಾರಿಗಳ ಕಾಟ ಮತ್ತು ಅನೇಕ ನಿರ್ಬಂಧಗಳು. ನಮ್ಮ ಲಿಂಗ ಪೂಜೆಗೆ ಯಾವ ನಿರ್ಬಂಧವೂ ಇಲ್ಲ. ಆದುದರಿಂದ ಲಿಂಗವೇ ಸರ್ವರಿಗೆ ಭಕ್ತಿಯನ್ನು ಬೆಳೆಯಿಸಲು ಒಳ್ಳೇ ಅನುಕೂಲ. ಆಮೂಲಕ ಸಂಘಟನೆಯನ್ನು ಮಾಡಲು ಹೆಚ್ಚು ನೆಟ್ಟಗೆ.

'ದೇಹವೇ ದೇಗಲು ಪ್ರಾಣವೇ ಲಿಂಗ' ಎಂದು ನಮ್ಮ ಆದ್ಯರು ಹೇಳಿರುವರು. ಆದುದರಿಂದ ಲಿಂಗವೆಂದರೆ ಇಂತಹ ಹೆಸರಿನ ದೇವರೇ ಎಂದು ಯಾರೂ ತಿಳಿಯಕೂಡದು. ಅದು ಪರವಸ್ತುವಿನ ಚಿಹ್ನವಾಗಿದೆ. ಅದಕ್ಕೆ ಇಷ್ಟಲಿಂಗವೆಂಬ ಹೆಸರು. ಅಂದರೆ ಜನರು ತಮಗೆ ಇಷ್ಟವಾದ ದೇವರನ್ನು ಅದರ ಮೇಲೆ ಆರೋಪಿಸಿ ಪೂಜಿಸಲು ಬೇಕಾದಷ್ಟು ಅವಕಾಶವಿದೆ. ಲಿಂಗವೆಂಬುದು ಲಿಂಗಾಯತರಿಗಷ್ಟೇ ಸಂಬಂಧಪಟ್ಟು

ದಲ್ಲ. ಅದು ಬಹು ವ್ಯಾಪಕವಾದುದು. ಆಸ್ತಿಕ ಬುದ್ಧಿಯುಳ್ಳವರಿಗೆಲ್ಲ ಲಿಂಗವು ಬೇಕೇಬೇಕು.

ವೈಷ್ಣವರು ಲಿಂಗವನ್ನು ವಿಷ್ಣುವೆಂದೂ ಶಾಕ್ತರು ಶಕ್ತಿ ಎಂದೂ, ಶೈವರು ಶಿವನೆಂದೂ, ಬೌದ್ಧರು ಬುದ್ಧನೆಂದೂ, ಜೈನರು ಜಿನನೆಂದೂ, ನಾಸ್ತಿಕರು ಪಂಚಭೂತವೆಂದೂ ಆರಾಧಿಸಿ ಆನಂದಪಡಬಹುದು. ತಮ್ಮ ತಮ್ಮ ಧರ್ಮ ಗುರುಗಳೇ ದೀಕ್ಷಾದಿ ವಿಧಾನಗಳಿಂದ ಲಿಂಗಮೂರ್ತಿಯಲ್ಲಿ ಪ್ರಾಣ ಪ್ರತಿಷ್ಠೆಯನ್ನು ಮಾಡಿ ಅದನ್ನು ತಮ್ಮ ಭಕ್ತಾದಿಗಳಿಗೆ ಧಾರಣ ಮಾಡಬಹುದು. ಈ ಲಿಂಗ ಭಕ್ತಿಯ ಸಂಸ್ಕಾರವನ್ನು ಎಲ್ಲ ಮತಪಂಥದವರು ಸರ್ವ ಸಾಮಾನ್ಯ ಧರ್ಮವನ್ನಾಗಿಟ್ಟುಕೊಂಡು ವ್ಯವಹರಿಸಿದರೆ ಹಿಂದುಗಳಲ್ಲಿ ಒಳ್ಳೆ ಬಂಧುರವಾದ ಸಂಘಟನೆಯಾಗುವದೆಂಬದರಲ್ಲಿ ಸಂದೇಹವಿಲ್ಲ.

ಲಿಂಗಧಾರಣೆಯು ಭಕ್ತಿ ಪಂಥವನ್ನೊಳಕೊಂಡಿರುವುದರಿಂದ ಅದರ ತಳಹದಿಯ ಮೇಲೆ ಸಂಘಟನೆಯನ್ನು ಕಟ್ಟುವದರ ಸಾಮಾನವಾದ ಉಪಾಯವು ಬೇರೊಂದಿಲ್ಲ. ಹಿಂದುಸ್ಥಾನವು ಧರ್ಮಭೂಮಿಯಾಗಿರುವದರಿಂದ ಪಾರಮಾರ್ಥಿಕ ದೃಷ್ಟಿಯಿಂದುಂಟಾದ ಸಂಘಟನೆಯು ಬಂಧುರವಾದಷ್ಟು ಬೇರಾವ ಐಹಿಕ ಉಪಾಯಗಳಿಂದಲೂ ಆಗಲಾರದು.

ನಾವು ಸೂಕ್ಷ್ಮವಾಗಿ ವಿಚಾರಿಸಿದರೆ ರಾಜಕಾರಣವು ಸರ್ವಸಾಧಾರಣ ಧರ್ಮವಾಗಲಾರದು. ಬೇರಾಗುವ ಲೌಕಿಕ ಸುಧಾರಣೆಯು ಸಂಘಟನೆಯನ್ನು ಬಂಧುರಮಾಡಲಾರದು. ಕರ್ಮಯೋಗ ಜ್ಞಾನಯೋಗಾದಿಗಳು ಗಡುಚಾದ ಮಾರ್ಗಗಳಾದುದರಿಂದ ಸಂಘಟನೆಗೆ ಅವುಗಳೇನೂ ಸಹಾಯಕಗಳಾಗಲಾರವು. ಆದರೆ ಭಕ್ತಿ ಪಂಥವು ಪಂಡಿತ ಪಾಮರರಿಗೆಲ್ಲರಿಗೂ ಅನುಕೂಲ. ಆದರೆ ನಿರಾಕಾರ ಭಕ್ತಿಯಿಂದೇನೂ ಪ್ರಯೋಜನವಿಲ್ಲ. ಸಾಮಾನ್ಯರು ಹಸುಮಕ್ಕಳಂತೆ ಸಾಕಾರವನ್ನವಲಂಬಿಸಿಕೊಂಡು ಜೀವಿಸಿ ಒಂದು ತರಹದ ಸಾವಧಾನವನ್ನು ಪಡೆಯತಕ್ಕವರು. ಆದುದರಿಂದ ಸಾಕಾರಭಕ್ತಿಯ ಮುಖಾಂತರ ಸಂಘಟನೆಯನ್ನು ಪ್ರಚಾರಗೊಳಿಸುವದು ಎಲ್ಲರಿಗೂ ವಿಹಿತವಾದುದು. ಸಾಕಾರವು ಎಂತಹದೇ ಇರಲಿ, ಅದು ಎಲ್ಲರಿಗೂ ಬೇಕು. ಬೇರೆ ಬೇರೆ ಆಕಾರದ್ದಿರುವದಕ್ಕಿಂತಲೂ ಒಂದೇ ಆಕಾರದ ಮೂರ್ತಿ ಇದ್ದರೆ ಹೆಚ್ಚು ಅನುಕೂಲ.

ಸಾಕಾರ ಭಕ್ತಿಯನ್ನು ಪ್ರಚುರಗೊಳಿಸಬೇಕೆಂದರೆ, ಯಾವ ಮೂರ್ತಿಯ ಆರಾಧನೆ ಮಾಡಬೇಕೆಂಬ ವಾಗ್ವಾದ ಹುಟ್ಟಬಹುದು. ಕೆಲವರು ಶಿವ, ವಿಷ್ಣು, ಮಾರುತಿ, ಶಕ್ತಿ, ನಂದಿ, ನಾಗ ಮೊದಲಾದ ಭಿನ್ನ ಭಿನ್ನ ವಿಗ್ರಹಗಳನ್ನು ಆರಾಧಿಸಬೇಕೆಂದು ಹೇಳಬಹುದು. ಆದರೆ ಈ ದೇವರುಗಳೆಲ್ಲ ಗುಡಿಗಳಲ್ಲಿ ನಿರ್ಬಂಧನೆಗಳಿಂದ ಸಾಮುದಾಯಿಕವಾಗಿ ಪೂಜಿಸಲ್ಪಡಲು ತಕ್ಕವುಗಳೇ ಹೊರತು ವ್ಯಕ್ತಿಗತವಾಗಿ ಸ್ವತಂತ್ರದಿಂದ ಪೂಜಿಸಲು ಅನುಕೂಲವಾದಂಥವುಗಳಲ್ಲ. ಧರ್ಮವು ಸಾಮುದಾಯಿಕವಾಗಿರುವದಕ್ಕಿಂತ ವ್ಯಕ್ತಿಗತವಾಗಿರುವದು ಹೆಚ್ಚು ಲೇಸು. ವ್ಯಕ್ತಿಗಳು ಪ್ರೇರಿತರಾಗಿ ಆತ್ಮಬಲವನ್ನು ಬೆಳೆಯಿಸಿಕೊಂಡು ಸಮಾಜದ ಘಟಕಗಳಾದರೆ ಮತ್ತಿಷ್ಟು ಲೇಸು. ಇಷ್ಟಲಿಂಗ ಪೂಜೆಯು ವ್ಯಕ್ತಿಗತವಾಗಿದ್ದರೂ ವ್ಯವಹಾರಿಕ ದೃಷ್ಟಿಯಿಂದ ಸಮಾಜ ಸ್ವರೂಪವನ್ನು ಹೊಂದಿದೆ.

ಕೊರಳಲ್ಲಿ ಲಿಂಗ ಧರಿಸಿದವನು ಮಾಡುವ ಕಾಯಕಗಳೆಲ್ಲ ಪವಿತ್ರವಾದವುಗಳೆಂದೇ ನಮ್ಮವರು ತಿಳಿಯುವರು. ಲಿಂಗಧಾರಿಯಾದ ಬ್ರಾಹ್ಮಣನು ವೇದವನೋದಿದರೇನು? ಆತನು ಹೆಚ್ಚಿನವನಲ್ಲ. ಲಿಂಗಧಾರಿಯಾದ ಒಬ್ಬ ಅಂತ್ಯಜನು ಮೊಚ್ಚೆಯನ್ನು ಹೊಲಿದರೇನು ? ಆತನು ಕೀಳನಲ್ಲ. ಒಂದು ಸಮಾಜವು ಸರ್ವಾಂಗ ಸುಂದರವಾಗಿ ಬಾಳಬೇಕಾದರೆ ನಾನಾ ತರಹದ ವಿದ್ಯಾ ಉದ್ಯೋಗ ಕಲಾಕೌಶಲ್ಯಗಳು ಬೇಕೇ ಬೇಕು. ಅವುಗಳಲ್ಲಿ ತಾರತಮ್ಯಗಳನ್ನೆಣಿಸಬಾರದೆಂದು ವೀರಶೈವ ತತ್ವವು ಸಾರುತ್ತದೆ. ಹಿಂದುಗಳೆಲ್ಲರೂ ಲಿಂಗಧಾರಿಗಳಾದರೆ ಪರಮಾತ್ಮನ ಶಿರದಿಂದ ಹುಟ್ಟಿದ ಬ್ರಾಹ್ಮಣರು ಶ್ರೇಷ್ಠರೆಂಬ, ಆತನ ಪಾದದಿಂದ ಜನಿಸಿದ ಶೂದ್ರರು ಕನಿಷ್ಠರೆಂಬ ಸಂಕುಚಿತ ವಿಚಾರಗಳು ಬಯಲಾಗಿ ಹೋಗುವವು.

ಬಸವಾದಿ ಪ್ರಮಥರ ಕಾಲಕ್ಕೆ ಡೋಹರ ಕಕ್ಕಯ್ಯ, ಮಾದರ ಹರಳಯ್ಯ, ಮೇದಾರಕೇತಯ್ಯ, ಮಡಿವಾಳ ಮಾಚಯ್ಯ ಹಡಪದ ಅಪ್ಪಣ್ಣ, ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ ಮೊದಲಾದ ಶಿವಶರಣರು ನಾನಾ ಕಾಯಕಗಳನ್ನು ಕೈಕೊಂಡಿದ್ದರೂ ಮಹಾ ತತ್ವವೇತ್ತರಾಗಿದ್ದರು. ಒಂದೇ ಮನೆಯವರಂತೆ ಕೂಡಿಕೊಂಡಿದ್ದು ಶಿವಾನುಭವದ ಸಾರವನ್ನು ಸುರಿಯುತ್ತಿದ್ದರು. ಇದೇ ಅಲ್ಲವೇ ನಿಜವಾದ ಸಂಘಟನೆಯು ? ನಮ್ಮ ಹಿಂದೂ ಸಂಘಟನೆಯಾದರೂ ಈ ಮಾದರಿಯದಾಗಿರಬೇಕು.

ಶಿವಶರಣರಂತೆ ಈಗಿನ ಸುಶಿಕ್ಷಿತರು ನಾಚದೆ ಸಣ್ಣ ಪುಟ್ಟ ಕಾಯಕ ಕಸಬುಗಳನ್ನು ಮಾಡಿದರೆ ಅವರ ಯೋಗ್ಯತೆಗೇನೂ ಭಂಗ ಬರಲಾರದು. ಮೇಲಾಗಿ ನಿರುದ್ಯೋಗದ ಪ್ರಶ್ನೆಯನ್ನು ಬಿಡಿಸಿದ ಪುಣ್ಯವು ಅವರ ಪಾಲಿಗೆ ಬರುವದು. ಜಾತಿಯು ಪರಂಪರಾಗತ ಉದ್ಯೋಗವೆಂಬ ಹುಚ್ಚಿಗೆ ಬೀಳದೆ ವಿಶಾಲವಾದ ಜಗತ್ತಿನಲ್ಲಿ ತನಗೆ ಇಷ್ಟ ತೋರಿದ ಬೇಕಾದದ್ದೊಂದು ಉದ್ಯೋಗವನ್ನು ಕೈಕೊಂಡು ಜೀವಿಸಬೇಕು. ಅದು ಕಡಿಮೆ ಎಂದು ತಿಳಿಯಬಾರದು. ಅದರಿಂದ ಸ್ವಲ್ಪೇ ಗಳಿಕೆಯಾಗುವದೆಂದು ಚಿಂತಿಸಬಾರದು. ಬಹಳ ಗಳಿಸುವ ಉದ್ಯೋಗವೇ ಯಾವಾಗಲೂ ಶ್ರೆಷ್ಠವೆಂದು ಹೇಳಲಿಕ್ಕಾಗದು. ತಮ್ಮ ದೈವಕ್ಕಾಗಲಿ, ಪ್ರಯತ್ನಕ್ಕಾಗಲಿ ಸಿಕ್ಕ ಉದ್ಯೋಗವೇ ಮಹಾ ಪ್ರಸಾದ. ಹೆಚ್ಚಿನ ಆಶೆಯಿಂದ ತೊಳಲುವದು ನಿರರ್ಥಕವಾದುದು. “ಅಂಗದ ಮೇಲೆ ಲಿಂಗವಿಪ್ಪಾತನ ಕಾಯಕವಾವುದೆಂದು ಬೆಸಗೊಂಡೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲಸಂಗಮದೇವಾ ತಲೆದಂಡ ತಲೆದಂಡ” ಎಂಬುದಾಗಿ ಬಸವಣ್ಣನವರು ಲಿಂಗಧಾರಣೆಯಲ್ಲಿ ಕಾಯಕದ ಕುಂದನ್ನು ಅಡಗಿಸಿಬಿಟ್ಟಿರುವರು.

ಒಟ್ಟಿನ ಮೇಲೆ ವೀರಶೈವರು ಹಿಂದೂ ಸಂಘಟನೆಗೆ ಸಲ್ಲಿಸಬಹುದಾದ ಸಂದೇಶಗಳು ಪ್ರಾಮುಖ್ಯವಾಗಿ ಎರಡು ಇದ್ದಂತಾಯಿತು. (೧) ಲಿಂಗಧಾರಣ (೨) ನಾನಾ ತರಹದ ಕಾಯಕಗಳನ್ನು ಮಾಡುವದು. ಮೊದಲನೆಯದು ಪಾರಮಾರ್ಥಿಕ ದೃಷ್ಟಿಯಿಂದ ಬೇಕು. ಎರಡನೆಯದು ಲೌಕಿಕ ದೃಷ್ಟಿಯಿಂದ ಬೇಕು. ಎರಡನೆಯದು ಲೌಕಿಕವಾದರೂ ಪಾರಮಾರ್ಥದ ಸೂತ್ರವನ್ನೊಳಕೊಂಡಿದೆ. ಕರ್ನಾಟಕದ ವೀರಶೈವರು ಹಿಂದೂ ಸಂಘಟನೆಗೆ ಇವೆರಡು ಪ್ರಾಮುಖ್ಯವಾದ ಸಂದೇಶಗಳನ್ನು ಕಳಿಸಿಕೊಡುತ್ತಾರೆ. ಇವೇನೂ ಸ್ವಮತಾಭಿಮಾನದಿಂದ ಹೇಳತಕ್ಕ ಮಾತುಗಳಲ್ಲ. ಇವು ಯುಕ್ತ ಕಂಡರೆ ಸುಜ್ಞರು ಗ್ರಹಿಸಬಹುದು.



# ಪ್ರಭುಲಿಂಗ ಲೀಲೆಯ ಸಂಗ್ರಹದ ವಿಮರ್ಶೆ.

(ಸಂಪಾದಕ.)



ಚಾಮರಸನ ಪ್ರಭುಲಿಂಗಲೀಲೆಯು ವೀರಶೈವ ವಾಙ್ಮಯದಲ್ಲಿ ಒಂದು ಮಹತ್ವದ ಗ್ರಂಥವಾಗಿದೆ. ಇದು ಸುಲಭವಾಗಿ ಸರಳವಾಗಿ ವೀರಶೈವ ಮತತತ್ವಗಳನ್ನು ವಿವರಿಸುವ ಗ್ರಂಥವಾದುದರಿಂದ ಇದು ಜನರ ಮೆಚ್ಚಿಗೆಗೆ ಪಾತ್ರವಾಗಿದೆ. ತಮಿಳು ತೆಲಗು ಭಾಷೆಗಳಲ್ಲಿಯೂ ಕೂಡ ಇದು ಪರಿವರ್ತನೆ ಹೊಂದಿದೆ. ಇಂಥ ಗ್ರಂಥವನ್ನು ಮೈಸೂರ ವಿಶ್ವವಿದ್ಯಾಲಯದವರು ಸುಂದರವಾಗಿ ಅಚ್ಚು ಹಾಕಿಸಿದ್ದಕ್ಕೆ ವೀರಶೈವ ಸಮಾಜವು ಅವರಿಗೆ ಋಣಿಯಾಗಿದೆ.

ಈ ಗ್ರಂಥದ ಸಂಪಾದಕರು ಶ್ರೀ. ಎಮ್. ಎಸ್. ಬಸವಲಿಂಗಯ್ಯ ಎಮ್. ಎ. ಬಿ. ಎಲ್. ಮತ್ತು ಶ್ರೀ ಎಮ್. ಆರ್. ಶ್ರೀನಿವಾಸ ಮೂರ್ತಿ ಬಿ. ಏ. ಇವರು ಇದ್ದು ಶ್ರೀಯುತ ಬಿ. ಎಮ್. ಶ್ರೀಕಂಠಯ್ಯನವರು ಇದಕ್ಕೆ ಒಂದು ಮುನ್ನುಡಿಯನ್ನೂ ಶ್ರೀಯುತ ಶ್ರೀನಿವಾಸ ಮೂರ್ತಿಗಳು ೬೫ ಪುಟಗಳುಳ್ಳ ಒಂದು ವಿಸ್ತೃತ ಪೀಠಿಕೆಯನ್ನೂ ಬರೆದಿರುವರು. ಇದರಲ್ಲಿ ಅವರು ಚಾಮರಸನ ಜೀವನಚರಿತ್ರೆ ಅಲ್ಲಮ ಪ್ರಭುವಿನ ಧಾರ್ಮಿಕ ವಿಚಾರಗಳು, ಕಾವ್ಯದ ವಿಮರ್ಶೆ, ಇವೇ ಮೊದಲಾದ ಉಪಯುಕ್ತ ವಿಷಯಗಳು ಬಂದಿರುವವು. ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ತಿಳಿಯಬೇಕೆನ್ನುವವರು ಈ ಪೀಠಿಕೆಯನ್ನು ಅವಶ್ಯವಾಗಿ ಓದಬೇಕು. ಅಲ್ಲದೆ ಈ ಗ್ರಂಥದಲ್ಲಿ ಹರಿಹರನಿಂದ ರಚಿತವಾದ ಪ್ರಭುದೇವರ ರಗಳೆ, ಮತ್ತು ಅಂತ್ಯದಲ್ಲಿ ಟಿಪ್ಪಣಿಗಳನ್ನೂ ಶಬ್ದಕೋಶವನ್ನೂ ಸಹ ಕೊಟ್ಟಿರುವರು. ಅಲ್ಲದೆ ಆರಂಭದಲ್ಲಿ ಬನವಾಸಿಯ ಮಧುಕೇಶ್ವರ ದೇವಾಲಯದ ಚಿತ್ರವನ್ನೂ ಅಚ್ಚು ಹಾಕಿಸಿರುತ್ತಾರೆ.

ಈ ಪ್ರಕಾರ ನಾಡಿನ ಸಂಸ್ಕೃತಿಯನ್ನು ಪೋಷಿಸುವ ಗ್ರಂಥಗಳನ್ನು ಸಂಶೋಧಿಸುವದೂ ಪ್ರಕಟಿಸುವದೂ ಆಯಾ ಕ್ಲಾಸುಗಳಿಗೆ ಅವುಗಳನ್ನು ಪಠ್ಯಪುಸ್ತಕಗಳಾಗಿ ನಿಯಮಿಸುವದೂ ವಿಶ್ವವಿದ್ಯಾಲಯದ ಕಾರ್ಯಗ

ಳಲ್ಲಿ ಬಹು ಮಹತ್ವದವಾಗಿವೆ. ಈ ಉದ್ದೇಶಗಳನ್ನಿಟ್ಟುಕೊಂಡು ಮೈಸೂರು ವಿಶ್ವವಿದ್ಯಾಲಯದವರು ಈ ಗ್ರಂಥವನ್ನು ಪ್ರಕಟಿಸಿದ್ದು ಅಭಿನಂದನೀಯ [illegible]ೆ.

[illegible]ೀರಶೈವ ವಾಙ್ಮಯದ ಇತಿಹಾಸದಲ್ಲಿ ಬೇರೆಬೇರೆ ಕಾಲಗಳಲ್ಲಿ [illegible]ರಾಭಿವೃದ್ಧಿಯಬಗ್ಗೆ ವಿಶೇಷ ಚಟುವಟಿಕೆಗಳು ಉತ್ಪನ್ನವಾಗುತ್ತ [illegible] ಇಂಥ ಕಾಲಗಳಲ್ಲಿ ಚಾಮರಸನ ಕಾಲವಾದರೂ ಒಂದಾ[illegible] ಅವನ ಕಾಲಕ್ಕೆ ಅನೇಕ ಧಾರ್ಮಿಕ ಮಹಾ ಪುರುಷರೂ ಗ್ರಂಥಕಾ[illegible] ರಾಜಕೀಯ ವ್ಯಕ್ತಿಗಳೂ ಆಗಿಹೋದರು. ಇದು ಹದಿನೈದನೆಯ ಶತಮಾನದ ಮಧ್ಯಕಾಲದಲ್ಲಿ. ವಿಜಯನಗರದ ಅರಸರುಗಳ ಕಾಲದಲ್ಲಿ ಆಗ ಉಂಟಾದ ಮಹತ್ವದ ಗ್ರಂಥಗಳಲ್ಲಿ ಪ್ರಭುಲಿಂಗಲೀಲೆಯು ಒಂದಾಗಿದೆ. ಆದರ ಕರ್ತೃವಾದ ಚಾಮರಸನು ಮೊದಲಿನಿಂದಲೂ ವೀರಶೈವನಾಗಿದ್ದನೆಂದು ಶ್ರೀಯುತ ಶ್ರೀನಿವಾಸ ಮೂರ್ತಿಗಳು ಇದರಲ್ಲಿ ಅಭಿಪ್ರಾಯಪಟ್ಟಿರುತ್ತಾರೆ. ಅವನಿಗೆ ಅನ್ಯಮತ ಕೋಲಾಹಲ, ವೀರಶೈವ ಆಚಾರ ಮಾರ್ಗ ಸಾರೋದ್ಧಾರ ಎಂಬ ಬಿರುದುಗಳಿದ್ದವೆಂತಲೂ ತಿಳಿದು ಬರುತ್ತದೆ.

ಚಾಮರಸನು ಈ ಗ್ರಂಥವನ್ನು ಬರೆದಿದ್ದು ಅಲ್ಲಮನ ಮಹತ್ಕಾರ್ಯಗಳನ್ನು ವರ್ಣಿಸುವ ಸಲುವಾಗಿ. ಈ ಮಹಾ ಪುರುಷನ ವಿಷಯವಾಗಿ ಸಂಪಾದಕರು ಬಹು ಪೂಜ್ಯ ಭಾವನೆಯನ್ನು ತಾಳಿ ಅವನ ಬಗ್ಗೆ ಪೀಠಿಕೆಯಲ್ಲಿ ಬಹು ವಿಸ್ತಾರವಾಗಿ ಬರೆದಿರುತ್ತಾರೆ. ಅದನ್ನು ವಾಚಕರು ಅವಶ್ಯವಾಗಿ ಪರಿಶೀಲಿಸಬೇಕು. ನಿಜವಾಗಿ ಅಲ್ಲಮ ಪ್ರಭುವು ವೀರಶೈವ ಶಿವ ಶರಣರಲ್ಲಿ ಅತ್ಯಂತ ಜ್ಞಾನಿಯೂ ಮಹತ್‌ಪುರುಷನೂ ಆಗಿದ್ದನು. ಅವನು ರಚಿಸಿದ ವಚನಗಳಲ್ಲಿ ಅತ್ಯಂತ ಉಚ್ಚ ಮತ್ತು ದೀರ್ಘ ವಿಚಾರಗಳು ಪ್ರತಿಬಿಂಬಿತವಾಗಿರುತ್ತವೆ. ಬಸವಣ್ಣನವರ ವಚನಗಳಲ್ಲಿ ಮಾಧುರ್ಯವೂ ಕೋಮಲತೆಯೂ ಸಂಪೂರ್ಣ ಭಕ್ತಿಭಾವವೂ ತುಂಬಿ ತುಳುಕುತ್ತಿದ್ದರೆ ಅಲ್ಲಮ ಪ್ರಭುವಿನ ವಚನಗಳಲ್ಲಿ ಗಂಭೀರವಾದ ಪ್ರಗಲ್ಭವಾದ ವಿಚಾರಗಳು ತುಂಬಿರುತ್ತವೆ. ಅಲ್ಲಮ ಪ್ರಭುವು ಕೇವಲ ಜ್ಞಾನಿಮಾತ್ರನಾಗಿರಲಿಲ್ಲ. ಅವನು ಬೋಧಕನೂ ಆಗಿದ್ದನು. ಅವನು ಬಸವೇಶ್ವರನ ಕಾಲದಲ್ಲಿ ದೇಶದಲ್ಲೆಲ್ಲ ಸಂಚರಿಸಿ ಜನರಿಗೆ ಬೋಧಿಸುತ್ತ ಸಂಚಾರಮಾಡಿದನು. ಅವನು ಹೀಗೆ ಸಂಚಾರ ಮಾಡಿದ ವಿವರಗಳೆಲ್ಲ ಈ ಪ್ರಭುಲಿಂಗಲೀಲೆಯ

ಗ್ರಂಥದಲ್ಲಿ ಬಂದಿವೆ. ಬಸವೇಶ್ವರನು ಅಲ್ಲಮನಂತೆ ಕಲ್ಯಾಣವನ್ನು ಬಿಟ್ಟು ದೇಶದಲ್ಲೆಲ್ಲ ಬೋಧಮಾಡುತ್ತ ಸಂಚರಿಸಿದ್ದು ತೋರಿಬರುವದಿಲ್ಲ. ಅವನ್ನು ಕಲ್ಯಾಣಪಟ್ಟಣದಲ್ಲಿಯೇ ಇದ್ದುಕೊಂಡು ಶಿವಾನುಭವಮಂಟಪವನ್ನು ಸ್ಥಾಪಿಸಿ ಶಿವಾನುಭವದ ತತ್ವಗಳನ್ನು ದೃಢಪಡಿಸುವದರಲ್ಲಿ ತೊಡಗಿದ್ದನು. ಆದರೆ ಪ್ರಭುದೇವನು ಇಡೀ ದೇಶದಲ್ಲಿ ಪ್ರಸಾರಕಾರ್ಯ ಮಾಡಿದನು. ಇದು ಅವನ ವೈಶಿಷ್ಟ್ಯವಾಗಿದೆ. ಅವನು ತನ್ನ ಸಂಚಾರದಲ್ಲಿ ಮುಕ್ತಾಯಕ್ಕನಂಥ ದುಃಖಿತರನ್ನು ಕಂಡರೆ ಅವರಿಗೆ ಸಮಾಧಾನಪಡಿಸುವನು. ಸಿದ್ಧರಾಮನಂಥ ಗರ್ವಾಂಧರನ್ನು ಹಣ್ಣಿಗೆ ತರುವನು. ಗೊಗ್ಗಯ್ಯನಂಥ ತೋಟಿಗನಿಗೆ ಪಾರಮಾರ್ಥದ ನಡತೆಯನ್ನು ತಿಳಿಸುವನು. ಈ ಬಗೆಯು ಲೋಕೋದ್ಧಾರ ಕಾರ್ಯಮಾಡುತ್ತ ಅಲ್ಲಮನು ಸಂಚರಿಸಿದನು.

ಶ್ರೀಯುತ ಶ್ರೀನಿವಾಸಮೂರ್ತಿಗಳು ತಮ್ಮ ಈ ಪೀಠಿಕೆಯಲ್ಲಿ ಕರ್ನಾಟಕದ ದೇಶದಲ್ಲಿ ವೀರಶೈವ ಮತೋದ್ಧಾರ ಕೇಂದ್ರಗಳು ಉತ್ತರದಲ್ಲಿ ಸೊನ್ನಲಾಪುರ, ಮಧ್ಯದಲ್ಲಿ ಕಲ್ಯಾಣಪಟ್ಟಣ, ದಕ್ಷಿಣದಲ್ಲಿ ಬಳ್ಳಿಗಾವೆ, ಇವು ಇದ್ದುವೆಂದು ಅಭಿಪ್ರಾಯಪಟ್ಟಿರುವರು. ಈ ಪಟ್ಟಣಗಳಲ್ಲಿ ಅನೇಕ ಧಾರ್ಮಿಕ ಪುರುಷರು ಹುಟ್ಟಿದ್ದು ನಿಜವು. ಆದರೆ ಪ್ರಥಮ ಕೇಂದ್ರವು ಜಯಸಿಂಗನ ರಾಜಧಾನಿಯಾದ ಹೊಟ್ಟಲಕೆರೆಯಾಗಿದ್ದಿತೆಂದು ತೋರುತ್ತದೆ. ಈ ಪಟ್ಟಣದಲ್ಲಿಯೂ ಅದರ ಸಮೀಪದ ಪ್ರದೇಶದಲ್ಲಿಯೂ ದೇವರ ದಾಸಿಮಯ್ಯ, ಶಂಕರದಾಸಿಮಯ್ಯ, ಕೆಂಭಾವಿ ಭೋಗಣ್ಣ, ಮಡಿವಾಳ ಮಾಚಿದೇವ ಮೊದಲಾದವರು ಬಸವಣ್ಣನ ಪೂರ್ವದಲ್ಲಿ ಉದ್ಭವಿಸಿ ಒಂದು ಧಾರ್ಮಿಕ ಕ್ರಾಂತಿಯನ್ನುಂಟು ಮಾಡಿದ ಹಾಗೆ ತೋರುತ್ತದೆ. ಶ್ರೀ ನಿವಾಸಮೂರ್ತಿಗಳು ಹೇಳಿದಂತೆ ಇದೇ ಕಾಲದಲ್ಲಿ ದಕ್ಷಿಣದಲ್ಲಿ ಬನವಸೆ, ಬಳ್ಳಿಗಾವಿ ಈ ಪ್ರದೇಶದಲ್ಲಿ ಪ್ರಭುದೇವ, ಮಹಾದೇವಿಯಕ್ಕ, ಏಕಾಂತದ ರಾಮಯ್ಯ ಆದಯ್ಯ ಮುಂತಾದ ಶಿವಶರಣರು ಉದ್ಭವಿಸಿ, ದೇಶದಲ್ಲಿ ಜಾಗ್ರತೆಯನ್ನುಂಟು ಮಾಡಿದರು. ಹೀಗೆ ದೇಶದಲ್ಲಿ ಚಟುವಟಿಕೆಗಳು ಏಳಲು, ಬಸವೇಶ್ವರನು ಇದೇ ಸಮಯದಲ್ಲಿ ಉದ್ಭವಿಸಿ ಕಲ್ಯಾಣಕ್ಕೆ ಬಂದು ಈ ಕ್ರಾಂತಿಗೆ ಒಂದು ವ್ಯವಸ್ಥಿತ ಸ್ವರೂಪವನ್ನು ಕೊಟ್ಟನು. ಅವನ ಕಾಲದಲ್ಲಿ ಕಲ್ಯಾಣವೇ ಮತೋದ್ಧಾರ ಕಾರ್ಯದಲ್ಲಿ ಮಹತ್ವದ ಕೇಂದ್ರವಾಯಿತು. ಆದ್ದರಿಂದ ಕಲ್ಯಾಣವು ಧರ್ಮ

ಜಾಗ್ರತಿಯ ೩ ನೇ ಕೇಂದ್ರವೆನ್ನಬಹುದು. ಆದರೆ ಮುಂದೆ ಕಲ್ಯಾಣ ಪಟ್ಟಣವು ಹಾಳಾದ ಬಳಿಕ, ವೀರಶೈವ ಮತೋದ್ಧಾರ ಕೇಂದ್ರವು ವಿಜಯನಗರವಾಯಿತೆಂದು ತೋರುತ್ತದೆ. ಅಲ್ಲಿ ಚಾಮರಸ, ಜಕ್ಕಣ್ಣ ಲಕ್ಕಣ್ಣ ಮೊದಲಾದ ಮತೋದ್ಧಾರಕರು ಉತ್ಪನ್ನರಾದರು. ಮುಂದೆ ವಿಜಯನಗರವು ಹಾಳಾದ ಬಳಿಕ ಈ ಕೇಂದ್ರವು ಕೆಳದಿ ಅಥವಾ ಬಿದನೂರ ಪಟ್ಟಣಗಳಿಗೆ ಬಂದಿತೆಂದು ಹೇಳಬಹುದು. ಈ ಪ್ರಕಾರ ಧಾರ್ಮಿಕ ಚಟು ವಟಿಕೆಗಳು ಕಾಲಕಾಲಕ್ಕೆ ಉತ್ಪನ್ನವಾದವು. ಆದರೆ ಆಯಾ ಕಾಲಗಳಲ್ಲಿ ಧರ್ಮದ ಸ್ವರೂಪು ಮತ್ತು ಅದರಲ್ಲಿಯ ವಿಚಾರಗಳು ಮತ್ತು ಪದ್ಧತಿ ಗಳು ಕೆಲಮಟ್ಟಿಗೆ ಮಾರ್ಪಾಡುಗಳನ್ನು ಹೊಂದುತ್ತ ಬಂದ ಹಾಗೆ ತೋರಿ ಬರುತ್ತದೆ. ಹೊಟ್ಟಲಕೆರೆಯ ರಾಜಧಾನಿಯಲ್ಲಿ ಉಂಟಾದ ಧಾರ್ಮಿಕ ವಿಚಾರಗಳು ಕಲ್ಯಾಣಪಟ್ಟಣದ 'ಮಂಟಪ' ದಲ್ಲಿ ಮಾರ್ಪಾಡು ಗಳನ್ನು ಹೊಂದಿದವು. ಮುಂದೆ ಧಾರ್ಮಿಕ ವರ್ಗಗಳು ಪ್ರಬಲವಾದ ಹಾಗೆ ಸಮಾಜದ ಸ್ವರೂಪು ವಿಜಯನಗರ ಮತ್ತು ಕೆಳದಿ ಈ ಕೇಂದ್ರ ಗಳಲ್ಲಿ ಮತ್ತಿಷ್ಟು ಬದಲಾವಣೆ ಹೊಂದಿತು. ಆದರೆ ಈ ಎಲ್ಲ ಕಾಲಗಳಲ್ಲಿ ಉತ್ಪನ್ನವಾದ ಕ್ರಾಂತಿಗಳಲ್ಲಿ ಬಸವೇಶ್ವರನ ಕಾಲದಲ್ಲಿ ಉತ್ಪನ್ನವಾದ ಧರ್ಮದ ಸ್ವರೂಪು ಮತ್ತು ವಾಙ್ಮಯವು ಹೆಚ್ಚಿಗೆ ತೇಜಃಪುಂಜವೂ, ಉದಾತ್ತವೂ ಆಗಿತ್ತೆಂಬದು ನಿಃಸಂದೇಹವಾದದ್ದು.

ಅಲ್ಲಮನ ಚರಿತ್ರೆಯು ವಿಷಯವಾಗಿ ಶ್ರೀಯುತ ಶ್ರೀನಿವಾಸಮೂರ್ತಿ ಗಳು ತಮ್ಮ ಈ ಉಪೋದ್ಘಾತದಲ್ಲಿ ವಿಶೇಷವಾಗಿ ಚರ್ಚಿಸಿರುವರು. ಶಿವ ಶರಣರ ಕಥೆಗಳು ಕಾಲಕಾಲಕ್ಕೆ ಮಾರ್ಪಾಡುಗಳನ್ನು ಹೊಂದುತ್ತಲೇ ಬಂದಿವೆ. ಅವುಗಳ ನಿಜಾಂಶವನ್ನು ಕಂಡುಹಿಡಿಯುವದು ದುಸ್ತರವು. ಇದು ಪ್ರಭುದೇವರ ವಿಷಯವಾಗಿಯೂ ಸಂಭವಿಸಿರುತ್ತದೆ. ಈ ಸ್ಥಿತಿ ಯಲ್ಲಿ ಪುರಾತನ ಕಾಲದ ಗ್ರಂಥಗಳಲ್ಲಿ ಇರತಕ್ಕ ಚರಿತ್ರೆಗಳಿಗೆ ನಾವು ಮಹತ್ವಕೊಡಬೇಕಾದುದು ಯೋಗ್ಯವು. ಆದ್ದರಿಂದ ಹರಿಹರದೇವನು ಅಲ್ಲಮನ ರಗಳೆಯಲ್ಲಿ ಕಾಣಿಸಿದ ವಿಷಯಗಳಿಗೆ ನಾವು ಮಹತ್ವವನ್ನು ಕೊಡಲೇ ಬೇಕಾಗಿದೆ. ಅಲ್ಲಮನು ಆರಂಭದಲ್ಲಿ ಒಬ್ಬ ಸಾಧಾರಣ ಲೌಕಿಕನಂತೆ ವರ್ತಿಸಿ ಆ ಮೇಲೆ ವೈರಾಗ್ಯಶಾಲಿಯಾಗಿ ಮಹತ್ತರ ಕಾರ್ಯ ಮಾಡಿದ್ದಾದರೆ ಅವನು ಮಾಡಿದ ಕಾರ್ಯಗಳ ಮಹತ್ವಕ್ಕೆ ಏನೂ ಕುಂದು ಬರಲಾರದು. ಹರಿಹರನು ವರ್ಣಿಸಿದ ವಿಷಯಗಳು ತಪ್ಪೆಂದು

ಸ್ಪಷ್ಟವಾಗಿ ಆಧಾರಗಳು ದೊರೆಯುವ ತನಕ ಅವು ಸತ್ಯವಾದುವೆಂದು ನಂಬುವದರಲ್ಲಿ ಯಾವ ತಪ್ಪು ಇರುವದಿಲ್ಲೆಂದು ನಮಗೆ ತೋರುತ್ತದೆ.

ಶ್ರೀಯುತ ಶ್ರೀನಿವಾಸಮೂರ್ತಿಗಳು ವೀರಶೈವ ಧರ್ಮದ ತತ್ವಗಳ ವಿಷಯವಾಗಿ ವಿಸ್ತಾರವಾಗಿ ಈ ಪೀಠಿಕೆಯಲ್ಲಿ ವಿವರಿಸಿರುವರು. ಅವುಗಳನ್ನು ವಾಚಕರು ಅವಶ್ಯವಾಗಿ ಓದಿ ತಿಳಿಯಬೇಕೆಂದು ನಾವು ಸೂಚಿಸುತ್ತೇವೆ.

ಈ ಗ್ರಂಥದಲ್ಲಿ ಪ್ರಭುಲಿಂಗಲೀಲೆಯ ಕಾವ್ಯದ ಸಾರವು ೧೩೦ ಪುಟಗಳಲ್ಲಿ ಸುವ್ಯವಸ್ಥಿತವಾಗಿ ಸುಬೋಧವಾಗಿ ಹೇಳಲ್ಪಟ್ಟಿದೆ. ಇದರಿಂದ ಒಂದು ದೊಡ್ಡ ಕಾವ್ಯವನ್ನು ಓದುವ ಭಾರವು ಓದುಗರಿಗೆ ಕಡಿಮೆಯಾಗಿದೆ. ಇದರಲ್ಲಿ ಮೂಲ ಕಾವ್ಯದಂತೆ ೧೫ ಗತಿಗಳು ಇವೆ. ಮೂಲಕಾವ್ಯದ ಒಂದು ಮೂರಾಂಶ ಭಾಗವು ಮಾತ್ರ ಈ ಪುಸ್ತಕದಲ್ಲಿ ಬಂದರೂ ಅದರಲ್ಲಿ ಅಸ್ಪಷ್ಟತೆಯು ಏನೂ ಉಂಟಾಗಿರುವದಿಲ್ಲ.

ಗ್ರಂಥದ ಮುದ್ರಣವೂ ಬಾಯಿಂಡೂ ಸುಂದರವಾಗಿವೆ. ೧೭೫ ಪುಟಗಳುಳ್ಳ ಈ ಗ್ರಂಥದ ಬೆಲೆ ೧ ರೂಪಾಯಿ ಮಾತ್ರವಿದೆ. ಈ ಪುಸ್ತಕವು ಶಾಲೆ-ಕಾಲೇಜುಗಳಲ್ಲಿ ಪಠ್ಯಪುಸ್ತಕವನ್ನಾಗಿ, ಉಪಯೋಗಿಸಲು ಯೋಗ್ಯವಾಗಿದೆ.

---

# ಉರಿಲಿಂಗಪೆದ್ದಿಯ ವೃತ್ತಾಂತ.

( ಲೇಖಕ:- ಫ. ಗು. ಹಳಕಟ್ಟಿ ವಿಜಾಪುರ. )



ಉರಿಲಿಂಗಪೆದ್ದಿಯ ವಚನಗಳು ಶಿವಾನುಭವದ ಈ ತಿಂಗಳ ಸಂಚಿಕೆಯಲ್ಲಿ ಪೂರ್ಣವಾಗಿರುತ್ತವೆ. ಅವನ ವಚನಗಳಲ್ಲಿ ಒಂದು ವೈಶಿಷ್ಟ್ಯವಿದೆ. ಅವನ ಪ್ರತಿಯೊಂದು ವಚನದಲ್ಲಿ ವೇದಾಗಮ, ಪುರಾಣ, ಉಪನಿಷತ್, ಮೊದಲಾದ ಸಂಸ್ಕೃತಗ್ರಂಥದೊಳಗಿನ ಅವತರಣಗಳು ಹೇರಳವಾಗಿರುವದನ್ನು ವಾಚಕರು ಕಾಣಬಹುದು. ಇವನಷ್ಟು ವಿಪುಲವಾಗಿ ಪುರಾತನ ಆಧಾರ ಗ್ರಂಥಗಳನ್ನು ತೆಗೆದುಕೊಂಡು ತತ್ವಸಮರ್ಥನ ಮಾಡಿದವರು ವಚನಕಾರರಲ್ಲಿ ಬಹು ವಿರಳ. ಉರಿಲಿಂಗಪೆದ್ದಿಯು ಪುರಾತನ ಕಾಲದಿಂದ ನಡೆದುಬಂದ ಪದ್ಧತಿಗೂ ಶಿವಶರಣರ ಮಾರ್ಗಕ್ಕೂ ಭೇದವಿಲ್ಲೆಂದು ತೋರಿಸಲು ತನ್ನ ವಚನಗಳಲ್ಲಿ ಪ್ರಯತ್ನಿಸಿರುವದು ಸ್ಪಷ್ಟವಾಗಿರುತ್ತದೆ. ಈ ಕಾರಣಕ್ಕೋಸ್ಕರ ಉರಿಲಿಂಗಪೆದ್ದಿಯ ವಚನಗಳಿಗೆ ವಚನವಾಙ್ಮಯದಲ್ಲಿ ಒಂದು ವಿಶಿಷ್ಟಸ್ಥಾನವು ಉಂಟಾಗಿರುತ್ತದೆ.

ಉರಿಲಿಂಗಪೆದ್ದಿಯು ಬಸವಾದಿ ಪ್ರಮಥರ ಕಾಲದಲ್ಲಿ ಪ್ರಸಾರಹೊಂದಿದ ಧರ್ಮತತ್ವಗಳನ್ನೇ ತನ್ನ ವಚನಗಳಲ್ಲಿ ನಿರೂಪಿಸಿರುವನು ಅವರ ಮಾರ್ಗಕ್ಕೂ ಈ ವಚನಕಾರನ ಮಾರ್ಗಕ್ಕೂ ಏನೂ ಭಿನ್ನತೆ ಇರುವದಿಲ್ಲ. ಶಿವಶರಣರ ಉದಾತ್ತ ಮತ್ತು ಉದಾರ ಭಾವವುಳ್ಳ ಅಭಿಪ್ರಾಯಗಳು ಉರಿಲಿಂಗಪೆದ್ದಿಯ ವಚನಗಳಲ್ಲಿ ಬಹು ಸ್ಫುಟವಾಗಿ ಬಂದಿವೆ. ಅವನ ವಚನಗಳು ವಾಚಕರಿಗೆ ಸ್ವಲ್ಪ ಉದ್ದವಾಗಿ ತೋರಬಹುದು. ಆದರೆ ಅವನು ಕೈಕೊಂಡ ನಿರೂಪಣಾ ಪದ್ಧತಿಯ ಮೂಲಕ ಹೀಗಾಗುವದು ಸ್ವಾಭಾವಿಕವೇ ಇರುತ್ತದೆ. ಆದರೂ ಅದರಲ್ಲಿ ಓಜಸ್ಸೂ ಸ್ಫೂರ್ತಿಯೂ ಸ್ವಲ್ಪಾದರೂ ಕಡಿಮೆ ಇರುವದಿಲ್ಲ. ಅವನ ವಚನಗಳಲ್ಲಿ ವಕ್ತೃತ್ವದ ಪ್ರವಾಹವು ತುಂಬಿಹರಿಯುತ್ತಲಿರುತ್ತದೆ. ಈ ರೀತಿಯು ಘನಲಿಂಗನ ವಚನಗಳಲ್ಲಿಯೂ ತೋರಿಬರುವದುಂಟು. ಆದರೆ ಉರಿಲಿಂಗಪೆದ್ದಿಯ ವಚನಗಳಲ್ಲಿ ಬಸವಾದಿ ಶಿವಶರಣರ ವಚನಗಳಲ್ಲಿರುವಂತೆ ಮಾಧುರ್ಯವೂ ಸ್ವಭಾವೋಕ್ತಿಯೂ ಬಹು ಸ್ಪಷ್ಟರೀತಿಯಿಂದ ಕಂಗೊಳಿಸುತ್ತವೆ. ಘನಲಿಂಗನು ಗಡುಚಾದ ದೊಡ್ಡದೊಡ್ಡ ವಚನಗಳನ್ನು ಹಾಕಿ ಗಾಂಭೀರ್ಯವನ್ನು ತನ್ನ ವಚನಗಳಲ್ಲಿ ಉಂಟುಮಾಡಿರುವನು.

ಆದರೆ ಕನ್ನಡದ ಬಿಡಿನುಡಿಗಳುಳ್ಳ ಉರಿಲಿಂಗಪೆದ್ದಿಯ ವಚನಗಳು ಸಂಸ್ಕೃತ ದಲ್ಲಿ ಹೆಣೆದುಕೊಂಡು ಹೆಚ್ಚು ಹೃದಯಂಗಮವಾಗಿರುವವು.

ಈ ರೀತಿಯಾಗಿ ವಚನಗಳನ್ನು ರಚಿಸಿದ ಉರಿಲಿಂಗಪೆದ್ದಿಯು ಯಾರು ಮತ್ತು ಎಲ್ಲಿಯವನು ಎಂಬದನ್ನು ತಿಳಿದುಕೊಳ್ಳುವ ಅಭಿಲಾಷೆ ಹುಟ್ಟು ವದು ಸ್ವಭಾವಿಕವದೆ. ಅವನ ವಿಷಯವಾಗಿ ಗ್ರಂಥಗಳಲ್ಲಿ ನಮಗೆ ದೊರೆದ ಕೆಲವು ಸಂಗತಿಗಳನ್ನು ನಾವು ಇಲ್ಲಿ ಕೊಡುತ್ತೇವೆ. ಹಾಗೆಯೇ ನಮಗೆ ದೊರೆದ ಕೆಲವು ಐತಿಹ್ಯಗಳನ್ನೂ ಇಲ್ಲಿ ಉಲ್ಲೇಖಿಸುತ್ತೇವೆ. ಅವುಗಳ ಮೇಲಿಂದ ವಚನಕಾರನ ಚರಿತ್ರೆಯಮೇಲೆ ಯಾವ ಪ್ರಕಾಶವು ಬೀಳು ತ್ತದೆಂಬದನ್ನು ಕಂಡುಹಿಡಿಯುವ ಭಾರವನ್ನು ನಾವು ಸಂಶೋಧಕರ ಕಡೆಗೆ ಬಿಟ್ಟುಕೊಡುತ್ತೇವೆ.

ಉರಿಲಿಂಗಪೆದ್ದಿಯು ಉರಿಲಿಂಗದೇವನೆಂಬ ಇನ್ನೊಬ್ಬ ಶಿವಶರಣ ನಿಗೆ ಶಿಷ್ಯನಾಗಿದ್ದನೆಂದು ತಿಳಿದುಬರುತ್ತದೆ. ಉರಿಲಿಂಗದೇವನು ಕೂಡ ಒಬ್ಬ ಬಹು ಪ್ರಸಿದ್ಧನಾದ ಪುರಾತನ ವಚನಕಾರನಿರುವನು. ಇವನ ಅನೇಕ ವಚನಗಳು ವಚನಶಾಸ್ತ್ರಸಾರ ಗ್ರಂಥದಲ್ಲಿ ಕೊಡಲ್ಪಟ್ಟಿವೆ. ಅವನ ವಚನಗಳಾದರೂ ಬಹು ಸುಂದರವಾದವುಗಳು. ಈ ಉಭಯ ಗುರು-ಶಿಷ್ಯರ ಚರಿತ್ರೆಗಳು ಪರಸ್ಪರ ಸಂಬಂಧಪಟ್ಟಿರುವದರಿಂದ ಅವೆರಡನ್ನೂ ನಾವು ಇಲ್ಲಿ ಕೊಡುತ್ತೇವೆ. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾ ಕರದಲ್ಲಿ ಕೊಡಲ್ಪಟ್ಟ ಚರಿತ್ರಗಳನ್ನೇ ನಾವು ಇಲ್ಲಿ ಕೊಟ್ಟಿದ್ದೇವೆ.

## ಉರಿಲಿಂಗದೇವ.

ಉರಿಲಿಂಗ ದೇವನು ಆರಾಧ್ಯ ಸಂತತಿಯವನಾಗಿ ಲಿಂಗ ದೀಕ್ಷೆ ಯನ್ನು ಹೊಂದಿ, "ಅವಸಿಕಂದಾರ" ಎಂಬ ಪುರದಲ್ಲಿ ಇರುತ್ತಿದ್ದನು. ಅವನು "ಐದನೆಯ ಗುರಸ್ಥಲ"ಕ್ಕೆ ಯೋಗ್ಯನಾಗಿ, ದೀಕ್ಷೆಯನ್ನು ಮಾಡುತ್ತ ಶಿವಲಿಂಗಾರ್ಚನೆಯಲ್ಲಿ ನಿಷ್ಠಾಪರನಾಗಿರುತ್ತಿದ್ದನು. ಅವನ ನಿಷ್ಠೆಯಲ್ಲಿ 'ಶರಣ ಸತಿ, ಲಿಂಗ ಪತಿ' ಎಂಬ ಭಾವವು ಅತ್ಯಂತವಾಗಿ ಮೂಡಿಕೊಂ ಡಿತ್ತು. ಆದ್ದರಿಂದ ಅವನು ಲಿಂಗ ಪೂಜೆಯನ್ನು ಪ್ರಾರಂಭಿಸಿ, ಅದು ಮುಗಿಯುವ ತನಕ ತಾನು ಸ್ತ್ರೀರೂಪಾಗಿ ಲಿಂಗವು ಪುರುಷ ರೂಪಾಗಿ ಪೂಜಾದಿ ಕ್ರಿಯೆಗಳನ್ನು ಗುಪ್ತವಾಗಿ ಜರುಗಿಸುತ್ತಿದ್ದನು. ಅವನ ಲಿಂಗ ಪೂಜಾ ಕಾಲದಲ್ಲಿ ಹುಲಿ, ಕರಡಿ, ಸಿಂಹ, ಸಿಡಿಲು, ಉರಗ, ಕಿಚ್ಚು ಎದ್ದು

ಬಂದರೂ ಕೂಡ ಚಿತ್ತಚಂಚಲನಾಗದೆ, ಅದರಲ್ಲಿಯೇ ಮಗ್ನನಾಗಿರುತ್ತಿದ್ದನು. ಒಂದು ಕಾಲದಲ್ಲಿ ಒಂದು ನದೀತಟಾಕದಲ್ಲಿ ಉರಿಲಿಂಗದೇವನು ಒಂದು ಚಪ್ಪರವನ್ನು ಹಾಕಿಸಿ, ಲಿಂಗವನರ್ಚಿಸುವಲ್ಲಿ ಮೈಮರೆತು ಪರವಶನಾಗಿರಲು, ಜೈನರು ಈತನ ಲಿಂಗನಿಷ್ಠೆಯನ್ನು ನೋಡಬೇಕೆಂದು ಆ ಚಪ್ಪರಕ್ಕೆ ಕಿಚ್ಚನ್ನು ಇಕ್ಕಿದರು. ಆಗ ದಳ್ಳುರಿಯು ಹತ್ತಿ ಉರಿಯುತ್ತ ಬರಲು ಉರಿಲಿಂಗದೇವನು ಅತ್ತಿತ್ತ ನೋಡದೆ, ಶಿವಧ್ಯಾನದಲ್ಲಿ ನಿಶ್ಚಿತನಾಗಿರಲು, ಸುತ್ತಲೂ ಬಂದ ಕಿಚ್ಚು ತಾನೇ ನೊಂದಲು ಜೈನರು ಅದನ್ನು ಕಂಡು ಅಪರಾಧವಮ್ಮದೆಂದು ಅವನನ್ನು ಸ್ತುತಿಸಲು ಅವನು ಅವರಿಗೆ ಅಭಯವನ್ನಿತ್ತು ಸಲಹಿದನು. ಈ ಪ್ರಕಾರ ಉರಿಲಿಂಗದೇವನ ಒಂದು ಕಥೆಯು ಇದೆ.

## ಉರಿಲಿಂಗಪೆದ್ದಿ.

ಉರಿಲಿಂಗಪೆದ್ದಿಯ ಚರಿತ್ರೆಯು ಭೈರವೇಶ್ವರ ಕಾವ್ಯದ ಕಥಾಸೂತ್ರದಲ್ಲಿರುವದನ್ನೇ ಶಬ್ದಶಃ ಕೆಳಗೆ ಕೊಡುತ್ತೇವೆ.

"ಅವಸೆಕಂದಾರ ಎಂಬ ಪಟ್ಟಣದಲ್ಲಿ ಉರಿಲಿಂಗದೇವರೆಂಬ ಆಚಾರ್ಯರು ವೀರಶೈವಾಚಾರ ಮತಕ್ಕೆ ಗುರುವಾಗಿರುತ್ತಾ ಭಕ್ತ ಜನಕ್ಕೆ ಉಪದೇಶವಂ ಮಾಡುತ್ತಾ ಇಪ್ಪತ್ತೊಂದು ಗುರುಸಾಂಪ್ರದಾಯಕ್ಕೆ ಯೋಗ್ಯರಾಗಿ ನಂದವಾಡದಲ್ಲಿ ಸೂರಯ್ಯನೆಂಬ ಭಕ್ತನಿಗೆ ಉಪದೇಶವಂ ಮಾಡುವಲ್ಲಿ, ಪಂಚಕಳಶ ದೀಕ್ಷಾಮಂಟಪ ರಂಗವೋಲೆ ಮುಖ್ಯವಾದ ಭಕ್ತ ಸಂಭ್ರಮದಿಂದ ದೀಕ್ಷೆಯಂ ಮಾಡುತ್ತಿರಲು, ಇತ್ತ ಪೆದ್ದಣ್ಣನೆಂಬವನಿರ್ದು ರಾತ್ರಿಯಲ್ಲಿ ಕಳವಿಗೆ ಪೋಪೆನೆಂದು ಪೋಗಿ ಮಾಳಿಗೆಯನೇರಿ, ಉರಿಲಿಂಗದೇವರು ಉಪದೇಶವ ಮಾಡುವದಕ್ಕೆ ಮುನ್ನ ಅವರು ಶಿವಪೂಜೆಯಂ ಮಾಡುವಲ್ಲಿ ಆರು ಕಾಣಬಾರದೆಂದು ಬಾಗಿಲವನಿಕ್ಕಿಸಿ, ಅಷ್ಟವಿಧ ಪೂಜೆ, ಷೋಡಶೋಪಚಾರವ ಮಾಡುವಲ್ಲಿ 'ಶರಣ ಸತಿ ಲಿಂಗ ಪತಿ' ಎಂಬ ಭಾವದಿಂದ ಲಿಂಗ ಪುರುಷರೂಪಾಗಿ, ಶರಣ ತಾನು ಸತಿರೂಪಾಗಿ ಪೂಜೆಯಂ ಮಾಡುವಲ್ಲಿ, ಉರಿಲಿಂಗದೇವನೇ ಚಲುವನು, ಉರಿಲಿಂಗದೇವನೇ ಗರುವನು, ಉರಿಲಿಂಗದೇವನೇ ಪಿರಿಯನು ಎಂದು ಆಲಿಂಗನವ ಮಾಡಿ, ಕಾಮುವು ಲಿಂಗದೇವ, ಕಾಮಿನಿ ನಾನು, ಎರಡು ಗುರಿ ಒಂದಾಗುವಂತೆ ಸರಳೆಸುಗೆಯ ಮಾಡು ಕಂಡಾ

ಕಾವು, ನೀನು ಬಿಲ್ಲುಗಾರನಾಗಿ ಸರಳೆರಡು ಒಂದಪ್ಪುದೆಂದು ಕಂಡಾ ಕಾವು, ಎನಗೆಯೂ ಉರಿಲಿಂಗದೇವಗೆಯೂ ತೊಟ್ಟಿಸೆಯೆ ಅಸು ಒಂದಾದೊಡೆ ಬಲ್ಲಾಳು ನೀನಹೆ ಎಲೋ ಕಾವು, ಎಂದು ಲಿಂಗಪೂಜೆಯಲ್ಲಿ ದಶಾವಸ್ಥೆಯಿಂದ ಇಂತಪ್ಪ ವಚನವಂ ಪಾಡಿ ಶಿವಪೂಜೆಯ ಮುಗಿದು ದೀಕ್ಷಾ ಮಂಟಪಕ್ಕೆ ಬರುವದರೊಳಗೆ ಮಾಳಿಗೆಯ ಮೇಲೇರಿ ಬೆಳಕಿಂಡಿಯಿಂದ ನೋಡಿ ಅವರು ದೀಕ್ಷೆಯ ಮಾಡುವ ಕ್ರಮವನ್ನೆಲ್ಲ ಮೇಲಿಂದ ನೋಡಿ ಉರಿಲಿಂಗ ದೇವರಿಗೆ ಶಿಷ್ಯರು ನಮಿಸುವುದ ತಾ ಕಂಡು ಶರಣೆಂದು ಮಾಳಿಗೆಯನಿಳಿದು ಪೋಗಿ ಬೆಳಗಾಗಲು ಪೆದ್ದಣ್ಣನು ಉರಿಲಿಂಗ ದೇವರ ಮನೆಗೆ ಅವರು ತರಹೇಳದೆ ತಾನೇ ಬಂದು 'ಹೊರೆ ಹುಲ್ಲು ಕಟ್ಟಿಗೆಯ ಒಂದು ಹೊರೆ ದಿನಂಪ್ರತಿಯಲ್ಲಿ ಹಾಕುತ್ತಿರಲು ಕೆಲವು ದಿನದ ಮೇಲೆ "ಏನು ಬೇಕು ಬೆಲೆಯ ತೆಗೆದುಕೋ" ಎನಲು, ಅವನು ಎನಗೆ ಲಿಂಗವಿಲ್ಲೆಂದು ಬರಬೇಡ ಎಂಬುತಾರೆ ಎಂಬುದಂ ತಿಳಿದು, ಮತ್ತೊಂದು ದಿನಂ ಕಟ್ಟಿಗೆಯ ತರಲು, ಏನು ಬೇಕೆಂದು ಕೇಳಲು, ಎಲೆ ಸ್ವಾಮಿ ಎನಗೆ ಲಿಂಗವ ಧರಿಸಿ ನಂದಿವಾಡದ ಸುರೇಶ ಭಕ್ತಂಗೆ ದೀಕ್ಷೆಯ ಮಾಡಿದಂತೆ ಮಾಡೆಂದು ಪೇಳಲು ಅದು ಹೇಗೆಂದು ಉರಿಲಿಂಗದೇವರು ಕೇಳಲು ತಾ ಕಂಡುದ ಪೇಳಲು, ಅವರು ಸುಮ್ಮನಿರಲು, ನಿತ್ಯದಲ್ಲಿ ಹುಲ್ಲುಕಟ್ಟಿಗೆಯಂ ತರುತ್ತಿರಲು ಲಿಂಗವ ಧರಿಸಿ ಎಂದೊಡೆ ಅವರು ಸುಮ್ಮನಿರಲು ಮತ್ತೊಂದು ದಿನ ಪೆದ್ದಣ್ಣನು ಉರಿಲಿಂಗದೇವರ ಹಿಂದುಗೊಂಡು ಪೋಗಿ ಮತ್ತೆಯೂ ಕೊಡಿ ಎಂದು ಬೇಡಲು, ಅವರು ಎಲ್ಲಿ ಪೋದಲ್ಲಿಯೂ ಬರುತಾನೆ, ಇವನ ಕಾಟವ ಕಳೆಯಬೇಕೆಂದು ಒಂದು ಕಲ್ಲು ಕೈಯಲ್ಲಿ ಪಿಡಿದು ಕೊಂಡು 'ಗೆಜಾದಗಿಡಿಚ' ಎಂದು ಬೈದು ಕಲ್ಲು ಕೊಡಲು ಅದಂ ತೆಗೆದು ಕೊಂಡು 'ಗೆಜಾದಗಿಡಿಚ ಜಾದಗಿಡಿಚ' ಎಂದು ಅದೇ ಗುರುಮಂತ್ರವೆಂದು ಜಪಿಸುತ್ತಿರಲು ಅದು ಪೆದ್ದಣ್ಣನ ಭಾವದ ಬಲುಮೆಯಿಂದ ಜ್ಯೋತಿರ್ಮಯ ಲಿಂಗವಾಯಿತ್ತು. ಬಳಿಕಾ ಗುರುಸೇವೆಯಂ ಮಾಡುತ್ತಿರಲು ಇತ್ತ ನಂದರಾಜನು ಕೆರೆಯಂ ತೆಗಿಸುವಾಗ ಎಷ್ಟುಗ್ದವಗಿದರೂ ನೀರೇಳದಿರಲು ಶಿಲ್ಪಿಯ ಬಲ್ಲವನು ನಡುವಣ ತೆಗೆದರೆ ನೀರು ಬಂದೀತೆಂದು ನಂದರಾಜಗೆ ಪೇಳಲು ಅವರು ಈ ಕಲ್ಲು ಉರಿಲಿಂಗದೇವರು ನೋಡಿದಲ್ಲದೆ ಬಾರದೆಂದು ನಂದರಾಜನು ಗುರು ಶಿಷ್ಯರಿಬ್ಬರನು ಕರಿಸಿ ತೋರಲು ಆಗ ಪೆದ್ದಣ್ಣನು ತನ್ನ ಲಿಂಗವ ಜಾದಗಿಡಿಚ ಎನಲು ಆ ಕಲ್ಲಮೇಲೆ ಲಿಂಗ ಕುಳಿತು ಗೆಜಾದಗಿಡಿಚ ಎನಲು ಆ ಕಲ್ಲ ಕಿತ್ತುಹಾಕಿತ್ತು.

ಆಗ ಕೆರೆಗೆ ನೀರು ಬಂದವು. ನಂದರಾಜ ನಮಿಸಿ ಕಳುಹಿದನು. ಬಳಿಕಾ ಉರಿಲಿಂಗದೇವರು ಪೆದ್ದಣ್ಣನ ಮಹಿಮೆಯ ಕಂಡು ಈತ ಗುರುಭಕ್ತ ನೆಂದರಿದು ತಾವು ಮುನ್ನಿತ್ತ ಕಲ್ಲ ಜ್ಯೋತಿರ್ಮಯ ಲಿಂಗವಾದುದ ಕಂಡು ಉರಿಲಿಂಗಪೆದ್ದಯ್ಯನೆಂಬ ಪೆಸರನೇ ಇಟ್ಟು ನಿಜೋಪದೇಶವಂ ಕೊಟ್ಟು ಭಕ್ತರ ಭಾವದಲ್ಲಿ ಶಿವ ನೆಲೆಗೊಂಬುದು ಸತ್ಯವೆಂದು ಆಗ ಮವ ನೋಡ "ಯಥಾ ಭಾವಸ್ತಥಾ ಸಿದ್ಧಿಃ" ಎಂದು ಉರಿಲಿಂಗದೇವರು ತಮ್ಮಾಚಾರ್ಯ ಪೀಠಕ್ಕೆ ಪಟ್ಟವಂ ಕಟ್ಟಿ ಗುರುಸಾಂಪ್ರದಾಯುವ ನಡಿಸೆ ನಲು ಪೆದ್ದಣ್ಣಯ್ಯನು ಶಿವಭಕ್ತಿ ಅನುಗ್ರಹವನು ಕೊಟ್ಟು ಆಚರಿಸುತ್ತ ಕೆಲಂಬು ಕಾಲವಿರ್ದು ಮರ್ತ್ಯದ ಮಣಿಹ ತೀರಲು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರನೆಂಬ ತಮ್ಮಿಷ್ಟಲಿಂಗದಲ್ಲಿ ಬೆರೆದು ನಿರ್ವಯಲಾದರು."

ಮೇಲ್ಕಂಡ ಚರಿತ್ರೆಯಿಂದ ಉರಿಲಿಂಗಪೆದ್ದಿಯು ಆರಂಭದಲ್ಲಿ ಎಂಥ ಮನುಷ್ಯನಿದ್ದನು ಮತ್ತು ಕಡೆಗೆ ಎಂಥ ಉಚ್ಚ ಪದವಿಯನ್ನು ಹೊಂದಿದನು ಎಂಬದನ್ನು ನೋಡಿದಲ್ಲಿ ಯಾರಾದರೂ ಕೂಡ ಚಕಿತರಾಗುವಂತೆ ಇದೆ. ಆರಂಭದಲ್ಲಿ ಇವನು ಕಳವು ಮಾಡುತ್ತಲಿದ್ದು ಒಬ್ಬ ಮಹಾತ್ಮನ ಸಾನ್ನಿಧ್ಯದಿಂದ ತನ್ನ ದುರ್ಗುಣಗಳನ್ನು ಬಿಟ್ಟು ಅವನ ಸೇವೆಯಲ್ಲಿ ನಿರತನಾದನು. ಕಡೆಗೆ ಅವನ ಕಡೆಯಿಂದ ದೀಕ್ಷೆಯನ್ನು ಹೊಂದಿದನು ಇಷ್ಟೇ ಅಲ್ಲ, ಅವನು ಆಚಾರ್ಯ ಪೀಠವನ್ನು ಸಹ ಏರಲು ಅರ್ಹತೆಯನ್ನು ಪಡೆದನು. ಈ ಸ್ಥಿತಿಯನ್ನು ಹೊಂದಲಿಕ್ಕೆ ಅವನ ವಿಶೇಷ ಪಾಂಡಿತ್ಯವೇ ಕಾರಣವಾಗಿರಬೇಕು ಎಂಬದನ್ನು ನಾವು ಅವನ ವಚನಗಳ ಮೂಲಕ ಊಹಿಸಬೇಕಾದುದಾಗಿರುವದು.

ಆದರೆ ನಾನು ಮುಂದೆ ವಿವರಿಸುವ ವಿಷಯಗಳನ್ನು ವಾಚಕರು ಆಲೋಚಿಸಿದರೆ ಅವರಿಗೆ ಮತ್ತಿಷ್ಟು ಆಶ್ಚರ್ಯವಾಗದೆ ಇರದು. ಅದೇನಂದರೆ,

ನಾಲ್ಕಾರು ತಿಂಗಳುಗಳ ಹಿಂದೆ ಒಬ್ಬ ಮನುಷ್ಯನು ತಾನು ಕಲ್ಯಾಣ ಸೀಮೆಯವನೆಂದು ಹೇಳಿ ನನಗ ವಿಜಾಪುರದಲ್ಲಿ ಬೆಟ್ಟಿಯಾದನು. ಶಿವಾನುಭವ ಪತ್ರಿಕೆಯಲ್ಲಿ ಉರಿಲಿಂಗಪೆದ್ದಿಯ ವಚನಗಳನ್ನು ನಾನು ಪ್ರಸಿದ್ಧಿಸುತ್ತಿರುವದನ್ನು ಕೇಳಿ ಅವನು ನನಗೆ ಕಾಣಲಿಕ್ಕೆ ಬಂದದ್ದು ತಿಳಿಯಿತು. ಅವನು ನನಗೆ, ತಾನು ಉರಿಲಿಂಗಪೆದ್ದಿಯ ಮಠಾಧಿಕಾರಿ ಎಂದು ಹೇಳಿದನು. ಆಗ ಅವನ ಬಗ್ಗೆ ನಾನು ವಿಚಾರ ಮಾಡು

ತ್ತಿರಲು ಅವನು ಅಸ್ಪೃಶ್ಯನೆಂದು ತಿಳಿದು ಬಂದಿತು. ಉರಿಲಿಂಗಪೆದ್ದಿಯ ಮಠಗಳು ಈಗ ನಾಲ್ಕು ಇದ್ದು ಅವೆಲ್ಲವೂ ಅಸ್ಪೃಶ್ಯರವೆಂದು ನನಗೆ ತಿಳಿಯಿತು. ಅವು ಕಲ್ಯಾಣ, ಸೇಡಮುದಿಂದ ಹದಿನೈದು ಮೈಲುಗಳ ಮೇಲಿರುವ ಕೊರಳಿ, ಭಲ್ಕಿ ಮತ್ತು ಬೇವಿನ ಚಿಂಚೋಳಿ ಎಂಬ ಗ್ರಾಮಗಳಲ್ಲಿ ಇರುತ್ತವೆ. ಉರಿಲಿಂಗಪೆದ್ದಿಯ ಸಮಾಧಿಯು ಕಲ್ಯಾಣದಲ್ಲಿ ಇದ್ದು ಅದು ಉರಿಲಿಂಗ ಪೆದ್ದಿಯ ಮಠದಲ್ಲಿಯೇ ಇದೆ. ಇದರ ಮಠಾಧಿಕಾರಿಯೇ ನನಗೆ ಭೆಟ್ಟಿಯಾದವನು. ಆದರೆ ಅವನಿಗೆ ಉರಿಲಿಂಗಪೆದ್ದಿಯ ವಿಷಯವಾಗಿ ಹೆಚ್ಚಿಗೆ ಯಾವ ಮಾಹಿತಿಯು ಇರಲಿಲ್ಲ. ಈ ನಾಲ್ಕೂ ಮಠಗಳಲ್ಲಿದ್ದವರು ಲಿಂಗಧಾರಿಗಳಾಗಿದ್ದು ಪೂರ್ಣ ಶಿವಾಚಾರಿಗಳಾಗಿ ವರ್ತಿಸುತ್ತಾರೆ. ನನ್ನನ್ನು ಕಂಡವನು ವಾಡಿಕೆಯಾಗಿ ಈಗ ತಾಂಡೂರದ ಸಮೀಪದಲ್ಲಿರುವ ಮಲ್ಲರಡ್ಡಿಪಲಿ ಎಂಬ ಗ್ರಾಮದಲ್ಲಿರುತ್ತಿದ್ದು ಅವನ ಹೆಸರು ರಾಮಲಿಂಗಯ್ಯ ಶಿವಜಂಗಮ ಎಂದು ಇರುತ್ತದೆ. ಮೇಲ್ಕಂಡ ಗ್ರಾಮಗಳಲ್ಲಿ ಈಗ ಉರಿಲಿಂಗಪೆದ್ದಿ ಮಠಗಳು ಇವೆಯೇ ಹ್ಯಾಗೆ ಎಂಬದನ್ನು ನಾನು ಬೇರೆ ರೀತಿಯಿಂದ ಶೋಧಿಸಲು ಅವು ಇದ್ದ ಹಾಗೆ ವಿಶ್ವಸನೀಯವಾಗಿ ನನಗೆ ತಿಳಿದು ಬಂದಿರುತ್ತದೆ.

ಈ ಪ್ರಕಾರ ಒಬ್ಬ ಮಹಾತ್ಮನಾದ ಮತ್ತು ಅತ್ಯಂತ ಪ್ರಸಿದ್ಧನಾದ ವಚನಕಾರನ ಚರಿತ್ರೆಯ ಮೇಲೆ ಯಾವ ಬಗೆಯ ಪ್ರಕಾಶವು ಬೀಳುತ್ತದೆಂಬವನ್ನು ನಾವು ವಿಚಾರಮಾಡಿದಲ್ಲಿ ಬಸವೇಶ್ವರನ ಕಾಲದಲ್ಲಿ ಎಲ್ಲ ಬಗೆಯ ಜನರ ಮೇಲೆ ಎಂಥ ಕ್ರಾಂತಿಕಾರಕ ಅದ್ಭುತ ಪರಿಣಾಮಗಳಾದವೆಂಬದನ್ನು ನಾವು ಇದರಿಂದ ಚನ್ನಾಗಿ ಊಹಿಸಬಹುದಾಗಿದೆ.

ಅನೇಕರು ಕಲ್ಯಾಣ ಪಟ್ಟಣವನ್ನು ನೋಡಿ ಬಂದಿರುವರು. ಅವರ ಅನೇಕ ಲೇಖಗಳು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧವಾಗಿವೆ. ಆದರೆ ಉರಿಲಿಂಗಪೆದ್ದಿಯ ಮಠವನ್ನು ಯಾರೂ ಉಲ್ಲೇಖಿಸಿದ್ದು ಕಂಡು ಬರುವದಿಲ್ಲ. ಅದೊಂದು ಅಸ್ಪೃಶ್ಯರ ಮಠವೆಂದು ಅಲ್ಲಿ ಅಪ್ರಸಿದ್ಧಸ್ಥಿತಿಯಲ್ಲಿ ಇರಬಹುದು. ಆದರೆ ಈ ವಚನಕಾರನ ಯೋಗ್ಯತೆಯು ವಚನ ವಾಙ್ಮಯದಲ್ಲಿ ಅತ್ಯಂತ ಶ್ರೇಷ್ಠ ತರಗತಿಯದು ಇದೆ. ಅವನು ವೀರಶೈವ ಮತದ ತತ್ವಗಳನ್ನು ಪ್ರಸಾರ ಪಡಿಸುವಲ್ಲಿ ಬೇರೆ ವಚನಕಾರರಿಂದ ಭಿನ್ನವಾದ ಹೊಸಹಾದಿಯನ್ನು ಹಿಡಿದಿರುವನು. ಇಂಥ ಮಹಾತ್ಮನ ಸಮಾಧಿ ಸ್ಥಳವನ್ನು ಸರಿಯಾಗಿ ಕಾಯ್ದಿರಿಸಿ ಅದಕ್ಕೆ ಮನ್ನಣೆ ಕೊಡುವದು ವೀರಶೈವ ಸಮಾಜದ ಆದ್ಯ ಕರ್ತವ್ಯವಾಗಿರುತ್ತದೆ.

# ಉರಿಲಿಂಗಪೆದ್ದಿಯ ಚರಿತ್ರೆ.

ಮೇಲ್ಕಂಡ ಸಂಗತಿಗಳ ಮೇಲಿಂದ ಗುರುಲಿಂಗಪೆದ್ದಿಯ ಚರಿತ್ರೆಯು ಯಾವದಿರಬಹುದೆಂಬದನ್ನು ಈಗ ನಾವು ಊಹಿಸತಕ್ಕದ್ದಾಗಿದೆ. ನಾವು ಕೆಳಗೆ ಕಾಣಿಸುವ ವಿವರಣೆಗಳು ಸಂಭವನೀಯವೋ ಹ್ಯಾಗೆ ಎಂಬದನ್ನು ವಾಚಕರು ವಿಚಾರ ಮಾಡಿ ನೋಡಬೇಕೆಂದು ನಾವು ಸೂಚಿಸುತ್ತೇವೆ.

ಉರಿಲಿಂಗಪೆದ್ದಿಯು ತೆಲಗು ಸೀಮೆಯಲ್ಲಿಯ ಅವಸಿಕಂದಾರ ಎಂಬ ಪಟ್ಟಣದವನು. ಅವನು ಕೀಳ ಜಾತಿಯವನು. ಬಹುಶಃ ಅಸ್ಪೃಶ್ಯನಾಗಿರಬೇಕು. ಹುಲ್ಲು ಕಟ್ಟಿಗೆಯನ್ನು ಹೊತ್ತು ತಂದು ಮಾರುವ ಉದ್ಯೋಗದವನಾಗಿರಬೇಕು. ಆದರೆ ಅವನು ತನ್ನ ಈ ಉದ್ಯೋಗವನ್ನು ಬಿಟ್ಟು ಕಳವು ಮಾಡುವಲ್ಲಿಯೇ ಕಾಲಕಳೆಯುತ್ತಿದ್ದನು. ಅದೇ ಗ್ರಾಮದಲ್ಲಿ ಉರಿಲಿಂಗ ದೇವನೆಂಬ ಒಬ್ಬ ಮಹಾ ಶಿವಶರಣನು ವಾಸಿಸುತ್ತಿದ್ದನು. ಅವನು ಆರಾಧ್ಯನು, ಗುರುಸ್ಥಳದವನು, ಉಪದೇಶವನ್ನು ಮಾಡುತ್ತ ದೀಕ್ಷಾದಿ ಕಾರ್ಯಗಳನ್ನು ನಡಿಸುತ್ತಿದ್ದನು. ಒಂದು ದಿನ ಉರಿಲಿಂಗ ಪೆದ್ದಿಯು ಕಳವು ಮಾಡಲು ಹೋದಾಗ್ಗೆ ಉರಿಲಿಂಗ ದೇವನ ಭಕ್ತಿಯುಕ್ತ ಲಿಂಗಾರ್ಚನಾದಿ ಕಾರ್ಯಗಳನ್ನು ಅಕಸ್ಮಾತ್ತಾಗಿ ನೋಡಿ ಅವನಲ್ಲಿ ಭಕ್ತಿಯು ಉದ್ಭವಿಸಲು ತನ್ನ ಕೆಡಕು ವೃತ್ತಿಯನ್ನು ಬಿಟ್ಟುಕೊಟ್ಟು ಉರಿಲಿಂಗ ದೇವನ ಸೇವೆಯಲ್ಲಿ ತತ್ಪರನಾದನು. ಆದರೆ ಅವನು ಕೀಳ ಕುಲದವನಾದ್ದರಿಂದ ಮೊದಲು ದೀಕ್ಷೆಯನ್ನು ಕೊಟ್ಟಂತೆ ತೋರಲಿಲ್ಲ. ಆದರೆ ಮುಂದೆ ಅವನ ಭಕ್ತಿಯನ್ನು ನೋಡಿ ಉರಿಲಿಂಗ ದೇವನು ಅವನಿಗೆ ದೀಕ್ಷೆಯನ್ನು ಮಾಡಿದನು. ಇದಾದ ಬಳಿಕ ಉರಿಲಿಂಗಪೆದ್ದಿಯು ಅನೇಕ ಗ್ರಂಥಗಳನ್ನು ಓದಿ ಅತ್ಯಂತ ಪಾಂಡಿತ್ಯವನ್ನು ಸಂಪಾದಿಸಿರಬೇಕು. ಮತ್ತು ಅವನ ಗುರುವು ಉರಿಲಿಂಗ ದೇವನು ತೀರಿಕೊಂಡ ಬಳಿಕ ಅವನ ಸ್ಥಾನದಲ್ಲಿಯೇ ಪಟ್ಟಾಧಿಕಾರವನ್ನು ಹೊಂದಿರಬೇಕು. ಈ ಪ್ರಕಾರ ಸಂಭವಿಸಿದ ಹಾಗೆ ತೋರುತ್ತದೆ.

ಹೀಗೆ ಪಟ್ಟವಾದ ಬಳಿಕ ಉರಿಲಿಂಗಪೆದ್ದಿಯು ಕಲ್ಯಾಣಕ್ಕೆ ಬಂದು ವಾಸಿಸಿದನೆಂದು ತೋರುತ್ತದೆ. ಯಾಕಂದರೆ ಅವನ ಸಮಾಧಿಯು ಅಲ್ಲಿ ಈಗಲೂ ಇದೆ. ಕಲ್ಯಾಣ ಪಟ್ಟಣವು ಪೂರ್ಣವಾಗಿ ಹಾಳಾಗುವ ಪೂರ್ವದಲ್ಲಿ ಅಥವಾ ಬಸವೇಶ್ವರನ ಕಾಲದಲ್ಲಿ ಅವನು ಕಲ್ಯಾಣಕ್ಕೆ ಬಂದಿರ

ಬೇಕು. ಬಿಜ್ಜಳನ ತರುವಾಯ ೫೦—೬೦ ವರ್ಷ ಕಲಚೂರ್ಯರ ರಾಜ್ಯವು ಅಸ್ತಿತ್ವದಲ್ಲಿ ಇತ್ತು. ಈ ಅವಧಿಯಲ್ಲಿ ಒಂದಾನೊಂದು ಕಾಲದಲ್ಲಿ ಉರಿಲಿಂಗ ಪೆದ್ದಿಯು ಕಲ್ಯಾಣಕ್ಕೆ ಬಂದಿರಬಹುದು. ಯಾಕಂದರೆ ಕಲ್ಯಾಣವು ಪೂರ್ಣವಾಗಿ ಹಾಳಾದ ಬಳಿಕ ಅವನು ಅಲ್ಲಿಗೆ ಬರುವ ಸಂಭವವಿಲ್ಲ. ಅಂತು ಉರಿಲಿಂಗಪೆದ್ದಿಯು ಬಸವೇಶ್ವರನ ಕಾಲದವನು ಎಂದು ಹೇಳಬಹುದು.

ಉರಿಲಿಂಗಪೆದ್ದಿಯಂಥ ಕೀಳಜಾತಿಯವನು ವೀರಶೈವರಲ್ಲಿ ಬಹು ಮಹತ್ವದ ಸಮಾಜವಾದ ಆರಾಧ್ಯ ಪಂಗಡಕ್ಕೆ ಹೊಂದಿದ ಗುರುವಿನ ಅಧಿಕಾರ ಸ್ಥಾನವನ್ನು ಅಲಂಕರಿಸಬೇಕಾದರೆ ಶಿವಶರಣರ ವಿಶಾಲವಾದ ತತ್ವಗಳು ಅವನಿದ್ದ ಕಾಲದಲ್ಲಿ ಇನ್ನೂ ಪ್ರಚುರತೆಯಲ್ಲಿ ಇರಬೇಕು. ಆದರೆ ಕೆಲವು ಕಾಲದ ಮೇಲೆ ಜಾತಿಭೇದದ ವಿಚಾರಗಳು ಸಮಾಜದಲ್ಲಿ ಉತ್ಪನ್ನವಾಗಲು ಉರಿಲಿಂಗಪೆದ್ದಿಯು ಮಠಾಧಿಪತಿಯಾದ್ದರಿಂದ ಮುಂದೆ ಅಸ್ಪೃಶ್ಯರ ಮಠವೆಂದು ಅದು ಅಪ್ರಸಿದ್ಧವಾಗಿ ಉಳಿದಂತೆ ತೋರುತ್ತದೆ. ಆದರೂ ಈ ನಾಲ್ಕೂ ಮಠಗಳು ವೀರಶೈವರ ಆರಾಧ್ಯ ಮಠಗಳೇ ಇರುತ್ತವೆ.

ಉರಿಲಿಂಗಪೆದ್ದಿಯು ಈ ಚಿತ್ತವೇಧಕವಾದ ಚರಿತ್ರೆಯಿಂದ ಅವನು ಹರಳಯ್ಯ, ಕಕ್ಕಯ್ಯ, ಚನ್ನಯ್ಯ, ಮೊದಲಾದ ಶಿವಶರಣಗೆ ಸಮಾನನಾಗಿರುವನೆಂದು ಕಂಡು ಬರುವದು. ಇವನ ಉಚ್ಚತರ ವಚನಗಳನ್ನು ಉದಹರಿಸದೆ ಇದ್ದ ಯಾವ ವಚನ ಸಂಗ್ರಹಕಾರನು ವಚನ ವಾಙ್ಮಯದಲ್ಲಿ ದೊರಕುವದಿಲ್ಲ. ಇಷ್ಟು ಈ ಮಹಾತ್ಮನ ಯೋಗ್ಯತೆಯು ಇರುತ್ತದೆ.

---

# ಬ್ರಹ್ಮಪಕ್ಷಿ.

೧

ಆದಿಯನಾದಿಯು ಆಚೆಗೆ ಆಚೆಗೆ,
ನಾದಬಿಂದುಕಳೆಯಾಚೆಗೆ ಆಚೆಗೆ,
ನೋಟಕು ನಿಲುಕದ, ನುಡಿಗೂ ಸಿಲುಕದ,
ಮಾಟದ ಆಚೆಯು ಮಾಟಕು ಉಲುಕದ,
“ಏನೇನಿಲ್ಲೆಂ” ಬುವ ಆ ಪಕ್ಕಿ
ತಾನೇ ತಾನಾಗಿದ್ದಿತು ಉಕ್ಕಿ!

೨

ಬೊಮ್ಮವಕ್ಕಿಯದು ಎಂತೋ ಏನೋ,
ಸುಮ್ಮನಿರದೆ ಸಲ್ಲೀಲೆಗೆ ಏನೋ,
ಹೊಟ್ಟೆವಂದು ತಾ ತನ್ನ ಬಗೆಯೊಳೇ,
ಇಟ್ಟಿತು ಅನೇಕ ತತ್ತಿತತ್ತಿಗಳ!
ಒಂದೊಂದರೊಳೇ ಅಗಣಿತ ತತ್ತಿ!
ಕುಂದದೊಳಗಿಹುದು ಜೀವದ ಜ್ಯೋತಿ!

೩

ಗಣನೆಗೆ ಮೀರಿಹ ತತ್ತಿಗಳಿಡುತಲಿ,
ಅನಿಶವು ಅವುಗಳ ಮೇಲ್ಕೂರುತಲಿ,
ಮುಗಿಯದ ಪ್ರೇಮದ ಕಾವನು ಕೊಡುತಲಿ,
ಒಗೆಯಿಸುತಿದೆ ತನ್ನೋಲಿಹ ಮರಿಗಳ!
ಎರಕದ ಕಾಪಿಗೆ ಜೀವವು ಹಿಗ್ಗಿ
ಹೊರಬರಲೆಳಸುದು ಮೇಲಕೆ ನುಗ್ಗಿ!

೪

ತತ್ತಿಯು ಒಳಗಣ ಎನಿತೊ ತತ್ತಿಗಳು
ಮುತ್ತಿದ ಭಾವದ ಭರದ ಕುತ್ತಿನಲಿ

ಕೆಳಕೆಳಗಿಳಿಯಲು, ಪ್ರೇಮದ ಬಿಸುಪನು
ತಲುಪಲವಕೆ ತಡವಹುದೆನಿತೋ ದಿನ।
ಕುತ್ತನು ಮೆಟ್ಟುತ ಮೆಲಕ್ಕೆದ್ದ
ತತ್ತಿಗೆ ಕಾವದು ಸಿಗುವದು ಸಿದ್ಧ!

೫

ಕಾಪಿನ ಬೆಳಕಲಿ ಒಳಗಣ ಜೀವವು
ಆ ಪಕ್ಷಿಯ ಬೆಳಗುವ ಚಿದ್ರೂಪವ
ದಿಟ್ಟಿಸಿ, ನಲಿಯುತಲುಲಿಯಲು ಹಾರಲು
ಥಟ್ಟನೆ ಹೊರಬಹುದದ ತಾ ಸೇರಲು!
ಈ ಪರಿ ತತ್ತಿಗಳೆಲ್ಲವ ನೊಡೆದು
ಆ ಪಕ್ಷಿಯ, ಜೀವವು ಸೇರುವದು!

೬

ಬೊಮ್ಮಪಕ್ಕಿಯದು, ಅನಂತಕಾಲದಿ
ಬೊಮ್ಮವರಿಗಳನು ಪುಟ್ಟಿಸೆ, ಚಿತ್ತದಿ
ಮೆರೆಯುವ ಬ್ರಹ್ಮಾಂಡವ ತಾನಿಕ್ಕುತ
ಸುರಿಸುದು ಕಾವಿನ ಧಾರೆಯ ಸಂತತ!
ಬೊಮ್ಮನ ಮರಿಯಾಗುವ ಜೀವ
ನೆಮ್ಮಲುಬೇಕಾ ಬಗ್ಗೆವ!

---

ಆನಂದ ಭೈರವಿ ಆದಿತಾಳ.

ಜಗದೇಕ ವೀರನೆ ನಿನ್ನ ಬಣ್ಣಿಸಲೆಂತಹುದು । ರಗಪತಿ § ವಾಗಳಿಗು ನ್ನತವಾಗಿರಲು ನಾನೀ । ಜಗದೊಳು ನುತಿಸಲೆಂತೆನ್ನಪತಿ ನಿನ್ನದಾಗಿ । ಬಗೆದೋರಲುಸುರುವೆನು ಮುನ್ನ ಅರ್ಚಿಸಿದಂಥ । ಖಗರಾಡ್ಧ್ವಜರಿಂಗಗ ಣಿತ ಭಾಗ್ಯವ । ನಿಗಮಾಗಮಂಗಳ್ನುತಿಸುವ ಶಕ್ತಿಯು । ಜಗಪಾಲನ ಜಗ ಸೃಷ್ಟಿಯು ಮಾಳ್ಪಗ್ಗಳಿಯಾದ ಸಿದ್ಧಿಯು । ಮಿಗಿಲಾಗುರೆ ದಿಗ್ಪಾಲಯಾಧಿಪ ರೋಲೈಪಸ । ಮಗ್ರ್ರಾಗ್ರಣಿಗಳ ಮಾಡಿದಡಂದು ಬ್ರಹ್ಮಸುರ । ನಗರಿಯ ನುಗ್ಲೊತ್ತುವ ಮನದೇಳ್ಗೆಯು ದನುಜರಂತರವ । ಬಗೆಯದೆ ಒರೆವೆನು ಕರುಣಿಸಲಾಗಳೆ ಮು । ನಿಗಳ ಭಂಗಿಸಿ ಮನವಾಸಕೆ ಆ ದಿವಿಜರ । ಸಾಗಿ ಸುತನುವರದಲಿ. ಸುರರಾಜನ ಮರ್ದಿಸಿ ಘನವಸ್ತುವನೆಲ್ಲವ ಪುರಿಗೇರಿ ಸಿಕೊ । ನೆನೆಘಗಕಂಜದೆ ಸ್ತ್ರೀಯರ ಪಿಡಿದಂತಿರದಲೆ ಆ ; ಮಘವಾನನ ಶಿಕ್ಷಿಸುತಿರುತಿರೆ ತ್ರಿದಶರು ಪೋಗಿ ಪದ್ಮಜನವರೆಯುಲಿ ದೂರಲ್ಕಂಡು ಕಮ । ಲಗರ್ಭನ ಮುಂದುಸುರಲ್ಬೇಗ ನಿನ್ನ ಮಂದಿರದೆ । ಡೆಗೈತಂದೆಲ್ಲ ದೂರಿ ಹೊಂದಿಸುತಲಿ ನುತಿಸಿದ । ರಾಗ ಶಾಶ್ವತನೆ ಸಲಹೆಂದೊರಲಿಂದ ರಂ । ದಗಾಧಗರಳೊಳಿಸುತಲಿರೆ ಉಳುಹಿದೆಯೋ ದೇವ । ಈಗ ಮಮ ವಿಪತ್ತಿದು ಬಲುಹು ಯಮ್ಮನುದ್ಧರಿ । ಸಗ್ಗದ ಕರುಣಾರ್ಣವ ನಿನ್ನನು ಮರೆ ಹೊಕ್ಕೆವು । ಈಗಲು ಕೃಪೆ ಮಾಡಿಯೆ ದನುಜರ ಗೆಲ್ವ ಉಪಾ । ಯ ಗಳ್ನೆನೆಯೆಂದೆನುತಿಹ ಅನಿಮಿಷ ಶ್ರೇಷ್ಠರಿ । ಗಗಜಾ ರಮಣನೆ ಅಭಯವ ನಿತ್ತು ತ್ರೈಪುರ । ದ ಘನವನು ಮುರಿವೊಡೆ ಅನುವಾದೆಯೊ ಕೇ । ಳ್ಗಗನ ಜೂಟನಾಂ ಪೊಗಳಲ್ಕರಿದೈ ॥ ೧ ॥

ವಾರಿಜೋದ್ಭವನ ವರದಿಂದ ನಿಶಾಚರರಿಗಿಷ್ಟು । ಸೇರಿತಧಿಕ ಬಲ ವೆಂದ ಶಾರಿಗೆ ಅದಿತಿ ಬಾಲರ । ಪೊರೆಯಬೇಕೆಂದು ನಿನ್ನಯ ನುಡಿಯ ಕೇಳುತೆರಗಿ । ದರು ದಯ ಬಂದ ಈ ಹದನೆ ನಮಗ । ಪಾರ ಸುಖವು ಸೇರಿತು ಎಂದಾ ದ್ವಿಜರೋಲೈಸುತ । ಪರಮಾತ್ಮನೆಂದು ಜಂಭಾರಿ ಸತ್ತಿ ಗೆಯ ಪಿಡಿಯಲು ರತ್ನದ । ಹಾರ ವಲಯಾಖಂಡದ ದಿಕ್ಪಾಲರು । ಚಾಮರಗಳ್ಬೀಸಲ್ಕೀ ಧರಣಿಯೆ ರಥ ಚಂದ್ರ । ಸೂರ್ಯರೇ ಗಾಲಿಗಳ್ನಿಗಮಾಗಮ ಗಳೆ । ತುರಂಗವು ಚಾರು ರಥದ ಸಾರಥಿ ಕೇಳ್ಸರಿಮುಖ । ಮೇರುಚಾಪ

---

§ ವಾಗಳಿಗೆ =ಸರಸ್ವತಿಗೆ

ನಾರಾಯಣ ಬಾಣವು । ಭೂರಿ ಭೂತ ಗಣ ಮಾರ್ಗಲ ಕರಿಮುಖ ಕೇಣಿಗೊಂಡು ಸೇನಾಧಿಪತಿತ್ವದಿ ಮಿ: । ದರ್ಗರ ಶಿಕ್ಷಿಪ ಭಪ್ರಗಣದ ವೈಯಾರದೊಳೊಪ್ಪುತ । ರುದ್ರಮುಂದು ಪ್ರಮಥಾಳಿಗಳೆಡಬಲ ಒಪ್ಪು । ತಿರಲು ಜಯಭೇರಿ ಮುಖ್ಯ ವಾದ್ಯದ ಬಲು ರವ । ಧರೆ ಗೀಳಿಡೆ ಶಂಕರ ವೃಷಭನೊಡನೆ ಕೈಲಾ । ಗುರೆಯಿಂದಲಿ ಬಿಜಯಂಗೈಯೆ ಜಯಲೋಲ ಜಾಹ್ನವೀ ರಮಣ ನಿನಗೆ ಸರಿ । ಯಾರೆನ್ನುತ ಪ್ರಣಾಮವು ರಭಸಂಗೊಡೆ ಮಾರಹರನೆ ರಥವೇರುತ । ಕರದಲಿ ಭಾರಿ ಬಿಲ್ಪಿಡಿದು ಜೇಗೈಯಲು ಇ । ವರಾರು ಕದನಗೈತಂದಪರಾಗಲಿ ಕೋಳುಗೊಂಬೆ । ಹರಹರಿಗಳಾಗೆ ಭಯವೇನು ಏತಕೇ ತಡವೇ । ಳಿರೆಂಬ ಖಳರಾಳಿನೊಳಗೆ ಬಹುದಾಳಿ ಬರಲು ರಣಧೀರ । ಭೈರವನು ಮುಂಗುಡಿಯಲ್ಲಿ ತಡೆ । ದಾರು ಭಟಿಸೆ ಕೋಳಾಹಳ ವಾರ್ತೆಯು ಕೇಳುತಲ । ಸುರರ ಪಡೆ ಮುಸುಂಕೆ ಕಲ್ಪೋಘ ದಂತೆ । ವರುಷದ ಕೆರ ಶರವಿರೆ ಮೀರಿತೆಂದು ಧನುವಿಗೆ ಮಾರ್ಗಣಿ ರೌದ್ರಿಯ ಕರದಲಿ ಹೂಡಿದೆಯ್ಯೆ ನೀನು ॥ ೨ ॥

ನೋಡಿ ನಿಂದವು ನೇತ್ರಗಳು ಸಾವಿರ ವರುಷಾಗೆ । ಕಂದಿ ಹರಿಯು ಜರ ಮೊರೆಗಳು ತಪಿಸುತಲಿ । ಖೇಡ (ದ?) ರಾದರು ಸುಮನಸಾದಿಗಳು ಅಪ್ಸರೊಳು । ಕೂಡಿ ತೋರಿತು ತ್ರಿಪುರ ಕೀಲುಗಳು ಅದ ಕಂಡು । ರುಂಡ ಮಾಲಾಧರನೆ ಕೋದಂಡ ನಾರಿಯು ಸೇದಿ । ಬಿಡಲು ಆರ್ಭಟಿಸುತಾಗ । ಕಿಡಿ ಬಾಯೊಳುದುರೆ ಬಡಬನಂತೆಯು ಆ ತಾರಕ ಪುತ್ರರ ಪುರಕೆ । ನೀಡಿ ತುದಿನಾಲಗೆಯನು ಹೊರಗೊಳಗು ಇರ್ಪ । ಕಡು ವೀರರೊಡಲೊಳಾಗತಿ ರುಧಿರವನುರೆ । ತೋಡುತ ಕರುಳನು ಬಾಯೊಳೊಗಿಸಿ ಹಮ್ಮೀರರ ಬಿಡ ದಟ್ಟೈಸಿ ಹಿಡಿದು ಹೋ । ಳ್ಮಾಡುತ ಮಿದುಳನು ಸೀಡಿ ಭೂತಗಳ್ಗೀಡಿ ರಿಯುತ ಬಂದೊಡೆ ತಿವಿದು । ವೈಡೋರೆಗಳೆದು ನೀರೊಡೆ ನೆತ್ತರ್ಗಲಿ ಯೋಡಿನೋಳ್ಕುಡಿಸುತ । ಕಾಡಿ ಕೊಂದು ಪಾಳ್ಮಾಡೆ ನಗರ ಜನರೋಡಿ ಅಳ್ದರೆದುರೋಡಿ ಬಿಟ್ಟರಸು । ನೋಡಿ ಕೋಪ ಝಾಡಿಯುತ್ತ ಒಡಲು ಹುರಿ ಗೂಡಿ ಮನವು ಭಯ । ಬೇಡಿರೆಂದು ಭಾಳಾಂಬಕನೆದುರಡಹಾಯಿದು ಬಂದ ದಿಂಡೆಯರ ಕಂಡು ಹುರಿಮುರಿದೋಡಿಸೆ ಅಮರರ ಕಂಡು ಗಾಢ ಶಿಖಿ ನೇತ್ರವಟ್ಟೆ ಅದನಾಡಲೇನು । ಗಾಢಾಂಧ ದಿನಪಗೇನ್ಪಾಡೆ ಪುರಗ । ಳ್ಸಡಲಾರು ತಡೆವರಿನ್ನೇನು ಗತಿಯು ಹೊಯ್ದಾಡಿ ತಮ್ಮೊಳಗೆ । ಬೇಡ ಹಗನ ವೈರವು ಮದನಾರಿಗೆ ಈಡೆ ಮದಡು ರಕ್ಕಸರೆನ್ನುತ ಸುಟ್ಟೊಬಿ

ಗಳೀದರು ಗ । ರುಡ ಯಾನವರ್ಮಂತಾದನರ್ಮತಿಸಿ ಸುಖಿಯಾದರೆಂಬ ನುಡಿ ಈ ಧರೆಯೊಳು ಮಲ್ಲನಪುರ ವಾಸಿಯೋಳ್ಕಾಡಿ ನುಡಿಸಿದೆಯೊ ಸೋಮೆ ಕಟ್ಟಿ ಗುರುದೇವನೆ ॥ ಮೃಡ ನೀನಲ್ಲದುಳಿದರಿಂದೇನು ಆಹುದೊ ದಯ । ಮಾಡಿ ಕರುಣಿಸೈ ಭಜಕರ ಬಂಧು ॥ ೩ ॥

---

ಆಲಿಸ ಬಹುದಾದೊಡೆ ಅಭಯಂಗೊಡು । ಮೂಲ ಪ್ರಣವ ಮೂಲಿಗ ಮುನಿವಂದ್ಯ ವಿಶಾಲ ಮಹಿಮ ಶಾಂಭವಿ ಸುಖಲೋಲನೆ ಬಾಲನ ಬಿನ್ನಪವ ॥ ಪ ॥

ತಾನಲ್ಲದ ಜಡ ಭೌತಿಕ ತನುವಿದ ನಾನೆನ್ನುತ ಕರುಣಾಳಿ ವಿಷಯ ವಿಡಿ । ದೇನುಂಟೆಲ್ಲವನೆಸಗುತೆ ತತ್ಫಲ ಯೋನಿಗಳೊಳು ತೊಳಲಿ ॥ ಕಾನನ ದಲಿ ಕಾರ್ಗತ್ತಲೆ ಕವಿದಂಥ ನಿಕಾಯವಿದರೊಳು । ಭ್ರಮೆಗೊಡಲು ಶ್ವಾನ ಹೊಂದಿ ಶತಸಾವಿರ ಜನ್ಮಕೆ ತಾಳಿಯುಳತಟಹುದೈ ॥ ೧ ॥

ಮಾನ ಸವಿದು ಮಾಯೆಯ ಕೈಯೊಳಗಣ ವೀಣೆಯಂತೆ ಸಂಸೃತಿ ಯೊಡಗೂಡುತ । ಸಾನುರಾಗ ಸಮ್ಮತಿ ಗತಿಲಯ ದುರಿತಾನುಬಂಧವಿಡಿದು । ಗಾನಗರಳ ಸಾಹಿತ್ಯವೆನಿಸಿ ಭವಕೇಣಿಯಾಂತು ಪಾಶಾಷ್ಟದಿಯುಲಿ ಬಿನ್ನಾಣದೋರಿ ಬಿರಿದಾನುತಿದಿಕೊ ಕ್ಲೇಶಾನು ಮಥದೊಳೊಂದಿ ॥ ೨ ॥

ಹೀನ ವೃತ್ತಿ ಬೇಡೆಂದರೆ ಜಗದೊಳು ಆಣವಾದಿ ಮಲದ್ವಂಗು ಬಿಡದು । ಬಿಡೆ ಮಾಣಗೊಡದು ಆಶೆಯು, ಅದು ಬಿಟ್ಟರು ಮಾನಗರ್ವ ಬಿಡದೈ । ಮೀನು ಗಾಣದೊಳು ಸಿಲುಕುವಂತೆ ಮಿಥ್ಯಾನುಭವದ ಬಯಕೆ ಯೊಳತಿ ದುಃಖವೆ ತಾನೆ ಒದಗಿ ತಪ್ಪಿಸಿಕೊಳಗೊಡದಿನ್ನೇನು ವಿಧಿಯ ಕೃತಿಯೊ ॥ ೩ ॥

ಏನು ಮಾಡಲಹುದಿನ್ನು ಇದಕೆ ಸುಖಗಾಣದ್ಹೋಯ್ತು ಕನಸಿ ನೊಳಾದರೂ ಶಿವ ನೀನೆ ಗತಿಯು ನಿರ್ಮಲನಹವರಿಗಿನ್ನೇನು ಹದನು ತಿಳುಪೈ । ಜೇನ ಬೋಟ ಜಕ್ಕುಲಿಗ ಕರಾಳರ ಶ್ರೇಣಿಯುಳಿದು ಆರಧ್ವ ದೊಳತಿಶಯವೇನು ಅದರೊಳಾಸಕ್ತನಾಗಲಘುತಾನೆ ಕೆಡುತಲಿಹುದೈ ॥ ೪ ॥

ದಾನ ಯಾಗ ಜಪತಪ ನಿಯಮಾರ್ಚನೆ, ನ್ಯಾನವಿರದ ಸತ್ಕರ್ಮ ಗಳವು ಅಜ್ಞಾನ ತಮದ ಸೊಡರಂತೆಸೆವಖಿಳವದೇನು ಭಗಣ ಫಲವೈ

ಕಾಣಲರಿದು ಕಂಡರೂ ದಿಟವಾಗದು ಜ್ಞಾನಕಮಲ ವಿಕಸಿತವಹ ಪರಿ ಯಂತೇನ ಮಾಡೆ ಜಡ ನೀನು ಒಲಿಯುಲಜಡಹುದು ಭಾನುನಯನ ॥ ೫ ॥

ಜ್ಞಾನವೆನಲು ಜ್ಞಾಸಕದರಿವೆಂಬುದಕೇನು ಸಾಕ್ಷಿ ತತ್ಪದ ತ್ವಂಪದ ಉಭಯಾನು ಬಂಧಿ ಭಾವದ ಬಗೆ ಅಂಜನೆ ತಾನೆ ಆತ್ಮಸ್ಥಿತಿ ಗೈ । ಧ್ಯೇನು ವಿನೊಳು ದಿವ್ಯಾವ್ಯೃತವಿಹ ಪರಿ ತಾನೆ ನಿಜದ ನಿರ್ಮಲ ಪದಭಕ್ತಿ ನಿಧಾನ ವದುವೆ ಸೋಹಂ ಸುಖ ಸಿದ್ಧಿ ಪ್ರಧಾನ ಕರ್ತೃ ನೀನೈ ॥ ೬ ॥

ಧ್ಯಾನ ನಿನ್ನ ಧಾರಣವದು ಕಾರಣ ನೀನು ನಾನು ಎನ್ನಲು ಭಿನ್ನಾಂಶವದೇನು ಇಲ್ಲ ಸತಿಪತಿರತಿಕೇಳಿಯೊಳೇನು ಭೇದವೈಸೆ ॥ ಸ್ವಾನು ಭವ ಸುಖ ಭಾವನೆ ಅಗಣಿತಲೀನವಾಗಿ ಲಿಂಗಾಂಗ ನಿಜೈಕ್ಯನು ಮಾನ ವಿರದ ಚಿತ್ಪರಮಾಣುವೆ ನೀನೆ ಮಹತ್ಪೂರ್ಣೈ ॥ ೭ ॥

ಏನನೆಂಬೆ ಎಲ್ಲವ ನಿನಗೊಪ್ಪಿಸಿ ತಾನು ತಾವರೆಯು ಪತ್ರದಂತೆ ಇರಲೇನು ರೂಪು ರುಚಿಯೇನು ತೃಪ್ತಿ ಬಳಿಕೇನು ಅವನೆ ನೀನೈಜ ॥ ನಿಬಂಧನೆಯು ಪೊಗಳಿ ಶೃತಿಯು ಸನ್ಮಾನವೆತ್ತು ಸುಮ್ಮನೆ ಇಹಪರಿ ನಿನ್ನೇನು ಎನಲಿ ಸಹಜಾನುಭವಕೆ ನೀನಾನೆ ಎಂಬ ಹದನೈ ॥ ೮ ॥

ಆನು ಎಂಬ ಹಮ್ಮಳಿದ ಅಕಾರವೆ ತಾನೆ ಶಕ್ತಿ ಭಕ್ತಿಗೆ ಅದು ಬೀಜವು । ಊಣಯಿರದ ಉನ್ಮನೆ ಉಚಿತಾಕ್ಷರವೇನೊ ಸಗುಣ ಬ್ರಹ್ಮೈ । ಮಾನವಾಂತ ಮಹಿಮಾದಿಕ ವರ್ಣವದೇನು ಸವಿಯೊ ಮಾಮಾ ಎನು ತೆಲ್ಲರು ಏನು ಎನದೆ ಬೈಚಿಟ್ಟರದನು ಗುರು ತಾನೆ ಬಲ್ಲನೆಂದು ॥ ೯ ॥

ನೀನೆ ಒಲಿದ ಹದನಿದು ನಿರ್ಮಲ ಪದ ತಾನೆ ನೀಲತೋಯದವು ಧ್ಯಸ್ಥಿತ ಕೋಣೆಯೊಳಗೆ ಕಲಹಂಸಗೂಡಿ ನಿರ್ವಾಣವೈದುತಿರಲು ॥ ಕೇಣ ವಿರದ ಬೆಳಗೆದ್ದು ನಭದೊಳದು ಲೀನವಾಗೆ ನಿಜದೊಳು ತಾನಾದ ಸು ಮ್ಮಾನ ವಿಷಯ ಸುಖಶರಧಿ ರುಚಿಗೆ ಮಿಗಿಲೇನು ಇಲ್ಲ ತಿಳಿಯೈ ॥೧೦॥

ತನ್ನ ತಾಲು ಮೂಲದಿ ದ್ವಾದಶಚೆರಳುನ್ನತದಲಿ ಉದ್ಭವದುರಿ ಲಿಂಗವು ಭಿನ್ನವಿರದೆ ಬೇರೆನಿಸದತುಳಸುಖವನ್ನೆ ತೀವಿಕೊಂಡು ॥ ಚನ್ನೆ ಯರುಗಳಾರುತಿಯ ಸೊಡರಿನುತ್ಪನ್ನ ಕಾಂತಿ ಕಳೆ ಬೆಳೆಯುನುಳಿದು ಬಾವನ್ನ ಗೂಡಿ ಬಯಲಾಗುಳಿದಾಗಸ ನಿನ್ನ ರೂಪು ನಿಜವೈ ॥ ೧೧ ॥

ನೀನೆ ನಿರ್ಮಲನು ನಿತ್ಯಸುಖಿಯು ನಿರ್ಮಾಯನೆಂದು ನಿಜಮಂ ತ ದೊಳಿರೆ ಜಗವೇನು ಜಂಝಡಿದು ಏನು ಇದರೊಳಗೇನು ಎಂಬ

ಬುದ್ಧಿ ತಾನೆ ಘಟಿಸಿ ತಾತ್ವಿಕದೊಳು ಸಂವಿತ್ತನೆ ಆತ್ರತದ್ಗತ ಅಮಳೈಕ್ಯ ದೊಳೇ ನೀನರಿಯುದೆಚ್ಚರ ಬೇರೆನಿಸದನೂನ ತೃಪ್ತಿ ನಿನಗೈ ॥ ೧೨ ॥

ಮಾನವಾಂಶ ಮಧ್ಯಮ ಪದಭಕ್ತಿಯೊಳೇನು ಎನಲು ತನುಮನಧನ ಸಿನ್ನಧೀನವಹುದು ದಯಮಾಡು ನೀನು ಭಜಕಾನನಮಣಿಮುಕುರ ಏನು ಏಕೆ ಸುಮ್ಮನೆ ಇಹೆ ಭಕ್ತಾಧೀನನೆಂಬ ಬಿರುದ್ಹೋಯ್ತೆ ಈಗ ದಯಗಾ ಣದಿರಲು ನಾನೇಕೆ ನನಗೆ ನೀನೇಕೆ ನಿಜದಗೊಡವೇತಕ್ಕಿನ್ನು ಬರಿದೆ ॥ ೧೩ ॥

ನೀನು ನಿನ್ನ ಸುಖಸಹಿತ ಇರಲ್ಕರಿದೇನು ಭವದಯಾಂಘ್ರಿಯು ನಿಜ ಭಕ್ತಿನಿದಾನವಿಧಿ ಕೊ ತದ್ಗೃಹವಿದೆ ಎನ್ನಾಜ್ಞೇಯದೊಳುನ್ನತದಿ ॥ ಬಾನ ಮುಖ್ಯ ನವವಿಧ ಭಕ್ಷ್ಯಗಳ್ಹರಿವಾಣದಲ್ಲಿ ತುಂಬಿದ ಪರಿ ಯಿನ್ನೇನು ಮಂತ್ರದ ಧೀನ ನೀನೆ ನಿನ್ನಾಯತಹುದು ಎನಗೈ ॥ ೧೪ ॥

ಕ್ಷೋಣಿಯೊಳಗೆ ಮಲ್ಲನಪುರಹೃದಯಾಬ್ಜಾನು ಸಂಗತಮಿರುತಲಿ ನ್ನೇನಪೂರ್ವ ದಯಗಾಣಿಸಯ್ಯ ಮಹವ ದಿನಪ ತೇಜ॥ ಶಾನೆ ಬೇಡ ಶಾಶ್ವತ ಸುಖಪೊಂದನೆ ನಾನು ಕೇಳಿ ಕೇಳಲು ಬಯಕೆನ್ನದೆ ಪೂಗು ಎನುತ ಸುಮ್ಮಾನದಳೆದು ಗುರು ನೀನೆ ನಿತ್ಯನೆನಿಸ್ಥೆ ॥ ೧೫ ॥

---

ಶ್ರೀಸುಖಾನಂದಾಬ್ಧಿ ಶಾಶ್ವತ ಭಾಸಮಾನ ಮಾನಸಾಂತ ।
ನಾಶರಹಿತ ನಮಾಮಿ ಭಕ್ತೋಲ್ಲಾಸ ಫಣಿಭೂಷ ॥ ಪ ॥

ದೋಷತಿಮಿರಪತಂಗಗಿರಿಕುಲವಾಸ ವಾಸವಾರ್ಚಿತಾಂಘ್ರಿ
ದೇಶಸುಭಾಸಮೇಳನದ ಅಭಿಲಾಷೆಗಭಯಗೊಂಡು ॥ ೧ ॥

ಫಾಲನಯನಕಪಾಲಡಮರುಗಶೂಲಹಸ್ತಸುನೀಲಕಂಧರ
ಮೂಲಶಿರ ಶಿರಮೂಲ ಚಂದಿರ ಜಾಹ್ನವೀಧರನೆ॥
ಕೀಲಪುರನಿರ್ಮೂಲ ಕಾಲಕಾಲ ನಿಗಮವಿಶಾಲ ಮುನಿಕುಲ
ಶೀಲಚಿದ್ಘನರೂಪಭಸಿತ ಕಲಾಪ ನಿಜದೋರು ॥ ೨ ॥

ಆರುವರ್ಗದ ಘೋರತನುವನು ಮೀರಿ ತೋರುವ ಕಾರಣಾಂಗದ
ನೀರ ನೀ ವೈದೋರು ನಿರುಪಮ ನಿತ್ಯ ಎಮಗೊಲಿದು ॥
ಮಾರಮರ್ದನ ಮಂತ್ರವಾಚ್ಯ ವಿಚಾರವಾಚಕ ದೂರದೂರದ
ಲಾರಿಗೆಯು ಇಷ್ಟಾರ್ಥವೀವ ಉದಾರಿ ಸರ್ವಜ್ಞ ॥ ೩ ॥

ಕಾವಕರುಣಿಯದಾವ ದೇವರದೇವ ನೀ ಜಗಪಾವನಾತ್ಮಕ
ಭಾವಗವ್ಯ ಪರಾಕು ಭಜಕೋದ್ಧಾರಿ ಭವಹರನೆ ॥
ಓ ವಧುಪ್ರಿಯ ಆ ವ, ಶ, ಷ, ಸಂಭಾವನಾಧಿಪ ಅಷ್ಟದಳಗತಿಜೀವ
ಜೀವಜ್ಯೋತಿರಾಮಯ ಮೂರ್ತಿ ದಯವಾಗು ॥ ೪ ॥

ದಕ್ಷಮುಖದಧ್ಯಕ್ಷ ಶಿಕ್ಷಾಪೇಕ್ಷ ಗಣಕುಲಪಕ್ಷ ಪರತರ
ದುಕ್ಷಯಾನಗಜಾಜಿನಾಂಬರ ಅಕ್ಷಯಾತ್ಮಕನೇ ॥
ಕುಕ್ಷಿಯೊಳು ಈರೇಳು ಭುವನವ ರಕ್ಷಿಸುವ ಪರಮಾತ್ಮನಿನ್ನನು
ಈಕ್ಷಿಸಲ್ಕಳವಲ್ಲವೈ ಲಕ್ಷಾರ್ಥ ದಿನಮಣಿಯ ॥ ೫ ॥

ಬೋಧಮಯ ನೀನಾದ ಕಥನದಿ ಆದುದೈ ಉಪದೇಶ ಜಗದೊಳ
ಭೇದ ಭೇದ್ಯವೆಯಾಗಿ ಸೋಹಂ ಎಂದು ನಿಜತತ್ವ ॥
ಬೋಧಿಸುತ ಫಲಗೊಂಡು ಬ್ರಹ್ಮದ ಆದಿ ಅಂತ್ಯವದಾದ ನಿಷ್ಕಲ
ನಾದ ಗುರುವಾಗೆ ವಂದಿಸಲಾದೆ ಕೃಪೆಯಾಗು ॥ ೬ ॥

ರಾಮಣೀಯಕವಾದ ಶೈವೋದ್ದಾಮರನು ಬಲಗೊಂಡು ಮಲ್ಲನ
ನಾಮಪುರದೊಳಗಾಯ್ತುಲಾ ಸುತ್ರಾಮ ವಂದ್ಯ ಪದ
ವ್ಯೋಮ ಭೂತಾತೀತ ಮುಕುತಿ ಸ್ತೋಮ ಸೋಮೆಕಟ್ಟೆ ಈಶನ
ನೇಮ ಸಿದ್ಧಿಯೊಳಾಗದೆ ನಿಸ್ಸೀಮ ನಿಜ ಸ್ತುತಿಯು ॥ ೭ ॥

---

ಸಾಮ ಗಾನಲೋಲ ಶಂಕರ ಪಾಹಿ ಸಾಮಗಾನಲೋಲ
ಸಾಮಜನನ ಪಿತ ಸೋಮಾಂಗನೆ ನಿತ್ಯ ಪ್ರೇಮಗೊಡೆನಗೆ ನೀ ॥
ಅಂಧಕಾಸುರ ಭಂಜನ ಬಂಧುರ ಭವ ಸಿಂಧು ಬಡಬಾನಲನ
ಇಂದುಶೇಖರ ಸುಂದರ ಜಾಹ್ನವೀಧರನೆಂದು ನುತಿಸುವಾನಂದವ
ಪಾಲಿಸು ॥ ೧ ॥

ಹರಿಹರಿಣಾಕರನೆ ಕರಕರಕೋಟಿ ಮಿರುಪತ್ರೈಜ ಸಮಾನೆ
ಹರಿ ಗಿರಿ ನಾಸನೆ ಹರಿ ಪುತ್ರ ನಾಶನೆ ವರಮೌನಿನುತನೆ ನೀ
ಪೊರೆದಂತೆ ಸಲಹೆನ್ನ ॥ ೨ ॥

ಅಜಹರಿಗಳವಡದ ನಿನ್ನನು ಈತು ಭಜಿಸಲಾದುದೇ ಮೋದ
ತ್ರಿಜಗದ ಒಡೆತನ ವಿಜಯ ವಿತ್ತವದೆಲ್ಲ ನಿಜ ಭಕ್ತರ ವಶವೆಂಬ
ನಿಜದಿ ನಾ ಸ್ತುತಿಸುವೆ ॥ ೩ ॥

ಕಾಮರೂಪಿಗಳಾದ ದಾನವ ಶಿರಸ್ತೋಮದೊಳರಗಳೆದ
ಭೀಮ ಭರ್ಗ ಶುಭನಾಮ ಸೋಮೆಕಟ್ಟೆ ಧಾಮ ಮಲ್ಲನ ಪುರ
ನೇಮಕ ಗೆರೆವೆ ನೀ ॥ ೪ ॥

---

ರಾಗ ಪಂತುವರಾಳಿ. ಆದಿತಾಳ.

ನಮೋನಮೋ ಎನ್ನುತ ನಮಿಸುತಲಿರ್ಪೆನು
ಕ್ರಮ ಗುರುವಿನ ಶ್ರೀಪಾದದಲಿ ॥
ತಮದುರಿತವ ಪರಿಹರಿಸುವ ದ್ಯುಮಣಿಯ
ಸಮದ ವಿರಕ್ತನ ಚರಣದಲಿ ॥ ೧ ॥

ನಿಗಮ ಶಾಸ್ತ್ರಗಳು ಅಗಣಿತ ಕಲಿ ಕೊಡೂ
ಜಗದ್ವಾಸನೆ ಬಗೆಯಾಂತಿಹುದು ॥
ಒಗುಮಿಗೆ ಭಕ್ತಿಯನಗಲದೆ ಇರ್ದೊಡೆ
ಜಗದೀಶ್ವರ ಗತಿ ಮೆಚ್ಚು ಇದು ॥ ೨ ॥

ಸಂಕಲ್ಪವು ಸಿದ್ಧಿಗಳೆಂಬಿವುಗಳ
ಭೊಂಕನುಳಿದು ಮನ ಕೊಂಕದಲೆ ॥
ಅಂಕರಹಿತಶಶಾಂಕನ ತೇಜದಿ
ಶಂಕೆಯ ಮರೆದುರೆ ಶಾಂತಿಯಲಿ ॥ ೩ ॥

ಯಾಗದಾನಜಪನೀತಿಯು
ಯೋಗದ ಭೇದವು ಪೂಜೆಯು ಫಲವಿರಲಿ ॥
ಈಗ ನಿಜದಿ ನಿರ್ಮಲನಾಗದೆಯಿರೆ
ರೋಗಿ ಭೋಗಿ ಬರಿ ಕರ್ಮದಲಿ ॥ ೪ ॥

ನಾನೇ ಬ್ರಹ್ಮವು ಎನಲಹಂಕಾರವು
ನಾನಲ್ಲೆನಲದು ದೀನತ್ವ ॥
ನೀನೆ ಸಗುಣ ನಿಶ್ಚಿಂತನು ಎನಲು
ತಾನೇ ಸಾಧ್ಯವು ನಿಜತತ್ವ ॥ ೫ ॥

ಆಲಿಯು ನಿಲ್ಲಿಸಿ ಗಾಳಿಯು ಗೆಲ್ವದು
ಮೇಲೆ ಮನಸು ಮನೆ ಗೂಡುವದು ॥
ಜಾಲ ಮೂಲ ಕಳೆದ್ಹೋಗಲು ಮಾಜದೆ
ಲೋಲ ಚಿತ್ತು ನಿಜ ಬೆಳಗುವುದು ॥ ೬ ॥

ಭಕ್ತಿಯಿಲ್ಲದಿರೆ ಮುಕ್ತಿಯು ದೊರಕದು
ಸತ್ಯವಾಕ್ಯ ಸಟೆಯಲ್ಲವಿದು ॥
ಯುಕ್ತಿ ಶಕ್ತಿ ಗತ್ತ್ಯತ್ತ ಮೀರಿ ಸದ್ಭಕ್ತರ
ಭಕ್ತಿಯೊಳಿರುತಿಹುದು ॥ ೭ ॥

ಸುಟ್ಟು ದುರಿತವನು ದಿಟ್ಟನಾದ ಬಳಿಕೆಷ್ಟು ದಿವಸ ಏತಕೆ ಮರೆವೆ ॥
ಭ್ರಷ್ಟನಾಗದತಿ ಕೆಟ್ಟ ಭವಕೆ ಹಿಮ್ಮೆಟ್ಟಿದಂತೆ ಸಾಧಿಸು ನಿಜವ ॥ ೮ ॥

ಸೋಮೆಕಟ್ಟಿಯು ನಾಮಕರ್ತ ಚಿದ್ವ್ಯೋಮಕಾಯ ಸದ್ಗುರುವರನು ॥
ಈ ಮಲ್ಲನಪುರ ನೇಮಕ ಮನದಭಿರಾಮನಾಗಿರೆ ಒರೆದಿದನು ॥ ೯ ॥

---

ರಾಗ. ದೇಶಿ. ತೊರೆಆದಿತಾಳ.

ಕಂಡೆನು ಗುರುವರನ ಕರುಣಾಸಾಗರನ ॥ ಪ ॥

ಕಂಡೆ ಪೂರ್ವದಿ ನರಕದಂಡಲೆಯೊಳು ಸಿಲ್ಕಿ
ದ್ದಿಂಡು ಜೀವಿಗಳ ಶಿವ ಮಂಡಲಕೊಯ್ದ ನೀತ ॥ ೧ ॥

ಹಿಂದೆ ಪಾಳಾದುದ ಇಂದುವಸತಿಯು ಮಾಡ
ಲೆಂದು ಕಾಲನು ಇರೆ ಮಂದಹಾಸದಿ ಬಂದ ॥ ೨ ॥

ಕಾಲ ಕೋಪದಿ ಶಿವನ ಓಲೈಪ ಜನರನ್ನು
ಕಾಲಗೆಡಿಪ ಸುದ್ದಿ ಕೇಳಿದಾಕ್ಷಣಬಂದ ॥ ೩ ॥

ಭೂತಳದೊಳು ನಿಂತು ಖ್ಯಾತಿ ಮಂತ್ರದೊಳು, ಪು
ನೀತರ ಮಾಡಲು ಈತ ಬಂದೈದಾನೆ ॥ ೪ ॥

ಮರೆಯು ಮಾಯದ ತೆರೆ ಹರಿದು ಹಾಕುತ ನಿಜ
ದರಿವ ಸಾಧಿಸುವಂಥ ಗುರುತ ತೋರುವನೀತ ॥ ೫ ॥

ಶಿವಾನುಭವ ಗ್ರಂಥಮಾಲಾ ನಂ. ೪೩

# ಉರಿಲಿಂಗಪೆದ್ದಿಯ ವಚನಗಳು.



ಸಂಪಾದಕರು

**ರಾ॥ ಸಾ॥ ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**



ಬೆಲೆ ೧ ರೂಪಾಯಿ.

# ಪ್ರಸ್ತಾವನೆ.



ಉರಿಲಿಂಗಪೆದ್ದಿಯ ವಚನಗಳು ಒತ್ತಟ್ಟಿಗೆ ಎಲ್ಲಿಯೂ ದೊರೆಯು [illegible] ಆದರೆ ಆತನ ವಚನಗಳನ್ನು ಅನೇಕ ಸಂಗ್ರಹಕಾರರು ತಮ್ಮ ಗ್ರಂಥಗಳಲ್ಲಿ ಹೇರಳವಾಗಿ ಉದಹರಿಸಿರುವರು. ಅಂಥ ವಚನಗಳನ್ನು ನಾನು ಬೇರೆಯಾಗಿ ಆರಿಸಿ ತೆಗೆದು ಅವುಗಳನ್ನು ವಿಷಯಾನುಸಾರವಾಗಿ ವ್ಯವಸ್ಥೆಗೊಳಿಸಿ ಗ್ರಂಥವನ್ನು ರಚಿಸಿದ್ದೇನೆ. ಈ ಗ್ರಂಥದಲ್ಲಿ ಸಂಸ್ಕೃತ ಆಧಾರ ಶ್ಲೋಕಗಳು ಬಹಳವಾಗಿ ಬಂದಿರುತ್ತವೆ. ಅವೆಲ್ಲವೂ ಬಹು ತರ ಅಶುದ್ಧವಾಗಿವೆ. ಅವುಗಳನ್ನು ಶುದ್ಧ ಪಡಿಸುವದು ಬಹು ಕಷ್ಟಕರವಾದ ಕೆಲಸವು. ಇದನ್ನು ವಾಚಕರು ಗ್ರಹಿಸಿ, ಈ ದೋಷವನ್ನು ಕ್ಷಮಿಸುವರೆಂದು ನಾನು ವಿನಂತಿಮಾಡಿಕೊಳ್ಳುತ್ತೇನೆ. ಪ್ರತಿಯೊಂದು ವಚನದ ಭಾವವನ್ನು ಅದರ ಕೆಳಗೆಯೇ ಕೊಟ್ಟಿರುತ್ತೇನೆ. ಈ ಗ್ರಂಥದ ಮಹತ್ವವನ್ನು ವಾಚಕರು ಅರಿತುಕೊಂಡು, ಅದನ್ನು ಆದರಿಸುವರೆಂದು ನಂಬಿದ್ದೇನೆ.

ವಿಜಾಪುರ.
೧೬-೨-೩೬.

ಫ. ಗು. ಹಳಕಟ್ಟಿ.
ಸಂಪಾದಕ.



**ವಚನ:—** ೧೨೮. ಓಂನಮಃ ಶಿವಾಯ ಎಂಬುದೇ ಆಚಾರಲಿಂಗ ಓಂನಮಃಶಿವಾಯ ಎಂಬುದೇ ಗುರುಲಿಂಗ, ಓಂನಮಃಶಿವಾಯ ಎಂಬುದೇ ಶಿವಲಿಂಗ, ಓಂನಮಃಶಿವಾಯ ಎಂಬುದೇ ಚರಲಿಂಗ, ಓಂನಮಃಶಿವಾಯ ಎಂಬುದೇ ಪ್ರಸಾದಲಿಂಗ, ಓಂನಮಃಶಿವಾಯ ಎಂಬುದೇ ಮಹಾಲಿಂಗ, ಓಂನಮಃಶಿವಾಯ ಎಂದೆನಲು ಪರಶಿವನು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:—** ಷಟ್‌ಸ್ಥಲ ಜ್ಞಾನವು ಅತ್ಯಂತ ಮಹತ್ತರವಾದದ್ದು. ಇದು ಪಂಚಾಕ್ಷರಿಯ ಜ್ಞಾನದ ಮೂಲಕ ದೃಢಪಡುವದು. ಭಕ್ತನಲ್ಲಿರುವ ಎಲ್ಲ ಲಿಂಗಗಳು ಪಂಚಾಕ್ಷರಿಯ ಸ್ವರೂಪದವೇ ಇರುತ್ತವೆ. ಅದನ್ನು ಧ್ಯಾನಿಸುವದರಿಂದ ಆಯಾ ಲಿಂಗಗಳು ವ್ಯಕ್ತವಾಗುವವು.

**ವಚನ:—** ೧೨೯. "ಸದ್ಗುರು ಶ್ಚಿವಲಿಂಗಂಚ ಜಂಗಮಂಚ ಪ್ರಸಾದಕಂ । ಚತುರ್ವಿಧಂ ಷಡಕ್ಷರಂ ಮಂತ್ರಂ ಸಾಕ್ಷಾತ್ ಪರಶಿವಃ" ಓಂ ನಮಃಶಿವಾಯ, ಓಂನಮಃಶಿವಾಯ ಎನ್ನದಿದ್ದೊಡೆ ಬಂಧನ. ಓಂನಮಃ ಶಿವಾಯ ಎಂದೊಡೆ ಮೋಕ್ಷ. "ಷಡಕ್ಷರ ಜಪಂ ನಾಸ್ತಿ ಸರ್ವೇಷಾ" ಬಂಧನಂ ತಥಾ । ತನ್ಮಂತ್ರ ಜಪತೋ ಭಕ್ತಃ ಸದ್ಯೋನ್ಮೋಕ್ಷ ನ ಸಂಶಯಃ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಯ್ಯ ಬಂಧ ಮೋಕ್ಷ ತಾನೇ ಓಂನಮಃ ಶಿವಾಯ.

**ಭಾವ:—** ಇಲ್ಲಿ ಪಂಚಾಕ್ಷರಿಯ ಮಹತ್ವವನ್ನು ಪುನಃ ವಿವರಿಸಿರುವನು. ಅದರಿಂದ ಬಂಧನವು ದೂರಾಗಿ ಮೋಕ್ಷವು ಘಟಿಸುವದು.

**ವಚನ:—** ೧೩೦. ಶ್ರೀ ಮಹಾ ಪಂಚಾಕ್ಷರಿಯೇ ಸರ್ವ ಮಂತ್ರವೆಲ್ಲಕ್ಕೆಯೂ ಉತ್ಪತ್ತಿ ಸ್ಥಿತಿ ಲಯ ಸ್ಥಾನ. ಸರ್ವ ಕಾರಣವೆಲ್ಲಕ್ಕೆಯೂ ಮೂಲವು ಶ್ರೀಪಂಚಾಕ್ಷರಿ. ಅದಂತೆಂದಡೆ ॥ ಕಾಮಿಕಾಗಮೇ ॥ ಶ್ಲೋ ॥ ಸಪ್ತಕೋಟಿ ಮಹಾಮಂತ್ರಾ ಉಪಮಂತ್ರಾಸ್ತ್ವನೇಕಧಾ । ಪಂಚಾಕ್ಷರ್ಯಾಂ ಪ್ರಲೀಯಂತೆ ಪುನಸ್ತತ್ರವಿನಿರ್ಗತಾಃ ॥ ತಸ್ಮಿನ್ವೇದಾಶ್ಚ ಶಾಸ್ತ್ರಾಣಿ ಮಂತ್ರ ಪಂಚಾಕ್ಷರೀ ತಥಾ । ಎಂದುದಾಗಿ ಇದು ಕಾರಣ ಶ್ರೀಪಂಚಾಕ್ಷರಿಯುಳ್ಳ ಸದ್ಭಕ್ತನೇ ವೇದವಿತ್ತು, ಆ ಸದ್ಭಕ್ತನೇ ಶಾಸ್ತ್ರವಾನ್, ಆ ಮಹಾಮಹಿಮನೇ ಪುರಾಣಿಕನು, ಆ ಮಹಾಮಹಿಮನೇ ಆಗಮಿಕನು, ಆ ಮಹಾಮಹಿಮನೇ ಸರ್ವಜ್ಞನಯ್ಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಎಲ್ಲ ಮಂತ್ರಗಳು ಪಂಚಾಕ್ಷರಿಯಿಂದಲೇ ಹುಟ್ಟಿವೆ. ಪಂಚಾಕ್ಷರಿಯುಳ್ಳವನೇ ನಿಜವಾದ ಭಕ್ತನು. ಅವನೇ ವೇದಜ್ಞನು, ಮಹಿಮನು, ಸರ್ವಜ್ಞನು ಎಂದು ಇಲ್ಲಿ ವಚನಕಾರನು ಹೇಳುತ್ತಾನೆ.

**ವಚನಃ**— ೧೩೧. ವೇದವಾವುದು ವೇದ್ಯವಾವುದು ಎಂಬುದನ ರಿತು ನಿಂದಾತನೇ ಕೃತಾರ್ಥನು, ವೇದವಿತ್ತು. ವೇದ್ಯನಿಂತಹನೆಂದರಿದು ವೇದಿಸಿದರು ನಮ್ಮ ಪುರಾತನರು. ಓಂನಮಃಶಿವಾಯ ಎಂಬ ಮಂತ್ರ ವೇದ್ಯರು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಯ್ಯನ ಶರಣರು.

**ಭಾವಃ**— ನಿಜವಾದ ಶರಣರು ಪಂಚಾಕ್ಷರಿಯನ್ನು ಬಲ್ಲವರಿರು ತ್ತಾರೆ. ಅವರೇ ಕೃತಾರ್ಥರು ನಿಜವಾದ ವೇದವಿತ್ತುಗಳು ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನಃ**— ೧೩೨. ಓಂ ನಮಃಶಿವಾಯ ಎಂಬುದೇ ಮಂತ್ರ. ಓಂ ನಮಃಶಿವಾಯ ಎಂಬುದೇ ತಂತ್ರ, ಓಂನಮಃಶಿವಾಯ ಎಂಬುದೇ ಯಂತ್ರ, ಓಂನಮಃಶಿವಾಯ ಎಂಬುದೇ ವಶ್ಯ. ಇದು ಕಾರಣ ಓಂ ನಮಃಶಿವಾಯ ಎಂಬುದೇ ಸಕಲಸಿದ್ಧಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಪಂಚಾಕ್ಷರವೇ ನಿಜವಾದ ಮಂತ್ರ, ತಂತ್ರ, ಯಂತ್ರ, ವಶ್ಯವಿದೆ. ಇದರಿಂದಲೇ ಸಕಲ ಸಿದ್ಧಿ ಎಂದು ಹೇಳಿರುವನು.

**ವಚನಃ**— ೧೩೩. ಓಂನಮಃಶಿವಾಯ ಎಂಬುದೇ ವೇದ, ಓಂ ನಮಃಶಿವಾಯ ಎಂಬುದೇ ಶಾಸ್ತ್ರ, ಓಂನಮಃಶಿವಾಯ ಎಂಬುದೇ ಆಗಮ, ಓಂನಮಃಶಿವಾಯ ಎಂಬುದೇ ಪುರಾಣ, ಓಂನಮಃಶಿವಾಯ ಎಂಬುದೇ ಸಕಲ ಕಳೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಈ ಪಂಚಾಕ್ಷರಿಯೇ ವೇದ ಶಾಸ್ತ್ರಾಗಮಂಗಳು. ಅದೇ ಸಕಲ ಕಳೆ ಎಂದು ಹೇಳಿರುವನು.

**ವಚನಃ**— ೧೩೪. ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸ ದಿಂದ ಉಪಮನ್ಯುವಿಂಗೆ ಶಿವಜ್ಞಾನ ಸಿದ್ಧಿಸಿತ್ತು. ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸದ ಸಾಧನದಿಂದ ವಶಿಷ್ಠ, ವಾಮದೇವ ಮೊದಲಾದ ಸಮಸ್ತ ಋಷಿಗಳಿಗೆ ಹಿರಿದಪ್ಪ ಪಾಪದೋಷವು ಪರಿಹರಿಸಿತ್ತು. ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸದ ಸಾಧನದಿಂದ ಬ್ರಹ್ಮವಿಷ್ಣ್ವಾದಿ

ಗಳಿಗೆ ಜಗತ್ಸೃಷ್ಟಿರಕ್ಷಾಪಶಿತ್ವ ಸಾಧ್ಯವಾಯಿತ್ತು. ಅದೆಂತೆಂದಡೆ, ಬ್ರಹ್ಮಾಂಡ ಪುರಾಣದಲ್ಲಿ ॥ ಶ್ಲೋ ॥ ಉಪಮನ್ಯುಃ ಪುರಾ ಯೋಗೀ ಮಂತ್ರೇಣಾನೇನ ಸಿದ್ಧಿವಾನ್। ಲಬ್ಧವಾನ್ಪರಮೇಶಾನಾಚ್ಛೈವಶಾಸ್ತ್ರ ಪ್ರವಕ್ತೃತಾಂ। ಮತ್ತಂ॥ ವಿಷ್ಣು ಪುರಾಣದಲ್ಲಿ ॥ ಶ್ಲೋ ॥ ವಶಿಷ್ಠವಾಮದೇವಾದ್ಯಮುಾ ಸರ್ವೇ ಮುಕ್ತ ಕಿಲ್ಬಿಷಾಃ। ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋ ಭವನ್। ಎಂದುದಾಗಿ, ಮತ್ತಂ ಕೂರ್ಮ ಪುರಾಣದಲ್ಲಿ ॥ ಶ್ಲೋ ॥ ಬ್ರಹ್ಮಾದೀನಾಂಚ ದೇವಾನಾಂ ಜಗತ್ಸೃಷ್ಟ್ಯರ್ಥಕಾರಣಂ। ಮಂತ್ರಸ್ಯಾಸ್ಯೈವಮಾಹಾತ್ಮ್ಯಾತ್ಸಾಮರ್ಥ್ಯ ಮುಪಜಾಯತೆ ಎಂದುದಾಗಿ ಇಂತಪ್ಪ ಪುರಾಣವಾಕ್ಯಂಗಳನರಿದು ವಿಪ್ರರೆಲ್ಲರು ಶ್ರೀ ಪಂಚಾಕ್ಷರಿಯ ಜಪಿಸಿರೋ, ಜಪಿಸಿರೋ! ಮಂತ್ರಂಗಳುಂಟೆಂದು ಕೆಡಬೇಡಿ ಕೇಡಬೇಡಿ. ಮರೆಯದಿರಿ ಮಹತ್ತಪ್ಪ ಪದವಿಯ ಪಡೆವೊಡೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರ ದೇವರ ದಿವ್ಯ ನಾಮವನು.

**ಭಾವ**:— ಮಹತ್ತರವಾದ ಮೋಕ್ಷ ಪದವಿಯನ್ನು ಹೊಂದ ಬೇಕಾದವರೆ ಪರಮಾತ್ಮನ ದಿವ್ಯ ನಾಮವನ್ನು ಪಂಚಾಕ್ಷರಿಯ ಮೂಲಕ ವಿಶ್ವಾಸಪೂರ್ವಕವಾಗಿ ಉಚ್ಚರಿಸಬೇಕು. ಹೀಗೆ ಈ ಮಂತ್ರವನ್ನು ಉಚ್ಚರಿಸಿ ವಶಿಷ್ಠ, ವಾಮದೇವಾದಿ ಋಷಿಗಳೂ ಬ್ರಹ್ಮ ವಿಷ್ಣ್ವಾದಿ ದೇವತೆಗಳೂ ಶ್ರೇಷ್ಠ ಪದವಿಯುಗಳನ್ನು ಹೊಂದಿದ್ದರ ಉದಾಹರಣೆಗಳನ್ನು ಇಲ್ಲಿ ಕೊಟ್ಟಿರುವನು.

**ವಚನ**:— ೧೩೫. ಓಂನಮಃಶಿವಾಯ ಓಂನಮಃಶಿವಾಯ ಎನ್ನದಿದ್ದರೆ ಬಂಧನ. ಓಂನಮಃಶಿವಾಯ ಓಂನಮಃಶಿವಾಯ ಎಂದರೆ ಮೋಕ್ಷ. ಷಡಕ್ಷರೀ ಜಪಂ ನಾಸ್ತಿ ಸರ್ವೇಷಾಂ ಬಂಧನಂ ತಥಾ। ತನ್ಮಂತ್ರ ಜಪತೋ ಭಕ್ತ್ಯಾ ಸದ್ಯೋ ಮೋಕ್ಷಂ ನ ಸಂಶಯಃ ಎಂದುದಾಗಿ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಯ್ಯ ಬಂಧ ಮೋಕ್ಷವು ಓಂನಮಃಶಿವಾಯ.

**ಭಾವ**:— ಪಂಚಾಕ್ಷರೀ ಮಂತ್ರ ಜಪದಿಂದ ಮೋಕ್ಷವು, ಮತ್ತು ಅದನ್ನು ಜಪಿಸದೆ ಇರುವದರಿಂದ ಬಂಧನವು, ಎಂದು ಹೇಳಿ ಇದರ ಸಮರ್ಥನಕ್ಕಾಗಿ ಉಕ್ತಿಗಳನ್ನು ಉದಹರಿಸಿರುವನು.

**ವಚನ**:— ೧೩೬. ಅಗ್ರಜನಾಗಲಿ, ಅಂತ್ಯಜನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ, ಪಿಜಸುವುದು ಪಂಚಾಕ್ಷರಿಯ. ಜಪದಿಂದ

ರುದ್ರನಪ್ಪುದು ತಪ್ಪದು. ಅದೆಂತೆಂದಡೆ ಲೈಂಗ್ಯೆ, ಅಗ್ರಜೋ ಅಂತ್ಯಜೋ ವಾಪಿ ಮೂರ್ಖೋ ವಾ ಪಂಡಿತೋಪಿ ವಾ ಜಪೇತ್ಪಂಚಾಕ್ಷರೀ ಮಂತ್ರಂ ಸ ರುದ್ರೋ ನಾತ್ರಸಂಶಯಃ. ಇದಕ್ಕೆ ಶಪಥವ ಮಾಡಿದೆನು ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಪಂಚಾಕ್ಷರಿಯನ್ನು ಯಾವನು ವಿಶ್ವಾಸಪೂರ್ವಕವಾಗಿ ಜಪಿಸುತ್ತಾನೋ ಅವನು ರುದ್ರನಾಗುವನೆಂದು ಹೇಳಿ ಅದಕ್ಕೋಸ್ಕರ ವಚನಕಾರನು ಒಂದು ಉಕ್ತಿಯನ್ನು ಉದಹರಿಸಿರುವನು. ಈ ಮಂತ್ರವನ್ನು ಎಂಥ ಜಾತಿಯವನಾದರೂ ಜಪಿಸಿ ಶ್ರೇಷ್ಠಪದವನ್ನು ಹೊಂದಬಹುದೆಂದು ಹೇಳಿರುವನು.

---

# ರುದ್ರಾಕ್ಷಿ.

**ವಿವರಣೆಃ**— ರುದ್ರಾಕ್ಷಿಯು ಈಶ್ವರನ ಚಿನ್ಹವಾಗಿದೆ. ಅದನ್ನು ವೀರಶೈವನು ತನ್ನ ದೇಹದಮೇಲೆ ಧರಿಸತಕ್ಕದ್ದೆಂದು ವಚನಕಾರನು ಮುಂದಿನ ವಚನಗಳಲ್ಲಿ ಹೇಳಿರುವನು.

**ವಚನಃ**— ೧೩೭. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಪಂಚಬ್ರಹ್ಮವೊದಲಾದ ಪಂಚಮುಖದ ರುದ್ರಾಕ್ಷಿಯು ಹಸ್ತ, ಬಾಹು, ಕರ್ಣ, ಕಂಠ, ಉರುಮಸ್ತಕಂಗಳಲ್ಲಿ ಧರಿಸಿಪ್ಪಾತನೇ ರುದ್ರನು. ಆ ಸದ್ಭಕ್ತನ ದರ್ಶನ ಸ್ಪರ್ಶನವ ಮಾಡಿದವರಿಗೆ ಭವರೋಗ ದುರಿತ ಮುಟ್ಟಲಮ್ಮವು ನೋಡಾ ಶೃತಿ. ॥ ಅತ ಏವ ರುದ್ರಾಕ್ಷಧಾರಣಾದೇವ ರುದ್ರಃ ಎಂದುದಾಗಿ ರುದ್ರಪದವಿಯನೀವ ರುದ್ರಾಕ್ಷಿಯ ಧರಿಸಿಪ್ಪ ಶಿವಭಕ್ತಂಗೆ ಶರಣೆಂಬೆನಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ಕೆಲವು ರುದ್ರಾಕ್ಷಿಗಳಿಗೆ ಪಂಚಮುಖಗಳಿರುವವು. ಈ ಮುಖಗಳು ಪಂಚಬ್ರಹ್ಮದ ಗುರ್ತುಗಳಾಗಿವೆ. ಇಂಥ ರುದ್ರಾಕ್ಷಿಗಳನ್ನು ಧರಿಸಿದರೆ ಭವರೋಗವು ಭಕ್ತನನ್ನು ಹೊದ್ದಲಾರದೆಂದು ಇಲ್ಲಿ ಹೇಳಿರುವನು.

**ವಚನಃ**—೧೩೮. ಘನಕ್ಕೆ ಘನ ಮಹಿಮೆಯ ಪಡೆವರೆ ಶ್ರೀರುದ್ರಾಕ್ಷಿಯನೆ ಧರಿಸುವುದು. ರುದ್ರಾಕ್ಷಿಯ ಧರಿಸಿಪ್ಪಾತನು ಮರ್ತ್ಯನಲ್ಲ ನೋಡಿರೇ. ಪಶ್ಚಿಮದಲ್ಲಿ ಒಂದು, ಶಿಖಿಯಲ್ಲಿ ಮೂರು, ಶಿಖೆಯಲ್ಲಿ ಮೂವತ್ತಾರು, ಗಳದಲ್ಲಿ ಮೂವತ್ತೆರಡು, ಕರ್ಣದ್ವಯದಲ್ಲಿ ಎರಡು, ಹಾರದಲ್ಲಿ ನೂರೆಂಟು, ತೋಳುಗಳಲ್ಲಿ ಹದಿನಾರು ಹದಿನಾರು, ಕರಗಳಲ್ಲಿ ಹನ್ನೆರಡು ಹನ್ನೆರಡು ಉರದಲ್ಲಿ ಐವತ್ತು, ಜಪದಲ್ಲಿ ಇಪ್ಪತ್ತೆಂಟು, ಈ ಕ್ರಮುವನರಿದು ರುದ್ರಾಕ್ಷಿಯ ಧರಿಸಿದಾತನೇ ರುದ್ರನು. ಆತನೇ ಸದ್ಯೋನ್ಮುಕ್ತನು. ಆತನೇ ಇಹಲೋಕ ಪೂಜ್ಯನು. ಆತನ ದರ್ಶನ ಸ್ಪರ್ಶನದಿಂದಲಾನು ನಿತ್ಯ ಮುಕ್ತನಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ವಚನಕಾರನು ಈ ವಚನದಲ್ಲಿ ರುದ್ರಾಕ್ಷಿಯನ್ನು ಶರೀರದ ಯಾವಯಾವ ಭಾಗಗಳಲ್ಲಿ ಎಷ್ಟೆಷ್ಟು ಧರಿಸಬೇಕೆಂಬದನ್ನು ವಿಶದಪಡಿಸಿರುವನು. ಹೀಗೆ ಧರಿಸುವವನು ಮೋಕ್ಷವನ್ನೈದುವನೆಂದು ಇಲ್ಲಿ ಹೇಳಿದ್ದಾನೆ.

**ವಚನ:**—೧೩೯. ಸದ್ಯೋಜಾತ ವಾಮದೇವ ಮೊದಲಾದ ಪಂಚ ಮುಖವೇ ಪಂಚಮುಖದ ರುದ್ರಾಕ್ಷಿ. ಆ ರುದ್ರಾಕ್ಷಿಯು ಹಸ್ತ ತೋಳು ಉರ ಕಂಠ ಕರ್ಣ ಮಸ್ತಕದಲ್ಲಿ ಧರಿಸಿಪ್ಪ ಶಿವಭಕ್ತನೇ ರುದ್ರನು. ಆತನ ದರ್ಶನ ಸ್ಪರ್ಶನದಿಂದ ಭವರೋಗ ದುರಿತವಿರಲವ್ವುವು ನೋಡಾ. "ಅಥ ಏವ ರುದ್ರಾಕ್ಷಿಧಾರಣಾತ್ ರುದ್ರೋಭವತಿ" ಇಂತೆಂದುದಾಗಿ ರುದ್ರಾಕ್ಷಿ ಧರಿಸಿಪ್ಪ ಶರಣರಿಗೆ ಶರಣೆಂಬೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ಇಲ್ಲಿ ರುದ್ರಾಕ್ಷಿಯ ಮಹತ್ವವನ್ನು ವಚನಕಾರನು ವಿವರಿಸಿರುವನು.

**ವಚನ:**— ೧೪೦. ಘನಕ್ಕೆ ಘನಮಹಿಮೆಯ ಪಡೆವರೆ ರುದ್ರಾಕ್ಷಿಯ ಧರಿಸಿಪ್ಪ ಸದ್ಭಕ್ತನು ಮನುಜನಲ್ಲ, ನೋಡಿರೇ. ಮುನ್ನಲೊಬ್ಬ ವ್ಯಾಧನು ಶ್ವಾನನ ಕೊರಳಲ್ಲಿ ರುದ್ರಾಕ್ಷಿಯ ಕಟ್ಟಲು, ಆ ಶ್ವಾನ ರುದ್ರ ಲೋಕವನ್ನೈದಿತ್ತೆಂಬುದಕ್ಕೆ ಶಿವಧರ್ಮ ಪುರಾಣ ಪ್ರಸಿದ್ಧ ನೋಡಿರೇ. ॥ ರುದ್ರಾಕ್ಷ ಕಂಠಮಾಶ್ರಿತ್ಯ ಶ್ವಾನೋಪಿ ಮ್ರಿಯತೆ ಯದಿ॥ ಸೋಪಿ ರುದ್ರತ್ವಮಾಪ್ನೋತಿ ಕಿಂ ಪುನರ್ಮಾನುಷಾದಯಃ ॥ ಎಂದುದಾಗಿ ಮತ್ತೆ ಶಿಖಾಯಾಂ ಧಾರಯೇದೇಕಂ ಶಿರಸಿ ತ್ರೀಣಿ ಧಾರಯೇತ್। ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ಏಕೈಕಂ ಕರ್ಣಯೋರ್ದ್ವಯಂ। ದ್ವಾತ್ರಿಂಶತ್ಕಂಠ ಮಾಲಾಯಾಂ ಪಂಚಾಶನ್ಮಾಲಿಕಾಂ ಹೃದಿ। ಬಾಹ್ವೋಶ್ಚ ಷೋಡಶಶ್ಚೈವ ದ್ವಾದಶೈವ ಪ್ರಕೋಷ್ಠಕೆ। ಅಷ್ಟೋತ್ತರ ಶತಂ ಮಾಲಾ ರುದ್ರಾಕ್ಷೈರುಪವೀತಕಂ। ಪದೇ ಪದೇಶ್ವಮೇಧಸ್ಯ ಫಲಂ ಪ್ರಾಪ್ನೋತಿ ಶಾಶ್ವತಂ ॥ ಎಂದುದಾಗಿ ಶಿಖಿಯಲ್ಲಿ ಒಂದು, ಶಿರಸ್ಸಿನಲ್ಲಿ ಮೂರು, ಮಂಡೆಯ ಸುತ್ತಲು ಮೂವತ್ತಾರು, ಎರಡು ಕಿವಿಗಳಲ್ಲಿ ಒಂದೊಂದು, ಕೊರಳಲ್ಲಿ ಮೂವತ್ತೆರಡು, ಹೃದಯದಲ್ಲಿ ಐವತ್ತು, ಎರಡು ತೋಳುಗಳಲ್ಲಿ ಹದಿನಾರು ಹದಿನಾರು, ಎರಡು ಮುಂಗೈಗಳಲ್ಲಿ ಹನ್ನೆರಡು ಹನ್ನೆರಡು, ಯಜ್ಞೋಪವೀತವಾಗಿ ನೂರೆಂಟು ಮಣಿಗಳಿಂದ ಅಕ್ಷಮಾಲೆಯಂ ಮಾಡಿ ಧರಿಸುವುದು. ಈ ರೀತಿಯಲ್ಲಿ ಧರಿಸಿದಾತನು ಹೆಜ್ಜೆ ಹೆಜ್ಜೆಯಲ್ಲಿ ಅಶ್ವಮೇಧಯಾಗದ ಫಲ

ವಸ್ಸೈದುವನು. ಸಂಶಯುವಿಲ್ಲಾಗಿ ಇಂತಪ್ಪ ಮಹಾಮಹಿಮನು ಇಹಲೋಕ ಪೂಜ್ಯನು, ಪರಲೋಕ ಪೂಜ್ಯನು. ಆ ಸದ್ಭಕ್ತನ ದರ್ಶನ ಸ್ಪರ್ಶನದಿಂದ ಪಾಪಕ್ಷಯುವಹುದು. ಈ ಕ್ರಮವನರಿಯದೆ ರುದ್ರಾಕ್ಷಿಯ ಧರಿಸಿದಡೆ ಕತ್ತೆ ರುದ್ರಾಕ್ಷಿಯ ಹೊತ್ತು ಬಂದಂತೆ ಕಾಣಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಇಲ್ಲಿ ವಚನಕಾರನು ರುದ್ರಾಕ್ಷಿಯ ಮಹಿಮೆಯನ್ನು ವರ್ಣಿಸಿ ಅದನ್ನು ಶರೀರದ ಯಾವ ಯಾವ ಭಾಗಗಳಲ್ಲಿ ಎಷ್ಟು ಎಷ್ಟು ಧರಿಸಬೇಕೆಂಬುದನ್ನು ಹೇಳಿರುವನು.



# ಮೋಕ್ಷ.



**ವಿವರಣೆ—** ಮುಂದಿನ ವಚನಗಳಲ್ಲಿ ಲಿಂಗಾಂಗಿಯು ಮೋಕ್ಷ ವನ್ನು ಹೊಂದುವ ರೀತಿಯನ್ನು ಹೇಳಿದ್ದಾನೆ. ಅವನು ತನ್ನ ಆಚರಣೆ, ಮತ್ತು ರೀತಿ ನಡತೆಗಳಿಂದ ತನ್ನಲ್ಲಿ ಲಿಂಗದ ಕಳೆಯನ್ನು ಬರಮಾಡಿ ಕೊಳ್ಳತಕ್ಕದ್ದು. ಉಚ್ಚ ವಿಚಾರ ಆಚಾರಗಳ ಆವಿರ್ಭಾವವೇ ಈ ಲಿಂಗದ ಕಳೆಯ ಉತ್ಪಾದನೆಯ ಕುರುಹು ಎಂದು ಹೇಳಬಹುದು. ಪರಮಾತ್ಮನು ತನ್ನಿಂದ ಬಿಟ್ಟು ಬೇರೆ ಇಲ್ಲ. ಆದ್ದರಿಂದ ಅವನನ್ನು ತನ್ನಲ್ಲಿಯೇ ಹುಡುಕಬೇಕು ಮತ್ತು ಕಾಣಬೇಕು. ಅವನು ತನ್ನಲ್ಲಿ ಯಾವಾಗಲೂ ಗೂಢ ಸ್ಥಿತಿಯಲ್ಲಿರುತ್ತಾನೆ. ಈ ಸ್ಥಿತಿಯಲ್ಲಿದ್ದ ಪರಮಾತ್ಮನನ್ನು ತನ್ನಲ್ಲಿ ಪ್ರಕಟಗೊಳಿಸಬೇಕು. ಹೀಗೆ ಪ್ರಕಟ ಮಾಡುವದೇ ಮನುಷ್ಯನ ಪ್ರಗತಿ ಎಂದೆನಿಸಿಕೊಳ್ಳುತ್ತದೆ. ಹೀಗೆ ಲಿಂಗವು ಕ್ರಮೇಣ ಪ್ರಕಟಗೊಳ್ಳುತ್ತ ಹೋದ ಹಾಗೆ ಶರೀರದ ಭೋಗಗಳೇ ಲಿಂಗಕ್ಕೆ ಪೂಜಾ ಸಾಧನಗಳಾ ಗುತ್ತವೆ. ಈ ಸ್ಥಿತಿಯಲ್ಲಿ ಅಂಗ ಲಿಂಗ ಎಂಬ ಭೇದ ಭಾವವು ಉಳಿಯ ಲಾರದು. ಅವುಗಳಲ್ಲಿ ಸಾಮರಸ್ಯತ್ವವು ಉಂಟಾಗಹತ್ತುತ್ತದೆ. ಈ ಸಾಮರಸ್ಯ ಸ್ಥಿತಿಯೇ ಮೋಕ್ಷವೆಂದೆನಿಸಿಕೊಳ್ಳುತ್ತದೆ. ಈ ವಿಚಾರಗಳು ಕೆಳಗಿನ ವಚನಗಳಲ್ಲಿ ಬಂದಿವೆ.

**ವಚನ—** ೧೪೧. ಎನ್ನ ಮನಸ್ಸು ಮತ್ತೊಂದ ನೆನೆಯಲರಿಯದು, ನೀವು ನೆನಹು ರೂಪಾಗಿ ಎನ್ನ ಮನವ ಗ್ರಹಿಸಿದಿರಾಗಿ, ಆ ಮನಸ್ಸು ನಿಮ್ಮನವ ಗ್ರಹಿಸಿತ್ತಾಗಿ ಎನ್ನ ವಾಕ್ಕು ಮತ್ತೊಂದ ನುಡಿಯಲರಿಯದು, ನೀವು ಮಹಾಮಂತ್ರ ರೂಪಾಗಿ, ಎನ್ನ ವಾಕ್ಕನವಗ್ರಹಿಸಿದಿರಾಗಿ, ಆ ವಾಕ್ಕು ನಿಮ್ಮನವ ಗ್ರಹಿಸಿತ್ತಾಗಿ, ಎನ್ನ ಕಾಯ ಮತ್ತೊಂದ ಭೋಗಿಸ ಲರಿಯದು, ನೀವು ಪ್ರಸಾದ ರೂಪಾಗಿ ಎನ್ನ ಕಾಯವನವಗ್ರಹಿಸಿದಿರಾಗಿ, ಆ ಕಾಯ ನಿಮ್ಮನವಗ್ರಹಿಸಿತ್ತಾಗಿ ಎನ್ನ ಮನೋವಾಕ್ಕಾಯದ ಅಂತ ರಂಗ ಬಹಿರಂಗ ಸರ್ವಾಂಗವು ಇತರ ದೇವತೆಗಳ ವಾಙ್ಮನಕ್ಕತೀತನ ನವಗ್ರಹಿಸಿತ್ತಾಗಿ, ಎನ್ನ ಮನೋವಾಕ್ಕಾಯದ ಸ್ಥಿತಿ ಗತಿ ನೀನೆಯಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಪರಮಾತ್ಮನು ನೆನಹು ರೂಪಾಗಿ ಮನಸ್ಸನ್ನು ಅವಗ್ರಹಿಸಿದ ಕಾರಣ ಮನಸ್ಸು ಪರಮಾತ್ಮನನ್ನು ಬಿಟ್ಟು ಮತ್ತೊಂದನ್ನು ನೆನೆಯಲರಿಯದು. ಹಾಗೆಯೇ ವಾಕ್ಕಿನಲ್ಲಿ ಮಂತ್ರ ತುಂಬಿದ್ದರಿಂದ ವಾಕ್ಕು ಆ ಮಂತ್ರವನ್ನು ಬಿಟ್ಟು ಮತ್ತೊಂದನ್ನು ನುಡಿಯಲರಿಯದು. ಶರೀರದಲ್ಲಿ ಪ್ರಸಾದವು ತುಂಬಿದ್ದರಿಂದ ಅದನ್ನು ಬಿಟ್ಟು ಕಾಯುವು ಮತ್ತೊಂದನ್ನು ಭೋಗಿಸಲರಿಯದು. ಹೀಗೆ ಮನಸ್ಸು, ವಾಕ್ಕು ಮತ್ತು ಕಾಯ ಇವುಗಳೆಲ್ಲವೂ ನೀನೇಯಾಗಿರುತ್ತೀ ಎಂದು ಪರಮಾತ್ಮನನ್ನು ಕುರಿತು ವಚನಕಾರನು ಇಲ್ಲಿ ಹೇಳಿಕೊಳ್ಳುತ್ತಾನೆ.

**ವಚನ:—** ೧೪೨. ಎನ್ನಂಗದಲ್ಲಿ ನಿನಗೆ ಮಜ್ಜನ, ಎನ್ನ ಲಲಾಟದಲ್ಲಿ ನಿನಗೆ ಗಂಧಾಕ್ಷತೆ, ಎನ್ನ ತುರುಬಿನಲ್ಲಿ ನಿನಗೆ ಕುಸುಮ ಪೂಜೆ, ಎನ್ನ ನೇತ್ರದಲ್ಲಿ ನಿನಗೆ ನಾನಾ ರೂಪು ವಿಚಿತ್ರ ವಿನೋದ, ಎನ್ನ ಶ್ರೋತ್ರದಲ್ಲಿ ನಿನಗೆ ಪಂಚ ಮಹಾ ವಾದ್ಯ ಕೇಳಿರೇ. ಎನ್ನ ನಾಸಿಕದಲ್ಲಿ ನಿನಗೆ ಸುಗಂಧ ಧೂಪ ಪರಿಮಳ, ಎನ್ನ ಜಿಹ್ವೆಯಲ್ಲಿ ನಿನಗೆ ಷಡ್ರಸಾನ್ನ ನೈವೇದ್ಯ, ಎನ್ನ ತ್ವಕ್ಕಿನಲ್ಲಿ ನಿನಗೆ ವಸ್ತ್ರಾಭರಣ ಅಲಂಕಾರ ಪೂಜೆ, ಎನ್ನ ಸಚ್ಚಿದಾನಂದವೆಂಬ ಸೆಜ್ಜೆ ಗೃಹದಲ್ಲಿ ನೀನು ಸ್ಪರ್ಶನಂಗೈದು ನೆರೆದಿಪ್ಪೆಯಾಗಿ, ನೀ ನಾನೆಂಬೆರಡಳಿದು ತಾನು ತಾನಾದ ಘನವನೇನೆಂಬೆನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಪ್ರಸಾದ ಕಾಯನಾದ ಲಿಂಗಾಂಗಿಯ ಪೂಜಾವಿಧವನ್ನು ಇಲ್ಲಿ ವಚನಕಾರನು ವರ್ಣಿಸಿದ್ದಾನೆ. ಮನುಷ್ಯನು ಆನಂದಪಡುವ ವಸ್ತುಗಳನ್ನೆಲ್ಲ ಅವನು ಪ್ರಸಾದ ರೂಪಾಗಿ ಪರಿಗ್ರಹಿಸುವದರಿಂದ ಅವೆಲ್ಲವೂ ಪರಮಾತ್ಮನ ಪೂಜೆಯ ಕ್ರಿಯೆಗಳಂತೆ ಪರಿಣಮಿಸುವವೆಂದು ವಚನಕಾರನು ಇಲ್ಲಿ ವಿವರಿಸಿರುವನು.

**ವಚನ:—** ೧೪೩. ಸಾಲೋಕ್ಯವೆಂದೇನು ಅಂಗದ ಮೇಲೆ ಲಿಂಗ ಸಂಬಂಧಿಯಾಗಿರುತ್ತಿರಲು? ಸಾಮೀಪ್ಯವೆಂದೇನು ಗುರುಲಿಂಗ ಜಂಗಮದ ದಾಸೋಹದ ಸನ್ನಿಧಿಯೊಳಿರುತ್ತಿರಲು? ಸಾರೂಪ್ಯವೆಂದೇನು ಅನವರತ ಅರ್ಚನೆಯೊಳಿರುತ್ತಿರಲು? ಸಾಯುಜ್ಯವೆಂದೇನು ಚತುರ್ದಶ ಭುವನವ ಒಳಕೊಂಡ ಮಹಾಘನವ ಮನವನಗವಿಸಿ ನೆನೆಯುತ್ತಿರಲು? ಇಂತೀ ಚತುರ್ವಿಧಪದವೇಂದೇನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಮೋಕ್ಷ ಪದದಲ್ಲಿ ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂದು ನಾಲ್ಕು ವಿಧಗಳನ್ನು ಮಾಡುವದುಂಟು. ಈ ವಿಧಗಳೆಲ್ಲವು ಲಿಂಗಾಂಗಿಯ ವರ್ತನೆಯಲ್ಲಿ ಹ್ಯಾಗೆ ಉಂಟಾಗುತ್ತವೆಂಬದನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ಅಂಗಲಿಂಗ ಸಂಬಂಧವು ಸಾಲೋಕ್ಯಪದವೆಂತಲೂ, ದಾಸೋಹ ಪದವು ಸಾಮೀಪ್ಯವೆಂತಲೂ, ಅನವರತ ಅರ್ಚನೆ ಮಾಡುವದು ಸಾರೂಪ್ಯಪದವೆಂತಲೂ, ಮಹಾಘನ ವಸ್ತುವಾದ ಲಿಂಗವು ಮನವನವಗವಿಸಿದ್ದು ಸಾಯುಜ್ಯಪದವೆಂತಲೂ ವಚನಕಾರನು ಇಲ್ಲಿ ಹೇಳಿರುವನು.

**ವಚನ:**— ೧೪೪. ಎನ್ನ ಸರ್ವಾಂಗದಲ್ಲಿ ಲಿಂಗವೈದಾನೆ, ಅಯ್ಯಾನೆ. ಎನ್ನ ಮನವರಿಯದೆ ಕೆಟ್ಟೆಕೆಟ್ಟೆನಯ್ಯಾ. ಎನ್ನಂತರಂಗ ಬಹಿರಂಗದಲ್ಲಿ ಲಿಂಗ ವೈದಾನೆ ಮನವರಿಯದೆ ಕೆಟ್ಟೆಕೆಟ್ಟೆ. ವಿಶ್ವಾಸದಿಂದ ಗ್ರಹಿಸಲೊಲ್ಲದೆ ಕೆಟ್ಟೆಕೆಟ್ಟೆನಯ್ಯಾ. ಈ ಮನ ವಿಶ್ವಾಸದಿಂದ ಗ್ರಹಿಸಿದೊಡೆ ಸತ್ಯನಹೆ ನಿತ್ಯನಹೆ ಮುಕ್ತನಹೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವ:**— ತಮ್ಮಲ್ಲಿಯೇ ಲಿಂಗವಿದೆಂದು ಸಾಮಾನ್ಯ ಜನರು ನಂಬುವದಿಲ್ಲ. ಇದರಿಂದ ಅವರು ಕೆಡುವರು. ಆದರೆ ವಿಶ್ವಾಸಭಾವವುಳ್ಳವರಾಗಿ ಅವರು ಹೀಗೆ ನಂಬಿದಲ್ಲಿ ಸಾಯುಜ್ಯ ಪದವನ್ನು ಅವರು ನಿಜನಾಗಿ ಹೊಂದುವರೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:**— ೧೪೫. ಶಿವ ಶಿವಾ ನೀನೆನ್ನ ಮನವ ನೋಡಿಹೆನೆಂಬೆ. ಎನ್ನ ಗುಣಾವಗುಣವ ಓಡಿದಿಹೆನೆಂಬೆ. ಮನವಾರು, ನೀನಾರು ಎಂಬುದನರಿಯಾ? ನೀನರಿಯದಿರ್ದೊಡೆ ನಾನರಿಯೆನೆ? ನಾನರಿಯದಿರ್ದೊಡೆ ನೀನರಿಯಾ? ಎಂದೆನಗೆ ನೀನು ಪ್ರಾಣ ಲಿಂಗವಾದೆ, ಅಂದೇ ನಾನು ಲಿಂಗ ಪ್ರಾಣಿಯಾದೆನು. ಇನ್ನು ಮನಸ್ಸಿನ್ನಾರದು ಹೇಳಾ? ಇದು ಕಾರಣ ದ್ವಂದ್ವ ಕರ್ಮ ಮುನ್ನವೇ ನಾಸ್ತಿ ಶ್ರೀಗುರುಲಿಂಗ ಜಂಗಮ ಪ್ರಸಾದ. ವೇದಶಾಸ್ತ್ರಾಗಮ ಪುರಾಣಂಗಳು ಈಸುವ ಬಲ್ಲುದ ನಾ ತೋರಲೇಕಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ?

**ಭಾವ:**— ಭಕ್ತನಿಗೆ ದ್ವಂದ್ವ ಕರ್ಮಗಳೆಂಬುವಿಲ್ಲ. ಪರಮಾತ್ಮನು ಭಕ್ತನಲ್ಲಿ ಪ್ರಾಣಲಿಂಗವಾದೊಡನೆ, ಭಕ್ತನೂ ಲಿಂಗ ಪ್ರಾಣಿಯಾಗುವನು.

ಹೀಗೆ ಲಿಂಗಪ್ರಾಣಿಯಾದೊಡನೆ ಗುಣ, ಅವಗುಣ, ಅರಿವು, ಅಜ್ಞಾನ ಎಂದು ಮೊದಲಾಗಿ ಭೇದ ಭಾವಗಳಿರಲಾರವು.

**ವಚನಃ**— ೧೪೬. ಪಾಪ ನನ್ನದೇ ಪುಣ್ಯ ನಿನ್ನದೇ ಅಯ್ಯ? ದ್ವಂದ್ವ ಕರ್ಮ ಎನಗೆ ಬೇರಾದ ಪರಿ ಎಂತಯ್ಯ? ವಿಚಾರವಾದ ಬಳಿಕ ನಾನು ಲಿಂಗ ಪ್ರಾಣಿ, ನೀನು ಭಕ್ತಕಾಯನು. ಇದು ಕಾರಣ ದ್ವಂದ್ವ ಕರ್ಮ ಮುನ್ನವೇ ನಾಸ್ತಿ. ಇನ್ನು ಭಾವಭೇದವೆಂದಡೆ ನಗೆಗೆಡೆಯುಪ್ಪುದು. ಹೆಚ್ಚು ಕುಂದು ಎನ್ನದಲ್ಲ, ನಿನ್ನದಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಭಕ್ತನ ಸಮರಸಾಚಾರದ ವಿವರವನ್ನು ವಚನಕಾರನು ಬಹು ಸುಂದರವಾಗಿ ಇಲ್ಲಿ ಹೇಳಿದ್ದಾನೆ. ಪಾಪ, ಪುಣ್ಯಗಳೆರಡೂ ಮುಕ್ತನ ಸ್ಥಿತಿಯಲ್ಲಿ ಲಯವಾಗಿ ಹೋಗುವವು.

**ವಚನಃ**— ೧೪೭. ಎನ್ನ ಗತಿ ನಿನ್ನ ಗತಿ, ಎನ್ನ ಕೇಳಿಕೆ ನಿನ್ನಕೇಳಿಕೆ, ಎನ್ನ ನೋಟ ನಿನ್ನ ನೋಟ, ಎನ್ನಂಗಸ್ಪರ್ಶನ ನಿನ್ನಂಗಸ್ಪರ್ಶನ, ಎನ್ನ ಸುಖ ಭೋಗವೆಲ್ಲ ನಿನ್ನ ಸುಖಭೋಗ, ಎನ್ನೊಳಗೆ ನೀನು ನಿನ್ನೊಳಗೆ ನಾನು, ಎನ್ನ ಪ್ರಾಣ ನೀನು ನಿನ್ನ ಪ್ರಾಣ ನಾನಾದ ಕಾರಣ ಎನ್ನ ಸೋಂಕಿತ್ತೆಲ್ಲ ನಿನ್ನ ಪೂಜೆಯಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

**ಭಾವಃ**— ವಚನಕಾರನು ಸಮರಸಾಚಾರದ ವರ್ತನೆಯನ್ನು ವರ್ಣಿಸಿರುವನು.

**ವಚನಃ**— ೧೪೮. ಎನಗೆ ನೀನು ಪ್ರಾಣ, ನಿನಗೆ ನಾನು ಪ್ರಾಣ ಇನ್ನೇನೋ ಇನ್ನೇನೋ? ಹಂಗಿಲ್ಲ ಹರಿಇಲ್ಲ, ಮತ್ತೇನು ಪ್ರಪಂಚಿಲ್ಲವಾಗಿ. ನೀ ನಡೆಸಿದಂತೆ ನಡೆದೆ, ನೀ ನುಡಿಸಿದಂತೆ ನುಡಿದೆ. ನೀ ನೋಡಿಸಿದಂತೆ ನೋಡಿದೆ. ನೀನಾಡಿಸಿದಂತೆ ಯಾಡಿದೆ. ನೀ ಮಾಡಿಸಿದಂತೆ ಮಾಡಿದೆ. ಈ ಪುಣ್ಯಪಾಪ ಸುಖದುಃಖಾತ್ಮಕನು ನೀನೆಯಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಭಕ್ತ ಮತ್ತು ಲಿಂಗ ಇವುಗಳಲ್ಲಿ ಏಕಾತ್ಮ ಭಾವವು ಉಂಟಾದ್ದರಿಂದ ಪರಮಾತ್ಮನು ಆಡಿಸಿದಂತೆ ಆತ್ಮನು ಆಡುವನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:**— ೧೬೯. ಎನ್ನೊಳಗೆ ನೀನು ಪ್ರವೇಶ, ನಿನ್ನೊಳಗೆ ನಾನು ಪ್ರವೇಶ. ದೇವ ನಿನಲ್ಲದಿಲ್ಲ, ಭಕ್ತ ನಾನಲ್ಲದಿಲ್ಲ. ಈ ಪರಿಯಲ್ಲಿ ಮಾಡುವರಿನ್ನಾರು ಹೇಳಾ? ಎನಗೆ ನೀನೆ ಗತಿ, ನಿನಗೆ ನಾನೇ ಗತಿ ಇನ್ನೇಕೆ ಜವನಿಕೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ?

**ಭಾವ:**— ವಚನಕಾರನು ಪರಿಪೂರ್ಣಾವಸ್ಥೆಯನ್ನು ಇಲ್ಲಿ ವಿವರಿಸಿರುವನು.

ನಿಜಮರೀಚಿ ಕೋಟಿ ರವಿಯ ರುಚಿಯ ನಿಳುಪಲಿರ್ದನಲ್ಲಿ
ಸುರನದೀ ವಿರಾಜಮಾನ ಜೂಟನೊಪ್ಪುತಿರ್ದನಲ್ಲಿ ।
ಗರಳ ಧರನು ಪರಶುಹರನು ತ್ರಿಪುರಹರನು ಒಪ್ಪುತಲ್ಲಿ
ಅಂಬಕತ್ರಯಂ ನಭಃ ಪುರಾರಿಯೊಪ್ಪುತಿರ್ದನಲ್ಲಿ
ನಂಬಿ ನೆನೆಯಲಿಂಬುಗೊಂಬ ಶಂಭುವೊಪ್ಪುತಿರ್ದನಲ್ಲಿ
ದೇವಗಣ ಸಹಸ್ರದೊಳಗೆ ಭಾಳನಯನನೊಪ್ಪುತಿರ್ದ
ದೇವನೆಮ್ಮ ಹಂಪೆಯರಸ ವಿರೂಪಾಕ್ಷನೊಪ್ಪುತಿರ್ದ

**ಕಂದ ॥** ಧರೆಹೊಗಳೆ ಕೃಪೆಯೊಳಾಹಾ ।
ಪರಿವಳಿಗೆಯ ವೈಜಕವ್ವೆಯಂ ಮೆರೆದಭವಂ ।
ಕರುಣಿಸುಗೆ ಭಕ್ತಿ ಸುಖಮಂ ।
ಹರುಷಂ ಮಿಗಿಲೆಸೆವ ಹಂಪೆಯ ವಿರುಪಾಕ್ಷಂ ॥

—( ವೈಜಕವ್ವೆಯ ರಗಳೆ ಸಮಾಪ್ತಂ. )—

---

# ಕೆಂಭಾವಿ ಭೋಗಣ್ಣಗಳ ರಗಳೆ.



**ಕಂದ** ॥ ಅಂಬಿಕೆಯರಸಂ ನಾಟ್ಯಾ।
ಡಂಬರ ಮುಖನೆಮ್ಮ ಹಂಪೆಯ ವಿರೂಪಾಕ್ಷಂ
ಸಾಂಬಂ ಧಾರುಣಿ ಪೊಗಳಲ್ ।
ಕೆಂಭಾವಿಯ ಭೋಗತಂದೆಯುಂ ನೆರೆ ಮೆರೆದಂ

## ರಗಳೆ

ವಸುಧಾ ತಳಕ್ಕೆ ರಂಜಿಸುದೊಂದು ಶಿವಪುರಂ ।
ಕುಸುಮ-ಶರ ಪುರ ಕಾಲಹರನ ನಚ್ಚಿನ ಪುರಂ
ಹರ ಭಕ್ತಿ ರಾಗ ರಸಕೂಪವೆಂಬಂತಿರಲ್
ಧರೆಗೆ ಕೆಂಭಾವಿ ಎಂಬಾ ನಾಮ ಒಪ್ಪಿರಲ್
ಅಲ್ಲಿಪ್ಪನೋರ್ವ ಭಕ್ತಂ ಜಂಗಮ ಪ್ರೇಮಿ
ಸಲ್ಲಲಿತನುತ್ತಮಂ ನಿರ್ದೋಷಿ ನಿಃಕಾಮಿ
ತನ್ನ ಪೆಸರಾ ಪುರಕೆ ಭೋಗಣ್ಣನೆಂದೆಸೆದು
ತನ್ನ ಶಿವಭಕ್ತಿ ಹರಚರಣಕ್ಕೆ ಕುಡಿವರಿದು
ಪಲ್ಲವಿಸಿ ಪೂತು ಫಲವಾಗುತಿರಲೊಪ್ಪುವಂ
ಎಲ್ಲ ತೆರದಿಂ ಶಿವನ ಪದಯುಗವನಪ್ಪುವಂ
ಶಿವಭಕ್ತರೊಳಗೆ ಜಾತಿಯ ವಿಚಾರಿಸುದಿಲ್ಲ
ಶಿವಭಕ್ತರೊಳಗೆ ಭೇದವ ಕಲ್ಪಿಸುವುದಿಲ್ಲ
ಭಕ್ತರಂ ಕೊಂಡಾಡುತಿರ್ಪನಾನಂದದಿಂ
ಭಕ್ತರ್ಗೆ ಬೆಸಗೈವುತಿರ್ಪನುತ್ಸಾಹದಿಂ

ಇಂತು ಪಲವುಂ ಕಾಲವಿರುತಿರ್ಪ ಸಮಯದೊಳ್
ಸಂತತಂ ಶಿವಭಕ್ತಿ ಸಂದಣಿಸ ಛಂದದೊಳ್
ಒಂದು ದಿವಸಂ ಭೋಗತಂದೆ ಸುಖದಿಂದಿರಲ್
ಇಂದುಧರನೊಂದು ವೇಷಂ ಪೊತ್ತು ಬರುತಿರಲ್

ಹೆಗಲ ವೀಣೆ ಕೆಯ್ಯ ಸಂಬಳಿ ಗೋಲಿನೀಶ್ವರಂ
ಸೊಗಯಿಪ ವಿಭೂತಿ ರುದ್ರಾಕ್ಷಿಯ ಕೃಪಾಕರಂ
ಪಿರಿಯ ವೇಷಂಗೊಂಡು ಮನೆಯ ಮುಂದಂ ಸುಳಿಯೆ
ಶರಣನ ಮನಂ ನೋಡಲೆಂದು ಮುದದಿಂ ಸುಳಿಯೆ

ಬಂದು ಭೋಗಣ್ಣನೈತಂದು ಮಿಗೆ ಸೈಗೆಡೆದು
ಮಂದೈಸೆ ಪುಳಕಂಗಳೊಪ್ಪೆ ಪದಮಂ ಪಿಡಿದು
ಕೆಲಬಲದ ವಿಪ್ರರ್ ನೆರೆದು ನೋಡುತಿರೆ
ಉಲಿದೆದ್ದು ತಮತಮಗೆ ಕೌತುಕಂಗೊಂಡುಮಿರೆ
ಕೈಗೊಟ್ಟು ಹರುಷದಿಂ ಮನೆಗೆ ನಡೆತಂದು
ಮೈಗರೆದು ಕುಗ್ಗಿ ಭಯ ಭಕ್ತಿಯಿಂದಂ ನಿಂದು
ಉನ್ನತಾಸನಮನಿತ್ತಾನಂದವಂ ತಳೆದು
ಪನ್ನಗಾಭರಣನ ಪದದ್ವಯಮುಮಂ ತೊಳೆದು
ಪಾದೋದಕಂಗಳಂ ಕಣ್ಗಳೊಳಗೊತ್ತುತಂ
ಆದಂ ಮಿಗೆ ತನ್ನ ಹೃದಯದೊಳ್ ಸಾರ್ಚುತಂ
ದೇವಾರ್ಚನೆ ಮಾಡಲಾರೋಗಣೆಗೆ ಕೊಟ್ಟು
ಭಾವಿಸುತ್ತೆರಗೆ ಭಯಭಕ್ತಿಯುಂ ಮುಂದಿಟ್ಟು
ಅವರ ಪ್ರಸಾದಮಂ ಸಾದರಂ ಮಿಗೆ ಕೊಂಡು
ಶಿವಭಕ್ತಿಯೊಳಗೆ ನೆರೆ ಸಂತಸಮನೆಡೆಗೊಂಡು

ಇತ್ತಲಾ ಊರ ಮಟ್ಟಿಯ ಮರುಳ್ಗಳ್ ನೆರೆದು
ಚಿತ್ತಜಾರಿಯನರಿಯದಜ್ಞರೆಲ್ಲರ್ ನೆರೆದು
ಸಡಗರಂ ಮಿಗೆ ಚಂದಿಮರಸನಲ್ಲಿಗೆ ಬಂದು
ಕಡು ಮೂರ್ಖರೆಲ್ಲರುಂ ಸಂಭ್ರಮಿಸುತಂ ನಿಂದು
ಕೇಳರಸ ನಿಮ್ಮೂರೊಳಿರಲಾಗದಮಗೆಲ್ಲ
ಊಳಿಗಂ ಪಿರಿದರಸ ನಿಮ್ಮಾಜ್ಞೆ ಇನಿತಿಲ್ಲ
ನಿಮ್ಮೂರ ಭೋಗಣ್ಣನೆಂಬ ಭಕ್ತಂ ಮೀರಿ
ತಮ್ಮ ಭಕ್ತಾಚಾರವೆಗ್ಗಳಂ ತಲೆಗೇರಿ
ಹೊಲೆಗಲಸಿ ನೆಲೆಗೆಟ್ಟು ಛಲ ಉಡುಗಿ ಕುಲವಳಿದು
ಹೊಲೆಯನೆನ್ನದೆ ಹಿರಿಯ ಭಕ್ತನೆಂದರಿದರಿದು
ತಂದಿಂತು ಮನೆಯೊಳಗೆ ಗೋಜಾಗತಂ ಮಾಡಿ

ಸಂದ ವಿಪ್ರರ ಕರ್ಮವೆಲ್ಲವುಂ ಪುಸಿಮಾಡಿ
ಹೊಲೆಯುನಂ ಮುಂದಿಟ್ಟು ಕೊಂಡೈದನೆಲೆ ದೇವ
ಕುಲವೆಲ್ಲ ನಿರ್ಮೂಲವಾದುದಿಂದೆಲೆ ದೇವ
ಆತನಂ ಕರೆಯಿಸುವುದು ಪೊರಮಡಿಸುದಲ್ಲದೊಡೆ
ಆತನಿರಲಾವೆಲ್ಲ ಪೋದಪ್ಪೆವಲ್ಲದೊಡೆ

ಎನೆ ಚಂದಿಮರಸನಾ ಜಡರ ಮಾತಂ ಕೇಳ್ದು
ಮನದೊಳಗೆ ಮುಳಿವುತಂ ಕಡುಗೋಪಮಂ ತಾಳ್ದು
ಚಾರರಂ ಕಳುಹಿ ಭೋಗಣ್ಣನಂ ಕರೆಯಿಸಲ್
ಮಾರಾರಿಯಣುಗನೈತಂದಲ್ಲಿ ರಂಜಿಸಲ್
ಬೆಳ ಬೆಳಪ ಭಸಿತದಿಂ ತೊಳತೊಳಪಪಲ್ಗಳಿಂ
ನಳ ನಳಿಪ ಕಾಂತಿಯಿಂ ಥಳ ಥಳಿಪ ಕಣ್ಗಳಿಂ
ಲೆಕ್ಕಿಸದೆ ಕೈಕೊಳ್ಳದಕ್ಕರಿಂ ಬಂದಿರಲ್
ಮುಕ್ಕಣ್ಣನವತಾರವೆಂಬಂತೆ ನಿಂದಿರಲ್

ಏನಯ್ಯ ಪುರದೊಳಗೆ ಕೃತ್ಯಮಂ ಮಾಳ್ಪರೇ
ಏನಾದೊಡಂ ಪೊಲೆಯುರಂ ಪುಗಿಸಿ ಬಾಳ್ವರೇ
ಮನೆಯೊಳಗನಾಮಿಕರ ಪುಗಿಸುವರೆ ಭೋಗಯ್ಯ
ಮನವಾರೆ ನಿಮ್ಮದಾಚರವೇ ಭೋಗಯ್ಯ

ಎನೆ ಪೊಲೆಯುನಂ ಪುಗಿಸಲಿಲ್ಲ ಮನೆಯೊಳಗರಸ
ನಿನಗೆ ತಿಳಿವಿಲ್ಲ ತಿಳಿವಿಲ್ಲದೊಡೆ ಕೇಳರಸ
ನಾರಾಯಣ ಕ್ರಮಿಕರಂ ಪುಗಿಸಿದೆನೆ ಮನೆಗೆ
ಸೂರಿಭಟ್ಟರ ನೈದೆ ಪುಗಿಸಿದೆನೆ ಮನೆಯೊಳಗೆ
ಕೃಷ್ಣಪೆದ್ದಿಗಳನೊಮ್ಮೆಯುಂ ಕರೆದು ಬಲ್ಲೆನೇ
ವಿಷ್ಣುಭಟ್ಟರನೊಮ್ಮೆಯುಂ ಸೋಂಕಿ ಬಲ್ಲೆನೇ
ಶಿವನನರಿಯದ ಹೊಲೆಯರಂ ಹೊಗಿಸೆ ನಾನರಸ
ಶಿವಭಕ್ತನಂ ಪುಗಿಸಿದೆಂ ತಪ್ಪೆ ಹೇಳರಸ
ಎಂದ ಮಾತಂ ಕೇಳ್ದು ವಿಪ್ರರುಂ ಹೊಲೆಯುರೇ
ಚಂದವಾಯಿತು ಮುಟ್ಟಿಯಿಟ್ಟರುಂ ಹೊಲೆಯರೇ
ಇಂತಪ್ಪ ಸಿತಗರೆಮ್ಮೂರೊಳಗಿರಲ್ವೇಡ

ಇಂತಪ್ಪರಂ ಕಂಡೊಡಂಜುವೆವಿರಲ್ಬೇಡ
ಪೋಗೆಂದು ಚಂದಿಮರಸಂ ಜರಿದು ನುಡಿವುತಿರೆ
ಭೋಗಣ್ಣನಂ ಲಿಂಗವಂತನಂ ಜರಿವುತಿರೆ

ಕಡು ಮಾಸಿ ಶಾಂತನುಂ ನುಡಿಯುಂ ಮನಂಗೊಂಡು
ತಡವಿಲ್ಲದೂರಿಂದೆ ಪೊರಮಡಲ್ ನಡೆಗೊಂಡು
ಒಂದಡಿಯನಿಡೆ ಪುರದ ಲಿಂಗ ಒಡನುಬ್ಬುತಿರೆ
ಮುಂದಡಿಯನಿಡೆ ಪುರದ ಲಿಂಗ ಒಡನೇಳುತಿರೆ
ನಡೆಯೆ ನಡೆದವು ಪುರದ ಲಿಂಗಂಗಳೊಂದಾಗಿ
ಒಡನೊಡನೆ ಭೋಗಣ್ಣನೆಡಬಲದೊಳೊಂದಾಗಿ
ಅವನಿ ಸೋಂಕದ ತೆರದಿ ವಾಯು ಮೆಯ್ಯಾಂತು ಬರೆ
ತಮತಮಗೆ ತರುನಿಕರವೆಲ್ಲ ನೆಳಲಾಗಿ ಬರೆ
ತರುಫಲದಿನೊಸರ್ವ ರಸ ಶೀತಮಜ್ಜನವಾಗೆ
ಮರದಿಂದಲುದುರ್ವ ಹೂ ಪತ್ರೆ ಪುಷ್ಪಗಳಾಗೆ
ಎಳಸುತಿರೆ ಲಿಂಗ ತತಿಗಳ್ ನಡೆದವೀ ತೆರದಿ
ಇಳೆಯೊಳುರುಳ್ದವು ಕಾಶಿಗೈದುವ ತೆರದಿ
ಜಂಗಮವೆ ಲಿಂಗಕ್ಕೆ ಲಿಂಗವಾ ಜಂಗಮಕೆ
ಲಿಂಗ ಜಂಗಮವೆಂಬುದವಿಭೇದವೀ ಜಗಕೆ
ಎಂಬಂತೆ ಭೋಗಣ್ಣನೊಡನೊಡನೆ ಬರುತಮಿರೆ
ಕೆಂಭಾವಿಯೊಳಗುಳ್ಳ ಶಿವಲಿಂಗವೆಯ್ದೆ ಬರೆ
ಬಂದು ಲಿಂಗದ ಬಳಿಯಲೊಂದು ತರು ನೆಳಲಾಗೆ
ಬಂದುದಾ ಲಿಂಗದಾರವೆಯೆಂಬ ಚೆಲ್ವಾಗೆ
ಸತ್ಯ ಶರಣಂ ಲಿಂಗಕುಳದೊಳಗೆ ಬರುತಿರ್ದ
ನಿತ್ಯ ಲಿಂಗಾರ್ಚನೆಗೆ ಜಾಣನುಂ ಬರುತಿರ್ದ
ಭಕ್ತಿಯ ಫಳಂಗಳಂ ಸೇವಿಸುವ ಮಾಳ್ಕೆಯಿಂ
ಮುಕ್ತಿ ಇಂಡೆಗಳ ಪೋಣಿಸುತಿರ್ಪ ಮಾಳ್ಕೆಯಿಂ
ಶಿವಲಿಂಗ ಕುಳಮರರೆ ಭೋಗಣ್ಣನೀಕ್ಷಿಸುತೆ
ತವೆ ಮರುಗಿ ದೂರಿಸುತೆ ಕಂಪಿಸುತೆ ಚಿಂತಿಸುತೆ

ದೇವಿಯರನಗಲಿ ಇಂತೆನ್ನೊಡನೆ ಬರ್ಪರೇ
ದೇವಿಯಾಲಿಂಗನವನುಳಿದು ನಡೆತರ್ಪರೇ

ಚಳಿಗಾಳಿ ಬಿಸಿಲಿವಂ ನೋಡಸೈತಪ್ಪರೇ
ಇಳೆಗೆ ಪೊಸತಿಂಗೆ ಪೊಸತಂ ಮಾಡಿ ನೋಳ್ಪರೇ
ಎಂದು ಶಿವಲಿಂಗಂಗಳಂ ಸಂತವಿಡುತಿರಲ್
ಛಂದದಿಂ ಶಿವಭಕ್ತಿ ಸಂವಣಿಸುತಿರುತಿರಲ್
ಬಲದ ಲಿಂಗಂಗಳಂ ಬಲದ ಕರದೊಳಗೊಪ್ಪಿ
ಕೆಲದ ಲಿಂಗಂಗಳಂ ಕೆಲದ ಕೆಯ್ಯೊಳಗಪ್ಪಿ
ಮುಂದಿರ್ದ ಲಿಂಗವನುರಸ್ಥಳದೊಳೊಲಿದಪ್ಪಿ
ಪಿಂದಿರ್ದ ಲಿಂಗಂಗಳಂ ಬೆನ್ನೊಳೊಲಿದಪ್ಪಿ
ಆಲೋಕನದೊಳಿರ್ದವಂ ಕಂಗಳಿಂದಪ್ಪಿ
ಮೇಲಿರ್ದ ಲಿಂಗಂಗಳುತ್ತಮಾಂಗದೊಳಪ್ಪಿ
ಸುತ್ತಿರ್ದ ಲಿಂಗವುಂ ಸುಳಿಸುಳಿದು ತಳ್ಕೈಸಿ
ಮುತ್ತಿರ್ದ ಲಿಂಗವುಂ ಮುರಿಮುರಿದು ಮೇಳೈಸಿ
ಭಾಳದೊಳಗೊತ್ತುತುಂ ಕಂಗಳೊಳಗೊತ್ತುತುಂ
ತೋಳೊಳಂ ಕೊಳ್ಳುತೆ ಕಪೋಳದೊಳಗೊತ್ತುತುಂ
ಎಲೆಯುದುರಿ ಬಿಸಲಾಗೆ ಮೆಯ್ಯೊಡ್ಡಿ ನೆಳಲಾಗೆ
ನಲಿನಲಿದು ತಳಿರ್ಗಳಿಂ ತಳಿವಿಡಿದ ತೆರನಾಗೆ
ಸುಜನ ಜನವಂದ್ಯ ಭೋಗಣ್ಣನತಿ ಹರುಷದಿಂ
ತ್ರಿಜಗದೇಕೈಕ ಲಿಂಗಂಗಳನುರಾಗದಿಂ
ಪೂಜೆಗೆಯ್ಯುತೆ ಭಕುತಿಯಾನಂದ ವೇಷದಿಂ
ಮಾಜಹರನರ್ಚನೆಯ ಮಾಡೆ ಸಂತೋಷದಿಂ
ಇಂತು ಶಿವಲಿಂಗಂಗಳಂ ಸಂತವಿಡುತಿರಲ್
ಸಂತತಂ ಶಿವಭಕ್ತಿ ಬೋಳೈಸುತಿರುತಿರಲ್

ಇತ್ತಲಾ ಕೆಂಭಾವಿಯೊಳಗೆ ವಿಪ್ರರ್ನೆರೆದು
ಸುತ್ತಲುಂ ನೇಮವುಂ ಮಾಡಲೆಂದೈತಂದು
ಶಿವನಿಳಯದೊಳಗೆ ಬರಿ ಪೀಠಂಗಳಿರೆ ಕಂಡು
ಶಿವಶಿವಾ ಎನುತೆ ಮನದೊಳ್ ಕೌತುಕಂಗೊಂಡು
ಚಂದಿಮರಸನ ಸಮೀಪಕ್ಕೆಲ್ಲರುಂ ಬಂದು
ನಿಂದು ಪೇಳುತ್ತಲಿರ್ದರ್ ಕೌತುಕವನಂದು
ದೇವಾಲಯಂಗಳೊಳ್ ಬರಿಯ ಪೀಠಂಗಳಿವೆ

ಭೂವಳಯದೊಳಗೆ ಇದರಿಂದದ್ಭುತಗಳೊಳವೆ
ಭೋಗಣ್ಣನೊಡನೆ ಪೋದವು ಲಿಂಗತತಿಯೆಲ್ಲ
ರಾಗದಿಂದೊಡನೊಕ್ಕಲಾದವಳ್ತಿಯೊಳಿಲ್ಲ
ಕರೆಸು ಬಿಜಯಂಗೈಸಿ ತರ್ಪುದಾ ಭಕ್ತನಂ
ಹರನ ಪುರಹರನ ಘನ ಸಾಮರ್ಥ್ಯಯುಕ್ತನಂ
ಧರೆಯೊಳಗೆ ಕಟ್ಟಧಿಕ ಶಿವಲಿಂಗವಂತನಂ
ಹರಿಯಜರ್ಗರಿದೆನಿಪ ಘನಲಿಂಗವಂತನಂ
ಸಕಲ ಋಷಿಗಳ್ ಬೇಳ್ಪ ಪುಣ್ಯಾಗ್ರಗಣ್ಯನಂ
ಸಕಲ ಲಿಂಗದ ನಡುವೆ ಬಾಳ್ವ ಭೋಗಣ್ಣನಂ
ತಾರದಿರ್ದೊಡೆ ಧರಣಿಯೊರ್ಗುಡಿಪುದೆಲೆಯರಸಾ
ತಾರದೊಡೆ ವಾರಾಶಿ ಮೇರೆದಪ್ಪುದರಸಾ

ಎಂದು ನುಡಿಯಲ್ ಚಂದಿಮರಸನಾಗಂ ಕೇಳ್ದು
ಮಂದಮತಿಯಾದೆನೆನುತಂ ಚಿಂತೆಯಂ ತಾಳ್ದು
ಪರಿಜನಂ ಪುರಜನಂ ಶರಣಸಂತತಿವೆರಸಿ
ವಾರನಾರಿಯರ್ಕಳಶ ಕನ್ನಡಿ ತಳಿರ್ವೆರಸಿ
ಮುರುಜದಾವುಜದ ಕಿರುಘಟೆಯ ಕಾಳಿಕೆವೆರಸಿ
ಕರಡೆ ಕೌಸಾಳ ಶಂಖಪ್ರಣಾದಂವೆರಸಿ
ಎತ್ತಿರ್ದ ವೃಷಧ್ವಜಂ ನಭದೊಳಾಡುತ್ತಿರಲ್
ಸುತ್ತಿ ಕೇಳಿಸುವ ನಾದಂ ಕೊರ್ವಿ ಪಸರಿಸಲ್
ಪೊರಮಟ್ಟುದಲ್ಲಲ್ಲಿ ಸಂಭ್ರಮಂ ಕೈಗಣ್ಮೆ
ಮೆರೆವ ನಾನಾ ವಾದ್ಯರಭಸಂಗಳುಂ ಪೊಣ್ಮೆ
ನಡೆದುದಾ ಗಿರಿಸುತೆಯ ಮನೆಯ ನಿಬ್ಬಣದಂತೆ
ನಡೆದುದಾ ಶಿವಲಿಂಗ ಯಾತ್ರಾ ನಿಕರದಂತೆ
ಬರುತಿರ್ದ ದೂರದಿಂ ಭೋಗಣ್ಣನಂ ಕಂಡು
ಸಾರ ಶಿವಲಿಂಗಂಗಳೊಳಗಿಪ್ಪನಂ ಕಂಡು
ಶಿವಲಿಂಗ ಸಾಮ್ರಾಜ್ಯ ಪರಮ ಸುಖಿಯಂ ಕಂಡು
ಶಿವಲಿಂಗ ಸಂಸಾರ ಲೋಲುಪ್ತನಂ ಕಂಡು
ಭಕ್ತಿ ಸುಖದೊಳ್ ಬೆರಸಿ ನೆಲಸಿರ್ಪನಂ ಕಂಡು
ಮುಕ್ತಿಯಂ ಮುಂಡಾಡುತೊಸೆದಿಪ್ಪನಂ ಕಂಡು

ಶಿವನನೊಚ್ಚತವಾಗಿ ಕೈಕೊಂಡನಂ ಕಂಡು
ತೆರಹಿಲ್ಲದಿರ್ಪ ಲಿಂಗದ ಬೀಡನೀಕ್ಷಿಸುತೆ
ಪೊರಗೆ ಸಿಂದಿದ್ರ್ದ ದೂರದೊಳೆಲ್ಲ ಶಿವಧೀಡುತೆ

ಶಿವನನರಿಯದ ಪಾತಕರ್ಗೆ ಕರುಣಿಪುದಯ್ಯ
ಭವನನರಿಯದ ಭಾಗ್ಯಹೀನರ್ಗೆ ದಮ್ಮಯ್ಯ
ಕರುಣಿಸುವುದೆಮಗೆ ಕಾರುಣ್ಯನಿಧಿ ಭೋಗಣ್ಣ
ನರಕದೊಳ್ ಬಿದ್ದವರನೆತ್ತುವುದು ಭೋಗಣ್ಣ
ಮುಂದರಿಯದಜ್ಞರಿಗೆ ಬುದ್ಧಿಗೊಡು ಭೋಗಣ್ಣ
ಸಂದಣಿಸಿದೆಮ್ಮಮ್ಮ ಮಾಯವಂ ನೀಗಣ್ಣ
ಅನುಪಮೈಶ್ವರ್ಯ ಶಿವಲಿಂಗ ನಿಧಿ ಭೋಗಣ್ಣ
ಘನ ಘನ ಮಹಾಲಿಂಗ ನಿಧಿ ಭೋಗಣ್ಣ
ಎಂದು ಬಾಯುಳಿವ ಕಿಂಕುರ್ವಾಣಮಂ ಕೇಳ್ದು
ಇಂದುಧರನಣುಗನತಿ ಕಾರುಣ್ಯಮಂ ತಾಳ್ದು
ದೇವರಂ ದೇವಿಯುರನೊಂದು ಮಾಡುವೆನೆನುತೆ
ದೇವಿಯುರನಿಂತಗಲ್ದಿರಬಾರದೆಂದೆನುತೆ
ತಿರುಗಿದಂ ಶಿವಲಿಂಗ ಸಹಿತಲಾ ಭೋಗಣ್ಣ
ಉರವಣಿಸಿ ಬರತಿರ್ದನಕ್ಕರಿಂ ಭೋಗಣ್ಣ
ಎನಗೆ ತನಗೆಂಬಂತೆ ಮುಂಚಿದವು ಶಿವಲಿಂಗ
ಅನುರಾಗದಿಂದೆ ಸಂಭ್ರಮಿಸಿದವು ಶಿವಲಿಂಗ
ಅಲ್ಲಿ ಭಕ್ತಂ ಬಂದನೆಂಬ ಸಂತೋಷದಿಂ
ಅಲ್ಲಲ್ಲಿ ಪರಿಪರಿಯುಲಾನಂದ ವೇಷದಿಂ
ಭರದೊಳರಿಯದೆ ನಿಜಸ್ಥಾನಂಗಳಂ ಮರೆದು
ಪರಮ ಸುಖವೇರುತುರವಣಿಸುತಂ ಹೊಳೆಹೊಳೆದು
ಭೋಗಣ್ಣನಂ ಮೆರೆಯಿಸಲ್ಕೆ ಕುರುಹೆಂಬಂತೆ
ರಾಗದಿಂ ಸ್ಥಾನ ಪಲ್ಲಟಮುಮಾದಂತೆ
ಪಿರಿಯ ಪೀಠಂಗಳೊಳ್ ಸೂಕ್ಷ್ಮ ಶಿವಲಿಂಗವಿರೆ
ನೆರೆದು ಕಿರಿಯುವರಲ್ಲಿ ಪಿರಿಯ ಶಿವಲಿಂಗವಿರೆ
ಶರಣ ಸಂಕುಳದ ಕೇಳಿಕೆಯ ವಾದ್ಯಂ ಮೆರೆಯೆ
ಶರಣನ ಮನದೊಳಿರ್ದ ಮುಳಿಸೆಂಬ ತೆರೆ ಸರಿಯೆ

ಆನಂದಜಲವೆ ಕೈಸೀರಾಗಿ ಸುರಿವುತಿರೆ
ನಾನಾ ಶಿವೋತ್ಸವಂ ಅಚ್ಚರಿಂ ಪೆಚ್ಚುತಿರೆ
ಶಿವಶಕ್ತಿ ವೈವಾಹವಾದುದಾ ಪುರದೊಳಗೆ
ಶಿವಭಕ್ತಿ ಸಂಪದಂ ಬೆಳೆದುದಾ ಪುರದೊಳಗೆ

ಆಗಳೆರಗಿದವು ಪೂವಿನ ಮಳೆಗಳಂತಲ್ಲಿ
ರಾಗದಿಂ ದುಂದುಭಿಧ್ವಾನ ಉಣ್ಮಿದವಲ್ಲಿ
ಬಂದುದೊಂದತಿಶಯದ ಪುಷ್ಪಕಂ ನಭದಿಂದೆ
ಸಂದಣಿಪ ನವರತ್ನಖಚಿತ ವಿಭ್ರಮದಿಂದೆ
ಆ ವಿಮಾನದ ನಡುವೆ ಭೋಗಣ್ಣನೊಪ್ಪಿದಂ
ಭೂವಳಯದೊಳು ಚೋದ್ಯವೆನೆ ಶರಣನೊಪ್ಪಿದಂ
ನಂಬಲರಿಯದ ಪಾರ್ವಕುಲವೆಲ್ಲ ನೋಡುತಿರೆ
ಡಂಬಳಿದು ಶರಣನಂ ಕೊಂಡಾಡಿ ನಲಿಯುತಿರೆ
ಚಂದಿಮರಸಂ ನೋಡಿ ಕೌತುಕಂ ಬಡುತಮಿರೆ
ನಿಂದು ಭಕ್ತರ್ಮಸಗಿ ಕೆಯ್ಯೆತ್ತಿ ಕುಣಿವುತಿರೆ
ಚಂದ ಚಂದದ ವಾದ್ಯ ಮೇಳೈಸಿ ಪೆಚ್ಚುತಿರೆ
ನೆಗೆದುದು ವಿಮಾನವಾ ಗಗನವಳಯಕ್ಕಾಗಿ
ನೆಗೆದುದತ್ತತ್ತಲಾ ದೇವಲೋಕಕ್ಕಾಗಿ
ಬಂದು ನಂದೀಶ್ವರನ ಬಾಗಿಲೊಳ್ ನಿಂದಿರ್ದು
ಇಂದುಧರನೋಲಗಕ್ಕತುಳ ಸುಖದಿಂ ಸಾರ್ದು
ಮೆಯ್ಯಿಕ್ಕಿ ಮೆಯ್ಯಿಕ್ಕಿ ಸುಖವಿಡಿದು ಪೊಡಮಟ್ಟು
ಕೆಯ್ಯೆತ್ತಿ ಕೆಯ್ಯೆತ್ತಿ ನಿಂದಿರ್ದು ಪೊಡಮಟ್ಟು
ಪಟ್ಟಿರ್ದ ಭೋಗಣ್ಣನಂ ಕಂಡು ಶಂಕರಂ
ನಿಷ್ಠೆವಂತನ ನೋಡಿ ನೋಡಿ ಶಶಿಶೇಖರಂ
ತನಿನೇಹದಿಂದಪ್ಪಿ ಮನದಕ್ಕರೆಡೆಗೊಂಡು
ಮನಸಿಜಹರಂ ನೋಡಿ ಕರುಣಸುಧೆ ಎಡೆಗೊಂಡು
ಶಿವಭಕ್ತರಿಂತು ನಂಬಿದರುಂಟೆ ನಂದೀಶ
ಶಿವಲಿಂಗ ಸೊಬಗರಿನ್ನಿಂತುಂಟೆ ನಂದೀಶ
ಎಂದು ಕೊಂಡಾಡುತುಂ ಸಾರೂಪ್ಯಪದವಿತ್ತು
ನಿಂದಿರ್ದ ಗಣಕುಲದ ಭರಭಾರಮಂ ಪೊತ್ತು

ನತ ಸುರಾಸುರರಾಜಚರಣನಿಂತೊಪ್ಪಿದಂ
ಅತಿಶಯುದ ಶೈವಪದ ಸಾಮರ್ಥ್ಯನೊಪ್ಪಿದಂ
ನಂಬಿರ್ದ ಶರಣರೊಡನೊಕ್ಕಲಿಂತೊಪ್ಪಿದಂ
ಅಂಬರಸ್ಥಿರ ಕೇಶಪಾಶನಿಂತೊಪ್ಪಿದಂ
ಸುರರಾಜ ರಾಜರಾಜಾಭರಣನೊಪ್ಪಿದಂ
ಪುರಕಾಲ ಕಾಮವನದಾವಾಗ್ನಿಯೊಪ್ಪಿದಂ
ದೇವಗತಿ ದೇವಮತಿ ದೇವಪತಿಯೊಪ್ಪಿದಂ
ದೇವ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

**ಕಂದ** ॥ ಶ್ರೀ ಗೌರೀವಲ್ಲಭನೆಮ
ಗೀಗೆ ಸದಾ ತನ್ನ ಚರಣ ಭಕ್ತಿಯ ನೊಲವಿಂ ।
ರಾಗಂ ಮಿಗೆ ಕೆಂಭಾವಿಯ
ಭೋಗಣ್ಣನ ಕಂದನೆಂದು ಹಂಪೆಯ ದೇವಂ ॥

# ಕೇಶಿರಾಜ ದಣ್ಣಾಯಕರ ರಗಳೆ.

**ಕಂದ** ॥ ತುರುಗಿದ ಪೊಸ ಕೆಂಜೆಡೆಗಳ ।
ವಿರುಗುವ ಶಶಿಕಳೆಯ ಹಂಪೆಯ ವಿರೂಪಾಕ್ಷಂ ।
ಕರೆಗೊರಲಂ ಬಿಸುಗಣ್ಣಂ ।
ಮೆರೆದಂ ವಿಭುಕೇಶಿರಾಜದಣ್ಣಾಯಕರಂ ॥

## ರಗಳೆ

ಉತ್ತರ ದಿಶಾಭಾಗದೊಳಗೊಂದು ಶಿವಪುರಂ
ಬಿತ್ತರಿಸಲೆನ್ನಳವೆ ಮಿಗೆ ರಂಜಿಪುದು ಕರಂ
ಭಕ್ತಿಯನೊಳಗುಮಾಡಿ ಕೊಂಡಗುಳಿಯಂತೆಸೆದು
ಯುಕ್ತವೆನೆ ಕೊಂಡಗುಳಿಯೆಂಬ ಪೆಸರಿಂದೆಸೆದು
ಇರ್ಪ ಪುರದೊಳಗೋರ್ವ ಸದ್ಭಕ್ತನೊಪ್ಪುವಂ
ಸರ್ಪಭೂಷಣನ ಭಕ್ತಿಯ ಬರವನಪ್ಪುವಂ
ತನ್ನ ನಾಮಂ ಕೇಶಿರಾಜನೆಂಬುದು ದಿಟಂ
ತನ್ನ ಶಿವಭಕ್ತಿಯುರವಣೆ ಧರಣಿಗುತ್ಕಟಂ
ಶ್ರೀ ವಿರೂಪಾಕ್ಷದೇವರ್ತಮಗೆ ಗುರುವಾಗಿ
ಭಾವಿಸುತಿರ್ಪನವರಂಘ್ರಿಯಂ ದೃಢವಾಗಿ
ಪ್ರಾಣನಾಥಂ ತನಗೆ ಸೋಮನಾಥಂ ನೋಡ
ಜಾಣರತ ನಿಜವರಿತು ಬಿಡದರ್ಚಿಪಂ ನೋಡಿ
ಬುದ್ಧಿವಂತಂ ಸುರಾಸುರ ಗುರುಗಳಳವಲ್ಲ
ಶುದ್ಧಿಮಾನಗ್ನಿ ಜಲವಾಯು ಗಳಿಗಳವಲ್ಲ

ಇಂತಪ್ಪ ಕೇಶಿರಾಜಯ್ಯಂಗಳೊಪ್ಪದೊಳ್
ಕಂತುಹರನಂ ಪೊಗಳಲನುವಾಗಿ ಚಿತ್ತದೊಳ್
ಪುಳಕಂಗಳೊಡನೊಡನೆ ಬೆಮರ ಬಿಂದುಗಳೊಗೆಯೆ
ಇಳಿವ ಗದ್ಗದದೊಡನೆ ಕಂಪನಂ ಮಿಗೆ ನೆಗೆಯೆ
ಆನಂದ ಜಲದೊಡನೆ ಅಟ್ಟಹಾಸಂ ನಿಮಿರೆ

ಏನೆಂಜೆನುಬ್ಬರದ ಭಕ್ತಿ ಚಿತ್ತಮನಡರೆ
ನಿಚ್ಚಲೆಂಟುಂ ಪದ್ಯಮಂ ಸೋಮನಾಥಂಗೆ
ಅಚ್ಚರಿ ಮಿಗಲ್ಕೆ ಪೇಳ್ವಂ ಶಿವಾನಾಥಂಗೆ
ಪಂಚಾಕ್ಷರಾನುಬಂಧಂ ಛಂದವನುವಾಗೆ
ಪಂಚಮುಖ ನಾಮದಭಿಧಾನ ಬುದ್ಧಿಯದಾಗೆ
ಶಿವ ವಾಕ್ಯ ಶಬ್ದ ಶುದ್ಧಿ ವ್ಯಾಕರಣ ಮಾಗೆ
ಶಿವಭಕ್ತಿ ವೃತ್ತಕ್ಕಲಂಕಾರದಂತಾಗೆ
ಪದ್ಯಂಗಳಂ ಶಿವಂಗನುದಿನಂ ಪೇಳುತಂ
ಚೋದ್ಯವೆನೆ ಶಂಕರ ಸ್ತೋತ್ರದೊಳೆ ಬಾಳುತಂ

ಇರಲಿತ್ತಲಾ ಕಲ್ಯಾಣ ಪುರದೊಳಗೆ
ಧರಣೀಶ ಪೆರ್ಮಾಡಿರಾಯನೋಲಗದೊಳಗೆ
ಹರುಷದಿಂ ಸಿಂಹಾಸನಾರೂಢನಾಗಿರ್ದು
ಪರಿಪರಿಯ ಮಂತ್ರಿಗಳ ಮೊಗವನೀಕ್ಷಿಸುತಿರ್ದು
ತನ್ನಯ ಮನಕ್ಕೆರಗುವವರೋರ್ವರಿಲ್ಲದಿರೆ
ತನ್ನಯ ಚಿತ್ತಕ್ಕೆ ತಕ್ಕನುಕೂಲರಿಲ್ಲದಿರೆ
ಬಂದನೋಲಗದೊಳಗೆ ಪಿರಿಯರ ಮೊಗಂ ನೋಡಿ
ಬಂದ ಬಂದಗ್ರಹಾರದ ವಿಪ್ರರಂ ನೋಡಿ
ನಿಮ್ಮೂರ್ಗಳೊಳ್ ಬುದ್ಧಿವಂತರಪ್ಪವರೊಳರೆ
ಸುಮ್ಮಾನಿಗಳ್ ಕೋವಿದರ್ ನೀತಿವಿದರೊಳರೆ
ಎನೆ ಕೊಂಡಗೂಳಿಯ ಮಹಾಜನಂಗಳ್ ಕೇಳ್ದು
ಮನವೊಸೆದು ನುಡಿದರತ್ಯುತ್ಸಾಹಮಂದಾಳ್ದು
ದೇವ ಎಮ್ಮಯ ಪುರದೊಳೋರ್ವ ಸಜ್ಜನರುಂಟು
ಭಾವಜ್ಞರತಿಸಿಯತರನುಷಮಾಸ್ಪದರುಂಟು
ಅವರ ನಾಮಂ ಕೇಶಿರಾಜನೆಂಬುದು ಧರೆಗೆ
ಅವರ ಶೀಲಂ ವಿಚಿತ್ರ ಸೊಗಯಿಪುದು ನಿಮಗೆ

ಎನೆ ನೃಪಂ ಚಾರರಂ ಕಳುಪಿಯವರಂ ಕರೆಸಿ
ಮನವೊಲ್ದು ಹರುಷದಿಂದುಚಿತಾಸನದೊಳಿರಿಸಿ
ನವರತ್ನ ಖಚಿತ ನವ್ಯಾಭರಣವಂ ತೊಡಿಸಿ

# ಶಿವಾನುಭವ.



ಸಂಪುಟ ೧೦. ] ಜುಲೈ ೧೯೩೬. [ ಸಂಚಿಕೆ ೬.

# ವಿಷಯಾನುಕ್ರಮಣಿಕೆ.





---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೭೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.



ಕೆಳದಿಯ ರಾಮೇಶ್ವರ ದೇವಾಲಯ.

( ಪುಟ ೫೫೮ ನೋಡಿರಿ. )

# ಶಿವಾನುಭವ.

ವರ್ಷ ೧೦] ಜೂನ ೧೯೩೬. [ಸಂಚಿಕೆ ೬.

## ಶೂನ್ಯಸಂಪಾದನೆಯ ರಹಸ್ಯ.

(ಲೇಖಕರು:— ವಿ॥ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ವಿಜಾಪುರ.)

### ನುಲಿಯ ಚಂದಯ್ಯನವರ ಸಂಪಾದನೆ.

ನುಲಿಕಣ್ಣಿಗಳಂಗೆಯ್ಯುತೆ
ಸಲೆಶಿವಶರಣರ್ಗೆ ಮಾರಿ ಬಂದಿಹಧನದಿಂ।
ಕಲಿ ಚಂದಯ್ಯಂ ಚರರಿಗೆ
ನಲುವಿಂ ದಾಸೋಹಗೆಯ್ದ ಚರಿತೆಯನುಸುರ್ವೆಂ॥

ವಿಜಾಪುರ ಜಿಲ್ಹೆಯ ಬಾಗೇವಾಡಿ ತಾಲೂಕಿನಲ್ಲಿ ಚಿಮ್ಮಲಗಿಯೆಂಬದೊಂದು ಗ್ರಾಮವುಂಟು. ಅದು ಆಲಮಟ್ಟಿ ಸ್ಟೇಶನಕ್ಕೆ ಸಮೀಪವಾಗಿ ಕೃಷ್ಣಾತೀರದ ಮೇಲೆ ಇದೆ. ಅಲ್ಲಿ ಹಿಂದಕ್ಕೆ ಬಸವಾದಿ ಪ್ರಮಥರ ಕಾಲದಲ್ಲಿ ನುಲಿಯ ಚಂದಯ್ಯನವರೆಂಬ ಶಿವಶರಣರು ನುಲಿಕಣ್ಣಿಗಳ ಕಾಯಕವನ್ನು ಕೈಕೊಂಡು ತಾವು ಮಾಡಿದ ಕಣ್ಣಿಗಳನ್ನು ಶಿವಶರಣರಿಗೆ ಒಂದು ಹಾಗಕ್ಕೆ (೪ ಪೈ) ಮಾರಿ ಬಂದ ಹಣದಿಂದ ಜಂಗಮ ದಾಸೋಹವ ಮಾಡಿ ಮಿಕ್ಕ ಪ್ರಸಾದದಿಂದ ಲಿಂಗಭೋಗೋಪಭೋಗಿಯಾಗಿ ಉಪಜೀವಿಸುತ್ತಿದ್ದರು. ಚಂದಯ್ಯನವರಿಗೆ ಜಂಗಮಭಕ್ತಿಯೇ ಅಧಿಕ. ಅವರು ಜಂಗಮ ಪೂಜೆಯೇ ಲಿಂಗಪೂಜೆಯೆಂದು ತಿಳಿಯುತ್ತಿದ್ದರು. ಅವರಿಗೆ ಜಂಗಮ ಭಕ್ತಿಯೇ ಲಿಂಗಭಕ್ತಿ; ಜಂಗಮ ತೃಪ್ತಿಯೇ ಲಿಂಗತೃಪ್ತಿ. ಅವರು ಜಂಗಮ ದಾಸೋಹವೇ ಪರಮಪದವೆಂದು ತಿಳಿದು ಎಲ್ಲ ಕ್ರಿಯೆಗಳನ್ನು

ಜಂಗಮ ದಾಸೋಹದಲ್ಲಿಯೇ ಸಮರ್ಪಿಸಿ ಅದರಲ್ಲಿಯೇ ಮನಮಗ್ನವಾಗಿದ್ದರು.

ಹೀಗಿರಲು ಒಂದು ದಿನ ಚಂದಯ್ಯನವರು ತಮ್ಮ ಕಾಯಕಕ್ಕೆಂದು ಹುಲ್ಲನ್ನು ಕೊಯ್ದು ಹೊರೆಯನ್ನು ಕಟ್ಟುವ ಕಾಲದಲ್ಲಿ ಅವರ ಇಷ್ಟ ಲಿಂಗವು ಅವರ ಜಂಗಮದಾಸೋಹದ ನಿಷ್ಠೆಯನ್ನು ಪರೀಕ್ಷಿಸಿ ಜಗತ್ತಿಗೆ ತೋರಿಸಬೇಕೆಂಬ ಉದ್ದೇಶದಿಂದ ಅವರು ನಿಂತಿರುವ ಪ್ರವಾಹದಲ್ಲಿ ಜರಿದು ಬಿದ್ದು ಬಿಟ್ಟಿತು. ಆಗ ಚಂದಯ್ಯಗಳು ಆ ಲಿಂಗದ ಮನೋಭಾವವನ್ನರಿದು ಚರಸೇವೆಯು ಬೇಕಾದರೆ ಆ ಲಿಂಗವು ತಾನೇ ಬಂದಿತ್ತೆಂತಲೂ, ಜಂಗಮದಾಸೋಹದಲ್ಲಿಯೇ ಲಿಂಗವುಂಟೆಂತಲೂ ಭಾವಿಸಿ ಲಿಂಗಯ್ಯನನ್ನು ಹಾಗೆಯೇ ಬಿಟ್ಟು ಹೋಗುತ್ತಿರಲು ಲಿಂಗಯ್ಯನು ಗಾಬರಿಯಾಗಿ ಆತನ ಜಂಗಮ ನಿಷ್ಠೆಗೆ ಮೆಚ್ಚಿ "ನಾವು ಬಂದೆವೆ"ಂದು ಧ್ವನಿ ಮಾಡಲು ಚಂದಯ್ಯನವರು "ನಿಮ್ಮ ಭಾವ ಹೇಗೆ ಇದ್ದಿತ್ತು ಹಾಗೆಯೇ ಇರಿ. ನನಗೆ ನಮ್ಮ ಒಡೆಯರ ಸೇವೆ ಉಳಿದೀತು" ಎಂದು ಮುಂದಕ್ಕೆ ಹೋಗಲಾರಂಭಿಸಿದರು. ಆಗ ಲಿಂಗಯ್ಯನು ಪುರಷಾಕಾರವನ್ನು ತಳೆದು "ನಾನು ಬಂದೆನು, ಬಿಟ್ಟು ಹೋಗದಿರಯ್ಯಾ" ಎಂದು ಬೆನ್ನು ಹತ್ತಿದನು. ಅದನ್ನು ಕೇಳಿ ಚಂದಯ್ಯನವರು "ಮೊದಲು ಹೋಗಿ ಈಗ ಬಂದಿಹೆನೆಂದರೆ ಒಪ್ಪೆನೆನಲು ಆ ಲಿಂಗವು "ನೀನೊಪ್ಪೆನೆಂದರೆ ನಾ ಬಿಡೆನೆಂದು" ಹಾಗೆಯೇ ಬೆನ್ನು ಹತ್ತಿ ಬರಲು ಅವರೀರ್ವರೂ ತೊರೆಯಲ್ಲಿ ಬಟ್ಟೆಗಳನ್ನು ತೊಳೆಯುತ್ತಿದ್ದ ಮಡಿವಾಳಯ್ಯನವರ ಬಳಿಗೆ ಬಂದರು. ಲಿಂಗಯ್ಯನು ಮಡಿವಾಳಯ್ಯನಿಗೆ ತನ್ನ ಸ್ಥಿತಿಯ ಬಗ್ಗೆ ದೂರು ಹೇಳಿದನು.

## ಮಡಿವಾಳಯ್ಯ ಚಂದಯ್ಯಗಳ ಸಂವಾದ.

ಆಗ ಮಡಿವಾಳಯ್ಯನವರು ಚಂದಯ್ಯನವರಿಗೆ ಹೇಳಿದುದೇನಂದರೆ "ತಾನಾಗಿಯೇ ಬಂದ ಸುಖವ ನೆರೆ ಹಿಂಗಿದವರುಂಟೆ? ಕಂಡ ನಿಧಾನವ ನೆಡಹಿಕೊಂಡು ನಡೆಯೆಂದವರುಂಟೆ? ಸುಖಕ್ಕೆ ಸುಖವೊದಗಿದರೆ ಒಲ್ಲೆನೆಂಬವರುಂಟೆ? ಲಿಂಗಮೂರ್ತಿ ಕಲಿದೇವಯ್ಯ ಬಂದಿಹನೆಂದರೆ ಒಲ್ಲೆನೆನಬೇಕೆ ಚಂದಯ್ಯ ?

ಚಂದಯ್ಯ:— ಅಂದು ಹೋಗಿ ಇಂದು ಬಂದಿಹೆನೆಂಬುದು ಚಂದವೇ? ಘನವಪ್ಪ ಪರಿಪೂರ್ಣ ಲಿಂಗವು ಎಲ್ಲಿದ್ದೋಡೇನು? ಅದು

ಹೋಯಿತ್ತೆಂಬ ಸಂದೇಹವೆನಗಿಲ್ಲ ನೋಡಾ. ಆತ್ಮ ಹೋದಲ್ಲಿ ಘಟವೆಷ್ಟು ದಿನ ಉಳಿಯುವದು? ಜಂಗಮವುಳ್ಳನ್ನಕ್ಕರ ಚಂದೇಶ್ವರ ಲಿಂಗದ ಹಂಗು ನನಗಿಲ್ಲ ಕಾಣಾ ಮಡಿವಾಳಯ್ಯ.

ಮಡಿವಾಳಯ:— ದಾಸೋಹ ಮಾಡಬೇಕಾದರೆ ಈಶ್ವರ ಪೂಜೆಯು ಅವಶ್ಯಕ. ಈಶ್ವರ ಪೂಜೆಯೇ ಆಚಾರ. ಆಚಾರಕ್ಕೆ ಲಿಂಗವು ಬೇಕೇ ಬೇಕು. ಲಿಂಗವಿಲ್ಲದೆ ಜಂಗಮ ದಾಸೋಹ ಮಾಡುವರೇ ಚಂದಯ್ಯ ?

ಚಂದಯ್ಯ:— ಲಿಂಗವೆಂಬುದು ಗುರುವಿನ ಹಂಗು. ಗುರುವೆಂಬುದು ಲಿಂಗದ ಹಂಗು. ಆದರೆ ಜಂಗಮ ದಾಸೋಹವು ಗುರುಲಿಂಗಕ್ಕತೀತವು. ಅಂದ ಮೇಲೆ ಜಂಗಮ ದಾಸೋಹಕ್ಕೆ ಲಿಂಗದ ಹಂಗೇಕೆ ಹೇಳಾ ಮಡಿವಾಳಯ್ಯ ?

ಮಡಿವಾಳಯ್ಯ:— ಗುರುವಾದರೂ ಲಿಂಗವ ಪೂಜಿಸಬೇಕು. ಜಂಗಮವಾದರೂ ಲಿಂಗವ ಪೂಜಿಸಬೇಕು. ಜಂಗಮಕ್ಕೆ ಲಿಂಗವಿಲ್ಲದೆ ಪ್ರಾಣವಿಲ್ಲ. ಅರಿದಿಹೆನೆಂದರೆ ಅಂಗದಲ್ಲಿ ಲಿಂಗವಿರಬೇಕು. ಕಲಿದೇವಯ್ಯನರಿವುದಕ್ಕೆ ಇದೇ ಮಾರ್ಗ ಚಂದಯ್ಯ.

ಚಂದಯ್ಯ:— ಭಾವ ಶುದ್ಧವಾಗಿಪ್ಪುದೇ ಗುರುಪೂಜೆ. ಜ್ಞಾನ ಶುದ್ಧವಾಗಿಪ್ಪುದೇ ಲಿಂಗಪೂಜೆ. ತ್ರಿಕರಣ ಶುದ್ಧವಾಗಿಪ್ಪುದೇ ಜಂಗಮಪೂಜೆ. ತ್ರಿವಿಧದಲ್ಲಿ ದ್ವಿವಿಧವು ಕೂಡಿ ಹೋಗುವದರಿಂದ ಜಂಗಮದಾಸೋಹದಲ್ಲಿ ಗುರುಲಿಂಗಗಳು ಅಡಗುವದಿಲ್ಲವೇ ಮಡಿವಾಳಯ್ಯ ?

ಮಡಿವಾಳಯ್ಯ:— ಅರಿವನರಿದಿಹೆನೆಂದು ಕ್ರಿಯೆಯ ಬಿಡಬಹುದೇ ? ಮಧುರಕ್ಕೆ ಮಧುರ ಕೂಡಿದರೆ ಕುಂದೇನು ? ಜಂಗಮದಾಸೋಹಕ್ಕೆ ಲಿಂಗಪೂಜೆಯ ಮಾಡಿದರೆ ಸುವರ್ಣಕ್ಕೆ ಸುಗಂಧವು ಕೂಡಿದಂತಾಗುವದಿಲ್ಲವೇ ಚಂದಯ್ಯ ?

ಚಂದಯ್ಯ:— ಲಿಂಗಪೂಜೆಗೆ ಷೋಡಶೋಪಚಾರಗಳು ಬೇಕು. ಅವುಗಳನ್ನು ಮಾಡಬೇಕೆಂದರೆ ನಮ್ಮ ಕಾಯಕವು ನಿಂತುಹೋಗುವದು. ಕಾರಣ ಲಿಂಗಪೂಜೆಯ ಗೊಡವೆಯೆನಗೇಕೆ ? ಜಂಗಮ ದಾಸೋಹ ವೊಂದಿದ್ದೊಡೆ ಸಾಲದೇ ಮಡಿವಾಳಯ್ಯ ?

ಮಡಿವಾಳಯ್ಯ:— ಜಂಗಮಸೇವೆ ಲಿಂಗಸಹಿತವಾಗಿರಬೇಕು. ಲಿಂಗವೆಂಬುದು ಜಂಗಮದಂಗ. ಆ ಲಿಂಗವಿಲ್ಲದೆ ಪ್ರಾಣವುಂಟೆ? ಹಣ್ಣಿಲ್ಲದೆ ರುಚಿಯನರಸುವಂತೆ ನಿಮ್ಮ ಕಾಯಕದ ಕ್ರಿಯೆಯಲ್ಲವು. ಅದು ಕಾರಣ ಕಲಿದೇವಯ್ಯ ಹೊಣೆಗಾರ; ಲಿಂಗಮೂರ್ತಿಯ ಕರೆದುಕೊಳ್ಳಾ, ಚಂದಯ್ಯ.

ಅದಕ್ಕೆ ಚಂದಯ್ಯಗಳು ತಮ್ಮ ಲಿಂಗಮೂರ್ತಿಗೆ ಕಣ್ಣಿಯ ಮಾಡಿರಬಲ್ಲಡೆ ಬಾರೆಂದು ಕರೆದುಕೊಂಡು ಹೋದರು. ಲಿಂಗಯ್ಯನು ಪ್ರತಿನಿತ್ಯ ಕಣ್ಣಿಯನ್ನು ಒಂದು ಹಾಗಕ್ಕೆ ಮಾರಿ ಹಣವನ್ನು ಚಂದಯ್ಯಂಗೆ ತಂದೊಪ್ಪಿಸುತ್ತಿದ್ದನು. ಒಂದು ದಿನ ಲಿಂಗಯ್ಯನು ಕಣ್ಣಿಯನ್ನು ತೆಗೆದುಕೊಂಡು ಬಸವಣ್ಣನವರ ಅರಮನೆಗೆ ಬರಲು ಇದನ್ನರಿತು ಬಸವಣ್ಣನವರು ಲಿಂಗಯ್ಯಂಗೆ ಶಿರಬಾಗಿ ಒಂದು ಸಾವಿರ ಹೊನ್ನು ಕೊಟ್ಟು ಕಣ್ಣಿಯನ್ನು ಕೊಂಡುಕೊಂಡರು. ಲಿಂಗಯ್ಯನು ಮರಳಿ ಬಂದು ಚಂದಯ್ಯಂಗೆ ಹೊನ್ನನ್ನು ಕೊಡಲು ಆತನು ಸಿಟ್ಟಿಗೆದ್ದು ಈ ಹಣವನ್ನು ಕಳವು ಮಾಡಿದಂತೆಯೇ ಎಂದು ಈ ಪ್ರಕಾರ ನುಡಿದನು "ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ಸ್ವಚ್ಛಂದವಾಗಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದ ಆಶೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ಚಂದೇಶ್ವರ ಲಿಂಗದಲ್ಲಿ ನಷ್ಟವಯ್ಯಾ ಲಿಂಗಯ್ಯಾ. ಕಂದಿಸಿ ಕುಂದಿಸಿ ನೋಯಿಸಿ ಕಂಡಕಂಡವರ ಬೇಡಿ ತಂದು ಜಂಗಮಲಿಂಗಕ್ಕೆ ಮಾಡಿಹೆನೆಂಬ ದಂದುಗದ ಮಾಟ ಲಿಂಗಕ್ಕೆ ನೈವೇದ್ಯ ಸಲ್ಲದು. ತನು ಕರಗಿ ಮನ ಬಳಲಿ ದಾಸೋಹ ಮಾಡುವದೇ ಮಾಟ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ."

ಹೀಗೆ ಮಾತನಾಡಿ ನೀನು ನಮ್ಮಲ್ಲಿರದೆ ಎಲ್ಲಿಯಾದರೂ ಹೋಗೆಂದು ಲಿಂಗಯ್ಯನಿಗೆ ಚಂದಯ್ಯಗಳು ಗದರಿಸಲು ಲಿಂಗಯ್ಯ ಮಡಿವಾಳ ಮಾಚಯ್ಯನವರ ಬಳಿಗೆ ಬಂದು ಸಕಲ ವೃತಾಂತವನ್ನು ಹೇಳಲು ಅವರು ಚಂದಯ್ಯನಿಗೆ ಅರಿಕೆ ಮಾಡಿದ್ದೇನಂದರೆ " ಕಾಯಕದಲ್ಲಿ ನಿಂದ ಶರಣಂಗೆ ಸೇವೆಯವರ ತಪ್ಪು ಹಿಡಿದಿಹೆನೆಂದರೆ ಕಾರ್ಯವೆಂತು ನಡೆವುದಯ್ಯ ? ಅವಗುಣಕ್ಕೆ ಮುನಿಯ ಬೇಕಲ್ಲದೆ ಲಾಂಛನಕ್ಕೆ ಮುನಿಯ

ಬಹುದೇ ? ಮುಗ್ಗಿದ ತುರಗದ ಕಾಲ ಕತ್ತರಿಸಿದವರುಂಟೆ ? ತಿಗುಣಿ ಕಚ್ಚಿದರೆ ಮನೆಯ ಸುಟ್ಟವರುಂಟೆ ? ಕಲಿದೇವರ ದೇವನಲ್ಲಿ ತಪ್ಪ ಹಿಡಿಯಬೇಡ " ಕೇಳಾ ಚಂದಯ್ಯಾ.

ಚಂದಯ್ಯ:— ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗ ನೋಡಾ. ಇದು ಕಾರಣ ನಡೆ ನುಡಿ ಶುದ್ಧವಿಲ್ಲದಿದ್ದರೆ ಚಂದೇಶ್ವರಲಿಂಗವಾದರೂ ತಪ್ಪನೊಳಕೊಳ್ಳ ಕಾಣಾ ಮಡಿವಾಳಯ್ಯಾ.

ಮಡಿವಾಳಯ್ಯ:— ಗುರುಪೂಜೆಯನರಿದಿಹೆನೆಂದು ಲಿಂಗಪೂಜೆಯ ಬಿಡಲಾಗದು. ಜಂಗಮಪೂಜೆಯನರಿದಿಹೆನೆಂದು ಶರಣರ ಸಂಗವ ಬಿಡಲಾಗದು. ಇದು ಕಾರಣ ಶರಣರ ಸಂಗದ ಸಮ್ಯಜ್ಞಾನದಲ್ಲಲ್ಲದೆ ಕಲಿದೇವಯ್ಯನ ಕಾಣಬಾರದು. ಶಿವಾನುಭವ ಮಂಟಪಕ್ಕೆ ಹೋಹ ಬಾರಾ ಚಂದಯ್ಯ.

ಹೀಗೆಂದು ಮಡಿವಾಳಯ್ಯಗಳು ಚಂದಯ್ಯ ಲಿಂಗಯ್ಯಗಳನು ಕೂಡಿಕೊಂಡು ಕಲ್ಯಾಣಕ್ಕೆ ಬರಲು ಲಿಂಗಮೂರ್ತಿಯು ಬಸವಣ್ಣಂಗೆ ಸಾವಿರ ಹೊನ್ನುಗಳನ್ನು ಮರಳಿ ಕೊಟ್ಟ ಬಳಿಕ ಚಂದಯ್ಯನವರು ಪ್ರಮಥಗಣಂಗಳಿಗೆ ನಮಸ್ಕರಿಸಿ ಬಿನ್ನಯಿಸಿದ್ದೇನಂದರೆ:— " ಕೈದುವಿಡಿದವರೆಲ್ಲ ಇರಿಯುವರೇ ? ದುಡ್ಡು ಕೊಟ್ಟವರೆಲ್ಲ ಭಕ್ತರಪ್ಪರೇ ? ಅದು ಚಂದೇಶ್ವರ ಲಿಂಗಕ್ಕೆ ಮುಟ್ಟದ ಮಾಟ. ಗುರುವಿಂಗೆ ತನುವೆಂದಲ್ಲಿ, ಲಿಂಗಕ್ಕೆ ಮನವೆಂದಲ್ಲಿ, ಜಂಗಮಕ್ಕೆ ಧನವೆಂದಲ್ಲಿ ಮತ್ತೊಂದಾಸೆಗೆ ಕೊಂಡಾಡಬೇಕೆ ? ಅದು ಚಂದೇಶ್ವರ ಲಿಂಗಕ್ಕೆ ದೂರ. ನಿತ್ಯ ಶುದ್ಧಕಾಯಕದಿಂದ ದಾಸೋಹ ಮಾಡಬೇಕಲ್ಲದೆ ಲಿಂಗಯ್ಯನು ಅನ್ಯರಿಂದ ದುಡ್ಡು ತಂದು ಮಾಡಬಹುದೇ ? ಅದು ಕಾರಣ ಲಿಂಗದ ಹಂಗು ನನಗೇಕೆ ?" ಎಂದು ತಮ್ಮ ಕಾಯಕ ದಾಸೋಹಗಳ ನಿಷ್ಠೆಯನ್ನು ಪ್ರಸ್ತಾಪಿಸಿದರು.

## ಪ್ರಭುದೇವ ಚಂದಯ್ಯಗಳ ಸಂವಾದ.

ಆಗ ಪ್ರಭುದೇವರು ಲಿಂಗವನ್ನು ಬಿಡಲಾಗದೆಂದು ನಿರೂಪಿಸಿದ್ದೇನಂದರೆ "ಪರುಷವಾದರೂ ಒಂದರಲ್ಲಿರಿಸಬೇಕು. ರತ್ನ ವಿಶೇಷವಾದರೂ ಕುಂದಣದಲ್ಲಿ ಬಂಧಿಸಿ ಸಂದಿರಬೇಕು. ಅಂಗವಿದ್ದಲ್ಲಿ ಲಿಂಗವಿರಬೇಕು. ಅದು ಕಾರಣ ಗುಹೇಶ್ವರ ಲಿಂಗವ ಬಿಡಲಾಗದು ನೋಡಾ ಚಂದಯ್ಯಾ.

ಚಂದಯ್ಯ:— ಗುರುಸೇವೆ ಮಾಡಿದರೆ ಇಹದಲ್ಲಿ ಸುಖ. ಲಿಂಗ ಸೇವೆಯ ಮಾಡಿದರೆ ಪರದಲ್ಲಿ ಸುಖ. ಜಂಗಮಸೇವೆ ಮಾಡಿದರೆ ಇಹ ಪರಗಳೆಂಬುಭಯ ನಾಸ್ತಿ. ಅದು ಕಾರಣ ಜಂಗಮದಾಸೋಹವಿರಲು ಲಿಂಗವೆನಗೇಕಯ್ಯ? ಲಿಂಗದ ಮುಖ ಜಂಗಮವಾದ ಕಾರಣ ಆ ಜಂಗಮ ದಾಸೋಹವ ಬಿಟ್ಟು ಬೇರೊಂದು ಪೂಜೆಯುಂಟೇ ಪ್ರಭುವೆ?

ಪ್ರಭುದೇವ:— ಅಂಗದಲ್ಲಿ ಆಳವಟ್ಟಿಪ್ಪ ಆಚಾರವೆ ಲಿಂಗವೆಂದ ರಿದನು. ಮನದಲ್ಲಿ ಬೆಳಗುತ್ತಿಪ್ಪ ಅರಿವೇ ಜಂಗಮವೆಂದರಿದನು. ಈ ಎರಡರ ಸಂಗವೇ ತಾನೆಂದರಿದನು. ಮಾಡುವ ದಾಸೋಹವೇ ಲಿಂಗ ಜಂಗಮವೆಂದರಿದನು. ನಮ್ಮ ಗುಹೇಶ್ವರ ಲಿಂಗದಲ್ಲಿ ಸಂಗನಬಸವಣ್ಣನ ನಿಲವನರಿಯೋಣ ಬಾರಾ ಚಂದಯ್ಯಾ.

ಹೀಗೆಂದು ಪ್ರಭುದೇವರು ಚಂದಯ್ಯಗಳನ್ನು ಕರೆದು ಕೊಂಡು ಬಸ ವಣ್ಣನವರನ್ನು ಕಂಡು ಬದುಕೋಣವೆಂದು ಅವರೆದುರಿಗೆ ಬಿನ್ನಪವ ಗೆಯ್ಯಲು ಬಸವಣ್ಣನವರು " ಜಂಗಮಸೇವೆಯೇ ಗುರುಪೂಜೆಯೆಂದೂ, ಲಿಂಗಪೂಜೆಯೆಂದೂ, ನಿಜವೆಂದೂ, ಸ್ವಯವೆಂದೂ, ನಿತ್ಯವೆಂದೂ ಅರಿದು ಆಚರಿಸಿ ಜಂಗಮಪ್ರಾಣಿಯಾದ ಚಂದಯ್ಯನ ಹಳೆಯ ಮಗನಾಗಿ ಆತನ ಶ್ರೀಚರಣಕ್ಕೆ ಶರಣೆಂದು ಶುದ್ಧನಾದೆನು. ಆ ಮಹಿಮನ ಘನವ ನಾನೆತ್ತ ಬಲ್ಲೆನಯ್ಯ ಪ್ರಭುವೇ ? " ಎಂದು ವಿನಯದಿಂದ ನುಡಿದರು.

ಅದಕ್ಕೆ ಪ್ರಭುದೇವರು:— ಆದಿಯಲ್ಲಿ ನೀನು ಗುರುವಾದ ಕಾರಣ ನಿನ್ನಿಂದ ಹುಟ್ಟಿತ್ತು ಲಿಂಗ. ಆದಿಯಲ್ಲಿ ನೀನು ಲಿಂಗವಾದ ಕಾರಣ ನಿನ್ನಿಂದ ಹುಟ್ಟಿತ್ತು ಜಂಗಮ. ಆದಿಯಲ್ಲಿ ನೀನು ಜಂಗಮವಾದ ಕಾರಣ ನಿನ್ನಿಂದ ಹುಟ್ಟಿದವು ಪ್ರಸಾದ ಪಾದೋದಕಂಗಳು. ಅದು ಕಾರಣ ಸರ್ವಾ ಚಾರ ಸಂಪನ್ನನಾದ ಪೂರ್ವಾಚಾರಿ ನೀನಾದ್ದರಿಂದ ಚಂದಯ್ಯಂಗೆ ಲಿಂಗದ ನಿಜವ ತಿಳಿಸಾ ಸಂಗನಬಸವಣ್ಣಾ " ಎಂದರು.

ಆಗ ಬಸವಣ್ಣನವರು:— " ಪ್ರಭುವೇ, ನಾನೆಂತು ಬಲ್ಲೆನಯ್ಯಾ ಲಿಂಗದ ನಿಜವ. ಚನ್ನಬಸವಣ್ಣ ಬಲ್ಲ. ನಾನು ಆತನಿರಿಸಿದಂತೆ ಇಪ್ಪೆ ನಯ್ಯಾ. ಇದು ಕಾರಣ ಕೂಡಲ ಸಂಗಮದೇವರಲ್ಲಿ ಚಂದಯ್ಯನು ಚನ್ನಬಸವಣ್ಣನ ಕೇಳಬೇಕೆಂದು ಬಿನ್ನಯಿಸುವೆ ನೋಡಾ " ಎಂದು ಹೇಳಲು ಚಂದಯ್ಯಗಳು ಚನ್ನಬಸವಣ್ಣನವರಿಗೆ " ಜಂಗಮ ಸೇವೆಯು ಚಿತ್ತಶುದ್ಧವಾಗಿಪ್ಪಲ್ಲಿ ಗುರುಪೂಜೆ ಸಂದಿತ್ತು, ಲಿಂಗಪೂಜೆ ಸಂದಿತ್ತು.

ಸರ್ವ ಸಂಪದವಾಯಿತ್ತು. ಅಂದ ಮೇಲೆ ಲಿಂಗಪೂಜೆಯೆನಗೇಕಯ್ಯಾ? ಎಂದು ಬೇಡಿಕೊಂಡರು.

ಆಗ ಚನ್ನಬಸವಣ್ಣನವರು "ಶ್ರೀ ಗುರು ಕರುಣವೆ ಲಿಂಗ, ಲಿಂಗದ ನಿಜವೇ ಜಂಗಮ. ಇಂತಿದು ಬಹಿರಂಗದ ವರ್ತನೆ. ಇನ್ನು ಅಂತರಂಗದಲ್ಲಿ ಸುಜ್ಞಾನವೇ ಜಂಗಮ, ಆ ಜ್ಞಾನದಿಂದ ನಡೆಯುವ ಸತ್ಕ್ರಿಯೆಯೇ ಲಿಂಗ, ಈ ಉಭಯದ ಏಕತ್ವಸಿದ್ಧಿಯೇ ಗುರು. ಅದುಕಾರಣ ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾಗಿರಬೇಕು. ಅಂಗದ ಮೇಲೆ ಲಿಂಗವಿಲ್ಲದಿರ್ದೊಡೆ ಜಂಗಮ ಸೇವೆಯ ಕೈಕೊಳ್ಳ. ಅದು ಕಾರಣ ಒಂದು ಬಿಟ್ಟು ಒಂದರಲ್ಲಿ ನಿಂದೊಡೆ ಅಂಗವಿಲ್ಲದ ಆತ್ಮನಂತೆ, ಶಕ್ತಿಯಿಲ್ಲದ ಶಿವನಂತೆ, ದೀಪವಿಲ್ಲದ ಪ್ರಕಾಶದಂತೆ ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವಹೀನನು ರಾಯಪಟ್ಟಕ್ಕೆ ಸಲ್ಲುವನೇ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲಚನ್ನಸಂಗಯ್ಯನಲ್ಲಿ ತ್ರಿವಿಧ ಸಮ್ಮತವೇ ಚರಸೇವೆಯಯ್ಯ ಚಂದಯ್ಯ.

ಮತ್ತು ಜಂಗಮವು ಪರವೆಂದರಿದೊಡೇನು ಅಂಗದಲ್ಲಿ ಲಿಂಗವಿಲ್ಲದನ್ನಕ್ಕರ? ಆ ಲಿಂಗದ ಚೈತನ್ಯದರಿವೆಲ್ಲವೂ ಜಂಗಮವಲ್ಲವೆ? ಮರನಿಲ್ಲದ ಹಣ್ಣುಂಟೆ? ಹಣ್ಣಿಲ್ಲದ ಸ್ವಾದವುಂಟೆ? ಅಂಗವೇ ಮಣ್ಣು ಲಿಂಗವೇ ಮರ, ಜಂಗಮವೇ ಫಲ, ರುಚಿಯೇ ಪ್ರಸಾದ. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಸಾಕಾರಲಿಂಗವೇ ಜಂಗಮಧಂಗವಯ್ಯಾ ಪ್ರಭುವೇ.

ಇದನ್ನು ಕೇಳಿ ಚಂದಯ್ಯಗಳು ಒಪ್ಪಿ ಒಡಂಬಟ್ಟು ದೇಹದ ಮೇಲೆ ಇಷ್ಟಲಿಂಗವನ್ನು ಧರಿಸಿಕೊಂಡು ಬಸವಣ್ಣ ಮೊದಲಾದ ಶರಣರ ಸಮ್ಯಜ್ಞಾನವು ತಮಗಾಯಿತ್ತೆಂದು ಬಿನ್ನಯಿಸಿದ್ದೇನಂದರೆ "ಎನ್ನಂಗ ಸತ್ಕ್ರಿಯೆ ಬಸವಣ್ಣನು. ಎನ್ನ ಲಿಂಗ ಸತ್ಕ್ರಿಯೆ ಚನ್ನಬಸವಣ್ಣನು. ಎನ್ನರಿವಿನ ಸತ್ಕ್ರಿಯೆ ಪ್ರಭುದೇವರು. ಎನ್ನ ದಾಸೋಹ ನಿಷ್ಠೆಯೇ ಮಡಿವಾಳಯ್ಯನು ಇದು ಕಾರಣ ಎನ್ನ ಅಂಗ, ಲಿಂಗ, ಜಂಗಮ ದಾಸೋಹಗಳೆಲ್ಲವೂ ಚನ್ನಬಸವಣ್ಣನ ಕರುಣದಿಂದ ನನ್ನಲ್ಲಿ ಅಳವಟ್ಟು ಚಂದೇಶ್ವರ ಲಿಂಗದಲ್ಲಿ ಶರಣರ ಸಮ್ಯಜ್ಞಾನವೆನಗಾಯಿತ್ತು ನೋಡಾ ಪ್ರಭುವೇ."

ಈ ಸಂಪಾದನೆಯಲ್ಲಿ ಲಿಂಗವನ್ನು ಬಿಟ್ಟು ಜಂಗಮ ದಾಸೋಹ ಮಾಡಲಿಕ್ಕೆ ಬರುತ್ತದೆಯೋ ಹೇಗೆಂಬದೊಂದು ಸಮಸ್ಯೆಯಿದ್ದು ಅದನ್ನು

ಶಿವಶರಣರು ಕಥಾರೂಪದಿಂದ ಬಿಡಿಸಿರುವರು. ನುಲಿಯ ಚಂದಯ್ಯನವರೇ ಈ ಸಮಸ್ಯೆಯ ಪುರಸ್ಕರ್ತರು. ಅಂತೆಯೇ ಈ ಸಂಪಾದನೆಗೆ ನುಲಿಯ ಚಂದಯ್ಯನವರ ಸಂಪಾದನೆಯೆಂಬ ಹೆಸರು. ಮಡಿವಾಳಯ್ಯಗಳು, ಪ್ರಭುದೇವರು, ಬಸವಣ್ಣನವರೇ ಮೊದಲಾದ ಶರಣರು ಈ ಸಮಸ್ಯೆಯನ್ನು ಬಿಡಿಸಲು ಪ್ರಯತ್ನ ಮಾಡಿದರು. ಅದರಿಂದ ಚಂದಯ್ಯನವರಿಗೆ ಸಮ್ಮತವಾಗಲಿಲ್ಲ. ಕೊನೆಗೆ ಚನ್ನಬಸವಣ್ಣನವರು ಅದನ್ನು ಸಮರ್ಪಕವಾಗಿಯೂ ಸಮಂಜಸವಾಗಿಯೂ ಹೇಳಿದ್ದರಿಂದ ಆ ಸಮಸ್ಯೆಯು ಬಗೆಹರಿಯಿತು. ಹಿಂದಕ್ಕೊಮ್ಮೆ ಜಂಗಮವು ಮನೆಗೆ ಬಂದಾಗ ಲಿಂಗಪೂಜೆ ಮಾಡುತ್ತ ಕೂಡ್ರಬಹುದೇ? ಎಂಬದೊಂದು ಸಮಸ್ಯೆಯು ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂಪಾದನೆಯಲ್ಲಿ ಪ್ರತಿಪಾದಿತವಾಗಿರುವುದಷ್ಟೇ. ಅದರಲ್ಲಿ ಲಿಂಗಪೂಜೆಯನ್ನು ಬಿಟ್ಟಾದರೂ ಜಂಗಮದ ಆದರಾತಿಥ್ಯವನ್ನು ಮಾಡಬೇಕೆಂಬ ತತ್ವವು ವಿವರಿಸಲ್ಪಟ್ಟಿದೆ. ಈ ಸಂಪಾದನೆಯಲ್ಲಿ ಜಂಗಮದ ಸೇವೆ ಮಾಡುವಾಗ ಲಿಂಗವನ್ನು ಸರ್ವಥಾ ಬಿಟ್ಟಿರಕೂಡದೆಂಬ ಮಾತು ನಿರ್ಣಯಿಸಲ್ಪಟ್ಟಿರುವದು. ಇದಲ್ಲದೆ ನಿತ್ಯ ಶುದ್ಧ ಕಾಯಕದಿಂದ ಗಳಿಸಿದ್ದೇ ಜಂಗಮ ದಾಸೋಹಕ್ಕೆ ಸಲ್ಲುವದಲ್ಲದೆ ಒಬ್ಬರಿಂದ ಬಿಕ್ಕೆ ಬೇಡಿ ತಂದ ಹಣವು ಸರ್ವಥಾ ಸಲ್ಲುವದಿಲ್ಲವೆಂಬದು ಚಂದಯ್ಯನವರು ಲಿಂಗಮೂರ್ತಿಗೆ ಬಸವಣ್ಣನಿಂದ ಒಂದು ಸಾವಿರ ಹೊನ್ನು ತಂದಾಗ ಗದರಿಸಿದ ವಚನದ ಮೇಲಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಒಟ್ಟಿನ ಮೇಲೆ ನಮ್ಮ ಶಿವಶರಣರು ಪವಿತ್ರವಾದ ಒಂದು ಕಾಯಕವನ್ನು ಕೈಕೊಂಡು ದುಡಿದು ಗುರುಲಿಂಗ ಜಂಗಮ ಸೇವೆ ಮಾಡಿ ಮಿಕ್ಕ ಪ್ರಸಾದವನ್ನು ಸೇವಿಸುತ್ತಿದ್ದರಲ್ಲದೆ ಅವರಲ್ಲಿ ರುಚಿ ದುರಾಶೆಗಳೆಷ್ಟು ಮಾತ್ರವೂ ಇದ್ದಿಲ್ಲವೆಂಬ ಮಾತು ನಿರ್ವಿವಾದವಾದದ್ದು.

---



ಕೈ॥ ಮಾಗಡಿ ವೀರಪ್ಪ ಶಾಸ್ತ್ರಿಗಳವರು.

# ಕೈ॥ ಮಾಗಡಿ ವೀರಪ್ಪ ಶಾಸ್ತ್ರಿಗಳ ಚರಿತ್ರೆ.

ಲೇಖಕ:— ಕೀರ್ತನಕೇಸರಿ, ಕೀರ್ತನ ವಿಚಕ್ಷಣ, ಕೀರ್ತನ ಶಿರೋಮಣಿ, ಶಿವ ಕೀರ್ತನ ಕವಿರಾಜ, ಕವಿರತ್ನ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆಮಠ.
ತುಮಕೂರು.

---

ವೀರಶೈವ ಸಮಾಜದಲ್ಲಿ ಆಗಿ ಹೋದ ವಿಭೂತಿಗಳ, ಮಹಾಪುರುಷರ, ರಾಜರ, ರಾಜಕಾರಣ ಪಟುಗಳ, ಕವಿಗಳ, ಪಂಡಿತರ, ಯೋಗಿಗಳ, ಪ್ರಸಿದ್ಧ ಮಹಿಳೆಯರ, ಗಾಯನ ಕುಶಲರ, ಶಿಲ್ಪಿಗಳ ಹಾಗೂ ಚಿತ್ರಗಾರರ ಚರಿತ್ರೆಯುನ್ನು ಸಂಗ್ರಹಿಸಿ ಪ್ರಸಿದ್ಧಿಸುವದು ಅತ್ಯವಶ್ಯ ಕರ್ತವ್ಯವಾಗಿದೆ.

ಪ್ರಾಚೀನ ಕಾಲದಲ್ಲಿ ಆಗಿ ಹೋದ ಹಲವು ವೀರಶೈವ ವಿಭೂತಿಗಳ ಚರಿತ್ರೆಯನ್ನು ವಿಖ್ಯಾತರಾದ ಹರಿಹರಾದಿ ಕವಿಗಳು ತಮ್ಮ ತಮ್ಮ ಕಾವ್ಯಗಳಲ್ಲಿ ಸಂಗ್ರಹಿಸಿದ್ದಾರೆ. ಆಧುನಿಕ ಕಾಲದಲ್ಲಿಯೂ ಹಲವು ಮಂದಿ ವೀರಶೈವ ಕವಿಗಳು ಬರೆದಿರುವ ಪುರಾಣ ಗ್ರಂಥಗಳೂ ಒಂದು ವಿಧದಿಂದ ವೀರಶೈವ ವಿಭೂತಿಗಳ ಚರಿತ್ರೆಯೇ ಆಗಿವೆ. ಅಥಣಿ ಶಿವಯೋಗೀಶ ಪುರಾಣ, ಅನ್ನದಾನೇಶ್ವರ ಪುರಾಣ, ವೀರಶೈವ ಶಿವಶರಣರ ಪುರಾಣ ಹೇಮರಡ್ಡಿ ಮಲ್ಲಮ್ಮನ ಪುರಾಣ ಇತ್ಯಾದಿ ಗ್ರಂಥಗಳು ಪುರಾಣರೂಪವಾದ ಚರಿತ್ರೆಗಳಾಗಿವೆ.

ಇತ್ತೀಚೆಗೆ ಹಲವು ಮಂದಿ ವೀರಶೈವ ವಿದ್ವಾಂಸರು ಬರೆದ ಪ್ರಸಿದ್ಧ ಮಾಡಿರುವ ಕೆಲವು ಗ್ರಂಥಗಳು ಮುಂದಿನ ಪೀಳಿಗೆಗೂ ವೀರಶೈವ ಚರಿತ್ರೆಯನ್ನು ಬರೆಯುತಕ್ಕವರಿಗೂ ಬಹಳ ಸಹಕಾರಿಯಾಗಿವೆ. ವೀರಶೈವ ಸಮಾಜಸೇವಾ ಧುರಂಧರರಾದ ರಾವಸಾಹೇಬ ಪಿ ಜಿ. ಹಳಕಟ್ಟಿ ವಕೀಲರು ಬರೆದ ಕೈ॥ ಡೆಪ್ಯೂಟಿ ಚನ್ನಬಸಪ್ಪನವರ ಚರಿತ್ರೆ, ದೇಶಭಕ್ತ ಹರ್ಡೇಕರ ಮಂಜಪ್ಪನವರು ಬರೆದು ಪ್ರಸಿದ್ಧ ಮಾಡಿರುವ ಕೈ॥ ರಾವಬಹಾದ್ದೂರ ವಾರದ ಮಲ್ಲಪ್ಪನವರ ಚರಿತ್ರೆ, ಕೈ॥ ದಾನವೀರ ಶಿರಸಂಗಿ ಲಿಂಗರಾಜರ ಚರಿತ್ರೆ, ಸಹಜಕವಿ ಈಶ್ವರ ಸಣಕಲ್ಲರು ಬರೆದಿರುವ ಕೈ॥ ನಾಲತವಾಡ ಶರಣರ ಚರಿತ್ರೆ ಮುಂತಾದ ಗ್ರಂಥಗಳು ನಿಜವಾಗಿಯೂ ಸಮಾಜಕ್ಕೆ ಉಪಯುಕ್ತವಾಗಿವೆ.

ಶಿವಾನುಭವ ಪತ್ರಿಕೆಯು ಹೊರಟ ಮೇಲೆ ಅದರ ಮುಖದಿಂದ ಕಣ್ಮರೆಯಾಗಿದ್ದ ಅನೇಕ ಮಹಾಪುರುಷರ ಚರಿತ್ರೆಗಳು ಬೆಳಕಿಗೆ ಬಂದಿವೆ. ಇನ್ನೂ ಬಹಳ ಬರಬೇಕಾಗಿವೆ.

ವೀರಶೈವ ಸಮಾಜಕ್ಕೆ ಮಹೋಪಕಾರ ಮಾಡಿದ ಕೈ|| ರಾವಬಹಾದ್ದೂರ ರುದ್ರಗೌಡರು ಕೈ|| ದಿವಾನಬಹಾದ್ದೂರ ಶಾಂತವೀರಪ್ಪನವರು ಕೈ|| ರಾವಬಹಾದ್ದೂರ ಗಿಲಗಂಚಿ ಗುರಸಿದ್ದಪ್ಪನವರು ಕೈ|| ಸಕ್ಕರೆ ಕರಡಪ್ಪನವರು ಕೈ|| ರಾವಬಹಾದ್ದೂರ ಎಲೆಮಲ್ಲಪ್ಪಶೆಟ್ಟರು ಕೈ|| ಕಬ್ಬಳ್ಳಿ ಚನ್ನಬಸಪ್ಪನವರು ಕೈ|| ರಾವಬಹಾದ್ದೂರ ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪನವರು ಕೈ|| ಬಳ್ಳಾರಿ ಕುಪ್ಪಕಲ್ಲು ಅಯ್ಯಪ್ಪನವರು ಕೈ|| ಮೈಸೂರು ಬಿ. ಮಲ್ಲಪ್ಪನವರು ಕೈ|| ಎಂ. ಬಸವಯ್ಯನವರು ಕೈ|| ಹೈದರಾಬಾದಿನ ಬಾಪುರಾವ ವಕೀಲರು ಇತ್ಯಾದಿ ಮಹಾಪುರುಷರ ಚರಿತ್ರೆಯನ್ನು ಸಂಗ್ರಹಿಸಿ ಪ್ರಕಟಿಸಬೇಕಾದುದು ವೀರಶೈವ ವಿದ್ವಾಂಸರ ಕರ್ತವ್ಯವಾಗಿದೆ.

ಮೈಸೂರ ದೇಶದಲ್ಲಿ ಆಗಿಹೋದ ವೀರಶೈವ ಮಹಾಪುರುಷರ ಚರಿತ್ರೆಯನ್ನು ಸಂಗ್ರಹಿಸಿ, ಪ್ರಕಟಿಸಬೇಕೆಂಬ ಸಂಕಲ್ಪದಿಂದಲೇ ಶಿವಾನುಭವದಲ್ಲಿ ಈ ಮೊದಲೇ ಈ ಲೇಖಕನು ಕೈ|| ಅಭಿನವಕಾಲಿದಾಸ ಬಸವಪ್ಪ ಶಾಸ್ತ್ರಿ ಕೈ|| ಕರ್ಣಾಟಕ ಭಾಷಾರತ್ನ ಪಂಡಿತ ಪಿ. ಆರ್. ಕರಿಬಸವ ಶಾಸ್ತ್ರಿ, ಕೈ|| ಕವಿಶ್ರೇಷ್ಠ ಮತಿಕೂರು ನಂಜುಂಡ ಶಿವಯೋಗಿಗಳು, ಕೈ|| ವಿದ್ವಾನ್ ಎನ್. ಆರ್. ಕರಿಬಸವ ಶಾಸ್ತ್ರಿ ಎಂಬ ನಾಲ್ಕು ಮಂದಿ ಮಹಾನುಭಾವರ ಚರಿತ್ರೆಯನ್ನು ಸಂಗ್ರಹಿಸಿ ಪ್ರಕಟಿಸಿರುವನು. ಈ ಲೇಖನದಲ್ಲಿ ಮೈಸೂರು ದೇಶದಲ್ಲಿ ಆಗಿಹೋದ ಮತ್ತೋರ್ವ ವಿದ್ವಾಂಸರ ಚರಿತ್ರೆಯನ್ನು ಸಂಗ್ರಹಿಸಿ ಶಿವಾನುಭವ ವಾಚಕರಿಗಾಗಿ ಪ್ರಕಟಿಸಲಾಗಿದೆ.

ಸ್ಥಳವಿಚಾರ:— ಮೈಸೂರ ದೇಶದ ಬೆಂಗಳೂರು ಜಿಲ್ಹೆಗೆ ಸೇರಿದ "ಮಾಗಡಿ" ಎಂಬ ನಗರವೊಂದಿದೆ. ಇದು ಅತ್ಯಂತವಾದ ಸುಂದರವಾದ ಪ್ರಕೃತಿಯ ಮಧ್ಯದಲ್ಲಿದೆ. ಈ ಊರಿನ ಸುತ್ತಲೂ ರಮಣೀಯವಾದ ಬೆಟ್ಟಗುಡ್ಡಗಳೂ, ಕೆರೆ ಕಟ್ಟೆಗಳೂ, ಗಿಡ ಮರ ಬಳ್ಳಿಗಳೂ ಇದ್ದು ನೋಡುವವರ ಮನಸ್ಸನ್ನು ಥಟ್ಟನೆ ಆಕರ್ಷಿಸುವಂತಿದೆ. ರಸಿಕರೂ, ಕವಿಗಳೂ ಎನಿಸಿದವರಿಗೆ ಈ ಸ್ಥಳವು ಉತ್ಸಾಹಜನಕವಾಗಿದೆ.

ಈ ಊರಿಗೆ ಸಮೀಪದಲ್ಲಿ "ಸಾವನ ದುರ್ಗ" ವೆಂಬ ಬೆಟ್ಟ ವೊಂದಿದೆ. ಅಲ್ಲಿರುವ ವೀರಭದ್ರ ದೇವಾಲಯವೂ, ಸುಪ್ರಸಿದ್ಧವಾದ ಕೋಟೆಯೂ ದರ್ಶನೀಯವಾಗಿವೆ. ಕೆಂಪೇಗೌಡನೆಂಬ ಓರ್ವ ಪ್ರಸಿದ್ಧ ನಾದ ಪಾಳೆಯಗಾರನಿಗೆ "ಈ ಮಾಗಡಿ" ಯು ರಾಜಧಾನಿಯಾಗಿತ್ತು. ಅವನು ಕಟ್ಟಿಸಿದ ಕೆರೆ ಕಟ್ಟೆಗಳೂ, ಗುಡಿ ಗೋಪುರಗಳೂ ಈಗಲೂ ಈ ಊರಿನಲ್ಲಿವೆ. ಸೋಮೇಶ್ವರ ದೇವಾಲಯ, ತ್ರಿವಿಕ್ರಮ ದೇವಾಲಯ, ಜಡೆ ಶಂಕರಸ್ವಾಮಿ ಮಠ, ಮಹಾಂತಸ್ವಾಮಿ ಮಠ ಮೊದಲಾದ ಪ್ರಖ್ಯಾತ ಸ್ಥಳಗಳಿವೆ.

ಬೆಂಗಳೂರು ನಗರವನ್ನು ಕಟ್ಟಿಸಿದವನೂ ಶಿವಗಂಗೆ, ನಂದಿ ಮೊದಲಾದ ಶಿವಕ್ಷೇತ್ರಗಳಲ್ಲಿ ಅಸಂಖ್ಯಾತ ಗುಡಿ ಗೋಪುರ ಕಟ್ಟಿಸಿದವನೂ ಶೂರ ಪುರುಷನೂ ಆದ ಕೆಂಪೇಗೌಡನ ರಾಜಧಾನಿಯಾದುದರಿಂದ ಈ ಊರಿಗೆ ಒಂದು ಐತಿಹಾಸಿಕ ಮಹಾತ್ಮ್ಯ ಪ್ರಾಪ್ತವಾಗಿದೆ. ಅದು ಕಾರಣವೇ ಇತಿಹಾಸಭಕ್ತ ರಸಿಕರು ಇಲ್ಲಿಗೆ ಆಗಾಗ್ಗೆ ಬಂದು ಹೋಗುತ್ತಿದ್ದಾರೆ. ನಮ್ಮೀ ಲೇಖನಕ್ಕೆ ವಿಷಯರಾದ ಕೈ॥ ವೀರಪ್ಪಶಾಸ್ತ್ರಿಗಳು ಹುಟ್ಟಿದುದು ಸುಪ್ರಸಿದ್ಧವಾದ ಈ ಮಾಗಡಿಯಲ್ಲಿಯೇ.

## ಶಾಸ್ತ್ರಿಗಳ ಜನನ.

ಈ ಮಾಗಡಿಯಲ್ಲಿ ಸಾವರದಪ್ಪನೆಂಬ ಓರ್ವ ವೀರಶೈವ ಸದ್ಗೃಹಸ್ಥರಿದ್ದರು. ಅವರಿಗೆ ಗಂಗಮ್ಮ ಎಂಬ ಪತ್ನಿಯಿದ್ದಳು. ಈ ದಂಪತಿಗಳು ಸಂತೋಷದಿಂದಲೂ ಗುರುಲಿಂಗ ಜಂಗಮ ಸೇವಾಸಕ್ತಿಯಿಂದಲೂ ಸಂಸಾರ ಮಾಡುತ್ತಿದ್ದರು. ಶಿವಾನುಗ್ರಹದಿಂದ ಇವರಿಗೆ ಒಬ್ಬ ಹೆಣ್ಣು ಮಗಳು ಒಬ್ಬ ಗಂಡು ಮಗ ಹೀಗೆ ಉಭಯ ಸಂತಾನವಾಯ್ತು. ಈ ಗಂಡು ಮಗುವೇ ಸುಪ್ರಸಿದ್ಧರಾದ ಮಾಗಡಿ ವೀರಪ್ಪಶಾಸ್ತ್ರಿಗಳು.

## ಶಾಸ್ತ್ರಿಗಳ ಬಾಲ್ಯ.

ವಿದ್ಯಾಭಿಮಾನಿಗಳಾದ ಸಾವರದಪ್ಪನವರು ತಮ್ಮ ಏಕಮಾತ್ರ ಪುತ್ರನನ್ನು ವಿದ್ಯಾವಂತನನ್ನು ಮಾಡಬೇಕೆಂದು ಸಂಕಲ್ಪಿಸಿದರು. ಅವರ ಮನಸ್ಸು ಲೌಕಿಕ ವಿದ್ಯೆಕ್ಕಿಂತ ಪಾರಲೌಕಿಕ ವಿದ್ಯೆಯ ಕಡೆಗೇ ಒಲಿದಿ

ದ್ದುದರಿಂದ ತನ್ನ ಏಕಮಾತ್ರ ಪುತ್ರನನ್ನು ಅವರು ವೈದಿಕ ವಿದ್ಯಾಭ್ಯಾಸಕ್ಕೆ ಹಚ್ಚಿದರು.

ಶಾಸ್ತ್ರಿಗಳು ಮಾಗಡಿಯಲ್ಲಿಯೇ ಬಾಲಪಾಠವನ್ನು ಮುಗಿಸಿಕೊಂಡು ಸುಪ್ರಸಿದ್ಧವಾದ ಸಿದ್ಧಗಂಗಾ ಕ್ಷೇತ್ರದಲ್ಲಿದ್ದ ವೇದ ಪಾಠಶಾಲೆಗೆ ಬಂದು ಸೇರಿದರು. ಆ ಕಾಲದಲ್ಲಿ ಸಿದ್ಧಗಂಗೆಯ ವಿರಕ್ತ ಮಠಕ್ಕೆ ನಿಷ್ಠಾವು ಪ್ರೇಮಿ ಯೋಗಿ-ಶ್ರೇಷ್ಠ, ದಾಸೋಹ ಮೂರ್ತಿ, ನಿರಂಜನ ಗುರುಪುಂಗವ ಅಟವೀಶ ಸ್ವಾಮಿಗಳು ಅಧಿಪತಿಗಳಾಗಿದ್ದರು.

ಶ್ರೀಗಳು ವೀರಶೈವರಲ್ಲಿ ವಿದ್ಯಾ ಪ್ರಚಾರ ಮಾಡುವ ಉದ್ದೇಶದಿಂದ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದು ವೀರಶೈವ ಸಂಸ್ಕೃತ ವೈದಿಕ ಪಾಠಶಾಲೆಯನ್ನು ಸ್ಥಾಪಿಸಿದ್ದರು. ಅದಲ್ಲದೆ ಮಠಕ್ಕೆ ಬಂದ ಅತಿಥಿ ಅಭ್ಯಾಗತರಿಗೆ ಅನುಕೂಲವಾಗುವಂತೆ ಒಂದು ದಾಸೋಹವನ್ನು ಏರ್ಪಡಿಸಿದರು.

ಶ್ರೀ ಗುರು ಅಟವೀಶ ಸ್ವಾಮಿಗಳ ಸತ್ಸಂಕಲ್ಪವನ್ನು ಅವರ ಕರಕಂಜಾತರೂ ತಪೋಧನರೂ ಆದ ಶ್ರೀಮನ್ನಿರಂಜನ ಉದ್ಧಾನ ಮಹಾಸ್ವಾಮಿಗಳು ಈಗಲೂ ಶತಾಧಿಕವಾಗಿ ನಡೆಸಿಕೊಂಡು ಬರುತ್ತಿರುವದು ದೇಶವಿಖ್ಯಾತವಾಗಿದೆ.

ಶಾಸ್ತ್ರಿಗಳು ಶ್ರೀ ಸಿದ್ಧ ಗಂಗಾ ಪಾಠಶಾಲೆಯಲ್ಲಿ ಕೆಲಕಾಲ ಸಂಸ್ಕೃತ ಸಾಹಿತ್ಯ ವ್ಯಾಕರಣ, ಅಲಂಕಾರ, ಜ್ಯೋತಿಷ್ಯ ಮೊದಲಾದ ಶಾಸ್ತ್ರಗಳನ್ನೂ ವೀರಶೈವ ಧರ್ಮಕ್ಕೆ ಅವಶ್ಯಕವಾದ ವೇದಭಾಗವನ್ನೂ ಅಭ್ಯಾಸ ಮಾಡಿದರು. ಅಲ್ಲಿಂದ ಮುಂದೆ ಬೆಂಗಳೂರಿನಲ್ಲಿರುವ ಗಂಜಾಂ ಮಠಕ್ಕೆ ಹೋಗಿ ಅಲ್ಲಿ ಕೆಲವು ಕಾಲ ವಿದ್ಯಾಭ್ಯಾಸ ಮಾಡಿದರು.

ಹಿಂದೆ ಹೇಳಿದ ಉಭಯ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುವ ಹತ್ತೆಂಟು ವರ್ಷ ಕಾಲದಲ್ಲಿ ಶಾಸ್ತ್ರಿಗಳು ಹೆಸರಾದ ಪಂಡಿತರೆನಿಸಿದರು. ವೀರಶೈವ ಸಿದ್ಧಾಂತದಲ್ಲಿ ಇವರಿಗೆ ಒಳ್ಳೇ ಜ್ಞಾನವಿತ್ತು; ಪೂರ್ವ ಜನ್ಮದ ಪುಣ್ಯಪರಿಪಾಕದಿಂದ ಇವರಿಗೆ ಉತ್ತಮ ಕವಿತಾ ಶಕ್ತಿಯೂ ಪ್ರಾಪ್ತವಾಯ್ತು.

## ಕುಟುಂಬ ಸಂಪತ್ತು.

ಶಾಸ್ತ್ರಿಗಳು ಹುಟ್ಟಿದ ದಿನವನ್ನು ತಿಳಿಯಬೇಕೆಂದು ಎಷ್ಟು ಹುಡುಕಿದರೂ ಫಲವಾಗಲಿಲ್ಲ. ಅವರ ಜಾತಕ ಸಿಕ್ಕಿದ್ದರೆ ಉಪಯೋಗವಾ

ಗುತ್ತಿತ್ತು. ಅದು ಕಾಲಗರ್ಭದಲ್ಲಿ ಅಡಗಿ ಹೋಗಿದೆ. ಕೆಲವು ಕಾಗದ ಪತ್ರಗಳ ಆಧಾರದಿಂದ ಇವರು ಕ್ರಿ. ಶ ೧೮೬೮ ರಲ್ಲಿ ಹುಟ್ಟಿದರೆಂದು ಸಿದ್ಧ ಮಾಡಲಾಗಿದೆ ಶಾಸ್ತ್ರಿಗಳು ತಾ. ೭-೨-೧೯೨೬ ನೇ ದಿನ ಬೆಳಗಿನ ಜಾವ ನಾಲ್ಕು ಗಂಟೆ ಸಮಯದಲ್ಲಿ ಕೈಲಾಸ ಯಾತ್ರೆ ಮಾಡಿದರು. ಆದುದರಿಂದ ಶಾಸ್ತ್ರಿಗಳು ೫೮ ವರ್ಷಗಳಲ್ಲಿ ತಮ್ಮ ಜೀವನವನ್ನು ಮುಗಿಸಿದರೆಂದು ನಾವು ತಿಳಿಯಬಹುದು.

ಶಾಸ್ತ್ರಿಗಳು ಪ್ರಾಯಕ್ಕೆ ಬಂದ ಕೂಡಲೇ ಲೋಕಪದ್ಧತಿಯಂತೆ ಲಗ್ನವಾದರು. ಅವರ ಪ್ರಥಮ ಪತ್ನಿ ರುದ್ರಮ್ಮನವರು ಪರಮ ಸಾಧ್ವಿ ಅನುಕೂಲ ಪತ್ನಿ. ದುರ್ವಿಧಿಯಿಂದ ಅವರು ಕ್ರಿ. ಶ. ೧೯೧೮ ರಲ್ಲಿ ಬೆಂಗಳೂರಲ್ಲಿ ವಿಧಿವಶರಾದರು. ಪತ್ನಿವಿಯೋಗದಿಂದ ಶಾಸ್ತ್ರಿಗಳು ಬಹಳವಾಗಿ ಕುಂದಿದರು. ಕೆಲವು ದಿನಗಳಾದ ಮೇಲೆ ತಮ್ಮ ಅಪರ ವಯಸ್ಸಿನಲ್ಲಿ ಮಾಗಡಿಯಲ್ಲಿಯೇ ಮತ್ತೊಂದು ಕನ್ಯೆಯನ್ನು ವರಿಸಿದರು. ಆಕೆಯ ಗರ್ಭದಲ್ಲಿ ಶಾಸ್ತ್ರಿಗಳಿಗೆ ಒಂದು ಹೆಣ್ಣುಮಗುವಾಗಿದೆ. ಮೊದಲನೇ ಪತ್ನಿಗೆ ಮಕ್ಕಳಿಲ್ಲವಾದ್ದರಿಂದ ಈ ಎರಡನೇ ಹೆಂಡತಿಯಲ್ಲಾದ ಮಗಳೇ ಶಾಸ್ತ್ರಿಗಳ ಏಕಮಾತ್ರ ಪುತ್ರಿ. ಶಾಸ್ತ್ರಿಗಳ ದ್ವಿತೀಯ ಪತ್ನಿಯೂ ಅವರ ಪುತ್ರಿಯೂ ಈಗಲೂ ಮಾಗಡಿಯಲ್ಲಿದ್ದಾರೆ. ಮಾಗಡಿಯಲ್ಲಿ ಶಾಸ್ತ್ರಿಗಳ ಬಾಂಧವರು ಬೇಕಾದಷ್ಟು ಮಂದಿ ಇದ್ದಾರೆ. ಶಾಸ್ತ್ರಿಗಳ ಹೆಸರನ್ನು ಕೇಳಿಕೊಂಡು ಹೋದವರನ್ನು ಶಾಸ್ತ್ರಿಗಳ ಸಮೀಪ ಬಂಧುಗಳಾದ ಮ. ರಾ. ರಾ. ಅತ್ತಿಬೆಲೆ ರುದ್ರಪ್ಪನವರು ಇವರ ಸಹೋದರ ಮ. ರಾ. ರಾ. ಸಿದ್ಧಲಿಂಗಪ್ಪನವರು ಎಂಬೀ ಉಭಯ ಮಹಾಶಯರು ಬಹಳ ಚನ್ನಾಗಿ ಸತ್ಕರಿಸಿ ಶಾಸ್ತ್ರಿಗಳ ಕೀರ್ತಿಯನ್ನು ಉಳಿಸುತ್ತಿದ್ದಾರೆ.

## ಶಾಸ್ತ್ರಿಗಳ ಸಮಾಜಸೇವೆ.

ಶ್ರೀ ವೀರಪ್ಪ ಶಾಸ್ತ್ರಿಗಳು ಪ್ರಬುದ್ಧರಾದ ಮೇಲೆ ಅವರಿಗೆ ಹಗಲಿರುಳು ವೀರಶೈವ ಸಮಾಜ ಸೇವೆ ಮಾಡಬೇಕೆಂಬಿಚ್ಛೆ ಬಾಧಿಸುತ್ತಿತ್ತು. ಅವರು ವೀರಶೈವ ಸಿದ್ಧಾಂತವನ್ನು ಕುರಿತು ಇತರ ಮತೀಯರ ಕೂಡ ಆಗಾಗ್ಗೆ ವಾದ ಮಾಡುತ್ತಿದ್ದರು. ತಾವು ಹೋದ ಕಡೆಯಲ್ಲೆಲ್ಲ ವೀರಶೈವ ಮತತತ್ವಗಳನ್ನು ಕುರಿತು ಉಪನ್ಯಾಸ ಮಾಡುತ್ತಿದ್ದರು. ಅವರು ವೀರಶೈವ ಸಮಾಜದಲ್ಲಿ ಹೆಸರಾದ ಪುರೋಹಿತರು ಶಾಸ್ತ್ರಿಗಳು ಸಂಸ್ಕೃತ

ದಲ್ಲಿ ಘನಪಂಡಿತರಾದ್ದರಿಂದ ವೇದಮಂತ್ರಗಳ ಅರ್ಥವನ್ನು ತಿಳಿದು ಅದರಂತೆ ಕರ್ಮಗಳನ್ನು ನಡೆಸುತ್ತಿದ್ದರು. ಇವರು ಪ್ರಸಂಗ ಬಂದರೆ ಹೊಟ್ಟೆಬಾಕ ಪುರೋಹಿತರಿಗೆ ಚನ್ನಾಗಿ ಬುದ್ಧಿ ಕಲಿಸುತ್ತಿದ್ದರು.

ತಮ್ಮ ಮನೆಯಲ್ಲಿ ಅನ್ನವನ್ನು ಹಾಕಿಕೊಂಡು ಹಲವು ವೀರಶೈವ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಿಕೊಡುತ್ತಿದ್ದರು. ೧೯೧೮ ರಲ್ಲಿ ಬೆಂಗಳೂರು ಗಂಜಾಂಮಠದಲ್ಲಿ ಬೆಂಗಳೂರ ವೀರಶೈವ ಮಹನೀಯರಿಂದ ಸ್ಥಾಪಿತವಾಗಿದ್ದ ಪಾಠಶಾಲೆಯಲ್ಲಿ ಇವರು ಅಧ್ಯಾಪಕರಾಗಿದ್ದರು. ಆಗ ಇವರಲ್ಲಿ ವಿದ್ಯಾಭ್ಯಾಸ ಮಾಡಿದ ಬಾಲಕರನೇಕರು ಈಗ ಸಮಾಜಕ್ಕೆ ಹಲವು ವಿಧದಲ್ಲಿ ಉಪಯುಕ್ತರಾಗಿದ್ದಾರೆ. ಆ ಕಾಲದಲ್ಲಿ ಈ ಲೇಖಕನೂ ಶಾಸ್ತ್ರಿಗಳ ವಿದ್ಯಾರ್ಥಿಗಳಲ್ಲಿ ಒಬ್ಬನಾಗಿದ್ದನು. ಮಾಗಡಿಯಲ್ಲಿ ಸುಪ್ರಸಿದ್ಧವಾಗಿರುವ ಜಡೆಶಂಕರ ಸ್ವಾಮಿ ಮಠವು ಅನಾಥವಾದುದನ್ನು ಕಂಡು ಶಾಸ್ತ್ರಿಗಳು ಮನಸ್ಸಿನಲ್ಲಿ ಕಳವಳಗೊಂಡು ತಮ್ಮ ವಿದ್ಯಾರ್ಥಿಗಳಲ್ಲಿಯೇ ಒಬ್ಬರನ್ನು ಕರತಂದು ಆ ಪ್ರಸಿದ್ಧವಾದ ವಿರಕ್ತಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಿದರು. ಈಗ ಆ ಮಠಾಧೀಶರಾಗಿರುವ ಶ್ರೀಮನ್ನಿರಂಜನ ಜಡೆಶಂಕರ ಸ್ವಾಮಿಗಳು ಸರ್ವ ವಿಧದಿಂದಲೂ ಮಠವನ್ನು ಏಳಿಗೆಗೆ ತರುತ್ತಾ ಕೈಲಾದ ಮಟ್ಟಿಗೆ ಸಮಾಜೋಪಕಾರ ಮಾಡುತ್ತಾ ಶಮ ದಮಾದಿ ಸಂಪನ್ನರೆಂದು ವಿಖ್ಯಾತರಾಗಿದ್ದಾರೆ.* ಈ ರೀತಿಯಲ್ಲಿ ಶಾಸ್ತ್ರಿಗಳು ಹಲವು ಬಗೆಯಾಗಿ ಸಮಾಜಸೇವೆ ಮಾಡಿರುತ್ತಾರೆ.

## ವಾಙ್ಮಯ ಸೇವೆ.

ವೀರಪ್ಪ ಶಾಸ್ತ್ರಿಗಳಿಗೆ ವೀರಶೈವ ಮತತತ್ವಗಳನ್ನು ಪ್ರಪಂಚದಲ್ಲಿ ಹರಡಬೇಕೆಂಬ ಆಸೆ ಬಹಳವಾಗಿತ್ತು. ಶಿವಶರಣರ ಚರಿತ್ರೆಯನ್ನು ಸಮಾಜದಲ್ಲಿ ಎಲ್ಲರಿಗೂ ತಿಳಿಯುವಂತೆ ಪ್ರಚಾರ ಮಾಡಬೇಕೆಂಬ ಸಂಕಲ್ಪವಿತ್ತು. ವೀರಶೈವ ಪ್ರಾಚೀನ ಕವಿಗಳಿಂದ ಬರೆಯಲ್ಪಟ್ಟ ಕನ್ನಡ ಸಂಸ್ಕೃತ ಗ್ರಂಥಗಳನ್ನು ಉತ್ತಮವಾದ ಟೀಕೆಟಿಪ್ಪಣಿಗಳೊಂದಿಗೆ ಮುದ್ರಿಸಿ ಪ್ರಕಟಿಸಬೇಕೆಂಬ ಕಳಕಳಿಯಿತ್ತು ಅದಕ್ಕಾಗಿ ಅವರು ಹಲವು ವಿಧದಿಂದ ಪ್ರಯತ್ನಿಸಿದರು.

---

ಟಿಪ್ಪಣಿ:— ಬೆಂಗಳೂರಿನಲ್ಲಿರುವ ಸುಪ್ರಸಿದ್ಧ ಶ್ರೀಮಂತ ವಿರಕ್ತಮಠವಾದ ಬೇಲೀಮಠದ ಈಗಿನ ಚಿಕ್ಕಸ್ವಾಮಿಗಳೂ ಶಾಸ್ತ್ರಿಗಳ ವಿದ್ಯಾರ್ಥಿಗಳಾಗಿದ್ದರು.

## ವೀರಶೈವಾನಂದಿನಿ.

ಶಾಸ್ತ್ರಿಗಳು ಕ್ರಿ. ಶ. ೧೯೦೬ ಮತ್ತು ೧೯೦೭ ನೇ ವರ್ಷಗಳಲ್ಲಿ "ವೀರಶೈವಾನಂದಿನಿ" ಎಂಬ ಮಾಸಪತ್ರಿಕೆಯೊಂದನ್ನು ಪ್ರಾರಂಭಿಸಿ ನಡೆಸಿದರು. ಆ ಪತ್ರಿಕೆಯಲ್ಲಿ ೧. ಅಮೃತೇಶ್ವರ ಭಾಷ್ಯ ೨. ದೀಕ್ಷಾಬೋಧೆ ೩. ಸಿದ್ಧೇಶ್ವರ ಮಹಿಮೆ ಎಂಬ ಶ್ರೇಷ್ಠವಾದ ಗ್ರಂಥಗಳನ್ನು ಪ್ರಕಟಿಸಲಿಕ್ಕೆ ಪ್ರಾರಂಭಿಸಿದ್ದರು. ದುರ್ದೈವದಿಂದ ಆ ಪತ್ರಿಕೆ ಬಹು ಕಾಲ ನಡೆಯಲಿಲ್ಲವಾದ್ದರಿಂದ ಶಾಸ್ತ್ರಿಗಳ ಸಂಕಲ್ಪವು ವಿಫಲವಾಯಿತು. ಶಾಸ್ತ್ರಿಗಳು ನಿರಾಶೆಗೀಡಾದರು.

ಶಾಸ್ತ್ರಿಗಳು ತಮ್ಮ ಪತ್ರಿಕೆಯ ಮುಖಪತ್ರದಲ್ಲಿ ಹೀಗೆ ಬರೆದಿದ್ದರು.

"ಮಹನೀಯರುಗಳಿರಾ ಶಿಥಿಲ ಹೊಂದಿರುವ ಪುರಾತನ ಗ್ರಂಥಗಳನ್ನು ಹೊರಪಡಿಸಬೇಕೆಂಬ ಉದ್ದೇಶದಿಂದ 'ವೀರಶೈವಾನಂದಿನಿ' ಎಂಬ ಮಾಸಪತ್ರಿಕೆಯನ್ನು ಹೊರಡಿಸುತ್ತಲಿದ್ದೇವೆ...... ಇದು ಡಿಮ್ಮಿ ಅಷ್ಟಪತ್ರದ ಸೈಜಿನಲ್ಲಿ ೨೪ ಪುಟಗಳು ಉಳ್ಳದ್ದಾಗಿದೆ.... ಈ ಪತ್ರಿಕೆ ಸರ್ವರಿಗೂ ಸುಲಭವಾಗಿ ದೊರೆಯಬೇಕೆಂಬ ಉದ್ದೇಶದಿಂದ ಇದರ ಚಂದಾ ಹಣವು ಬಹು ಸುಲಭವಾಗಿ ಇಡಲ್ಪಟ್ಟಿರುವುದು."

ಈ ವೀರಶೈವಾನಂದಿನೀ ಮಾಸಪತ್ರಿಕೆಯ ಮುಖಪತ್ರದಲ್ಲಿ

**ಕಂದ**॥ ವರವೀರಶೈವ ಹೃದಯಾಂ।
ಬುರುಹಕ್ಕಾನಂದ ಮಿತ್ತು ಸನ್ಮತತತ್ವಂ॥
ನರರೊಳ್ ಪಜ್ಜಳಿಪಂದದೆ।
ಕರುಣಿಸುಗೆ ಭವಾಂಧ ಭಾಸ್ಕರಂ ತ್ರಿಪುರಹರಂ॥

ಎಂಬ ಪದ್ಯವಿದೆ.

ಆನಂತರ ಶಾಸ್ತ್ರಿಗಳು ತಮ್ಮ ಜೀವನ ನಾಟಕದ ಕಡೆಯ ಅಂಕದಲ್ಲಿ ಮತ್ತೊಮ್ಮೆ ವೀರಶೈವ ಗ್ರಂಥಗಳ ಉದ್ಧಾರಕ್ಕೆ ಪ್ರಯತ್ನಿಸಿದರು.

## ವೀರಶೈವ ಧರ್ಮಸಂಗ್ರಹ.

ಕ್ರಿ. ಶ. ೧೯೨೩ ನೇ ವರ್ಷದಲ್ಲಿ ವೀರಶೈವ ಧರ್ಮಸಂಗ್ರಹ ಎಂಬ ಹೆಸರಿನ ಮಾಸಪತ್ರಿಕೆಯೊಂದನ್ನು ಪ್ರಾರಂಭಿಸಿದರು. ಇದರಲ್ಲಿ ಶಾಸ್ತ್ರಿಗಳು

೧. ಶರಣ ಚಾರಿತ್ರ್ಯ ೨. ಕವಿಕರ್ಣ ರಸಾಯನಂ ೩ ಸೋಮನಾಥ ಭಾಷ್ಯಂ ಎಂಬ ಗ್ರಂಥಗಳನ್ನು ಪ್ರಕಟಿಸಲು ಪ್ರಾರಂಭಿಸಿದ್ದರು. ಅಲ್ಲದೆ ಶಿವಭಕ್ತಿ, ಲಿಂಗಧಾರಣೆ, ಶಿವದೀಕ್ಷೆ, ಶಿವಾಧಿಕ್ಯ, ವೀರಶೈವಾಚಾರ ಇತ್ಯಾದಿ ವಿಚಾರಗಳನ್ನು ಕುರಿತು ವಿದ್ವತ್ಪೂರ್ಣವಾದ ಲೇಖನಗಳನ್ನು ಪ್ರಕಟಿಸಿದ್ದರು. ದುರ್ದೈವದಿಂದ ಈ ಪತ್ರಿಕೆಯೂ ಬಹುಕಾಲ ನಡೆಯಲಿಲ್ಲ.

## ಶಾಸ್ತ್ರಿಗಳ ಗ್ರಂಥಸೇವೆ.

೧ ರಾಘವಾಂಕನ ಕಾರ್ಯ:— ಪೂವಲ್ಲಿ ಪಂಚವಣ್ಣಿಗೆ ಮಠಾಧೀಶ ಚಿಕ್ಕನಂಜಾರ್ಯ ಮಹಾಕವಿಪ್ರಣೀತವಾಗಿ ಸಾಹಿತ್ಯ ಭಕ್ತರಿಗೂ ವೀರಶೈವ ಧರ್ಮ ಜಿಜ್ಞಾಸುಗಳಿಗೂ ಉಪಯುಕ್ತವಾದ ಈ ಗ್ರಂಥವನ್ನು ಶಾಸ್ತ್ರಿಗಳು ತಿದ್ದಿ ಮುದ್ರಿಸಿದರು. ಇದು ೧೯೦೪ ನೇ ಇಸ್ವಿಯಲ್ಲಿ ಅಚ್ಚಾಗಿದೆ. ಇದರಲ್ಲಿ ಕೆಲವು ಕಠಿಣ ಪದ್ಯಗಳಿಗೆ ಟೀಕೆಯನ್ನೂ ಬರೆದಿದ್ದಾರೆ. ಈ ಗ್ರಂಥ ಮುದ್ರಣಕ್ಕೆ ಧನಸಹಾಯ ಮಾಡಿದ ಮ॥ ರಾ॥ ರಾ। ತಿಪಟೂರು ಕಬ್ಬಿಣದಂಗಡಿ ಬಸವಣ್ಣನವರು ನಿಜವಾಗಿಯೂ ಸ್ಮರಣೀಯರು. ವೀರಶೈವ ಸಮಾಜದ ಶ್ರೀಮಂತರು. ಈ ಮಹನೀಯರ ಮೇಲ್ಪಂಕ್ತಿಯನ್ನು ಅನುಸರಿಸಿದರೆ ಹುಳದ ಪಾಲಾಗುವ ಹಲವು ಪ್ರಾಚೀನ ಗ್ರಂಥಗಳು ಬೆಳಕಿಗೆ ಬಂದಾವು.

೨ ಅಷ್ಟಾವರಣ ವಿಚಾರದರ್ಪಣ:— ವೀರಶೈವ ಮತಸಿದ್ಧಾಂತವನ್ನು ತಿಳಿಯಲಾಶಿಸುವವರಿಗಾಗಿ ಶಾಸ್ತ್ರಿಗಳು ಈ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥವನ್ನು ಗುರುಶಿಷ್ಯರ ಸಂವಾದರೂಪವಾಗಿರುವುದರಿಂದ ಓದುಗರಿಗೆ ಉಪಯುಕ್ತವಾಗಿದೆ. ಈ ಗ್ರಂಥದಲ್ಲಿ ಶಾಸ್ತ್ರಿಗಳಿಗೆ ವೇದ, ಆಗಮ, ಸ್ಮೃತಿ, ಭಾಷ್ಯ, ಪುರಾಣ ಮೊದಲಾದ ಪ್ರಾಚೀನ ವಾಙ್ಮಯದಲ್ಲಿಯೂ ವೀರಶೈವ ಸಿದ್ಧಾಂತದಲ್ಲಿಯೂ ಎಂತಹ ಅಗಾಧವಾದ ಪಾಂಡಿತ್ಯವಿತ್ತೆಂಬುದನ್ನು ನಾವು ಮನಗಾಣಬಹುದು.

೩ ಸಿದ್ಧಲಿಂಗೇಶ್ವರ ಶತಕ:— ಈ ಗ್ರಂಥವನ್ನು ಶಾಸ್ತ್ರಿಗಳು ತಮ್ಮ ಇಷ್ಟದೇವತೆಯಾದ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರನ ಅಂಕಿತವಾಗಿ ರಚಿಸಿದ್ದಾರೆ. ಇದರಲ್ಲಿ ವಾರ್ಧಿಕ ಷಟ್ಪದಿಯ ೧೦೧ ಪದ್ಯಗಳಿವೆ. ಈ ಗ್ರಂಥದಲ್ಲಿ ಶಾಸ್ತ್ರಿಗಳ ಕನ್ನಡ ಕವಿತ್ವದ ಧಾಟಿಯನ್ನು ನಾವು ತಿಳಿಯ

ಬಹುದು. ಶಾಸ್ತ್ರಿಗಳ ಹೃದಯವನ್ನೂ ಅವನ ನೈಪುಣ್ಯವನ್ನೂ ತಿಳಿಯಲಿಕ್ಕೆ ಈ ಗ್ರಂಥವು ಸಹಾಯಕವಾಗಿವೆ.

೪ ಸಿದ್ಧಲಿಂಗೇಶ್ವರ ಸ್ತೋತ್ರಂಃ— ಎಡೆಯೂರು ಸಿದ್ಧಲಿಂಗೇಶ್ವರನ ಅಂಕಿತವಾಗಿ ೧೦೮ ಸಂಸ್ಕೃತ ಶ್ಲೋಕಗಳುಳ್ಳ ಈ ಗ್ರಂಥವು ಶಾಸ್ತ್ರಿಗಳ ಸಂಸ್ಕೃತ ಕವಿತಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಈ ಮೇಲಿನ ಎರಡು ಗ್ರಂಥಗಳಿಂದ ವೀರಪ್ಪ ಶಾಸ್ತ್ರಿಗಳು ಉಭಯ ಕವಿತಾ ವಿಶಾರದರೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಇದು ಶಿವಪೂಜಾ ಕಾಲದಲ್ಲಿ ಪಾರಾಯಣೆಗೆ ಯೋಗ್ಯವಾಗಿದೆ.

೫ ಕೋಳೂರು ಕೊಡಗೂಸಿನ ಕಥೆಃ— ಶಿವಭಕ್ತಳಾದ ಕೊಡಗೂಸಿನ ಕಥೆಯನ್ನು ವಿವಿಧ ಕಂದ, ವೃತ್ತ, ಪಟ್ಟುಗಳಿಂದ ರಚಿಸಿದ್ದಾರೆ. ಕೀರ್ತನಕಾರರಿಗೆ ಅನುಕೂಲವಾಗಿದೆ.

೬ ವೇಮನಾರಾಧ್ಯ ಕಥೆಃ— ಪರಮ ವೀರಶೈವನೂ ಬಸವೇಶ್ವರನಿಗಿಂತ ಪ್ರಾಚೀನನೂ ಆದ ಈ ವೇಮನಾರಾಧ್ಯನ ಕಥೆಯನ್ನು ಕೊಡಗೂಸಿನ ಕಥೆಯಂತೆಯೇ ಬರದಿದ್ದಾರೆ. ಈ ಮೇಲೆ ಹೇಳಿದ ಗ್ರಂಥಗಳೆರಡೂ ಶಿವಕೀರ್ತನ ಹೇಳುವವರಿಗೆ ಸಹಾಯವಾಗುತ್ತವೆ.

೭ ಜಯದೇವ ಭಜಕಾನಂದಿನಿಃ— ಶ್ರೀಮನ್ಮಹಾನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರ ಗುಣಗಾನರೂಪವಾಗಿ ಈ ಗ್ರಂಥ ಬರೆದಿದ್ದಾರೆ. ಇದು ಭಜನೆಗೆ ಯೋಗ್ಯವಾಗಿದೆ.

೮ ಗುರುಭಜನಃ— ಅಥಣಿ ಶಿವಯೋಗಿಗಳ ಸ್ತೋತ್ರರೂಪವಾಗಿದೆ. ಇದೂ ಭಜನೆಗೆ ಯೋಗ್ಯವಾಗಿದೆ.

೯ ಶಿವಗೀತೆಃ— ಸಂಸ್ಕೃತ ಪದ್ಮಪುರಾಣಾಂತರ್ಗತವೆಂದು ಪ್ರಸಿದ್ಧವಾಗಿರುವ ಸಂಸ್ಕೃತ ಶಿವಗೀತೆಯ ಕನ್ನಡ ಗದ್ಯಾನುವಾದ ಶಿವಗೀತೆಯನ್ನರಿಯಬೇಕೆಂಬ ಸಂಸ್ಕೃತವನ್ನರಿಯದ ಕನ್ನಡಿಗರಿಗೆ ಉಪಯುಕ್ತವಾಗಿದೆ.

೧೦ ಶಿವಾಧಿಕ್ಯಃ— ಪೂರ್ವದ ಪುರಾಣಾಧಾರಗಳಿಂದ ದೇವತೆಗಳಲ್ಲಿ ಶಿವನೇ ಅಧಿಕನೆಂದು ಸಿದ್ಧಾಂತ ಮಾಡುವ ಗ್ರಂಥ.

೧೧ ಬಿಜ್ಜವ್ವೆಯ ಕಥೆಃ— ಕೊಡಗೂಸು ವೇಮನಾರಾಧ್ಯರ ಕಥೆಗಳಂತೆಯೇ ಇದನ್ನು ಶಿವಕೀರ್ತನಕಾರರಿಗೆ ಅನುಕೂಲವಾಗುವಂತೆ ಬರೆ

ದಿದ್ದಾರೆ. ಈ ಗ್ರಂಥ ಮಾತ್ರ ಅಚ್ಚಾಗಿಲ್ಲ ಮಿಕ್ಕ ಎಲ್ಲ ಗ್ರಂಥಗಳು ಮುದ್ರಣವಾಗಿವೆ. ×

ಇದು ವರೆಗೆ ವಿವರಿಸಿದ ಗ್ರಂಥಗಳಲ್ಲದೆ ಶಾಸ್ತ್ರಿಗಳು ಪ್ರಸಂಗೋಚಿತ ವಾದ ಹಲವು ಕವಿತೆಗಳನ್ನು ರಚಿಸಿ ಹಾಡಿದ್ದಾರೆ. ಇವರು ಸರಸ ಕವಿ ಗಳೂ ಅಲ್ಲದೆ ಆಶು ಕವಿಗಳೂ ಆಗಿದ್ದರು.

ಕೈ॥ ವೀರಪ್ಪಶಾಸ್ತ್ರಿಗಳ ಪರಮ ಮಿತ್ರರಾದ ವೇ॥ ಸಿದ್ಧಾಂತಿ ಕಪ್ಪಣ್ಣಶಾಸ್ತ್ರಿ ಮಹಂತಿನಮಠ ವೆಲಮಂಗಲ ಇವರು ಶಾಸ್ತ್ರಿಗಳ ಮರಣಾ ನಂತರ ಅವರ ಚರಮ ಶ್ಲೋಕಗಳನ್ನು ಬರೆದು ಹಾಡಿದ್ದಾರೆ. ಶಾಸ್ತ್ರಿ ಗಳು ಅನಿರೀಕ್ಷಿತವಾಗಿ ಪರಲೋಕವಾಸಿಗಳಾದುದು ವೀರಶೈವ ಸಮಾ ಜಕ್ಕೂ ಸಾಹಿತ್ಯ ಪ್ರಪಂಚಕ್ಕೂ ಅಪಾರವಾದ ನಷ್ಟವೆಂದು ಹೇಳ ಬೇಕಾಗಿದೆ.

## ಗುಣ-ದೋಷಗಳು.

ವೀರಪ್ಪಶಾಸ್ತ್ರಿಗಳಲ್ಲಿಯೂ ಮನುಜ ಸಹಜವಾದ ಗುಣದೋಷ ಗಳಿದ್ದವೆಂದು ಹೇಳಬಹುದಾದರೂ ಅವರ ಉದಾರ ಸ್ವಭಾವ, ಪಾಂಡಿತ್ಯ ದಲ್ಲಿ ವಿನಯ, ಲೋಕಸೇವಾ ಬುದ್ಧಿ ಇತ್ಯಾದಿ ಸದ್ಗುಣಗಳು ಅವರನ್ನು ಮಹಾಪುರುಷರನ್ನಾಗಿ ಗಣಿಸಬೇಕೆನಿಸುತ್ತಿದ್ದವು. ಅವರ ಜನ್ಮದಿಂದ ದೇಶಕ್ಕೂ ಸಮಾಜಕ್ಕೂ ಅನೇಕ ವಿಧವಾಗಿ ಪ್ರಯೋಜನವಾಯಿತೆಂದು ಧಾರಾಳವಾಗಿ ಹೇಳಬಹುದು. ಅವರು ಇನ್ನೂ ಕೆಲವು ವರ್ಷ ಬದು ಕಿದ್ದರೆ ಅನೇಕ ಲಿಂಗಾಂಗಿ ವಿದ್ಯಾರ್ಥಿಗಳು ವಿದ್ವಾಂಸರಾಗುತ್ತಿದ್ದರಲ್ಲದೆ, ಹಲವು ವೀರಶೈವ ಮಹಾ ಗ್ರಂಥಗಳೂ ಮುದ್ರಣವಾಗಿ ಲೋಕೋಪ ಕಾರವಾಗುತ್ತಿದ್ದವು ಎಂದು ಅವರ ಹೃದಯವನ್ನು ಬಲ್ಲವರು ಕೊರಗಿ ಮರುಗುತ್ತಿರುವದು ಸತ್ಯವಾಗಿಯೇ ಇದೆ.

## ಶಾಸ್ತ್ರಿಗಳ ರೂಪರೇಖೆ.

ವೀರಪ್ಪಶಾಸ್ತ್ರಿಗಳು ಆಜಾನುಬಾಹುಗಳುಳ್ಳವರು ಸುಮಾರು ಆರಡಿ ಎತ್ತರ. ಎತ್ತರಕ್ಕೆ ತಕ್ಕ ದಪ್ಪ. ವಿಶಾಲವಾದ ಹಣೆ. ನೀಳವಾದ ಮೂಗು. ಕಳೆಗೂಡಿದ ದಂತ ಪಙ್ಕ್ತಿ. ಪ್ರಕಾಶಮಯವಾದ ನೇತ್ರಗಳು. ಪ್ರಸನ್ನ

---

ಟಿಪ್ಪಣಿ— ವೀರಶೈವಾಮೃತ ಮಹಾ ಪುರಾಣವನ್ನು ಪ್ರಕಟಿಸುವಲ್ಲಿ ಶಾಸ್ತ್ರಿಗಳ ಸಹಾಯ ಬಹಳವಾಗಿದೆ.

ವಾದ ಮುಖಮುದ್ರೆ. ಕಪ್ಪು ಬಿಳುಪು ಮಿಶ್ರಿತವಾದ ಬಣ್ಣ. ಆರೋಗ್ಯ ದೃಢವಾದ ಶರೀರ. ಒಟ್ಟಿನಲ್ಲಿ ಶಾಸ್ತ್ರಿಗಳ ಶರೀರ ಸಂಪತ್ತು ಭಿನ್ನವಾದುದು.

ಮಾತು ಸರಸ. ಪ್ರತಿಮಾತಿನಲ್ಲಿಯೂ ವಿದ್ವತ್ತೂ ರಸಿಕತೆಯೂ ತೋರಿಬರುತ್ತಿತ್ತು. ಶಾಸ್ತ್ರಿಗಳು ಭಾಷಣ ಮಾಡುವ ಸಾಮರ್ಥ್ಯವುಳ್ಳವರಾದರೂ ವಾಗ್ಮಿಗಳಲ್ಲ. ಹಾಡಬಲ್ಲವರಾದರೂ ಕಂಠ ಮಾಧುರ್ಯವಿಲ್ಲ. ದೊಡ್ಡ ದೊಡ್ಡ ಸಭೆಗಳಲ್ಲಿ ಸಾವಿರಾರು ಜನರಿಗೆ ಕೇಳುವಷ್ಟು ಎತ್ತರವಾದ ಕಂಠಧ್ವನಿ. ಒಟ್ಟಿನಲ್ಲಿ ಶಾಸ್ತ್ರಿಗಳ ರೂಪರೇಖೆಗಳೂ ಗುಣಶೀಲಗಳೂ ನೋಡಿದವರ ಚಿತ್ತಭಿತ್ತಿಯ ಮೇಲೆ ತಮ್ಮ ಪ್ರಭಾವ ಮುದ್ರೆಯನ್ನು ಒತ್ತತಕ್ಕದ್ದೆಂದು ಹೇಳಬಹುದು. ಸಾರಾಂಶ; ಶಾಸ್ತ್ರಿಗಳ ಜೀವನ ಚರಿತ್ರೆಯು ಸ್ಮರಣೀಯವಾದುದೂ ಲೋಕೋಪಕಾರಕವಾದುದೂ ಎಂದು ಧಾರಾಳವಾಗಿ ಹೇಳಬಹುದು.



# ಪಾಶ್ಚಾತ್ಯರ ತತ್ವಶಾಸ್ತ್ರ.

(ಮುಂದೆ ಸಾಗಿದ್ದು)

ಲೇಖಕ:— ವೀರಪ್ಪ ಯುಗಟಿ, ಬಿ. ಎ. ಎಲ್. ಎಲ್. ಬಿ., ಹಾವೇರಿ.

**ಸ್ಪಿನೋಝಾ**— ಇವನು ಹಾಲಂಡ ದೇಶದಲ್ಲಿ ಆ್ಯಮಸ್ಟರ್ಡಾಮ ಪಟ್ಟಣದಲ್ಲಿ ಜನಿಸಿದನು. ಇವನು ಯುಹುದೀ ಧರ್ಮವನ್ನು ಇಪ್ಪತ್ತು ನಾಲ್ಕು ವರ್ಷಗಳ ವರೆಗೆ ಪಾಲಿಸಿದನು. ಅನಂತರ ಯುಹುದಿಯರು ಇವನಿಗೆ ಬಹಿಷ್ಕಾರ ಹಾಕಿದರು. ಇವನು ಯುಹುದೀ ತತ್ವ ಗ್ರಂಥ ವಾದ ಟಾಲಮುಡ ಎಂಬದನ್ನು ಅಭ್ಯಾಸಿಸಿದ್ದನು. ದೇವರು ಒಬ್ಬನೇ ಎಂಬದು ಇವನ ನಂಬಿಗೆ. ದೇವರು ಪರಲೋಕದಲ್ಲಿದ್ದಾನೆಂಬ ಯುಹುದಿಯರ ನಂಬಿಗೆಯು ಇವನಿಗೆ ಒಪ್ಪಿಗೆಯಾಗಲಿಲ್ಲ. ಇವನು ಅತ್ಯಂತ ಮೇಧಾವಿಯಾಗಿದ್ದನು. ಅವನು ಹದಿನೆಂಟನೆಯ ವಯಸ್ಸಿನಲ್ಲಿಯೇ ಇಟಾಲಿ, ಫ್ರೆಂಚ, ಸ್ಪೇನ, ಪೋರ್ಟುಗೀಸ, ಡಚ್ಚ, ಹಿಬ್ರು, ಜರ್ಮನ್, ಲ್ಯಾಟಿನ್ ಭಾಷೆಗಳನ್ನು ಕಲಿತಿದ್ದನು. ಡೇಕಾರ್ಟ್ಸನ ತತ್ವದ ಪರಿಣಾಮವು ಇವನ ಮೇಲಾಯಿತು. ಇವನು ಡೇಕಾರ್ಟ್ಸ ಮತ್ತು ಲೀಬಿಗಳಂತೆ ಉತ್ಪಾದಕ ಶಕ್ತಿಯುಳ್ಳವನಿರದಿದ್ದರೂ ಅವರಿಗಿಂತ ಇವನ ತತ್ವ ಪದ್ಧತಿಯು ಕ್ರಮಬದ್ಧವಾಗಿದ್ದಿತು. ತತ್ವ ವಿಚಾರದಲ್ಲಿ ತರ್ಕವನ್ನೂ ಡೇಕಾರ್ಟ್ಸನ ಅನುಕರಣದಿಂದ ಗಣಿತವನ್ನೂ ಸಾಧನವಾಗಿ ಉಪಯೋಗಿಸಿದನು.

ಇವನಿಗೆ ಬಹಿಷ್ಕಾರವಾದ ನಂತರ ತನ್ನಂತೆಯೇ ಧರ್ಮ ಬಾಹಿರರಾದ ಕ್ವೇಕರ್ಸ ಎಂಬವರಲ್ಲಿ ಸೇರಿಕೊಂಡು ಏಳು ವರ್ಷ ಕಾಲ ಕಳೆದನು. ಕ್ವೇಕರರಂತೆಯೇ ಧರ್ಮತತ್ವಕ್ಕಿಂತ ನೈತಿಕ ತತ್ವವು ಮಿಗಿಲಾದದ್ದೆಂದು ಇವನ ನಂಬಿಗೆಯಾಗಿತ್ತು. ಇವನು ಸ್ವಾತಂತ್ರ್ಯಪ್ರಿಯನಾಗಿದ್ದರಿಂದ ಹಿಡೆಲ್ಬರ್ಗ ವಿಶ್ವವಿದ್ಯಾಲಯದಲ್ಲಿ ತತ್ವಬೋಧಕ ಸ್ಥಾನವನ್ನು ನಿರಾಕರಿಸಿ ಕನ್ನಡಿ (ಗಾಜು) ತಿಕ್ಕುವ ಉದ್ಯೋಗವನ್ನು ಸ್ವೀಕಾರ ಮಾಡಿದನು.

ಸ್ಪಿನೋಝಾನ ಜೀವನ ಮತ್ತು ತಾತ್ವಿಕ ಬೆಳವಣಿಗೆ— ಕ್ರಿ. ಶ. ೧೬೩೨-೧೬೭೭. ಇವನು ಸಮಾಜದಿಂದ ಬಾಹಿರನಾಗಿದ್ದರೂ ಇವನ

ಸ್ವಭಾವವು ಪ್ರೇಮಪುರಸ್ಸರವಾದದ್ದೂ ಮನೋಹರವಾದದ್ದೂ ಇದ್ದಿತಲ್ಲದೆ ಇವನ ತತ್ವವು ಗಹನವಾದದ್ದಿತ್ತು. ಇವನು ಆಯುಸ್ಸರ್ಡಾಮದಲ್ಲಿ ದೈವಜ್ಞ ಶಾಸ್ತ್ರವನ್ನು ಅಭ್ಯಾಸ ಮಾಡಿದನು. ಇವನು ಕಣ್ಣಿನ ವೈದ್ಯನಾಗಿದ್ದನು. ಇದಕ್ಕೆ ಗಣಿತ ಮತ್ತು ಭೌತಿಕ ಶಾಸ್ತ್ರಗಳ ಜ್ಞಾನವು ಅವಶ್ಯವಾಗಿತ್ತು. ಇವನು ಹಳೇ ಬೈಬಲವು ಅಮರತ್ವವನ್ನು ಬೋಧಿಸಲಿಲ್ಲವೆಂದು ಹೇಳಿದನು. ದೇವದೂತರು ಇರುವರೆಂಬದು ಮನುಷ್ಯ ಕಲ್ಪನೆಯೇ ಸರಿ ದೇವರಿಗೆ ಶರೀರವಿರಬಹುದೆಂದು ಇವನು ನಂಬಿದನು. ಈ ಮೂರು ಆರೋಪಗಳಿಂದ ಇವನಿಗೆ ಬಹಿಷ್ಕಾರ ಹಾಕಲ್ಪಟ್ಟಿತು. ಇವನು ದೇವರು, ಮನುಷ್ಯ ಮತ್ತು ಹಿತ *(Short treatise)* ಎಂಬದನ್ನೂ, ತಿಳುವಳಿಕೆಯ ಸುಧಾರಣೆ (*Improvement of understanding*) ಎಂಬದನ್ನೂ ಮತ್ತು ದೈವಿಕ ರಾಜಕಾರಣ ಸಂಬಂಧವಾದ (*Theological political trust*) ಎಂಬ ಗ್ರಂಥವನ್ನೂ ರಚಿಸಿದನು. ಬೈಬಲವು ದೇವವಾಕ್ಯವಿರದೆ ಚರಿತ್ರೆಯೆಂದು ಹೇಳಿದನು. ಎಲ್ಲ ವಸ್ತುಗಳು ದೇವರಿಂದ ಉತ್ಪತ್ತಿಯಾಗಿವೆಯೆಂದು ಹೇಳಿದನು. ದೇವರೊಬ್ಬನೇ ಜ್ಞೇಯ ವಸ್ತುವೆಂದು ಹೇಳಿದನು. ಭೌತಿಕ ವಸ್ತುಗಳು ಸ್ವರೂಪದಲ್ಲಿ ಒಂದೇ ಆಗಿವೆ. ಅವುಗಳನ್ನು ನಿಜವಾಗಿ ಅರಿತುಕೊಂಡರೆ ದೇವರನ್ನು ಅರಿತುಕೊಂಡಂತೆಯೇ. ದೇವರು ಜಗತ್ತಿಗೆ ಮೂಲ ವಸ್ತುವಿದ್ದು ಅವನ ಅಸ್ತಿತ್ವವು ನಿಜವಾದದ್ದು. ದೇವರು ಸ್ವಯಂಭುವು. ಉಳಿದ ಸೃಷ್ಟಿಯು ಅವನ ಮೇಲೆ ಅವಲಂಬಿಸಿದೆ. ದೇವರ ಹುಚ್ಚು ಹಿಡಿದವನೆಂದು ನೋವ್ಯಾಲಸನು ಇವನಿಗೆ (*God intoxicated man*) ಹೆಸರಿಟ್ಟನು.

ಸ್ಪಿನೋಝಾನ ಮುಖ್ಯ ತತ್ವಗಳು— ಇವನು ಭೌತಿಕ ಜಗತ್ತು ಸ್ಥಳಾಕ್ರಾಂತವಾದದ್ದೆಂತಲೂ ಅರಿವು ವಿಚಾರಯುಕ್ತವಾದದ್ದೆಂತಲೂ ಗ್ರಹಿಸಿದನು. ಜಗತ್ತು ದೇವರು ಮತ್ತು ದೇವರ ಸ್ವರೂಪವಾಗಿದೆ. ಡೇಕಾರ್ಟ್ಸನು ಮೂರು ವಸ್ತುಗಳಿವೆಯೆಂದು ಗ್ರಹಿಸಿದನು. ಮುಖ್ಯ ವಸ್ತುವಾದ ದೇವರು ಮತ್ತು ಅವಲಂಬ ವಸ್ತುಗಳಾದ ಮನಸ್ಸು, ಪ್ರಕೃತಿಗಳು. ಆದರೆ ಸ್ಪಿನೋಝಾನು ಒಂದೇ ನಿಜವಸ್ತುವಿರುವದೆಂತಲೂ ಉಳಿದ ವಸ್ತುಗಳು ಅಸತ್ಯವಾದವುಗಳೆಂತಲೂ ಹೇಳಿದನು. ಸ್ಥಳ, ಕಾಲಗಳಿಂದ ಯುಕ್ತವಾದ ಜಗತ್ತು ಅನಂತವಾಗಿದೆ. ಮೂಲವಸ್ತುವಿಗೆ ಅನೇಕ ಲಕ್ಷಣಗಳಿದ್ದರೂ ಮನುಷ್ಯ ದೃಷ್ಟಿಗೆ ಸ್ಥಳ ವಿಸ್ತಾರ (*extention*)

ಮತ್ತು ವಿಚಾರ (*thought*) ಎರಡೇ ಲಕ್ಷಣಗಳು ಕಾಣುತ್ತವೆ. ಲಕ್ಷಣವೆಂದರೆ ಮೂಲವಸ್ತುವಿನ ಯಾವ ಸತ್ವವು ಮನುಷ್ಯ ಬುದ್ಧಿಗೆ ತೋಚುವದೋ ಅದು. ವಿಚಾರವು, ಬುದ್ಧಿ ಮತ್ತು ಇಚ್ಛಾಶಕ್ತಿಯ ರೂಪದಿಂದ ತೋರುವದು. ಸ್ಥಳ ವಿಸ್ತಾರವು ಚಲನೆ ಮತ್ತು ವಿಶ್ರಾಂತಿಗಳ ರೂಪದಿಂದ ತೋರುವದು. ಅಪೂರ್ಣರಾದ ಮನುಷ್ಯ ಮಾತ್ರರಿಗೆ ದೇವರ ಮೂಲಸ್ವರೂಪವು ತಿಳಿಯುವದಿಲ್ಲ. ಆದರೆ ಆತನ ಲಕ್ಷಣಗಳಾದ ವಿಚಾರ ಮತ್ತು ಸ್ಥಳ ವಿಸ್ತಾರಗಳಿಂದ ಅವನನ್ನು ಅರಿತುಕೊಳ್ಳುವೆವು. ಮನುಷ್ಯ ಜಗತ್ತಿನಲ್ಲಿ ಎಲ್ಲ ವಸ್ತುಗಳು ವಿಚಾರ ವರ್ಗ ಅಥವಾ ಸ್ಥಳ ವಿಸ್ತಾರ ವರ್ಗದಲ್ಲಿ ಸಮಾವೇಶವಾಗುತ್ತವೆ. ಕೆಲವರು ಲಕ್ಷಣಗಳು ಮಾನವ ದೃಷ್ಟಿಯಿಂದ ಗೃಹೀತವಾದವುಗಳೆಂತಲೂ, ಉಳಿದವರು ದೇವರು ಲಕ್ಷಣಗಳ ಹೊರ್ತಾಗಿ ಮತ್ತೇನೂ ಇರುವದಿಲ್ಲವೆಂತಲೂ ಹೇಳುತ್ತಾರೆ. ಸ್ಪಿನಾಝಾನು ದೇವರು ಅಸ್ತಿತ್ವದಲ್ಲಿರುವ ಎಲ್ಲ ವಸ್ತುಗಳಾಗಿಯೂ ಮತ್ತು ಅವುಗಳ ಮೂಲತತ್ವವಾಗಿಯೂ ಇದ್ದಾನೆಂದು ಹೇಳುತ್ತಾನೆ. ದೇವರು ಜಗತ್ತಿಗೆ ಕಾರಣನಿದ್ದಾನೆ. ತಾರ್ಕಿಕ ಕಾರಣ ಮಾತ್ರವಿದ್ದು ಧ್ಯೇಯ, ನೈಮಿತ್ತಿಕ ಮುಂತಾದ ಕಾರಣನಲ್ಲ. ಜಗತ್ತಿನ ವಸ್ತುಗಳಲ್ಲಿ ದೇವರು ಅಡಗಿದ್ದಾನೆ ಮತ್ತು ಅವುಗಳ ಶಕ್ತಿಯನ್ನು ಬೆಳಿಸುವ ತತ್ವವಾಗಿದ್ದಾನೆ. ದೇವರು ಜಗನ್ನಿರ್ಮಾಣಕರ್ತನಲ್ಲ; ಅವನೇ ಜಗತ್ತಾಗಿರುವನು. ಆದ್ದರಿಂದ ಸ್ಪಿನೋಝಾನು ಸಂಪೂರ್ಣ ಜಗದೀಶ್ವರವಾದಿಯಾಗಿದ್ದಾನೆ (*Pancheist*). ಅವನು ಮಾನವರಾದ ನಮ್ಮಂತೆ ಅಹಂಭಾವವುಳ್ಳ ವ್ಯಕ್ತಿಯಾಗಿಲ್ಲ ದೇವರು ನಿರಾಲಂಬಿಯೂ, ಶಾಶ್ವತನೂ, ಪರಿಪೂರ್ಣನೂ ಇದ್ದಾನೆ. ಪ್ರತಿಯೊಂದು ಭೌತಿಕ ವಸ್ತುವು ಈಶ್ವರನ ಸ್ವರೂಪವನ್ನೇ ಅನುಸರಿಸುವದು. ಸಜಾತೀಯುವಾಗಿ ಭೌತಿಕ ವಸ್ತುಗಳು ಈಶ್ವರನ ಸ್ವರೂಪವನ್ನೇ ಅನುಸರಿಸುವದು. ಸಜಾತೀಯುವಾದ ಭೌತಿಕ ವಸ್ತುಗಳು ಸರಪಳಿಯೊಳಗಿನ ಕೊಂಡಿಯಂತೆ ಒಂದಕ್ಕೊಂದು ಎಡೆಬಿಡದೆ ಆದ್ಯಂತರಹಿತವಾಗಿ ಹೊಂದಿಕೊಂಡಿರುವವು. ದೇವರ ಸ್ವರೂಪವು ಎಲ್ಲ ವಸ್ತುಗಳಲ್ಲಿ ಅವಶ್ಯವಾಗಿ ತೋರುವದು. ಅವನು ಎಲ್ಲ ವಸ್ತುಗಳ ನಿಯಾಮಕನಾಗಿದ್ದಾನೆ.

ಸ್ಪಿನೋಝಾನ ರಹಸ್ಯೋಪದೇಶ— (*Mysticism*) ಧಾರ್ಮಿಕ ಕ್ಷೇತ್ರದಲ್ಲಿ ರಹಸ್ಯೋಪದೇಶವೆಂದರೆ ದೇವರನ್ನು ತತ್ಕಾಲದಲ್ಲಿಯೇ ಸಾಕ್ಷಾ

ತ್ಕಾರ ಮಾಡಿಕೊಳ್ಳುವದೆಂಬರ್ಥವು. ಇವನ ರಹಸ್ಯೋಪದೇಶವಾದರೂ ದೇವರ ಸಾಕ್ಷಾತ್ಕಾರವನ್ನೂ, ದೇವಮನುಷ್ಯರ ಐಕ್ಯವನ್ನೂ ಬೋಧಿಸುತ್ತದೆ. ಆದರೆ ಇವನ ರಹಸ್ಯೋಪದೇಶದಲ್ಲಿ ಅದ್ಭುತ ಕ್ರಿಯೆ ಅಥವಾ ಪವಾಡದಲ್ಲಿಯ ನಂಬಿಗೆಗೆ ಅವಕಾಶವಿರದೆ ಬುದ್ಧಿಪ್ರಾಮಾಣ್ಯವಾಗಿತ್ತು. ಜಗತ್ತೇ ದೇವರೆಂದು ಇವನ ವಿಚಾರವಿದ್ದದರಿಂದ ಡೇಕಾರ್ಟ್ಸನಂತೆ 'ನಾನು ವಿಚಾರ ಮಾಡುವದರಿಂದ ನಾನು ಇದ್ದೇನೆ' ಎಂದು ಹೇಳದೆ ದೇವರು ವಿಚಾರ ಮಾಡತಕ್ಕವನೆಂದು ಹೇಳಿದನು. ದೇವರು ನಿಜವಾದ ವಸ್ತು. ಅವನಿಗೆ ಯಾವ ವಿಶೇಷಣಗಳನ್ನೂ ಅನ್ವಯಿಸಲು ಬರುವದಿಲ್ಲ. ಅವನು ಮನುಷ್ಯರಂತೆ ವಿಚಾರ ಅಥವಾ ಇಚ್ಛೆ ಮಾಡುವದಿಲ್ಲ. ಅವನು ಸ್ಥಲ, ಕಾಲಾಬಾಧಿತನಾಗಿದ್ದಾನೆ. ನೇ ನೇ ಎಂಬುದೇ ಅವನ ಲಕ್ಷಣವು. ಬಯಲಲ್ಲಿ ಬಯಲು ಕೂಡಿದಂತೆ ಎಂದು ಹೇಳುವ ವೀರಶೈವ ತತ್ವದಂತೆಯೇ ಸ್ಪಿನೋಝಾನ ದೈವಲಕ್ಷಣವಾಗಿದೆ. ಜೀವವೆಂಬುವದೆಲ್ಲವೂ ದೈವಬಾಹಿರವಾದದ್ದು. ದೇವರು ಸರ್ವಸ್ವವಾಗಿದ್ದರೂ ಅವನು ಬಯಲು ಸ್ವರೂಪನು (*Abstract*). ದೇವರು ಸ್ಥಿರವಸ್ತುವಿದ್ದು ಅಸ್ಥಿರವಾದ ಮನುಷ್ಯ ಜೀವನವು ದೇವರಿಂದ ಕಳೆಯನ್ನು ಹೊಂದುವದು. ದೇವರು ಭೌತಿಕ ವಸ್ತುಗಳ ಸ್ಥಿರವಾದ ಆಧಾರವಾಗಿದ್ದಾನೆ. (*He is the infinity of finite things*) ವಿಚಾರ ಮತ್ತು ಸ್ಥಲವಿಸ್ತಾರಗಳು ದೇವರ ಸ್ವರೂಪಗಳು (*aspects*). ಇವೆರಡು ದೇವರ ಮುಖಾಂತರ ಸಂಬಂಧವುಳ್ಳವುಗಳಾಗಿರುವದರಿಂದ ಸ್ಪಿನೋಝಾನ ಏಕತ್ವವಾದವು (*monism*) ಇದರಿಂದ ಕಂಡುಬರುತ್ತದ. ಭಾವನೆಗಳು ಭಾವನೆಗಳಿಂದಲೂ, ಚಲನೆಯು ಚಲನೆಯಿಂದಲೂ ನಿರ್ಧರಿಸಲ್ಪಡುತ್ತವೆ. ಆದಾಗ್ಯೂ ಇವೆರಡಕ್ಕೂ ದೇವರೇ ಆಧಾರಭೂತನು.

ಇವನ ಮೋಕ್ಷವಿಚಾರ— ಇವನ ನೀತಿ ಶಾಸ್ತ್ರವು ಪ್ರಸಿದ್ಧವಾದ ಗ್ರಂಥವಾಗಿದೆ. ಇದರಲ್ಲಿ ದೇವರ ಲಕ್ಷಣ, ಮನಸ್ಸಿನ ಸ್ವಭಾವ ಮತ್ತು ಉತ್ಪತ್ತಿ, ಹೃದಯವಿಕಾರಗಳು, ಮನುಷ್ಯನ ಬಂಧ ಮತ್ತು ಮೋಕ್ಷ ಎಂಬ ಐದು ವಿಷಯಗಳನ್ನು ವಿವೇಚಿಸುತ್ತದೆ. ನೀತಿಶಾಸ್ತ್ರವು ಮನುಷ್ಯನ ವ್ಯವಹಾರಿಕ ಜೀವನದ ಶಾಸ್ತ್ರವು ದೇವರು ಪ್ರತಿಯೊಂದು ವಸ್ತುವಿಗೆ ಆಧಾರವೂ ಸತ್ಯವೂ ಇರುವದರಿಂದ ಮನುಷ್ಯನು ದೇವತಾಂಶವೆಂದು ಸ್ಪಿನೋಝಾನು ಹೇಳುತ್ತಾನೆ. ಮೋಕ್ಷವೆಂದರೆ ದೇವರಂತೆ ಇರುವದು. ಬಂಧ

ನವೆಂದರೆ ಭವಿಯಂತೆ ಇರುವದು. ಭೌತಿಕವು ಪ್ರಪಂಚವನ್ನು ನಂಬಿ ಕೊಂಡು ತಾನು ದೇವರಾಗಿರದೆ ಮನುಷ್ಯನೆಂದು ತಿಳಿದುಕೊಂಬುವದಕ್ಕೆ ವೀರಶೈವರು ಭವಿ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಸ್ಪಿನೋಝಾನು ಅನಿತ್ಯವಾದ ಜಗತ್ತನ್ನು ನಿತ್ಯವೆಂದು ನಂಬುವದರಿಂದ ಬಂಧನ ವಾಗುವದೆಂದು ವೀರಶೈವ ತತ್ವದಂತೆಯೇ ಹೇಳುತ್ತಾನೆ. ನಮ್ಮ ಬುದ್ಧಿಯಿಂದ ದೇವರ ಲಕ್ಷಣವನ್ನು ಅರಿತುಕೊಳ್ಳಲು ನಾವು ಸಮರ್ಥರಿದ್ದೇವೆ. ಇಂದ್ರಿಯ ಜ್ಞಾನ, ಹೃದಯವಿಕಾರ, ಮತ್ತು ಊಹೆಗಳು ಮನುಷ್ಯನನ್ನು ಬಂಧನದಲ್ಲಿ ಕೆಡಹುತ್ತವೆ. ಇಂದ್ರಿಯ ವಿಕಾರಗಳ ಸ್ವರೂಪವನ್ನು ತಿಳಿದುಕೊಂಡರೆ ಅವುಗಳಿಂದ ಬಿಡುಗಡೆಯಾಗುವದು. ಹಾಗೆಯೇ ಮಾಯೆಯ ಸ್ವರೂಪವನ್ನು ತಿಳಿದುಕೊಂಡಾಗ ಮಾಯೆಯು ಇಲ್ಲದಂತಾಗುವದು. ಆದ್ದರಿಂದ ಮೋಕ್ಷವೆಂದರೆ ಬುದ್ಧಿಪುರಸ್ಸರವಾದ ಜ್ಞಾನವು (*Freedom is national knowledge*). ಬುದ್ಧಿಯಿಂದ ಇಂದ್ರಿಯ ವಿಕಾರಗಳನ್ನು ಗೆಲ್ಲುವದಾದರೂ ಮೋಕ್ಷವೇ. ಮನುಷ್ಯನು ಬುದ್ಧಿಮೂಲಕವಾಗಿ ಸತ್ಯ ವಸ್ತುವನ್ನು ಅರಿತುಕೊಂಡಾಗ ಮೋಕ್ಷವನ್ನು ಹೊಂದುವನು. ಪರಿಪೂರ್ಣ ವಸ್ತುವು ಶಾಶ್ವತವಾದದ್ದು. ನಿತ್ಯತ್ವವು (*eternity*) ಕಾಲಕ್ಕೆ ಸಂಬಂಧಿಸಿಲ್ಲ. ಒಂದು ನಿಮಿಷವಾದರೂ ನಿತ್ಯವಾಗಿರಬಹುದು. ಪರಿಪೂರ್ಣತ್ವವು ವಸ್ತುವಿನ ಒಂದು ಸ್ವರೂಪವಾಗಿಯೂ ನಿತ್ಯತ್ವವು ಮತ್ತೊಂದು ಸ್ವರೂಪ ವಾಗಿಯೂ ಇರುವದು. ಬುದ್ಧಿಮೂಲಕವಾಗಿ ಪಡೆದ ನಿತ್ಯತ್ವವು ಮೋಕ್ಷವಾಗಿಯೂ, ಅಮರತ್ವವಾಗಿಯೂ ಇದೆ. ದೇವರು ಪರಿಪೂರ್ಣ ಬುದ್ಧಿಯುಳ್ಳವನು. ನಾವು ಬುದ್ಧಿಪುರಸ್ಸರವಾಗಿ ನಡೆಯುವದರಿಂದ ದೇವರಲ್ಲಿ ಐಕ್ಯವನ್ನು ಹೊಂದುವೆವು. ಆದ್ದರಿಂದ ನಮ್ಮ ಜ್ಞಾನವು ನಮ್ಮ ನೈತಿಕ ವರ್ತನದ ಪ್ರಮಾಣವು. ಜ್ಞಾನ ಮತ್ತು ನೀತಿಗಳು ಒಂದೇ ಆಗಿವೆ. ಜ್ಞಾನವನ್ನು ವೃದ್ಧಿಗೊಳಿಸುವದು ಯಾವದಿರುವದೋ ಅದು ನೈತಿಕವಾದದ್ದೇ. ನೀತಿಯನ್ನು ಕಡಿಮೆ ಮಾಡುವದೆಲ್ಲವೂ ಅನೈತಿಕವು. ತತ್ವಜ್ಞಾನಿಯ ದೃಷ್ಟಿಯಿಂದ ಜಗತ್ತಿನಲ್ಲಿ ಒಳ್ಳೇದು ಕೆಟ್ಟದು ಎಂಬ ಭೇದವೇ ಇಲ್ಲ. ಯಾಕಂದರೆ ಸಂಭವಿಸುವದೆಲ್ಲವೂ ಅವಶ್ಯವಾದದ್ದೇ. ದೇವರ ಮೇಲಿನ ಪ್ರೇಮದಿಂದ ಪ್ರತಿಯೊಂದು ವಸ್ತುವು ತಕ್ಕ ಬೆಲೆಯನ್ನು ಹೊಂದುವದು. ದೇವರ ಮೇಲಿನ ಪ್ರೇಮವು ನಿಷ್ಕಾಮವಾದದ್ದು. ಶಾಂತ ವಾದದ್ದು ಮತ್ತು ತೃಪ್ತಿಕರವಾದದ್ದು. ಮನುಷ್ಯನು ದೇವರಾಗದ ಹೊರತು ದೇವರನ್ನು ಪ್ರೇಮಿಸಲಾರನು. ಆದ್ದರಿಂದ ಅದು ದೇವರ ಆತ್ಮಪ್ರೇಮ

ವೆಂದೇ ಹೇಳಬಹುದು. ಆದ್ದರಿಂದ ಮನುಷ್ಯನು ದೇವರೊಡನೆ ತನ್ನ ಐಕ್ಯವನ್ನು ಅರಿತುಕೊಂಡು ಆನಂದಪಡುತ್ತಾನೆ. ಶಾಶ್ವತ ವಸ್ತುವಿನಲ್ಲಿ ಬೆರೆಯುವದೇ ಅಮರತ್ವವಾಗಿದೆ. ಅಮರತ್ವವೆಂದರೆ ಮೃತವಾದನಂತರ ಇರುವದೆಂಬುದು ತಪ್ಪುತಿಳುವಳಿಕೆಯು. ಅಪರಿಪೂರ್ಣವಾದ ಮನುಷ್ಯನು ನಾಶವಾಗುತ್ತಾನೆ. ಆದರೆ ಮನುಷ್ಯನ ನಿಜವಾದ ಆತ್ಮವು ದೇವರಾಗಿದ್ದು ಶಾಶ್ವತವಾಗಿ ಉಳಿಯುತ್ತದೆ. ಸ್ಪಿನೋಝಾನು ದೇವರು ಜಗತ್ತಾಗಿದ್ದಾನೆಂದು ಹೇಳಿದರೂ ದೇವರು ನಿಜವಾಗಿರುವಂತೆ ಜಗತ್ತು ನಿಜವಾದದ್ದೆಂದು ಹೇಳುವದಿಲ್ಲ. ವೀರಶೈವ ತತ್ವವಾದರೂ ಜಗತ್ತು ಸಹ ನಿಜವಾದದ್ದೆಂದು ಹೇಳುವದು. ಪ್ರಕೃತಿಯು ರೂಪಾಂತರ ಹೊಂದುವದೇ ಹೊರತು ಲಯವಾಗಲಾರದು ಎಂಬ ಪದಾರ್ಥ ವಿಜ್ಞಾನ ಶಾಸ್ತ್ರದ ತತ್ವದಂತೆಯೇ ವೀರಶೈವ ತತ್ವವಿರುವದು. ಸ್ಪಿನೋಝಾನು ದೇವರು ಜಗತ್ತಿಗೆ ತಾರ್ಕಿಕಕಾರಣನಿದ್ದು ಅದರ ಉತ್ಪಾದಕನಲ್ಲವೆಂದು ಹೇಳುತ್ತಾನೆ. ಹಾಗಾದರೆ ಅದು ಯಾರಿಂದ ಉತ್ಪತ್ತಿಯಾಯಿತು? ಜಗತ್ತು ಸ್ವಯಂಭವವೆಂದು ಅವನು ಹೇಳುವದಿಲ್ಲ. ಇದರಲ್ಲಿ ಅವನ ತತ್ವದ ದೋಷವು ಕಂಡುಬರುವದು. ವೀರಶೈವ ತತ್ವವು ದೇವರು ಜಗನ್ನಿರ್ಮಾಣಕನೆಂದು ಹೇಳುವದು. ಸ್ಪಿನೋಝಾನಲ್ಲಿ ಈ ದೋಷವು ಕಂಡು ಬಂದಾಗ್ಯೂ ಅವನ ತತ್ವವು ಉದಾತ್ತವೂ ವಿಚಾರಯುಕ್ತವಾದದ್ದೂ ಇದೆ. ಅಂತ್ಯದಲ್ಲಿ ಮನುಷ್ಯನು ದೇವರಲ್ಲಿ ಬೆರೆಯುವನೆಂಬ ವಿಚಾರವು ಉದಾತ್ತವಾದದ್ದಾಗಿದೆ.

ಲಿಬ್ನಿ:— ಕ್ರಿ. ಶ. ೧೬೪೬—೧೭೧೬ ಡೇ ಕಾರ್ಟ್ಸನು ೫೪ ವರ್ಷ ಸ್ಪಿನೋಝಾನು ೪೫ ವರ್ಷ ಜೀವಿಸಿದ್ದನು. ಆದರೆ ಲಿಬ್ನಿಯು ೭೦ ವರ್ಷ ಜೀವಿಸಿದ್ದನು. ಇವನು ೧ನೇ ಜಾರ್ಜ ರಾಜನಲ್ಲಿ ನೌಕರಿಯನ್ನು ಸ್ವೀಕರಿಸಿದ್ದನು. ಇವನು ನ್ಯಾಯಾಧೀಶನಾಗಿಯೂ, ಚರಿತ್ರಕಾರನಾಗಿಯೂ, ರಾಜಕಾರಣಪಟುವಾಗಿಯೂ, ಗಣಿತಜ್ಞನಾಗಿಯೂ, ಪದಾರ್ಥವಿಜ್ಞಾನ ಶಾಸ್ತ್ರಿಯಾಗಿಯೂ, ದೈವಜ್ಞನಾಗಿಯೂ, ಭಾಷಾವಿಜ್ಞಾನಿಯಾಗಿಯೂ ಇದ್ದನು. ಪ್ಲೇಟೊ ಅರಿಸ್ಟಾಟಲ, ಡನ್ಸಸ್ಕೋಟಸ್, ಡೇಕಾರ್ಟ್ಸ, ಗ್ಯಾಲಿಲಿಯೊ, ಮೊದಲಾದವರ ತತ್ವವನ್ನು ಅರಿತವನಾಗಿದ್ದನು. ಇವನ ಜ್ಞಾಪಕಶಕ್ತಿಯೂ ಬುದ್ಧಿಯೂ ಅಸಾಧಾರಣವಾಗಿದ್ದವು. ಇವನು ಫ್ರಾನ್ಸದ ರಾಜನಾದ ೧೪ ನೇ ಲೂಯಿಗೆ ರಾಯಭಾರಿಯಾಗಿದ್ದನು. ಜರ್ಮನಿ, ರಶಿಯಾ ದೇಶಗಳ ರಾಜರಿಂದ

ಮನ್ನಣೆ ಹೊಂದಿದನು. ಇವನು ಒಬ್ಬ ಕಾಲೇಜ ಪ್ರೊಫೆಸರನ ಮಗ ನಿದ್ದು ಕ್ಯಾಥೊಲಿಕ್ ಮತ್ತು ಪ್ರೊಟೇಸ್ಟಂಟರ ನಡುವೆ ಇದ್ದ ಕಲಹವನ್ನು ಕಳೆಯಲು ಯತ್ನಿಸಿದನು. ಎಲ್ಲ ಭಾಷೆಗಳಿಗೆ ಒಂದೇ ಲಿಪಿಯನ್ನು ಉಪಯೋ ಗಿಸಲು ಹೆಣಗಾಡಿದನು. ಇವನು ೧೭ ನೆಯ ವಯಸ್ಸಿನಲ್ಲಿ ಲೀಪಝಿಗ್ ವಿಶ್ವವಿದ್ಯಾಲಯದಲ್ಲಿ ಬಿ. ಎ. ಪದವಿಯನ್ನು ಹೊಂದಿದನು. ಕ್ರಿ. ಶ. ೧೭೦೦ ರಲ್ಲಿ ಬರ್ಲಿನ ಪಟ್ಟಣದಲ್ಲಿ ಶಾಸ್ತ್ರಸಂಸ್ಥೆಯನ್ನು ಸ್ಥಾಪಿಸಿದನು. ಇವನು ತನ್ನ ಎಂಟನೆಯ ವಯಸ್ಸಿನಲ್ಲಿಯೇ ಲ್ಯಾಟಿನ ಭಾಷೆಯಲ್ಲಿ ಪ್ರವೀ ಣನಾದನು. ಹನ್ನೆರಡನೆಯ ವಯಸ್ಸಿನಲ್ಲಿ ಸಿಸಿರೋ, ಪ್ಲೇಟೋ, ರೋಮ ಚರಿತ್ರೆಕಾರರ ಬರವಣಿಗೆಗಳನ್ನು ಅಭ್ಯಾಸಿಸಿದನು. ಇವನು ಜ್ಞಾನಾರ್ಜ ನೆಯ ಕಾಲದ ಕೊನೆಯವನೂ ಮತ್ತು ಜ್ಞಾನೋದಯ ಕಾಲದ ಉತ್ಪಾ ದಕನೂ ಇದ್ದಾನೆ. ಸ್ವಯಂಸಿದ್ಧವಾದ ಸತ್ಯಗಳಾವವು ಎಂಬದನ್ನು ಇವನು ಶೋಧಿಸಲು ಯತ್ನಿಸಿದನು. ಇವು ಎರಡು ವಿಧವಾಗಿವೆ. ೧ ಬುದ್ಧಿಯ ಸಾರ್ವತ್ರಿಕ ಸತ್ಯಗಳು ಮತ್ತು ೨ ಅನುಭವದ ಸಂಗತಿಗಳು. ಬುದ್ಧಿ ಯಿಂದ ಉತ್ಪನ್ನವಾದ ಸತ್ಯಗಳು ಯಾವಾಗಲೂ ನಿಜವಾದವುಗಳು. ಅನು ಭವದ ಸಂಗತಿಗಳು ಒಂದೇ ದೃಷ್ಟಾಂತದ ಮಟ್ಟಿಗೆ ನಿಜವಾಗಿವೆ. ಆದಾಗ್ಯೂ ಇವೆರಡು ಸ್ವಯಂಸಿದ್ಧವಾದ ಮತ್ತು ಪ್ರಾಥಮಿಕ ಸತ್ಯಗಳಾಗಿವೆ. ಬುದ್ಧಿ ಪ್ರಾಮಾಣ್ಯವಾದ ಸತ್ಯ (*a priori*) ಮತ್ತು ಅನುಭವಿಕ ಸತ್ಯ (*a posteriori*) ಬುದ್ಧಿಜನ್ಯವಾದ ಸತ್ಯವು ನಿರ್ಮಲವಾದದ್ದೂ, ಸ್ಪಷ್ಟವಾ ದದ್ದೂ ಇದೆ. ಆದರೆ ಅನುಭವಜನ್ಯವಾದ ಸತ್ಯಗಳು ನಿರ್ಮಲವಿದ್ದಾಗ್ಯೂ ಸ್ಪಷ್ಟವಾಗಿರುವದಿಲ್ಲ. ಬುದ್ಧಿಜನ್ಯ ಸತ್ಯವು ಎಷ್ಟು ನಿರ್ಮಲವಾಗಿರುವದೆಂ ದರೆ ಆದರ ವಿರೋಧವಾದದ್ದನ್ನು ಗ್ರಹಿಸಲು ಶಕ್ಯವಿಲ್ಲ. ಆದರೆ ಅನು ಭವಜನ್ಯ ಸತ್ಯವು ಸ್ಪಷ್ಟವಾಗಿಲ್ಲದುದರಿಂದ ಅದರ ವಿರೋಧವಾಗಿ ಗ್ರಹಿಸಲು ಶಕ್ಯವಿದೆ. ಹೇಗೆಂದರೆ ತ್ರಿಕೋನದ ಮೂರು ಕೋನಗಳು ಎರಡು ಕಾಟ ಕೋನಗಳಿಗೆ ಸರಿಯಾಗಿವೆ ಎಂಬದರ ವಿರೋಧವಾಗಿ ಗ್ರಹಿಸಲು ಶಕ್ಯವಿಲ್ಲ. ಆದರೆ ತ್ರಿಕೋನದ ಒಂದು ಪಕ್ಕವು ಎರಡು ಅಂಗುಲ ಇದ್ದದ್ದು ನಾಲ್ಕು ಅಂಗುಲವಿರಬಹುದೆಂದು ಗ್ರಹಿಸಲು ಶಕ್ಯವಿದೆ. ಆದ್ದರಿಂದ ಲಿಬ್ನಿಯಿಂದ ಎರಡು ತಾರ್ಕಿಕ ತತ್ವಗಳು ಉತ್ಪನ್ನವಾದವು. ಈ ತತ್ವಗಳ ತಳಹದಿಯ ಮೇಲೆಯೇ ಅವನು ತನ್ನ ತತ್ವಜ್ಞಾನವನ್ನು ರಚಿಸಿದನು. ಬುದ್ಧಿಜನ್ಯ ಸತ್ಯಗಳು ವಿರೋಧಾತ್ಮಕ ತತ್ವದ ಮೇಲೆ ಅವಲಂಬವಾಗಿವೆ. ಅನುಭವ ಜನ್ಯ ಸತ್ಯಗಳು ಯೋಗ್ಯ ಬುದ್ಧಿಯ ಮೇಲೆ ಅವಲಂಬವಾಗಿವೆ. ಲಿಬ್ನಿಯು

ಮೊದಲು ಸತ್ಯಗಳ ನಡುವಿನ ಈ ಭೇದವು ಮನುಷ್ಯನಿಗೆ ಮಾತ್ರ ಅನ್ವಯಿಸುತ್ತಿದ್ದು ದೇವರಿಗೆ ಅನ್ವಯಿಸುವದಿಲ್ಲವೆಂದು ಹೇಳಿದನು. ದೇವರಿಗೆ ಎರಡೂ ಸತ್ಯಗಳಲ್ಲಿ ವಿರೋಧಾಭಾಸವೇ ಕಂಡು ಬರುವದಿಲ್ಲ. ಆದರೆ ಕಾಲಾಂತರದಲ್ಲಿ ಲಿಬ್ನಿಯು ಈ ಅಭಿಪ್ರಾಯ ಬದಲು ಮಾಡಿ ಎರಡೂ ಸತ್ಯಗಳು ನಿರಂಕುಶವಾದವುಗಳು ಅಂದರೆ ಬುದ್ಧಿಜನ್ಯ ಸತ್ಯಕ್ಕೆ ವಿರೋಧಾಭಾಸವೇ ಇಲ್ಲವೆಂತಲೂ ಅನುಭವಜನ್ಯ ಸತ್ಯವು ವಿರೋಧಾಭಾಸವುಳ್ಳದ್ದೆಂತಲೂ ಹೇಳಿದನು.

ಲಿಬ್ನಿಯು ಧರ್ಮ ಮತ್ತು ರಾಷ್ಟ್ರಗಳ ನಡುವಿನ ಕಲಹವನ್ನು ಹೋಗಲಾಡಿಸಲು ತನ್ನ ಲಕ್ಷವನ್ನು ತಿರುಗಿಸಿದನು. ಡೇಕಾರ್ಟ್ಸನ ಕಾಲದಿಂದ ಶಾಸ್ತ್ರಗಳು ವಿಶೇಷವಾಗಿ ಶೋಧನೆಗಳನ್ನು ಮಾಡಿದ್ದವು. ಲಿಬ್ನಿಯು ಅವುಗಳನ್ನು ಸ್ವೀಕರಿಸಿದ್ದರೂ ಶಾಸ್ತ್ರವು ಜಗತ್ತಿನ ಯಾಂತ್ರಿಕ ದೃಷ್ಟಿಯನ್ನಷ್ಟೇ ಚಿತ್ರಿಸಿರುವವೆಂದು ಅವನು ನಂಬಿದನು. ಆದ್ದರಿಂದ ಯಾಂತ್ರಿಕ ಕಾರಣವನ್ನು ಬದಿಗಿಟ್ಟು ಅದರ ಬುಡಕಟ್ಟಿನಲ್ಲಿರುವ ಧ್ಯೇಯ ಕಾರಣವನ್ನು ಶೋಧಿಸಲು ಎತ್ನಿಸಿದನು. ಸೃಷ್ಟಿಯು ಅಳತೆಗೆ ಸಿಕ್ಕುವ ಚಲನೆಯುಳ್ಳ ಅಣುಗಳಿಂದ ರಚನೆಯಾಗಿದೆ ಎಂಬುದು ಆಗಿನ ಕಾಲದ ಗಾಲಿಲಿಯೋ ಮುಂತಾದವರಿಂದ ಪುರಸ್ಕೃತವಾದ ಶಾಸ್ತ್ರತತ್ವವಾಗಿತ್ತು. ಲೀಬ್ನಿಯು ಈ ತತ್ವದ ಪೃಥಕ್ಕರಣ ಮಾಡಿ ಸೃಷ್ಟಿಯು ಅಸಂಖ್ಯಾಕವಾದ ಪರಮಾಣುಗಳಿಂದ (*monads*) ಕೂಡಿದೆ ಎಂದು ಹೇಳಿದನು. ಲಿಬ್ನಿಯು ಮೊದಲು ಚಲನೆಯ ತತ್ವವನ್ನು ಶೋಧಿಸಿ ಚಲನೆಗೆ ಶಕ್ತಿಯೇ (*Force*) ಮುಖ್ಯ ಕಾರಣವೆಂದು ಹೇಳಿದನು. ಚಲನೆ ಮತ್ತು ವಿಶ್ರಾಂತಿ (*rest*) ಗಳು ನಿರಂಕುಶವಾಗಿರದೆ ಪರಸ್ಪರ ಸಂಬಂಧಾತ್ಮಕವಾಗಿವೆಯೆಂದು ಹೇಳಿದನು. ಚಲನೆಯು ಸಂರಕ್ಷಿತವಾದದ್ದೆಂಬ ಡೇಕಾರ್ಟ್ಸನ ತತ್ವವು ಸರಿಯಾಗಿಲ್ಲ. ಚಲನೆ ಮತ್ತು ವಿಶ್ರಾಂತಿಗಳು ಶಕ್ತಿಯ ತೋರಿಕೆಯ ಭೇದಗಳಾಗಿವೆ. ಶಕ್ತಿಯೊಂದೇ ಸ್ಥಿರವಾಗಿದ್ದು. ಭೌತಿಕ ಶಾಸ್ತ್ರವು ತತ್ವಶಾಸ್ತ್ರದ ಆಧಾರವನ್ನು ಹುಡುಕುತ್ತದೆ. ಚಲನೆಯು ಶಕ್ತಿಯ ಆಧಾರವನ್ನು ಬಯಸುತ್ತದೆ. ಸೃಷ್ಟಿಯಲ್ಲಿ ಶಕ್ತಿಯೇ ಮುಖ್ಯವಾದದ್ದು. ಶಕ್ತಿಯು ಪ್ರಸ್ತುತ ವಸ್ತುಗಳ ಪರಿಸ್ಥಿತಿಯೊಳಗಿಂದ ಮುಂದೆ ಬದಲಾವಣೆಯನ್ನುಂಟುಮಾಡುವದು. ಆದ್ದರಿಂದ ಶಕ್ತಿಯು ಸೃಷ್ಟಿಯ ಮೂಲ ವಸ್ತುವಿದ್ದು ಅಪ್ರಾಕೃತವೂ, ಸ್ಥಲಾಬಾಧಿತವೂ ಆಗಿದೆ. ಆದ್ದರಿಂದ ಹೊಸ ಭೌತಿಕ ಶಾಸ್ತ್ರಕ್ಕೆ ಚಲನಾತ್ಮಕವಾದ ಅಭೌತಿಕ ವಸ್ತುವು ಆಧಾರವಾಗಿರತಕ್ಕದ್ದು.

ಭೌತಿಕ ವಸ್ತುಗಳು ಅಣುಗಳಿಂದ ಕೂಡಿವೆಯೆಂಬ ಗ್ಯಾಸಂಡಿ ಎಂಬವನ ಅಭಿಪ್ರಾಯಕ್ಕೆ ಇವನು ಸಮ್ಮತಿಪಟ್ಟನು. ಆದರೆ ಈ ಅಣುಗಳು ಭೌತಿಕವಾದವುಗಳೆಂದು ಗ್ಯಾಸಂಡಿಯು ತಿಳಿದದ್ದು ತಪ್ಪೆಂದು ಗ್ರಹಿಸಿದನು. ವಸ್ತುವಿನ ಭಾಗಗಳು ಎಷ್ಟು ಸರಳವಾಗಿ ತೋರಿದರೂ ಅವುಗಳು ಪುನಃ ವಿಭಜನೆಗೆ ಪಾತ್ರವಾಗಿವೆ. ಹೀಗೆ ಅನಂತವಾಗಿ ವಿಭಾಗಿಸಬಹುದು. ಅಣುವು ಸ್ಥಳಾಕ್ರಾಂತ ವಸ್ತುವಿದ್ದು ಸರಳವಾಗಿರಲಾರದು. ನಿಜವಸ್ತುವು ಸ್ಥಳಾಕ್ರಾಂತ ಅಥವಾ ಸ್ಥಳವ್ಯಾಪ್ತವಾಗಿದೆ. ಭೌತಿಕವಾದಿಗಳು ಸ್ಥಳಾಕ್ರಾಂತ ವಸ್ತುವಿಗೆ ನಿಜತ್ವವನ್ನು ಅನ್ವಯಿಸಿದ್ದು ತಪ್ಪಾಗಿದೆ. ಭೌತಿಕ ಅಣುಗಳ ಹೊರತುಪಡಿಸಿ ಏನಾದರೂ ನಿಜವಾದದ್ದಿದೆಯೋ ? ಅಹುದು, ಇವೇ ಅಭೌತಿಕ ಅಣುಗಳು. ಇವು ವಿಭಜನೆಗೆ ಆಸ್ಪದವಾಗಿಲ್ಲ. ಈ ಅಭೌತಿಕ ಅಣುವನ್ನೇ ಲೀಬ್ನಿಯು (*Monad*) ಮೋನ್ಯಾಡ್ ಎಂದು ಕರೆಯುತ್ತಾನೆ. ಮೂರು ವಿಧವಾದ ವಿಷಯುಗಳಿದ್ದು ಅದರಲ್ಲಿ ಗಣಿತ ವಿಷಯುವು ಸರಳವಾದದ್ದು-ಆದರೆ ಅದು ಊಹಾಮಾತ್ರವಾಗಿದೆ. ಭೌತಿಕ ವಿಷಯ ಅಥವಾ ಅಣು ನಿಜವಾದದ್ದಿದ್ದರೂ ಸರಳವಾದುದಾಗಿಲ್ಲ. ತಾತ್ವಿಕ ವಿಷಯುವು (*Mataphysical point*) ಅಥವಾ ಮೊನ್ಯಾಡ್ ನಿಜವಾದದ್ದೂ ಸರಳ.

ಚಲನೆಯ ಆಧಾರವಾದ ಶಕ್ತಿಯನ್ನು ಭೌತಿಕ ಅಣುವಿಗೆ ಆಧಾರವಾದ ತಾತ್ವಿಕ ಅಣುವನ್ನು (ಮೊನ್ಯಾಡ್) ಲೀಬ್ನಿಯು ಒಂದೇ ಎಂದು ತಿಳಿದನು. ಮೋನ್ಯಾಡ್‌ಗಳು ಸ್ಥಳಾಕ್ರಾಂತವಾಗಿಲ್ಲ. ಸೃಷ್ಟಿಕ್ರಮವು ಸಜೀವವಾಗಿದೆ. ಮತ್ತು ಎದುರಿಸುವ ಹಾಗೂ ಪುನರುತ್ಪತ್ತಿ ಮಾಡುವ ಶಕ್ತಿಯುಳ್ಳದ್ದೂ ಆಗಿದೆ. ಸ್ಪಿನೋಝಾನ ಅಭಿಪ್ರಾಯದಂತೆ ಒಂದೇ ನಿಜವಸ್ತುವಿರುವದಾದರೆ ಸೃಷ್ಟಿಕ್ರಮವು (*nature*) ಎದುರಿಸುವ ಶಕ್ತಿ ಇಲ್ಲದ್ದೂ ನಿಶ್ಚೇಷ್ಟವಾದದ್ದೂ ಆಗಿರಬೇಕಾಗುವದು. ಆದರೆ ಸ್ವಯಂಕ್ರಿಯೆಯುಳ್ಳ ಅನೇಕ ವಸ್ತುಗಳೂ ಉಂಟು. ಎಷ್ಟು ವಸ್ತುಗಳಿರುವವೋ ಅಷ್ಟು ಶಕ್ತಿಗಳುಂಟು. ಚಲನೆ ಇಲ್ಲದ ವಸ್ತುವೇ ಇಲ್ಲ. ಮತ್ತು ಶಕ್ತಿಯಿಲ್ಲದ ಚಲನೆಯಿಲ್ಲ. ಲೀಬ್ನಿಯ ತತ್ವವು ಬಹುತ್ವವಾದವಾಗಿ ಕಂಡುಬಂದರೂ ಅವನು ಜಗತ್ತು ಒಂದಾಗಿದೆ ಎಂದು ಹೇಳುತ್ತಾನೆ. ಇವನು ಮೋನ್ಯಾಡನ್ನು ಶಕ್ತಿಯ ಕೇಂದ್ರವಾಗಿಯೂ ಮತ್ತು ಅಪ್ರಾಕೃತ ಆತ್ಮವಾಗಿಯೂ ತಿಳಿದನು. ಜಗತ್ತು ಪ್ರಗತಿಯುಳ್ಳದ್ದೆಂದು (*devoloping*)

ಭಾವಿಸಿದನು. ಮೊನ್ಯಾಡುಗಳು ಅತ್ಯಂತ ಸೂಕ್ಷ್ಮವಾಗಿವೆಯೆಂದು ಹೇಳಿದನು. ಸೃಷ್ಟಿಕ್ರಮವು ಕೀಳ ತರಹದ ಪ್ರಾಣಿಗಳಿಂದ ಶ್ರೇಷ್ಠವರ್ಗದ ಪ್ರಾಣಿಗಳ ಸಹಿತವಾಗಿದೆ. ಮತ್ತು ಅಪ್ರಾಕೃತ ಜಗತ್ತಿನಂತೆ ಪ್ರಾಕೃತ ಜಗತ್ತು ಅನಂತವಾಗಿದೆ. ಮೋನ್ಯಾಡ್ ಆತ್ಮವಾಗಿರುವದರಿಂದ ಅದೊಂದೇ ಜಗತ್ತಿನಲ್ಲಿ ಅನೇಕ ಬದಲಾವಣೆಗೆ ಸಿಲುಕಿದರೂ ಸ್ವಯಂ ಬದಲಾವಣೆ ಹೊಂದದ ವಸ್ತುವಾಗಿದೆ. ಇದು ಸ್ವಯಂಸಿದ್ಧವಾದದ್ದೂ ಸ್ವಯಂಚಲನೆಯುಳ್ಳದ್ದೂ ಆಗಿದೆ.

ಮನಸ್ಸು ಅನೇಕ ಎಚ್ಚರವಿಲ್ಲದ ಸ್ಥಿತಿಗಳಿಂದ ಕೂಡಿದೆ. ಮನಸ್ಸಿನಲ್ಲಿ ಮುದ್ರಿತವಾದ ಇಂದ್ರಿಯ ಜ್ಞಾನವನ್ನು ಪುನರ್ದರ್ಶನ ಮಾಡುವದೇ ಮೊನ್ಯಾಡದ ಕಾರ್ಯವಾಗಿದೆ. ಎಲ್ಲ ಮೊನ್ಯಾಡ್ಗಳು ಅರಿಕೆಯುಳ್ಳವುಗಳಿಲ್ಲ. ಆತ್ಮಮಯವಾದ ಅಣುವು ಯಾವತ್ತು ಜಗತ್ತಿನ ಚಿತ್ರವನ್ನು ಕೆಲವು ಸ್ಪಷ್ಟ ಮತ್ತು ಕೆಲವು ಅಸ್ಪಷ್ಟ ರೀತಿಯಿಂದ ಸದಾಕಾಲ ಗ್ರಹಿಸಿಕೊಂಡಿರುವದು. ಬಹಿರಂಗ ಜಗತ್ತಿನ ಜ್ಞಾನವೆಂಬುದು ಅದನ್ನು ನಮ್ಮ ಅಂತರಂಗದಲ್ಲಿ ಚಿತ್ರಿಸಿಕೊಳ್ಳುವದೇ ಆಗಿದೆ. ಆದ್ದರಿಂದ ಮೊನ್ಯಾಡು ತನ್ನ ಮತ್ತು ಜಗತ್ತಿನ ಚಟುವಟಿಕೆಯ ಅರಿಕೆಯುಳ್ಳದ್ದಾಗಿದೆ. ಪ್ರತಿಯೊಂದು ಮೋನ್ಯಾಡು ಒಂದು ಪ್ರತ್ಯೇಕ ಸಣ್ಣ ಜಗತ್ತೇ ಆಗಿದೆ, ಸ್ವತಂತ್ರವಾದದ್ದೂ, ಸ್ವಯಂಪರಿಪೂರ್ಣವಾದದ್ದೂ ಆಗಿದೆ. ಮೋನ್ಯಾಡಿನ ಅಭಿವೃದ್ಧಿಯು ಹೊರಗಿನ ವಸ್ತುವಿನಿಂದ ಆಗದೆ ಸ್ವಯಂ ಅಭಿವೃದ್ಧಿ ಹೊಂದತಕ್ಕದ್ದಾಗಿದೆ. ಹೊರಗಿನ ವಸ್ತುಗಳು ಇದರಲ್ಲಿ ಪ್ರವೇಶ ಮಾಡುವದಿಲ್ಲ ಅಥವಾ ಇದರೊಳಗಿಂದ ಯಾವ ವಸ್ತುವೂ ಹೊರಗೆ ಹೋಗುವದಿಲ್ಲ. ಮೊನ್ಯಾಡು ತನ್ನ ಸ್ಥಿತಿಗಳನ್ನಷ್ಟೇ ಅನುಭವಿಸಬಲ್ಲದು. ಆದಾಗ್ಯೂ ಮೊನ್ಯಾಡ ಕನ್ನಡಿಯಂತೆ ಜಗತ್ತಿನ ಚಿತ್ರವನ್ನು ಚಿತ್ರಿಸುವದು. ಮೊನ್ಯಾಡುಗಳ ಈ ಮಾನಸಿಕ ಶಕ್ತಿಯಿಂದ ಇವುಗಳ ಪರಸ್ಪರ ಐಕ್ಯವು ಘಟಿಸುವದು. ಈ ಏಕೀಭಾವಕ್ಕೆ ಲೀಬ್ನಿಯು (*pre established harmony*) ಮೊದಲು ನಿಶ್ಚಿತವಾದ ಮೇಳವೆಂದು ಹೇಳುತ್ತಾನೆ. ಅನೇಕ ಪ್ರತ್ಯೇಕವಾದ ಮತ್ತು ಸ್ವತಂತ್ರವಾದ ಮೊನ್ಯಾಡುಗಳ ಏಕೀಕರಣಕ್ಕೆ ಒಂದು ವಿಶಿಷ್ಟ ವಸ್ತುವು ಬೇಕು. ಅದಕ್ಕೆ ಅವನು ಪರಮಾತ್ಮ ಮೊನ್ಯಾಡ್, (ದೇವರು) ಎಂದು ಹೇಳುತ್ತಾನೆ. ಧಾತುಗಳು ಮತ್ತು ಸಸ್ಯಗಳು ನಿದ್ರಿತವಾದ ಮೊನ್ಯಾಡುಗಳು ಅವಕ್ಕೆ ಅರಿಕೆಯಿಲ್ಲ. ಪಶು ಮೊದಲಾದ ಜೀವಜಂತುಗಳು ಕನ

ವರಿಸುವ ಮೊನ್ಯಾಡುಗಳು, ಮನುಷ್ಯನು ಜಾಗ್ರತವಾದ ಮೊನ್ಯಾಡು. ಶ್ರೇಷ್ಠವಾದ ಮೊನ್ಯಾಡೇ ದೇವರು. ಅವನು ಜಗತ್ತನ್ನು ಸ್ಪಷ್ಟವಾಗಿ ಪುನರುತ್ಪತ್ತಿ ಮಾಡುವನು. ಎಲ್ಲ ವಸ್ತುಗಳೂ ಜೀವಮಯವಾಗಿವೆ. ಮನುಷ್ಯನಲ್ಲಿಯ ಮೊನ್ಯಾಡು ಶ್ರೇಷ್ಠವಾದ ಅರುವಿನ ಸ್ಥಿತಿಗೆ ಮುಟ್ಟಿದೆ. ಆತ್ಮರಹಿತವಾದ ವಸ್ತುವೇ ಇಲ್ಲ. ಧೂಳದಲ್ಲಿರುವ ಪರಮಾಣುವೂ ಸಹ ಜೀವಮಯವಾಗಿದೆ. ನಿರ್ಜೀವ ವಸ್ತುವೆಂಬುದೇ ಇಲ್ಲ. ಮೊನ್ಯಾಡುಗಳು ಸೃಷ್ಟಿಯಲ್ಲಿ ಸಮೂಹದಿಂದಿದ್ದು ಸಸ್ಯ, ಪಶು, ಮನುಷ್ಯ ಮುಂತಾದ ರೂಪ ತಾಳುವವು. ಮುಖ್ಯ ಮೊನ್ಯಾಡು ಈ ಸಮೂಹ ಮೊನ್ಯಾಡುಗಳ ಆತ್ಮವಾಗಿದೆ. ನಿರ್ಜೀವ ಪದಾರ್ಥದಲ್ಲಿ ಮುಖ್ಯ ಮೊನ್ಯಾಡ (ಆತ್ಮ) ಇರುವದಿಲ್ಲ. ದೇವರು ಮೊನ್ಯಾಡುಗಳ ಮೂಲವಾಗಿದ್ದು ಪರಿಪೂರ್ಣನೂ ಜಗತ್ತಿನ ನಿಯಾಮಕನೂ ಆಗಿದ್ದಾನೆ. ಸೃಷ್ಟಿಯು ಶಕ್ತಿಮಯವಾಗಿದೆ ಮತ್ತು ನಿರಂತರವಾದ ನಿಯಮದಿಂದ (*law of continuety*) ಬದ್ಧವಾಗಿದೆ. ಸೃಷ್ಟಿಯಲ್ಲಿ ಯಾವದೊಂದು ವಸ್ತುವು ಮತ್ತೊಂದು ವಸ್ತುವಿನಂತಿಲ್ಲ. ಕಾರ್ಯಭೇದವೇ ಗುಣಭೇದವಾಗಿ ತೋರುವದು. ದೇವರು ತನ್ನ ಇಚ್ಛೆಯಿಂದ ಉತ್ತಮವಾದ ಜಗತ್ತನ್ನು ನಿರ್ಮಿಸಿದನು. ಜೀವಿಗಳು ಸ್ವಾತಂತ್ರ್ಯವಿದ್ದು ತಮ್ಮ ಪಾಪ, ಪುಣ್ಯಗಳ ಫಲವನ್ನು ಅನುಭೋಗಿಸುವವು. ಪಾಪವು ಮನುಷ್ಯನಿಂದ ಜನಿಸುತ್ತಿದ್ದು ದೇವರು ಅದಕ್ಕೆ ಹೊಣೆಯಿಲ್ಲ. ಎರಡು ಗಡಿಯಾರಗಳು ಸರಿಯಾದ ವೇಳೆಯನ್ನು ತೋರಿಸುವಂತೆ ಮೊನ್ಯಾಡುಗಳಲ್ಲಿ ಮೇಳವಿದ್ದು ಅದು ದೇವರಿಂದಾಗಿದೆ ಎಂದು ಲಿಬ್ನಿಯು ಹೇಳಿದನು.

# "ಶ್ರೀ ನಿಜಗುಣ ಶಿವಯೋಗಿ ಸ್ಮಾರಕೋತ್ಸವ" "ಮತ್ತು ಸಾಹಿತ್ಯದ ಸುಗ್ಗಿ."

## ವರದಿ.

ತಾ॥ ೨೪-೨-೩೬ ನೇ ಸೋಮವಾರದ ದಿನ ಶ್ರೀ ನಿಜಗುಣಶಿವಯೋಗಿ ಸ್ಮಾರಕೋತ್ಸವವೂ ತಾ. ೨೫-೧-೩೬ ನೇ ಮಂಗಳವಾರ ಸಾಹಿತ್ಯದ ಸುಗ್ಗಿಯೂ ಕಡೂರಿನ ಪಕ್ಕದಲ್ಲಿರುವ ಶಿವಾನಂದಾಶ್ರಮದಲ್ಲಿ ವೈಭವದಿಂದ ನೆರವೇರಿದವು. ಅಲ್ಲಿನ ವಿವರವನ್ನೆಲ್ಲಾ ಮುಂದೆ ಸಂಗ್ರಹಿಸಿದೆ.

## ಸ್ವಾಗತಸಂಘ.

ಈ ಮಹೋತ್ಸವಗಳನ್ನು ನಿರ್ವಹಿಸಲಿಕ್ಕೆ ಒಂದು ಸ್ವಾಗತ ಸಂಘವು ತಾತ್ಕಾಲಿಕವಾಗಿ ಏರ್ಪಾಡಾಗಿತ್ತು. ಅದರ ರಚನಾಕ್ರಮವೆಂತೆಂದರೆ:—

## ಆಶ್ರಯದಾತರು.

ಶ್ರೀ ಚನ್ನಬಸವ ಶಿವಾಚಾರ್ಯ ಮಹಾಸ್ವಾಮಿಗಳು ಶಿವಾನಂದಾಶ್ರಮ ಕಡೂರು.

## ಅಧ್ಯಕ್ಷರು.

ಶ್ರೀಮಂತ ಕೆ. ಟಿ. ಸತ್ಯನಾರಾಯಣ ಶೆಟ್ಟರು ಬೀರೂರು.

## ಕೋಶಾಧ್ಯಕ್ಷರು.

ಶ್ರೀಮಾನ್ ಎಂ. ಬಿ. ಮುದ್ದುವೀರಯ್ಯನವರು ಸಾಹುಕಾರ್ ಬೀರೂರು.

## ಗೌ. ಕಾರ್ಯದರ್ಶಿಗಳು.

ಶ್ರೀಮಾನ್ ಕೀರ್ತನಕೇಸರಿ, ಕವಿರತ್ನ ಬಿ. ಶಿವಮೂರ್ತಿ ಶಾಸ್ತ್ರಿಗಳು ಹುಲ್ಕುಂಟೆಮಠ. ತುಮಕೂರು.

## ಸ. ಕಾರ್ಯದರ್ಶಿಗಳು

ಶ್ರೀಯುತ ಬಿ. ಬಸವಲಿಂಗಯ್ಯ *B. A. B. L.* ಶ್ರೀಯುತ ಬಿ. ಕೆ. ನರಸಿಂಹಮೂರ್ತಿ *B. A. L. L. B.*

ಅಡ್ವೋಕೇಟರು. ಚಿಕ್ಕಮಗಳೂರು. ಅಲ್ಲದೆ ಕಡೂರ ಜಿಲ್ಹೆಯ ಪ್ರಮುಖವಾದ ೩೦ ಮಠದವರು ಸ್ವಾಗತ ಸಂಘದ ಸದಸ್ಯರಾಗಿದ್ದರು.

## ಆಶ್ರಯದಾತರು.

ಈ ಮಹತ್ಕಾರ್ಯಸಾಧನೆಗೆ ತಪೋಧನರೂ ಸಾಹಿತ್ಯಾಭಿಮಾನಿಗಳೂ ಆದ ಶ್ರೀ ಚನ್ನಬಸವ ಶಿವಾಚಾರ್ಯ ಮಹಾಸ್ವಾಮಿಗಳ ಅಪಾರವಾದ ಔದಾರ್ಯವೂ ಶ್ರೀ ಕೀರ್ತನಕೇಸರಿ ಶಿವಮೂರ್ತಿ ಶಾಸ್ತ್ರಿಗಳ ಅವಿಶ್ರಾಂತವಾದ ಶ್ರಮಸಾಹಸಗಳೂ ಶ್ರೀ ಕೆ. ಬಿ. ಸತ್ಯನಾರಾಯಣ ಸೆಟ್ಟರು ಶ್ರೀ ಬಿ. ಬಸವಲಿಂಗಯ್ಯನವರು ಇತ್ಯಾದಿ ಮಹನೀಯರ ಸಹಾಯ ಸಹಾನುಭೂತಿಯೂ ಮುಖ್ಯವಾದುವು.

ಚಿಕ್ಕಮಗಳೂರು, ಕಡೂರು ಬೀರೂರು, ತರೀಕೆರೆ, ಲಿಂಗದಹಳ್ಳಿ ಯಳ್ಳಂಬಳಸೆ ಅಜ್ಜಂಪೂರ ಇತ್ಯಾದಿ ಊರುಗಳ ಮಹಾಜನರು ತನು ಮನ-ಧನದಿಂದ ಸಹಾಯಕವಾಗಿರದಿದ್ದರೆ ಈ ಮಹೋತ್ಸವಗಳು ಇಷ್ಟು ಯಶಸ್ವಿಯಾಗಿ ನಡೆಯುತ್ತಿರಲಿಲ್ಲವೆನ್ನಬಹುದು. ಈ ಉಭಯ ಉತ್ಸವಗಳನ್ನು ಮಾಡುವುದರಲ್ಲಿ ಶ್ರೀಗಳ ಹಸ್ತದಿಂದ ಸುಮಾರು ೮೦೦ ರೂಪಾಯಿಗಳು ಖರ್ಚಾಗಿವೆಯೆಂದು ತಿಳಿದು ಬಂದಿದೆ.

## ಸ್ಥಳ ಮತ್ತು ವ್ಯವಸ್ಥೆ.

ಈ ಮಹೋತ್ಸವಗಳು ಕಡೂರಿನ ಹತ್ತಿರವಿರುವ ಶ್ರೀ ಶಿವಾನಂದಾಶ್ರಮದಲ್ಲಿ ನಡೆದವು. ಸಭೆಯು ಭವ್ಯವೂ ವಿಶಾಲವೂ ಆದ ಹಸರು ಚಪ್ಪರದಲ್ಲಿ ನಡೆಯಿತು. ಆಗಮಿಸಿದ್ದ ಅತಿಥಿಗಳಿಗೆ ವಾಸಿಸಲಿಕ್ಕೆ ಚಪ್ಪರಗಳೂ ಗುಡಿಸಲುಗಳೂ ಗುಡಾರಗಳೂ ಏರ್ಪಾಡಾಗಿದ್ದವು.

ನೆರೆದಿದ್ದ ಸಾವಿರಾರು ಜನರಿಗೆಲ್ಲ ಶ್ರೀಗಳು ಭೋಜನಕ್ಕೆ ಉಚಿತವಾಗಿಯೇ ಏರ್ಪಡಿಸಿದ್ದರು. ವೀರಶೈವರು ಬ್ರಾಹ್ಮಣರು ಹೀಗೆ ಎರಡು ಭೋಜನಶಾಲೆಗಳು ಏರ್ಪಾಡಾಗಿದ್ದವು.

## ಇತರ ಏರ್ಪಾಟುಗಳು.

ಇದೇ ಸಮಯದಲ್ಲಿ ಶ್ರೀ ಶಿವಾನಂದಾಶ್ರಮದಲ್ಲಿ ಮರುಳುಸಿದ್ಧೇಶ್ವರ ಸ್ವಾಮಿ ಜಾತ್ರೆಯಿದ್ದುದರಿಂದ ಜನಗಳೂ ದನಗಳೂ ಬಹಳವಾಗಿ ಸೇರಿದ್ದವು. ಇತ್ತ ಸುಗ್ಗಿಗೂ ಅತ್ತ ಹುಗ್ಗಿಗೂ ಈ ಜಾತ್ರೆಯ ಜನರು ಕಳೆಯೇರಿಸಿದರೆನ್ನಬಹುದು.

ಬೆಂಗಳೂರಿನ ವಿ. ಜಿ. ಟಿ. ಜನರಲ್ ಎಜನ್ಸಿ ಪುಸ್ತಕ ವ್ಯಾಪಾರಿಗಳೂ, ಅಜ್ಜಂಪುರದ ಖಾದಿಕೇಂದ್ರದವರೂ ತಂದ ತಮ್ಮ ಅಂಗಡಿಗಳನ್ನು ಇಲ್ಲಿ ತೆರೆದಿದ್ದರು.

## ಆಗಮಿಸಿದ್ದ ಮಹನೀಯರು.

ಈ ಮಹೋತ್ಸವಗಳಿಗಾಗಿ ದೂರದೂರದಿಂದ ಬಹುಮಂದಿ ಸಾಹಿತಿಗಳೂ ಸಹೃದಯರೂ ಆಗಮಿಸಿದ್ದರು ಅವರಲ್ಲಿ ಮುಖ್ಯರಾರಂದರೆ ಮ॥ ರಾ॥ ಗಳಾದ ಬೆಳಗಾಂವಿ ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಎಸ್. ಸಿ. ನಂದೀಮಠ *M. A. P. H. D.* ಧಾರವಾಡದ ಪ್ರಸಿದ್ಧ ಗ್ರಂಥಕಾರರಾದ ಆಲೂರ ವೆಂಕಟರಾಯರು *B. A. L. L. B.* ಚಿಕ್ಕಮಗಳೂರಿನ ಮುನಸುಫರಾದ ಟಿ. ಎನ್. ಮಲ್ಲಪ್ಪನವರು *B. A. L. L. B.* ತುಮಕೂರಿನ ಅಡ್ವೋಕೇಟರಾದ ಟಿ. ಸುಬ್ರಹ್ಮಣ್ಯಂ ತಲಕಾಡಿನ ಗಮಕಕಲಾ ವಿಶಾರದ ಮಾಯುಗೌಡರು ಮೈಸೂರಿನ ಸಂಗೀತ ವಿದ್ವಾನ್ ಪರಶುರಾಮ, ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿ ತುಮಕೂರು, ಶ್ರೀಮನ್ನಿರಂಜನ ಮಹದೇವ ಸ್ವಾಮಿಗಳು ಬೆಂಗಳೂರು ಕನ್ನಡ ಜಟ್ಟಿ ಬಸವರಾಜು ಬೆಂಗಳೂರು ಪ್ರಸಿದ್ಧ ಲಾವಣಿಕಾರರಾದ ನೀಲಕಂಠಪ್ಪ ಮತ್ತು ವಿಷಕಂಠರಾವ ಹಾಗೂ ಅವರ ಮಂಡಲಿ ತಿಪಟೂರಿನ ಕರ್ಣಾಟಕ ಸಂಘದ ಕಾರ್ಯದರ್ಶಿಗಳಾದ ರಾಮಸ್ವಾಮಯ್ಯ *B. S. C.* ಚಿಕ್ಕನಾಯಕನಹಳ್ಳಿ ಕರ್ಣಾಟಕ ಸಂಘದ ಅಧ್ಯಕ್ಷರಾದ ಗುಂಡುರಾಯರು *B. A.* ಬೀರೂರಿನ ರುದ್ರಾರಾಧ್ಯರು *B. A. L. L. B.* ತಿಪಟೂರಿನ ಸಾಹಿತ್ಯಾಚಾರ್ಯ ಗುರುಬಸವ ಶಾಸ್ತ್ರಿಗಳು ಹಾಗು ಸಿದ್ಧಲಿಂಗಶಾಸ್ತ್ರಿಗಳು ಹಿಂದೂಧರ್ಮ ಪ್ರಚಾರಕರಾದ ಶೇಷಪ್ಪಯ್ಯನವರು ಬೀರೂರಿನ ಶಿವಪ್ಪ *B. A.* ಕುಮತೆಯು ಜಿ. ಆರ್. ಯಾಜಿಗಳು ಇತ್ಯಾದಿ ಸಾಹಿತಿಗಳಲ್ಲದೆ ತಲಕಾಡಿನ ಸಾಹುಕಾರ ಟಿ. ಎಸ್. ಸದಾಶಿವಮೂರ್ತಿಗಳು ಮತ್ತು ಅವರ ಮಂಡಲಿ ಕೋಲಾರದ ಸಾಹುಕಾರ ಚನ್ನಂಜಪ್ಪ ಶೆಟ್ಟರು ಚಿಕ್ಕಮಗಳೂರಿನ ಕಾಫಿ ಪಾರ್ಟನರ ಸಿ. ಪಿ. ಬಸವೇ ಗೌಡರು ಕಾಫಿ ಪಾರ್ಟನ ಡಿ. ರುದ್ರಪ್ಪನವರು ಕಡೂರು ಡಿ. ಬೊ. ಪ್ರೆಸಿಡೆಂಟ್ ದೇವೇಗೌಡರು ಬೆಂಗಳೂರು ಡಿ. ಬೊ. ವೈಸ್ ಪ್ರೆಸಿಡೆಂಟ ಜೆ. ಸಿ. ವೀರಪ್ಪ *B. A. L. L. B.* ಬ್ಯಾಂಕಿನ ಮ್ಯಾನೇಜರ ಎಂ. ಬಸಪ್ಪನವರು ಬೀರೂರಿನ ಸಾಹುಕಾರ ದೊಡಮನಿ ಹಾಲಪ್ಪನ

ವರು ಬೀರೂರಿನ ಶಿವಲಿಂಗಪ್ಪನವರು ಆಲೂರಿನ ಕಾಫಿಪ್ಲಾಂಟರ ಬಸಪ್ಪ ಶೆಟ್ಟರು ತರೀಕೆರೆ ಟಿ. ಸಿ. ಬಸಪ್ಪ *B. A.* ನಾಟಾ ವ್ಯಾಪಾರಿಗಳಾದ *L. V.* ಬಸಪ್ಪನವರು ಇತ್ಯಾದಿ ಮಹಾಶಯರಲ್ಲದೆ ಕಡೂರು ಜಿಲ್ಲೆಯ ಹಾಗೂ ಆಶ್ರಯದಸುತ್ತ ಮುತ್ತಲು ಸಾವಿರಗಟ್ಟಲೆ ಜನರು ಈ ಮಹೋತ್ಸವಗಳಲ್ಲಿ ಭಾಗಿಗಳಾಗಿದ್ದರು.

ಕಡೂರು ರೇಂಜರ್ ಇನ್‌ಸ್ಪೆಕ್ಟರಾದ ಶ್ರೀಮಾನ್ ಭೀಮರಾವ ಎಂ. ಎ. ಆವರು ಶಿವಾನಂದಾಶ್ರಮದ ಸುತ್ತುಮುತ್ತಲು ಪ್ರಾಯಮರಿ ಸ್ಕೂಲುಗಳಿಗೆ ಈ ಉತ್ಸವದ ಎರಡು ದಿವಸ ರಜಾ ಕೊಡಿಸಿದ್ದರಿಂದ ಉಪಾಧ್ಯಯರಿಗೂ ವಿದ್ಯಾರ್ಥಿಗಳಿಗೂ ಇಲ್ಲಿಗೆ ಬರಲು ಅನುಕೂಲವಾಯ್ತು.

## ಸ್ಮಾರಕೋತ್ಸವ.

ಮೊದಲನೇ ಕಾರ್ಯಕ್ರಮದಲ್ಲಿ ಪ್ರಕಟವಾದಂತೆ ಶ್ರೀ ನಿಜಗುಣ ಶಿವಯೋಗಿ ಸ್ಮಾರಕೋತ್ಸವವು ತಾ. *24-2-36* ನೇ ಸೋಮವಾರ ಬೆಳಗಿನ ೧೦॥ ಗಂಟೆಗೆ ಪ್ರಾರಂಭವಾಯ್ತು. ಸಭಾಧ್ಯಕ್ಷತೆಯನ್ನು ಡಾ॥ ನಂದೀಮಠರವರು ವಹಿಸಿದರು. ತರೀಕೆರೆಯ ಶ್ರೀ ನರಸಿಂಹಭಟ್ಟರು ದೇವತಾ ಸ್ತೋತ್ರಮಾಡಿ ತಾವೇ ರಚಿಸಿದ್ದ ಸ್ವಾಗತ ಪದ್ಯಗಳನ್ನು ಹಾಡಿದರು. ಶ್ರೀ ಶಿವಮೂರ್ತಿ ಶಾಸ್ತ್ರಿಗಳು ತಮ್ಮ ಸುರಸವಾಣಿಯಿಂದ ವೇದಿಕೆಯ ಮೇಲೆ ಮಂಡಿಸಿದ್ದ ಮುಖ್ಯ ಮಹನೀಯರ ಪರಿಚಯವನ್ನು ಸಭಿಕರಿಗೆ ಮಾಡಿಕೊಟ್ಟರು. ಅನಂತರ ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳು ತಮ್ಮ ವಿದ್ವತ್ಪೂರ್ಣದಿಂದ ಪ್ರಾರಂಭದ ಭಾಷಣವನ್ನು ಓದಿದರು. ( ಇದು ಅಚ್ಚಾಗಿದೆ. ಹಾಗು ಈ ಮಹೋತ್ಸವವು ಯಶಸ್ವಿಯಾಗಲೆಂದು ಹರಸಿದರು. )ಅನಂತರ ಸ್ವಾಗತಾಧ್ಯಕ್ಷರಾದ ಕೆ. ಟಿ. ಸತ್ಯನಾರಾಯಣ ಶೆಟ್ಟರು ತಮ್ಮ ಭಾಷಣವನ್ನು ಓದಿದರು. ( ಇದೂ ಅಚ್ಚಾಗಿದೆ. ) ಬಿ. ಬಸವಲಿಂಗಯ್ಯನವರು ಈ ಮಹೋತ್ಸವಕ್ಕಾಗಿ ಬರೆದಿದ್ದ ಸಂದೇಶಗಳನ್ನು ಓದಿ ಹೇಳಿದರು. ಈ ಮುಂದೆ ಹೇಳುವ ಮಹನೀಯರ ಸಂದೇಶವನ್ನು ಕಳಿಸಿದ್ದರು. ಶ್ರೀಯುತರಾದ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರು ಶಿವಯೋಗಮಂದಿರದ ಉಪಾಧ್ಯಕ್ಷರಾದ ಬಸವಲಿಂಗ ದೇಶಿಕರು ಶಿವಗಂಗಾಮೇಲಾಗಲೀ ವೀರಸಿಂಹಾಸನಾಧೀಶರು ವಿಶ್ವಕರ್ಣಾಟಕದ ಸಂಪಾದಕರು ಸೊಲ್ಲಾಪುರದ ಬ್ಯಾರಿಸ್ಟರ ಸರದಾರರು, ಯಾದಗಿರಿ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲ ಶ್ರೀ ವೀರಭದ್ರ ಶಾಸ್ತ್ರಿಗಳು, ಬಾಗಲ

ಕೋಟಿ ಶ್ರೀ ಜಂಗಿನ ಮುರುಗಯ್ಯನವರು ಮಂಗಳೂರಿನ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು, ತುಮಕೂರು ಡಿ|| ಎ|| ಇನ್ಸಪೆಕ್ಟರ ಚಕ್ರವರ್ತಿ ರಾಮಾನುಜ ಅಯ್ಯಂಗಾರರವರು ಕೊಲ್ಲಾಪುರದಿಂದ ಪ್ರೊ|| ಕುಂದಣಗಾರರು ಹಾಗು ಶ್ರೀ ಮಾಳವಾಡ ಎಂ. ಎ. ಅವರು ತಲಕಾಡು ಕರ್ಣಾಟಕ ಸಂಘಾಧ್ಯಕ್ಷರಾದ ಟಿ. ಎಸ್. ಶಿವಲಿಂಗ ಸ್ವಾಮಿಗಳು ಹುಬ್ಬಳ್ಳಿ ಉತ್ತಂಗಿ ಚನ್ನಪ್ಪನವರು ಬೆಂಗಳೂರಿನ ಎಂ. ರಾಮರಾಯರು ಮಂಗಳೂರಿನ ಸೋಮಪ್ಪಯ್ಯನವರು ಇತ್ಯಾದಿ.

ಅನಂತರ ಸಭಾಧ್ಯಕ್ಷರಾದ ಡಾ|| ನಂದೀಮಠರು ನಿಜಗುಣಶಿವಯೋಗಿಯ ವಿಚಾರವಾಗಿ ಸುಮಾರು ಒಂದು ಘಂಟೆಯ ಕಾಲ ಅಮೋಘವಾದ ಉಪನ್ಯಾಸಮಾಡಿದರು. ತುಮಕೂರಿನ ಅಡ್ವೋಕೇಟ್ ಸುಬ್ರಹ್ಮಣ್ಯರವರು “ನಿಜಗುಣಶಿವಯೋಗಿ ಯೋಗಶಾಸ್ತ್ರವೂ” ಎಂಬ ವಿಚಾರವಾಗಿ ಒಂದೂವರೆ ಘಂಟೆಯ ಕಾಲ ಅಮೋಘವಾದ ಭಾಷಣ ಮಾಡಿದರು. ಕೀರ್ತನ ಕೇಸರಿ ಶಿವಮೂರ್ತಿ ಶಾಸ್ತ್ರಿಗಳು ನಿಜಗುಣಶಿವಯೋಗಿಯ ಚರಿತ್ರೆ ಎಂಬ ವಿಚಾರವಾಗಿ ಉಮೋದದಿಂದ ಭಾಷಣ ಮಾಡಿ ನಿಜಗುಣನ ಸ್ಥಳ ಕಾಲ, ಮತ, ಗುರು, ಗ್ರಂಥಗಳು ಅವನಿಂದ ಕನ್ನಡ ಭಾಷೆಗಾದ ಸಹಾಯ ಮೊದಲಾದ ವಿಚಾರಗಳನ್ನು ವಿವರಿಸಿದರು. ತಲಕಾಡಿನ ಮಾಯಗೌಡರು ನಿಜಗುಣನ ವಚನಗಳನ್ನು ಮನೋಹರವಾಗಿ ಹಾಡಿದರು. ಲಾವಣಿಕಾರ ವಿಷಕಂಠರಾವರು ನಿಜಗುಣಶಿವಯೋಗಿಯ ಮೇಲೆ ಕಟ್ಟಿದ ಲಾವಣಿಯನ್ನು ಹಾಡಿದರು. ಕಡೆಗೆ ಅಧ್ಯಕ್ಷರು ಉಪಸಂಹಾರ ಭಾಷಣದೊಂದಿಗೆ ಈ ಮಹೋತ್ಸವವನ್ನು ಕಡೆಗಾಣಿಸಿದರು.

## ರಾಮಕೃಷ್ಣಪರಮಹಂಸ ಜಯಂತಿ.

ಶ್ರೀ ನಿಜಗುಣಶಿವಯೋಗಿ ಸ್ಮಾರಕೋತ್ಸವದ ದಿನವೇ ರಾಮಕೃಷ್ಣ ಪರಮಹಂಸ ಜಯಂತಿಯು ಪ್ರಾಪ್ತವಾದುದರಿಂದ ಸ್ವಾಗತಸಂಘದವರು ಆ ದಿನವೇ ಇದನ್ನು ಕ. ಡಿ. ಬೋ. ಪ್ರೆಸಿಡೆಂಟರಾದ ಬಾಗಮನಿ ದೇವೇಗೌಡರ ಅಧ್ಯಕ್ಷತೆಯಲ್ಲಿ ಸಭೆ ನೆರೆಸಿದ್ದರು. ತಿಪಟೂರಿನ ರಾಮಸ್ವಾಮಯ್ಯ *B. S. C.* ಯವರೂ ಹಿಂದೂ ಸಭೆಯ ಶೇಷಪ್ಪಯ್ಯನವರೂ ರಾಮಕೃಷ್ಣರಿಂದ ಹಿಂದೂದೇಶಕ್ಕೂ ಧರ್ಮಕ್ಕೂ ಆದ ಮಹೋಪಕಾರದ ಬಗ್ಗೆ ಮಾತಾಡಿದರು.

## ಸಾಹಿತ್ಯದ ಸುಗ್ಗಿ.

ತಾ. 25—2—36 ನೇ ಮಂಗಳವಾರ ಬೆಳಗಿನ ೧೦ ಗಂಟೆಗೆ ಶ್ರೀ ಮಾನ್ ಟಿ. ಎನ್. ಮಲ್ಲಪ್ಪನವರು *B. A. L. L. B.* ಅವರ ಅಧ್ಯಕ್ಷತೆಯಲ್ಲಿ ಸಾಹಿತ್ಯದ ಸುಗ್ಗಿ ಪ್ರಾರಂಭವಾಯಿತು. ಈ ದಿನ ಚಿಕ್ಕಮಗಳೂರು ಕಡೂರ ಭಾಗಗಳಿಂದ ಹೆಚ್ಚು ಜನರು ಸಾಹಿತ್ಯೋತ್ಸವಕ್ಕೆ ಬಂದಿದ್ದರು. ಸಭಾ ಚಪ್ಪರವು ಅತ್ಯಂತ ಜನಭರಿತವಾಗಿತ್ತು.

ಸುಪ್ರಸಿದ್ಧ ವಿದ್ವಾಂಸರೂ ಕರ್ಣಾಟಕದ ಮುಂದಾಳುಗಳೂ ಆದ ಧಾರವಾಡದ ಆಲೂರ ವೆಂಕಟರಾಯರು ಅಮೋಘವಾದ ಭಾಷಣದೊಂದಿಗೆ ಸಭಾ ಪ್ರಾರಂಭಿಸಿದರು.

ಈ ದಿನ ಮೊದಲು ಪಂಚಮ ಜಾರ್ಜ ಪ್ರಭುಗಳ ನಿಧನದ ಬಗ್ಗೆ ದುಃಖ ಪ್ರದರ್ಶನ ಮಾಡುವ ಅಷ್ಟಮ ಎಡ್ವರ್ಡ ಪ್ರಭುಗಳ ಬಗ್ಗೆ ರಾಜಭಕ್ತಿ ಪ್ರಕಟಿಸುವ ಒಂದು ಠರಾವು.

ಕೈ॥ ರಾಜಕವಿಭೂಷಣ ಲಿಂಗರಾಜ ಅರಸರ ಬಗ್ಗೆ ಸಂತಾಪಸೂಚಕವಾದ ಮತ್ತೊಂದು ಠರಾವು ಸಭೆಯಲ್ಲಿ ಅಂಗೀಕರಿಸಲ್ಪಟ್ಟವು. ಈ ಗೊತ್ತುವಳಿಗಳೆರಡನ್ನೂ ಶ್ರೀ ಕೆ. ಟಿ. ಸತ್ಯನಾರಾಯಣಶೆಟ್ಟರು ಸಭೆಯ ಮುಂದಿಟ್ಟದನ್ನು ಡಾ॥ ನಂದೀಮಠರು ಅನುಮೋದಿಸಿದರು. ಇವನ್ನು ಅಧ್ಯಕ್ಷರು ಆಯಾ ಸಂಬಂಧಿಸಿದವರಿಗೆ ಕಳಿಸಬೇಕೆಂದು ತೀರ್ಮಾನವಾಯಿತು.

ಆನಂತರ ಅಧ್ಯಕ್ಷರಾದ ಟಿ. ಎನ್. ಮಲ್ಲಪ್ಪನವರು ತಮ್ಮ ಸರಸ ಭಾಷಣವನ್ನು ಒಂದು ಘಂಟೆಯ ಕಾಲ ಓದಿ ಹೇಳಿದರು. ಆನಂತರ ಡಾ॥ ನಂದೀಮಠರು ಕರ್ಣಾಟಕದಲ್ಲಿ ಇತಿಹಾಸ ಎಂಬ ವಿಚಾರವಾಗಿ ಅಮೋಘವಾದ ಭಾಷಣ ಮಾಡಿದರು.

ಗಮಕ ಕಲಾಕೋವಿದ ಮಾಯಿಗೌಡರು ತಮ್ಮ ಮಂಜುಲವಾದ ಕಂಠದಿಂದ ಗದುಗಿನ ಭಾರತವನ್ನು ಓದಿದರು. ಈ ಓದುಗಾರಿಕೆ ಸಭಿಕರ ಮೆಚ್ಚುಗೆಗೆ ಪಾತ್ರವಾಯ್ತು. ಆಲೂರ ವೆಂಕಟರಾಯರು "ಗೀತೆಯಲ್ಲಿ ವೀರಶೈವ ಧರ್ಮ" ಎಂಬ ವಿಚಾರವಾಗಿ ಉಪನ್ಯಸಿಸಿದರು. ಇದೇ ವಿಚಾರವನ್ನು ಕುರಿತು ಡಾ॥ ನಂದೀಮಠರೂ ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳೂ ಮಹತ್ವದ ಭಾಷಣ ಮಾಡಿದರು.

ಬೀರೂರಿನ ರುದ್ರಾರಾಧ್ಯರು *B. A. LL. B.* ಅವರು ಸಾಹಿತ್ಯ ರಾಜ್ಯದಲ್ಲಿ ಕನ್ನಡವೇನು ಕಡಿಮೆ? ಎಂಬ ವಿಚಾರವಾಗಿಯೂ ಬೀರೂರಿನ ಶಿವಪ್ಪ ಬಿ. ಎ. ಇವರು ನಾಗರಿಕ ಜನಾಂಗವೂ ಸಾಹಿತ್ಯವೂ ಎಂಬ ವಿಚಾರವಾಗಿ ಮಾತಾಡಿದರು. ಕುಮಾರಾದ ಗಣೇಶರಾಮಯಾಜಿಗಳು ತಾವೇ ರಚಿಸಿದ್ದ ನವೀನ ಕವಿತೆಗಳನ್ನು ಹೃದಯಂಗಮವಾಗಿ ಓದಿದರು.

ಅನಂತರ ತಿಪಟೂರಿನ ಗಮಕಿ ಶಿವರಾಮಯ್ಯನವರು ಭಾರತ ಪಠಣವೂ ಮೈಸೂರಿನ ಸಂಗೀತ ವಿದ್ವಾನ್ ರಘುರಾಮರವರ ಘನವಾದ ಹಾಡಿಕೆಯೂ ಬೆಂಗಳೂರಿನ ನೀಲಕಂಠಪ್ಪನವರ ಲಾವಣಿಯೂ ಸಭಿಕರನ್ನು ಆನಂದಸಮುದ್ರದಲ್ಲಿ ಮುಳುಗಿಸಿದವು.

ಬೆಂಗಳೂರು ಶ್ರೀಮನ್ನಿರಂಜನ ಮಹಾದೇವಸ್ವಾಮಿಗಳ ಶಿಷ್ಯ ಕನ್ನಡ ಜಟ್ಟಿ ಬಸವರಾಜುರವರ ಅದ್ಭುತ ವ್ಯಾಯಾಮ ಪ್ರದರ್ಶನವಾಯಿತು.

ಶ್ರೀ ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಸಂಗೀತಕಾರರು ಗಮಕಿಗಳು, ಲಾವಣಿಕಾರರು, ಜಟ್ಟಿಗಳು ಮೊದಲಾದ ಕಲಾವಿದರಿಗೆ ಗಾಂಧಿ ಶಾಲುಗಳನ್ನೂ ಯೋಗ್ಯ ಸಂಭಾವನೆಯನ್ನೂ ಆಶೀರ್ವದಿಸಿದರು. ಇಂದಿನ ಕಾರ್ಯಕ್ರಮ ಹೆಚ್ಚಾಗಿದ್ದರೂ ಜನರು ಪ್ರಾರಂಭದಿಂದ ಕಡೆಯವರೆಗೂ ಉತ್ಸುಕತರಾಗಿಯೇ ಇದ್ದರು.

ಕಟ್ಟಕಡೆಗೆ ಅಧ್ಯಕ್ಷರು ಸಮಯೋಚಿತವಾದ ಹಾಗೂ ವಿದ್ವತ್ಪೂರ್ಣವಾದ ಭಾಷಣವನ್ನು ಮಾಡಿ ಸಭೆಯನ್ನು ಮುಗಿಸಿದರು. ಅನಂತರ ಸ್ವಾಗತಾಧ್ಯಕ್ಷರಾದ ಕೆ. ಟಿ. ಸತ್ಯನಾರಾಯಣಶೆಟ್ಟರು ಈ ಮಹೋತ್ಸವಕ್ಕೆ ಸಹಾಯ ಮಾಡಿದವರನ್ನೆಲ್ಲ ವಂದಿಸಿದರು. ಗಂಧ ಪುಷ್ಪ ವಿನಿಯೋಗವಾದ ಮೇಲೆ ಜಯಜಯಕಾರದೊಂದಿಗೆ ಸಭೆ ಕೊನೆಗಂಡಿತು.

## ವಿಶೇಷ ಸಭೆ.

ತಾ॥ ೨೬—೨—೩೬ ನೇ ಬುಧವಾರವೂ ಸಾಹಿತ್ಯ ಸುಗ್ಗಿ ಮುಂದುವರೆಯಬೇಕಾಗಿದ್ದರೂ ಚಿಕ್ಕಮಗಳೂರು ತಿಪಟೂರು ಮಹಾಜನರ ಕೋರಿಕೆಯಂತೆ ಡಾ॥ ನಂದೀಮಠ ಆಲೂರು ವೆಂಕಟರಾಯರು ಮಾಯಗೌಡರು ಇತ್ಯಾದಿ ಸಾಹಿತಿಗಳು ಪ್ರಯಾಣ ಮಾಡಿದುದರಿಂದ ಸಾಹಿತ್ಯದ ಸುಗ್ಗಿಯನ್ನು ಹಿಂದಿನ ದಿನವೇ ಕೊನೆಗಾಣಿಸಿ ಈ ದಿನ ಮತ್ತೊಂದು

ವಿಶೇಷ ಸಭೆಯನ್ನು ಕರೆಯಲಾಯಿತು. ಇಂದಿನ ಅಧ್ಯಕ್ಷತೆಯನ್ನು ಶ್ರೀ ಸತ್ಯನಾರಾಯಣಶೆಟ್ಟರೇ ಸಭೆಯ ಕೋರಿಕೆಯಂತೆ ವಹಿಸಿದರು.

ಈ ದಿನದ ಸಭೆಗೆ ಹಳ್ಳಿಗಾಡಿನ ಜನರೇ ಹೆಚ್ಚಾಗಿ ಬಂದಿದ್ದರು. ಅದುಕಾರಣ ಜನಜೀವನಕ್ಕೆ ಅವಶ್ಯಕವಾದ ಆರೋಗ್ಯ, ಮಿತವ್ಯಯ, ಐಕ್ಯಮತ್ಯ, ದೇಶಪ್ರೀತಿ, ಗೋರಕ್ಷಣೆ, ಖಾದಿ ಪ್ರಸಾರ, ದೈವಭಕ್ತಿ ಇತ್ಯಾದಿ ವಿಚಾರಗಳನ್ನು ಕುರಿತು ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, ಅಡ್ವೋಕೇಟ ಬಿ. ಬಸವಲಿಂಗಯ್ಯನವರು ಖಾದೀ ಕೇಂದ್ರದ (ಅಜ್ಜಂ ಪುರ) ನಾರಾಯಣರಾಯರು, ಬೀರೂರಿನ ರುದ್ರಾರಾಧ್ಯರು ಇತ್ಯಾದಿ ಮಹನೀಯರು ಭಾಷಣ ಮಾಡಿದರು. ಬೆಂಗಳೂರು ನೀಲಕಂಠಪ್ಪ ಮತ್ತು ಅವರ ಶಿಷ್ಯ ಮಂಡಲಿಯ ಲಾವಣಿ ಹಾಡುಗಾರಿಕೆಯಾಯ್ತು. ಕಡೆಗೆ ಅಧ್ಯಕ್ಷರಾದ ಸತ್ಯನಾರಾಯಣಶೆಟ್ಟರು ಹಳ್ಳಿಗರಿಗೆ ಬುದ್ಧಿವಾದರೂಪವಾದ ಉಪನ್ಯಾಸ ಮಾಡಿದರು. ಆನಂತರ ಶಿವಾನಂದಾಶ್ರಮಾಧ್ಯಕ್ಷರಾದ ಶ್ರೀ ಚನ್ನಬಸವಸ್ವಾಮಿಗಳು ತಮ್ಮ ಜಾತ್ರೆಗೂ ಸಾಹಿತ್ಯೋತ್ಸವಕ್ಕೂ ಸಹಾಯ ಕರಾದವರನ್ನೆಲ್ಲ ಪುಷ್ಪಹಾರಗಳಿಂದ ಸತ್ಕರಿಸಿ ತಮ್ಮ ಸಂತೋಷವನ್ನು ವ್ಯಕ್ತಮಾಡಿದರು. ಒಟ್ಟಿನಲ್ಲಿ ಈ ಮಹೋತ್ಸವಗಳು ಅತ್ಯಂತ ಯಶಸ್ವಿ ಯಾಗಿ ನಡೆದು ಕೊನೆಗಂಡವು.

---

# ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳವರು ಶ್ರೀ ಸರ್ಪಭೂಷಣ ಶಿವಯೋಗೀಶ ಮಠಾಧ್ಯಕ್ಷರ ಪ್ರಾರಂಭ ಭಾಷಣ.

ಆರಂಭದಲ್ಲಿ ಇವರು ಮಾಡಿದ ಭಾಷಣವೇನಂದರೆ:—

ಇಂದು ಕನ್ನಡ ಸಾಹಿತ್ಯದ ಹೊಸ ಯುಗವು ಆವಿರ್ಭವಿಸಿದೆ. ಹೊಸ ಸೂರ್ಯನ ಹೊಂಬೆಳಗು ತಿರೆಯ ತುಂಬ ಚೆಲ್ಲಾಡುತ್ತಿರುವಾಗಲೇ ಹಿಂದೆ ಆಗಿ ಹೋದ ಮಹಾ ವಿಭೂತಿಯೊಬ್ಬನ ಯಶೋಗೀತೆಯನ್ನು ಹಾಡುವದು ಕನ್ನಡ ತಾಯಿಯ ಚರಣತಲದಲ್ಲಿ ಪ್ರತಿಯೊಬ್ಬನೂ ಅರ್ಪಿಸ ಬಹುದಾದ ಒಂದು ಸೇವೆ. ಅದೇ ಹೊತ್ತಿಗೆ ಸರಿಯಾಗಿ ಸಾಹಿತ್ಯದ ಸುಗ್ಗಿಯೂ ಇದರ ಸಂಗಡ ಸೇರಿಕೊಂಡಿರುವದು ಕಬ್ಬಿನ ಮೇಲೆ ಜೇನಿಟ್ಟಂತಾಗಿದೆ. ಸಾಹಿತ್ಯದ ಸುಗ್ಗಿಯ ಮಕರಂದ ವನಕ್ಕೆ ಈ ಕನ್ನಡ ಕೋಗಿಲೆಯ ಮನಮೋಹಕ ಮಧುರ ಗಾನವು ಬಹು ರಮಣೀಯವಾಗಿ ಸೇರಿಕೊಂಡಿದೆ. ನಾಡಿನ ವಸಂತ ಋತುವಿನ ಆಗಮನಕ್ಕೆ ವನಲಕ್ಷ್ಮಿಯು ತೋರುವ ಮೊದಲ ಸಂಭ್ರಮವಿದು.

ಸಾಹಿತ್ಯದ ಒಡಲು ಬಹು ದೊಡ್ಡದು. ಅದರಲ್ಲಿ ಎಲ್ಲಕ್ಕೂ ಅವಕಾಶ ವಿದೆ. ಪ್ರಪಂಚವನ್ನೇ ತನ್ನ ತೊಡೆಯ ಮೇಲಿನ ಕೂಸಿನಂತೆ ಆಡಿಸಬಲ್ಲಳು ಸಾಹಿತ್ಯದೇವಿ. ವೇದಾಂತವಾದರೇನು! ಲೋಕಾಂತವಾದರೇನು! ಕಾವ್ಯವಾದರೇನು! ಕಲೆಯಾದರೇನು! ಮಾವಾದರೇನು! ಬೇವಾದರೇನು! ಸಾಹಿತ್ಯದ ರೂಪು ಒಂದು ತೆರನಲ್ಲ; ಮಳೆಬಿಲ್ಲಿನ ಬಣ್ಣದಂತೆ ಭಿನ್ನವೂ ಆಹುದು. ಏಕವೂ ಆಹುದು; ಅಂಥದರ ಸೇವೆ ಮಾಡುವವರಿಗೆ ಒಂದು ಹಾದಿಯಿಲ್ಲ; ತ್ಯಾಗಕ್ಕೆ ಸೇವೆಗೆ ಕಟ್ಟುನಿಟ್ಟುಗಳಿಲ್ಲ. " ಸಾಹಿತ್ಯದ ಮಠದಲ್ಲಿ ಅಸ್ಪೃಶ್ಯತೆಯಿಲ್ಲ.

ಹೊಸ ಸಾಹಿತ್ಯದ ಹುರುಪಿನ ಮರಿದುಂಬಿಗಳಿಗೆ ಸಾಹಿತ್ಯದ ಸುಗ್ಗಿಯು ಆಕರ್ಷಣೀಯವಾಗಿದೆ. ಹಿಂದಿನ ಮಹಾಕವಿಗಳ ಗುಣಗಾನ ಯಶೋಗೀತೆಯು ಇಂದಿನವರೆಗೆ ಕೈಗೋಲು—ಕೈದೀಪಗಳಾಗಿರುತ್ತವೆ. ಪ್ರಾಚೀನ ಸಾಹಿತಿಗಳನ್ನು ಪೂರ್ಣವಾಗಿ ನಿರಾಕರಿಸಿ ಅರ್ವಾಚೀನರು ಮುಂದಾಗಲಾರರು. ಪಂಪ-ರನ್ನರನ್ನು ಬಿಟ್ಟು ಹರಿಹರ ರಾಘವರನ್ನು ಳಿದು ನಾವು ಬೇರಾಗಲು ಶಾಧ್ಯವಿಲ್ಲ. ಹಿಂದಿನವರ ಹೆಜ್ಜೆಯನ್ನು ಹಿಡಿದು

ಮುಂದಿನವರು ತಮ್ಮದನ್ನು ತಾವು ಕಟ್ಟಬೇಕಾಗುತ್ತದೆ. ಅದರಲ್ಲೂ ಜನ ಜೀವನದ ವಿಕಾಶ; ಪ್ರಗತಿಗಳನ್ನು ಕುರಿತು ಹಾಡಿದ ಕೃತಿಗಳನ್ನಂತೂ ಹೇಗೋ ಎಂದೂ ಬಿಡಲಾಗದು. ಈ ಅನೇಕ ದೃಷ್ಟಿಗಳಿಂದ ನಿಜಗುಣರ ಸ್ಮಾರಕೋತ್ಸವವು ಸಾಹಿತ್ಯ ಸೇವೆಯ ಒಂದು ರೂಪವಮಾತ್ರವೆಂದು ಹೇಳದಿರಲಾರೆವು.

ಮಹರ್ಷಿ ನಿಜಗುಣನ ಪುಣ್ಯದಿನಾಚರಣೆಯು ಇದಕ್ಕಿಂತ ಬಹು ಮುಂಚೆಯೇ ಆಗಬೇಕಾಗಿದ್ದ ಕಾರ್ಯ; ಆದರೂ ಇಷ್ಟು ಬೇಗನೆ ಬಂದುದೂ ನಮ್ಮಗಳ ಭಾಗ್ಯೋದಯವೇ ಸರಿ. ಶ್ರೀ ಶಿವಯೋಗಿಗಳ ಆಧ್ಯಾತ್ಮಿಕ ಜೀವನವು ಅತ್ಯದ್ಭುತವಾದುದು. ಅವರ ಕೃತಿಗಳು ಬಹುಮೂಲ್ಯವಾದುವುಗಳು. ಮೊನ್ನೆ ತಾನೇ ಮುಂಬೈ ನಗರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಪ್ರಾರಂಭೋತ್ಸವವನ್ನು ನೆರವೇರಿಸಿದ ಮಂತ್ರಿಶ್ರೇಷ್ಠ ದಿವಾನ ಬಹದ್ದೂರ ಎಸ್. ಟಿ. ಕಂಬಳಿಯವರು ತಮ್ಮ ಭಾಷಣದಲ್ಲಿ " ನಿಜಗುಣಶಿವಯೋಗಿಗಳ ಕೈವಲ್ಯ ಪದ್ಧತಿ, ಅನುಭವಸಾರ, ಅನುಭವಬೋಧೆ, ಅನುಭವಗೀತೆ ಇವುಗಳಿಗೆ ಹೋಲುವಂತಹ ಗ್ರಂಥಗಳು ಇತರ ದೇಶೀಯ ಭಾಷೆಗಳಲ್ಲಿ ಈ ವರೆಗೂ ಉದ್ಭವಿಸಿರುವದಿಲ್ಲವೆಂದು ಕೆಲವರ ಅಭಿಪ್ರಾಯ " ಎಂದು ಹೇಳಿರುವದೇನೂ ಅತಿಶಯೋಕ್ತಿಯಲ್ಲ. ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿರುವ ಪ್ರಸಿದ್ಧ ಅದ್ವೈತ ಮತಸ್ಥಾಪಕರಾದ ಭಗವಾನ ಶ್ರೀ ಶಂಕರಾಚಾರ್ಯರಿಗಿಂತಲೂ ಶ್ರೀ ನಿಜಗುಣರು ಯಾವ ರೀತಿಯಲ್ಲೂ ಕಡಿಮೆಯಾಗಿಲ್ಲವೆಂದು ಹೇಳುವದು ಎಲ್ಲ ಕನ್ನಡಿಗರಿಗೂ ಹೆಮ್ಮೆಯನ್ನುಂಟುಮಾಡತಕ್ಕ ವಿಷಯವೇ ಸರಿ. ಶ್ರೀ ಶಂಕರರ ಕೃತಿಗಳು ಸಂಸ್ಕೃತದಲ್ಲಿದ್ದರೆ ಶ್ರೀ ನಿಜಗುಣರ ಕೃತಿಗಳು ನಮ್ಮ ತಾಯಿನುಡಿ ತಿಳಿಗನ್ನಡದ ಸವಿಗೊರಲಿನಲ್ಲಿವೆ. ಅದು ನಮಗೆ ಮತ್ತಿಷ್ಟು ಪ್ರಿಯವಾದುದಾಗಿದೆ. ಕನ್ನಡ ನಾಡಿನ ತುಂಬ ಅವರ ಅಮೋಘ ಜ್ಞಾನಭಂಡಾರದ ಸೂರೆಯಾಗಿರುವುದು. ಅವು ಕನ್ನಡಲ್ಲಿದ್ದುದರಿಂದಲೇ ನಮ್ಮಗಳ ದುರದೃಷ್ಟದಿಂದ ನಿಜಗುಣರ ಜೀವನ ಚರಿತ್ರೆಯು ನಿರ್ದಿಷ್ಟವಾದ ರೂಪದಲ್ಲಿ ನಮಗೆ ದೊರಕಿರುವದಿಲ್ಲ. ಅವರ ಕಾಲ ನಿರ್ಣಯವೂ ಸಹ ನಿರ್ಧರವಾಗಿಲ್ಲ. ಈ ಬಗ್ಗೆ ವಿದ್ವಾಂಸರಲ್ಲಿ ಮತಭೇದ ಉಂಟೆಂಬುದನ್ನು ನಾವು ಬಲ್ಲೆವು. ಕನ್ನಡನಾಡಿನ ಪೂಜ್ಯ ಪಿತಾಮಹರಾದ ರಾವ್ ಬಹದ್ದೂರ ಮಹಾಮಹೋಪಾಧ್ಯಾಯ ನರಸಿಂಹಾಚಾ

ಯರ ಕವಿಚರಿತ್ರೆಯಲ್ಲಿ ಉಕ್ತವಾಗಿರುವದಿಷ್ಟು "ಇವನು ವೀರಶೈವ ಕವಿ. ಇವನಿಗೆ ನಿಜಗುಣಾರಾಧ್ಯನೆಂಬ ಹೆಸರೂ ಉಂಟು. ಶಂಭುಲಿಂಗನ ಬೆಟ್ಟದ ಸುತ್ತು ಮುತ್ತಿನ ನಾಡಿಗೆ ಅರಸನಾಗಿದ್ದು ಬಳಿಕ ವಿರಕ್ತನಾಗಿ ಆ ಬೆಟ್ಟದಲ್ಲಿ ನಿಂತು ಶಿವಯೋಗ ತತ್ಪರನಾಗಿದ್ದನೆಂದು ಹೇಳುತ್ತಾರೆ."

ಅವರು ಷಡಕ್ಷರ ದೇವನಿಗಿಂತ (೧೬೬೫) ಹಿಂದೆಯೂ ಕಲ್ಪತರುವನ್ನು ಬರೆದ ಅಮರಾನಂದನ (೧೨೫೦) ಈಚೆಗೂ ಇದ್ದಿರಬಹುದೆಂದು ಹೇಳುತ್ತಾರೆ. ಈ ವಾದಗ್ರಸ್ತ ವಿಚಾರವನ್ನು ಇತಿಹಾಸ ಸಂಶೋಧಕರ ಮಂಡಲಿಗೆ ಕೊಟ್ಟು ನಾವು ಅವರ ಗ್ರಂಥ ಭಂಡಾರದ ಕಡೆಗೆ ಹೊರಳಬಹುದು.

ನಿಜಗುಣರ ಕೃತಿಗಳು ಹಲವರು ನಂಬಿರುವಂತೆ ಏಳಲ್ಲ ಒಂಭತ್ತೆಂದು ತಿಳಿದುಬಂದಿದೆ. ಅವುಗಳೆಲ್ಲವೂ ವೇದಾಂತ ಗ್ರಂಥಗಳೇ. ಆದರೆ ಏಳು ಗ್ರಂಥಗಳು ಕನ್ನಡದಲ್ಲಿಯೂ ಉಳಿದವೆರಡು ಸಂಸ್ಕೃತದಲ್ಲಿಯೂ ಇವೆ.

೧. ಅನುಭವಸಾರ.
೨. ಅನುಭವ ಬೋಧೆ.
೩. ಅರವತ್ತುಮೂವರ ತ್ರಿಪದಿ
೪. ಕೈವಲ್ಯ ಪದ್ಧತಿ.
೫. ಪರಮಾರ್ಥ ಗೀತೆ.
೬. ಪರಮಾರ್ಥ ಪ್ರಕಾಶಿಕೆ.
೭. ವಿವೇಕ ಚಿಂತಾಮಣಿ.
೮. ತರ್ಕ ಚಿಂತಾಮಣಿ.
೯. ದರ್ಶನಸಾರ.

ಇವುಗಳಲ್ಲಿ ಮೊದಲಿನವೇಳು ಕನ್ನಡದಲ್ಲಿಯೂ, ಕಡೆಯವೆರಡು ಸಂಸ್ಕೃತದಲ್ಲಿಯೂ ಇವೆ ಎಂಬುದಾಗಿ ತಿಳಿದುಬಂದಿದೆ. ಕನ್ನಡದ ಗ್ರಂಥಗಳೆಲ್ಲ ನಮ್ಮ ಹಸ್ತಗತವಾಗಿವೆ. ಸಂಸ್ಕೃತದವುಗಳು ಮಾತ್ರ ಕಾಲಗರ್ಭದಲ್ಲಿ ಅಡಗಿಹೋಗಿವೆ. ನಿಜಗುಣರು ಈ ಸಂಸ್ಕೃತ ಗಂಥಗಳೆರಡನ್ನು ರಚಿಸಿರುವರೆಂಬ ಪ್ರತೀತಿ ಮಾತ್ರ ಬಹಳವಾಗಿದೆ. ಇವರು ತಮ್ಮ ಗ್ರಂಥಗಳನ್ನೆಲ್ಲ ಶೃತಿ ಸ್ಮೃತಿಗಳ ಸಾರವನ್ನು ಹಿಂಡಿ ಇಂಗಡಲಿನ ಇಂಪಿನಂತೆ ಬೆಳದಿಂಗಳ ತಂಪಿನಂತೆ ಕುಸುಮಂಗಳ ಕಂಪಿನಂತೆ ಕನ್ನಡಕ್ಕೆ ಕೊಟ್ಟ

ರುತ್ತಾರೆ. ಅವರ ಗ್ರಂಥಗಳಲ್ಲಿನ ಅಮೋಘ ರತ್ನವೇ ವಿವೇಕಚಿಂತಾಮಣಿ. ನಿಜಗುಣರಿಗೆ ಅದ್ವೈತ ಸಿದ್ಧಾಂತದಲ್ಲಿ ಪರಿಣತ ಪಾಂಡಿತ್ಯವಿತ್ತೆಂದು ಅವರ ಗ್ರಂಥಗಳಿಂದ ತಿಳಿದುಬರುವುದಾದರೂ ಶಿವಶಕ್ತಿಗಳ ಅವಿನಾಭಾವ ಸಂಬಂಧಗಳನ್ನು ಪ್ರತಿಪಾದಿಸುವ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಬಿಟ್ಟು ಅವರು ಹೊರಗೆ ಹೋಗಿಲ್ಲ. ಲಿಂಗಪೂಜೆ, ಜಂಗಮಾರ್ಚನೆ ಪ್ರಸಾದಸೇವನೆ ಮುಂತಾದ ಅಷ್ಟಾವರಣದ ವಿಚಾರಣೆಗಳಿಗೆ ತಡೆಯಿಲ್ಲದಂತೆ ಇವರ ಗ್ರಂಥಗಳಲ್ಲಿ ಎಡೆ ಇದೆ. ಕೈವಲ್ಯ ಪದ್ಧತಿಗಳ ಯೋಗ ಪ್ರತಿಪಾದನಾ ಸ್ಥಳವು ಕೇವಲ ಲಿಂಗಾಂಗ ಸಾಮರಸ್ಯವನ್ನೇ ವರ್ಣಿಸುತ್ತದೆ. ಒಟ್ಟಿನಲ್ಲಿ ಇವರ ಕೃತಿಗಳ ಸರ್ವ ಸಾರವೂ, ಚರಮಧ್ಯೇಯವೂ ಶಿವಾದ್ವೈತವೆಂದು ಹೇಳಬಹುದು. ಮುಮುಕ್ಷುಗಳಿಗೆ ಬೇಗನೆ ದಾರಿ ತೋರಿಸುವ ಸುಳಭವಾದ ಭಕ್ತಿಮಾರ್ಗವನ್ನು ಇವರು ಹೆಚ್ಚಾಗಿ ಪ್ರತಿಪಾದಿಸಿದ್ದಾರೆ. ತ್ರಿಷಷ್ಠಿ ಪುರಾತನರ ತ್ರಿವಿಧಿಯು ಕೇವಲ ಭಕ್ತರನ್ನು ಕುರಿತು ಹಾಡಿದ ಗೀತೆ. ಇವರ ಗ್ರಂಥ ಭಂಡಾರವು ಬರಿ ಜ್ಞಾನದ ಗಣಿ ಅಷ್ಟೇ ಅಲ್ಲ. ಅದು ಭಕ್ತಿಯ ಮಧುರ ಮಧುವಿನ ಪಾತ್ರೆಯೂ ಅಹುದು.

ಶಿವಯೋಗಿ ನಿಜಗುಣರು ಬಹು ದೊಡ್ಡ ಜ್ಞಾನಿಗಳಾದರೂ ಉದ್ದಾಮ ಪಂಡಿತರಾದರೂ ಅವರ ಭಾಷೆಯು ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಸರಳಗನ್ನಡದಲ್ಲಿದೆ. ಭಾಷೆಯು ಎಷ್ಟು ಸರಳವೋ ಅದು ಅಷ್ಟು ಮೋಹಕವೂ ಅರ್ಥಯುಕ್ತವೂ ಆಗಿದೆ. ಇವರು ತಮ್ಮ ಗ್ರಂಥರಚನೆಗೆ ರಗಳೆ, ತ್ರಿವಿಧಿ, ಸಾಂಗತ್ಯ, ಹಾಡುಗಳು ಮೊದಲಾದ ವಿವಿಧ ಛಂದಸ್ಸನ್ನು ಉಪಯೋಗಿಸಿಕೊಂಡಿರುವುದನ್ನು ನೋಡಿದರೆ ಈ ಕವಿಗೆ ಗಾಯನದ ಮರ್ಮವೂ ಛಂದಸ್ಸಿನ ಹೃದಯವೂ ಸಂಪೂರ್ಣವಾಗಿ ತಿಳಿದಿತ್ತೆಂದು ಊಹಿಸಬಹುದು. ಇವರು ಶಾಸ್ತ್ರ ವಿಷಯಗಳನ್ನು ಹೇಳಲಿಕ್ಕೆ ಕನ್ನಡ ಗದ್ಯ ಶೈಲಿಯನ್ನು ಉಪಯೋಗಿಸಿಕೊಂಡುದು. ( ವಿವೇಕ ಚಿಂತಾಮಣಿ ಮತ್ತು ಪರಮಾರ್ಥ ಪ್ರಕಾಶಿಕೆಗಳಲ್ಲಿ ) ಇವರ ನೈಪುಣ್ಯತೆಗೆ ಸಾಕ್ಷಿಯಾಗಿದೆ. ಭಾಷೆ ಮತ್ತು ವಿಷಯಗಳು ಮಾತ್ರ ಪೂರ್ಣ ಪರಿಶುದ್ಧತೆಯಿಂದ ಇವರ ಗ್ರಂಥಗಳಲ್ಲಿ ಕೂಡಿಕೊಂಡಿವೆ. ಅವುಗಳೆಲ್ಲವನ್ನೂ ವಿಮರ್ಶೆ ಮಾಡುವದು ಪ್ರಕೃತ ನಮ್ಮ ಭಾಗದ ಕೆಲಸವಲ್ಲವಾದರೂ ಕೆಲವು ಉದಾಹರಣೆಗಳನ್ನು ಸೂಚಿಸುವದು ಅವಶ್ಯಕವಾಗಿದೆ. " ಕಾದ ಕಬ್ಬಿಣದೊಂದು ಗಟ್ಟಿಯೊಳಗಣಿತವಾದ ಕಿಡಿಗಳುದಯಿಸುವಂತೆ " ಎಂಬುದು ಎಷ್ಟು

ವ್ಯವಹಾರಿಕವೋ ಅಷ್ಟು ಪಾಂಡಿತ್ಯಪೂರ್ಣ " ಮಿಸುನಿ ತೊಡವೆನಿಸಿ ಬಹು ಪೆಸರುದಳದಂತೆ " ಎಂಬದು ಇವರ ಉಪಮಾನದ ಕೌಶಲ್ಯಕ್ಕೆ ಸಾಕ್ಷಿ. ' ತರಣಿಶಚಿರೋಚಿಗಳ ಕಿರಣಂಗಳೈದಿ ಸಂಹರಿಸದ ಜ್ಞಾನ ತಿಮಿರಮಂ ಕೆಡಿಸುವುದು ಗುರುವರ್ಯ ನಿನ್ನ ನಸುನೋಟ ' ಎಂಬ ಪ್ರಯೋಗವು ಎಷ್ಟು ಸಹಜವಾಗಿದೆ. ಮಿಗಿಲೊಡ್ಡಣೆ ಮಿಂಚಿನ ಕಳೆಯಂತೆ, ಮೃಗ ತೃಷ್ಣೆಯ ಕನಸಿನ ಸಿರಿಯಂತೆ, ಸುರಧನು ಬೊಬ್ಬುಳಿಕೆಯ ಬಗೆಯಂತೆ, ತೆರೆ ದೀಪಜ್ವಾಲೆಯ ತೆರನಂತೆ, ಸುಳಿಗಾಳಿಯ ಮಂಜಿನ ಪರಿಯಂತೆ ಈ ಕೆಲವು ಉಪಮಾನಗಳಿಂದ ಅವರ ರಚನಾಕೌಶಲ್ಯವು ತಮ್ಮಗಳಿಗೆಲ್ಲಾ ವೇದ್ಯವಾಗದಿರದು.

ಅವರ ಕೃತಿಗಳಲ್ಲಿನ ಭಾವದಬಂಧುರತೆಗಾಗಿ ಒಂದು ನಿದರ್ಶನವನ್ನು ಮಾತ್ರ ತೋರಿಸಲಿಚ್ಛಿಸುತ್ತೇವೆ. ಗೀತೆಯಲ್ಲಿನ ಕೆಲವು ವಾಕ್ಯಗಳಿಗೂ ಅದೇ ಅರ್ಥದ ನಿಜಗುಣರ ವಚನಗಳಿಗೂ ಇರುವ ಸಾಮ್ಯವನ್ನು ವ್ಯಾಪ್ತಿಪರಿಪಾಕಗಳನ್ನು ಇಲ್ಲಿ ನೋಡಬಹುದು. ತ್ರಿವಿಧ ತಪಸ್ಸುಗಳನ್ನು ಕುರಿತು ಆ ಋಷಿಕವಿಯು ಹಾಡಿದ ವಚನವಿದುಃ—

ಮಾಡಲಿಲ್ಲವೇ । ತಪವ । ಮಾಡಲಿಲ್ಲವೇ ॥ ಪ ॥
ಕೂಡಿ ಸುಗುಣದೊಡನೆ ತಿಳಿದು । ನೋಡಿದ ತ್ರಿವಿಧಕರಣದಲ್ಲಿ ॥ ಅ. ಪ ॥
ಗುರುಭಜನೆ ಸುಕರ್ಮ ವೃತ್ತಿ । ಹರನ ಪೂಜೆ ।
ಶರಣ ಸೇವೆ । ಪರಮ ಸಾತ್ವಿಕಂಗಳೆಂಟು ।
ನೆರದು ನೆಲಸಿ ತನುವಿನಲ್ಲಿ ॥ ೧ ॥

ಈ ನುಡಿಗೆ ಸರಿಯಾದ ಗೀತೆಯ ಶ್ಲೋಕವಿದುಃ—

ದೇವ ದ್ವಿಜಗುರು ಪ್ರಾಜ್ಞ ಪೂಜನಂ ಶೌಚ ಮಾರ್ಜವಂ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪಉಚ್ಯತೇ ॥

ಇವುಗಳು ಶಾರೀರಕ ತಪಸ್ಸುಗಳನ್ನು ಕುರಿತು ಹಾಡಿದವುಗಳು.

ಇನ್ನು ವಾಚಕ ತಪಸ್ಸಿನ ವಿಚಾರವನ್ನು ಕೇಳಿಃ—

ವಿನಯ ಮನ್ಯ ಹಿತವ ತರ್ಕ್ಯ । ವನಪ ಶಬ್ದ ವಚಲಿತಾರ್ಥ ।
ವನಘ ಮಂತ್ರವಾಗ ಮಂಗ । ಳಿನಿತು ವಿಡಿದು ಸುವಚದಲ್ಲಿ ॥ ೨ ॥

ಇದೇ ಅರ್ಥದ ಗೀತೆಯ ಶ್ಲೋಕವಿದುಃ —

ಅನುದ್ವೇಗಕರಂ ವಾಕ್ಯಂ । ಸತ್ಯಂ ಪ್ರಿಯ ಹಿತಂ ಚಯತ್ ॥

ಸ್ವಾಧ್ಯಾಯಾಭ್ಯಸನಂ ಚೈವ । ವಾಙ್ಮಯಂ ತಪ ಉಚ್ಯತೇ ॥

ಇನ್ನು ಮಾನಸಿಕ ತಪಸ್ಸನ್ನು ಕುರಿತು ವಿಚಾರವಿದು:—

ಶಮವಿವೇಕವಾತ್ಮವಿದ್ಯೆ । ದಮ ದಯಾ ವಿರಕ್ತಿಯೋಗ ॥
ಮಮಳರೂಪ ಶಂಭುಲಿಂಗ ನಮರ್ದು ತೋರೆ ಸಮನದಲ್ಲಿ ॥ ೩

ಗೀತೆಯಲ್ಲಿನ ರೂಪವಿದು:—

ಮನಃಪ್ರಸಾದ ಸೌಮ್ಯತ್ವಂ ಮೌನಮಾತ್ಮವಿನಿಗ್ರಹ: ।
ಭಾವ ಸಂಶುದ್ಧಿ ರಿತ್ಯೇತತ್ತಪೋ ಮಾನಸ ಉಚ್ಯತೆ ॥

ಒಟ್ಟಿನಲ್ಲಿ ಕನ್ನಡದ ಈ ಕೃತಿಗಳಲ್ಲಿ ಕಂಡುಬರುವ ವ್ಯಾಪ್ತಿ ಮತ್ತು ವಸ್ತು ನಿರೂಪಣೆಗಳು ನಮಗೆ ಹೆಚ್ಚು ಪ್ರಿಯವಾಗಿ ತೋರುತ್ತಿವೆ. ಇಂತಹ ಅಮೂಲ್ಯ ಭಾವನೆಗಳು ಕನ್ನಡಕ್ಕೆ ದೊರಕಿರುವುದು ಕನ್ನಡಿಗರಾದ ನಮ್ಮ ಭಾಗ್ಯೋದಯವೇ ಸರಿ. “ ಸುಡುವ ಕನ್ನಡಿಯೊಳಿದೊಡೆ ನಿಜಾಸ್ಯಂ ಬೇಗ ಒಡೆಯದಂತಿಹುದು ” ಎನ್ನುವಂಥ ಭಾವದ ಬಗೆ ಇದು. ಈ ಅಮರ ಕೃತಿಗಳಿಗೆ ಕಾಲ, ದೇಶ, ವರ್ತಮಾನಗಳಿಗೆ ಮೀರಿದ ಸ್ಥಾನಗೌರವವಿದೆ. ಕನ್ನಡದ ಹೆಚ್ಚಳಕ್ಕೆ ಇವುಗಳೇ ಅಡಿಗಲ್ಲುಗಳು. ಇಂಥ ಕೃತಿರತ್ನಗಳನ್ನು ಕನ್ನಡ ತಾಯಿಯ ಚರಣತಲದೊಳಿಟ್ಟ ಮಹಾಪುರುಷನ ಸ್ಮಾರಕದಿನವು ಬಹು ಪುಣ್ಯಮಯ ದಿನವೆಂದು ಮತ್ತೊಮ್ಮೆ ಒತ್ತಿ ಹೇಳದಿರಲಾಗದು. ಕನ್ನಡ ನಾಡೆಲ್ಲವೂ ಇಲ್ಲಿನ ಸಹೃದಯರ ಮತ್ತು ಶ್ರೀಗಳವರ ಅನುಕರಣ ಮಾಡಬೇಕೆಂಬುದನ್ನು ಮತ್ತೆ ನೆನಪಿಗೆ ತರಬಯಸುತ್ತೇವೆ. ಮುಂದಿನ ಕಾರ್ಯಕ್ರಮಗಳು ನಿರ್ವಿಘ್ನವಾಗಿ ನಡೆಯಲೆಂದು ಹಾರೈಸಿ, ಪರಮಾತ್ಮನನ್ನು ಪ್ರಾರ್ಥಿಸಿ ಸ್ಮಾರಕೋತ್ಸವದ ನಾಂದೀಗೀತೆಯನ್ನು ಹಾಡುವ ಸೌಭಾಗ್ಯವನ್ನು ನಮ್ಮ ಪಾಲಿಗೆ ಕೊಟ್ಟ ಕನ್ನಡ ತಾಯಿಗೆ ನಮಿಸಿ ವಿರಮಿಸುತ್ತೇನೆ.

---

ತರುವಾಯ ಸ್ವಾಗತ ಸಂಘಾಧ್ಯಕ್ಷರಾದ ಶ್ರೀ ಕೆ. ಟಿ. ಸತ್ಯನಾರಾಯಣ ಶೆಟ್ಟರು ತಮ್ಮ ಸ್ವಾಗತ ಭಾಷಣದಲ್ಲಿ ಕರ್ನಾಟಕ ವಾಙ್ಮಯವನ್ನು ಕುರಿತು ಅನೇಕ ವಿಷಯಗಳನ್ನೊಡಕೊಂಡ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರಲ್ಲಿಯ ಮುಖ್ಯಾಂಶಗಳು ಆವವೆಂದರೆ:—

ಕರ್ನಾಟಕ ದೇಶವು ಪೂರ್ವದಲ್ಲಿ ಅತ್ಯಂತ ಘನತೆಗೇರಿತ್ತೆಂಬದಕ್ಕೆ ನಮ್ಮ ಇತಿಹಾಸವೇ ಸಾಕ್ಷಿ. ಗಂಗ, ಕದಂಬ, ಹೊಯ್ಸಳ, ದೇವಗಿರಿ

ಯಾದವ, ಬದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ವಿಜಯನಗರ ಮೊದಲಾದ ನಮ್ಮ ಹಳೆಯ ಸಾಮ್ರಾಜ್ಯಗಳ ಚರಿತ್ರೆಯು ಈಗಲೂ ನಮ್ಮಲ್ಲಿ ಒಂದು ನವಚೈತನ್ಯವನ್ನು ಉಂಟುಮಾಡುವಂತಿದೆ. ಕೆಳದಿ, ಬೀಳಗಿ, ಸ್ವಾದಿ, ಕಿತ್ತೂರು, ಕೊಡಗು, ಮಾಗಡಿ ಮೊದಲಾದ ಕಡೆ ಆಳಿದ ಪಾಳೆಯಗಾರರ ಚರಿತ್ರೆಯೂ ಗಣನಾರ್ಹವಾಗಿಯೇ ಇದೆ.

ಚಿತ್ರ, ವಾಸ್ತುಶಿಲ್ಪ, ಸಂಗೀತ ಈ ಮೊದಲಾದ ಲಲಿತ ಕಲೆಗಳಲ್ಲಿ ನಮ್ಮ ಹಿರಿಯ ಕನ್ನಡಿಗರು ಅತ್ಯಂತ ಯಶಸ್ವಿಗಳಾಗಿದ್ದರೆಂಬುದಕ್ಕೆ ಪ್ರತ್ಯಕ್ಷ ಸಾಕ್ಷಿಗಳಿವೆ. ಡಾಕ್ಟರ ಫರ್‌ಗ್ಯೂಸನ ಸರ್ ಎಂ. ವಿಶ್ವೇಶ್ವರಯ್ಯಾ ಪ್ರೊ॥ ಕಾಳಿದಾಸ ನಾಗ್ ಮೊದಲಾದ ಲೋಕವಿಖ್ಯಾತ ಶಿಲ್ಪಕಲಾ ವಿಶಾರದರಿಂದ ಅಭಿವರ್ಣಿತವಾಗಿರುವ ಹಳೆಯ ಬೀಡು, ಬೇಲೂರು, ಸೋಮನಾಥಪುರಗಳಲ್ಲಿಯ ಜಗನ್ಮೋಹಕ ದೇವಾಲಯಗಳೂ ಶ್ರವಣಬೆಳಗುಳದಲ್ಲಿಯ ಲೋಕವಿಖ್ಯಾತ ಗೋಮಟೇಶ್ವರ ಸ್ವಾಮಿಯ ಮೂರ್ತಿಯೂ ಹಂಪೆಯ· ಅದ್ಭುತಾಕಾರವಾದ ವಿಗ್ರಹ ಮತ್ತು ದೇವಾಲಯಗಳೂ ಬಾದಾಮಿ ಎಲ್ಲೋರ ಎಲಿಫಂಟ, ಕಾರ್ಲೆ, ಅಜೆಂಟ್‌ಗಳಲ್ಲಿಯ ಗುಹಾಂತರ್ಗತ ದೇವಾಲಯಗಳೂ ವಿಜಾಪುರದ ಗೋಳಗುಮಟ ಇಬ್ರಾಹಿಮರೋಜ್ ಮೊದಲಾದ ಕಟ್ಟಡಗಳೂ ನಮ್ಮ ಹಿರಿಯರ ಕಲಾವೈಭವಕ್ಕೆ ನಿದರ್ಶನವಾಗಿದೆ.

ಅರಸುತನದಲ್ಲಿ ಕಿರಿಯವರಾದರೂ ಕಲಾಭಿರುಚಿಯಲ್ಲಿ ಹಿರಿಯರೆನಿಸಿದ ಕೆಳದಿ ರಾಜರ ವೀರಭದ್ರ ದೇವಾಲಯ, ಅಘೋರೇಶ್ವರ ದೇವಾಲಯಗಳೂ, ಸ್ವಾದಿಯ ಅರಸ ರಘೋಪನಾಯಕನಿಂದ ಬನವಾಸಿಯ ಮಧುಕೇಶ್ವರನಿಗೆ ಅರ್ಪಿಸಲ್ಪಟ್ಟಿರುವ ಲೋಕವಿಖ್ಯಾತವಾದ ಕಲ್ಲಮಂಚವೂ ಕನ್ನಡಿಗರ ಕಲಾ ನೈಪುಣ್ಯವನ್ನು ಕೈಯೆತ್ತಿ ಸಾರುತ್ತಿವೆ.

ಸಾಹಿತ್ಯ ವಿಚಾರದಲ್ಲಿ ಕರ್ನಾಟಕವು ಯಾರಿಗೂ ತಲೆತಗ್ಗಿಸಬೇಕಾಗಿಲ್ಲವೆಂದು ಹಲವು ವಿದ್ವಾಂಸರು ಹೇಳುವದನ್ನು ನಾವು ಕೇಳಿದ್ದೇವೆ. ಜೈನರ ಪ್ರೌಢ ಸಾಹಿತ್ಯ, ವೀರಶೈವರ ಸರಳ ಸಾಹಿತ್ಯ, ಬ್ರಾಹ್ಮಣರ ಮಧುರ ಸಾಹಿತ್ಯ ಇವು ಮೂರು ಸೇರಿ ನಮ್ಮ ಪ್ರಾಚೀನ ಸಾಹಿತ್ಯವು ತ್ರಿವೇಣೀ ಸಂಗಮದಂತೆ ಅತ್ಯಂತ ಪವಿತ್ರದಾಗಿದೆಯೆಂದು ನಾನು ತಿಳಿದಿದ್ದೇನೆ.

ನಮ್ಮ ನಾಡಿನಲ್ಲಿ ಪಂಡಿತರ ಸಾಹಿತ್ಯದಂತೆಯೇ ಪಾಮರರ ಸಾಹಿತ್ಯವೂ ಬಹಳವಾಗಿದೆ ಎಂಬುದನ್ನು ಹಳ್ಳಿಗಾಡಿನಲ್ಲಿ ನಾವು ಮನಗಾಣ

ಬಹುದು. ಇತ್ತೀಚೆಗೆ ಕರ್ನಾಟಕದ ಹಲವು ವಿದ್ವಾಂಸರು ಈ ಹಳ್ಳಿಗಾಡಿನ ಸಾಹಿತ್ಯವನ್ನು "ಜನಪದ ಸಾಹಿತ್ಯ"ವೆಂಬ ಹೆಸರಿನಿಂದ ಪ್ರಕಟಿಸುತ್ತಿರುವುದು ಪ್ರಶಂಸನೀಯವಾಗಿದೆ. ಚಿನ್ನವು ಅಪೇಕ್ಷಣೀಯವಾದರೂ ಕಬ್ಬಿಣವು ತಿರಸ್ಕರಣೀಯವಲ್ಲದ ಹಾಗೆ.

ಇಪ್ಪತ್ತನೆಯ ಶತಮಾನದ ಪ್ರಾರಂಭದಿಂದ ಇಂಗ್ಲಿಷ್ ಸಾಹಿತ್ಯದಿಂದ ಸ್ಫೂರ್ತಿ ಹೊಂದಿದ ಹಲವು ಪ್ರತಿಭಾಶಾಲಿಗಳೂ ಕನ್ನಡದಲ್ಲಿ "ನವೀನ ಸಾಹಿತ್ಯವೊಂದನ್ನು ಬೆಳಸುತ್ತಿದ್ದಾರೆ. ಈ ಸಾಹಿತ್ಯ ಗ್ರಂಥಗಳು ಇತ್ತೀಚೆಗೆ ಹುಚ್ಚು ಹೊಳೆಯಂತೆ ಹೆಚ್ಚಿಬರುತ್ತಿವೆ. ಗಂಭೀರವೂ ನಿಯಮಬದ್ಧವೂ ಆದ ಪ್ರಾಚೀನ ವಾಙ್ಮಯದ ಮುಂದೆ ವಿಶಾಲವೂ ಸ್ವೈರವೂ ಆದ ಈ ನವೀನ ಸಾಹಿತ್ಯವು ನಲಿಯುತ್ತಿರುವುದು ಯಾರಿಗೆ ತಾನೆ ಸಂತೋಷದಾಯಕವಲ್ಲ? ವಯೋವೃದ್ಧನಾದ ತಂದೆಯ ಮುಂದೆ ಬಿಸಿ ರಕ್ತದ ತರುಣರು ಓಡಾಡಿದರೆ ಗಿರಿಜಾ ಮೀಸೆಯ ಪಾಳೆಯಗಾರನ ಮುಂದೆ ಕಿರಿ ಮೀಸೆಯ ನಾಗರಿಕನು ಅಡ್ಡಾಡಿದರೆ ಬೇಡವೆನ್ನಲಾದೀತೇ?

ಸಹೃದಯರೇ !

ನವೀನ ಸಾಹಿತ್ಯವನ್ನು ಕುರಿತು ನಾನು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ನನಗೆ ಪ್ರಾಚೀನ ಸಾಹಿತ್ಯದಲ್ಲಿ ಭಕ್ತಿ ಹೆಚ್ಚು. ನವೀನ ಸಾಹಿತ್ಯದಲ್ಲಿ ಪ್ರೀತಿ ಹೆಚ್ಚು. ಶಾಸ್ತ್ರ ಬಲವಿಲ್ಲದ ನನ್ನ ಮನಸ್ಸು ಸರಳವಾದ ಕಾಲೋಚಿತವಾದ ನವೀನ ಸಾಹಿತ್ಯದ ಕಡೆಗೆ ಧಾವಿಸುವದು ಸಹಜವಾಗಿಯೇ ಇದೆ. ನನ್ನ ಮನೆಯ ಪುಸ್ತಕಾಲಯದಲ್ಲಿ ಹಳೆಯ ಸಾಹಿತ್ಯಕ್ಕಿಂತಲೂ ಹೊಸ ಸಾಹಿತ್ಯ ಗ್ರಂಥಗಳೇ ಹೆಚ್ಚು ಸ್ಥಳವನ್ನು ಆಕ್ರಮಿಸಿವೆ ಎಂದು ಹೇಳಿದರೆ ನನ್ನ ಮನೋಧರ್ಮವನ್ನು ನೀವು ಸುಲಭವಾಗಿ ಊಹಿಸಬಹುದು.

ಈ ನವೀನ ವಾಙ್ಮಯದಲ್ಲಿ ಸಣ್ಣ ಕಥೆ, ಕಾದಂಬರಿ, ನಾಟಕ ವಿಮರ್ಶೆ ಕವಿತೆ, ಹರಟೆ ಇತ್ಯಾದಿ ಮನೋರಂಜಕ ವಿಚಾರಗಳೇ ಹೆಚ್ಚು ಹೆಚ್ಚಾಗಿ ಬೆಳೆಯುತ್ತಿವೆ. ಚಾರಿತ್ರಕ ಹಾಗೂ ವೈಜ್ಞಾನಿಕ ಗ್ರಂಥಗಳು ಬಹಳ ಕಡಿಮೆಯಾಗಿವೆ. ಜನಜೀವನಕ್ಕೆ ಅವಶ್ಯವಾದ ಮತ್ತು ಅತ್ಯುಪಯುಕ್ತವಾದ ಆರೋಗ್ಯಶಾಸ್ತ್ರ, ಸಂತಾನಶಾಸ್ತ್ರ, ಖಗೋಳಶಾಸ್ತ್ರ, ಭೂಗೋಲಶಾಸ್ತ್ರ, ಭೂಗರ್ಭ ಶಾಸ್ತ್ರ ವ್ಯವಸಾಯಶಾಸ್ತ್ರ, ಸಮಾಜಶಾಸ್ತ್ರ, ರಾಜನೀತಿಶಾಸ್ತ್ರ,

ರಸಾಯನಶಾಸ್ತ್ರ ಮತ್ತು ಭೌತಿಕಶಾಸ್ತ್ರ ಇತ್ಯಾದಿ ಶಾಸ್ತ್ರಗ್ರಂಥಗಳು ಅತ್ಯವಶ್ಯಕವಾಗಿವೆ. ದೇಶಾಭಿಮಾನವನ್ನೂ ವಿಶ್ವಪ್ರೇಮವನ್ನೂ ಬೋಧಿಸುವ ಪುಸ್ತಕಗಳು ಎಷ್ಟುಬೇಗನೆ ಬಂದರೆ ಅಷ್ಟು ಉತ್ತಮ—ಆಧುನಿಕ ಲೇಖಕರು ಇದನ್ನು ಗಮನಿಸಬೇಕೆಂದು ನನ್ನ ಪ್ರಾರ್ಥನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಂಪ, ರನ್ನರಂತಹ ಮಹಾ ಕವಿಗಳೂ ಹರಿಹರ ರಾಘವಾಂಕರಂತಹ ಕ್ರಾಂತಿಕಾರಕ ಕವಿಗಳೂ ಲಕ್ಷ್ಮೀಶ ಕುಮಾರ ವ್ಯಾಸರಂತಹ ಕವಿಕೋಕಿಲೆಗಳೂ ಆಗಿಹೋಗಿದ್ದಾರೆ. ಲೋಕಪ್ರಿಯನಾದ ಸರ್ವಜ್ಞಮೂರ್ತಿಯ ವಚನಗಳು ನವರಸಾಯನವಾಗಿವೆ. ಶಿವಶರಣರ ವಚನಗಳು ಕನ್ನಡ ಉಪನಿಷತ್ತುಗಳೆಂದೇ ಹೆಸರಾಗಿವೆ. ಹರಿದಾಸರ ವಾಙ್ಮಯವು ಜನಜೀವನದ ಉದ್ಧಾರಕ್ಕೆ ಕೈದೀವಿಗೆಯಾಗಿದೆ. ಒಟ್ಟಿನಲ್ಲಿ ನಮ್ಮ ಸಾಹಿತ್ಯದಲ್ಲಿ ಎಲ್ಲವೂ ಇವೆ. ಆದರೆ ಈಗ ನಮ್ಮ ಜೀವನದಲ್ಲಿ ಮಾತ್ರ ಅವು ಕಡಿಮೆಯಾಗಿವೆ.

ಒಂದು ನಾಡಿನ ಉನ್ನತಿಗೆ ಆ ನಾಡಿನ ವಿಭೂತಿಗಳೇ ಕಾರಣೀಭೂತರಾಗಿರುತ್ತಾರೆ. ಮಹಾರಾಷ್ಟ್ರ, ಗುಜರಾತ, ಬಂಗಾಲ ಪ್ರಾಂತಗಳು ಸರ್ವತೋಮುಖವಾದ ಏಳಿಗೆಗೆ ಬರಲು ಆಯಾ ದೇಶದ ವಿಭೂತಿಗಳ ಅವಿಶ್ರಾಂತ ಪ್ರಯತ್ನವೇ ಕಾರಣವಾಗಿದೆ. ಆದ್ದರಿಂದಲೇ ತತ್ತದ್ದೇಶೀಯರು ಅವರನ್ನು ಪ್ರಾಣಸ್ವರೂಪರನ್ನಾಗಿ ಭಾವಿಸಿರುತ್ತಾರೆ. ಸಮರ್ಥ ರಾಮದಾಸ ಸಾಧು, ತುಕಾರಾಮ, ಜ್ಞಾನೇಶ್ವರ, ಏಕನಾಥ, ಛತ್ರಪತಿ ಶಿವಾಜಿ, ನಾನಾ ಫಡ್ನವೀಸ, ಲೋಕಮಾನ್ಯ ತಿಲಕ ಮೊದಲಾದವರನ್ನು ಮರಾಠಿಗರೂ, ಚೈತನ್ಯ, ರಾಜಾ ರಾಮಮೋಹನರಾಯ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಈಶ್ವರಚಂದ್ರ ವಿದ್ಯಾಸಾಗರ, ದೇಶಬಂಧು ದಾಸ ಮೊದಲಾದವರನ್ನು ಬಂಗಾಲಿಗಳೂ, ಮಹಾತ್ಮಾ ಗಾಂಧಿ, ವಿಠ್ಠಲಭಾಯಿ ಪಟೇಲ, ಸರದಾರ ಪಟೇಲ ಇತ್ಯಾದಿಗಳನ್ನು ಗುಜರಾಥಿಗಳೂ ಭಕ್ತಿಭಾವದಿಂದ ಆರಾಧಿಸುವಂತೆ ಕನ್ನಡಿಗರಾದ ನಾವು ನಮ್ಮ ನಾಡಿನ ಮಹಾಪುರುಷರ, ವಿಭೂತಿಗಳ, ತತ್ವಜ್ಞಾನಿಗಳ ನಾಮಸ್ಮರಣೆ ಮಾಡುವದೂ ಗುಣಗಾನ ಮಾಡುವದೂ ನಮ್ಮ ಕರ್ತವ್ಯವಲ್ಲವೆ?

ಸುಮಾರು ಒಂದುವರೆ ಕೋಟಿ ಕನ್ನಡಿಗರೆಲ್ಲರ ಶ್ರದ್ಧಾಭಕ್ತಿಗೆ ಪಾತ್ರರಾದ ಕರ್ನಾಟಕದ ಜೀವರತ್ನಗಳೆನಿಸಿದ ಇಮ್ಮಡಿ ಪುಲಿಕೇಶಿ, ತ್ರಿಭುವನ ವಿಕ್ರಮಾದಿತ್ಯ, ನೃಪತುಂಗ ದೇವ, ಕೃಷ್ಣದೇವರಾಜ, ಸಾಮ್ರಾಟ್ ವಿಷ್ಣು

ವರ್ಧನ, ರಾಜನಿಷ್ಠ ಕುಮಾರ ಲಕ್ಷ್ಮ, ಭಕ್ತಿಭಾಂಡಾರಿ ಬಸವೇಶ್ವರ, ಮಹರ್ಷಿ ವಿದ್ಯಾರಣ್ಯ, ಆಚಾರ್ಯ ಆನಂದತೀರ್ಥ, ನಿಜಗುಣ ಶಿವಯೋಗಿ, ಪುರಂದರದಾಸ, ಕೆಳದಿ ಚನ್ನಮ್ಮಾಜಿ, ಅಕ್ಕ ಮಹಾದೇವಿ, ಮೈಸೂರಿನ ಚಿಕ್ಕದೇವರಾಜ, ಇತ್ಯಾದಿ ವಿಭೂತಿಗಳನ್ನು ಸ್ಮರಿಸಿ ಹರ್ಷಗೊಳ್ಳದ ಕನ್ನಡಿಗನಾರು ? ಈ ಮಹಾಪುರುಷರ ಪುಣ್ಯದಿನಗಳನ್ನೂ ಜಯಂತಿಗಳನ್ನೂ ಆಚರಿಸಿ ಅವರ ಗುಣಗಾನ ಮಾಡುವದೂ ಆದರಿಂದ ದಿವ್ಯ ಸ್ಫೂರ್ತಿಯನ್ನು ಹೊಂದುವದೂ ಕನ್ನಡಿಗರಾದ ನಮ್ಮ ಕರ್ತವ್ಯವಲ್ಲವೇ ?

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶ್ರೀ ನಿಜಗುಣ ಶಿವಯೋಗಿಯು ಅನೇಕ ವಿಧಗಳಿಂದ ಗಣ್ಯನಾದವನೆಂದು ತಿಳಿದುಬರುತ್ತದೆ. ಕನ್ನಡ ಸಾಹಿತ್ಯದಲ್ಲಿ ಒಂದು ವಸ್ತುಕೋಶವನ್ನು ಬರೆದ ಕೀರ್ತಿಯು ಅಂದಿನಿಂದ ಇಂದಿನ ವರೆಗೆ ಶ್ರೀ ನಿಜಗುಣ ಶಿವಯೋಗಿಯ ಹೊರತು ಮತ್ತಾರಿಗೂ ಲಭಿಸಿಲ್ಲ. ಈ ಒಂದು ಕಾರಣದಿಂದಲೇ ಅಖಿಲ ಕನ್ನಡಿಗರೂ ಶ್ರೀ ನಿಜಗುಣ ಶಿವಯೋಗಿಯ ವಿಷಯದಲ್ಲಿ ಎಷ್ಟು ಕೃತಜ್ಞರಾಗಿರಬೇಕೆಂಬುದು ಸ್ಪಷ್ಟವಾಗುತ್ತದೆ. ಈ ದಿವಸ ಶ್ರೀ ನಿಜಗುಣ ಶಿವಯೋಗಿಯ ಚರಿತ್ರೆಯನ್ನೂ ಗ್ರಂಥಗಳನ್ನೂ ಕುರಿತು ಪಂಡಿತರನೇಕರು ವ್ಯಾಖ್ಯಾನ ಮಾಡತಕ್ಕವರಾಗಿರುತ್ತಾರಾದುದರಿಂದ ನಾನು ಈ ವಿಚಾರವನ್ನು ಹೆಚ್ಚು ವಿಸ್ತರಿಸಲಾರೆನು.

ಸಾಹಿತ್ಯವ ಜನ ಜೀವನಕ್ಕೆ ಅವಶ್ಯಕವಾದುದು. ನಾಗರಿಕ ಜನಾಂಗವು ತನ್ನ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಲಲಿತಕಲೆಗಳನ್ನು ಎಂದಿಗೂ ಉಪೇಕ್ಷಿಸಲಾಗದು. ನಮ್ಮ ಪ್ರಾಚೀನರು ಇದಕ್ಕಾಗಿ ಬಹಳ ಶ್ರಮಿಸಿದ್ದಾರೆ. ಅವರ ಸಂತತಿಯವರಾದ ನಾವು ಅವುಗಳನ್ನು ಉಳಿಸಿಕೊಂಡು ಬರುವುದು ನಮ್ಮ ಪವಿತ್ರ ಕರ್ತವ್ಯವಾಗಿದೆ ಎಂದು ತಿಳಿಯಬೇಕು.

ಪ್ರಸ್ತುತದಲ್ಲಿ ಅಖಿಲ ಕರ್ನಾಟಕದಲ್ಲಿಯೂ ಅರುಣೋದಯವಾದ ಚಿಹ್ನೆಯು ಕಂಡುಬರುತ್ತದೆ. ಕನ್ನಡಿಗರಾದ ನಾವು ಮಾಡಬೇಕಾದ ಕೆಲಸಗಳು ಕೆಲವಿವೆ. ಅವುಗಳನ್ನು ನಿರ್ವಹಿಸದ ಹೊರತು ನಾವು ಮುಂದುವರಿಯಲಾರೆವು. ನಮ್ಮ ನಾಡು ನೆರೆಹೊರೆಯ ಪ್ರಾಂತ್ಯಗಳಿಗೆ ಸಮಜೋಡಿಯಾಗಲಾರದು. ಈ ಬಗ್ಗೆ ನನ್ನ ಮನಸ್ಸಿಗೆ ಹೊಳೆದ ಕೆಲವು ವಿಷಯಗಳನ್ನು ಮುಂದೆ ಸಂಗ್ರಹಿಸಿದ್ದೇನೆ.

೧ ಹುಳಗಳ ಪಾಲಾಗುತ್ತಿರುವ ನಮ್ಮ ಪ್ರಾಚೀನ ಗ್ರಂಥಗಳು ಮುದ್ರಣವಾಗಿ ಹೊರಬೀಳಬೇಕು. ೨. ಕನ್ನಡ ಕವಿಗಳು, ಪಂಡಿತರು ಗಮಕಿಗಳು, ಗಾಯಕರು, ವಾಗ್ಮಿಗಳು, ಗ್ರಂಥಕಾರರು, ಕೀರ್ತನಕಾರರು ಇವರಿಗೆಲ್ಲ ಎಲ್ಲೆಲ್ಲಿಯೂ ಪ್ರೋತ್ಸಾಹ ದೊರೆಯಬೇಕು. ೩. ಕನ್ನಡ ಪತ್ರಿಕೆಗಳು ಸರ್ವ ವಿಧದಲ್ಲಿಯೂ ಏಳಿಗೆಯನ್ನು ಹೊಂದಬೇಕು. ಕನ್ನಡಿಗರಲ್ಲಿ ವಾಚನಾಭಿರುಚಿಯು ಸಾಸಿರ್ಮಡಿಯಾಗಿ ಬೆಳೆಯಬೇಕು. ೪ ಕನ್ನಡ ದೇಶದ ಕೈಗಾರಿಕೆ ವ್ಯಾಪಾರ ವ್ಯವಸಾಯ ಮೊದಲಾದವುಗಳು ಅಭಿವೃದ್ಧಿಯಾಗಬೇಕು. ೫. ಕನ್ನಡಿಗರೆಲ್ಲರೂ ಒಂದು ವಿಶ್ವವಿದ್ಯಾನಿಲಯದಲ್ಲಿ ಐಕ್ಯಗೊಳ್ಳಬೇಕು. ೬. ಕರ್ಣಾಟಕ ಸಾಹಿತ್ಯ ಪರಿಷತ್ತು ಕರ್ನಾಟಕ ಇತಿಹಾಸ ಮಂಡಲ, ಕರ್ನಾಟಕ ವಣಿಕ್ ಸಂಘ ಮೊದಲಾದ ಸಂಸ್ಥೆಗಳು ಸರ್ವತೋಮುಖವಾಗಿ ಬೆಳೆಯಬೇಕು.

ಈ ನಮ್ಮ ಬಯಕೆಗಳೆಲ್ಲವೂ ಕೈಗೂಡಿದರೆ ಅಂದು ನಮ್ಮ ಕರ್ನಾಟಕವು ಕಂಗೊಳಿಸಿತೆಂದು ನಾನು ನಂಬಿದ್ದೇನೆ. ನಮ್ಮ ಸಾಹಿತ್ಯದ ಸುಗ್ಗಿಯು ಕನ್ನಡಿಗರನ್ನು ಕೊಂಚವಾದರೂ ಹುರಿದುಂಬಿಸಿದರೆ ನಮ್ಮ ಶ್ರಮವು ಸಫಲವಾದೀತೆಂದು ನಾನು ಭಾವಿಸುತ್ತೇನೆ.

ಮುಖ್ಯವಾಗಿ ಒಂದು ಸಮಾಜವಾಗಲಿ ಸಾಹಿತ್ಯವಾಗಲಿ ಏಳಿಗೆಯನ್ನು ಹೊಂದಬೇಕಾದರೆ ಅದಕ್ಕೆ ರಾಜಾಶ್ರಯವಿರಬೇಕು. ನಮ್ಮ ಕನ್ನಡ ಸಾಹಿತ್ಯವು ಪೂರ್ವದಿಂದಲೂ ಬಹುಮಟ್ಟಿಗೆ ಅರಸರ ಬೆಂಬಲದಿಂದಲೇ ಮುಂದುವರಿದಿದೆಂಬುದನ್ನು ನಾವು ಕನ್ನಡ ಕವಿಚರಿತ್ರೆಯಿಂದ ತಿಳಿಯಬಹುದು. ನಮ್ಮ ಮೈಸೂರಿನ ಅರಸರಲ್ಲಿ ಚಿಕ್ಕದೇವರಾಜ ಒಡೆಯರು ಮುಮ್ಮಡಿ ಕೃಷ್ಣರಾಜ ಒಡೆಯರು ಕನ್ನಡ ಭಾಷೋದ್ಧಾರಕರೂ ಕವಿಶ್ರೇಷ್ಠರೂ ಎಂದು ಹೆಸರಾಗಿರುತ್ತಾರೆ. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮಾನ್ ನಾಲ್ಮಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಪ್ರಭುಗಳೂ, ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್‌ರವರೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಉದ್ಧಾರಕ್ಕೆ ನೀಡುತ್ತಿರುವ ಸಹಾಯವು ಸ್ತುತ್ಯರ್ಹವಾಗಿದೆ.

ರಾಜಕೀಯ ಉನ್ನತಾಧಿಕಾರದಲ್ಲಿದ್ದು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಮೇಲ್ಮೆಗೆ ಸತತ ಪ್ರಯತ್ನ ಮಾಡುತ್ತಿರುವ ನಮ್ಮ ಸಂಸ್ಥಾನದ ಮಂತ್ರಿಶ್ರೇಷ್ಠರಾದ ಅಮೀನ ಉಲ್ ಮುಲ್ಕ ಸರ್ ಮಿರ್ಜಾ ಇಸ್ಮಾಯಿಲ್ ಸಾಹೆ

ಬರನ್ನೂ ಬೊಂಬೈ ಸರಕಾರದ ವಿದ್ಯಾಖಾತೆಯ ಮಂತ್ರಿಗಳಾದ ನಾಮದಾರ ದಿವಾನ ಬಹದ್ದೂರ್ ಎಸ್. ಟಿ. ಕಂಬಳಿಯವರನ್ನೂ, ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ. ಎ. ಬಾರ-ಎಟ್-ಲಾ ಇವರನ್ನೂ ನಾನು ಈ ಸಮ್ಮೇಲನದಲ್ಲಿ ಸ್ಮರಿಸದಿರಲಾರೆನು.

ಕನ್ನಡಕ್ಕಾಗಿಯೇ ತಮ್ಮ ಆಯುಷ್ಯವನ್ನು ಸವೆಸುತ್ತಿರುವ ಅಖಿಲ ಕರ್ನಾಟಕದ ಪ್ರೀತಿವಿಶ್ವಾಸಗಳಿಗೆ ಪಾತ್ರರಾದ ಶ್ರೀಮಾನ್ ಬಿ. ಎಮ್. ಶ್ರೀಕಂಠಯ್ಯನವರು, ಶ್ರೀಮಾನ್ ಡಿ. ವಿ. ಗುಂಡಪ್ಪನವರು, ಶ್ರೀಮಾನ್ ರಾವಸಾಹೇಬ ಹಳಕಟ್ಟಿ ವಕೀಲರು, ಶ್ರೀಮಾನ್ ಪಂಜೆ ಮಂಗೇಶ ರಾಯರು, ಶ್ರೀಮಾನ್ ಆಲೂರು ವೆಂಕಟರಾಯರು ಇತ್ಯಾದಿ ಮಹಾ ಪುರುಷರನ್ನು ವಂದಿಸುವದು ನಮ್ಮೆಲ್ಲರ ಕರ್ತವ್ಯವಾಗಿದೆ.

ಕನ್ನಡ ಬಂಧುಗಳೇ! ಹಿಂದೆ ಹೇಳಿರುವಂತೆ ನನಗೆ ಕನ್ನಡದಲ್ಲಿ ಪಾಂಡಿತ್ಯವಿಲ್ಲ; ನನ್ನಲ್ಲಿ ವಿದ್ಯಾಪ್ರಾಥಿಮೆಯಾಗಲಿ, ವಾಕ್ಯರಚನಾಚಾತುರ್ಯವಾಗಲಿ ಇಲ್ಲ. ಇನ್ನು ಬಹಳ ಹೊತ್ತು ನಿಮ್ಮನ್ನು ತಡೆದು ಬೇಸರಗೊಳಿಸಲಾರೆನು. ಈ ಮಹೋತ್ಸವಗಳಿಗೆ ಸ್ವಾಗತ ಸಂಘದ ಸದಸ್ಯರ ಸಹಾಯಸಹಾನುಭೂತಿಯೂ ಇಲ್ಲಿಗೆ ಆಗಮಿಸಿರುವ ವಿದ್ವಾಂಸರ ಸಹೃದಯತೆಯೂ ಶ್ರೀ ಶಿವಾಚಾರ್ಯ ಚನ್ನಬಸವ ಮಹಾಸ್ವಾಮಿಗಳ ದಿವ್ಯಾನುಗ್ರಹವೂ ಕಾರಣವಾಗಿವೆ.

ಕಟ್ಟಕಡೆಯಲ್ಲಿ ಒಂದು ಮಹತ್ವದ ಮಾತನ್ನು ನಿಮ್ಮ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಮೊನ್ನೆ ಬೊಂಬಾಯಿಯಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಲನದ ಪ್ರಾರಂಭೋತ್ಸವ ಕಾಲದಲ್ಲಿ ಘನವಂತರೂ ಕರ್ನಾಟಕಕ್ಕೆ ಅಲಂಕಾರಭೂತರೂ ಆದ ದಿವಾನ ಬಹದ್ದೂರ ಎಸ್. ಟಿ. ಕಂಬಳಿಯವರು ತಮ್ಮ ಪ್ರಾರಂಭ ಭಾಷಣದಲ್ಲಿ ಈ ಮುಂದೆ ಹೇಳುವ ವಾಕ್ಯರತ್ನವನ್ನು ಉಸುರಿದ್ದಾರೆ.

"ಕನ್ನಡ ಕವಿಗಳಲ್ಲಿ ಒಬ್ಬನಾದರೂ ಕವೀಂದ್ರನಾದ ರವೀಂದ್ರನಾಥನಂತೆ ನೋಬೆಲ್ (Nobel) ಪಾರಿತೋಷಕವನ್ನು ಸಂಪಾದಿಸಿ ಕನ್ನಡ ನುಡಿಯ ಕೀರ್ತಿಯನ್ನು ಎಲ್ಲ ದಿಕ್ಕುಗಳಲ್ಲಿಯೂ ಹಬ್ಬುವಂತೆ ಮಾಡಿದ್ದನ್ನು ನೋಡಬೇಕೆಂಬದು ನನ್ನ ಮಹತ್ವಾಕಾಂಕ್ಷೆ."



# ಮಹಾದೇವಿಯಕ್ಕನ ವಚನಾಮೃತ.

(ಲೇಖಕ:— ಎಸ್. ಎಸ್, ಮಾಳವಾಡ ಎಮ್, ಎ. )

ಕನ್ನಡನಾಡಿನ ಹೆಸರನ್ನು ದೇದೀಪ್ಯಮಾನವಾಗಿ ಬೆಳಗಬಲ್ಲ ವ್ಯಕ್ತಿಗಳಲ್ಲಿ ಮಹಾದೇವಿಯಕ್ಕನ ಹೆಸರು ಅಗ್ರಸ್ಥಾನದಲ್ಲಿ ಬರುತ್ತದೆ. ಈ ವೀರ ವಿರಕ್ತೆಯ ಜೀವನ ಚರಿತೆಯು ಮಹಿಲಾ ಪ್ರಪಂಚಕ್ಕೊಂದು ಆದರ್ಶ, ಭಾರತೀಯರಿಗೆ ಭೂಷಣಪ್ರಾಯ, ಕನ್ನಡಿಗರಿಗೆ ಅಭಿಮಾನ ಪ್ರದ, ಪುರುಷರನ್ನು ಬೆರಗುಗೊಳಿಸುವಂತಹದು, ಹಿರಿಯರನ್ನು ಮೆಚ್ಚಿಸುವದು. ಕಿರಿಯರನ್ನು ಹುರಿದುಂಬಿಸುವದು. ಏರುಂ ಜವ್ವನದಲ್ಲಿ ಅರಸನ ಮೋಹದ ಮಡದಿಯಾಗಿ ಸುಖಸಾಮ್ರಾಜ್ಯದ ರಾಣಿಯಾಗಬಹುದಾಗಿದ್ದ ಅವಕಾಶವನ್ನು ಒದ್ದೋಗೆದು, ವೀರವಿರಕ್ತ ವ್ರತವನ್ನು ಕೈಕೊಳ್ಳುವ ಧೃಡ ಮನಸ್ಸಿನ ನಿಶ್ಚಯವು ಯಾರನ್ನಾದರೂ ಬೆರಗುಗೊಳಿಸದೆ ಇರದು. ಅರಸನ ಮೋಹದ ಮಡದಿಯಾಗುವ ಭಾಗ್ಯವನ್ನು ಅಲ್ಲಗಳೆದ ಅವಳು ವೀರಶೈವ ಅಭಿಮಾನದ ನಿಧಿಯಾಗಿ ಕನ್ನಡಿಗರ ಮೋಹದ ಕಣಿಯಾಗಿ ಭಾರತದ ಭೂಷಣವಾಗಿ ಬೆಳಗಿದಳು ! ಇಂಥ ಮಹಾನುಭಾವಳ ಕಡೆಗೆ ಕನ್ನಡಿಗರ ಚಿತ್ತವು ಇತ್ತೀಚಿಗೆ ಹೆಚ್ಚಾಗಿ ಆಕರ್ಷಿಸಲ್ಪಟ್ಟದ್ದು ಶುಭ ಚಿನ್ಹವೇ ಎಂದು ಹೇಳಬೇಕು. ಅಕ್ಕನ ಗುಣಗಾನವು ಬರಿ ಹಬ್ಬಹುಣ್ಣಿವೆಯ ಮಾತಾಗದೆ, ಕೇವಲ ಔಪಚಾರಿಕ ಉತ್ಸವದ ಪ್ರಸಂಗವಾಗದೆ, ಉಚ್ಚ ಜೀವನದ ಕೈದೀವಟಿಗೆಯೂ ಮಹಿಲಾಪ್ರಪಂಚದ ಆದರ್ಶಸಾಧನವೂ ಆಗಬೇಕಾದರೆ, ಅಕ್ಕನ ಜೀವನ ಚರಿತೆಯ ತಿರುಳನ್ನು ಅವಳ ಬೋಧೆಯ ಬೆಳಗನ್ನು ಅರಿಯಬೇಕಾದುದು ಅತ್ಯವಶ್ಯ. ಅಂತೆಯೇ ಈ ಬರಹವಲ್ಲಿ **ಮಹಾದೇವಿಯಕ್ಕನ ವಚನಾಮೃತದ** ಪರಿಚಯವನ್ನು ಮಾಡಲೆತ್ನಿಸಿರುವೆನು. ಅವಳ ಜೀವನ ಮಾರ್ಗವು ಅವಳನ್ನು ವೀರವಿರಕ್ತೆಯನ್ನಾಗಿ ಮಾಡಿದೆ. ಅವಳ ವಚನಗಳು ಉಜ್ವಲಸಾಹಿತಿಯ ಶ್ರೇಣಿಗೆ ಒಯ್ದಿವೆ. ಅವಳ ಬೋಧನೆಯ ರೀತಿಯು ಅವಳನ್ನು ಶ್ರೇಷ್ಠ ತತ್ವವೇತ್ತಳನ್ನಾಗಿ ಮಾಡಿವೆ. ಹನ್ನೆರಡನೆಯ ಶತಮಾನದ ಕ್ರಾಂತಿಯೆಂಬ ಮಂಥನದಿಂದ ಉದ್ಭವಿಸಿದ ಅನೇಕ ರತ್ನಗಳಲ್ಲಿ ಅಕ್ಕನು ಶಿರೋಮಣಿ. ಅಕ್ಕನವರ ಸಲುವಾಗಿ ದೊರೆಯುವ ಹಳೆಯ ಸಾಹಿತ್ಯ ಅಲ್ಪಸ್ವಲ್ಪವಿದೆ. ಅವುಗಳಲ್ಲಿ ಚಾಮರಸನ ಪ್ರಭುಲಿಂಗಲೀಲೆ ಹರಿಹರದೇವನ ಮಹಾದೇವಿಯಕ್ಕನ ರಗಳೆ ಇವೆರಡು

ಈಗಲೇ ಪ್ರಸಿದ್ಧವಾಗಿವೆ. ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣವು ಇನ್ನೂ ಬೆಳಕನ್ನು ಕಂಡಿಲ್ಲ. ಹೊಸ ಸಾಹಿತ್ಯವು ಹೊರಡಲು ಇದೀಗ ಪ್ರಾರಂಭ ವಾಗಿದೆ. ಪಂಡಿತ ಮಹಾದೇವ ಶಾಸ್ತ್ರಿಗಳು ಕಾರ್ಯಪ್ರಾರಂಭಮಾಡಿದ್ದಾರೆ. ಸರಸ್ವತಿಯ ಸಂಪಾದಕಿಯರು ಒಂದು ಲೇಖ ಬರೆದಿದ್ದಾರೆ. ಪ್ರೋ ಕುಂದಣ ಗಾರರು ಒಂದು ಅಚ್ಚುಕಟ್ಟಾದ ಲೇಖವನ್ನು ಪ್ರಕಟಿಸಿದ್ದಾರೆ. ಅಲ್ಲಲ್ಲಿ ಪತ್ರಿಕೆಗಳಲ್ಲಿ ಬಿಡಿ ಲೇಖಗಳು ಬಂದಿವೆ. ಆದರೆ ಇದು ಸಾಲದು, ಈ ವೀರ ವಿರಕ್ತೆಯು ಆದರ್ಶ ಜೀವನವನ್ನು ಪ್ರಕಟಿಸುವ ಕಾರ್ಯವನ್ನು ವೀರಶೈವರೂ ಕನ್ನಡಿಗರೂ ನೆರವೇರಿಸಬೇಕಾಗಿದೆ. ನನ್ನೀ ಲೇಖವು ಅಕ್ಕನ ವರ ತತ್ವಬೋಧನೆಯ ಪರಿಚಯ ಮಾಡಿಕೊಡುವ ಅಳಲಿ ಪ್ರಯತ್ನ ಮಾತ್ರವು. ಈ ಪ್ರಯತ್ನಕ್ಕೆ ರಾ. ಸಾ. ಹಳಕಟ್ಟಿಯವರು ಪ್ರಕಟಿಸಿದ ಗ್ರಂಥವು ಆಧಾರವಾಗಿಯೂ, ನನ್ನಿಂದ ಲೇಖಗಳನ್ನು ಬರಿಯಿಸುವ ಅವರ ಉತ್ತೇಜನಕರ ಒತ್ತಾಸೆಯು ಕಾರಣಪ್ರಾಯವಾಗಿಯೂ ಪರಿಣ ಮಿಸಿವೆ. ಮಹಾದೇವಿಯಕ್ಕನ ವಚನಗಳನ್ನು ಒಂದು ಪದ್ಧತಿಯಲ್ಲಿ ಆರಿಸಿ ವಿಭಾಗಿಸಿ ಅವುಗಳ ಸಾರವನ್ನು ಇಲ್ಲಿ ಕೊಡುತ್ತೇನೆ.

ಅಕ್ಕನವರ ವ್ಯಕ್ತಿ ವೈಶಿಷ್ಟ್ಯವು ಅವಳು ಪ್ರಾಪಂಚಿಕ ಬಂಧನ ವನ್ನು ಹರಿದೊಗೆದುದರಲ್ಲಿದೆ, ಅಕ್ಕನು ಸಂಸಾರವು ಹೇಯವೆಂದು ಹೀಗ ಳಿಸಿದ್ದಾಳೆ.

ಮಾನವನು ಸಂಸಾರದಲ್ಲಿ ಮನ ಬಂದುದ ಬಯಸಿ ಬೇವುತ್ತಿರುವದು. ತೆರಣಿಯಹುಳವು ಎಣ್ಣೆಯ ಜಿಗಟನಲ್ಲಿದ್ದುಕೊಂಡು ತನ್ನ ನೂಲಿನಿಂ ದಲೇ ಸುತ್ತಲ್ಪಟ್ಟು ಸಾಯುವಂತೆ ಇದೆ. ಇಂತಹ ಮನದ ದುರಾಶೆ ಯನು ಬಿಡಿಸಿ ಸನ್ಮಾರ್ಗವನ್ನು ತೋರಿಸುವವನು ಚನ್ನಮಲ್ಲಿಕಾರ್ಜು ನನು ( ಈ ಅಂಕಿತವನ್ನು ವ್ಯತ್ಯಾಸಮಾಡಿಕೊಂಡರೆ ಈ ತತ್ವಗಳು ಎಲ್ಲ ಪಂಥದವರಿಗೂ ಅನ್ವಯಿಸುವವು. ನಮ್ಮ ಶಿವಶರಣರ ತತ್ವಬೋಧೆಯು ವಿಶ್ವಧರ್ಮದ ತಳಹದಿಯಂತಿದೆ. ) ಸಂಸಾರವು ಬೆನ್ನಬಿಡದೆ ಕಾಡುತ್ತದೆ. ಅದರ ತೊಂದರೆಯಿಂದ ತಪ್ಪಿಸಿಕೊಳ್ಳಲಿಕ್ಕೆ ಏನೊಂದೂ ಮಾರ್ಗವು ತೋಚುವದಿಲ್ಲ. ಬೆಂದ ಒಡಲ ಸಂತೈಸಿಕೊಳ್ಳಲು ಮಾನವನಿಗೆ ಶಕ್ಯವಿಲ್ಲ. ಆದುದರಿಂದ ಚನ್ನಮಲ್ಲಿಕಾರ್ಜುನನ ಮೊರೆಹೋಗಲೇಬೇಕು. ಕಾಯುವದಾ ಗಲಿ ಕೊಲ್ಲುವದಾಗಲಿ ಅತನ ಧರ್ಮ.

ಸಂಸಾರವು ಒಂದು ಶತೃವಿನಂತೆ ಅದೆ. ವಂಶಪರಂಪರವಾಗಿ ಹುಡು ಕಿಕೊಂಡು ಬೆನ್ನುಹತ್ತಿ ಬರುತ್ತದೆ. ಬೇಟೆಗಾರನು ಮೃಗವನ್ನು ಬೆನ್ನಟ್ಟ

ವಂತೆ ಮಾನವನ ಬೆಂಬತ್ತಿ ಬಾಧೆಕೊಡುತ್ತದೆ. ಕೊಲ್ಲುತ್ತಿದೆ. ಕಾರಣ ದೇವನ ಮೊರೆಹೋಗಲೇಬೇಕು.

ಸಂಸಾರವು ಮಾಯದ ಮದ ಕಾಯದ ಕತ್ತಲೆ ಜೀವದ ಜಂಜಡ. ಆ ಮದವನ್ನು ಮುರಿದು, ಕತ್ತಲೆಯನ್ನು ಕಳೆದು, ಜಂಜಡವ ಬಿಡಿಸಿ ಸುತ್ತಿದ ಪ್ರಪಂಚವನ್ನು ಬಿಡಿಸುವಧರ್ಮ ಚನ್ನಮಲ್ಲಿಕಾರ್ಜುನದು.

ಮಾನವನು ಸಂಸಾರವನ್ನು ಮೆಚ್ಚುವದು ಹಾಸ್ಯಾಸ್ಪದವಾಗಿದೆ. ಹೊನ್ನೆನ್ನದು ಮಣ್ಣೆನ್ನದು ಹೆಣ್ಣೆನ್ನದು ಎಂದು ತಳಮಳಿಸುವ ಸ್ಥಿತಿಯು ಅಗಸನು ಊರವರ ಸೀರೆಗೆ ತಡಬಡಗೊಂಡಂತಿದೆ. ಯಾರಯಾರವೋ ಸೀರೆಗಳು ತನ್ನವೆಂದು ಹಂಬಲಿಸುವ ಅಗಸನ ಹುಚ್ಚುತನವನ್ನೇ ಸಂಸಾರವು ಸ್ಥಿರವೆಂದು ನೆಚ್ಚಿದ ಮಾನವನು ಅನುಸರಿಸುತ್ತಾನೆ. ಅಂತಹನು ಈ ಭ್ರಮೆಯಿಂದ ದೇವರನ್ನು ಅರಿಯುವದೇ ಮರೆತು ಕೆಟ್ಟು ಹೋಗುತ್ತಾನೆ. ಪಾಪ-ಪುಣ್ಯಗಳನ್ನು ಅರಿಯುವದಕ್ಕೆ ಮೊದಲು ಅನೇಕ ಭವಂಗಳಲ್ಲಿ ಮಾನವನು ಬರುವನೆಂದು ಅಕ್ಕನು ಹೇಳುತ್ತಾಳೆ. ಒಂದಲ್ಲ, ಎರಡಲ್ಲ ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ತಾನು ಜನಿಸಿದಳೆಂದೂ ಆ ಮೇಲೆ ಮಾತ್ರ ಚನ್ನಮಲ್ಲಿಕಾರ್ಜುನನನ್ನು ನಂಬಿ ಶರಣು ಹೊಕ್ಕೆನೆಂದೂ ಹೇಳುತ್ತಾಳೆ. ದೇವರನ್ನು ಮೊರೆಹೊಕ್ಕು ಬಂಧನ ಬಿಡಿಸುವಂತೆ ಆತನನ್ನು ಬೇಡುವದೊಂದೇ ಮಾರ್ಗ ಮಾನವನಿಗೆ. ಮಾಯದ ಸಂಸಾರದಲ್ಲಿ ಶಿಲುಕಿದ ಮೇಲೆ ಭೇದಿಸಲರಿಯನು ಮಾನವನು. ದೇವನೇ ಆ ಮಾಯೆಯ ಮುಸುಕನ್ನು ತೆಗೆಯಬಲ್ಲನು.

ಕ್ಕನಿಗೆ ದೇಹದ ಅಭಿಮಾನವು ತಿಲಮಾತ್ರವೂ ಇಲ್ಲ. ಅದನ್ನು ಅವಳು ಒಳ್ಳೇ ಹ್ಯೇಯವಾದ ರೀತಿಯಲ್ಲಿ ಕಾಡಿದ್ದಾಳೆ. ಅಸಹ್ಯಪಟ್ಟು ಕೊಂಡಿದ್ದಾಳೆ. ದೇಹವು ಅಮೇಧ್ಯದ ಹಡಿಕೆ. ಮೂತ್ರದ ಕುಡಿಕೆ ಎಲುವಿನ ತಡಿಕೆ ಇಂತೀ ಹೊಲಸಿನಿಂದ ಕೂಡಿದ ದೇಹವನ್ನು ಸುಡಲಿ. ಅಭಿಮಾನವಿಡಿದು ಕೆಡಬಾರದು. ಆದುದರಿಂದ ಚೆನ್ನಮಲ್ಲಿಕಾರ್ಜುನನನ್ನು ಅರಿಯುವದು ಯೋಗ್ಯವಾದರೀತಿ.

ಸಂಸಾರದಲ್ಲಿಯ ಮಾಯೆಯು ಹಲವು ವಿಧವಾಗಿದೆ- ಅದು ಕಾಯಕ್ಕೆ ನೆಳಲಾಗಿ, ಪ್ರಾಣಕ್ಕೆ ಮನವಾಗಿ, ಮನಕ್ಕೆ ನೆನಹಾಗಿ, ನೆನಹಿಗೆ ಅರಿವಾಗಿ ಕಾಡುವದು. ಆಗದ ಜಂಗುಳಿಗೆ ಬೆಂಗೋಲನ್ನೇ ಎತ್ತಿರುವದು. ದೇವನೊಡ್ಡಿದ ಈ ಮಾಯೆಯನ್ನು ಯಾರು? ತಾನೇ ಗೆಲ್ಲಬಲ್ಲರು. ಮಾಯೆಯು ಪುರುಷನ ಮುಂದೆ ಸ್ತ್ರೀಯೆಂಬ ಅಭಿಮಾನವಾಗಿ

ಸ್ತ್ರೀಯು ಮುಂದೆ ಪುರುಷನೆಂಬ ಅಭಿಮಾನವಾಗಿ ಕಾಡುವದು. ಶರಣರ ಚರಿತ್ರವು ಲೋಕವೆಂಬ ಮಾಯೆಗೆ ಮರುಳಾಗಿ ತೋರುವದು. ಆದರೆ ಚನ್ನಮಲ್ಲಿಕಾರ್ಜುನನ ಒಲಿದರೆ ಮಾಯೆ ಇಲ್ಲ, ಮರಹು ಇಲ್ಲ, ಅಭಿಮಾನವು ಇಲ್ಲ, ಎಲ್ಲವೂ ತೊಲಗುವವು, ಮಾಯೆಯು ಬಿಟ್ಟೆನೆಂದರೂ ಬಿಡದು. ಬೆಂಬತ್ತಿ ಕಾಡುವದು, ಯೋಗಿಗೆ ಯೋಗಿಣಿಯಾಗಿ ಸನ್ಯಾಸಿಗೆ ಸನ್ಯಾಸಿನಿಯಾಗಿ ಯತಿಗೆ ಪಿನಾಕಿಯಾಗಿ ಕಾಡುವದು. ಆದರೆ ಚನ್ನಮಲ್ಲಿಕಾರ್ಜುನ ದೇವನ ಬಲವಿರುವದರಿಂದ ಅಕ್ಕನು ಮಾಯೆಗೆ ಅಂಜುವದಿಲ್ಲ ಮಾಯೆಯು ಅಸಾಮಾನ್ಯನಾದುದು. ಈ ಮಾಯೆಯು ಹರಿಯ ನುಂಗಿತ್ತು, ಬ್ರಹ್ಮನ ನುಂಗಿತ್ತು, ಇಂದ್ರನ ನುಂಗಿತ್ತು, ಚಂದ್ರನ ನುಂಗಿತ್ತು, ಬಲ್ಲೆನೆಂಬ ಬಂಟರ ನುಂಗಿತ್ತು, ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು.

ಸಂಸಾರವೆಂಬದು ಸಾಯುವ ಪ್ರಪಂಚದ ಪುತ್ಥಳಿ. ಅದನ್ನು ತೆಗೆದು ಕೊಂಡು ಏನು ಮಾಡುವದು? ಮಾಯೆಯು ಸಂಬಂಧಿಯಾದ ಮರಿ ಭಾಂಡ ಆತುರದ ಭವನಿವಾಸ. ಆದರಿಂದೇನಾಗಬೇಕಾಗಿದೆ? ಬೆರಳಿನಿಂದ ತಾಳೀ ಹಣ್ಣನ್ನು ಹಿಸುಕಬಹುದಾದರೂ ಆದನ್ನು ತಿನ್ನಬಹುದೇ?

ಸಂಸಾರವು ಹೇಯವಾದುದು ಕ್ಷಣಿಕವಾದುದು ದುಃಖಮಯವಾದುದು ಎಂಬುದನ್ನರಿತ ಅಕ್ಕನ ಮನವು ಚನ್ನಮಲ್ಲಿಕಾರ್ಜುನನ ಅಡಿಗಳಿಗೆ ಅಭಿಮುಖವಾಯಿತು. ಸಂಸಾರವು ಅಕ್ಷಣಿಕವೆಂದರಿತಮೇಲೆ ನಿತ್ಯವೂ ಸುಖಪ್ರದವೂ ಅಪೇಕ್ಷಣೀಯವೂ ಆದ ವಸ್ತುವನ್ನು ಅರಿಯಬೇಕಾಗುವದು. ಅಂತಹ ವಸ್ತುವೆಂದರೆ ದೇವರು. ಅಕ್ಕನ ಇಷ್ಟದೇವತೆ ಚನ್ನಮಲ್ಲಿಕಾರ್ಜುನನು. ಪರಮಾತ್ಮನ ಸ್ವರೂಪದ ಜ್ಞಾನವು ಮೋಕ್ಷಸಾಧನೆಯಲ್ಲಿಯ ಮೆಟ್ಟಲು ಆದುದರಿಂದ ಇನ್ನು ಪರಮಾತ್ಮನ ಸ್ವರೂಪದ ವಿಷಯವಾಗಿರುವ ವಚನಗಳನ್ನು ಅರಿಯುವಾ.

ಸರ್ವಸಾಧಾರಣವಾಗಿ ವಚನಕಾರರೆಲ್ಲ ದೇವರ ಸ್ವರೂಪವನ್ನು ಒಂದೇ ರೀತಿಯಾಗಿ ವರ್ಣಿಸುತ್ತಾರೆ. ದೇವರ ಅವ್ಯಕ್ತ ಸ್ವರೂಪವನ್ನು ಸುಂದರವಾದ ಉಪಮೆಯಲ್ಲಿ ಬಸವಣ್ಣನವರು "ಶಶಿಯೊಳಗಿನ ರುಚಿಯಂತೆ" "ಕನ್ನೆಯ ಸ್ನೇಹದಂತೆ" ಎಂದು ಹೇಳಿದ್ದಾರೆ. ಅವರು ಹೇಳಿದುದು ಹೀಗೆ— ಚನ್ನಮಲ್ಲಿಕಾರ್ಜುನನ ನಿಲವನ್ನು ಅರಿಯುವದು ಸುಲಭವಲ್ಲ. ಅವನು ಭಾವದ ಮರೆಯ ಬ್ರಹ್ಮನಾಗಿದ್ದಾನೆ. ಆತನ ಸ್ವರೂ

ಪವು ನೆಲದಲ್ಲಿ ಅಡಗಿದ ದ್ರವ್ಯದಂತೆ, ಹಣ್ಣಿನೊಳಗಿನ ರುಚಿಯಂತೆ, ಶಿಲೆಯಲ್ಲಿ ಅಡಗಿರುವ ಸುವರ್ಣದಂತೆ, ಚಿನ್ನದೊಳಗಿನ ಬಣ್ಣದಂತೆ ಇದೆ. ದೇವನ ಸ್ವರೂಪವನ್ನು ಹೆಚ್ಚು ಅರ್ಥವತ್ತಾಗಿ ಹೇಳಬೇಕಾದರೆ ಅಕ್ಕನವರು "ತಿಲದ ಮರೆಯ ತೈಲದಂತೆ" ಎಂದು ಹೇಳುತ್ತಾರೆ. ಎಳ್ಳಿನಲ್ಲಿ ಎಣ್ಣೆ ಇದೆ. ಆದರೆ ಅದು ವ್ಯಕ್ತವಾಗಿಲ್ಲ. ಹೊರಗಣ್ಣಿಗೆ ಕಾಣುವದಿಲ್ಲವೆಂದು ಅದರ ಅಸ್ತಿತ್ವವನ್ನು ಅಲ್ಲಗಳೆಯಲಾಗುವದಿಲ್ಲ. ಬಹುಶಃ ದೇವರ ಸ್ವರೂಪವನ್ನು ಇದಕ್ಕೂ ಸುಂದರವಾಗಿ ಅರ್ಥವತ್ತಾಗಿ ಮತ್ತೆ ಯಾರೂ ಹೇಳಿದಂತೆ ಕಾಣುವದಿಲ್ಲ. ಅಕ್ಕನವರ ವಿಚಾರಗಳ ಗಾಂಭೀರ್ಯವನ್ನು ವಚನ ಸೌರಭವನ್ನು ನಾವು ಕಾಣುವದು ಇಂತಹ ಉಪಮೆಯುಗಳಿಂದಲೇ. ಅವರು ಅವುಗಳಿಂದ ಉದಾತ್ತಕವಿಗಳ ಪಟ್ಟಕ್ಕೆ ಬರುತ್ತಾರೆ. ಉಜ್ವಲಜೀವನ, ಗಂಭೀರ ವಿಚಾರ, ಬೆಡಗಿನನುಡಿ ಸಾಮ್ರಾಜ್ಞಿಯ ಸುಖವನ್ನು ನಿರಾಕರಿಸುವ ವಿರಕ್ತವೃತ್ತಿ ಇವುಗಳ ಮಾದರಿಯನ್ನು ಅಕ್ಕನವರಲ್ಲಿ ಕಾಣಬಹುದು. *High thinking, Simple living* ಎಂಬ ಮಾತಿಗೆ ಅಕ್ಕನವರಿಗಿಂತ ಉತ್ತಮ ನಿದರ್ಶನ ದೊರೆಯುವದು ಕಠಿಣವೇ ಸರಿ; ಇರಲಿ.

ಚನ್ನಮಲ್ಲಿಕಾರ್ಜುನನು ಹಲವು ಜಗಂಗಳಲ್ಲಿ ಕೂಡಿಕೊಂಡಿದ್ದರೂ ಆತನ ಪರಿಯು ಬೇರೆಯೇ ಇದೆ. ಒಂದೇ ನೀರಿನಿಂದ ಪೋಷಣೆಗೆ ಪಡೆದ ಲಿಂಬೆ ಮಾವು ಮಾದಲ ಕಬ್ಬು ಬಾಳೆಗಳು ವಿವಿಧ ರುಚಿಯನ್ನು ಪಡೆಯುತ್ತವೆ. ಅಂತೆಯೇ ದೇವನು ಕೂಡ ಬೇರೆ ಬೇರೆ ದ್ರವ್ಯಂಗಳೊಡನೆ ಕೂಡಿದಾಗ ಬೇರೆ ಬೇರೆಯಾಗಿ ಕಂಡರೂ ತನ್ನದೊಂದು ರೀತಿಯನ್ನು ಬೇರೆಯಾಗಿ ಇಟ್ಟುಕೊಂಡಿದ್ದಾನೆ. ಅಕ್ಕನವರ ನುಡಿಯು ಬೆಡಗಿನಲ್ಲಿ ಹೇರಳವಾದ ಅರ್ಥವು ಅಡಕವಾಗಿದೆ. ಈ ನುಡಿಗಳು ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಬೆಲೆಯನ್ನು ತಂದು ಕೊಡುತ್ತವೆ. ವಿಶ್ವದ ವಿಚಾರ ಸರಣಿಗೆ ಕನ್ನಡ ಸಾಹಿತ್ಯವು ಯಾವ ಕಾಣಿಕೆಯನ್ನೂ ಕೊಡಲಾರದು ಎಂಬ *E. P.* ರಾಯಿಸ ಸಾಹೇಬರ ಅಭಿಪ್ರಾಯವನ್ನು ಅಲ್ಲಗಳೆಯಲಿಕ್ಕೆ ಅಕ್ಕನ ನುಡಿಗಳು ಸಾಕು.

ಈ ಸೃಷ್ಟಿಯನ್ನು ದೇವನು ತನ್ನ ವಿನೋದಕ್ಕಾಗಿ ಸೃಷ್ಟಿಸಿದನೆಂದು ಅಕ್ಕನು ಹೇಳುತ್ತಾಳೆ ಆತನಿಗೆ ಜೀವನವೂ ಅಲ್ಲಿಯ ಮಾಯೆಯೂ ಒಂದು ವಿಲಾಸ ಪ್ರಪಂಚ

ಆ ವಿಲಾಸ ಸಾಕಾದರೆ ಮಾಯೆಯ ಪರೆಯನ್ನು ತಾನೇ ಹರಿದು ಹಾಕು ವನು. ತನಗೆ ಬೇಕೆನಿಸುವಷ್ಟು ಕಾಲವೂ ಅದನ್ನು ನಡೆಯಿಸುವನು. ದೇವನ ಆಟದ ಆಳವನ್ನು ನಾವು ಸುಲಭವಾಗಿ ಅರಿಯಲಾರೆವು.

ಅಕ್ಕನವರು ಅದ್ವೈತ ತತ್ವವನ್ನು ಹೇಳುತ್ತಾರೆ. ಆದರೂ ಕೂಡ ಅವರ ಸಿದ್ಧಾಂತವು ವೀರಶೈವರ ವಿಶಿಷ್ಟವಾದ ತತ್ವದ ರೀತಿಯನ್ನೇ ಒಳ ಗೊಂಡಿದೆ.

"ಅದ್ವೈತದಿಂದ ತನ್ನ ತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನನ ಲಿಂಗ ತಾನೇ ಬೇರಿಲ್ಲ" ಎಂಬ ಕಿರಿದು ನುಡಿಯು ಅರ್ಥಭಾರದಿಂದ ಬಗ್ಗಿ ಬಳಕುತ್ತಿದೆ. ವಚನಕಾರರ ತತ್ವವನ್ನು ಸುಲಭವಾಗಿ ಸ್ಪಷ್ಟವಾಗಿ ನಿರ್ದೇ ಶಿಸುತ್ತಿದೆ. ಅಕ್ಕನವರು ಇನ್ನೂ ಮುತ್ತಿನಂತಹ ಮಾತನ್ನು ಹೇಳಿದ್ದಾರೆ. "ಎಲ್ಲ ಎಲ್ಲವನರಿದು ಫಲವೇನಯ್ಯ? ತನ್ನ ತಾನರಿಯಬೇಕಲ್ಲದೆ, ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೇ?"

ಬಣ್ಣವು ಚಿನ್ನದೊಳಗೆ ಅದೆ ಅದರಿಂದ ಅದು ಬೇರೆಯಲ್ಲ. ಅಂತೆಯೇ ಪರಮಾತ್ಮನ ಸ್ವರೂಪ ಚನ್ನಮಲ್ಲಿಕಾರ್ಜುನನು ಎನ್ನೊಳಗೆ ಇದ್ದರೂ ವ್ಯೈದೋರುವದಿಲ್ಲವೆಂದು ಅಕ್ಕನವರು ಅದ್ವೈತವನ್ನು ಹೇಳುತ್ತಾರೆ. ಹಾಲು ತುಪ್ಪವ ನುಂಗಿ ಬೇರೆಯಾಗಬಲ್ಲದೆ? ಸೂರ್ಯಕಾಂತಿಯಲ್ಲಿದ್ದ ಅಗ್ನಿಯನ್ನು ಯಾರು ಭೇದಿಸಬಲ್ಲರು ಅಪಾರ ಮಹಿಮನಾದ ಚನ್ನಮಲ್ಲಿಕಾರ್ಜುನನು ನನ್ನಲ್ಲಿ ಅಡಗಿದ್ದ ರೀತಿಯು ಬೇರಿಲ್ಲದೆ ಕಂಡು ಕಣ್ದೆರೆದೆನೆಂದು ಅಕ್ಕನು ಹೇಳುತ್ತಾಳೆ. ಅಕ್ಕನು ಚನ್ನಮಲ್ಲಿಕಾರ್ಜುನನ ಬಲುಮೆಯ ಸಂಗದಲ್ಲಿದ್ದು ಸ್ವಯಂಲಿಂಗಿಯಾದಳು. ಇದುವೇ ಅವಳ ತತ್ತ್ವದ ತಿರುಳು.

ಇನ್ನು ದೇವರ ಸ್ವರೂಪ ವಿಷಯವಾಗಿ ಅಕ್ಕನವರ ವಿಚಾರಗಳನ್ನು ನೋಡುವ. ಸರ್ವಸಾಮಾನ್ಯವಾಗಿ ದೇವನನ್ನು ಅವರು ನಿರಾಕಾರವೆಂದೇ ಬಣ್ಣಿಸಿದ್ದಾರೆ. ಆದರೆ ಇಷ್ಟದೇವತೆ ಚನ್ನಮಲ್ಲಿಕಾರ್ಜುನನನ್ನು ಬಣ್ಣಿಸು ವಾಗ ಸತಿ-ಪತಿಭಾವವನ್ನು ತಳೆದು ನಲ್ಮೆಯಿಂದ ದೇವರ ಸಾಕಾರ ರೂಪವನ್ನು ಹೇಳುತ್ತಾಳೆ. ಅದು ಸಹಜವೂ ಆಗಿದೆ. ಅನಾದ್ಯನಂತ ದೇವ ತ್ವದ ಕಲ್ಪನೆಯು ನಿರಾಕಾರವಾಗಿಯೇ ಉಳಿಯಬೇಕು. ಆದರೆ ಇಂಥ ದೇವ ತೆಯ ಪ್ರಶ್ನೆ ಬಂದಾಗ ಮನಸ್ಸಿನ ಸಮಾಧಾನಕ್ಕಾಗಿ ಶ್ರದ್ಧೆಯನ್ನು ಹೆಚ್ಚಿಸಿ ತಲ್ಲೀನತೆಯನ್ನು ಪಡೆಯುವದಕ್ಕಾಗಿ ಒಂದು ರೂಪು ಬೇಕಾಗುತ್ತದೆ. ಈ ಸಮಂಜಸ ಕಲ್ಪನೆಯನು , ನಾವು ಅಕ್ಕನವರ ನುಡಿಗಳಲ್ಲಿ ಕಾಣಬಹುದು.

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನಿರ್ದೆವು" ಎಂದು ಅಕ್ಕನು ಹೇಳುತ್ತಾಳೆ. ಅವಳ ದೇವನಿಗೆ ಎಡೆ ಇಲ್ಲ, ಕಡೆ ಇಲ್ಲ, ತೆರಹಿಲ್ಲ, ಕುರುಹೂ ಇಲ್ಲ. ಆವನಿಗೆ ಭವವಿಲ್ಲ, ಭಯವಿಲ್ಲ, ಕುಲಸೀಮೆಯಿಲ್ಲ, ಅವನಿಗೆ ಒಡಲು ಇಲ್ಲ, ಮಡಿ ಇಲ್ಲ, ಕಡೆ ಇಲ್ಲ, ಎಂದು ಮುಂತಾಗಿ ಬಣ್ಣಿಸುತ್ತಾಳೆ. ಇಂತಹ ಅಕ್ಕನವರ ವಚನಗಳಲ್ಲಿ ಉದಾತ್ತ ಭಾವ ಉಜ್ವಲ ಭಾಷೆಗಳ ಸಂಗಮವು ಕಂಡುಬರುತ್ತದೆ. ಅಂತೆಯೇ ಅಕ್ಕನವರ ವಚನಗಳು ಮನೋಹರವಾಗಿ ಕಾಣುತ್ತವೆ. ಶಿವನು ಆದಿ ಅನಾದಿ ಎಂಬೆರಡೂ ಇಲ್ಲದ ನಿರವಯುವಾಗಿಹನು. ಅವನು ವೇದಂಗಳಿಗೆ ಅಭೇದ್ಯನು, ಶಾಸ್ತ್ರಗಳಿಗೆ ಅಸಾಧ್ಯನು, ಪುರಾಣಕ್ಕೆ ಅಗಮ್ಯನು, ಆಗಮಕ್ಕೆ ಅಗೋಚರನು, ತರ್ಕಕ್ಕೆ ಅತರ್ಕನು, ವಾಙ್ಮನಕ್ಕೆ ಅತೀತನು ಇಂತಹನನ್ನು ಕೆಲರು ಸಕಲನೆಂಬರು ಕೆಲರು ನಿಷ್ಕಲನೆಂಬರು ಕೆಲರು ಸೂಕ್ಷ್ಮನೆಂಬದಾಗಿ ಹೇಳುವರು. ಈ ಬಗೆಯ ಭಾವದಿಂದ ಹರಿ ಬ್ರಹ್ಮ ಇಂದ್ರ ಚಂದ್ರ ರವಿ ಕಾಲ ಕಾಮ ದಕ್ಷ ಇವರೊಳಗಿನ ಸಮಸ್ತ ದೇವ ದಾನವರೆಲ್ಲರೂ ಕಾಣಲರಿಯದೆ ಅಜ್ಞಾನದಿಂದ ಭವಭಾಗಿಗಳಾದರು.

"ಈ ಪರಿಯಲ್ಲಿ ಭವಭಾರಿಗಳಾಗಿ ಬಯಲಾಗಿ ಹೋಗಬಾರದೆಂದು ನಮ್ಮ ಬಸವಣ್ಣನು ಜಗದ್ವಿಹಿತಾರ್ಥವಾಗಿ ಮರ್ತಕ್ಕೆ ಬಂದು ವೀರಶೈವ ಮಾರ್ಗವನ್ನರಿಪುವದಕ್ಕೆ ಚರಿಸಿದನು" ಎಂದು ಅಕ್ಕನು ತನ್ನ ವಚನಗಳಲ್ಲಿ ಹೇಳಿದ್ದಾಳೆ. ಈ ಮಾತು ಚರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ.

ಅಕ್ಕನ ದೇವನು ಸಾಕಾರನಾಗಿದ್ದಾನೆ ತಾನು ಅವನ ದಿವ್ಯರೂಪವನ್ನು ಕಂಡೆನೆಂದು ಹೇಳುತ್ತಾಳೆ. ಅವನನ್ನು ಸುಂದರವಾಗಿ ಹೀಗೆ ವರ್ಣಿಸುತ್ತಾಳೆ. "ಹೊಳೆವ ಕೆಂಜೆಡೆಗಳ, ಮಣಿಮುಕುಟ, ಒಪ್ಪುವ ಸುಲಿಪಲ್ಲ, ನಗೆಮೊಗದ ಕಂಗಳ ಕಾಂತಿಯಿಂ ಈರೇಳು ಭುವನಂಗಳಂ ಬೆಳಗುವ ದಿವ್ಯ ಸ್ವರೂಪ" ಇಂತಹ ನುಡಿಗಳ ಛಾಯೆಯನ್ನು ಕರ್ನಾಟಕ ಕವಿಚೂತವನ ಚೈತ್ರ ಲಕ್ಷ್ಮೀಶನಂತಹರ ಕಾವ್ಯಗಳಲ್ಲಿಯೂ ಕಾಣಬಹುದು. ಈ ವರ್ಣನೆಯು ಪಂಪ ಭಾರತದಲ್ಲಿಯ ಪಾತ್ರದರ್ಶನವನ್ನು ನೆನಪಿಗೆ ತಂದು ಕೊಡುತ್ತದೆ. ಅಕ್ಕನವರ ಭಾವದ ಬೆಡಗು ಮುಂದಿನ ಷಟ್ಪದಿಕಾರರಿಗೆ ಮಾರ್ಗ ತೋರಿದೆ.

ಅಕ್ಕನು ಮೊದಲು ಸಂಸಾರವನ್ನು ಹೇಯವೆಂದು ಹೀಗಳಿಸಿ ಪರಮಾತ್ಮನ ನಿಜಸ್ವರೂಪವನ್ನು ಅರಿತು ಆತನ ಸಾನ್ನಿಧ್ಯವನ್ನು ಪಡೆಯುವ

ವೀರಶೈವ ಮಾರ್ಗವನ್ನು ಬೋಧಿಸುತ್ತಾಳೆ. ಮೊದಲಿನ ಎರಡು ವಿಷಯುಗಳನ್ನು ಸಂಗ್ರಾಹವಾಗಿ ಬರೆದಿದ್ದೇನೆ. ಈ ಲೇಖವು ಈ ಮೊದಲೇ ಉದ್ಧವಾಗಹತ್ತಿರುವದರಿಂದ ಹಾಗೂ ಈ ಸಂಚಿಕೆಗೆ ಅವಸರವಾಗಿ ಲೇಖವನ್ನು ಕಳಿಸಬೇಕಾಗಿ ಬಂದುದರಿಂದ ಮೂರನೆಯ ವಿಷಯುವನ್ನು ಇಲ್ಲಿ ಪ್ರತಿಪಾದಿಸಲಿಲ್ಲ. ಹಾಗೂ ಅಕ್ಕನವರ ವಚನಾಮೃತವು ಕೇವಲ ವೀರಶೈವರಿಗೆ ಸಂಬಂಧಪಟ್ಟುದಲ್ಲ, ಎಲ್ಲರಿಗೂ ಅನ್ವಯಿಸಬಹುದಾದ ತ್ರಿಕಾಲಾಬಾಧಿತ ತತ್ವಗಳನ್ನು ಅಕ್ಕನು ಹೇಳಿರುವದರಿಂದ ಈ ಲೇಖದ ರೂಪವನ್ನೇ ಬೇರೆ ಮಾಡಬೇಕಾಯಿತು.

"ಅಕ್ಕನವರು ತ್ರಿಕಾಲಾಬಾಧಿತವಾದ ಲೋಕೋಕ್ತಿಗಳಲ್ಲಿಯೂ ವಿಶೇಷ ಜಾಣ್ಮೆ ತೋರಿದ್ದಾಳೆ."

"ಊರ ಸೀರೆಗೆ ಅಗಸ ತಡಬಡಗೊಂಡತೆ"

"ಬೆರಳು ತಾಳಹಣ್ಣು ಹಿಸುಕಿದರೆ ಮೊಲಲುಂಟೇ"

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ"

"ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ"

"ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ ಬರಲುಗೊಂಡ ಸಸಿಗೆ ಮಳೆ ಸುರಿದಂತಾಯ್ತು."

"ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ನೆನೆವಂತೆ, ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ"

"ಗಿರಿಯಲ್ಲದ ಹುಲ್ಲು ಮರಡೆಯಲ್ಲಾಡುವದೇ ನವಿಲು ತಳಿತಲ್ಲದೆ ಸ್ವರಗೈವುದೇ ಕೋಕಿಲೆ"

"ಚಂದನ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪಬಿಟ್ಟಿತ್ತೇ"

"ಹಣ್ಣು ಮೆದ್ದಬಳಿಕ ಆ ಮರವನಾರುತರಿದರೇನು ಹೆಣ್ಣು ಬಿಟ್ಟಬಳಿಕ ಆಕೆಯನಾರು ಕೂಡಿದರೇನು."

ಇತ್ಯಾದಿ ಗುಡಿಗಳಲ್ಲಿಯ ಸೊಬಗು ನಮ್ಮ ಮನವನ್ನು ಮೆಚ್ಚಿಸದೆ ಇರದು. ನಾಣ್ನುಡಿಯ ಸಂಗ್ರಹಕಾರರಿಗೆ ಅಕ್ಕನವರ ವಚನಗಳು ಒಳ್ಳೇ ಉಪಯುಕ್ತವಾಗಬಹುದು. ಕೆಲವು ನುಡಿಗಳು ಕಾವ್ಯಮಯವಾಗಿವೆ.

ತನ್ನ ತಾನರಿಯುವದು, ಎಂಬ ಹಿರಿಯ ಸತ್ಯವನ್ನು ಅಕ್ಕನು ಬೋಧಿಸಿದ್ದಾಳೆ. ಆದರೆ ಜ್ಞಾನವೊಂದೇ ಸಾಲದು. ಮೋಕ್ಷಮಾರ್ಗದಲ್ಲಿ ಭಕ್ತಿ, ಕರ್ಮ, ಜ್ಞಾನ ಇವೆಲ್ಲವುಗಳಿಗೆ ಸರಿಯಾದ ಸಾಧನವನ್ನು ಕಲ್ಪಿಸಿ ಕೊಟ್ಟ ಶ್ರೇಯಸ್ಸು ವೀರಶೈವ ಮತಕ್ಕೆ ಇದೆ. ಅಂತೆಯೇ ವೀರಶೈವ ಮತವು ಹಿಂದಿನ ಎಲ್ಲ ಮತಗಳ ಮೇಲಿನ ಸುಧಾರಣೆ ಇದ್ದು, ಸರ್ವ ಸಮ್ಮತವಾಗಬಹುದಾದ ಧರ್ಮವಾಗಿದೆ ಈ ಧರ್ಮದಲ್ಲಿ ದ್ವೈತವಿದೆ. ಅದ್ವೈತವಿದೆ. ಸಾಕಾರ ಕಲ್ಪನೆಯುಂಟು. ನಿರಾಕಾರ ಕಲ್ಪನೆಯುಂಟು. ಭಕ್ತಿ ಕರ್ಮ ಜ್ಞಾನಗಳೆಲ್ಲಕ್ಕೂ ಸರಿಯಾದ ಸ್ಥಾನವಿದೆ. ಸಕಲ ಧರ್ಮದ ಜೀವಾಳವಾದ ಅಹಿಂಸೆಯು ವೀರವ್ರತವಿದೆ. ಇವುಗಳನ್ನು ಅಕ್ಕನ ನುಡಿಗಳಲ್ಲಿಯೂ ಸ್ವಲ್ಪ ಕಾಣಬಹುದು.

"ಸುಜ್ಞಾನ ಸತ್ಕ್ರಿಯಾ ಸುನೀತಿ ಸುಮಾರ್ಗದಲ್ಲಿ ವರ್ತಿಸುವದು" ಎಂದು ಅಕ್ಕನು ಹೇಳುತ್ತಾಳೆ. ಪಾರ್ಸೀ ಧರ್ಮದ ತತ್ತ್ವದ ತಿರುಳು ಇದೇ ಆಗಿದೆ. ಜೈನ ಧರ್ಮದ ರತ್ನತ್ರಯಗಳೂ ಇಲ್ಲಿ ಅಡಕವಾಗಿವೆ. ಜ್ಞಾನವಾಯಿತೆಂದು ಮನಬಂದ ಹಾಗೆ ನಡೆಯಬಾರದೆಂದು ಅಕ್ಕನು ಹೇಳುತ್ತಾಳೆ.

ಅಂದಿನ ಇಂದಿನ ಎಲ್ಲ ಮಹಾತ್ಮರೂ ಅಹಿಂಸೆಯನ್ನು ಬೋಧಿಸಿದ್ದಾರೆ. ಧರ್ಮದ ಹೆಸರಿಸಿಂದ ನಡೆದ ಹಿಂಸೆಯನ್ನು ಮಹಾತ್ಮಾ ಬಸವೇಶ್ವರರು ಅರ್ಥ ಗಂಭೀರವಾದ ರೀತಿಯಲ್ಲಿ ಕರಳು ಕರಗುವಂತೆ ಹೇಳಿದ್ದಾರೆ.

"ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೇ. ಶಾಸ್ತ್ರವನೋದಿದವರ ಮುಂದೆ ಅಳು ಕಂಡೆಯಾ ಹೋತೇ" ಎಂಬದಾಗಿ ಅವರ ವಚನವಿದೆ. ಅಕ್ಕನವರೂ ಒಳ್ಳೇ ಮಾರ್ಮಿಕವಾಗಿ ಹಿಂಸೆಯನ್ನು ಹಳಿದಿದ್ದಾರೆ.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳನ್ನು ಕೊಂದು ನಲಿನಲಿದಾಡುವನು. ಆದರೆ ತನ್ನ ಮನೆಯಲ್ಲಿ ಒಂದು

ಶಿಶು ಸತ್ತರೆ ಮರಗುವಂತೆ ಅವಕ್ಕೇಕೆ ಮರುಗನು ? ಜೀವ ಹಿಂಸೆ ಮಾಡು ವವರು ಮಾದಿಗರು ಎಂಬದಾಗಿ ಅವರ ವಚನವಿದೆ.

"ಇಹವೆಂಬುದು ನರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂದು ಮಹಾತ್ಮಾ ಬಸವೇಶ್ವರರು ಹೇಳಿದ್ದಾರೆ. ಅರ್ಥಾತ್ ಅವರು ಐಹಿಕ ಪಾರಮಾರ್ಥಿಕಗಳನ್ನು ಬಹು ಸುಂದರವಾಗಿ ಒಂದು ಗೂಡಿಸಿದರು. ಆದರೆ ಅಕ್ಕನವರ ಅಭಿಪ್ರಾಯ ಬೇರೆಯಾಗಿದೆ. "ಲೌಕಿಕ ಪಾರಮಾರ್ಥಿಕವೆಂಬೆರಡನು ನಡಿಸಲು ಬಾರದಯ್ಯಾ, ಬಿಲ್ಲು ಬೆಳವಲ ಕಾಯಿ ಒಂದಾಗಿ ಹಿಡಿಯಲು ಬಾರದಯ್ಯಾ" ಎಂದು ಅವರು ಹೇಳು ತ್ತಾರೆ. ಅಂತು ಈ ಮಾತನ್ನು ಹೇಳುವಾಗ ಅಕ್ಕನವರು ಇನ್ನೂ ತನ್ನ ಗುರು ಧಾರ್ಮಿಕ ತಂದೆ ಬಸವಣ್ಣನವರ ಮಟ್ಟಕ್ಕೆ ಬಂದಿರಲಿಲ್ಲವೆಂದು ಹೇಳಬಹುದಾದರೂ ಅಕ್ಕನವರ ವೀರ ವಿರಕ್ತತೆಯು ಒಂದು ಆದರ್ಶ ವಾಗಿದೆ. ಅದನ್ನೇ ಸೂಚಿಸುವ ಅವರ ಒಂದು ವಚನದಿಂದಲೇ ಈ ಬರಹವನ್ನು ಮುಗಿಸುವೆ.

ಕಾಯ ಕರ್‍ರನೆ ಕಂದಿದರೇನು, ಕಾಯ ಮಿರ್‍ರನೆ ಮಿಂಚಿದರೇನು ? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನನೊಲಿದ ಕಾಯ ಎಂತಾದೊಡೆಮಗೇನಯ್ಯ.

ಅಕ್ಕನವರ ಜೀವಿತವು ಕನ್ನಡ ಮಹಿಳೆಯರಿಗೆ ಕೈ-ದೀವಟಿಗೆಯಾ ಗಬೇಕೆಂದೂ, ಅಕ್ಕನ ವಿಷಯವಾಗಿ ಕನ್ನಡಿಗರ ಉತ್ಸಾಹವು ಎಲ್ಲ ರೀತಿಯಲ್ಲಿ ಹೆಚ್ಚಲೆಂದೂ ನಮ್ಮ ಹಾರೈಕೆ.

---

# ನಾಮದಾರ ದಿವಾಣ ಬಹಾದ್ದೂರ ಸಿದ್ದಪ್ಪ ತೋಟಪ್ಪ ಕಂಬಳಿ

ಬಿ. ಎ. ಎಲ್. ಎಲ್ ಬಿ.

ಮುಂಬಯಿ ಇಲಾಖೆಯ ಶಿಕ್ಷಣ ಮಂತ್ರಿಗಳು,

## ರಾಯಚೂರಿನಲ್ಲಿ ನೆರೆದ

## ಅಖಿಲ ಭಾರತ ವೀರಶೈವ ೧೨ನೆಯ ಮಹಾಸಭೆಯ

**ಅಧ್ಯಕ್ಷಸ್ಥಾನದಿಂದ ತಾ|| ೨೬-೧೯೩೬ ದಿವಸ ಮಾಡಿದ**

## ಭಾಷಣವು.

ಅಖಿಲ ಭಾರತ ವೀರಶೈವ ಮಹಾಸಭೆಯ ಅಗ್ರಾಸನವು ಅತ್ಯಂತ ಮಹತ್ವವುಳ್ಳದ್ದೂ, ವಿಶೇಷ ಜವಾಬದಾರಿಯುಳ್ಳದ್ದೂ ಇರುತ್ತದೆ. ಈ ಬಹುಮಾನವನ್ನು ನಾವು ಬೇಡಿ ಬಯಸದೆ ಇದ್ದರೂ ನನಗೆ ಕೊಟ್ಟದ್ದು ತಮ್ಮೆಲ್ಲರ ಪ್ರೇಮಾದರಗಳನ್ನು ವ್ಯಕ್ತಗೊಳಿಸುತ್ತದೆ. ಮಹಾಸಭೆಯ ಸಂಘಟನೆಯ ನಿಯಮಕ್ಕನುಸರಿಸಿ ಅಧ್ಯಕ್ಷರನ್ನು ಆರಿಸುವದು ಕೇವಲ ತಮ್ಮ ನಿರ್ಣಯಕ್ಕೆ ಒಳಗಾಗಿರುತ್ತದೆ. ಈ ವಿಷಯದಲ್ಲಿ ತಮ್ಮ ನಿರ್ಣಯದ ಯೋಗ್ಯಾಯೋಗ್ಯತೆಯನ್ನು ವಿಚಾರಿಸುವದು ನನ್ನ ಕರ್ತವ್ಯವಲ್ಲ. ಆದ್ದರಿಂದ ತಾವು ತಮ್ಮ ನಿರ್ಣಯಕ್ಕನುಸರಿಸಿ ನನಗೆ ಒಪ್ಪಿಸಿರುವ ಈ ಬಹುಮಾನವನ್ನೂ, ಅದರ ಕೂಡ ಬರಲಿರುವ ಅಧಿಕಾರವನ್ನೂ, ಕೇವಲ ಮಹಾಸಭೆಯ ಹಿತಕ್ಕಾಗಿಯೂ ಮತ್ತು ಅದರ ಗೌರವಕ್ಕಾಗಿಯೂ ಉಪಯೋಗಿಸುವ ಒಂದೇ ಒಂದು ಸದುದ್ದೇಶದಿಂದ ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸುತ್ತೇನೆ.

ಈ ಮಹಾಸಭೆಯ ವಿಷಯಗಳನ್ನು ಚರ್ಚಿಸುವ ಮೊದಲು ಈ ಸಮಯದಲ್ಲಿ ಕೆಲವು ಸಂಗತಿಗಳ ಉಲ್ಲೇಖನವನ್ನು ನಾನು ಮಾಡದೆ ಇರಲಾರೆನು.

ಹಿಂದುಸ್ಥಾನದ ಚಕ್ರವರ್ತಿಗಳಾದ ದಿವಂಗತ ಐದನೆಯ ಜಾರ್ಜ ಬಾದಶಹರವರ ನಿಧನದಿಂದ ಅಖಿಲ ಬ್ರಿಟಿಷ ಸಾಮ್ರಾಜ್ಯವು ದುಃಖ

ಸಾಗರದಲ್ಲಿ ಮುಳುಗಿದ್ದು, ನಮ್ಮೆಲ್ಲರಿಗುಂಟಾದ ದುಃಖವನ್ನು ಈ ಸಮಯದಲ್ಲಿ ನಾನು ವ್ಯಕ್ತಗೊಳಿಸದೆ ಇರಲಾರೆನು. ಮತ್ತು ಸದ್ಯದ ಚಕ್ರವರ್ತಿಗಳಾದ ಎಂಟನೇ ಎಡ್ವರ್ಡ ಬಾದಶಹರವರ ಬಗ್ಗೆ ನಮ್ಮ ರಾಜಭಕ್ತಿಯನ್ನು ಪ್ರಕಟಪಡಿಸಿ ಪರಮೇಶ್ವರನು ಅವರಿಗೆ ಚಿರಾಯುರಾರೋಗ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ನಮ್ಮ ಸಮಾಜದಲ್ಲಿಯ ಮಹಾತಪಸ್ವಿಗಳೂ, ಪರಮ ಪೂಜ್ಯರೂ ಆರಂಭದಿಂದಲೂ ಮಹಾಸಭೆಯ ಕಾರ್ಯಕ್ಕೆ ಉತ್ತೇಜನವನ್ನು ಕೊಡುತ್ತ ಬಂದವರೂ, ಸಮಾಜದ ವಿದ್ಯಾಭಿವೃದ್ಧಿ ಮೊದಲಾದ ಅನೇಕ ಕಾರ್ಯಗಳನ್ನು ಮಾಡಿದವರೂ ಆದ ಉಜ್ಜಯಿನಿಯ ಸಿಂಹಾಸನಾಧಿಪತಿಗಳಾಗಿದ್ದ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯರೂ ಹಾಗೂ ಬೀಳೂರು ಶ್ರೀ ಗುರುಬಸವ ಸ್ವಾಮಿಗಳವರೂ ಲಿಂಗೈಕ್ಯರಾದುದಕ್ಕಾಗಿ ನಮ್ಮೆಲ್ಲರಿಗೆ ಬಹಳ ಖೇದವಾಗಿದೆ. ಮತ್ತು ಅಖಿಲ ಭಾರತ ವೀರಶೈವ ಮಹಾಸಭೆಯ ಒಂಭತ್ತನೆಯ ಅಧಿವೇಶನದ ಅಧ್ಯಕ್ಷಸ್ಥಾನವನ್ನಲಂಕರಿಸಿದವರೂ, ಹಾಗೂ ಸಮಾಜಕ್ಕೆ ಅನೇಕ ಉಪಯುಕ್ತ ಕಾರ್ಯಗಳನ್ನು ಮಾಡಿದವರೂ ಆದ ದಿ॥ ಬ॥ ಮೇಣಸಿನಕಾಯಿ ಶಾಂತವೀರಪ್ಪನವರ ಮರಣದಿಂದ ನಮ್ಮ ಸಮಾಜಕ್ಕೆ ಅತ್ಯಂತ ಹಾನಿಯಾಗಿರುವದೆಂಬದನ್ನು ಹೇಳದೆ ಇರಲಾರೆನು.

ಬಂಧು ಭಗಿನಿಯರೇ,

**ನಮ್ಮ ಸಮಾಜದ ಜನಸಂಖ್ಯ ಮತ್ತು ವಾಸಸ್ಥಳ.**

ನಮ್ಮ ಸಮಾಜದ ಜನಸಂಖ್ಯೆಯನ್ನೂ ಮತ್ತು ಅವರು ವಾಸಿಸುವ ಸ್ಥಳಗಳನ್ನೂ ಈ ಸಮಯದಲ್ಲಿ ವರ್ಣಿಸುವದು ಅಪ್ರಾಸಂಗಿಕವಾಗಲಿಕ್ಕಿಲ್ಲ. ನಮ್ಮ ಸಮಾಜವು ವಿಶೇಷವಾಗಿ ಕರ್ನಾಟಕದಲ್ಲಿಯೂ, ವಿರಳವಾಗಿ ಮಹಾರಾಷ್ಟ್ರ, ಆಂಧ್ರ, ತಮಿಳು ನಾಡುಗಳಲ್ಲಿಯೂ ಇರುವದು. ಅದು ಹೇಗೆಂದರೆ:—

(೧) ಧಾರವಾಡ ಜಿಲ್ಹೆ ೩,೭೫,೦೦೦; (೨) ವಿಜಾಪುರ ಜಿಲ್ಹೆ ೩,೦೦,೦೦೦; (೩) ಬೆಳಗಾವಿ ಜಿಲ್ಹೆ ೨,೯೩,೦೦೦; (೪) ಗುಲಬರ್ಗಾ ಜಿಲ್ಹೆ ೨,೩೬,೦೦೦; (೫) ಮೈಸೂರು ಪ್ರಾಂತ ೨,೦೨,೦೦೦; (೬) ರಾಯಚೂರು ಜಿಲ್ಹೆ ೧,೪೧,೦೦೦; (೭) ಚಿತ್ರದುರ್ಗ ಜಿಲ್ಹೆ ೧,೪೧,೦೦೦; (೮) ಬಳ್ಳಾರಿ ಜಿಲ್ಹೆ ೧,೩೫,೦೦೦; (೯) ಬೀದರ ಜಿಲ್ಹೆ ೧,೨೫,೦೦೦; (೧೦) ಶಿವಮೊಗ್ಗಾ ಜಿಲ್ಹೆ ೧,೦೭,೦೦೦; (೧೧) ತುಮಕೂರು ಜಿಲ್ಹೆ ೧,೦೦,೭೦೦; (೧೨)

ಹಾಸನ ಜಿಲ್ಲೆ ೮೧,೮೦೦; (೧೩) ವರ್ಹಾಡ್ ಪ್ರಾಂತ ೭೫,೦೦೦; (೧೪) ಕೊಲ್ಹಾಪುರ ಸಂಸ್ಥಾನ ೭೫,೦೦೦; (೧೫) ಕಡೂರ ಜಿಲ್ಲೆ ೬೬,೦೦೦; (೧೬) ಸೋಲಾಪುರ ಜಿಲ್ಲೆ ೬೨,೦೦೦; (೧೭) ಮೊಮಿನಾಬಾದ ಜಿಲ್ಲೆ ೪೮,೦೦೦; (೧೮) ಬಿಜವಾಡ ಜಿಲ್ಲೆ ೪೨.೬೦೦; (೧೯) ಸಾಂಗಲಿ ಸಂಸ್ಥಾನ ೪೦,೬೦೦, (೨೦) ಸಾತಾರಾ ಜಿಲ್ಲೆ ೩೨,೨೦೦; (೨೧) ಮಿರಜ ಸಂಸ್ಥಾನ ೨೩,೦೦೦; (೨೨) ಪರಭಣಿ ಜಿಲ್ಲೆ ೨೧,೦೦೦; (೨೩) ಅಕ್ಕಲಕೋಟಸಂಸ್ಥಾನ ೨೧,೦೦೦; (೨೪) ಕುರ್ಗಪ್ರಾಂತ ೯,೦೦೦; (೨೫) ವರಂಗಲ್ ಜಿಲ್ಲೆ ೭,೦೦೦; (೨೬) ಉತ್ತರ ಕಾನಡಾ ೪,೭೦೦; (೨೭) ನಾಶಿಕ ೩,೨೦೦; (೨೮) ಮುಂಬಯಿ ನಗರ ೫೦೦; (೨೯) ಸಾವಂತವಾಡಿಸಂಸ್ಥಾನ ೩೬೦; (೩೦) ವರ್ಧಾ ೩೧೬ ಇತ್ಯಾದಿ.

ಬಾಂಧವರೇ,

**ವೀರಶೈವರ ಸಂಕ್ಷಿಪ್ತ ಇತಿಹಾಸವು.**

ವೀರಶೈವ ಧರ್ಮವು ಅತಿ ಪ್ರಾಚೀನವಾದದ್ದು. ವೀರಶೈವರು ದ್ರವಿಡರು. ದ್ರವಿಡರ ಸಂಸ್ಕೃತಿಯು ಉತ್ಕೃಷ್ಟವಾದದ್ದೂ, ಆರ್ಯ ಸಂಸ್ಕೃತಿಗಿಂತಲೂ ಪ್ರಾಚೀನವಾದದ್ದೂ, ಇರುತ್ತದೆ. ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿಯೇ ದ್ರವಿಡರು ಅಸಾಧಾರಣವಾದ ತಮ್ಮ ಸಂಸ್ಕೃತಿಯನ್ನು ಈ ದೇಶದಲ್ಲಿ ಹಬ್ಬಿಸಿದ್ದರು. ಮತ್ತು ಕೇವಲ ಶಿವೋಪಾಸಕರಾಗಿದ್ದರು. ಶಿವ ಎಂಬ ಶಬ್ದವು ಕೂಡ ದ್ರವಿಡ ಶಬ್ದವೆಂದು ಭಾಷಾಶಾಸ್ತ್ರಜ್ಞರು ಹೇಳುತ್ತಿದ್ದಾರೆ. ವೀರಶೈವರು ವಿರಳವಾಗಿರುವ ಮರಾಠಿ ಭಾಷೆಗೆ ಒಳಪಟ್ಟ ರತ್ನಾಗಿರಿ ಜಿಲ್ಲೆಯಲ್ಲಿ ಸಹ ಈಗ್ಯೂ ಕೂಡ ಜಂಗಮರಿಂದಲೇ ಶಿವಾಲಯಗಳಲ್ಲಿಯ ಪೂಜೆಯನ್ನು ಮಾಡಿಸುವ ಅವಿಚ್ಛಿನ್ನವಾದ ಸಾಂಪ್ರದಾಯವು ಇದ್ದ ಸಂಗತಿಯು ವೀರಶೈವರು ಕೇವಲ ಶಿವೋಪಾಸಕರೇ ಇದ್ದರು ಮತ್ತು ಇರುತ್ತಾರೆಂಬುದಕ್ಕೆ ಬಲವತ್ತರವಾದ ಸಾಕ್ಷಿಯು ಆಗಿರುತ್ತದೆ.

ಆರ್ಯರ ಆಕ್ರಮಣದಿಂದ ಅನೇಕರು ತಮ್ಮ ಧರ್ಮ ಮತ್ತು ಸಂಸ್ಕೃತಿಗಳನ್ನು ಬಿಟ್ಟರೂ ವೀರಶೈವರು ಮಾತ್ರ ಶಿವೋಪಾಸನೆಯೊಂದನ್ನೇ ಹಿಡಿದು ಆ ದ್ರಾವಿಡ ಸಂಸ್ಕೃತಿಯನ್ನು ಈ ವರೆಗೂ ಕಾಯ್ದುಕೊಂಡು ಬಂದದ್ದು ನಮ್ಮೆಲ್ಲರಿಗೂ ಬಹು ಅಭಿಮಾನಾಸ್ಪದವಾದ ಸಂಗತಿಯಾಗಿದೆ.

ವೀರಶೈವರಲ್ಲಿ ಜಾತಿ ಭೇದವಿಲ್ಲ—ವೀರಶೈವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದ ಭೇದವಿಲ್ಲ. ವೀರಶೈವರು ಅತಿ ವರ್ಣಾಶ್ರಮಿಗಳು. ವೀರಶೈವ ಧರ್ಮದಲ್ಲಿ ಸ್ತ್ರೀ-ಪುರುಷರಿಗೆ ಸಮಾನತೆಯುಂಟು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದ ಮತ ತತ್ವಗಳಿಗೂ ವೀರಶೈವ ಮತ ತತ್ವಗಳಿಗೂ ಮಹದಂತರವಿರುವದು. ವೀರಶೈವರಲ್ಲಿ ಚಾತುರ್ವರ್ಣ್ಯದ ಭೇದವಿರುವದಿಲ್ಲೆಂದೂ ಮತ್ತು ಯಾವ ಜಾತಿ ಭೇದವಿಲ್ಲವೆಂದೂ ತೋರಿಸಲಿಕ್ಕೆ ಅನೇಕ ಆಧಾರಗಳುಂಟು. ಅವುಗಳಲ್ಲಿ ಕೆಲವನ್ನು ಮಾತ್ರ ಈಗ ವಿವರಿಸುವೆನುः—

ವೀರಶೈವರು ಅತಿವರ್ಣಾಶ್ರಮಿಗಳು ಅವರಲ್ಲಿ ಜಾತಿಭೇದವಿಲ್ಲ.

ವೀರಶೈವರಲ್ಲಿ ನಿರಾಭಾರಿಗಳನ್ನು ಕುರಿತು ಹೇಳುವಾಗ್ಗೆ "ಅತಿವರ್ಣಾಶ್ರಮೀ ಮುಖ್ಯೋ....." ಎಂದು ಸೂಕ್ಷ್ಮಾಗಮದಲ್ಲಿ ಹೇಳಿದೆ. ಹಾಗೂ ವಿಶ್ವಜ್ಞಾನಕೋಶವೆನಿಸುವ ಕೆಳದಿ ಬಸಪ್ಪನಾಯಕರಿಂದ ವಿರಚಿತವಾದ ಶಿವತತ್ವರತ್ನಾಕರ, ಎಂಬ ಗ್ರಂಥದಲ್ಲಿಯೂ "......ಲಿಂಗಾಂಗಸಂಯುಕ್ತೋಯೋಽಪಿ ಸೋಽತ್ಯಾಶ್ರಮೀ ಭವೇತ್ । ....." ಮತ್ತೂ "ವರ್ಣಾಶ್ರಮಾನತಿಕ್ರಾಂತಾ ಶಿವಭಕ್ತಿ ಪರಾಯಣಾಃ॥" ಎಂದೂ ಹೇಳಲ್ಪಟ್ಟಿದೆ. ಇದಲ್ಲದೆ ಶಿವದೀಕ್ಷೆಯಾದ ಮೇಲೆ ಎಲ್ಲರೂ ಸಮಾನರೇ ಹೊರ್ತು ಅವರಲ್ಲಿ ಜಾತಿ ಭೇದವಿಲ್ಲವೆಂಬುದಕ್ಕೆ ಶಿವಾಗಮಂಗಳಲ್ಲಿ ಅನೇಕ ಆಧಾರಗಳುಂಟು.

"ಮಮಯೋಧಾರಯೇಲ್ಲಿಂಗಂ ಯಥೋಕ್ತಂ ಗುರುಣಾಶಿವೇ ।

... ... ... ... ...

ನತಸ್ಯ ಜಾತಿಭೇದೋಽಸ್ತಿ ... ... ।"

ಎಂದು ಪಾರಮೇಶ್ವರಾಗಮದಲ್ಲಿಯೂ,

"ಶಿವಸಂಸ್ಕಾರ ಯುಕ್ತೇಷು ಜಾತಿಭೇದೋನ ವಿದ್ಯತೆ ।
ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನವಿದ್ಯತೆ ॥
ತಸ್ಮಾತ್ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।
ಜಾತಿಭೇದಂ ನಕುರ್ವೀತ ಶಿವಭಕ್ತೇಷುಕದಾಚನ ॥"

ಎಂದು ಸಿದ್ಧಾಂತ ಶಿಖಾಮಣಿಯಲ್ಲಿಯೂ,

ಗ್ರಾವ್ಣೇಣ ಮಲಿನಂ ತೋಯಂ ಯಥಾ ಸಾಗರಂಗತಂ।
ಶಿವಸಂಸ್ಕಾರ ಸಂಪನ್ನಂ ಜಾತಿಭೇದಂ ನಕಾರಯೇತ್॥

ಎಂದು ಶಿವರಹಸ್ಯದಲ್ಲಿಯೂ,

“ ... ... ...
ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಮ್॥”

ಎಂದು ಚನ್ನಬಸವೇಶ್ವರನ ವಚನದಲ್ಲಿಯೂ

“...ಶಿವನೇ ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವನೆತ್ತಿ
ನುಡಿದವಂಗೆ ಇಪ್ಪತ್ತುಕೋಟಿ ನರಕ ತಪ್ಪದು ನೋಡಯ್ಯ”

ಎಂದು ಮಹದೇವಿಯಕ್ಕನವರ ವಚನದಲ್ಲಿಯೂ ಸಾರಿಸಾರಿ ಹೇಳಲ್ಪಟ್ಟಿದೆ.

ವೀರಶೈವ ಧರ್ಮದ ಈ ಉದಾರ ತತ್ವವನ್ನೇ ಶ್ರೀಬಸವೇಶ್ವರನು ಇದೇ ನಿಜಾಮು ಇಲಾಖೆಯಲ್ಲಿಯ ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳ ರಾಜನ ಮಂತ್ರಿಯಾಗಿದ್ದು ದ್ರಾವಿಡ ಭಾಷೆಯಾದ ಕನ್ನಡ ನುಡಿಯಲ್ಲಿಯೇ ಹೆಚ್ಚಿಗೆ ಬಳಿಕೆಯಲ್ಲಿ ತಂದು ಬೆಳಕಿಗೆ ಹಾಕಿದನು. ಇಂತಹ ಉದಾರ ತತ್ವಗಳಿಂದಲೇ ವೀರಶೈವ ಮತವು ಇಲ್ಲಿಯ ವರೆಗೆ ಉಳಿದಿದೆ. ಮೇಲೆ ಹೇಳಿದ ಆಗಮ ವಚನಾದಿ ಆಧಾರಗಳ ಮೇಲಿಂದ ವೀರಶೈವರಲ್ಲಿ ಜಾತಿಭೇದವಿಲ್ಲವೆಂತಲೂ ಮತ್ತು ವರ್ಣಾಶ್ರಮಗಳು ಇಲ್ಲವೆಂತಲೂ ಸ್ಪಷ್ಟವಾಗುವುದಿಲ್ಲವೇ? ಹೀಗಿದ್ದೂ ಕೆಲವರು ವೀರಶೈವರಲ್ಲಿ ಚಾತುರ್ವರ್ಣ್ಯವನ್ನು ಕೂಡ ಕಲ್ಪಿಸ ಹತ್ತಿದ್ದು ಮರುಳತನವಲ್ಲವೇ?

**(ಅ) ಪೂರ್ವದಲ್ಲಿದ್ದ ವೀರಶೈವರ ವ್ಯಾಪಾರಸ್ಥಿತಿಯು**

ಇಂತಹ ಉದಾರ ತತ್ವಗಳಿಂದ ಕೂಡಿದ ನಮ್ಮ ಸಮಾಜವು ತನ್ನ ಅಸ್ತಿತ್ವಕ್ಕೆ ಬೇಕಾಗತಕ್ಕಂತಹ ಒಕ್ಕಲತನ, ವ್ಯಾಪಾರ, ಕೈಗಾರಿಕೆ ಮೊದಲಾದ ಎಲ್ಲ ಉದ್ಯೋಗಗಳನ್ನು ತಾನೇ ಮಾಡಿಕೊಳ್ಳುತ್ತ ಸಾಂಪತ್ತಿಕ ಸ್ಥಿತಿಯಲ್ಲಿಯೂ ಕೂಡ ಪ್ರಗತಿಯನ್ನು ಹೊಂದಿತ್ತು. ವೀರಶೈವರು ವ್ಯಾಪಾರದಲ್ಲಿ ಮುಂದುವರಿದಿದ್ದರೆಂಬುವದಕ್ಕೆ ವ್ಯಾಪಾರದ ಎಲ್ಲ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಶೆಟ್ಟರಮನೆಗಳು ಇದ್ದದ್ದೇ ಸಾಕ್ಷಿಯು.

ಇಷ್ಟೇ ಅಲ್ಲ, ಕೆಲವು ಶೆಟ್ಟರು ಯುದ್ಧ ಸಮಯದಲ್ಲಿ ಸೈನ್ಯಕ್ಕೆ ಅನ್ನ ಸಾಮಗ್ರಿಯನ್ನು ಪೂರಯಿಸಿಕೊಡುತ್ತಿದ್ದರು. ರತ್ನಾಗಿರಿ ಎಂಬ ಮರಾಠಿ ಜಿಲ್ಹೆಯ ಪೈಕಿ ರಾಜಾಪುರದಲ್ಲಿಯ ಕೆಲವು ವ್ಯಾಪಾರಿಗಳು ಈಗ್ಯೂ ಕೂಡ ಅಲ್ಲಿ ಶೆಟ್ಟಿಮನೆತನದವರಿಗೆ ಬಾಬಿನ ಹಣವನ್ನು ಕೊಡುತ್ತಿರುವರೆಂಬ ಸಂಗತಿಯು ಅನೇಕರಿಗೆ ಆಶ್ಚರ್ಯಕರವೆನಿಸಬಹುದು. ಆದರೆ ಇದು ನಿಜ ವಾದ ಸಂಗತಿಯು. ಮುಂದೆ ಬರಬರುತ್ತಾ ಸಮಾಜದಲ್ಲಿಯ ಆಯಾಯ ಕಸಬುಗಳನ್ನು ಮಾಡುವವರೆಲ್ಲ ತಮ್ಮ ತಮ್ಮದೊಂದೊಂದು ಬೇರೆ ಬೇರೆ ಜಾತಿಯೇ ಇರುವದೆಂದು ತಿಳಿದುಕೊಂಡು ಉಚ್ಚ ನೀಜ ಭಾವನೆಗಳನ್ನು ಕಲ್ಪಿಸಿಕೊಂಡದ್ದರಿಂದ ಅವರ ಏಳ್ಗೆಗೆ ಅಡ್ಡಿಯುಂಟಾಯಿತೆಂದು ಕಂಡು ಬರುತ್ತಿದೆ.

(ಬ)
**ವೀರಶೈವರ ರಾಜಕೀಯ ಸ್ಥಿತಿಯು.**

ಈ ರೀತಿಯಾಗಿ ವ್ಯಾಪಾರದಲ್ಲಿ ಮುಂದುವರಿದಿದ್ದ ನಮ್ಮ ಸಮಾಜವು ರಾಜಕೀಯ ವಿಷಯದಲ್ಲಿಯೂ ಬಹಳ ಮುಂದುವರಿದಿತ್ತು. ವಿಜಯನಗರದ ವಿರೂಪಾಕ್ಷನೆಂಬ ಅರಸನು ವೀರಶೈವನಾಗಿದ್ದನು. (ಫಾದರ ಹೆರಾಸ್ ರವರು ಬರೆದ ಅರವೀಡು ಅರಸರ ವಂಶಾವಳಿಯೆಂಬ ಇಂಗ್ಲೀಷ ಗ್ರಂಥ ಪುಟ ೫೪೧.) ವೈಸೂರು ಸಂಸ್ಥಾನದ ಅರಸು ವಂಶದವರು ೧೩೯೯ ರಿಂದ ೧೬೧೦ ರ ವರೆಗೆ ವೀರಶೈವರೇ ಇದ್ದರು. (ಲುಯಿ ರಾಯಿಸ್‌ರವರು ಬರೆದ "ವೈಸೂರು" ಎಂಬ ಇಂಗ್ಲೀಷ ಗ್ರಂಥ ವನ್ನು ನೋಡಬಹುದು.) ಇದಲ್ಲದೆ ಕೆಳದಿ ಮತ್ತು ಇಕ್ಕೇರಿ ರಾಜ್ಯದ ಅರಸರು ೧೫೫೦ ರಿಂದ ೧೭೬೩ ರವರೆಗೆ ವೀರಶೈವರೇ ಇದ್ದರು. ಕೊಡಗು ಪ್ರಾಂತದ ಅರಸರು ಕೂಡ ವೀರಶೈವರೇ ಇದ್ದರು.

(ಕ)
**ವೀರಶೈವ ಮಂತ್ರಿಗಳು; ರಾಜಕಾರಣ ಧುರೀಣರು ವೀರ ಪುರುಷರು.**

ಇದಲ್ಲದೆ 'ಲಿಂಗಮಂತ್ರಿ', 'ಬಸವೇಶ್ವರ', 'ಲಕ್ಕಣ ದಂಡೇಶ', ಇಂತಹ ಮಂತ್ರಿವರ್ಯರು. ಇಮ್ಮಡಿ 'ಶಿವೇಂದ್ರ'ನೆಂಬ ಅಭಿಧಾನವನ್ನು ತಾಳಿದ 'ಸದಾಶಿವ ನಾಯಕ', 'ಕಲ್ಲಪ್ಪ', 'ಚಿಕ್ಕಲಿಂಗಣ್ಣ', 'ಲಿಂಗಣ್ಣ', 'ವೀರಭದ್ರಯ್ಯ', 'ಮಲಸರ್ಜ',ರಂತಹ ವೀರಾದಿವೀರರೂ, ಈ ನಮ್ಮ ಸಮಾಜದಲ್ಲಿ ಆಗಿಹೋಗಿರುವರು. ಇಷ್ಟೇ ಅಲ್ಲ, ವೀರಶೈವರು ರಾಜಕಾರಣದಲ್ಲಿ ಧುರೀಣರಿದ್ದರೆಂಬುದಕ್ಕೆ ನಮ್ಮ

ಸಮಾಜದಲ್ಲಿ ಈಗ್ಯೂ ಅಲ್ಲಲ್ಲಿ ಕಂಡು ಬರುವ ದೇಸಾಯಿ, ದೇಶಮುಖ, ದೇಶಪಾಂಡೆ, ನಾಡಗೌಡರು ಸಾಕ್ಷಿಯಾಗಿದ್ದಾರೆ.

**ಹಿಂದಿನ ಕಾಲದಲ್ಲಿಯು ಶಿಕ್ಷಣ ಪ್ರಸಾರ.**

ವ್ಯಾಪಾರ, ರಾಜಕಾರಣಗಳ ಮಹತ್ವವನ್ನರಿತು ಅವುಗಳಲ್ಲಿ ಪ್ರವೀಣತೆಯುನ್ನು ಪಡೆದಂತೆ ವೀರಶೈವರು ಶಿಕ್ಷಣದ ಮಹತ್ವವನ್ನಾದರೂ ಮೊದಲಿನಿಂದಲೇ ಅರಿತುಕೊಂಡಿದ್ದರು. ಶಿಕ್ಷಣ ಪ್ರಸಾರಕ್ಕಾಗಿ ವೀರಶೈವರು ತಾವು ವಾಸಿಸುವ ಸ್ಥಳಗಳಲ್ಲೆಲ್ಲಾ ಓದಿಸುವ ಮಠಗಳನ್ನು (ಓಸುಮಠಗಳನ್ನು) ಸ್ಥಾಪಿಸಿದ್ದರು. ಕೆಳದಿ ವಂಶದ ಸಂಕಣ್ಣನಾಯಕನಂತೂ ದಿಲ್ಲಿಯಲ್ಲಿಯೂ ಪ್ರಯಾಗ ಕ್ಷೇತ್ರದಲ್ಲಿಯೂ ಮತ್ತೂ ಅನೇಕ ಸ್ಥಳಗಳಲ್ಲಿಯೂ ಮಠಗಳನ್ನು ಕಟ್ಟಿಸಿದ್ದನು. ಆಗಿನ ಮಠಗಳಲ್ಲಿ ಎಲ್ಲ ಪ್ರಕಾರದ ಶಿಕ್ಷಣದ ವ್ಯವಸ್ಥೆಯನ್ನು ಇಟ್ಟಿದ್ದರೆಂದು ತಿಳಿಯುತ್ತದೆ. ಆಗಿನ ಮಠಗಳೆಂದರೆ ಈ ಕಾಲದ ಶಾಲೆಗಳಂತೆಯೇ ಶಿಕ್ಷಣ ಪ್ರಸಾರದ ಮಹತ್ವದ ಕಾರ್ಯವನ್ನು ಮಾಡುತ್ತಿದ್ದವು. ವೀರಶೈವರು ತಮ್ಮ ಸಮಾಜದವರಿಗಷ್ಟೇ ಅಲ್ಲದೆ ಅನ್ಯ ಸಮಾಜದವರಿಗೂ ಕೂಡ ಶಿಕ್ಷಣದ ಲಾಭವನ್ನು ಭಿನ್ನಭೇದವಿಲ್ಲದೆ ಮಾಡಿಕೊಡುತ್ತಿದ್ದರು.

**ಹಿಂದಿನ ಕಾಲದ ವೀರಶೈವ ಸಮಾಜದ ಅಮೌಲ್ಯ ಮುತ್ತು ಅಮರ ಧರ್ಮಗ್ರಂಥಕರ್ತರು.**

ಬ್ರಹ್ಮಸೂತ್ರಗಳಿಗೆ ಸಂಸ್ಕೃತದಲ್ಲಿ ಶ್ರೀಕರಭಾಷ್ಯವೆಂಬ ವ್ಯಾಖ್ಯಾನವನ್ನು ಬರೆದ ಶ್ರೀಪತಿ ಪಂಡಿತ, ಬ್ರಹ್ಮಸೂತ್ರ ವ್ಯಾಖ್ಯಾನ ರೂಪವಾದ ಕ್ರಿಯಾಸಾರವೆಂಬ ಸಂಸ್ಕೃತ ಗ್ರಂಥವನ್ನು ಬರೆದ ನೀಲಕಂಠ ಶಿವಾಚಾರ್ಯ, ಕೈವಲ್ಯಕಲ್ಪವಲ್ಲರಿಯನ್ನು ರಚಿಸಿದ ಸಪ್ಪಣ್ಣಪ್ಪರಂತಹ ತತ್ವಜ್ಞಾನಿಗಳೂ, ಶಿವಲೆಂಕ ಮಂಚಣ್ಣ, ಶ್ರೀಪತಿ ಪಂಡಿತ ಮಲ್ಲಿಕಾರ್ಜುನ ಪಂಡಿತರಂತಹ ಪಂಡಿತರೂ, ಚನ್ನಬಸವ ಪುರಾಣ ಕರ್ತೃವಾದ ವಿರೂಪಾಕ್ಷಪಂಡಿತ, ಬಸವಪುರಾಣ ಕರ್ತೃವಾದ ಭೀಮಕವಿ, ರಾಜಶೇಖರ ವಿಳಾಸವನ್ನು ರಚಿಸಿದ ಷಡಕ್ಷರ, ತ್ರಿಪದಿಯಲ್ಲಿ ಎಲ್ಲ ವಿಷಯಗಳನ್ನೂ ನಿರೂಪಿಸಿದ ಸರ್ವಜ್ಞರಂತಹ ಕವಿವರ್ಯರೂ ಬಸವ, ಚನ್ನಬಸವ, ಮಹದೇವಿಯಕ್ಕರಂತಹ ಉತ್ಕೃಷ್ಟ ವಚನಕಾರರೂ, ಶಿವತತ್ವರತ್ನಾಕರವೆಂಬ ವಿಶ್ವಜ್ಞಾನಕೋಶವನ್ನು ರಚಿಸಿದ ಬಸಪ್ಪನಾಯಕರಂತಹ ವಿದ್ವನ್ಮಣಿಗಳೂ ಈ ಸಮಾಜದಲ್ಲಿ ಆಗಿ ಹೋಗಿರುವರು. ಇನ್ನೊಂದು ವಿಶೇಷ ಸಂಗತಿಯನ್ನು ಈ ವಿಷಯದಲ್ಲಿ ಹೇಳದೆ

ಇರಲಾರೆನು. ವೀರಶೈವರು ವಚನ ವಾಙ್ಮಯ ಪದ್ಧತಿಯನ್ನು ಅಸ್ತಿತ್ವಕ್ಕೆ ತಂದು ಕನ್ನಡ ಭಾಷೆಗೆ ಅಮೂಲ್ಯವಾದ ರತ್ನಾಭರಣವನ್ನು ತೊಡಿಸಿದರು. ಮತ್ತು ಕನ್ನಡದ ಮೇಲಿದ್ದ ಸಂಸ್ಕೃತದ ಕಟ್ಟು ಸಡಿಲಿಸಿದರು. ಇದಲ್ಲದೆ ಷಟ್ಪದಿ, ಸಾಂಗತ್ಯ, ರಗಳೆಗಳನ್ನು ಹೆಚ್ಚಾಗಿ ಪ್ರಚಾರಕ್ಕೆ ತಂದವರೆಂದರೆ ವೀರಶೈವ ಕವಿಗಳೇ ಎಂದು ಬಹು ಅಭಿಮಾನದಿಂದ ಹೇಳಬಲ್ಲೆವು. ಇವೆಲ್ಲ ವಾಙ್ಮಯ ವಿಶಾರದರ ಹೆಸರುಗಳನ್ನು ಸ್ಮರಿಸಿದ ಮಾತ್ರಕ್ಕೇನೇ ಪ್ರತಿಯೊಬ್ಬ ಕನ್ನಡ ಭಾಷಾಭಿಮಾನಿಗೆ ಒಂದು ತರದ ಉತ್ಸಾಹವೂ ಉತ್ತೇಜನವೂ ಬರದೆ ಇರದು.

ಇಂಥ ಉಜ್ವಲವಾದ ವೈಭವದಿಂದ ಮೆರೆಯುತ್ತಿದ್ದ ಈ ನಮ್ಮ ವೀರಶೈವ ಸಮಾಜದ ವರ್ಚಸ್ಸು ಕಳೆಗುಂದಿದ ಕಾರಣಗಳನ್ನು ಈಗ ವಿಚಾರ ಮಾಡುವದು ಅಪ್ರಾಸಂಗಿಕವಾಗಲಾರದು.

**ವೀರಶೈವರ ವರ್ಚಸ್ಸು ಕಡಿಮೆಯಾಗುವದಕ್ಕೆ ಕಾರಣಗಳೇನು?**

ಯಾವದಾದರೊಂದು ಸಮಾಜವು ಎಲ್ಲ ರೀತಿಯಿಂದ ಹೆಚ್ಚಳವನ್ನು ಹೊಂದಿ ಮುಂದುವರಿಯಲಿಕ್ಕೆ ಆ ಸಮಾಜದಲ್ಲಿಯ ಶಿಕ್ಷಣ ಪ್ರಸಾರವೇ ಮುಖ್ಯ ಕಾರಣವು. ಶಿಕ್ಷಣದ ಮಹತ್ವವೇ ಇಂತಿಷ್ಟೇ ಎಂದು ಹೇಳಲಿಕ್ಕೆ ಬರುವಂತಿಲ್ಲ. ಶಿಕ್ಷಣದಿಂದ ಮನಸ್ಸು ಸುಸಂಸ್ಕೃತವಾಗಿ ವಿಕಾಸ ಹೊಂದುವದು. ಶಿಕ್ಷಣದಿಂದಲೇ ದೃಷ್ಟಿಯು ವಿಶಾಲವಾಗುವದು. ಶಿಕ್ಷಣದಿಂದಲೇ ಮಹತ್ವಾಕಾಂಕ್ಷೆಯುಂಟಾಗುವದು. ಈ ಮಹತ್ವಾಕಾಂಕ್ಷೆಯೇ ಮನುಷ್ಯನನ್ನು ಸಾಹಸದ ಕೆಲಸಗಳಿಗೆ ಪ್ರವೃತ್ತಗೊಳಿಸುವದು. ಆ ಸಾಹಸದ ಪ್ರವೃತ್ತಿ, ಆ ಮಹತ್ವಾಕಾಂಕ್ಷೆಗಳೇ ದೇಶ ವಿದೇಶಗಳ ಸಂಚಾರಕ್ಕೆ ತಳಹದಿಯಾಗಿರುವವು. ಶಿಕ್ಷಣದಿಂದ ಸಮಾಜದಲ್ಲಿ ಒಂದು ತರದ ಚೇತನೆಯುಂಟಾಗಿ ವಿಚಾರ ಪ್ರಗತಿಯೂ, ವಿಚಾರ ಕ್ರಾಂತಿಯೂ ಆಗುವದು. ಆದರೆ ನಮ್ಮ ಸಮಾಜದ ದುರ್ದೈವದಿಂದ ನಮ್ಮ ಸಮಾಜದ ಓದಿಸುವ ಮಠಗಳು (ಓಸುಮಠಗಳು) ಶಿಕ್ಷಣ ಪ್ರಸಾರ ಕಾರ್ಯವನ್ನು ಅಲಕ್ಷಿಸಿದವು. ಪಾಶ್ಚಾತ್ಯ ಶಿಕ್ಷಣವನ್ನು ಪಡೆಯಲು ನಮ್ಮ ಸಮಾಜದವರು ಉಪೇಕ್ಷೆಮಾಡಿದರು. ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದರೆ ಧರ್ಮಲಂಡರಾಗುವರು ಇದೇ ಮೊದಲಾದ ನಿರಾಧಾರವಾದ ಹಾಗೂ ಅಯೋಗ್ಯವಾದ ವಿಚಾರಗಳ ಸಂಚಾಲನೆಯು ನಮ್ಮ ಸಮಾಜವನ್ನು ಪಾಶ್ಚಿಮಾತ್ಯ ಶಿಕ್ಷಣದಿಂದ ದೂರಾಗಿರಿಸಿದವು. ಹೀಗಾಗಿ ಯಾವ ಶಿಕ್ಷಣವೂ

ಇಲ್ಲದೆ ಅಶಿಕ್ಷಿತರಾಗಿ ಉಳಿಯಬೇಕಾಯಿತು. ಇನ್ನೊಂದು ದುರ್ದೈವದ ಸಂಗತಿಯೇನಂದರೆ ಶಿಕ್ಷಣವನ್ನು ಪಡೆಯುವದಕ್ಕಿಂತ ಅಶಿಕ್ಷಿತರಾಗಿ ಉಳಿಯುವದರಲ್ಲಿಯೇ ತಮ್ಮ ಶ್ರೇಷ್ಠತೆಯಿರುವದೆಂಬ ವಿಪರೀತ ಕಲ್ಪನೆಯು ಜನರ ಮನಸ್ಸಿನಲ್ಲಿ ತುಂಬಿತ್ತೆಂಬ ಸಂಗತಿಯು ಅವರಲ್ಲಿದ್ದ ಶಿಕ್ಷಣ ವಿಷಯಕವಾದ ವಿಚಾರಗಳಿಂದ ತಿಳಿದುಬರುತ್ತದೆ. "ನಾವೇನು ಶಿಕ್ಷಣ ಪಡೆದು ನೌಕರಿ ಮಾಡಬೇಕಾಗಿಲ್ಲ" ಎಂಬ ಶಿಕ್ಷಣ ವಿಷಯಕವಾದ ವಿಚಾರವು ಎಷ್ಟು ವಿಪರೀತವಾದದ್ದೆಂಬದನ್ನು ಹೇಳಬೇಕಾಗಿಲ್ಲ. ಶಿಕ್ಷಣವನ್ನು ಪಡೆಯುವದು ತನ್ನ ಆತ್ಮ ವಿಕಾಸಕ್ಕಾಗಿ, ತನ್ನ ಜ್ಞಾನ ಭಂಡಾರವನ್ನು ಹೆಚ್ಚಿಸುವದಕ್ಕಾಗಿ, ತನ್ನ ಮನಸ್ಸು ಸುಸಂಸ್ಕೃತ ಮಾಡಿಕೊಳ್ಳುವದಕ್ಕಾಗಿ, ತನ್ನ ದೃಷ್ಟಿಯು ವಿಶಾಲವಾಗುವದಕ್ಕಾಗಿ, ಅಲ್ಲದೆ ಕೇವಲ ನೌಕರಿಯ ಆಶೆಗಾಗಿಯೇ ಅಲ್ಲ ಎಂಬುವದು ಅವರಿಗೆ ಹೊಳೆಯಲಿಲ್ಲ. ಯಾವ ವೀರಶೈವ ಸಮಾಜದ ಶೆಟ್ಟರು ಒಂದಾನೊಂದು ಕಾಲಕ್ಕೆ ರತ್ನಾಗಿರಿ ಜಿಲ್ಹೆಯಲ್ಲಿಯ ರಾಜಾಪುರವೆಂಬ ವ್ಯಾಪಾರಕ್ಕೆ ಪ್ರಸಿದ್ಧವಾದ ಪಟ್ಟಣದಲ್ಲಿಯೂ ಕೂಡ ತಮ್ಮ ವರ್ಚಸ್ಸನ್ನು ಪ್ರಸ್ಥಾಪಿಸಿದ್ದರೋ ಆ ನಮ್ಮ ವೀರಶೈವ ಸಮಾಜದ ಶೆಟ್ಟರು ಕಳೆಗುಂದಿದ್ದಕ್ಕೆ ಕಾರಣವೇನು? ಈಗ ವ್ಯಾಪಾರಕ್ಕಾಗಿ ಪ್ರಸಿದ್ಧವಿರುವ ಮುಂಬಯಿ, ಮದ್ರಾಸು ಕಲಕತ್ತಾ, ಕರಾಚಿ ಮುಂತಾದ ಬಂದರ ಸ್ಥಳಗಳಲ್ಲಿ ಈ ನಮ್ಮ ಶೆಟ್ಟರು ಈಗೇಕೆ ತಮ್ಮ ವರ್ಚಸ್ಸನ್ನು ಇಟ್ಟಿಲ್ಲ? ಗುಜರಾತಿ ಮತ್ತು ಮಾರವಾಡಿ ಶೇಟರೇಕೆ ಇಂಥಲ್ಲಿ ತಮ್ಮ ವರ್ಚಸ್ಸನ್ನು ನೆಲೆಗೊಳಿಸಿರುವರು? ಹೀಗಾಗಲು ಶಿಕ್ಷಣದ ಅಭಾವವೇ ಕಾರಣವಲ್ಲದೆ ಮತ್ತೇನು? ಶಿಕ್ಷಣದ ಅಭಾವದಿಂದ ನಮ್ಮ ಸಮಾಜದ ಮಹತ್ವಾಕಾಂಕ್ಷೆಯು ಅಳಿದುಹೋಯಿತು; ದೃಷ್ಟಿಯು ಆಕುಂಚಿತವಾಯಿತು: ರಾಜಕಾರಣವು ತಿಳಿಯದಂತಾಯಿತು; ಜನರು ಅಲ್ಪ ಸಂತುಷ್ಟಿಗಳಾದರು. ಪರದೇಶದವರ ಹೆಚ್ಚು ನಿಕಟ ಸಂಬಂಧವಾಗುತ್ತ ನಡೆದದ್ದರಿಂದ ವ್ಯಾಪಾರವು ಬಂದರ ಸ್ಥಳಗಳನ್ನು ಸೇರಿತು. ನಮ್ಮ ಶೆಟ್ಟರು ಮಾತ್ರ ಅಲಸಿಕೆಯಿಂದಲೋ ಅಲ್ಪ ಸಂತೋಷಿಗಳಾದುದರಿಂದಲೋ ತಮ್ಮ ವಾಸ ಸ್ಥಳಗಳನ್ನು ಬಿಟ್ಟು ಕದಲದಾದರು.

ವ್ಯಾಪಾರದಲ್ಲಿ ಹಿಂದುಳಿದು ತಮ್ಮ ವರ್ಚಸ್ಸನ್ನು ಕಳೆದುಕೊಂಡಂತೆ ರಾಜಕಾರಣಗಳಲ್ಲಿಯೂ ಕೂಡ ವೀರಶೈವರು ತಮ್ಮ ವರ್ಚಸ್ಸನ್ನು ಕಳೆದುಕೊಂಡರು. ತಮ್ಮ ಮನೆ ಅಥವಾ ಊರು ಬಿಟ್ಟು ಹೊರಬೀಳ

ದ್ದರಿಂದ ತಮ್ಮ ಸುತ್ತು ಮುತ್ತಲಿನ ವ್ಯವಹಾರವು ತಿಳಿಯುದಂತಾಯಿತು. ರಾಜಕಾರಣವು ಹೆಚ್ಚು ಸಾಹಸಿಗರಾದ ಅನ್ಯ ಮತೀಯರ ಆಧೀನವಾಗುತ್ತ ನಡೆದಿದ್ದರಿಂದ ಆ ಪಾಶ್ಚಿಮಾತ್ಯ ಭಾಷೆ ಕಲಿತವರಿಗೇನೇ ರಾಜಕಾರಣದಲ್ಲಿ ಅವಕಾಶವು ದೊರೆಯುಹತ್ತಿತು. "ನಮ್ಮ ಹೊಲಮನೆಯನ್ನು ಸಾಗಿಸಿಕೊಂಡು ಉಪಜೀವನವನ್ನು ನಡೆಯಿಸಿದರೆ ಸಾಕು. ನಮಗೇಕೆ ಈ ರಾಜಕಾರಣ ಬೇಕು" ಎಂಬ ಭಾವನೆಯು ವೀರಶೈವರಲ್ಲಿ ಹುಟ್ಟಿತು. ಈ ಪ್ರಕಾರ ದೃಷ್ಟಿಯು ಆಕುಂಚಿತವಾದುದರಿಂದ ವೀರಶೈವರ ಸ್ಥಿತಿಯು ಕಳೆಗುಂದಲಿಕ್ಕೆ ಹತ್ತಿತು.

೧೨ ರಿಂದ ೧೭ ನೆಯ ಶತಮಾನಗಳ ವರೆಗೆ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಮುಂದುವರಿದಿದ್ದ ವೀರಶೈವ ಸಮಾಜವು ಶಿಕ್ಷಣದ ಅಭಾವದಿಂದ ೧೯—೨೦ ನೆಯ ಶತಮಾನಗಳಲ್ಲಿ ಬಾಡಿದ ವೃಕ್ಷದೋಪಾದಿಯಲ್ಲಿ ಕಾಣಿಸುವದಿಲ್ಲವೇ? ಎತ್ತನೋಡಿದತ್ತ ಶಿಕ್ಷಣದ ಅಭಾವದಿಂದ ಬೆನ್ನು ಹತ್ತುವ ಕೆಡಕು ಪರಿಣಾಮಗಳು ಕಂಡ ಬರುವುದಿಲ್ಲವೇ? ಬಡತನವೂ, ಮೂಢಶ್ರದ್ಧೆಯೂ, ಮತ್ತು ದುಡ್ಡಿನ ದಾನದ ಸದುಪಯೋಗದ ಅಭಾವವೂ ವಿಶೇಷವಾಗಿ ಕಂಡು ಬರುದಿಲ್ಲವೇ?

ಶಿಕ್ಷಣದಿಂದ ಸಮಾಜದಲ್ಲಿ ಒಂದು ಪ್ರಕಾರದ ಚೈತನ್ಯವು ಉಂಟಾಗಿ ವಿಚಾರ ಪ್ರಗತಿಯೂ, ವಿಚಾರ ಕ್ರಾಂತಿಯೂ ಆಗುವದು. ಈ ವಿಚಾರ ಪ್ರಗತಿ, ವಿಚಾರಕ್ರಾಂತಿಗಳಿಂದಲೇ ಸಮಾಜವು ಸುಧಾರಿಸುವದು. ಯಾವ ಸಮಾಜದಲ್ಲಿ ವಿಚಾರ ಪ್ರಗತಿ, ವಿಚಾರ ಕ್ರಾಂತಿಗಳು ಉಗಮವಾಗುವದಿಲ್ಲವೋ ಅಂಥ ಸಮಾಜದ ಅಸ್ತಿತ್ವವು ಜಗತ್ತಿನಲ್ಲಿ ಉಳಿಯಲಿಕ್ಕೆ ಆಧಾರವಿಲ್ಲದಂತಾಗುತ್ತದೆ. ಶಿಕ್ಷಣ ಪ್ರಸಾರದಿಂದ ಹೆಚ್ಚಿಗೆ ಜ್ಞಾನವನ್ನೂ, ವಿದ್ಯೆಯನ್ನೂ ಸಂಪಾದಿಸಬೇಕೆಂಬ ಲವಲವಿಕೆಯು ಹುಟ್ಟುವದು.

ಆದರೆ ಇತ್ತಿತ್ತಲಾಗಿ ಕೆಲವು ವರ್ಷಗಳಿಂದ ಶಿಕ್ಷಣದ ಮಹತ್ವವು ಸಮಾಜಕ್ಕೆ ತಿಳಿಯ ಹತ್ತಿದ್ದರಿಂದ ಶಿಕ್ಷಣ ಪ್ರಸಾರಕ್ಕಾಗಿ ಅಲ್ಲಲ್ಲಿ ಪ್ರಯತ್ನಗಳು ನಡೆದದ್ದೊಂದು ಸುಚಿನ್ಹವು.



# ನಮ್ಮ ಸಮಾಜದ ಏಳ್ಗೆಯ ಕೆಲವೊಂದು ಉಪಾಯಗಳು.

೧. ಪಂಗಡಗಳು ಅಳಿದು ಹೋಗಬೇಕು.

ಸಮಾಜದಲ್ಲಿಯ ಪಂಗಡಗಳು ಅಳಿದು ಹೋಗುವದು ಅತ್ಯಂತ ಅವಶ್ಯವಾದದ್ದೆಂದು ಎಲ್ಲರೂ ಒಪ್ಪಲೇಬೇಕು. ಇದನ್ನು ಸಾಧಿಸಬೇಕಾದರೆ ನಾನು ಇಷ್ಟರಲ್ಲಿಯೇ ಹೇಳುವ ಆಧಾರಗಳನ್ನು ಪ್ರತಿಯೊಬ್ಬ ವೀರಶೈವ ವ್ಯಕ್ತಿಯು (ಸ್ತ್ರೀ ಪುರುಷರಾಗಲಿ, ಬಾಲವೃದ್ಧರಾಗಲಿ) ದಿನಾಲು ಒಮ್ಮೆಯಾದರೂ ಮಂತ್ರದಂತೆ ಪಠಿಸಬೇಕು. ಹೀಗೆ ಮಾಡುವದು ಒಂದು ಆದ್ಯಕರ್ತವ್ಯವೆಂದು ಪ್ರತಿಯೊಬ್ಬ ವೀರಶೈವನು ತಿಳಿಯತಕ್ಕದ್ದು. ಇಷ್ಟೇ ಅಲ್ಲ. ಆದರಂತೆ ಆಚರಿಸಲಿಕ್ಕೆ ಸಹ ಪ್ರಯತ್ನ ಮಾಡತಕ್ಕದ್ದು.
ಆ ಆಧಾರಗಳ ವಿವರ.—

ಮಮಯೋರ್ಧಾರಯೇಲ್ಲಿಂಗಂ ಯಥೋಕ್ತಂ ಗುರುಣಾಶಿವೇ ।

... ... ... ...

ನ ತಸ್ಯ ಜಾತಿ ಭೇದೋಽಸ್ತಿ ನಶುಚ್ಯ ಶುಚಿಕಲ್ಪನಾ ।
ನ ಸ್ಪೃಷ್ಟಿರ್ನಾಪಿವಾ ಶುದ್ಧಿಃ ಸರ್ವಂ ಶಿವ ಮಯಂಯತಃ ॥

ಪಾರಮೇಶ್ವರಾಗಮ.

ಗ್ರಾಮೇಣ ಮಲಿನಂ ತೋಯಂ ಯಥಾಸಾಗರಂ ಗತಂ ।
ಶಿವ ಸಂಸ್ಕರ ಸಂಪನ್ನಂ ಜಾತಿಭೇದಂ ನಕಾರಯೇತ್ ॥

ಶಿವರಹಸ್ಯ.

ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮ ಜೀವ ಸಮಾಯುಕ್ತಂ ವರ್ಣಾನಾಂಕಿಂಪ್ರಯೋಜನಂ ॥

ಚನ್ನಬಸವೇಶ್ವರ ವಚನ.

"...ಶಿವನೇ ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವನೆತ್ತಿ ನುಡಿದವಂಗೆ ಇಪ್ಪತ್ತೆಂಟುಕೋಟಿ ನರಕ ತಪ್ಪದು ನೋಡಯ್ಯ..."

ಮಹದೇವಿಯಕ್ಕನ ವಚನ.

ಹೀಗೆ ಮಾಡಿದರೆ ಆದಷ್ಟು ತೀವ್ರವಾಗಿ ವಿಚಾರ ಆಚಾರಗಳಲ್ಲಿ ಹಿತಕರವಾದ ಕ್ರಾಂತಿಯುಂಟಾಗುವದು. ವಿಚಾರ ಆಚಾರಗಳಲ್ಲಿ ಈ ಪ್ರಕಾರವಾಗಿ ಹಿತಕರವಾದ ಕ್ರಾಂತಿಯುಂಟಾಗುವದರಿಂದ ಸಂಘ ಶಕ್ತಿಯು ಬೆಳೆದು ಸಮಾಜ ಶಕ್ತಿಯು ವರ್ಧಿಸುವದು. ಕ್ಷುಲ್ಲಕವಾದ ಹಾಗೂ ಸಮಾಜಕ್ಕೆ ಯಾವ ವಿಧದಲ್ಲೂ ಲಾಭದಾಯಕವಲ್ಲದಂಥ ಮಾತುಗಳಲ್ಲಿ ಸಮಾಜ ಶಕ್ತಿಯೂ, ಹಣವೂ, ಅನವಶ್ಯವಾಗಿ ಕಳೆಯುವದು ಬಂದಾಗುವದು. ನಾನು ಹೆಚ್ಚು, ನನ್ನ ಪಂಗಡವು ಅಥವಾ ನನ್ನ ಸಮಯವು ಹೆಚ್ಚು ಎಂಬ ಶುಷ್ಕವಾದವೂ ಮತ್ತು ಅದರಿಂದುಂಟಾಗುವ ಮಹತ್ತರವಾದ ಕೇಡೂ ತಪ್ಪುವವು. ಈ ಪಂಗಡಗಳ ಬಡದಾಟದಿಂದ ಉಂಟಾಗಿದ್ದ ಮತ್ತು ಉಂಟಾಗಬಹುದಾದ ಸಮಾಜ ಹಾಗೂ ಸಂಘ ಶಕ್ತಿಯ ದುರ್ಬಲತೆಯೂ ಮತ್ತು ಕ್ಷೀಣತೆಯೂ ಹೋಗಿ ಸಮಾಜ ಶಕ್ತಿಯು ವರ್ಧಿಸಿ, ಒಕ್ಕಟ್ಟಿನಿಂದುಂಟಾಗುವ ಹೆಚ್ಚಿನ ಲಾಭವು ವೀರಶೈವರಿಗೆ ಎಲ್ಲ ಕಾರ್ಯ ಕ್ಷೇತ್ರಗಳಲ್ಲಿ ಉಂಟಾಗುವದೆಂಬದರಲ್ಲಿ ಯಾವ ಸಂದೇಹವೂ ಕಂಡುಬರುವದಿಲ್ಲ. ನಾನು ಪುನಃ ಒತ್ತಿ ಹೇಳುವದೇನಂದರೆ ಮೇಲೆ ಹೇಳಿದ ಆಧಾರಗಳನ್ನು ಎಲ್ಲ ವೀರಶೈವರು ಮಂತ್ರದಂತೆ ದಿನಾಲು ಒಮ್ಮೆಯಾದರೂ ಪಠಿಸತಕ್ಕದ್ದು. ಇದರಿಂದ ನಮ್ಮ ದೇಶದ ಹಿತವು ಹೆಚ್ಚಾಗಿ ಸಾಧಿಸುವದು.

**೨ ವೀರಶೈವ ಸಮಾಜದ ಸಂಘಟನೆಯಲ್ಲಿಯ 'ಜಂಗಮ'ರ ಮಹತ್ವನ್ನು ತಿಳಿದುಕೊಳ್ಳಬೇಕು.**

ವೀರಶೈವ ಸಮಾಜದ ಅಂತರ್ವ್ಯವಸ್ಥೆಯ ರಚನೆಯು ಬಹು ಜಾಣತನದಿಂದಲೂ, ದೂರದೃಷ್ಟಿಯಿಂದಲೂ ಸಿದ್ಧಪಡಿಸಿದ್ದಾಗಿದೆ. ವೀರಶೈವ ಸಮಾಜ ಸಂಸ್ಥಾಪಕರು ಕಾಲಾಂತರದಲ್ಲಿ ಸಮಾಜದಲ್ಲಿ ಹುಟ್ಟಬಹುದಾದ ಒಡಕುಗಳನ್ನು ಅಥವಾ ಪಂಗಡಗಳನ್ನು ಮೊದಲೇ ತಿಳಿದುಕೊಂಡು ಅಂಥ ಅನಾಹುತವನ್ನು ತಡೆಯುವ ವ್ಯವಸ್ಥೆಯನ್ನು ಕೂಡ ಸಮಾಜಸದ ಸಂಘಟನೆಯಲ್ಲಿಯೇ ಸೇರ್ಪಡಿಸಿರುವದು ಒಡೆದು ಕಾಣುವಂತಿರುತ್ತದೆ. ಈ ಸಂಘಟನೆಯಲ್ಲಿ ಬದಲಾವಣೆಯಾಗದೆ ಇದ್ದದ್ದರಿಂದ ವೀರಶೈವ ಸಮಾಜವು ಇಲ್ಲಿಯ ವರೆಗೆ ಒಳ್ಳೆಯ ರೀತಿಯಲ್ಲಿ ಉಳಿದಿರುವದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಈ ಘಟನೆಯು ಯಾವದೆಂದರೆ ವೀರಶೈವ ಸಮಾಜದ ಪ್ರತಿಯೊಬ್ಬರು ಜಂಗಮರ ಸಂಮ್ಮುಖದಲ್ಲಿ ಬಂದೊಡನೆಯೇ ತಮ್ಮ ತಮ್ಮೊಳಗೆ ಕಲ್ಪಿಸಿಕೊಂಡಿದ್ದ

ಕಾಲ್ಪನಿಕ ಉಚ್ಚನೀಚ ಭಾವನೆಗಳನ್ನಳಿದು ಎಲ್ಲರೂ ಸಮಾನರಂತೆ ನಡೆದುಕೊಳ್ಳತಕ್ಕದ್ದು. ಈ ಪದ್ಧತಿಯು ಇನ್ನೂ ವರೆಗೂ ಅಸ್ತಿತ್ವದಲ್ಲಿದ್ದದ್ದು ನಮ್ಮ ಸುದೈವವೇ ಸರಿ. ಈಗ ನಮ್ಮ ಸಮಾಜದಲ್ಲಿ ಅನೇಕ ಪಂಗಡಗಳನ್ನು ಅವರವರ ಉದ್ಯೋಗಗಳ ಮೇಲಿಂದ ಕಲ್ಪಿಸಿಕೊಂಡಿರ ಬಹುದಾಗಿದ್ದರೂ ಜಂಗಮರ ಸಮ್ಮುಖದಲ್ಲಿ ಎಲ್ಲರೂ ಸಮಾನತೆಯಿಂದ ನಡೆದುಕೊಳ್ಳುವದು, ಊಟ ಉಡಿಗೆಗಳಲ್ಲಿ ಉಚ್ಚನೀಚ ಭಾವನೆಯನ್ನು ಮರೆತು ಬಿಡುವದು, ನಮ್ಮ ಸಮಾಜದಲ್ಲಿ ಜಂಗಮರಲ್ಲಿದ್ದ ಪೂಜ್ಯ ಭಾವನೆ, ಮಹತ್ವಗಳನ್ನು ತೋರಿಸುತ್ತದೆ.

೩ ಜಂಗಮ ಸ್ಥಳವು ವೀರಶೈವರ ಸಮಾನತೆಯು ಮತ್ತು ಏಕೀಕರಣದ ಕುರುಹು ಎಂದು ತಿಳಿದು ನಡೆಯತಕ್ಕದ್ದು.

ಜಂಗಮವೆಂದರೆ ವೀರಶೈವರನ್ನು ಒಕ್ಕಟ್ಟಿನಿಂದ ಇಡುವ ಏಕೀಕರಣದ ಕುರುಹು. ಅವರಲ್ಲಿರತಕ್ಕಂತಹ ಶಕ್ತಿಯು ಅಸಾಮಾನ್ಯವಾದುದು. ಆ ಶಕ್ತಿ ಭಂಡಾರವು ಅವರ ಚರಣಕಮಲಗಳಲ್ಲಿ ನೆಲಿಸಿದೆ. ಆ ಶಕ್ತಿಯು ಸೂಜಿಗಲ್ಲಿನೋಪಾದಿಯಲ್ಲಿ, ಭಕ್ತ ವೃಂದದ ಶಿರಗಳನ್ನು ತನ್ನೆಡೆಗೆ ಯಾವಾಗಲೂ ಎಳೆದುಕೊಳ್ಳುತ್ತಿರುವದು. ಕಮಲವು, ಭ್ರಮರಗಳಲ್ಲಿ ಭೇದ ಭಾವವನ್ನೆಣಿಸದೆ, ಎಲ್ಲವನ್ನೂ ಸಮಾನತೆಯಿಂದ ಕಂಡು, ತತ್ನಲ್ಲಿದ್ದ ಮಧುವನ್ನಾಸ್ವಾದಿಸಲಿಕ್ಕೆ ಅನುವು ಕೊಡುವಂತೆ, ಕಮಲ ರೂಪೀ ಜಂಗಮ ಚರಣವು, ಭ್ರಮರ ರೂಪೀ ಭಕ್ತರ ಶಿರಗಳನ್ನು, ತನ್ನ ಆಗೋಚರವಾದ ಶಕ್ತಿಯಿಂದ, ಅವರಲ್ಲಿ ಭೇದಭಾವವಿಲ್ಲದೆ ತನ್ನೆಡೆಗೆ ಆಕರ್ಷಿಸುತ್ತಿರುವದು. ಇದೇ ಆ ಜಂಗಮ ಸ್ಥಲದ ವೈಶಿಷ್ಟ್ಯವು.

ಸಮಾಜದ ಭದ್ರತೆಯನ್ನು ರಕ್ಷಿಸುವ ಸ್ಥಲವೆಂದರೆ ಜಂಗಮಸ್ಥಲವು. ವೀರಶೈವರೆಲ್ಲರೂ ಸಮಾನರೆಂದು ತೋರಿಸುವ ಸ್ಥಲವೆಂದರೆ ಜಂಗಮ ಸ್ಥಲವು. ಈ ಸ್ಥಲವು ಪರಮ ಪೂಜ್ಯವಾದದ್ದೂ, ಅತಿ ಮಹತ್ವವುಳ್ಳದ್ದೂ ಮತ್ತು ಕೇವಲ ಅನುಪಮವಾದದ್ದೂ ಇರುತ್ತದೆ. ಇಂತಹ ಪರಮ ಪೂಜ್ಯವಾದ ಜಂಗಮಸ್ಥಲದ ಮಹತಿಯನ್ನು ಕಾಯ್ದಿಡುವದು ಪ್ರತಿಯೊಬ್ಬ ವೀರಶೈವ ಭಕ್ತನ ಆದ್ಯ ಕರ್ತವ್ಯವಾಗಿದೆ.

ಭಕ್ತರು ಜಂಗಮರ ಮಹತಿಯನ್ನು ಕಾಯಲು ಪ್ರಯತ್ನಿಸಬೇಕೆಂದು ಈಗ ಹೇಳಿದೆನು. ಆದರೆ ಯಾವನಾದರೊಬ್ಬ ಅಧಿಕಾರಸ್ಥನ

ಅಧಿಕಾರವಾಗಲಿ, ಮಹತ್ವವಾಗಲಿ ಅಥವಾ ವರ್ಚಸ್ಸಾಗಲಿ, ಆತನ ಅನುಯಾಯಿಗಳು ಅಥವಾ ಸೇವಕರು ರಕ್ಷಿಸಲಿಕ್ಕೆ ಎಷ್ಟೇ ಪ್ರಯತ್ನಿಸಿದರೂ ಕೊನೆಗೆ ಅದನ್ನು ರಕ್ಷಿಸಿಕೊಳ್ಳುವ ಭಾರವು ಆ ಅಧಿಕಾರಸ್ಥಳದಲ್ಲಿದ್ದವನನ್ನೇ ಹೆಚ್ಚು ಅವಲಂಬಿಸಿರುತ್ತದೆ. ಒಬ್ಬ ಹೇಡಿಯನ್ನು ಸೇನಾಪತಿಯನ್ನಾಗಿ ಮಾಡಿ ಆತನ ಬೆಂಬಲಕ್ಕೆ ಸಾವಿರಾರು ಶೂರ ದಂಡಾಳುಗಳನ್ನು ಕೊಟ್ಟಾಗ್ಯೂ ರಣರಂಗಕ್ಕೆ ಮುಂದಾಗಲಿಕ್ಕೆ ಆತನು ಹೇಗೆ ಅಯೋಗ್ಯನಾಗುವನೋ ಅದರಂತೆ ಒಬ್ಬ ಅಯೋಗ್ಯನಾದವನು ಜಂಗಮಸ್ಥಳವಲ್ಲಿದ್ದರೆ ಆತನ ಕಡೆಯಿಂದ ಆ ಸ್ಥಳದ ಪೂಜ್ಯತೆಯನ್ನೂ, ಮಹತ್ವವನ್ನೂ, ವರ್ಚಸ್ಸನ್ನೂ ಕಾಯ್ದುಕೊಳ್ಳುವದು ಶಕ್ಯವಾಗುವದಿಲ್ಲ. ಆ ಎಲ್ಲ ಗುಣಗಳು ಆ ಸ್ಥಾನದಲ್ಲಿರತಕ್ಕವನಲ್ಲಿಯೇ ಇರತಕ್ಕದ್ದು. ಒಂದುವೇಳೆ ಅಂಥ ಗುಣಗಳು ಆತನಲ್ಲಿ ಇರದಿದ್ದರೆ ಅವುಗಳನ್ನು ಅರ್ಜನೆ ಮಾಡಿಕೊಂಡು ತನ್ನ ಸ್ಥಳದ ಮರ್ಯಾದೆಯನ್ನೂ, ವರ್ಚಸ್ಸನ್ನೂ ಹಾಗೂ ಸಮಾಜದ ಭದ್ರತೆಯನ್ನೂ ರಕ್ಷಿಸಿಕೊಳ್ಳಲಿಕ್ಕೆ ಯಾವಾಗಲೂ ಪ್ರಯತ್ನಿಸುತ್ತಿರಬೇಕು. ಹೀಗೆ ಭಕ್ತರೂ, ಜಂಗಮರೂ ಕೂಡಿಯೇ ಸಮಾಜದ ಭದ್ರತೆಯನ್ನು ಕಾಪಾಡಲಿಕ್ಕೆ ಪ್ರಯತ್ನಿಸಿದಲ್ಲಿ ಸಮಾಜವು ಶಿಥಿಲವಾಗುವ ಭಯವೇ ಇಲ್ಲ.

೪ ಗುರುಸ್ಥಲ ಮತ್ತು ವಿರಕ್ತರ ನಡುವಿನ ಈಗಿರುವ ಮುದವು ಅಳಿಯಬೇಕು.

ಆದರೆ ಇತ್ತೀಚೆಗೆ 'ಗುರುಸ್ಥಲ' ಹಾಗೂ 'ವಿರಕ್ತರೊಳಗೆ ಒಂದು ತರದ ವಾದವು ಉಂಟಾಗಿದ್ದುದು ಬಹಳ ವಿಷಾದಕರವಾದ ಸಂಗತಿಯಾಗಿದೆ. ಯಾವ ಜಂಗಮರ ಸನ್ನಿಧಿಯಲ್ಲಿ ಭಕ್ತರಲ್ಲಿರತಕ್ಕ ಭೇದ ಭಾವವು ಅಳಿದು ಹೋಗತಕ್ಕದ್ದೋ ಅಂತಹ ಜಂಗಮರಲ್ಲಿಯೇ ಒಡಕು ಹುಟ್ಟಿದ್ದು ನಮ್ಮ ಸಮಾಜದ ದುರ್ದೈವವೇ ಸರಿ. ಈ ಅನವಶ್ಯಕವಾದ ವಾದದಿಂದ ಸಮಾಜದ ಕಳೆಗೆ, ಮೇಲ್ಮೆಗೆ ಅಥವಾ ಮಹತಿಗೆ ಕುಂದು ಉಂಟಾಗಿದೆ. ಇದರಿಂದ ವೀರಶೈವ ಸಮಾಜವೆಂಬ ಕಟ್ಟಡವು ಶಿಥಿಲವಾಗುವ ಭಯವಿದೆ. ಸಮಾಜದ ಸಂಘ ಶಕ್ತಿಯಲ್ಲಿ ಹೀನತೆಯುಂಟಾಗುವ ಸಂಭವವಿದೆ. ಈ ವಾದದಿಂದ ಜಂಗಮ ಸ್ಥಲವು ವೀರಶೈವ ಸಮಾಜದ ಏಕೀಕರಣದ ಕುರುಹು ಎಂಬ ಉಕ್ತಿಗೆ ಭಂಗ ತಂದಂತೆ ಆಗಿರುತ್ತದೆ. ಇಂಥ ಕೆಡುಕು ಪರಿಣಾಮಕಾರಕವಾದ ವಾದವು ಅಳಿದು ಹೋದಲ್ಲಿ ಸಮಾಜದಲ್ಲಿ ಭದ್ರತೆಯುಂಟಾಗುವದಲ್ಲದೆ ಸಮಾಜದ ಸೌಂದ

ರ್ಯವು ಸರ್ವತೋಮುಖವಾಗಿ ಹೆಚ್ಚಾಗುವದು. ಜಂಗಮ ಸ್ಥಲವು ವೀರಶೈವ ಏಕೀಕರಣದ ಕುರುಹು ಎಂಬ ಉಕ್ತಿಯನ್ನು ಗುರು ವಿರಕ್ತರು ನೆನಪಿಗೆ ಮಾತ್ರ ತಂದುಕೊಂಡರೆ ಈಗಿರುವ ದ್ವೈಧೀಭಾವವು ತೀವ್ರವಾಗಿ ಅಳಿದುಹೋಗುವದು. ಇತ್ತ ಕಡೆಗೆ ಗುರುಸ್ಥಲದವರೂ ಮತ್ತು ವಿರಕ್ತರೂ ಲಕ್ಷ್ಯಕೊಡುವರೆಂದು ನಾನು ಭಕ್ತಿ ಪೂರ್ವಕವಾಗಿಯೂ, ದೈನ್ಯ ದಿಂದಲೂ ಮತ್ತು ನಮ್ರತೆಯಿಂದಲೂ ಆಶಿಸುತ್ತೇನೆ. ಮತ್ತು ವೀರಶೈವ ಸಮಾಜದ ಏಕೀಕರಣದ ಕುರುಹೆಂದು ನಾನು ಪದೇ ಪದೇ ಹೇಳಿದ 'ಜಂಗಮ' ಸ್ಥಲದಲ್ಲಿರುವ 'ಗುರು' 'ವಿರಕ್ತ'ರು ತಮ್ಮ ಏಕೀಕರಣದ ಕುರುಹನ್ನು ಕಾಯಮವಾಗಿ ಕಾಯ್ದುಕೊಳ್ಳಲಿಕ್ಕೆ ಪ್ರಯತ್ನಿಸುವರೆಂದು ನಾನು ಕೋರುತ್ತೇನೆ.

ಇ ಮಹಾಸಭೆಯು ಮೇಲಿಂದಮೇಲೆ ನೆರೆದು ಸಮಾಜವನ್ನು ಜಾಗ್ರತ ಪಡಿಸತಕ್ಕದ್ದು.

ಅಖಿಲ ಭಾರತ ವೀರಶೈವ ಮಹಾಸಭೆಯು ಹುಟ್ಟಿ ಸುಮಾರು ೩೨ ವರ್ಷಗಳಾದವು. ಆದರೆ ಈ ಸಭೆಯು ೧೨ ನೆಯ ಮಹಾಸಭೆಯಾಗಿದೆ. ಇನ್ನೂ ಈ ಮಹಾಸಭೆಯು ಬಾಲ್ಯಾವಸ್ಥೆಯನ್ನು ದಾಟಿದಂತಾಗಿಲ್ಲ. ಇದು ವೀರ ಶೈವ ಸಮಾಜದ ಆರೋಗ್ಯಕ್ಕೆ ಒಳ್ಳೆಯ ಕುರುಹು ಅಲ್ಲ. ಇದಕ್ಕೆ ಯಾವ ರೋಗದ ಬಾಧೆಯಿರುವದೆಂಬದನ್ನು ಪರೀಕ್ಷೆ ಮಾಡಿ ಅದಕ್ಕೆ ತಕ್ಕ ಔಷದೋಪಚಾರ ಮಾಡುವದು ನಮ್ಮೆಲ್ಲರ ಕರ್ತ ವ್ಯವಾಗಿದೆ. ಈ ವಿಷಯದಲ್ಲಿ ಸಮಾಜದ ಮುಖಂಡರು ಅನೇಕ ದೋಷ ಗಳನ್ನು ಕಂಡು ಹಿಡಿದು ಅನೇಕ ಉಪಾಯಗಳನ್ನು ಕಲ್ಪಿಸಿರುವರು. ೧೯೨೭ ನೆಯ ಇಸವಿಯಲ್ಲಿ ದಾವಣಗೆರೆಯಲ್ಲಿ ನೆರೆದ ಸಭೆಯ ಕಾಲಕ್ಕೆ ಒಂದು ದೊಡ್ಡ ನಿಧಿಯನ್ನು ಕೂಡಿಸಿದರು. ೧೯೩೬ ನೆಯ ಇಸವಿಯಲ್ಲಿ ಬೆಂಗಳೂರಿನಲ್ಲಿ ನೆರೆದ ಅಧಿವೇಶನದಲ್ಲಿ ಹೊಸ ಘಟನೆಯನ್ನು ನಿರ್ಮಿಸ ಬೇಕೆಂದು ಗೊತ್ತಾಯಿತು. ಆದರೆ ಇವುಗಳಿಂದ ಬಯಸಿದಷ್ಟು ಫಲವು ಸಿಕ್ಕಿಲ್ಲ. ಈ ಮಹಾಸಭೆಯು ಮೇಲಿಂದ ಮೇಲೆ ನೆರೆಯುವದರಿಂದ ಇಡೀ ಸಮಾಜದ ಸ್ಥಿತಿಯನ್ನು ಆಗಾಗ್ಗೆ ಪರೀಕ್ಷಿಸುವ ಸಂಧಿಯು ಸಿಗುವದು. ಸಮಾಜದ ಸ್ಥಿತಿಯನ್ನು ಮೇಲಿಂದ ಮೇಲೆ ವಿಚಾರ ಮಾಡಿ ಯೋಗ್ಯ ಉಪಾಯಗಳನ್ನು ಸೂಚಿಸುವ ಲಾಭವು ಉಂಟಾಗುವದು. ಆದ್ದರಿಂದ ಈ ಮಹಾಸಭೆಯು ಮೇಲಿಂದಮೇಲೆ ನೆರೆಯುವಂತೆ ಪ್ರಯತ್ನ ಮಾಡತಕ್ಕದ್ದು.

ವೀರಶೈವ ಸಮಾಜದಲ್ಲಿ ಮೇಲಾದ ಕವಿಗಳೂ, ಸಾಹಿತಿಗಳೂ, ಗ್ರಂಥಕಾರರೂ ಆಗಿಹೋಗಿರುವರು. ಇವರೆಲ್ಲರೂ ನಮ್ಮ ಸಮಾಜದಲ್ಲಿಯ ಅರಸರ, ಮಂತ್ರಿಗಳ, ವೀರ ಪುರುಷರ ಚರಿತ್ರೆಗಳನ್ನೂ, ಅನೇಕ ಧಾರ್ಮಿಕ, ತಾತ್ವಿಕ ಗ್ರಂಥಗಳನ್ನೂ, ಸಾಮಾಜಿಕ ಸ್ಥಿತಿಯನ್ನು ವರ್ಣಿಸುವಂತಹ ಗ್ರಂಥಗಳನ್ನೂ ಇನ್ನೂ ಬೇರೆ ಬೇರೆ ವಿಷಯಗಳ ಮೇಲೆ ಬಹು ಅಮೌಲ್ಯವಾದ ಪುಸ್ತಕಗಳನ್ನೂ ಬರೆದಿಟ್ಟಿರುವರು. ಅವೆಲ್ಲ ಗ್ರಂಥಗಳು ಅಗತ್ಯವಿದ್ದಾಗ ಸಿಗುವದು ಬಹಳ ಕಠಿಣವಾಗಿದೆ. ಮೇಲಾಗಿ ಯಾವ ಯಾವ ಗ್ರಂಥಗಳು ಎಲ್ಲಿ ಎಲ್ಲಿ ದೊರಕುವವೆಂಬುದನ್ನು ತಿಳಿದುಕೊಳ್ಳುವದು ಸಹ ಕಷ್ಟದ ಕೆಲಸವಾಗಿದೆ. ಮತ್ತೊಂದು ದೊಡ್ಡ ತೊಂದರೆಯೇನೆಂದರೆ ಧಾರ್ಮಿಕ ಭಾವನೆಯುಳ್ಳ ಎಷ್ಟೋ ಜನರು ತಮ್ಮಲ್ಲಿದ್ದ ಗ್ರಂಥಗಳನ್ನು ಕೇವಲ ಪೂಜೆ ಮಾಡುವದಕ್ಕಾಗಿಯೇ ಉಪಯೋಗಿಸುತ್ತಿರುವರು. ಈ ಪ್ರಕಾರ ಎಷ್ಟೋ ಮಹತ್ವದ ಗ್ರಂಥಗಳು ವ್ಯಕ್ತಿ ಸ್ವಾಧೀನಕ್ಕೊಳಪಟ್ಟಿರುವದರಿಂದ ಅವುಗಳನ್ನು ಸಕಾಲಕ್ಕೆ ದೊರಕಿಸುವದು ಸುಲಭವಾದ ಕೆಲಸವಲ್ಲ. ಆದ್ದರಿಂದ ಈ ಮಹಾಸಭೆಯು ಆಧೀನಕ್ಕೊಳಪಡಿಸಿ ಸಮಾಜಕ್ಕೆ ಸಂಬಂಧಿಸಿದ ಎಲ್ಲ ಗ್ರಂಥಗಳನ್ನು ಒತ್ತಟ್ಟಿಗೆ ಕೂಡಿಸಿ ಒಂದು ಮಧ್ಯವರ್ತಿ ಪುಸ್ತಕಾಲಯುವನ್ನು ಸ್ಥಾಪಿಸತಕ್ಕದ್ದು.

೬ ಮಧ್ಯವರ್ತಿ ಪುಸ್ತಕಾಲಯುವನ್ನು ಸ್ಥಾಪಿಸತಕ್ಕದ್ದು.

ಅದರಂತೆ ಸಮಾಜದ ಏಳ್ಗೆಗೆ ಸಹಾಯಕಾರಿಯಾದಂಥ ದೈನಿಕ ಪತ್ರಗಳನ್ನೂ ವಾರಪತ್ರಗಳನ್ನೂ ಹಾಗು ಮಾಸ ಪತ್ರಗಳನ್ನೂ ಮಧ್ಯವರ್ತಿ ಸಂಸ್ಥೆಯಿಂದ ಹೊರಡಿಸುವದು ಅವಶ್ಯವು. ವೀರಶೈವರು ವಾಸಿಸುವ ಸ್ಥಳಗಳನ್ನೂ, ಜನಸಂಖ್ಯೆಯನ್ನೂ ಈ ಮೊದಲೇ ನಾನು ಹೇಳಿರುತ್ತೇನೆ. ಅದನ್ನು ಪರಿಶೀಲಿಸಿ ನೋಡಿದಲ್ಲಿ ನಮ್ಮ ಜನರು ದೂರದೂರ ವಾಸಿಸುತ್ತಿರುವದು ಕಂಡು ಬರುವದು. ಇವರೆಲ್ಲರಲ್ಲಿ ಪರಸ್ಪರ ಸಂಬಂಧ ಬೆಳೆಯಿಸಲಿಕ್ಕೆ ಈ ಪತ್ರಿಕೆಗಳು ಸಹಾಯಕಾರಿಯಾಗುವವು. ಬೇರೆ ಬೇರೆ ಭಾಗಗಳಲ್ಲಿದ್ದ ಜನರ ತೊಂದರೆ, ಅವರವರ ಪರಿಸ್ಥಿತಿ, ಆಚಾರ ವಿಚಾರಗಳಲ್ಲಿದ್ದ ಭೇದಗಳನ್ನು ತಿಳಿದುಕೊಳ್ಳಲು ಒಳ್ಳೇ ಅನುಕೂಲವಾಗುವದು. ಅದರಂತೆ ದೇಶ ವಿದೇಶದ ವರ್ತಮಾನಗಳನ್ನೂ, ಹೊಸ ಹೊಸ ಯಾಂತ್ರಿಕ ಹಾಗೂ ಶಾಸ್ತ್ರೀಯ ಶೋಧಗಳನ್ನೂ ಅವುಗಳ

೭ ದೈನಿಕ, ವಾರ, ಮಾಸ ಪತ್ರಗಳನ್ನು ಹೊರಡಿಸತಕ್ಕದ್ದು.

ಉಪಯೋಗಗಳನ್ನೂ ನಮ್ಮ ಜನರಗೆ ತಿಳಿಸಿಕೊಡಲು ಬಹಳ ಸಹಾಯ ವಾಗುವದು. ಮತ್ತು ಸಮಾಜದ ಏಳ್ಗೆಗೆ ಸಹಾಯಕಾರಿಯಾದಂಥ ಬೇರೆ ಬೇರೆ ವಿಷಯಗಳ ಮೇಲೆ ಆಯಾ ವಿಷಯಗಳಲ್ಲಿಯ ತಜ್ಞರ ಲೇಖಗಳನ್ನೂ ಪ್ರಸಿದ್ಧಿಸಿ ಜನರಲ್ಲಿ ಆ ವಿಚಾರಗಳನ್ನು ಹಬ್ಬಿಸಲು ಸುಲಭವಾಗುವದು. ಅದರಂತೆ ನಮ್ಮ ಸಮಾಜದಲ್ಲಿಯ ಪಂಗಡಗಳನ್ನು ಅಳಿದು ಐಕ್ಯವನ್ನುಂಟುಮಾಡುವದು ಸಾಧ್ಯವಾಗುವದು. ಈಗ ನಮ್ಮಲ್ಲಿ ಹಲವು ವಾರ ಪತ್ರಗಳೂ, ಮಾಸಪತ್ರಗಳೂ ಇದ್ದು ಅವುಗಳಿಂದ ಅಲ್ಪ ಸ್ವಲ್ಪ ಕಾರ್ಯವು ಈ ವಿಷಯದಲ್ಲಿ ನಡೆದಿರುವದು. ಆದಾಗ್ಯೂ ಇವುಗಳನ್ನು ಇನ್ನೂ ಹೆಚ್ಚು ಸುಸಂಘಟಿತವಾಗಿ ಮಾಡಿ, ದಿನಪತ್ರಿಕೆಗಳನ್ನು ಕೂಡ ಹೊರಡಿಸಿ ನಮ್ಮ ಸಮಾಜಕ್ಕೆ ಹೆಚ್ಚು ಉಪಯೋಗವಾಗುವಂತೆ ಮಾಡಿಕೊಳ್ಳತಕ್ಕದ್ದು.

೮ ವೀರಶೈವರ ಸಂಬಂಧವಾಗಿ ಧಾರ್ಮಿಕ ಸಾಮಾಜಿಕ ಸಂಶೋಧನವು ಅವಶ್ಯವು.

ವೀರಶೈವರ ಕ್ಷೇತ್ರಗಳನ್ನೂ ಹಾಗೂ ಐತಿಹಾಸಿಕ ಸ್ಥಳಗಳನ್ನೂ ಸಂಶೋಧಿಸುವದು ಅವಶ್ಯವಿರುತ್ತದೆ. ಇದಕ್ಕಾಗಿ ಮಹಾಸಭೆಯವರು ಒಬ್ಬ ತಜ್ಞರನ್ನು ಸಂಬಳ ಕೊಟ್ಟು ನಿಯಮಿಸಿ ಸಂಶೋಧನ ಮಾಡಿಸುವ ಅವಶ್ಯಕತೆಯನ್ನು ನಾನು ಬೇರೆ ಹೇಳಬೇಕಾಗಿಲ್ಲ.

೯ ಮಧ್ಯವರ್ತಿ ವ್ಯಾಪಾರಿ ಮಾಹಿತಿಯ ಸಂಘ (Information Bureau) ವನ್ನು ಸ್ಥಾಪಿಸುವದು.

ನಮ್ಮ ಸಮಾಜದ ಮುಖ್ಯ ಉದ್ಯೋಗಗಳಲ್ಲಿ ವ್ಯಾಪಾರವು ಒಂದಾಗಿದೆ. ಈಗಿನ ವ್ಯಾಪಾರವು ಅಂತರಾಷ್ಟ್ರೀಯ ವಿಷಯವಾಗಿದೆ. ಈ ಕಾಲದಲ್ಲಿ ನಾವು ಕೇವಲ ನಮ್ಮ ಊರೊಳಗಿನ ಅಥವಾ ನಮ್ಮ ಜಿಲ್ಹೆಯೊಳಗಿನ ವ್ಯಾಪಾರದ ಕಡೆಗೇನೇ ಲಕ್ಷಕೊಟ್ಟು ಕುಳಿತರೆ ನಮ್ಮ ಸಮಾಜದವರ ಕೈಯಲ್ಲಿದ್ದ ಚಿಕ್ಕತಕ್ಕಡಿಯೂ ಕೂಡ ಬರಬರುತ್ತ ಕೈಬಿಟ್ಟು ಹೋಗುವ ಭಯವಿದೆ. ಆದ್ದರಿಂದ ನಾವು ವ್ಯಾಪಾರ ವಿಷಯಕವಾದ ನಮ್ಮ ದೃಷ್ಟಿಯನ್ನು ಬದಲಿಸಬೇಕು. ದೇಶ ವಿದೇಶಗಳಲ್ಲಿಯ ವ್ಯಾಪಾರದ ಕಡೆಗೆ ಲಕ್ಷ್ಯಕೊಡಬೇಕು. ಯಾವ ದೇಶದಿಂದ ಯಾವ ಕಚ್ಚಾ ವ ಪಕ್ಕಾ ಮಾಲು ಯಾವ ದೇಶಕ್ಕೆ ಹೋಗುವದು ಇತ್ಯಾದಿಗಳನ್ನು ನಾವು ಈ ಕಾಲಕ್ಕೆ ಚನ್ನಾಗಿ ತಿಳಿದುಕೊಳ್ಳುವದು ಅವಶ್ಯವು. ಮತ್ತು ಇವುಗಳನ್ನು ತಿಳಿದುಕೊಳ್ಳುವದಕ್ಕಾಗಿ ಒಂದು ಮಧ್ಯವರ್ತಿ ವ್ಯಾಪಾರಿ ಮಾಹಿತಿಯ ಸಂಘ (Information Bureau)

ವನ್ನು ಏರ್ಪಡಿಸುವದಾದರೂ ಬಹಳ ಮಹತ್ವದ್ದಿರುತ್ತದೆ. ಇಂಥ ಮಧ್ಯವರ್ತಿ ಸಂಸ್ಥೆಯಲ್ಲಿ ದೇಶ ವಿದೇಶಗಳಲ್ಲಿಯ ಹುಟ್ಟುವಳಿಗಳನ್ನೂ. ಆಗಾಗ್ಗೆ ವ್ಯಾಪಾರದಲ್ಲಿ ಆಗುವ ಬದಲಾವಣೆಗಳನ್ನೂ, ಹಣದ ವ್ಯವಹಾರವನ್ನೂ (Banking) ಇವೇ ಮೊದಲಾದ ಅನೇಕ ಉಪಯುಕ್ತ ಮಾಹಿತಿಗಳನ್ನು ಸಂಗ್ರಹಿಸುವದು ಶಕ್ಯವಾಗುವದು. ಮತ್ತು ಈ ಮಾಹಿತಿಯನ್ನು ನಮ್ಮ ಸಮಾಜದ ವ್ಯಾಪಾರಸ್ಥರಿಗೆ ಪೂರಯಿಸಿಕೊಡಲು ಸಹಾಯವಾಗುವದು.

ಇಂಥ ಮಾಹಿತಿಯನ್ನು ಸಂಗ್ರಹಿಸುವದಕ್ಕಾಗಿಯೂ ವ್ಯಾಪಾರ ಮತ್ತು ಔದ್ಯೋಗಿಕ ಶಿಕ್ಷಣವನ್ನು ಪಡೆಯುವದಕ್ಕಾಗಿಯೂ ನಮ್ಮ ಸಮಾಜದಲ್ಲಿಯ ತರುಣರನ್ನು ಸ್ಕಾಲರಶಿಪ್ಪುಗಳನ್ನು ಕೊಟ್ಟು ಈ ದೇಶದಲ್ಲಿ ಹಾಗೂ ಬೇರೆ ಬೇರೆ ದೇಶಗಳಿಗೆ ಕಳಿಸಬೇಕು.

೧೦ ಯಂತ್ರ ಮತ್ತು ಯಂತ್ರೋಪಯೋಗದ ವಿದ್ಯೆಯನ್ನು ಕಲಿಯ ತಕ್ಕದ್ದು.

ನಮ್ಮ ಜೀವನ ಕ್ರಮದಲ್ಲಿ ಈಗಿನ ದಿವಸಗಳು ಮೇಲಾಟದ ದಿವಸಗಳಾಗಿವೆ. (Days of competition) ಹಳೆಯ ಪದ್ಧತಿಯಂತೆ ನಾವು ಈಗ ವ್ಯಾಪಾರ ಉದ್ಯೋಗಗಳನ್ನು ನಡೆಯಿಸಿದರೆ ಸಾಗುವಂತಿಲ್ಲ. ಹೊಸ ಪದ್ಧತಿಗನುಸರಿಸಿ ಬೇಕಾಗುವ ಮಾರ್ಗಗಳನ್ನು ಹುಡುಕಿ ನಮ್ಮ ಸಮಾಜದವರು ಮುಂದಕ್ಕೆ ಬರಲಿಕ್ಕೆ ಪ್ರಯತ್ನ ಮಾಡಬೇಕು.

ಈ ಕಾಲವು ಮುಖ್ಯವಾಗಿ ಯಂತ್ರದ ಯುಗವಾಗಿರುತ್ತದೆ. ಹಿಂದಿನ ಕಾಲಗಳು ಮಂತ್ರ ತಂತ್ರದ ಯುಗಗಳಾಗಿದ್ದವು. ಈಗಿನ ಕಾಲದಲ್ಲಿ ಯಂತ್ರಗಳ ವಿದ್ಯೆಯು ಅವಶ್ಯವಾಗಿರುತ್ತದೆ. ನಮ್ಮ ಜೀವನಕ್ರಮವು ಬರಬರುತ್ತಾ ಯಂತ್ರಗಳ ಸಹಾಯದಿಂದಲೇ ಹೆಚ್ಚು ಸೌಕರ್ಯವಾಗಿ ಸಾಗುವದೆಂಬದರಲ್ಲಿ ಸಂದೇಹವಿಲ್ಲ. ಆಕಾಶ, ಜಲ, ಭೂಪರ್ಯಟನಗಳು ಯಂತ್ರಗಳ ಸಾಯದಿಂದಲೆ ನಡೆದಿರುವವು. ಅದರಂತೆ ನಮ್ಮ ಜೀವನದಲ್ಲಿಯ ಪ್ರತಿ ದಿನದ ವ್ಯವಹಾರ, ಉದ್ಯೋಗಗಳು ಯಂತ್ರಗಳ ಮೇಲೆ ಹೆಚ್ಚು ಅವಲಂಬಿಸಹತ್ತಿವೆ. ದೀಪ, ನೀರು, ಅರಿವೆ, ಇತ್ಯಾದಿಗಳು ಸಹ ಯಂತ್ರ ಶಕ್ತಿಯ ಮೇಲೆ ಹೆಚ್ಚು ಹೆಚ್ಚು ಅವಲಂಬಿಸುವ ಹೊತ್ತು ಬಂದಿರುತ್ತದೆ. ಇಷ್ಟೇ ಅಲ್ಲ. ಈ ಮೇಲಾಟದ ದಿವಸಗಳಲ್ಲಿ ಹುಟ್ಟುವಳಿಯು ದೊಡ್ಡ ಪ್ರಮಾಣದಲ್ಲಿಯಾಗಬೇಕು; ಬೆಲೆಯು ಶಕ್ಯವಿದ್ದಷ್ಟು ಕಡಿಮೆಯಾಗಬೇಕು. ಸಾಮಾನುಗಳು ಕಣ್ಣಿಗೆ ಆಕರ್ಷಕ

ವಾಗಬೇಕು. ಇವೆಲ್ಲವುಗಳನ್ನು ಸಾಧಿಸಬೇಕಾದರೆ ನಾವು ಯಂತ್ರದ ಉಪಯೋಗವನ್ನು ಹೆಚ್ಚಾಗಿ ಮಾಡಬೇಕಾಗುವದು. ಇದಕ್ಕಾಗಿಯೇ ನಾವು ಯಂತ್ರ ವಿದ್ಯೆಯನ್ನು ಹೆಚ್ಚಾಗಿ ಸಂಪಾದಿಸುವದು ಅವಶ್ಯವಾಗಿರುತ್ತದೆ. ನಮ್ಮ ಸಮಾಜದ ತರುಣರು ಇನ್ನು ಯಂತ್ರ ವಿದ್ಯೆಯನ್ನು ಹೆಚ್ಚಾಗಿ ಸಂಪಾದಿಸಲಿಕ್ಕೆ ತೊಡಗತಕ್ಕದ್ದು. ಮತ್ತು ಸಮಾಜದವರು ಯಂತ್ರ ವಿದ್ಯೆಯನ್ನು ಸಂಪಾದಿಸಲಿಕ್ಕೆ ಎಷ್ಟು ಶ್ರಮ ಹಾಗು ಹಣವನ್ನು ವೆಚ್ಚ ಮಾಡಿದರೂ ಕಡಿಮೆಯೇ ಎಂದು ತಿಳಿದು ಯಂತ್ರ ವಿದ್ಯೆಯನ್ನು ಸಂಪಾದಿಸುವ ಇಚ್ಛೆಯುಳ್ಳ ವೀರಶೈವ ತರುಣರಿಗೆ ಪ್ರೋತ್ಸಾಹ ಹಾಗೂ ಧನ ಸಹಾಯವನ್ನು ಕೊಡತಕ್ಕದ್ದು.

Banking ಮತ್ತು Accountancy ಅಂದರೆ ಹಣದ ವ್ಯವಹಾರ ಮತ್ತು ಲೆಖ್ಖ ಇಡುವ ಪದ್ಧತಿಗಳು ಈಗಿನ ವ್ಯವಹಾರಕ್ಕೆ ಆಧಾರ ಸ್ತಂಭಗಳಾಗಿರುತ್ತವೆ. ಈಗಿನ ಹೊಸ ಪದ್ಧತಿಯ ಪ್ರಕಾರ ಅವುಗಳ ಮರ್ಮವನ್ನು ತಿಳಿದುಕೊಂಡು ಈ ಎರಡೂ ಶಾಸ್ತ್ರಗಳನ್ನು ಕಲಿತುಕೊಳ್ಳುವದು ಅತ್ಯವಶ್ಯಕವು.

೧೧ ವ್ಯಾಪಾರದ ಸ್ಥಳಗಳಲ್ಲಿ ವಸಾಹತು ಮಾಡುವದು.

ನಾನು ಈ ಮೊದಲು ಹೇಳಿದಂತೆ ವ್ಯಾಪಾರವು ಬಂದರ ಸ್ಥಳಗಳನ್ನು ಸೇರಹತ್ತಿದ್ದರಿಂದ ನಮ್ಮ ವ್ಯಾಪಾರಸ್ಥರು ಬಂದರ ಸ್ಥಳಗಳಲ್ಲಿ ಹೆಚ್ಚಾಗಿ ವಾಸ ಮಾಡುವದು ಉಚಿತವು. ಅದರಂತೆ ಅನುಕೂಲವಿದ್ದವರು ಪರದೇಶಗಳಲ್ಲಿ ವಸಾಹತು ಮಾಡುವದಾದರೂ ಬಹಳ ಅವಶ್ಯವು. ನಾವು ಇನ್ನು ಮುಂದೆ ಕೇವಲ ನಮ್ಮ ಮನೆಯನ್ನೇ ಹಿಡಿದುಕೊಂಡು ಕುಳಿತರೆ ಆಗುವದಿಲ್ಲ. ನಾವು ಹೆಚ್ಚು ಸಾಹಸಿಗಳಾಗತಕ್ಕದ್ದು. ಆಧುನಿಕ ವಿಚಾರಗಳನ್ನು ಗ್ರಹಿಸಿ ಯೋಗ್ಯವಾದವುಗಳನ್ನೂ, ಅನುಕೂಲವಿದ್ದವುಗಳನ್ನೂ ಆಚರಣೆಯಲ್ಲಿ ತರಲು ಸಿದ್ಧರಾಗಬೇಕು.

೧೨ ಮಠಗಳನ್ನು ಕಟ್ಟಿಸತಕ್ಕದ್ದು.

ಆದರೆ ಇವೆಲ್ಲವುಗಳಿಗೆ ಒಂದು ದೊಡ್ಡ ಅಡಚಣಿಯಿರುವದು. ಅದೇನಂದರೆ ನಮ್ಮ ವ್ಯಾಪಾರಸ್ಥರಿಗಾಗಲಿ, ವಿದ್ಯಾರ್ಥಿಗಳಿಗಾಗಲಿ, ಪ್ರವಾಸಿಕರಿಗಾಗಲಿ ಹೋಗಿ ಇಳಿದುಕೊಳ್ಳಲಿಕ್ಕೂ, ಇರಲಿಕ್ಕೂ ಅವಶ್ಯಕವಾದ ಸೌಕರ್ಯಗಳು ಎಲ್ಲ ಕಡೆಯಲ್ಲಿಯೂ ಇಲ್ಲ. ಆದುದರಿಂದ ಧಾರ್ಮಿಕ ಭಾವನೆಯವರಿಗೂ ಕೂಡ ಉಪಯೋಗವಾಗುವಂತೆ ನಮ್ಮ ಗುರುವರ್ಗ

ದವರೂ, ವಿರಕ್ತರೂ ಕೂಡಿ ದೊಡ್ಡ ದೊಡ್ಡ ವ್ಯಾಪಾರದ ಸ್ಥಳಗಳಲ್ಲಿಯೂ, ಬಂದರಗಳಲ್ಲಿಯೂ, ವ್ಯಾಪಾರಸ್ಥರು, ವಿದ್ಯಾರ್ಥಿಗಳು ಹಾಗೂ ಪ್ರವಾಸಿಕರುಗಳಿಗೆ ಉಪಯೋಗವಾಗುವಂತೆ ಮಠಗಳನ್ನು ಕಟ್ಟಿಸುವದು ಬಹಳ ಅವಶ್ಯವು. ಈ ಮಠಗಳಿಂದ ನಮ್ಮ ಧರ್ಮದವರಿಗೆ ಅಲ್ಲಿ ಹೋಗಲಿಕ್ಕೂ, ಇಳಿದುಕೊಳ್ಳಲಿಕ್ಕೂ, ಇರಲಿಕ್ಕೂ ಬಹಳ ಅನುಕೂಲವಾಗುವದಲ್ಲದೆ ನಮ್ಮಲ್ಲಿಯ ಧಾರ್ಮಿಕ ಭಾವನೆಯೂ ಕೂಡ ಸ್ಥಿರವಾಗಿ ಉಳಿಯುವದು. ಆದುದರಿಂದ ನಮ್ಮ ಮಹಾ ಸ್ವಾಮಿಗಳವರು ಇತ್ತ ಕಡೆಗೆ ತಮ್ಮ ಲಕ್ಷ್ಯವನ್ನು ಕೊಡುವರೆಂದು ಆಶಿಸುತ್ತೇನೆ.

ಹೀಗೆ ನಮ್ಮ ಸಮಾಜಲ್ಲಿ ಮಧ್ಯವರ್ತಿ ವ್ಯಾಪಾರಿ ಸಂಸ್ಥೆಯನ್ನು ಸ್ಥಾಪಿಸಿ, ನಮ್ಮ ಸಮಾಜದಲ್ಲಿಯ ತರುಣರು ಹೆಚ್ಚಿನ ಶಿಕ್ಷಣವನ್ನು ಪಡೆಯಲಿಕ್ಕೆ ಅನುಕೂಲತೆಯನ್ನು ಒದಗಿಸಿಕೊಟ್ಟರೆ ಮತ್ತು ಅದರ ಲಾಭವನ್ನು ನಮ್ಮ ಸಮಾಜದ ವ್ಯಾಪಾರಸ್ಥರು, ಉದ್ಯೋಗಸ್ಥರು ಮಾಡಿಕೊಂಡರೆ ಸರ್. ವಿಕ್ಟರ್ ಸಸೂನರಂತಹ ಅನೇಕ ನೂಲುವ ನೇಯುವ ಗಿರಣಿಗಳ ಮಾಲಕರೂ, ವಿಮ್‌ಕೋದಂತಹ ಕಡ್ಡಿ ಪೆಟ್ಟಿಗೆಗಳ ಕಾರಖಾನೆಗಳನ್ನು ನಡೆಯಿಸುವ ಕಂಪನಿಗಳೂ, ಟಾಟಾ ಕಂಪನಿಯಂತಹ ಕಬ್ಬಿಣ, ಉಕ್ಕುಗಳ ಕಾರಖಾನೆಗಳ ಒಡೆಯರೂ, ಸರ್. ಹೆನ್ರಿ ಫೋರ್ಡರಂತಹ ಮೋಟಾರು ಕಾರಖಾನೆಗಳ ಒಡೆಯರೂ, ಸರ್. ಎಸ್ ಎನ್. ಪೋಚಖಾನಾರವರಂತಹ ಬ್ಯಾಂಕರರೂ ನಮ್ಮ ಸಮಾಜದಲ್ಲಿ ನಾವು ಕಾಣಬಹುದೆಂದು ನನ್ನ ದೃಢವಾದ ನಂಬಿಗೆಯಿದೆ.

**೧೩ ವಿದ್ಯಾಪ್ರಸಾರವು.**

ಕೆಲವು ವರ್ಷಗಳಿಂದ ವೀರಶೈವರು ಸಾಮೂಹಿಕ ರೀತಿಯಿಂದ ವಿದ್ಯಾಪ್ರಸಾರದ ಬಗ್ಗೆ ಪ್ರಯತ್ನ ಮಾಡುತ್ತ ಬಂದಿದ್ದಾರೆ. ಎಲ್ಲಕ್ಕೂ ಮೊದಲು ವಿದ್ಯಾ ಪ್ರಸಾರದ ಕಡೆಗೆ ಸಮಾಜದ ದೃಷ್ಟಿಯನ್ನು ತಿರುವಿ ಚಲನೆಯನ್ನು ಕೊಟ್ಟದು ಧಾರವಾಡ ಲಿಂಗಾಯತ ವಿದ್ಯಾವರ್ಧಕ ಫಂಡು ಇರುತ್ತದೆ. ಅದೇ ಮೇರೆಗೆ ಮೈಸೂರು, ಮದ್ರಾಸು ಪ್ರಾಂತಗಳಲ್ಲಿಯೂ ಸಹ ಈ ಪ್ರಕಾರದ ಕಾರ್ಯವು ಪ್ರಾರಂಭವಾಯಿತು. ಕೈ॥ ವಾ॥ ಶ್ರೀಮಂತ ಲಿಂಗಪ್ಪ ಜಾಯಪ್ಪ ದೇಸಾಯಿ ಸಿರಸಂಗಿ ಇವರು ತಮ್ಮ ದೇಸಗತಿಯನ್ನೇ ಸಮಾಜ ವಿದ್ಯಾಭಿವೃದ್ಧಿಗಾಗಿ ಧಾರೆಯೆರೆದು ಕೊಟ್ಟು

ಅಮರರಾಗಿದ್ದಾರೆ. ಈ ದೇಣಗಿಯಿಂದ ವಿದ್ಯಾ ಪ್ರವಾಹಕ್ಕೆ ಅತ್ಯಂತ ದೊಡ್ಡ ಬಲವು ಸಿಕ್ಕು ಬಹಳ ಪ್ರಬಲವಾಗಿ ಹರಿಯುಹತ್ತಿತು.

ವಿದ್ಯಾ ಪ್ರಸಾರದ ಚಲನೆಯಲ್ಲಿ ಎರಡನೆಯ ಮೆಟ್ಟಿಂದರೆ ಅಲ್ಲಲ್ಲಿ ಸ್ಥಾಪಿಸಿದ ವಿದ್ಯಾ ಸಂಸ್ಥೆಗಳು ಇರುತ್ತವೆ. ಉದಾ:— ಕರ್ನಾಟಕ ಲಿಂಗಾಯತ ವಿದ್ಯಾವರ್ಧಕ ಸಂಘದವರು ಬೆಳಗಾಂವಿಯಲ್ಲಿ 'ಗಿಲಗಂಚಿ ಆರಟಾಳ, ಹಾಯಸ್ಕೂಲ' ವನ್ನು ಮತ್ತು 'ಲಿಂಗರಾಜ' ಆರ್ಟ್ಸ್‌ಕಾಲೇಜನ್ನು, ಧಾರವಾಡದಲ್ಲಿ 'ರಾಜಾ ಲಖಮಗೌಡ ಸರದೇಸಾಯಿ ಹಾಯಸ್ಕೂಲ' ವನ್ನು ಸ್ಥಾಪಿಸಿದ್ದಲ್ಲದೆ ಬಾಗಲಕೋಟೆಯ 'ಬಸವೇಶ್ವರ ಹಾಯಸ್ಕೂಲ' ವನ್ನು ಕೂಡ ತಮ್ಮ ಆಧೀನಕ್ಕೆ ಒಳಪಡಿಸಿಕೊಂಡಿರುವರು. ಅದರಂತೆ ವಿಜಾಪುರ ಜಿಲ್ಲಾ ಲಿಂಗಾಯತ ವಿದ್ಯಾವರ್ಧಕ ಸಂಘದವರು ವಿಜಾಪುರದಲ್ಲಿ 'ಶ್ರೀಸಿದ್ಧೇಶ್ವರ ಹಾಯಸ್ಕೂಲ' ವನ್ನು ಸ್ಥಾಪಿಸಿದ್ದಾರೆ. ಈ ಪ್ರಕಾರ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ ಶಿಕ್ಷಣದ ಪ್ರಗತಿಗೆ ಹೆಚ್ಚು ಚಲನೆಯನ್ನು ಕೊಡುವದರಲ್ಲಿ ಬಂದಿದೆ.

ವಿದ್ಯಾ ಪ್ರಸಾರದ ಕಾರ್ಯದಲ್ಲಿಯ ಮೂರನೆಯ ಮೆಟ್ಟಿಂದರೆ ಈ ವಿದ್ಯಾ ಸಂಸ್ಥೆಗಳಿಗೆ ಪೋಷಕಗಳಾದ ಬೋರ್ಡಿಂಗ ಹಾಗೂ ಹಾಸ್ಟೆಲಗಳ ಸ್ಥಾಪನೆಯು ಇರುತ್ತದೆ. ಅನೇಕ ಕಡೆಗಳಲ್ಲಿ ವೀರಶೈವ ಬಡ ವಿದ್ಯಾರ್ಥಿಗಳ ಅನುಕೂಲತೆಗಾಗಿ ಫ್ರೀ ಬೋರ್ಡಿಂಗಗಳು ಕೂಡ ಸ್ಥಾಪಿಸಲ್ಪಟ್ಟಿರುವವು.

ಈ ಪ್ರಕಾರದ ವಿದ್ಯಾ ಪ್ರಸಾರದ ಕಾರ್ಯಕ್ಷೇತ್ರದಲ್ಲಿ ಸಮಾಜದ ಪ್ರಗತಿಯು ಆಗಹತ್ತಿದ್ದು ನಮಗೆ ಅಭಿಮಾನಾಸ್ಪದ ಸಂಗತಿಯಾಗಿದೆ. ಆದಾಗ್ಯೂ ನಿಜಾಮ ಇಲಾಖೆಯಲ್ಲಿಯ ವೀರಶೈವ ಬಂಧು ಭಗಿನಿಯರು ವಿದ್ಯಾ ಪ್ರಸಾರದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಟ್ಟಿಲ್ಲವೆಂದು ಬಹಳ ವಿಷಾದದಿಂದ ಹೇಳಬೇಕಾಗಿದೆ. ವಿದ್ಯಾರ್ಥಿಗಳ ಅನುಕೂಲತೆಗಾಗಿ ಕೆಲವು ಬೋರ್ಡಿಂಗಗಳನ್ನು ಸ್ಥಾಪಿಸಿದ್ದಾಗ್ಯೂ ನಿಜಾಮ ಇಲಾಖೆಯಲ್ಲಿಯ ವೀರಶೈವ ಸಮಾಜದ ಜನಸಂಖ್ಯೆಯ ಪ್ರಮಾಣದಿಂದ ಈ ಪ್ರಯತ್ನಗಳು ಅತ್ಯಲ್ಪವಾದವುಗಳೆಂದು ಕಂಡು ಬರುವದು. ಆದಾಗ್ಯೂ ಪ್ರಜಾಹಿತ ತತ್ಪರರೂ, ಎಲ್ಲ ಪ್ರಜೆಗಳನ್ನು ಸಮ ದೃಷ್ಟಿಯಿಂದ ನೋಡುವವರೂ ವಿದ್ಯಾಭಿಮಾನಿಗಳೂ ಆದ **H E.H.** ನಿಜಾಮರವರು ತಮ್ಮ ರಾಜ್ಯದಲ್ಲಿ ವಿದ್ಯಾ ಪ್ರಸಾರ ಮಾಡುವದಕ್ಕಾಗಿ 'ಉಸ್ಮಾನಿಯಾ ವಿಶ್ವ ವಿದ್ಯಾ

ಲಯ' ವನ್ನು ಸ್ಥಾಪಿಸಿದ್ದಾರೆ. ನಮ್ಮ ವೀರಶೈವ ಬಾಂಧವರು ದಯಾಳುಗಳಾದ ಸರಕಾರದವರಿಂದ ಸ್ಥಾಪಿಸಲ್ಪಟ್ಟ ವಿದ್ಯಾ ಸಂಸ್ಥೆಗಳಿಂದಲೂ ಹಾಗೂ ತಮ್ಮ ಪ್ರಯತ್ನಗಳಿಂದಲೂ ನಮ್ಮ ಸಮಾಜದಲ್ಲಿ ವಿದ್ಯಾ ಪ್ರಸಾರವು ಹೆಚ್ಚಾಗುವಂತೆ ಪ್ರಯತ್ನಿಸುವರೆಂದು ನನ್ನ ಬಲವಾದ ನಂಬಿಗೆಯಿದೆ.

೧೪ ಎಲ್ಲ ಪ್ರಕಾರದ ಶಿಕ್ಷಣವನ್ನು ಪಡೆಯುತಕ್ಕದ್ದು.

ಆದರೆ ಶಿಕ್ಷಣ ಕ್ರಮದಲ್ಲಿ ಸಮಾಜವು ಸದ್ಯಸ್ಥಿತಿಗನುಸರಿಸಿ ತನ್ನ ದೃಷ್ಟಿಕೋನವನ್ನು ಬದಲು ಮಾಡುವದು ಅತ್ಯವಶ್ಯವಿರುತ್ತದೆ. ಕೇವಲ ಮ್ಯಾಟ್ರಿಕ್, ಬಿ. ಏ. ಎಮ್. ಏ. ಶಿಕ್ಷಣದಿಂದಲೇ ಸಮಾಜದ ತಕ್ಕ ಏಳ್ಗೆಯಾಗಲಾರದು. ಇದರ ಕೂಡ ಇನ್ನೂ ಹೆಚ್ಚು ಭರದಿಂದ ವ್ಯಾಪಾರಿಕ, ಒಕ್ಕಲುತನದ, ಮತ್ತು ಯಾಂತ್ರಿಕ ಶಿಕ್ಷಣವನ್ನು ಹೊಂದುವದು ಬಹಳ ಅವಶ್ಯವಿರುತ್ತದೆ. ಈ ಪ್ರಕಾರ ಶಿಕ್ಷಣ ಪಡೆಯಲಿಚ್ಛಿಸುವ ನಮ್ಮ ತರುಣರಿಗೆ ಅವಶ್ಯವಿದ್ದಲ್ಲಿ ಸ್ಕಾಲರಶಿಪ್ಪುಗಳನ್ನು ಕೊಟ್ಟು ಈ ದೇಶದಲ್ಲಿಯೂ, ಪರದೇಶದಲ್ಲಿಯೂ ಕಳಿಸಿ ಅವರನ್ನು ಆಯಾ ವಿಷಯಗಳಲ್ಲಿ ತಜ್ಞರನ್ನಾಗಿ ಮಾಡತಕ್ಕದ್ದು. ಇಂಥ ಶಿಕ್ಷಣದ ಮಹತ್ವವು ಮತ್ತು ಅವಶ್ಯಕತೆಯು ದಿನೇ ದಿನೇ ಹೆಚ್ಚು ಕಂಡು ಬರಹತ್ತಿದೆ.

ನಮ್ಮ ಸಮಾಜದ ತರುಣರು ಲಷ್ಕರೀ, ನೌಕಾ, ಮತ್ತು ವಿಮಾನದ ಶಿಕ್ಷಣವನ್ನು ಪಡೆಯಲಿಕ್ಕೆ ಹಿಂಜರಿಯಬಾರದು. ನಾನು ಈ ಮೊದಲು ಹೇಳಿದಂತೆ ಈ ದಿವಸಗಳು ಮೇಲಾಟದ ದಿವಸಗಳಿದ್ದು, ಎಲ್ಲ ಪ್ರಕಾರದ ಶಿಕ್ಷಣ ಸಂಸ್ಥೆಗಳಲ್ಲಿ ನಮ್ಮ ತರುಣರು ಹೆಚ್ಚು ಹೆಚ್ಚು ಪ್ರಮಾಣದಿಂದ ಸೇರತಕ್ಕದ್ದು.

೧೫ ಮಧ್ಯವರ್ತಿ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಬೇಕು.

ಈ ಸಂದರ್ಭದಲ್ಲಿ ಒಂದು ಹೆಚ್ಚಿನ ಉಪಯುಕ್ತವಾದ ಸೂಚನೆಯನ್ನು ಮಾಡಬೇಕೆಂದು ನನಗೆ ಲವಲವಿಕೆಯುಂಟಾಗಿದೆ. ಅದೇನೆಂದರೆ: – ನಮ್ಮ ಸಮಾಜದ ತರುಣರ ಎಲ್ಲ ಪ್ರಕಾರದ ಶಿಕ್ಷಣ ಕ್ರಮಗಳನ್ನು, ಸಮಾಜಕ್ಕೆ ಫಲದ್ರೂಪವಾಗುವ ಹಾಗೆ, ಸುಮಾರ್ಗಕ್ಕೆ ಹಚ್ಚುವ ಹಾಗೆ ನೋಡುವ ಒಂದು ಮಧ್ಯವರ್ತಿ ಶಿಕ್ಷಣ ಸಂಘವು ಇರಬೇಕು. ಈ ಶಿಕ್ಷಣ ಸಂಘವು ನಮ್ಮ ಸಮಾಜದ ತರುಣರಿಗೆ, ಅವರವರಿಗೆ ತಕ್ಕ ಮತ್ತು ಸಮಾಜಕ್ಕೆ ಹೆಚ್ಚಿಗೆ ಉಪಯೋಗವಾಗುವ ಶಿಕ್ಷಣ

ಕ್ರಮಗಳನ್ನು ಆಗಾಗ್ಗೆ ತೋರಿಸತಕ್ಕದ್ದು. ಈ ಶಿಕ್ಷಣ ಸಂಘವು ಈ ಪ್ರಕಾರದ ಕರ್ತವ್ಯವನ್ನು ಕೈಕೊಂಡಲ್ಲಿ ನಮ್ಮ ಸಮಾಜಕ್ಕೆ ಮುಖ್ಯವಾಗಿ ನಮ್ಮ ಸಮಾಜದ ತರುಣರಿಗೆ ಎಂದೂ ಮರೆಯದಂಥ ಉಪಕಾರವನ್ನು ಮಾಡಿದಂತಾಗುವದು. ಇಷ್ಟೇ ಅಲ್ಲ. ಈ ಶಿಕ್ಷಣ ಸಂಘವು ನಮ್ಮ ಸಮಾಜದ ತರುಣರು ಯಾವದೇ ಒಂದು ಶಿಕ್ಷಣ ಕ್ರಮದಲ್ಲಿ ತಜ್ಞತೆಯನ್ನು ಹೊಂದಿದ ಕೂಡಲೆ ನಮ್ಮ ಸಮಾಜಕ್ಕೂ, ರಾಷ್ಟ್ರಕ್ಕೂ, ಉಪಯೋಗವಾಗುವ ಹಾಗೆ ಅವರ ಜೀವನ ಕ್ರಮದಲ್ಲಿ ಯೋಗ್ಯವಾದ ದಾರಿಯನ್ನು ತೋರಿಸತಕ್ಕದ್ದು. ಮತ್ತು ಅವರ ಶಿಕ್ಷಣಕ್ರಮವು ಮುಗಿದ ನಂತರ ಅವರೆಲ್ಲರನ್ನೂ ಉದ್ಯೋಗಕ್ಕೆ ಹಚ್ಚುವ ಕರ್ತವ್ಯವು ಅದರ ಮೇಲೆ ಇರಬೇಕು.

೧೬ ರಾಜಕಾರಣದ ಜ್ಞಾನವನ್ನು ಮಾಡಿಕೊಳ್ಳಬೇಕು.

ಈಗಿನ ದಿವಸಗಳಲ್ಲಿ ರಾಜಕಾರಣದ ಜ್ಞಾನವು ನಮ್ಮ ಸಮಾಜದಲ್ಲಿ ಆದಷ್ಟು ಹೆಚ್ಚು ಜನರಲ್ಲಿ ಪಸರಿಸತಕ್ಕದ್ದು. ಈ ಉದ್ದೇಶವು ಕೈಗೂಡಬೇಕಾದರೆ ನಮ್ಮ ಸಮಾಜದಲ್ಲಿ ರಾಜಕಾರಣದ ಜ್ಞಾನವನ್ನು ಸಂಪಾದನೆ ಮಾಡಿಕೊಳ್ಳುವ ಒಂದು ಸಂಸ್ಥೆಯು ಇರುವದು ಅವಶ್ಯವಾದದ್ದು. ಈ ಸಂಸ್ಥೆಗೆ ಅಗತ್ಯವಾಗಿರುವ ತತ್ಸಂಬಂಧೀ ಪುಸ್ತಕಾಲಯವನ್ನು ಸ್ಥಾಪಿಸತಕ್ಕದ್ದು. ರಾಜಕಾರಣಜ್ಞಾನದ ಮಹತ್ವವು ಇನ್ನು ಮುಂದೆ ಹೆಚ್ಚು ಹೆಚ್ಚಾಗಿ ಎಲ್ಲರಿಗೂ ಕಂಡುಬರುವದಾಗಿದೆ. ಆದ್ದರಿಂದ ಈ ಸಂಸ್ಥೆಯನ್ನುಂಟುಮಾಡಲಿಕ್ಕೆ ನಮ್ಮ ಸಮಾಜವು ತೊಡಗತಕ್ಕದ್ದು.

೧೭ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ ಹೆಚ್ಚಾಗಿ ಸೇರತಕ್ಕದ್ದು.

ನಮ್ಮ ಸಮಾಜದ ಉತ್ಸಾಹಿಗಳು ಸಾರ್ವಜನಿಕ ಕೆಲಸಗಳಲ್ಲಿ ಹೆಚ್ಚು ಹೆಚ್ಚು ಉತ್ಸಾಹದಿಂದ ಕೆಲಸಮಾಡುವದನ್ನು ಕಂಡು ಅಭಿಮಾನವೂ, ಆನಂದವೂ ಆಗುತ್ತದೆ. ಈ ಸಾರ್ವಜನಿಕ ಸಂಸ್ಥೆಗಳಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಮಹತ್ವವಾದವುಗಳು ಇರುತ್ತವೆ. ಈ ಸಂಸ್ಥೆಗಳು ರಾಜಕಾರಣದಲ್ಲಿ ಜನರನ್ನು ತಯಾರು ಮಾಡುವ ಸ್ಥಳಗಳಾಗಿರುತ್ತವೆ. ಆದ್ದರಿಂದ ನಮ್ಮ ಸಮಾಜದಲ್ಲಿಯ ಉತ್ಸಾಹವುಳ್ಳವರು ಇಂಥ ಸಂಸ್ಥೆಗಳಲ್ಲಿ ಇನ್ನು ಹೆಚ್ಚು ಹೆಚ್ಚು ಹುರುಪಿನಿಂದ ಭಾಗವಹಿಸುವರೆಂದು ನಾನು ಕೋರುತ್ತೇನೆ.

ಆದರಂತೆಯೇ ಕಾಯದೆ ಮಂಡಳಗಳಲ್ಲಿ ನಮ್ಮ ಸಮಾಜದ ಉತ್ಸಾಹಿಗಳೂ, ಸಾರ್ವಜನಿಕ ಕೆಲಸ ಮಾಡುವ ಅಪೇಕ್ಷೆಯುಳ್ಳವರೂ ಹೆಚ್ಚು ಪ್ರಮಾಣದಿಂದ ಸೇರಲಿಕ್ಕೆ ಉದ್ಯುಕ್ತರಾಗಬೇಕು.

೧೮ ಆಗಾಮೀ ರಾಜಕೀಯ ಸುಧಾರಣೆಗಳ ಲಾಭವನ್ನು ಹೊಂದತಕ್ಕದ್ದು.

ಸಮೀಪದಲ್ಲಿಯೇ ಸುಧಾರಣೆಯ ಅಮಲು ಈ ದೇಶದಲ್ಲಿ ಅಸ್ತಿತ್ವದಲ್ಲಿ ಬರತಕ್ಕದ್ದಿದೆ. ಆ ಕಾಲಕ್ಕೆ ಮತ್ತು ತದನಂತರ ನಮ್ಮ ಸಮಾಜದ ಮುಂದಾಳುಗಳು ಮುಂದೆ ಬರುವ ಕಾಯದೆ ಮಂಡಲಗಳಲ್ಲಿ ಹೆಚ್ಚು ಪ್ರಮಾಣದಿಂದ ಸೇರುವರೆಂದು ನನ್ನ ಕೋರಿಕೆಯುಂಟು. ಮುಂದೆ ಬರುವ ಸುಧಾರಣೆಯ ಲಾಭವನ್ನು ನಮ್ಮ ಸಮಾಜದವರು ಪೂರ್ಣವಾಗಿ ತೆಗೆದುಕೊಳ್ಳತಕ್ಕದ್ದು. ಇಷ್ಟೇ ಅಲ್ಲ, ಆ ಸುಧಾರಣೆಗಳನ್ನು ( Reforms ) ಅಮಲಿನಲ್ಲಿ ತರಲಿಕ್ಕೂ, ಅವುಗಳ ಉಪಯೋಗವನ್ನು ಮತ್ತು ಲಾಭವನ್ನು ಹಿಂದುಸ್ಥಾನಕ್ಕೆ ಮಾಡಿಕೊಡಲಿಕ್ಕೂ ನಮ್ಮ ಸಮಾಜದ ಮುಂದಾಳುಗಳು ಎಲ್ಲ ಕಡೆಯಲ್ಲಿಯೂ ಪ್ರಯತ್ನಿಸತಕ್ಕದ್ದು. ಈ ವಿಷಯದಲ್ಲಿ ವಿಮುಖರಾದರೆ ಹಿಂದಿನಿಂದ ಪಶ್ಚಾತ್ತಾಪವಾಗಬಹುದು.

೧೯ ನಮ್ಮ ಸಮಾಜದಲ್ಲಿ ಒಕ್ಕಲತನವು ಒಂದು ಮುಖ್ಯ ಉದ್ಯೋಗವಿರುತ್ತದೆ

ನಮ್ಮ ಸಮಾಜದಲ್ಲಿ ಒಕ್ಕಲತನವೂ ಒಂದು ಮುಖ್ಯ ಉದ್ಯೋಗವಾಗಿರುವದು. ಆದ್ದರಿಂದ ಒಕ್ಕಲತನವನ್ನೂ ಒಕ್ಕಲಿಗರ ಆರ್ಥಿಕ ಸ್ಥಿತಿಯನ್ನೂ ನಾವು ಸುಧಾರಿಸಲಿಕ್ಕೆ ಹೆಚ್ಚು ಹೆಚ್ಚು ಪ್ರಯತ್ನ ಮಾಡಬೇಕು. ಒಕ್ಕಲಿಗರು ರಾಷ್ಟ್ರದ ಆಧಾರ ಸ್ತಂಭೋಪಾದಿಯಲ್ಲಿರುವರು. ಮತ್ತು ರಾಷ್ಟ್ರಕ್ಕೆ ಆಹಾರವನ್ನು ಪೂರಯಿಸಿಕೊಡುವ ಉದ್ಯೋಗವೆಂದರೆ ಒಕ್ಕಲುತನವೇ ಇರುತ್ತದೆ. ಇದರ ಮೇಲಿಂದ ರಾಷ್ಟ್ರದ ಜೀವನ ಕ್ರಮದಲ್ಲಿ ಒಕ್ಕಲಿಗರ ಮತ್ತು ಒಕ್ಕಲತನದ ಮಹತ್ವವು ಎಷ್ಟಿರುವದೆಂಬದು ಸ್ಪಷ್ಟವಾಗಿ ಕಂಡು ಬರುವದು.

(ಅ) ಒಕ್ಕಲತನವನ್ನು ಸುಧಾರಿಸತಕ್ಕದ್ದು.

ಹಿಂದುಸ್ತಾನದ ಪ್ರತಿಯೊಂದು ಇಲಾಖೆಯಲ್ಲಿ ಒಕ್ಕಲತನದ ಸುಧಾರಣೆಗಾಗಿ ಒಂದು ಒಕ್ಕಲತನದ ಖಾತೆಯು ಏರ್ಪಡಿಸಲ್ಪಟ್ಟಿರುತ್ತದೆ. ಮತ್ತು ಒಕ್ಕಲುತನದ ಸಂಶೋಧಕ ಮಧ್ಯವರ್ತಿ ಮಂಡಲವೊಂದು ಇರುತ್ತದೆ. ಇದಲ್ಲದೆ ಹಿಂದುಸ್ತಾನದಲ್ಲಿ ಮಧ್ಯವರ್ತಿ ಹತ್ತಿಯ

ಕಮೀಟಿಯೊಂದಿರುತ್ತದೆ. ಈ ಪ್ರಕಾರವಾಗಿ ಪ್ರಾಂತಗಳಿಂದಲೂ ಮತ್ತು ಮಧ್ಯವರ್ತಿ ಕಮೀಟಿಯಿಂದಲೂ ಒಕ್ಕಲತನದ ಸುಧಾರಣೆಯೂ, ಸಂಶೋಧನೆಯೂ, ಜೋರಿನಿಂದ ನಡೆದಿರುತ್ತದೆ. ಜೋಳದ ಕಾಡಿಗೆ, ಗೋದಿಗೆ ಹತ್ತುವ ಭಂಡಾರ, ಅಡಿಕೆಗೆ ಹತ್ತುವ ಕೊಳೆರೋಗ, ಹತ್ತಿ ಕಟ್ಟಿಗೆಗೆ ಹತ್ತುವ ಸಿಡಿರೋಗ, ಹತ್ತಿಯ ಕಾಯಿಗೆ ಹತ್ತುವ ಸುಶಿರೋಗ, ಮಾವಿನ ಗಿಡಕ್ಕೆ ಹತ್ತುವ ಕರಿಜಿಗಿರೋಗ, ದ್ರಾಕ್ಷಿಯ ಬಳ್ಳಿಗೆ ಹತ್ತುವ ಮಿಲಡ್ಯು ಮುಂತಾದ ರೋಗಗಳ ಪರೀಕ್ಷೆಯನ್ನು ಮಾಡಿ ಉಪಾಯಗಳನ್ನು ಕಂಡುಹಿಡಿದಿದ್ದಾರೆ. ಮತ್ತು ಕಂಡು ಹಿಡಿಯುವ ಕೆಲಸವು ನಡೆದಿರುತ್ತದೆ. ಅವರು ಸುಧಾರಿಸಿದ ಸಾಧನಗಳನ್ನು ಶೋಧ ಮಾಡಿ ತೆಗೆದದ್ದನ್ನು ಎಲ್ಲ ಒಕ್ಕಲಿಗರು ಉಪಯೋಗ ಮಾಡಿಕೊಂಡು ಒಕ್ಕಲತನವನ್ನು ಸುಧಾರಿಸತಕ್ಕದ್ದು.

(ಬ) ಬೇಲಿಗಳನ್ನು ಹಾಕುವ (*Fencing*) ಸೊಸಾಯಿಟಿಗಳನ್ನು ಮಾಡತಕ್ಕದ್ದು.

ಇದಲ್ಲದೆ ಕಾಡುಪಶುಗಳಿಂದ ಪೈರುಗಳಿಗೆ ಆಗುವ ಹಾನಿಯನ್ನು ತಪ್ಪಿಸುವದಕ್ಕೋಸ್ಕರ ಫೆನ್ಸಿಂಗ ಸೊಸಾಯಿಟಿ (Fencing Society) ಗಳನ್ನು ಮಾಡತಕ್ಕದ್ದು. ಈ ಬಗ್ಗೆ ಮುಂಬಯಿ ಇಲಾಖೆಯಲ್ಲಿ ಇತ್ತೀಚೆಗೆ ಒಂದು ಕಾಯದೆಯು ಪಾಸಾಗಿರುತ್ತದೆ. ಇದರ ಲಾಭವನ್ನು ಒಕ್ಕಲಿಗರು ಹೊಂದತಕ್ಕದ್ದು.

(ಕ) ತರಗತಿಯ ಒಡ್ಡುಗಳನ್ನು ಹಾಕತಕ್ಕದ್ದು. (*Contour Bunding System*)

ಇದರಂತೆ ಸಾಕಷ್ಟು ಮತ್ತು ಸಕಾಲಕ್ಕೆ ಮಳೆಯಾಗದ ಪ್ರದೇಶಗಳು ಹಿಂದುಸ್ತಾನದಲ್ಲಿ ಅನೇಕವಿರುತ್ತವೆ. ಇಂಥ ಪ್ರದೇಶಗಳಲ್ಲಿ ಮಳೆಯ ನೀರು ಬಿದ್ದು ಜಮೀನುಗಳಲ್ಲಿಯ ಮಣ್ಣನ್ನು ಸೆಳೆದುಕೊಂಡು ಹೋಗುವದನ್ನು ಬಂದು ಮಾಡಲಿಕ್ಕೆ ಮತ್ತು ಬಿದ್ದ ಮಳೆಯ ನೀರನ್ನು ಅಲ್ಲಿಯೇ ಸಾಕಷ್ಟು ಇಟ್ಟುಕೊಳ್ಳಲಿಕ್ಕೆ 'ತರಗತಿಯ ಒಡ್ಡುಗಳನ್ನು' (Contour Bunding System) ಹಾಕಬೇಕು. ಹೀಗೆ ಮಾಡುವದರಿಂದ ಮಣ್ಣು ತೆರೆದು ಹೋಗುವದು ಬಂದಾಗಿ ಜಮೀನದಲ್ಲಿಯ ಆರ್ದ್ರತೆಯು ಹೆಚ್ಚಾಗಿ ಒಳ್ಳೆಯ ಪೀಕು ತೆಗೆದುಕೊಳ್ಳಲಿಕ್ಕೆ ಆಸ್ಪದವಾಗುತ್ತದೆ.

ದನಗಳೇ ಒಕ್ಕಲಿಗರ ಸಂಪತ್ತು ಇದ್ದು ಅವುಗಳ ಪೀಳಿಗೆಯನ್ನು ಸುಧಾರಿಸುವದು ಅವಶ್ಯವಿರುತ್ತದೆ. ಈ ಬಗ್ಗೆ ಮುಂಬಯಿ ಇಲಾಖೆಯಲ್ಲಿ ದನಗಳ ಪೀಳಿಗೆಯನ್ನು ಸುಧಾರಿಸುವ ಬಗ್ಗೆ ಒಂದು ಕಾಯದೆಯು ಪಾಸಾಗಿರುತ್ತದೆ. ಅದರ ಲಾಭವನು ಒಕ್ಕಲಿಗರು ತೆಗೆದುಕೊಂಡುಂಡು ತಮ್ಮ ಸಂಪತ್ತನ್ನು

(ಡ) ದನಗಳ ಪೀಳಿಗೆಯನ್ನು ಸುಧಾರಿಸಬೇಕು.

ಹೆಚ್ಚಿಸಬೇಕು. ಈ ವಿಷಯದಲ್ಲಿ ನಮ್ಮ ನೇಕ ನಾಮದಾರ ವ್ಹಾಯಿಸ್‌ರಾಯರಾದ ಲಾರ್ಡ ಲಿನ್‌ಲಿಥ್‌ಗೊ ದೊರೆಗಳವರು ಮಾಡಿದ ಮತ್ತು ಮಾಡುತ್ತಿರುವ ಪ್ರಯತ್ನಗಳನ್ನು ತಮ್ಮೆದುರಿಗೆ ತರದೆ ಇರಲಾರೆನು ಧೊರೆಗಳವರು ಮೂರು ಬೀಜದ ಹೋರಿಗಳನ್ನು ದಿಲ್ಲಿಯ ಸಮೀಪದಲ್ಲಿರುವ ಒಕ್ಕಲಿಗರು ತಮ್ಮ ದನಗಳ ಪೀಳಿಗೆಯನ್ನು ಸುಧಾರಿಸುವ ಸಲುವಾಗಿ ಇಟ್ಟಿರುವರು. ಎರಡನೆಯ ಸಾರ್ವಜನಿಕ ದಾನಶೂರರೂ ಅವರ ಅನುಕರಣವನ್ನು ಮಾಡಿ ಒಕ್ಕಲಿಗರ ಸಂಪತ್ತಾದ ದನಗಳ ಪೀಳಿಗೆಯನ್ನು ಸುಧಾರಿಸಲಿಕ್ಕೆ ಸಹಾಯ ಮಾಡುವರೆಂದು ನಾನು ಆಶಿಸುತ್ತೇನೆ.

(ಇ) ಹೈನದ (*Dairy*) ವಿದ್ಯೆಯನ್ನು ಸಂಪಾದಿಸಕ್ಕದ್ದು.

ಇವಲ್ಲದೆ ಹೈನದ ವಿದ್ಯೆಯನ್ನು ಸಂಪಾದಿಸಲಿಕ್ಕೆ ನಮ್ಮ ಒಕ್ಕಲಿಗರು ಪ್ರಯತ್ನ ಮಾಡತಕ್ಕದ್ದು. ಹಾಲಿನಿಂದ ಮತ್ತು ಹಾಲಿನಿಂದ ಹುಟ್ಟುವ ಇತರ ಪದಾರ್ಥಗಳಿಂದ ಒಕ್ಕಲಿಗರ ಹಾಗೂ ಅವರ ಮಕ್ಕಳ ಆರೋಗ್ಯವೂ, ಶಕ್ತಿಯೂ ವರ್ಧಿಸುವವೆಂದು ನಾನು ಬೇರೆ ಹೇಳಬೇಕಾಗಿಲ್ಲ. ಮುಖ್ಯವಾಗಿ ತಾಯಂದಿರಿಗೂ, ಚಿಕ್ಕ ಮಕ್ಕಳಿಗೂ ಅವರ ಆರೋಗ್ಯಕ್ಕೆ ಹಾಲಿನ ಅವಶ್ಯಕತೆಯು ಎಷ್ಟಿರುವದೆಂಬದನ್ನು ಎಲ್ಲರೂ ಬಲ್ಲರು. ಸಿಮ್ಲಾದಲ್ಲಿ ಶಾಲೆಯ ಹುಡುಗರಿಗೆ ಹಾಲು ಪೂರೈಸುವ ಉತ್ತಮ ಕೆಲಸವು ನಡೆದಿರುತ್ತದೆ. ಅದಕ್ಕೆ ನೇಕ ನಾಮದಾರ ವ್ಹಾಯಿಸರಾಯರಾದ ಲಾರ್ಡ ಲಿನ್‌ಲಿಥ್‌ಗೊ ಧೊರೆಗಳವರು ಉತ್ತೇಜನವನ್ನು ಕೊಟ್ಟಿರುತ್ತಾರೆ. ಈ ಸಂಗತಿಯು ಎಲ್ಲರಿಗೂ ಅನುಕರಣೀಯವಾಗಿರುತ್ತದೆ. ಆದ್ದರಿಂದ ಒಕ್ಕಲತನವು ಒಳ್ಳೆಯ ರೀತಿಯಿಂದ ಫಲದ್ರೂಪವಾಗಬೇಕಾದರೆ, ಒಕ್ಕಲಿಗರ ಆರ್ಥಿಕ ಸ್ಥಿತಿಯು ಸುಧಾರಿಸಬೇಕಾದರೆ, ಒಕ್ಕಲಿಗರ ಹೆಚ್ಚಿನ ಸಂಪತ್ತಾದ ಹೂಡುವ ಮತ್ತು ಹಿಂಡುವ ದನಗಳನ್ನು ಮತ್ತು ಅವುಗಳ ಪೀಳಿಗೆಯನ್ನು ಸಂಗೋಪನೆ ಮಾಡುವದೂ ಮತ್ತು ಸುಧಾರಿಸುವದೂ ಅವಶ್ಯವಿರುತ್ತದೆ.

ಸಾರಾಂಶವೇನೆಂದರೆ ಆಧುನಿಕ ಶಾಸ್ತ್ರದ ಸಹಾಯದಿಂದ ಒದಗಿರುವ ಒಕ್ಕಲುತನದ ಸಾಧನಗಳನ್ನು ಉಪಯೋಗಮಾಡಿಕೊಂಡು ಸುಧಾರಿಸಿದ ಪೈರುಗಳಿಂದ ತಮ್ಮ ಲಾಭವನ್ನು ಮಾಡಿಕೊಳ್ಳುವರೆಂದು ನನಗೆ ನಂಬಿಗೆಯುಂಟು.

ಒಕ್ಕಲಿಗರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲಿಕ್ಕೆ ಸಹಕಾರಿ ಸಂಘಗಳೇ ಹೆಚ್ಚಾಗಬೇಕು. ಸಹಕಾರಿ ಸಂಘಗಳ ಸಹಾಯದಿಂದ ಸಾಹುಕಾರರಿಗೆ ಕೊಡಬೇಕಾದರೆ ಹೆಚ್ಚಿನ ಬಡ್ಡಿ, ಬಲುಮೆಯನ್ನು ತಪ್ಪಿಸಿಕೊಂಡು ಸಹ

ಸಹಕಾರಿ ಸಂಘಗಳನ್ನು ಮತ್ತು ಹೊಲ ವತ್ತಿ ಬ್ಯಾಂಕಗಳನ್ನು ಸ್ಥಾಪಿಸತಕ್ಕದ್ದು

ಕಾರಿ ಸಂಘಗಳು ಕೊಡುತ್ತಿರುವ ಮತ್ತು ಕೊಡಬಹುದಾದ ಸವಲತ್ತುಗಳನ್ನು ಎಲ್ಲ ಒಕ್ಕಲಿಗರೂ ಹೊಂದತಕ್ಕದ್ದು.

ಮತ್ತು ಈಗಿನ ದಿವಸಗಳಲ್ಲಿ ರೈತರ ಸಾಲದ ಒಜ್ಜೆಯು ಬಹಳವಾಗಿದೆ. ಆ ಸಾಲದ ಒಜ್ಜೆಯಿಂದ ಬಿಡುಗಡೆ ಹೊಂದಬೇಕಾದರೆ ಒಕ್ಕಲಿಗರು ಹೊಲ ವತ್ತಿ ಬ್ಯಾಂಕುಗಳ ( Land Mortgage Banks ) ಲಾಭವನ್ನು ಮಾಡಿಕೊಳ್ಳತಕ್ಕದ್ದು.

ಒಕ್ಕಲಿಗರು ಲಗ್ನ ಮುಂತಾದ ಕಾರ್ಯಗಳಲ್ಲಿ ಮಾಡುತ್ತಿರುವ ಅನವಶ್ಯಕವಾದ ಖರ್ಚನ್ನು ಕಡಿಮೆ ಮಾಡಬೇಕು.

ಸಹಕಾರಿ ಸಂಘಗಳ ಸಹಾಯದಿಂದಾಗಲಿ ಅಥವಾ ಜಾಯಿಂಟ ಸ್ಟಾಕ ಕಂಪನಿ (Joint stock company) ಯಿಂದಾಗಲೀ ಹಣವನ್ನು ಕೂಡಿಸಿ ನೂಲುವ ನೇಯುವ ಗಿರಣಿಗಳನ್ನು ಮತ್ತು ಬೇರೆ ಕಾರಖಾನೆಗಳನ್ನು ನಮ್ಮ ಸಮಾಜದವರು ಹಾಕತಕ್ಕದ್ದು. ಮತ್ತು ಆರ್ಥಿಕ ಸ್ಥಿತಿಯನ್ನು ಸುಧಾರಿಸತಕ್ಕದ್ದು.

ಬಾಂಧವರೇ,

ಈ ಸಮಯದಲ್ಲಿ ಇನ್ನೊಂದು ವಿಷಯವನ್ನು ನಾನು ಹೇಳದೆ ಇರಲಾರೆನು. ವಿಜಯನಗರದ ಸ್ಮಾರಕೋತ್ಸವವನ್ನು ಈ ವರ್ಷ ನೆರವೇರಿಸಲಿಕ್ಕೆ ಕರ್ನಾಟಕಸ್ಥರು ಉದ್ಯುಕ್ತರಾಗಿದ್ದಾರೆ. ಅದಕ್ಕೆ ವೀರಶೈವರೆಲ್ಲರೂ ಉತ್ಸುಕತೆಯಿಂದ ಸಹಾಯಮಾಡುವರೆಂದು ನಾನು ನಂಬಿದ್ದೇನೆ.

ವಿಜಯನಗರದ ಸ್ಮಾರಕೋತ್ಸವದಲ್ಲಿ ವೀರಶೈವರು ಭಾಗವಹಿಸಬೇಕು

ಈ ಸಂದರ್ಭದಲ್ಲಿ ವಿಜಯನಗರದ ರಾಜ್ಯದ ವಿಷಯಕ್ಕೆ ಸ್ವಲ್ಪ ಮಾಹಿತಿಯನ್ನು ತಾವು ಕೇಳಲು ಅಪೇಕ್ಷಿಸಬಹುದು. ಆನೆಗುಂದಿ ಮತ್ತು ವಿಜಯನಗರ ಪಟ್ಟಣಗಳು ಇದ್ದ ಪ್ರದೇಶವೆಲ್ಲ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು. ಹೊಯ್ಸಳ ಸಾಮ್ರಾಜ್ಯದ ಚಕ್ರವರ್ತಿಯಾದ ಮುಮ್ಮಡಿ ಬಲ್ಲಾಳನು ಆನೆಗುಂದಿ ಕೋಟೆಯನ್ನು ಭದ್ರಪಡಿಸಿದನು. ಮತ್ತು ವಿಜಯ ವಿರುಪಾಕ್ಷಪುರವೆಂಬ ಪಟ್ಟಣವನ್ನು ಕಟ್ಟಿಸಿದನು. ಅದೇ ಪಟ್ಟಣವು ಮುಂದೆ ವಿಜಯನಗರವೆಂದು ಪ್ರಸಿದ್ಧಿಯನ್ನು ಹೊಂದಿತು. ಸಂಗಮನ ಮಗನಾದ ಹರಿಹರನು (ಇವನಿಗೆ ಹುಕ್ಕನೆಂತಲೂ, ಹರಿಯಪ್ಪನೆಂತಲೂ ಕರೆಯುವದುಂಟು. ) ಮುಮ್ಮಡಿ ಬಲ್ಲಾಳನ ಮಹಾಮಂಡಲೇಶ್ವರನಾಗಿ ಆನೆಗುಂದಿಯಲ್ಲಿ ನಿಯಮಿಸಲ್ಪಟ್ಟನು. ಮುಂದೆ ಹೊಯ್ಸಳ

ಸಾಮ್ರಾಜ್ಯದ ಕಡೆಯ ಚಕ್ರವರ್ತಿಯಾದ ೪ ನೆಯ ಬಲ್ಲಾಳನು ಗಂಡು ಸಂತಾನವಿಲ್ಲದೆ ಮಡಿದನು. ಅದೇ ವರ್ಷ ಹರಿಹರನು ವಿಜಯನಗರದ ಪಟ್ಟವೇರಿದನು.

ಇತಿಹಾಸ ಸಂಶೋಧಕರ ಮತದ ಪ್ರಕಾರ ಮೇಲೆ ಹೇಳಿದಂತೆ ವೃತ್ತಾಂತವಿದ್ದು ಶ್ರೀ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರೆಂದು ಕೆಲವರು ಹೇಳಿದ ಮಾತಿಗೆ ನಾವು ಒಪ್ಪಬೇಕೆ? ಆದರೆ ಈ ಸಂದರ್ಭದಲ್ಲಿ ಹುಕ್ಕರಾಯನ (೧ ನೇ ಹರಿಹರನು) ೧೩೪೬ ನೇ ಇಸವಿಯಲ್ಲಿ ಪಟ್ಟವೇರಿದನೆಂಬುವದು ನಿರ್ವಿವಾದವಾದ ಸಂಗತಿಯಿರುವದೆಂಬದನ್ನು ಎಲ್ಲರೂ ಲಕ್ಷದಲ್ಲಿಡತಕ್ಕದ್ದು.

ಅದು ಏನೇ ಇರಲಿ. ವಿಜಯನಗರವು ಕರ್ನಾಟಕದಲ್ಲಿ ಒಂದು ದೊಡ್ಡ ರಾಜ್ಯವಿದ್ದು ಅದರ ಸ್ಮಾರಕೋತ್ಸವದಲ್ಲಿ ವೀರಶೈವರು ಭಾಗವನ್ನು ವಹಿಸುವದು ಉಚಿತವಿರುತ್ತದೆ. ಆ ಉತ್ಸವವು ಯಶಸ್ವಿಯಾಗಲೆಂದು ನಾನು ಕೋರುತ್ತೇನೆ.

## ಉಪಸಂಹಾರ.

ವೀರಶೈವ ಬಂಧು ಭಗಿನಿಯರೇ,

ವೀರಶೈವರಲ್ಲಿ ದ್ರವಿಡರೆಂತಲೂ, ದ್ರವಿಡ ಸಂಸ್ಕೃತಿಯುಳ್ಳವರೆಂತಲೂ, ವೀರಶೈವರಲ್ಲಿ ಜಾತಿಭೇದ ಹಾಗು ಚಾತುರ್ವರ್ಣಗಳು ಇಲ್ಲವೆಂತಲೂ, ವೀರಶೈವರಲ್ಲಿ ಸ್ತ್ರೀಪುರುಷರು ಸಮಾನಸ್ಕರೆಂತಲೂ ಮತ್ತು ಜಂಗಮಸ್ಥಳವು ವೀರಶೈವರ ಸಮಾನತೆಯ ಕುರುಹು ಎಂತಲೂ ನಾನು ಹೇಳಿದ್ದನ್ನು ತಾವೆಲ್ಲರೂ ಏಕಚಿತ್ತದಿಂದ ಕೇಳಿದ್ದಕ್ಕೆ ನಾನು ತಮ್ಮೆಲ್ಲರಿಗೆ ಋಣಿಯಾಗಿದ್ದೇನೆ. ಹಾಗೂ ವೀರಶೈವರ ಸದ್ಯಸ್ಥಿತಿಯನ್ನೂ ಮತ್ತು ವೀರಶೈವ ಸಮಾಜದ ಏಳ್ಗೆಗೆ ಮಾಡಬೇಕಾದ ನನಗೆ ಕಂಡ ಕೆಲವು ಉಪಾಯಗಳನ್ನೂ ಮತ್ತು ಸೂಚನೆಗಳನ್ನೂ ತಮ್ಮ ಮುಂದೆ ಇಟ್ಟಿರುತ್ತೇನೆ. ಇವೆಲ್ಲ ವಿಷಯಗಳನ್ನು ತಾವೆಲ್ಲರೂ ಸೂಕ್ಷ್ಮ ದೃಷ್ಟಿಯಿಂದ ಪರಿಪೂರ್ಣವಾಗಿ ವಿಚಾರ ಮಾಡಿ ನಾನು ಮಾಡಿದ ಸೂಚನೆಗಳನ್ನೂ ಮತ್ತು ತೋರಿಸಿದ ಉಪಾಯಗಳನ್ನೂ ಅಮಲಿನಲ್ಲಿ ತರಲಿಕ್ಕೆ ಪ್ರಯತ್ನಿಸುವಿರೆಂದು ನಾನು ಪೂರ್ಣ ನಂಬಿದ್ದೇನೆ.

ವೀರಶೈವ ಬಾಂಧವರೇ, ನನ್ನನ್ನು ಈ ಸಭೆಯ ಅಧ್ಯಕ್ಷನನ್ನಾಗಿ ಆರಿಸಿದ್ದಕ್ಕಾಗಿ ತಮ್ಮೆಲ್ಲರ ಉಪಕಾರವನ್ನು ಪುನಃ ಸ್ಮರಿಸಿ ನನ್ನ ಭಾಷಣವನ್ನು ಮುಗಿಸಲು ಅಪ್ಪಣೆಯನ್ನು ಕೇಳುತ್ತೇನೆ.

---

# ಬಸವಣ್ಣನವರ ಸಾಮಾಜಿಕ ವಿಚಾರಗಳು.

( ಲೇಖಕ:— ಪ್ರೊ|| ಕೆ. ಜಿ. ಕುಂದಣಗಾರ ಎಮ್. ಎ. ಕನ್ನಡ ಪ್ರೋಫೇಸರ
ರಾಜಾರಾಮ ಕಾಲೇಜ ಕೊಲ್ಹಾಪೂರ. )



ಯಾರಾದರೂ ದುಷ್ಟಬುದ್ಧಿಯಿಂದ ಹಕ್ಕಿಯ ಮರಿಗಳನ್ನು ಅವುಗಳ ಗೂಡಿನೊಳಗಿಂದ ತೆಗೆದುಕೊಂಡು ಹೋಗಬೇಕೆಂದು ಪ್ರಯತ್ನಿಸಿದರೆ ಆ ಜಾತಿಯ ಹಕ್ಕಿಗಳೆಲ್ಲ ಅಲ್ಲಿ ಸೇರಿ, ಸಾಧ್ಯವಿದ್ದರೆ ತಮ್ಮ ವೈರಿಯ ಮೇಲೆ ಬಿದ್ದು ಕಚ್ಚುತ್ತವೆ; ಅಥವಾ ಕಚ್ಚಲು ಪ್ರಯತ್ನಿಸುತ್ತವೆ. ಇದರಂತೆ ಕಾಡಿನಲ್ಲಿ ಮಂಗಗಳು, ಚಿಗರೆಗಳು, ಕಾಡಾಕಳುಗಳು, ಕಾಡೆಮ್ಮೆಗಳು, ಆನೆಗಳು ಮುಂತಾದ ಪಶುಗಳು ಹಿಂಡುಗಟ್ಟಿಕೊಂಡು ಮರಿಗಳನ್ನು ಮಧ್ಯದಲ್ಲಿರಿಸಿ ಅಲೆಯುತ್ತಿರುತ್ತವೆ. ಯಾರಾದರೂ ಒಂದು ಮರಿಯನ್ನು ಹಿಡಿಯಲು ಪ್ರಯತ್ನಿಸಿದರೆ ಅದರ ಮೇಲಿನ ಪ್ರೇಮದಿಂದ ಜೀವದ ಹಂಗುದೊರೆದು ಅವರ ಮೇಲೆ ಬೀಳುತ್ತವೆ. ಹುಲಿ ಸಿಂಹಗಳ ಸ್ಥಿತಿಯು ಹೀಗಲ್ಲ. ಅವು ಬಲಿಷ್ಠ ಪ್ರಾಣಿಗಳು. ಒಂದೊಂದಾಗಿ ಇರಬಲ್ಲವು. ಗಂಡು ಹೆಣ್ಣು ಹುಲಿಗಳೆರಡೇ ತಮ್ಮ ಮರಿಗಳನ್ನು ಸಂರಕ್ಷಿಸಿಕೊಳ್ಳಬಲ್ಲವು. ಅವುಗಳಿಗೆ ಬೇರೆ ಸಹಾಯದ ಅವಶ್ಯಕತೆಯಿಲ್ಲ. ಈ ಸಂಗತಿಯನ್ನು ವಿಚಾರ ಮಾಡಿ ನೋಡಿದರೆ ಒಂದು ನಿರ್ಣಯವು ಹೊರಬೀಳುತ್ತದೆ. 'ಅಶಕ್ತರಿಗೆ ಸಂರಕ್ಷಣೆಯು ಅವಶ್ಯಕವು. ಅದನ್ನು ಸಂಘಶಕ್ತಿಯಿಂದ ಒದಗಿಸಿಕೊಳ್ಳಬಹುದು ' ಸಂಘಶಕ್ತಿಯ ತತ್ವವು ಪಶುಪಕ್ಷ್ಯಾದಿಗಳಿಗೆ ಸ್ವಾಭಾವಿಕವಾಗಿದೆ. ಅದು ಅವುಗಳ ಹುಟ್ಟುಗುಣ. ನಮ್ಮ ವಿಚಾರವನ್ನು ಹಾಗೆಯೇ ಮುಂದೆ ಸಾಗಿಸಿದರೆ ಆ ಸಂಘಶಕ್ತಿಯ ಬುಡದಲ್ಲಿ ಮರಿಗಳ ಮೇಲಿನ ಪ್ರೇಮ, ಹಿಂಡಿನೊಳಗಿನ ಪ್ರತಿಯೊಂದು ಪ್ರಾಣಿಯ ಬಗ್ಗೆ ಸಹಾನುಭೂತಿ, ಪರಸ್ಪರ ಸಹಾಯ ಮುಂತಾದ ಗುಣಗಳು ಹುಟ್ಟು ಗುಣಕ್ಕೆ ಸಹಕಾರಿಯಾಗಿವೆಯೆಂದೂ ಕಂಡು ಬರುತ್ತದೆ.

ಪಶುಪಕ್ಷಿಗಳಲ್ಲಿ ಕಂಡು ಬರುವ ಸಂಘಶಕ್ತಿ ತತ್ವವು ಮನುಷ್ಯನಿಗೂ ಅನ್ವಯಿಸಬಹುದೋ ಎಂದು ವಿಚಾರಿಸುತ್ತಿರುವಾಗ ಆತನೂ ಪ್ರಾಣಿಕೋಟಿಗೆ ಸೇರಿದವನಾದುದರಿಂದ ಆ ಹುಟ್ಟುಗುಣವು ಆತನ

ಲ್ಲಿಯೂ ಇದ್ದುದು ಕಂಡುಬರುತ್ತದೆ. ಅಶಕ್ತರಾದ ಮಕ್ಕಳು ಮರಿಗಳನ್ನೂ ಸ್ತ್ರೀಯರನ್ನೂ ಸಂರಕ್ಷಿಸುವುದು ಅವನ ಸ್ವಭಾವ. ಈ ಕಾರ್ಯದ ದೆಶೆಯಿಂದ ಕಾಡುಸ್ಥಿತಿಯಲ್ಲಿದ್ದಾಗ ಆತನು ಒಂದು ಗುಂಪನ್ನು ಕಲ್ಪಿಸಿಕೊಂಡು ಇರಬೇಕಾಗಿ ಬಂದಿತೆಂದು ಇತಿಹಾಸವು ಹೇಳುತ್ತದೆ. ಆ ಗುಂಪೇ ಸಮಾಜದ ಆರಂಭ. ಕಾಡು ಜನರ ಸಮಾಜಕ್ಕೆ ಅಡಿಗಲ್ಲಾಗಿರುವ ಪ್ರೇಮ, ಸಹಾನುಭೂತಿ, ಪರಸ್ಪರ ಸಹಾಯ ಮುಂತಾದ ಗುಣಗಳ ಹಿಂಬದಿಯಲ್ಲಿ ಇನ್ನೂ ಕೆಲವು ಗುಣಗಳಿವೆ; ಅವು ಸತ್ಯ, ಪ್ರಾಮಾಣಿಕತನ, ನಿಸ್ಸ್ವಾರ್ಥ, ನಿರ್ವಂಚನೆ ಮುಂತಾದ ಗುಣಗಳು. ದ್ರವ್ಯದ ಕಲ್ಪನೆಯೇ ಇಲ್ಲದಿರುವಾಗ ಕೊಲೆಸುಲಿಗೆಗಳಿಲ್ಲ, ಕಳವಿಲ್ಲ. ಅಂದರೆ ಮಕ್ಕಳ ಮನಸ್ಸಿನಂತೆ, ತಿಳಿನೀರಿನಂತೆ, ಗಾಜಿನಂತೆ, ಅವರ ಶುದ್ಧಭಾವ. ಇದಕ್ಕೆ ನಾವು ಅಂತರಂಗಶುದ್ಧಿಯೆಂದೆನ್ನಬಹುದು. ಇವೆಲ್ಲ ಗುಣಗಳು ಒಟ್ಟಾರೆ ಸೇರಿ ಅವರ ಸಮಾಜದ ಐಕ್ಯಕ್ಕೆ ಕಾರಣವಾಗಿದ್ದುವು. ಇವೇ ಅವರ ಸಮಾಜದ ಕಟ್ಟುಗಳು. ಇವು ಆ ಕಾಲದಲ್ಲಿ ಜನರಿಗೆ ಹುಟ್ಟುಗುಣಗಳೆಂದು ಈಗ ಒಂದು ವೇಳೆ ಕಲ್ಪಿಸಿದರೂ (ಹಾಗೆ ಕಲ್ಪಿಸಲು ಅವಕಾಶವಿಲ್ಲ. ಆ ಕಾಲದಲ್ಲಿ ಆಗುವ ಹುಟ್ಟುಗುಣಗಳು ಈ ಕಾಲದಲ್ಲಿ ಆಗಲಾರವೋ ?) ಇವೇ ಗುಣಗಳು ನಿರಂತರವಾಗಿ ಸಮಾಜಕ್ಕೆ ಅಡಿಗಲ್ಲುಗಳೆಂದು ತತ್ವಜ್ಞರು ಹೇಳುವ ಮಾತು ಎಂದೂ ಹುಸಿಯಾಗದು. ಬಸವಣ್ಣನವರೂ ಇದೇ ತತ್ವವನ್ನು ಸಾರಿದ್ದಾರೆ. "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಬೇಡ, ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ."

ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ ದುರ್ಗುಣಗಳು ಸಮಾಜದಲ್ಲಿ ಒಡಕು ಹುಟ್ಟಿಸುತ್ತವೆ. ಆದುದರಿಂದ ಸಮಾಜ ಮಂದಿರವು ಭದ್ರವಾಗಿ ಉಳಿಯಬೇಕಾದರೆ ನೀತಿಯೆಂಬ ತಳಹದಿಯು ಬಹಳ ಶುದ್ಧವಾಗಿರಬೇಕು. ಆಫ್ರಿಕಾಖಂಡದಲ್ಲಿ, ಅಮೇರಿಕಾಖಂಡದಲ್ಲಿ ಮತ್ತು ಹಿಂದೀ ಮಹಾಸಾಗರದೊಳಗಿನ ಕೆಲವು ದ್ವೀಪಗಳಲ್ಲಿ ಈ ವರೆಗೂ ಕಾಡು ಜನರಿರುವರು. ಅವರ ಸಮಾಜವು ಸ್ಥಿರವಾಗಿ ಉಳಿಯಲು ಅವರ ನೈತಿಕ ಬಲವೇ ಬಲವು. ಅವರಲ್ಲಿ ಒಡಕುಗಳಿಲ್ಲ. ಅವರಲ್ಲಿ ಪಂಗಡಗಳಿಲ್ಲ. ಅವರಲ್ಲಿ ಉಚ್ಚನೀಚತೆಯಿಲ್ಲ. ಯೋಗ್ಯತೆಯಲ್ಲಿ ಎಲ್ಲರೂ ಒಂದೇ.

ಸಮಾಜದ ತಳಹದಿಯು ಹೀಗಿರುವಾಗ ಹಿಂದೂ ಸಮಾಜದಲ್ಲಿ ಉಚ್ಚನೀಚತರಗತಿಗಳು ಹೇಗೆ ಉಂಟಾದುವೆಂಬುದನ್ನು ತಿಳಿಯುವುದು ಕ್ರಮಪ್ರಾಪ್ತ. ಬುದ್ಧಿಬೆಳವಣಿಗೆಯು ಕೂಡ ಸಂಸ್ಕಾರವೂ ಬೆಳೆಯುತ್ತ ಹೋಗಿ, ಪರದೇಶದಿಂದ ಬಂದ ದಾಳಿಗಾರರು ಹಿಂದುಸ್ತಾನದಲ್ಲಿ ನೆಲೆಗೊಂಡು ನಿಂತು, ಮೂಲನಿವಾಸಿಗಳು ಅವರಲ್ಲಿ ಬೆರೆತು ಹೋಗಿ ಸಂಸ್ಕಾರವು ಈಗಿನ ರೂಪದಲ್ಲಿ ನಿಂತಿತು. ಹಿಂದೂ ಧರ್ಮವು ರೂಢವಾಯಿತು. ಜೈನ-ಬೌದ್ಧ-ಧರ್ಮಗಳು ಮುಂದೆ ಬಂದುವು. ಹಿಂದೂ ಧರ್ಮದಲ್ಲಿ ಸ್ಮಾರ್ತ, ಭಾಗವತ, ಶ್ರೀವೈಷ್ಣವ ಮುಂತಾದ ಪಂಗಡಗಳಾದವು. ಸಮಾಜವು ಈ ಎಲ್ಲ ಧರ್ಮಗಳ ಮತ್ತು ಅವುಗಳಲ್ಲಿನ ರೂಢಿಯ ಸಂಪರ್ಕದಿಂದ ಒಡೆದು ತುಂಡುತುಂಡಾಗಿ ಹೋಯಿತು. ಆ ಧರ್ಮಗಳ ಒಳಭೇದಗಳಿಂದ ಮನೆಗೊಂದು ಜಾತಿ ಮನೆಗೊಂದು ಸಮಾಜವಾಗುವಂತೆ ತೋರಹತ್ತಿತು. ಆದರಿಂದ ನಾನು ಹೆಚ್ಚು ತಾನು ಹೆಚ್ಚು ಎಂಬ ಭಾವನೆಯು ತಲೆಯೆತ್ತಿ ಸಮಾಜದೊಳಗಿನ ಒಡಕು ಮತ್ತಿಷ್ಟು ತೀವ್ರವಾಯಿತು.

ಸಮಾಜದ ಒಡಕಿನ ಕಾರಣಗಳನ್ನು ಹೀಗೆ ವಿಂಗಡಿಸಬಹುದು. ಅ. ವರ್ಣಾಶ್ರಮಧರ್ಮ, ಬ. ಧರ್ಮಸಹಿಷ್ಣುತೆ, ಕ. ಅಧಿಕಾರಬಯಕೆ ಮತ್ತು ಸುಖಲೋಲುಪತೆ, ಡ. ಆರ್ಥಿಕ ಪರಿಸ್ಥಿತಿ, ಇ. ವಿಚಾರ ಶೂನ್ಯತೆ ಮತ್ತು ಉದಾಸೀನತೆ, ಫ. ಹದಿನೆಂಟು ಜಾತಿಗಳು.

ಅ. ವರ್ಣಾಶ್ರಮಧರ್ಮದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳುಂಟಾಗಿ ಸಮಾಜದಲ್ಲಿ ಹೆಚ್ಚು ಕಡಿಮೆ ತರಗತಿಗಳುಂಟಾದುವು. ಬ್ರಾಹ್ಮಣರು ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಳ್ಳಲು ಕಲಿಯುಗದಲ್ಲಿ ಬ್ರಾಹ್ಮಣರ ಹೊರತು ಉಳಿದ ವರ್ಣಗಳಿಲ್ಲೆಂದು ಹೇಳುತ್ತಾರೆ. ಈ ಮಾತು ಬೇರೆ. ಬಸವಣ್ಣನವರ ಕಾಲಕ್ಕಿಂತ ತುಸು ಪೂರ್ವದಲ್ಲಿ 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬ ಉಕ್ತಿಯು ಪ್ರಚಾರದಲ್ಲಿತ್ತೆಂಬ ಮಾತು ನಿರ್ವಿವಾದವಾಗಿದೆ. ತಮ್ಮ ಗುರುತ್ವವನ್ನು ಕಾಪಾಡಿಕೊಳ್ಳಲು ಅವರು ಅನೇಕ ರೀತಿಯಾಗಿ ಹೆಣಗಬೇಕಾಗಿ ಬಂತು. ಅವರಿಗೆ ಸಹಾಯವೆಂದರೆ ಶಿಕ್ಷಣವು ಮಾತ್ರ. ಈಗಿನಂತೆ ಆ ಕಾಲದಲ್ಲಿ ಶಿಕ್ಷಣಸೌಕರ್ಯಗಳಿರಲಿಲ್ಲ. ಬ್ರಹ್ಮಪುರಿಗಳಲ್ಲಿ, ಅಗ್ರ

ಹಾರಗಳಲ್ಲಿ, ಮಂತಗಳಲ್ಲಿ ಅವರು ಶಿಕ್ಷಣಪಡೆಯಬೇಕಾಗುತ್ತಿತ್ತು. ಹೀಗೆ ಶಿಕ್ಷಣ ಪಡೆದು ಪೂರ್ವಕಾಲದಿಂದಲೂ ಪ್ರತಿಷ್ಠಿತರಾದ ಬ್ರಾಹ್ಮಣರು ತಮ್ಮ ಪ್ರತಿಷ್ಠೆಯನ್ನು ಈಗ ಕರ್ಮಮಾರ್ಗವನ್ನು ಆಚರಿಸಿ ಕಾಯ್ದುಕೊಳ್ಳಬೇಕಾಯಿತು. "ಜನ್ಮನಾ ಜಾಯತೆ ಶೂದ್ರಃ ಸಂಸ್ಕಾರಾತ್ ದ್ವಿಜ ಉಚ್ಯತೆ" ಎಂಬ ಧರ್ಮಶಾಸ್ತ್ರದ ವಚನವು ಅವರ ಸ್ಮರಣೆಯಲ್ಲಿಯೂ ಇರಲಿಲ್ಲ. ಬ್ರಾಹ್ಮಣರ ವಂಶದಲ್ಲಿ ಹುಟ್ಟಿದವರೇ ಬ್ರಾಹ್ಮಣರು ಎಂದು ಅವರ ನಂಬುಗೆ. ಜನರಲ್ಲಿ ತಮ್ಮ ವರ್ಚಸ್ಸು ಸ್ಥಿರವಾಗಿ ಉಳಿಯಬೇಕೆಂದು ವೇದಪಠಣ, ಯಜ್ಞ ಯಾಗಾದಿಗಳು, ನೇಮನಿಷ್ಠೆಗಳು, ಮುಂತಾದ ವ್ಯವಹಾರಗಳು ಅವರ ನಿತ್ಯದ ಉದ್ಯೋಗಗಳು. ಶಾಸನಗಳಲ್ಲಿ ಬ್ರಾಹ್ಮಣರಿಗೆ ದಾನ; ಶಾಸನಾಂತ್ಯದಲ್ಲಿ ಅವುಗಳನ್ನು ಅಳಿದವರು ಗಂಗೆ-ಗಯೆ-ವಾರಣಾಸಿಯಲ್ಲಿ ಸಾವಿರ ಆಕಳುಗಳನ್ನೂ ಬ್ರಾಹ್ಮಣರನ್ನೂ ಕೊಂದ ಪಾತಕಿಗಳು ಎಂಬ ಶಾಪ. ಹೀಗೆ ಬ್ರಾಹ್ಮಣರಿಂದ ಒಂದು ತಾರತಮ್ಯ ವುಂಟಾಯಿತು.

ಜೈನರಲ್ಲಿಯೂ ಎಂಟನೆಯ ಶತಮಾನದ ತರುವಾಯ ಹಿಂದುಗಳಲ್ಲಿನಂತೆ ವರ್ಣಾಶ್ರಮಧರ್ಮವುಂಟಾಯಿತೆಂದು ತೋರುತ್ತದೆ. ಆದಿತೀರ್ಥಂಕರರ ಕಾಲದಲ್ಲಿ ಮೂರು ವರ್ಣಗಳಿದ್ದುವು ಭರತೇಶ ಚಕ್ರವರ್ತಿಯು ಬ್ರಾಹ್ಮಣ ಮುಂತಾದ ಚತುರ್ವರ್ಣಗಳನ್ನು ಕಲ್ಪಿಸಿ ವರ್ಣಸಂಕರವಾಗದಂತೆ ನೋಡಿಕೊಳ್ಳಲು ದಂಡಧರರನ್ನು ನಿಯಮಿಸಿದನೆಂದು ಆದಿಪುರಾಣದಲ್ಲಿ ಹೇಳಿದೆ. ಹೀಗಿರದಿದ್ದರೆ ಮಾತ್ರ ಜೈನಾಗಮದಲ್ಲಿ ಹೇಳಿದ ಅಸಿ ಮಷಿ ಮುಂತಾದ ಉದ್ಯೋಗಗಳಿಂದ ಆ ಧರ್ಮವು ವೀರಶೈವರಂತೆ ವಿಶ್ವಧರ್ಮವಾಗಲು ಯೋಗ್ಯವಿತ್ತು. ಬರಿಯ ಧಾರ್ಮಿಕ ತತ್ವಗಳಿಂದ ಜನರ ಮನಸ್ಸು ತೃಪ್ತವಾಗುವಂತಿರಲಿಲ್ಲ. ಆದುದರಿಂದ ಜೈನರು ತಮ್ಮ ಅಸ್ತಿತ್ವವನ್ನು ಕಾದುಕೊಳ್ಳಬೇಕಾದರೆ ಧಾರ್ಮಿಕ ವಾದಗಳಲ್ಲಿ ಬ್ರಾಹ್ಮಣ ಮುಂತಾದ ತಮ್ಮ ಎದುರುಗಾರರನ್ನು ಗೆದ್ದು ಜೈನ ಧರ್ಮವು ಶ್ರೇಷ್ಠವೆಂದು ಪ್ರಸ್ಥಾಪಿಸಬೇಕಾಯಿತು. ಮತ್ತು ಆದರ್ಶನಕ್ಕೆ ಸಂಬಂಧಪಟ್ಟ ಪ್ರಕ್ರಿಯೆಗಳನ್ನೂ ಕರ್ಮಠರಂತೆ ಆಚರಿಸಬೇಕಾಯಿತು. ಜಿನಮುನಿಗಳೂ ಕಂತಿಯರೂ (ಅರ್ಜಿಕೆಯರೂ) ಸಲ್ಲೇಖನವ್ರತದಿಂದ ಮಡಿಯೋಣ, ಶ್ರಾವಕರು ನಿರ್ಗ್ರಂಥದೀಕ್ಷೆ ವಹಿಸೋಣ, ಮುನಿಗಳು ಗತಿಸಿದ ತರುವಾಯ ನಿಷಿದಗಲ್ಲುಗಳನ್ನು ನಿಲ್ಲಿಸೋಣ, ಪಂಚಕಲ್ಯಾಣ ಪೂಜೆಯನ್ನು ವಿಜೃಂಭ

ಣೆಯಿಂದ ಮಾಡೋಣ, ಬಸದಿಗಳನ್ನು ಕಟ್ಟಿಸೋಣ, ಮುಂತಾದ ಧಾರ್ಮಿಕ ಕಾರ್ಯಗಳಿಂದ ತಮ್ಮ ಪ್ರತಿಷ್ಠೆಯನ್ನು ಜೈನರು ಕಾಯ್ದು ಕೊಳ್ಳಬೇಕಾಗಿ ಬಂದಿತು. ಆದರೆ ಅವರ ಪ್ರತಿಷ್ಠೆಯು ಬಹಳ ದಿನ ಬಾಳ ಲಿಲ್ಲ. ಹೊಯ್ಸಳ ವಿಷ್ಣುವರ್ಧನನು ಶ್ರೀವೈಷ್ಣವಧರ್ಮವನ್ನು ಸ್ವೀಕರಿಸಿ ಅನೇಕ ಜನರನ್ನು ಕೊಲ್ಲಿಸಿದನೆಂದು ಸ್ವಾದಿಮಠದ ಪಟ್ಟಾವಲಿಯಲ್ಲಿ ಹೇಳಿದೆ. ಆದರೂ ಜೈನರು ಹಿಂಜರಿಯಲಿಲ್ಲ. ಶ್ರೀವೈಷ್ಣವವು ನವಮತ ವಾದುದರಿಂದ ಅನೇಕರು ಆ ಧರ್ಮವನ್ನು ಸ್ವೀಕರಿಸಿದರು. ಅದರಲ್ಲಿಯೂ ಕರ್ಮಮಾರ್ಗವು ಪ್ರಬಲವಾಗಿ ಡಂಭಾಚಾರವು ಬೆಳೆಯಿತು.

ಬ. ಪೂರ್ವಕಾಲದಲ್ಲಿ ಅರಸರೂ ಮಾಂಡಲೀಕರೂ ದಂಡನಾಯಕರೂ ಮೇಲಿಂದ ಮೇಲೆ ಯುದ್ಧಮಾಡಬೇಕಾಗುತ್ತಿತ್ತು. ಯುದ್ಧದಲ್ಲಿ ಜಯ ದೊರೆತ ಕೂಡಲೆ ಎಲ್ಲ ದೇವರುಗಳಿಗೂ ಸರಿಯಾಗಿ ಭೂಮಿದಾನ ಮಾಡಿ ಶಾಸನಗಳನ್ನು ಬರೆಯಿಸುತ್ತಿದ್ದರು. ಇದರಿಂದ ಅವರಿಗೆ ನಾವು ಧರ್ಮ ಸಹಿಷ್ಣುಗಳೆನ್ನುತ್ತೇವೆ. ಧರ್ಮದ ವಿಷಯವಾಗಿ ವಿಚಾರ ಮಾಡಲು ಅವ ರಿಗೆ ಅವಕಾಶವೇ ಇರುತ್ತಿರಲಿಲ್ಲ. ಒಂದಿಲ್ಲೊಂದು ರೀತಿಯಿಂದ ಪ್ರಜೆ ಗಳು ಸುಖಿಯಾಗಿದ್ದರೆ ಆಯಿತು ಎಂದು ಅವರು ಯೋಚಿಸಿದ ಉಪಾ ಯವಿದು. ಅದು ಅವರ ಧಾರ್ಮಿಕ ಉದಾಸೀನತೆಯೇ. ಆದರೆ ಆ ಶಾಸನ ಗಳಲ್ಲಿ ತಮ್ಮ ದಾನದಿಂದ "ಶಿಷ್ಟ ವಿಶಿಷ್ಟ ಕಲ್ಪಭೂರುಹ, ದಾನಚಿಂತಾ ಮಣಿ" ಎಂದು ಹೊಗಳಿಸಿಕೊಂಡಿದ್ದಾರೆ. ಹಣ ಕೊಟ್ಟರೆ ಹೊಗಳದ ಕವಿಗಳಾರು? ತಮ್ಮ ವೈಭವದಿಂದ, ತಮ್ಮ ಐಶ್ವರ್ಯದಿಂದ, ವಿಲಾಸ ಭೋಗಗಳಿಂದ ಜನರ ಆದರಕ್ಕೆ ಅವರು ಪಾತ್ರರಾದರು. ಇದನ್ನೇ ಬಸ ವಣ್ಣನವರು ಹೀಗೆ ಹೇಳಿದ್ದಾರೆ.

"ಆನೆಯನೇರಿಕೊಂಡು ಹೋದಿರಿ ನೀವು. ಕುದುರೆಯನೇರಿಕೊಂಡು ಹೋದಿರಿ ನೀವು. ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರಣ್ಣಾ. ಸತ್ಯದ ನಿಲವನರಿಯದೆ ಹೋದಿರಲ್ಲಾ! ಸದ್ಗುಣವೆಂಬ ಫಲವ ಚಿತ್ತದೆ ಬೆಳೆಯದೆ ಹೋದಿರಲ್ಲಾ! ಅಹಂಕಾರವೆಂಬ ಮದಗಜವನೇರಿ ವಿಧಿಗೆ ಗುರಿಯಾಗಿ ನೀವು ಕೆಟ್ಟು ಹೋದಿರಲ್ಲಾ! ನಮ್ಮ ಕೂಡಲಸಂಗಮದೇ ವರನರಿಯದೆ ನರಕಕ್ಕೆ ಭಾಜನವಾದಿರಲ್ಲಾ!"

"ಹತ್ತು ಮತ್ತರ ಭೂಮಿ, ಬತ್ತದ ಹಯನು, ನಂದಾದೀವಿಗೆಯ ನಡೆಸಿಹೆನೆಂಬವರ ಮುಖವ ನೋಡಲಾಗದು. ಒಡೆಯರಿಗೆ ಉಂಡಿಗೆಯ

ಮುರಿದಿಕ್ಕಿದಂತೆ ಎನ್ನಿಂದಲೇ ಆಯಿತ್ತು; ಎನ್ನಿಂದಲೇ ಹೋಯಿತ್ತು ಎಂಬ ವನ ಬಾಯಲ್ಲಿ ಮೆಟ್ಟಿ ಹುಡಿಯು ಹೊಯ್ಯದೆ ಮಾಬನೇ ಕೂಡಲ ಸಂಗಮದೇವ."

ಹೀಗೆ ಅರಸರು, ಮಾಂಡಲೀಕರು, ಸೇನಾಪತಿಗಳು ಸಮಾಜದಲ್ಲಿ ಪ್ರತಿಷ್ಠೆ ಪಡೆದರು.

ಕ. ಮನುಷ್ಯನು ಸ್ವಾಭಾವಿಕವಾಗಿ ಸುಖಲೋಲುಪನು. ಐಹಿಕ ಸುಖವನ್ನು ಹಣದ ಸಹಾಯದಿಂದ ಪಡೆಯ ಬಹುದೆಂದು ಆತನು ಸಹ ಜವಾಗಿ ನಂಬುವನು. ಆದುದರಿಂದ ಆ ಹಣವನ್ನು ಗಳಿಸಬೇಕಾದರೆ ಆತನು ಸ್ವಾರ್ಥ, ಲೋಭ, ಅಪ್ರಾಮಾಣಿಕತನ, ಅಸತ್ಯ ಮುಂತಾದ ದುರ್ಗುಣಗಳನ್ನು ಅವಲಂಬಿಸುವನು. ಪರರ ಮನೋಭಾವಗಳಿಗೆ ಆತನ ಗಣನೆಯಲ್ಲಿ ಸ್ಥಾನವೇ ಇರುವದಿಲ್ಲ. ಕ್ಷಣ ಕ್ಷಣಕ್ಕೂ ಹಣವೆನ್ನುವನು.

"ಧನದಾಸೆ ಬಿಡದು ಕೂಡಲಸಂಗಮದೇವ."

ಆತನು ಮಹತ್ವಾಕಾಂಕ್ಷಿಯಾಗಿದ್ದರೆ, ಶೂರನಾಗಿದ್ದರೆ, ಮುಂದುವರಿಯುವ ಚಾಪಲ್ಯವಿದ್ದರಂತೂ ಬೇಗನೆ ಅಧಿಕಾರಪದವನ್ನು ದೊರಕಿಸಿ ಅದರ ಸಹಾಯದಿಂದ ತನ್ನ ಸುಖಲೋಲುಪತೆಯನ್ನು ಪೂರ್ಣಗೊಳಿಸಿ ಕೊಳ್ಳುವನು. ಬಿಜ್ಜಳನು ಇದಕ್ಕೆ ಉದಾಹರಣೆ. ಆತನು ಮೊದಲು ದಂಡ ನಾಯಕನು. ಆ ಮೇಲೆ ಮಹಾಮಂಡಳೇಶ್ವರನಾದನು. ಕೊನೆಗೆ ಚಾಲುಕ್ಯ ರಾಜ್ಯವನ್ನು ಎತ್ತಿಹಾಕಿ, ತಾನೇ ಅರಸನಾದನು. ಚಾಲುಕ್ಯರಾಜನು ಹೇಡಿಯಾಗಿದ್ದನು. ಆಗ ರಾಜ್ಯದ ಮೇಲೆ ಬಲಿಷ್ಠನೊಬ್ಬನು ಬೇಕಾಗಿದ್ದನು. ಈ ಮಾತು ಬೇರೆ. ಪರಿಸ್ಥಿತಿಯು ಆತನಿಗೆ ಅನುಕೂಲವಿತ್ತು. ಆತನಲ್ಲಿ ಸಾಮರ್ಥ್ಯವಿತ್ತು. ಮಹತ್ವಾಕಾಂಕ್ಷೆಯಿತ್ತು. ಇತ್ಯರ್ಥವೇನೆಂದರೆ ಸಮಾಜದ ಕಟ್ಟನ್ನು ಆತನು ಹರಿದೊಗೆದು ತನ್ನ ಕಡಿಮೆಯ ತರಗತಿಯಿಂದ ಉಚ್ಚ ಪದವಿಯನ್ನು ಪಡೆದುಕೊಂಡನು. ವ್ಯಕ್ತಿಯ ದೃಷ್ಟಿಯಿಂದ ಆತನು ಆದರಣೀಯನಾದರೂ ಸಾಮಾಜಿಕ ದೃಷ್ಟಿಯಿಂದ ದೋಷಿಯೇ ಆಗುತ್ತಾನೆ.

ಡ. ಬಸವಣ್ಣನವರ ಪೂರ್ವದಲ್ಲಿ ಬಹಳ ದಿವಸಗಳ ಹಿಂದೆಯೇ ಕನ್ನಡಿಗರು ಪರದೇಶಗಳ ಕೂಡ ವ್ಯಾಪಾರ ಮಾಡುತ್ತಿದ್ದರು. ಕ್ರಿ. ಶ.

ಆರಂಭದಲ್ಲಿಯೇ ಬೌದ್ಧರ ಶಾಸನಗಳಲ್ಲಿ ಬಡ್ಡಿಯ ವ್ಯವಹಾರ, ಬ್ಯಾಂಕುಗಳ ವ್ಯವಹಾರವಿದ್ದ ಉಲ್ಲೇಖಗಳಿವೆ. ಸೀಸ, ತಾಮ್ರ, ಬೆಳ್ಳಿ, ಬಂಗಾರದ ನಾಣ್ಯಗಳಿದ್ದುವು. ವರ್ತಕರು ಉಚ್ಚಾಸ್ಥಿತಿಯಲ್ಲಿದ್ದರು. ಹಣವಂತನೇ ಗುಣವಂತನೆಂಬ ನಾಣ್ಣುಡಿಯಂತೆ ಸೆಟ್ಟಿ ಸಾಹುಕಾರಗಳು ಊರು ಕೇರಿಗಳಲ್ಲಿ ಪ್ರತಿಷ್ಠಿತರಾಗಿದ್ದರು. ವರ್ತಕ ವರ್ಗದಲ್ಲಿಯೇ ಬಡವರಾದವರು ಶ್ರೀಮಂತರ ಬಗ್ಗೆ ಅಸೂಯೆ ಪಡುತ್ತಿದ್ದರು. ಅಂದರೆ ಆರ್ಥಿಕ ಪರಿಸ್ಥಿತಿಯಲ್ಲಿ ಕೂಡ ಸಮಾಜಕ್ಕೆ ಒಂದು ಗಂಡಾಂತರವು ಬರಹತ್ತಿತ್ತು.

೩. ಜನಸಾಮಾನ್ಯವು ವಿಚಾರಪರವಾಗಿರಲಿಲ್ಲ. ಇದಕ್ಕೆ ಕಾರಣವೆಂದರೆ ಉಂಡುಟ್ಟುಕೊಳ್ಳಲು ಅವರಿಗೆ ಕೊರತೆಯಿರಲಿಲ್ಲ. ಆದರಿಂದ ಅವರು ಕೆಲಮಟ್ಟಿಗೆ ವೈಗಳ್ಯರೇ ಆಗಿದ್ದರು. ಕೊರತೆಗಳಿದ್ದರೆ ಭರತಿ ಎಂಬ ತತ್ವವು ಆಗಲೂ ಕಂಡು ಬರುತ್ತದೆ. ರಾಜಕೀಯ ವಿಷಯಗಳಲ್ಲಾಗಲಿ, ಧಾರ್ಮಿಕ ವಿಷಯಗಳಲ್ಲಾಗಲಿ, ಸಾಮಾಜಿಕ ವಿಷಯಗಳಲ್ಲಾಗಲಿ ಮುಂದುವರಿಯಲು ಏನು ಮಾಡಬೇಕೆಂಬ ವಿಚಾರವಿರಲಿಲ್ಲ. ಕನ್ನಡಿಗರ ಘನತೆಯು ಸ್ಥಿರವಾಗಿ ಉಳಿಯಬೇಕಾದರೆ ಏನು ಮಾಡಬೇಕು? ಆವ ಉಪಾಯಗಳನ್ನು ಯೋಚಿಸಬೇಕು? ಎಂಬ ವಿಚಾರಗಳೇ ತಲೆ ಎತ್ತಿರಲಿಲ್ಲ. ಧರ್ಮದಲ್ಲಿಯೂ ಹಾಗೆಯೇ. ಯಾವ ಪುರಾತನ ಕಾಲದಲ್ಲಿಯೋ ರಚಿತವಾದ ಧರ್ಮಗ್ರಂಥಗಳೇ ಆಧಾರ. ಕಾಲಮಾನಕ್ಕನುಸಾರವಾಗಿ ಅವುಗಳಲ್ಲಿ ಬದಲಾವಣೆ ಮಾಡಿಕೊಳ್ಳಲು ಯಾರೂ ಪ್ರಯತ್ನಿಸಲಿಲ್ಲ. ನಮ್ಮ ಹಿರಿಯರು ವಿಚಾರ ಮಾಡಲ್ಲವೇ? ಅವರು ಮೂರ್ಖರಿದ್ದರೇ ಎಂಬದೊಂದು ಕಟ್ಟಿಟ್ಟ ಉತ್ತರ. ಅವರ ಉದಾಸೀನತೆಯ ಪರಿಣಾಮವು ಮಾತ್ರ ದುಸ್ತರವಾಯಿತು. ಸಹಕಾರ ಪರಸ್ಪರ ಸಹಾಯಗಳು ನಿಂತು ಹೋದವು. “ಮಾಡಿದವನನುಣ್ಣುತ್ತಾನೆ ಮಣೆಯಂತಹ ಕಡುಬು” ಎಂಬ ಗಾದೆಯಾಗಲು ಅವಕಾಶದೊರೆಯಿತು. ಸಮಾಜ ಶಿಥಿಲತೆಯುಂಟಾಯಿತು. ವೈದಿಕ, ಶೈವ, ಜೈನ ಮತಗಳಲ್ಲಿ ಆದರವು ಕಡಿಮೆಯಾಗಹತ್ತಿತು. ಆದರೆ ಜನರ ಅಂತಃಕರಣದಲ್ಲಿ ಧರ್ಮದ ಬೇರುಗಳು ಚೆನ್ನಾಗಿ ನೆಟ್ಟು ಹೋಗಿದ್ದುದರಿಂದ “ಧರ್ಮ”ವೆಂದ ಕೂಡಲೆ ತಡಬಡಿಸಿ ಎಚ್ಚೆತ್ತು ಆ ಮೇಲೆ ತಮ್ಮ ವೈಯುಂಡ ಉದಾಸೀನತೆಯ ವಶರಾಗುತ್ತಿದ್ದರು. ಈ ಬಗ್ಗೆ ಬಸವಣ್ಣನವರು ಹೀಗೆಂದಿದ್ದಾರೆ.

"ಭಕ್ತರ ಕಂಡರೆ ಬೋಳರಪ್ಪಿರಯ್ಯಾ, ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ, ಹಾರುವರ ಕಂಡರೆ ಹರಿನಾಮವೆಂಬಿರಯ್ಯಾ. ಅವರವರ ಕಂಡರೆ ಅವರವರಂತೆ."

ಅಂದರೆ ಜನಸಾಮಾನ್ಯದಲ್ಲಿ ಯಾವುದಾದರೂ ಒಂದು ಧರ್ಮದ ವಿಷಯವಾಗಿ ದೃಢಭಾವವಿರಲಿಲ್ಲ. ಅದನ್ನು ಕಂಡು ಹಿಡಿದು ಧೂರ್ತರು ಜನಸಾಮಾನ್ಯದ ಧಾರ್ಮಿಕಭಾವನೆಯನ್ನು ತಮಗೆ ಬೇಕಾದಂತೆ ಉಪಯೋಗಿಸಿ ಸ್ವಾರ್ಥಸಾಧಿಸಿಕೊಳ್ಳುತ್ತಿದ್ದರು. ಧಾರ್ಮಿಕ ಭಾವನೆಯು ಶಿಥಲವಾಗಿದ್ದುದನ್ನು ಕಂಡು ಬಸವಣ್ಣನವರು ಹಿಗೆಂದಿದ್ದಾರೆ.

"ಬರಬರಭಕ್ತಿ ಮರೆಯಾಯಿತ್ತು ಕಾಣಿರಣ್ಣಾ. ಮೊದಲು ದಿನ ಹಣೆ ಮುಟ್ಟಿ, ಮರುದಿನ ಕೈಮುಟ್ಟಿ, ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ. ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ. ಇಲ್ಲದಿದ್ದರೆ ನಡುನೀರಲದ್ದುವ ನಮ್ಮ ಕೂಡಲಸಂಗಮದೇವ."

ಅಂದರೆ ಧಾರ್ಮಿಕ ಭಾವನೆಯು ರೂಢಮೂಲವಾಗಿದ್ದರೂ ಅದು ಕ್ಷಣಿಕಭಾವನೆಯಾಗಿತ್ತು. ಐಹಿಕ ವಿಷಯಗಳಲ್ಲಿ ತೊಡಗಿದ ಕೂಡಲೆ ಅದು ಸ್ಮಶಾನವೈರಾಗ್ಯ ಪ್ರಸೂತಿವೈರಾಗ್ಯಗಳಂತೆ ಕಣ್ಮರೆಯಾಗುತ್ತಿತ್ತು. ಆದರಿಂದ ಧಾರ್ಮಿಕ ವಿಷಯದಲ್ಲಿ ಜನರು ಅಂಜುಬುರುಕರಾಗಿದ್ದರು.

೯. ಬಸವಣ್ಣನವರ ಕಾಲಕ್ಕೆ ಸಮಾಜದಲ್ಲಿ ಹದಿನೆಂಟು ಜಾತಿಗಳಿದ್ದುವು. ಅವರು ಬೇರೆ ಬೇರೆ ಕೇರಿಗಳಲ್ಲಿ ವಾಸಿಸುತ್ತಿದ್ದರು. ಅವುಗಳಿಗೆ ಶ್ರೇಣಿಗಳೆಂದು ಹೆಸರು. ಸಾರ್ವಜನಿಕ ಕಾರ್ಯಗಳಲ್ಲಿ ಆ ಹದಿನೆಂಟು ಜನ ಹೆಗ್ಗಡೆಗಳು ಒತ್ತಟ್ಟಿಗೆ ಸೇರಿ, ಅವರ ವಿಚಾರವಿನಿಮಯದಿಂದ ಕಾರ್ಯಕ್ರಮಗಳು ನಿರ್ಣೀತವಾಗಿ, ಅವುಗಳನ್ನು ಆಚರಿಸುವ ಪದ್ಧತಿ ಇತ್ತು. ಯಾರಾದರೂ ಆ ಕ್ರಮವನ್ನು ತಪ್ಪಿದರೆ ಬಹಿಷ್ಕೃತರಾಗುತ್ತಿದ್ದರು. ಸಾಮಾಜಿಕ ಕಟ್ಟುಗಳು ಹೀಗೆ ಬಿಗಿಯಾಗಿದ್ದರೂ ಬೇರೆ ಬೇರೆ ಮತಗಳಿಂದ ಈ ಬಂಧನಗಳಲ್ಲಿ ಶಿಥಿಲತೆಯುಂಟಾಯಿತು. ಜನರು ಉದಾಸೀನರಾಗಿದ್ದುದರಿಂದ ಅವರ ಮಾನಸಿಕ ಸ್ಥಿತಿಯು ಬಲಿಷ್ಠವಾಗಿರಲಿಲ್ಲ; ಮತ್ತು ಜನರು ವಿಚಾರ ಮಾಡದೆ ಇದ್ದುದರಿಂದ ಆವ ಮತದವರು ಬಂದರೂ ಅವರಿಗೆ ನೀವೆನ್ನುವುದು ಸರಿ ಎಂದು ಹೇಳಬೇಕಾಗುತ್ತಿತ್ತು. ಇವುಗಳ ಜೊತೆಗೆ ಅವಿದ್ಯೆಯೊಂದು ಸಹಾಯಮಾಡಲು

ಸಿದ್ಧವಾಗಿಯೇ ಇತ್ತು. ಬ್ರಾಹ್ಮಣರಿಗೆ, ಜೈನರಿಗೆ, ಅರಸರಿಗೆ ಮತ್ತು ಮಾಂಡಲಿಕರಿಗೆ ಶಿಕ್ಷಣವು ದೊರೆಯುತ್ತಿತ್ತು. ಬಹುತರ ಉಳಿದ ಜನರೆಲ್ಲರು ಅಶಿಕ್ಷಿತರಾಗಿಯೇ ಇರುತ್ತಿದ್ದರು. ಹೀಗಾಗಿರುವಾಗ ಅಧಿಕಾರಿಗಳಿಗೆ ಜನರು ಹೆದರುತ್ತಿದ್ದರೆಂದರೆ ದೊಡ್ಡ ಮಾತಲ್ಲ.

'ಕುದುರೆ ಸತ್ತಿಗೆಯುವರ ಕಂಡರೆ ಹೊರಳಿಬಿದ್ದು ಕಾಲ ಹಿಡಿವರಯ್ಯಾ' ಎಂದು ಬಸವಣ್ಣನವರು ನುಡಿದಿದ್ದಾರೆ. ಆ ಹೆದರಿಕೆಗೆ ರಾಜಭಕ್ತಿಯೂ ಕಾರಣವಾಗಿತ್ತು. ಕನ್ನಡಿಗರು ರಾಜಭಕ್ತಿಯ ದೆಸೆಯಿಂದ ಪುರಾತನ ಕಾಲದಿಂದಲೂ ಪ್ರಸಿದ್ಧ. ಒಂದು ಉದಾಹರಣೆಯನ್ನು ಕೊಡಬಹುದು. ಹೊಯ್ಸಳ ವೀರಬಲ್ಲಾಳ ಮರಣಕಾಲಕ್ಕೆ ಕುಮಾರ ಲಕ್ಷ್ಮಣನು ತನ್ನ ಕೈಯ್ಯ ಕೆಳಗಿದ್ದ ೧೦೦೦ ಜನ ವೀರರೊಡನೆ ಮೃತನಾದನು. ಇಂತಹ ರಾಜಭಕ್ತಿಯನ್ನು ಬೇರೆಡೆಯಲ್ಲಿ ಕಾಣುವುದು ಅಪರೂಪ.

ಸಾರಾಂಶವೇನೆಂದರೆ ಬಸವಣ್ಣನವರ ಕಾಲದ ತುಸು ಪೂರ್ವದಲ್ಲಿ ಎಲ್ಲ ಜನರಲ್ಲಿ ಡಾಂಭಿಕತನದಿಂದ ಧರ್ಮಗಳ ಬಗ್ಗೆ ಅವಿಶ್ವಾಸ, ಅನಾದರ, ಉದಾಸೀನತೆಗಳು ತಲೆದೋರಿದ್ದವು. ಇದಕ್ಕೆ ಬಸವಣ್ಣನವರ ಚರಿತ್ರವೇ ಸಾಕ್ಷಿ. ಸಮಾಜದಲ್ಲಿ ತುಂಬ ತುಂಬಿದ್ದ ಡಾಂಭಿಕತನಕ್ಕೆ ಬೇಸತ್ತು, ಬ್ರಾಹ್ಮಣ ಕುಲದಲ್ಲಿ ಅವರು ಜನ್ಮವೆತ್ತಿದ್ದರೂ "ಶಿವಭಕ್ತಿಯುಂ ಕರ್ಮಮುಂ ಎಂದುಮೊಂದಾಗಿರದು, ಎಂದೊಲ್ಲದೆ ಪರಮವೈರಾಗ್ಯಯುಕ್ತಂ ಶಿವಲಿಂಗಾರ್ಚನಾಯತ್ತ ಚಿತ್ತಂ ಕರ್ಮಲತೆಯಂತಿರ್ದ ಮೌಂಜಿಯುಂ ಪರಿದು ಬಿಸುಟು"— (ಬ. ರಾ. ದೇ ರಗಳೆ ಸ್ಥಳ ೨.) ಬ್ರಾಹ್ಮಣ್ಯವನ್ನು ನಿರಾಕರಿಸಿ ವೀರಶೈವರಾದರು. ಆದರೂ ಜನರಲ್ಲಿ ಅವರು ಬ್ರಾಹ್ಮಣರೆಂದೇ ಪ್ರವಾದವಿದ್ದಂತೆ ತೋರುತ್ತದೆ. ಯಾಕಂದರೆ ಅವರು ಹೀಗೆಂದಿರುವರು:—

"ಹಾರುವ ಹಾರುವನಪ್ಪೆ ನಾನು. ಸದ್ಭಕ್ತರೆನ್ನವರೆಂದು ಹಾರುವೆನಪ್ಪಾ, ನಾನು ಶರಣರೆನ್ನವರೆನ್ನವರೆಂದು.

"ಹಾರು" ಶಬ್ದದ ಮೇಲೆ ಶ್ಲೇಷೆಯನ್ನಿಟ್ಟು ಶರಣರು ನನ್ನವರು ಎಂದು ಆನಂದಪಡುತ್ತೇನೆ, ಉಬ್ಬುತ್ತೇನೆ ಎಂದು ಅವರು ಹೇಳುತ್ತಾರೆ.

ಡಾಂಭಿಕತನಕ್ಕೆ ಹೇಸಿ ವೀರಶೈವವನ್ನು ಸ್ವೀಕರಿಸಿದ ಬ್ರಾಹ್ಮಣರ ಎರಡನೆಯ ಉದಾಹರಣೆಯೆಂದರೆ ಹರಿಹರ ರಾಘವಾಂಕರದು.

ಕರ್ಮಮಾರ್ಗದ ವಿಷಯವಾಗಿ ಬಸವಣ್ಣನವರು ಹೀಗೆ ಹೇಳುತ್ತಾರೆ:— "ಹಲವು ಕೊಂಬೆಗೆ ಹಾಯಲು ಬೇಡ, ಬರುಕಾಯಕೆ ನೀಡಲುಬೇಡ, ಲೋಗರಿಗೆ ಕೊಟ್ಟು ಭ್ರಾಂತನಾಗಿರಬೇಡ. ಆಚಾರವೆಂಬುದು ಹಾವಸೆಗಲ್ಲು. ಭಾವತಪ್ಪಿದ ಬಳಿಕ ಏಗೈದಡಾಗದು.'

ಆದುದರಿಂದ ಭಾವವು ದೃಢವಾಗಿರಬೇಕು. ಎಲ್ಲ ಧರ್ಮಗಳು ಒಂದೇ. ಎಲ್ಲ ಆಚಾರಗಳಿಂದ ಸ್ವರ್ಗ ಮತ್ತು ಮೋಕ್ಷವುಂಟಾಗುತ್ತದೆಂದು ನಂಬುವುದು ಭ್ರಾಂತಿ, ಅನಾದರ. ಅದರಿಂದ ಡಾಂಭಿಕತೆಯು ಮಾತ್ರ ಸಮಾಜದಲ್ಲಿ ನೆಲೆಗೊಳ್ಳುವುದು.

ನೇಮನಿಷ್ಠೆಗಳ ಬಗ್ಗೆ ಅವರ ವಿಚಾರವು ಬಹಳ ವ್ಯಾಪಕವಾಗಿದೆ.

"ಬಂದುದ ಕೈಕೊಳ್ಳಬಲ್ಲರೆ ನೇಮ. ಇದ್ದುದ ವಂಚನೆಯ ಮಾಡದಿದ್ದರೆ ನೇಮ. ನಡೆದು ತಪ್ಪದಿದ್ದರೆ ಅದು ನೇಮ. ನುಡಿದು ಹುಸಿಯದಿದ್ದರೆ ಅದು ನೇಮ."

ಇದರಲ್ಲಿ ದೃಢಮನಸ್ಸು, ನಿರ್ಭೀತಿ, ಸತ್ಯ, ಪ್ರಾಮಾಣಿಕತನ, ಮುಂತಾದ ಸದ್ಗುಣಗಳು ತುಂಬಿ ಹೋಗಿವೆ.

ಜನರು ನಿತ್ಯವೂ ಮಾಡುವ ಪೂಜೆಯಲ್ಲಿ ನಿರ್ಹೇತುಕ ಬುದ್ಧಿಯಿಲ್ಲದುದರಿಂದ ಅದು ಡಂಭಾಚಾರವೆಂದು ಅವರು ಹೀಗೆ ಹೇಳುತ್ತಾರೆ:—

"ಕಲ್ಲನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ. ಉಂಬ ಜಂಗಮ ಬಂದರೆ ನಡೆ ಎಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ."

'ವರ್ಣಾನಾಂ ಬ್ರಾಹ್ಮಣೋಗುರುಃ' ಎಂದು ಹೇಳುವುದಾದರೆ ಬ್ರಾಹ್ಮಣರು ಭೂಸುರರು ಅಂದರೆ ಭೂಮಿಯ ಮೇಲಿನ ದೇವರು ಎಂದು ನಂಬುವುದಾದರೆ ಆ ಬ್ರಾಹ್ಮಣರನ್ನು ನಂಬಿ ಈ ವರೆಗೆ ಅನೇಕರು ಕೆಟ್ಟುಹೋದ ಅನುಭವವೇ ಕಂಡುಬರುತ್ತದೆ.

"ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಗೌತಮಮುನಿಗೆ ಗೋವಧೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ

ಬಲಿಗೆ ಬಂಧನವಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ದಕ್ಷಂಗೆ ಕುರಿದಲೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಪರಶುರಾಮ ಸಮುದ್ರಕ್ಕೆ ಗುರಿಯಾದ. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ನಾಗಾರ್ಜುನನ ತಲೆ ಹೋಯಿತ್ತು. ದೇವಭಕ್ತರೆಂದು ನಂಬಿದ ಕಾರಣ ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು."

ಆದುದರಿಂದ ಬ್ರಾಹ್ಮಣರು ಭೂದೇವರಾಗಲಾರರು. ದೇವತೆಗಳಲ್ಲಿ ಸತ್ವಗುಣವು ಪ್ರಾಧಾನ್ಯ. ಬ್ರಾಹ್ಮಣರಲ್ಲಾದರೋ ತಮೋಗುಣವು ಪ್ರಾಧಾನ್ಯ. ಪರಶುರಾಮನು ವಿಷ್ಣುವಿನ ಅವತಾರವಾದರೂ ಆತನನ್ನು ಮೋಸಗೊಳಿಸಲು ಬ್ರಾಹ್ಮಣರು ಹಿಂಜರಿಯಲಿಲ್ಲ.

ವೇದಾಧ್ಯಯನದಲ್ಲಿ, ಪೂಜಾರಿಗಳು ಮಾಡುವ ಪೂಜೆಯಲ್ಲಿ ಪ್ರಾಮಾಣಿಕತನವಿಲ್ಲದಿರುವುದರಿಂದ ಪರಮಾತ್ಮನು ಅದನ್ನು ಮೆಚ್ಚನು. ವೇದಾಧ್ಯಯನವು ಡಂಭಾಚಾರಕ್ಕೆ, ಆತ್ಮಪ್ರತಿಷ್ಠೆಗೆ ಮತ್ತು ಸ್ವಾರ್ಥಕ್ಕೆ. ದೇವಪೂಜೆಯು ಮಡುಪುಗಳ ಆಸೆಯಿಂದ. ಇವೇ ಮುಂತಾದ ಅವರ ಅಂತರಂಗವನ್ನು ಬಹು ಸ್ವಾರಸ್ಯವಾಗಿ ಬಸವಣ್ಣನವರು ಹೊರಗೆಡವಿದ್ದಾರೆ.

"ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲರಿಯದು"

"ಓಡೆತ್ತ ಬಲ್ಲದು ಅವಲಕ್ಕಿಯ ಸವಿಯ? ಕೋಡಗವೆತ್ತ ಬಲ್ಲದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದರೇನೋ ಕೋಗಿಲೆಯಾಗಬಹುದೇ? ಹೇಳಾ. ಕೊಳನ ತಡಿಯಲೊಂದು ಬಕ ಕುಳಿತಿದ್ದರೇನು ಕಳಹಂಸನಾಗಬಲ್ಲುದೇ ಕೂಡಲಸಂಗಮದೇವಾ?"

"ತನುವಿನಲೊಂದಿಟ್ಟು ಮನದಲೆರಡಿಟ್ಟಡೆ ಬಲ್ಲನೊಲ್ಲನಯ್ಯಾ ಲಿಂಗವು."

ಧರ್ಮದ ಬಗ್ಗೆ ಜನರಲ್ಲಿ ಹೀಗೆ ಅನಾದರವುಂಟಾದಾಗ ಆ ಧರ್ಮವೆಂಬ ಹೆಸರಿನ ಕರ್ಮಮಾರ್ಗದಿಂದ ಪರಾವೃತ್ತರಾಗಿ ನಿಜವಾದ ಮಾರ್ಗವನ್ನು ಹಿಡಿಯಿರೆಂದು ಬಸವಣ್ಣನವರು ಹೀಗೆ ಬೋಧಿಸುತ್ತಾರೆ:—

"ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ, ಅಯ್ಯಾ? ಹೂ ಬಾಡಿದಲ್ಲಿ ಪರಿಮಳವನರಸುವರೆ, ಅಯ್ಯಾ? ಎನ್ನ ತಂದೆ ಕೂಡಲಸಂಗಮದೇವ, ತೊರೆ ಇಳಿದರೆ ಅಂಬಿಗಂಗೇನುಂಟು?"

ಆ ಕರ್ಮಮಾರ್ಗದಿಂದ ಹಾನಿಯೇ ಹೊರ್ತು ಲಾಭವಿಲ್ಲ. ನಿಜ. ಆದರೆ ಬಸವಣ್ಣನವರು

"ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ."

ಎಂದು ಹೇಳಿದ್ದಾರೆ. ತಮ್ಮ ಚರಿತ್ರವೇ ಲೋಕಕ್ಕೆ ಆದರ್ಶವಾಗಿರಬೇಕಾದಾಗ ಅದನ್ನು ಒತ್ತಟ್ಟಗಿರಿಸಿ ಅನ್ಯರಿಗೆ ಎರಡು ರೀತಿಯಾಗಿ ಉಪದೇಶ ಮಾಡಿದರೇಕೆ? ಎಂಬುದೊಂದು ಆಕ್ಷೇಪಣೆಯು ಮುಂದೆ ಬರಬಹುದು. ಅದಕ್ಕೆ ಉತ್ತರವು ಸುಲಭವಾಗಿದೆ. ಮೇಲಿನ ವಚನದಲ್ಲಿ 'ನೀವು' ಎಂಬ ಪದಕ್ಕೆ 'ಜನಸಾಮಾನ್ಯವು' ಎಂದರ್ಥ. ಜನರು ಅಷ್ಟು ಸಾಮರ್ಥ್ಯವುಳ್ಳವರಲ್ಲ. ಮುಂದಾಳುಗಳು ಯಾವಾಗಲೂ ತೀರ ಕುಸು. ಎಲ್ಲರಿಗೂ ಆ ಪದವು ಬಾರದು. ಅವರಲ್ಲಿ ವೈಶಿಷ್ಟ್ಯವೇನಾದರೂ ಇದ್ದೇ ಇರುತ್ತದೆ. ಅದರಂತೆ ಬಸವಣ್ಣನವರು. ಅವರು ಕಾರಣಿಕರು. ಅದ್ವಿತೀಯರು. ಪರಮೇಶ್ವರನ ಭಕ್ತರು. ಲೋಕದ ಸ್ಥಿತಿಯನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿ, ದೂರದೃಷ್ಟಿಯಿಂದ ಜನರ ಮತ್ತು ಅಪ್ರತ್ಯಕ್ಷವಾಗಿ ರಾಷ್ಟ್ರದ ಕಲ್ಯಾಣವನ್ನು ಹೇಗೆ ಸಾಧಿಸಬೇಕೆಂಬ ವಿಚಾರದ ರೂಪರೇಷೆಯನ್ನು ತೋರಿಸಲು ಹೇಳಿದ ಮಾತುಗಳಿವು. ಬಸವಣ್ಣನವರು ಧರ್ಮಸುಧಾರಕರಾದಂತೆ ಎಲ್ಲರೂ ಧರ್ಮಿಗಳಾಗಬೇಕೆಂದರೆ, ಎಲ್ಲರೂ ಉಪದೇಶಮಾಡುತ್ತ ಹೋಗಬೇಕೆಂದರೆ ಹೇಗಾದೀತು? ಆದುದರಿಂದ ಗುರಿಯನ್ನು ಮುಟ್ಟಬೇಕಾದರೆ 'ಮನೆ ಗೆದ್ದು ಮಾರು ಗೆದೆಯಬೇಕೆಂದು' ಬಸವಣ್ಣನವರು ಬೋಧಿಸುತ್ತಾರೆ ಎಲ್ಲರಿಗೆ. ಅದೇ ವಿಷಯವನ್ನು ಮುಂದೆ ಸಾಗಿಸುತ್ತ ಅವರು ಹೀಗೆ ಹೇಳುತ್ತಾರೆಃ—

"ರಿಣ ತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ ನೆಂಟರಲ್ಲ, ಜೀವವಿಲ್ಲದ ದೇಹದಲ್ಲಿ ಫಲವೇನು? ಅಳ್ದನೊಲ್ಲದ ಆಳಿನಲ್ಲಿ ಸಿರಿ ತೊಲಗಿದ ಅರಿಸಿನದಲ್ಲಿ, ವರವಿಲ್ಲದ ದೈವದಲ್ಲಿ ಫಲವೇನೋ?"

ಮನಸ್ಸನ್ನು ಹೀಗೆ ಒಪ್ಪುವಂತೆ ವಿಚಾರ ಪ್ರವೃತ್ತಮಾಡಿ ಉದಾಸೀನತೆಯು ಮನುಷ್ಯನ ಕರ್ತವ್ಯಕ್ಕೆ ಆತಂಕವೆಂದು ಹೇಳುತ್ತಾರೆಃ—

"ಹಸಿದು ಬಂದ ಗಂಡಂಗೆ ಉಣಲಿಕ್ಕದೆ ಬಡವಾದನೆಂದು ಮರುಗುವ ಸತಿಯು ಸ್ನೇಹದಂತೆ ಬಂದುದನರಿಯಳು, ಇದ್ದು ಸವಿಯಳು. ದುಃಖವಿಲ್ಲದ ಅಕ್ಕೆ ಹಗರಣಿಗನ ತೆರನಂತೆ ಕೂಡಲಸಂಗಮದೇವಾ.'

ಇಲ್ಲಿ ವಿಚಾರ, ಮುಂದುಗಾಣಿಕೆ, ಸಹಾನುಭೂತಿ, ಪರಸ್ಪರ ಸಹಾಯಗಳು ಏಳ್ಗೆಗೆ ಕಾರಣವೆಂದು ಹೇಳಿದರು. ಒಣಮಾತುಗಳಿಂದ ಫಲವಿಲ್ಲ.

ಬಸವಣ್ಣನವರು ಸಮಾಜದ ಬಗ್ಗೆ ವಿಚಾರ ಮಾಡಲು ಕಾರಣವೇನು? ಆತ್ಮೋನ್ನತಿಯ ಮಾರ್ಗವನ್ನಷ್ಟೇ ಅವರು ಹೇಳಿದ್ದರೆ ಆಗುತ್ತಿರಲಿಲ್ಲವೇ? ಎಂದು ಕೇಳಬಹುದು. ನಿಜ, ಹಾಗಾಗಬಹುದಿತ್ತು. ಹಾಗಾಗಿದ್ದರೆ ಬಸವಣ್ಣನವರಿಗೆ ಈಗ ದೊರೆತ ಸ್ಥಾನವು ದೊರೆಯುತ್ತಿರಲಿಲ್ಲ. ಅವರ ಅವತಾರವು ಕೇವಲ ಧರ್ಮಸುಧಾರಣೆಗೆ ಅಲ್ಲ; ಎಲ್ಲರಿಗೂ ಮೋಕ್ಷ ಮಾರ್ಗವನ್ನು ತೋರಿಸಲಿಕ್ಕಲ್ಲ; ಇಡಿಯ ರಾಷ್ಟ್ರಕ್ಕೆ ಅಪತ್ಯಕ್ಷವಾಗಿ ಇಡಿಯ ಭೂಮಂಡಲಕ್ಕೆ ಪೂಜ್ಯರಾಗಬೇಕಿತ್ತು. ಅವರು ಅದಕ್ಕೆಂತಲೇ ಅವರ ಅವತಾರ. ಅವರ ಸಾಮಾಜಿಕ ಧಾರ್ಮಿಕ ರಾಜಕೀಯ ವಿಚಾರಗಳು ಅವರ ಕಾಲದಿಂದ ಈ ವರೆಗೆ ವ್ಯವಹಾರದಲ್ಲಿ ಬರುತ್ತಲಿವೆ; ಇನ್ನು ಮುಂದೆಯೂ ಬರಬಹುದು. ಅವುಗಳಲ್ಲಿ ಒಂದನ್ನೊಂದು ತೆಗೆದುಕೊಳ್ಳೋಣ.

ಸಮಾಜದಲ್ಲಿ ದುರ್ಜನರಿಂದ ಸರ್ವನಷ್ಟ:

'ದೂರದುರ್ಜನರ ಸಂಗ ಬೇಡಯ್ಯ. ಅವ ಹಾವಾದಡೇನು? ವಿಷ ಒಂದೆ? ಆದರೆ ಅಂತರಂಗ ಶುದ್ಧವಾದವರನ್ನು ನಂಬಬೇಕು. ಅವರು ಆವ ಜಾತಿಯವರಾದರೂ ಸರಿಯೇ.

'ಅಂತರಂಗ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯಾ, ಕೂಡಲಸಂಗಮದೇವ?'

"ಹೊಲೆಯ ಹೊಲಬಿಗನಾದೊಡೆ ಅವನ ಹೊರಿಯಲಿದ್ದುದು ಲೇಸು ಕಂಡಯ್ಯ. ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ...... ನಮ್ಮ ಕೂಡಲಸಂಗನ ಮಹಾಮನೆಯಲು ಮಾದಾರ ಚೆನ್ನಯ್ಯ ಹೊಲಬಿಗನಯ್ಯಾ"

ಇತ್ಯರ್ಥವೇನೆಂದರೆ— ಸದ್ಗುಣ ಮಂಡಿತರಾದ ಜನರಿಂದ ಅಲಂಕೃತವಾದ ಸಮಾಜದಿಂದ ಜನಾಂಗದಲ್ಲಿ ಐಕ್ಯವುಂಟಾಗಿ ಎಲ್ಲರಿಗೂ ಆನಂದ

ಸಾಮ್ರಾಜ್ಯದ ಅನುಭವವು ಉಂಟಾಗುತ್ತದೆ. ಆ ಐಕ್ಯವು ತೋರಿಕೆಗೆ ಐಕ್ಯವಲ್ಲ. ನೀರಿನಲ್ಲಿ ನೀರು ಬೆರೆತಂತೆ, ಹಾಲಿನಲ್ಲಿ ಹಾಲು ಬೆರೆತಂತೆ. ಹಾಲಿನಲ್ಲಿ ನೀರು ಬೆರೆತರೆ ಅಥವಾ ನೀರಿನಲ್ಲಿ ಹಾಲು ಬೆರೆತರೆ ರುಚಿಯು ಕೆಡುತ್ತದೆ. ಆ ಮಿಶ್ರಣವು ಅಪಾಯಕರವಾಗುತ್ತದೆ. ಆ ಮಿಶ್ರಣವು ಶುದ್ಧವಾಗಿರಬೇಕು. ಅದೇ ನಿಜವಾದ ಐಕ್ಯ.

'ಮನಕ್ಕೆ ಮನ ಒಂದಾಗಿ, ಧನಕ್ಕೆ ಧನ ಒಂದಾಗಿ, ನಚ್ಚಿನ ಮಚ್ಚು ಅಚ್ಚೊತ್ತಿದಂತಿರಬೇಕು. ಪ್ರಾಣಕ್ಕೆ ಪ್ರಾಣ ಒಂದಾಗಿ ಶುಭ ಸೂಚನೆ ಒಂದಾಗಿರದ ನಚ್ಚುಮಚ್ಚು ಸಾರವ್ಯೆದುದೇ? ಶಿರ ಹರಿದರೇನು? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತ ವಸ್ತುವೆಲ್ಲವೂ ಹೋದರೇನು? ಚಿತ್ತಮನಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮಚ್ಚುವ ನಮ್ಮ ಕೂಡಲಸಂಗಮದೇವ'

ಸಮಾಜೈಕ್ಯದ ವಿಷಯವಾಗಿ ಬಸವಣ್ಣನವರು ಹೀಗೆ ಬೋಧಿಸುವಾಗ ಅವರ ಅಂತಃಕರಣದೊಳಗಿನ ಕಳವಳ, ನಿರ್ಹೇತುಕ ಬುದ್ಧಿ, ತ್ಯಾಗ, ಸಮಾಜಪ್ರೀತಿ, ಉನ್ನತಿಯ ಬಗ್ಗೆ ಅವರ ತೀವ್ರವಾದ ಬಯಕೆ, ಮುಂತಾದ ಸದ್ಗುಣಗಳು ಒಡೆದು ಕಾಣುತ್ತವೆ. ಇಂತಹರೇ ಸಮಾಜ ಸುಧಾರಕರು. ಇಂತಹರೇ ಪರೋಪಕಾರಿಗಳು. ಇಂತಹರೇ ತತ್ವಜ್ಞಾನಿಗಳು. ಇಂತಹರೇ ಲೋಕಕಲ್ಯಾಣ ಬಯಸುವವರು.

ಹೀಗೆ ಗುರಿಯನ್ನು ಸಾಧಿಸಲು ಬರಿಯ ಸದ್ಗುಣಗಳಷ್ಟೇ ಅಲ್ಲ ಅವುಗಳ ಜೊತೆಗೆ ಆಶಾವಾದ, ಕರ್ತವ್ಯದಕ್ಷತೆ, ದೃಢಮನಸ್ಸು, ಹಿಡಿದ ಕಾರ್ಯವನ್ನು ಬಿಡುವುದಿಲ್ಲವೆಂಬ ಛಲ ಮುಂತಾದವುಗಳು ಮೇಳವಿಸಬೇಕು. ಬೇಕಾದಷ್ಟು ವಿಘ್ನಗಳು ಬರಲಿ, ಅಪಯಶಗಳು ಬರಲಿ, ಮನಸಿನ ಸ್ಥೈರ್ಯವನ್ನು ಅಲೆಯಗೊಡದೆ ಛಲದಿಂದ ಮುಂದೆ ಸಾಗಬೇಕು.

'ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು. ನಿತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ, ಕೂಡಲಸಂಗಮದೇವ'

ಅಂತಃಕಲಹ-ಮತ್ಸರ-ಸ್ವಾರ್ಥಗಳು ರಾಜ್ಯಗಳು ಹಾಳಾಗಲು ಕಾರಣವೆಂದು ಅವರು ಹೇಳುತ್ತಾರೆ. ಚಾಲುಕ್ಯ ರಾಜ್ಯವು ಹಾಳಾಗಬೇಕಾದರೆ ಒಂದು ವ್ಯಕ್ತಿಯ ಅಪಮಾನದಿಂದುಂಟಾದ ಜನರ ಮನಃಕ್ಷೋಭವೆಂದು ಅವರು ಸ್ಪಷ್ಟವಾಗಿ ಹೇಳಿದ್ದಾರೆ. ಇತಿಹಾಸ ಸಂಶೋ

ಧಕರಿಗೆ ಈ ಸಂಗತಿಯು ಈ ವರೆಗೆ ದೊರೆಯದಿದ್ದರೂ ಅವರ ಮಾತಿನ ಸತ್ಯತೆಯು ಅಬಾಧಿತವಾಗಿದೆ.

'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ, ಮಾನವಾ, ಕೆಟ್ಟಿತ್ತು. ಕಲ್ಯಾಣ ಹಾಳಾಯಿತ್ತು ನೋಡಾ! ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು. ಸಂದಿತ್ತು, ಕೂಡಲಸಂಗಮದೇವಾ, ನಿಮ್ಮ ಕವಳಿಕೆಗೆ.' ಈ ವಚನದಲ್ಲಿ ಹೇಳಿದ ದುರ್ಗುಣಗಳು ಮನೆಯೊಳಗಿನ ಬೆಂಕಿಯಂತೆ. ಅವು ಮನೆಯನ್ನು ಸುಡದೆ ಬಿಡುವದಿಲ್ಲ.

'ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು, ಕೂಡಲಸಂಗಮದೇವಾ.'

ಬಸವಣ್ಣನವರು ಮಂತ್ರಿಪದದಲ್ಲಿದ್ದಾಗ ಬಿಜ್ಜಳನ ಗುರುಗಳಾದ ನಾರಣಕ್ರಮಿತ, ಸೌರಿಭಟ್ಟ, ವಿಷ್ಣುಪೆದ್ದಿ ಮೊದಲಾದ ವೈಷ್ಣವರೆಲ್ಲರು ಬಿಜ್ಜಳನ ಹತ್ತರ ಹೋಗಿ 'ಬಸವನು ನಿನ್ನ ಭಂಡಾರವನ್ನು ಶಿವಶರಣರಿಗೆ ಅರ್ಪಿಸಿ ಬರಿದುಮಾಡಿದನೆಂದು' ಅಸೂಯೆಯಿಂದ ಚಾಡಿ ಹೇಳಿದರು (ಬ. ರಾ. ದೇ. ರಗಳೆ. ಸ್ಥಲ ಲ). ಇಂತಹ ಕಟು ಅನುಭವವನ್ನು ಬಸವಣ್ಣನವರು ತಮ್ಮ ಇಡಿಯ ಆಯುಷ್ಯದಲ್ಲಿಯೇ ಪಡೆದಿರಲಿಲ್ಲ.

ಆ ಅನುಭವದ ಮೇಲಿಂದ ಅವರು ಹೀಗೆಂದಿದ್ದಾರೆ.

'ತುಡುಗುಣಿ ನಾಯ ಪಿಡಿದು ತಂದು ಸಾಕಿದರೆ ತನ್ನೊಡೆಯಂಗೆ ಬೊಗಳುವಂತೆ ಕಾಣಾ, ಕೂಡಲಸಂಗಮದೇವಾ.'

ಹೀಗೆ ಅವರು ಹಳಿದ ದುರ್ಗುಣಗಳು ರಾಜಕೀಯ ಕ್ಷೇತ್ರದಲ್ಲಿ ಹೇಗೆ ಅಸಾಧುವೋ ಹಾಗೆ ಸಮಾಜಕ್ಕೂ ಅಸಾಧುವು. ಸಮಾಜದಲ್ಲಿ ಐಕ್ಯವು ಹೇಗೆ ಅವಶ್ಯಕವೋ ಹಾಗೆ ರಾಜಕೀಯ ಕ್ಷೇತ್ರದಲ್ಲಿಯೂ ಅವಶ್ಯಕವು.

ಸಮಾಜೈಕ್ಯವು ಜನಾಂಗದ ಐಕ್ಯಕ್ಕೆ ಕಾರಣವಾಗಿರುವಂತೆ ಧರ್ಮೈಕ್ಯವು ಸಮಾಜೈಕ್ಯಕ್ಕೆ ಕಾರಣವು. ಜನಾಂಗದಲ್ಲಿ ಒಂದೇ ಒಂದು ಧರ್ಮವಿರಬೇಕು, ಒಂದೇ ಒಂದು ಜಾತಿಯಿರಬೇಕು, ಎಂದು ಅವರು ತಮ್ಮ ಕುಶಾಗ್ರಬುದ್ಧಿಯಿಂದ ಕಂಡುಹಿಡಿದರು. ಭಿನ್ನಭಿನ್ನ ಜಾತಿಮತಗಳಿಂದ ಹೋರಾಟಗಳುಂಟಾಗಿ ಸಮಾಜದಲ್ಲಿ ಒಡಕುಗಳುಂಟಾಗುವವು. ಆದರಿಂದ ಜನಾಂಗಕ್ಕೂ ರಾಜಕೀಯ ಉನ್ನತಿಗೂ ವಿಘ್ನಗಳು ಬರು

ಸಾಮ್ರಾಜ್ಯದ ಅನುಭವವು ಉಂಟಾಗುತ್ತದೆ. ಆ ಐಕ್ಯವು ತೋರಿಕೆಗೆ ಐಕ್ಯವಲ್ಲ. ನೀರಿನಲ್ಲಿ ನೀರು ಬೆರೆತಂತೆ, ಹಾಲಿನಲ್ಲಿ ಹಾಲು ಬೆರೆತಂತೆ. ಹಾಲಿನಲ್ಲಿ ನೀರು ಬೆರೆತರೆ ಅಥವಾ ನೀರಿನಲ್ಲಿ ಹಾಲು ಬೆರೆತರೆ ರುಚಿಯು ಕೆಡುತ್ತದೆ. ಆ ಮಿಶ್ರಣವು ಅಪಾಯಕರವಾಗುತ್ತದೆ. ಆ ಮಿಶ್ರಣವು ಶುದ್ಧವಾಗಿರಬೇಕು. ಅದೇ ನಿಜವಾದ ಐಕ್ಯ.

'ಮನಕ್ಕೆ ಮನ ಒಂದಾಗಿ, ಧನಕ್ಕೆ ಧನ ಒಂದಾಗಿ, ನಚ್ಚಿನ ಮಚ್ಚು ಅಚ್ಚೊತ್ತಿದಂತಿರಬೇಕು. ಪ್ರಾಣಕ್ಕೆ ಪ್ರಾಣ ಒಂದಾಗಿ ಶುಭ ಸೂಚನೆ ಒಂದಾಗಿರದ ನಚ್ಚುಮಚ್ಚು ಪಾರವೈದುದೇ? ಶಿರ ಹರಿದರೇನು? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತ ವಸ್ತುವೆಲ್ಲವೂ ಹೋದರೇನು? ಚಿತ್ತಮನಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮೆಚ್ಚುವ ನಮ್ಮ ಕೂಡಲಸಂಗಮದೇವ'

ಸಮಾಜೈಕ್ಯದ ವಿಷಯವಾಗಿ ಬಸವಣ್ಣನವರು ಹೀಗೆ ಬೋಧಿಸುವಾಗ ಅವರ ಅಂತಃಕರಣದೊಳಗಿನ ಕಳವಳ, ನಿರ್ಹೇತುಕ ಬುದ್ಧಿ, ತ್ಯಾಗ, ಸಮಾಜಪ್ರೀತಿ, ಉನ್ನತಿಯ ಬಗ್ಗೆ ಅವರ ತೀವ್ರವಾದ ಬಯಕೆ, ಮುಂತಾದ ಸದ್ಗುಣಗಳು ಒಡೆದು ಕಾಣುತ್ತವೆ. ಇಂತಹರೇ ಸಮಾಜ ಸುಧಾರಕರು. ಇಂತಹರೇ ಪರೋಪಕಾರಿಗಳು. ಇಂತಹರೇ ತತ್ವಜ್ಞಾನಿಗಳು. ಇಂತಹರೇ ಲೋಕಕಲ್ಯಾಣ ಬಯಸುವವರು.

ಹೀಗೆ ಗುರಿಯನ್ನು ಸಾಧಿಸಲು ಬರಿಯ ಸದ್ಗುಣಗಳಷ್ಟೇ ಅಲ್ಲ ಅವುಗಳ ಜೊತೆಗೆ ಆಶಾವಾದ, ಕರ್ತವ್ಯದಕ್ಷತೆ, ದೃಢಮನಸ್ಸು, ಹಿಡಿದ ಕಾರ್ಯವನ್ನು ಬಿಡುವುದಿಲ್ಲವೆಂಬ ಛಲ ಮುಂತಾದವುಗಳು ಮೇಳವಿಸಬೇಕು. ಬೇಕಾದಷ್ಟು ವಿಘ್ನಗಳು ಬರಲಿ, ಅಪಯಶಗಳು ಬರಲಿ, ಮನಸಿನ ಸ್ಥೈರ್ಯವನ್ನು ಅಲೆಯಗೊಡದೆ ಛಲದಿಂದ ಮುಂದೆ ಸಾಗಬೇಕು.

'ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು. ನಿತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ, ಕೂಡಲಸಂಗಮದೇವ'

ಅಂತಃಕಲಹ-ಮತ್ಸರ-ಸ್ವಾರ್ಥಗಳು ರಾಜ್ಯಗಳು ಹಾಳಾಗಲು ಕಾರಣವೆಂದು ಅವರು ಹೇಳುತ್ತಾರೆ. ಚಾಲುಕ್ಯ ರಾಜ್ಯವು ಹಾಳಾಗಬೇಕಾದರೆ ಒಂದು ವ್ಯಕ್ತಿಯ ಅಪಮಾನದಿಂದುಂಟಾದ ಜನರ ಮನಃಕ್ಷೋಭವೆಂದು ಅವರು ಸ್ಪಷ್ಟವಾಗಿ ಹೇಳಿದ್ದಾರೆ. ಇತಿಹಾಸ ಸಂಶೋ

ಧಕರಿಗೆ ಈ ಸಂಗತಿಯು ಈ ವರೆಗೆ ದೊರೆಯದಿದ್ದರೂ ಅವರ ಮಾತಿನ ಸತ್ಯತೆಯು ಅಬಾಧಿತವಾಗಿದೆ.

'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ, ಮಾನವಾ, ಕೆಟ್ಟಿತ್ತು. ಕಲ್ಯಾಣ ಹಾಳಾಯಿತ್ತು ನೋಡಾ! ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು. ಸಂದಿತ್ತು, ಕೂಡಲಸಂಗಮದೇವಾ, ನಿಮ್ಮ ಕವಳಿಕೆಗೆ.' ಈ ವಚನದಲ್ಲಿ ಹೇಳಿದ ದುರ್ಗುಣಗಳು ಮನೆಯೊಳಗಿನ ಬೆಂಕಿಯಂತೆ. ಅವು ಮನೆಯನ್ನು ಸುಡದೆ ಬಿಡುವದಿಲ್ಲ.

'ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು, ಕೂಡಲಸಂಗಮದೇವಾ.'

ಬಸವಣ್ಣನವರು ಮಂತ್ರಿಪದದಲ್ಲಿದ್ದಾಗ ಬಿಜ್ಜಳನ ಗುರುಗಳಾದ ನಾರಣಕ್ರಮಿತ, ಸೌರಿಭಟ್ಟ, ವಿಷ್ಣುಪೆದ್ದಿ ಮೊದಲಾದ ವೈಷ್ಣವರೆಲ್ಲರು ಬಿಜ್ಜಳನ ಹತ್ತರ ಹೋಗಿ 'ಬಸವನು ನಿನ್ನ ಭಂಡಾರವನ್ನು ಶಿವಶರಣರಿಗೆ ಅರ್ಪಿಸಿ ಬರಿದುಮಾಡಿದನೆಂದು' ಅಸೂಯೆಯಿಂದ ಚಾಡಿ ಹೇಳಿದರು (ಬ. ರಾ. ದೇ. ರಗಳೆ. ಸ್ಥಲ ೮). ಇಂತಹ ಕಟು ಅನುಭವವನ್ನು ಬಸವಣ್ಣನವರು ತಮ್ಮ ಇಡಿಯ ಆಯುಷ್ಯದಲ್ಲಿಯೇ ಪಡೆದಿರಲಿಲ್ಲ. ಆ ಅನುಭವದ ಮೇಲಿಂದ ಅವರು ಹೀಗೆಂದಿದ್ದಾರೆ.

'ತುಡುಗುಣಿ ನಾಯ ಪಿಡಿದು ತಂದು ಸಾಕಿದರೆ ತನ್ನೊಡೆಯಂಗೆ ಬೊಗಳುವಂತೆ ಕಾಣಾ, ಕೂಡಲಸಂಗಮದೇವಾ.'

ಹೀಗೆ ಅವರು ಹಳಿದ ದುರ್ಗುಣಗಳು ರಾಜಕೀಯ ಕ್ಷೇತ್ರದಲ್ಲಿ ಹೇಗೆ ಅಸಾಧುವೋ ಹಾಗೆ ಸಮಾಜಕ್ಕೂ ಅಸಾಧುವು. ಸಮಾಜದಲ್ಲಿ ಐಕ್ಯವು ಹೇಗೆ ಅವಶ್ಯಕವೋ ಹಾಗೆ ರಾಜಕೀಯ ಕ್ಷೇತ್ರದಲ್ಲಿಯೂ ಅವಶ್ಯಕವು.

ಸಮಾಜೈಕ್ಯವು ಜನಾಂಗದ ಐಕ್ಯಕ್ಕೆ ಕಾರಣವಾಗಿರುವಂತೆ ಧರ್ಮೈಕ್ಯವು ಸಮಾಜೈಕ್ಯಕ್ಕೆ ಕಾರಣವು. ಜನಾಂಗದಲ್ಲಿ ಒಂದೇ ಒಂದು ಧರ್ಮವಿರಬೇಕು, ಒಂದೇ ಒಂದು ಜಾತಿಯಿರಬೇಕು, ಎಂದು ಅವರು ತಮ್ಮ ಕುಶಾಗ್ರಬುದ್ಧಿಯಿಂದ ಕಂಡುಹಿಡಿದರು. ಭಿನ್ನಭಿನ್ನ ಜಾತಿಮತಗಳಿಂದ ಹೋರಾಟಗಳುಂಟಾಗಿ ಸಮಾಜದಲ್ಲಿ ಒಡಕುಗಳುಂಟಾಗುವವು. ಆದರಿಂದ ಜನಾಂಗಕ್ಕೂ ರಾಜಕೀಯ ಉನ್ನತಿಗೂ ವಿಘ್ನಗಳು ಬರು

ವವು. ಧೂರ್ತರಿಗೆ ಸ್ವಾರ್ಥಸಾಧಿಸಲು ಅನುವು ದೊರೆಯುವುದು. ಇವೇ ಮುಂತಾದ ವಿಚಾರಗಳಿಂದ ವೀರಶೈವವನ್ನು ಬೋಧಿಸಿದರು. ಬಸವಣ್ಣನವರು ಗತಿಸಿದ ಸುಮಾರು ನೂರಾರು ವರುಷಗಳ ತರುವಾಯ ಇಂಗ್ಲಂಡಿನ ಎಲಿಝಬೆಥ ರಾಣಿಯು ಇಂಗ್ಲಂಡದಲ್ಲಿ ಪ್ರೊಟೆಸ್ಟಂಟ ಕ್ರೈಸ್ತಮತವೊಂದೇ ಇರಬೇಕೆಂದು ಕಟ್ಟಳೆ ಮಾಡಬೇಕಾಯಿತು. ಇದು ಬಸವಣ್ಣನವರ ವಿಚಾರವಲ್ಲವೇ?

ಧರ್ಮೈಕ್ಯವನ್ನು ಉಪದೇಶಿಸಬೇಕಾದರೆ ಬಸವಣ್ಣನವರು ಎರಡು ಮಾರ್ಗಗಳನ್ನು ಅನುಸರಿಸಿದರು. (ಅ) ತರ್ಕ, (ಬ) ಭಾವ ಭೇದನ. ಅ. ಮೊದಲನೆಯ ಮಾರ್ಗವನ್ನು ಅನುಸರಿಸುವಾಗ ಎಲ್ಲರ ಬುದ್ಧಿಗೆ ಒಪ್ಪಿತವಾಗುವಂತೆ, ಎಲ್ಲರಿಗೂ ತಿಳಿಯುವಂತೆ ತಮ್ಮ ವಿಚಾರ ಸರಣಿಯನ್ನು ಅನುಗೊಳಿಸಿಕೊಂಡರು. ಶುಷ್ಕ ವಿಚಾರಸರಣಿಗೆ ಹೃದಯಂಗಮತೆಯನ್ನು ತರಲು ಎಲ್ಲರೂ ಉಪಯೋಗಿಸುತ್ತಿರುವ ಉಪಮೆಗಳನ್ನು ಹೊಂದಿಸಿಕೊಂಡರು. ಉದಾ:—

"ಹಾಲಕಂದಲು ತುಪ್ಪದ ಮಡಿಕೆಯ ಬೋಡ ಮುಕ್ಕೆನಬೇಡ. ಹಾಲು ಸಿಹಿ, ತುಪ್ಪ ಕಮ್ಮನೆ, ಲಿಂಗಕ್ಕೆ ಬೋನ, ಕೂಡಲಸಂಗನ ಶರಣರ ಅಂಗಹೀನರೆಂದರೆ ನಾಯುಕನರಕ.'

ಪಾತ್ರೆಗಳ ಭೇದದಿಂದ ರುಚಿಯು ಭಿನ್ನವಾಗುತ್ತಿದೆಯೇ? ಆವ ಜಾತಿಯಲ್ಲಿ ಮನುಷ್ಯನು ಹುಟ್ಟಿದರೇನು? ಆವ ಸ್ಥಳದಲ್ಲಿ ಆತನ ಮನೆಯಿದ್ದರೇನು? ಸೂರ್ಯನ ಬಿಸಿಲು ಆತನ ಮನೆಯ ಮೇಲೆ ಬೀಳುವದಿಲ್ಲವೇ? ಸೂರ್ಯನು ಜಾತಿಯನ್ನರಸುತ್ತಾನೆಯೇ? ಮನುಷ್ಯನು ಆವ ಉದ್ಯೋಗವನ್ನು ಮಾಡಿದರೇನು? ಪರಮೇಶ್ವರನು ಆತನ ಜಾತಿಯನ್ನು ಅರಸುತ್ತಾನೆಯೋ? ಪರಮೇಶ್ವರನಿಗೆ ಅಲ್ಲದ ಜಾತಿಯು ನಮಗೇಕೆ? ಆತನ ಮನ್ನೋನ್ನತಿಗೆ ಆತನ ವಿಚಾರಗಳೇ ಕಾರಣ, ಎಂಬ ಭಾವನೆಯು ಬಸವಣ್ಣನವರದು. ನದಿಯ ಮೂಲ ಋಷಿಗಳ ಕುಲವನ್ನು ಎಣಿಸಬಾರದೆಂದು ಲೋಕೋಕ್ತಿ. ಯಾಕೆಂದರೆ ಋಷಿಗಳು ಹೀನ ಕುಲದಲ್ಲಿ ಹುಟ್ಟಿ ಬ್ರಹ್ಮರ್ಷಿಗಳಾದರು. ಅವರಂತೆ ಹೀನ ಕುಲದಲ್ಲಿ ಹುಟ್ಟಿದವರು ಆತ್ಮೋನ್ನತಿಯಲ್ಲಿದ್ದರೆ ಅವರನ್ನು ನಿಂದಿಸುವುದೇಕೆ?

'ಜಾತಿವಿಡಿದು ಸೂತಕವನರಸುವೆ. ಜ್ಯೋತಿವಿಡಿದು ಕತ್ತಲೆಯನರಸುವೆ. ಇದೇಕೋ ಮರುಳು ಮಾನವಾ? ಜಾತಿಯಲ್ಲಿ ಅಧಿಕನೆಂಬೆ, ವಿಪ್ರಶತಕೋಟಿಗಳಿದ್ದಲ್ಲಿ ಫಲವೇನು? ಭಕ್ತಶಿಖಾಮಣಿ ಎಂಬುದು ವಚನ.

ಭಾವವನ್ನು ಭೇದಿಸಿ ಮನಸ್ಸೋಪ್ಪುವಂತೆ ಮಾಡಿದ ವಚನಗಳವು.

'ಹೊಲೆಯೊಳಗೆ ಹುಟ್ಟಿ ಕುಲವನರಸುವೆ. ಎಲ್ಲವೂ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣ ಹೊಲೆಯು? ಹೋತು ತಂದು ನೀವು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ ವೇದವೆಂಬುದು ನಿಮಗೆ ತಿಳಿಯದು. ನಮ್ಮ ಕೂಡಲ ಸಂಗನ ಶರಣರು ಕರ್ಮವಿರಹಿತರು. ಶರಣ ಸನ್ನಿಹಿತರು. ಅನುಪಮುಚಾರಿತ್ರರು.'

'ಕೊಲ್ಲುವವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯು. ಕುಲವೇನೋ ಅವಂದಿರ ಕುಲವೇನೋ! ನಮ್ಮ ಕೂಡಲಸಂಗನ ಶರಣರೇ ಕುಲಜರು.'

'ಶಿವಭಕ್ತಿಗೂ ಬೇಟಕ್ಕೆಯೂ ಜಾತಿಸೂತಕ ಉಂಟೇ?'

'ಲಿಂಗದಲ್ಲಿ ಕಠಿಣ ಉಂಟೇ? ಜಂಗಮದಲ್ಲಿ ಕುಲ ಉಂಟೇ? ಪ್ರಸಾದದಲ್ಲಿ ಅರುಚಿಯುಂಟೇ?'

ಹೀಗೆ ಉಪದೇಶಮಾಡುವಾಗ 'ಅಚಾರ ಹೇಳುವುದು ಬದನೆಯ ಕಾಯಿ ತಿನ್ನುವುದು' ಎಂಬ ನಾಣ್ನುಡಿಯಂತೆ ಅವರ ವೃತ್ತಿಯಿರಲಿಲ್ಲ. ನುಡಿದಂತೆ ನಡೆಯುವುದು ಅವರ ವೃತ್ತಿ. ತಾವು ಅಂತ್ಯಜರಿಗಿಂತಲೂ ಕೀಳು ಎಂದು ತಮ್ಮನ್ನು ಹಳಿದುಕೊಂಡು ಆದರ್ಶವಿಭೂತಿಗಳಾಗಿರುವರು.

'ಚೆನ್ನಯ್ಯನ ಮನೆಯ ದಾಸನ ಮಗನು. ಕಕ್ಕಯ್ಯನ ಮನೆಯ ದಾಸಿಯ ಮಗಳು. ಇವರಿಬ್ಬರೂ ಹೊಲದಲ್ಲಿ ಬೆರಣೆಯನಾಯ ಹೋಗಿ ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು"

'ಅಪ್ಪನು ನಮ್ಮ ಮಾದರ ಚೆನ್ನಯ್ಯ. ಬೊಪ್ಪನು ಡೋಹರ ಕಕ್ಕಯ್ಯ. ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ. ಎನ್ನನೇತಕ್ಕೆ ಅರಿಯಿರಿ ಕೂಡಲಸಂಗಮದೇವಾ?'

ಆದುದರಿಂದ ವೀರಶೈವರಿಗೆ ದೀಕ್ಷೆಯಾಗಿರುವುದರಿಂದ ಅವರಿಗೆ ಕುಲವಿಲ್ಲ.

'ಲಿಂಗ ಮುಟ್ಟಿದವನೇ ಕೀಳುಜಾತಿ. ಕುಲವಹುದು ತಪ್ಪದು ಲಿಂಗವ ಮುಟ್ಟಿದೊಡನೆ. ಶಿವಕುಲವಹುದು ತಪ್ಪದು. ಪರುಷ ಮುಟ್ಟಿದೊಡನೆ ಹೊನ್ನವಹುದು ತಪ್ಪದು.'

'ಪಟ್ಟವ ಕಟ್ಟಿನ ಬಳಿಕ ಲಕ್ಷಣವನರಸುವರೇ? ಲಿಂಗದೇವನ ಪೂಜಿಸಿ ಕುಲವನರಸುವರೇ? ಕೂಡಲಸಂಗಮದೇವ ಭಕ್ತಕಾಯ ಮಮ ಕಾಯವೆಂಬುದಾಗಿ.'

ಹೀಗೆ ಕುಲವನ್ನೇ ಅಲ್ಲಗಳೆದ ಮೇಲೆ ಅನ್ನನೀರಿನ ವ್ಯವಹಾರಗಳಿಗೆ ಮತ್ತು ಕೊಡಕೊಳ್ಳುವ ವ್ಯವಹಾರಕ್ಕೆ ಕುಲವು ಎಲ್ಲಿಂದ ಬರಬೇಕು?

'ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಎಂತಯ್ಯ? ಅವರ ಭಕ್ತರೆಂತೆಂಬೆ? ಎಂತಯ್ಯ?

ರೂಢವಾಗಿದ್ದ ಕಟ್ಟುಗಳನ್ನು ಹೀಗೆ ಹರಿದೊಗೆದ ಮೇಲೆ ವೀರಶೈವರು ಪೂಜಿಸುವ ಲಿಂಗದ ಸ್ವರೂಪವನ್ನು ಹೇಳುತ್ತಾರೆ. ಆತನು ಅಯೋನಿಜನು. ಉಳಿದ ದೇವರು ಯೋನಿಜರು. ಇಂದ್ರನು ಅಮೃತಮತಿ ಸೋಮಶಂಭುಗಳ ಮಗನು. ಬ್ರಹ್ಮನು ಸತ್ಯಋಷಿ ಜ್ಯೇಷ್ಠಾದೇವಿಯರ ಮಗನು. ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು. ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ. ಉತ್ಪತ್ತಿ ಪ್ರಳಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ ಮಾತಾಪಿತರುಗಳಿಲ್ಲ.

ಶಿವಾಯ ವಿಷ್ಣುರೂಪಾಯ ಎಂದು ಹೇಳುತ್ತಾರೆ. ಆದರೆ ಹರಿಹರರು ಒಂದೇ ಅಲ್ಲ. "ಹರಿಹರನೊಂದೇ ಎಂದರೆ ಸುರಿಯವೇ ಬಾಯಲ್ಲಿ ಬಾಲಹುಳುಗಳು?' 'ಶಿವಮಯ-ವಿಷ್ಣುವಲ್ಲ. ವಿಷ್ಣುಮಯ ಶಿವನಲ್ಲ ನುಡಿಯದಿರಿಂಭೋ.' ಅಂದರೆ ವೀರಶೈವರು ಹೇಗೆ ಬಾಹ್ಯಾಂತರ ಶುದ್ಧರಾಗಿರಬೇಕೋ ಹಾಗೆಯೇ ಅವರ ದೇವರು ನಿತ್ಯನು, ಪರಿಶುದ್ಧನು, ಸರ್ವವ್ಯಾಪಿ, ಚಿದಾನಂದನು, ಸ್ವಯಂಭುವು.

ಹೀಗೆ ಧಾರ್ಮಿಕಭಾವನೆಯಿಂದಲೂ ಬಿಗಿಯಾದ ಕಟ್ಟನ್ನಿರಿಸಿ ನವಮತವನ್ನು ಪ್ರಚಾರಗೊಳಿಸಿದರು ಬಸವಣ್ಣನವರು.

ಸಾತ್ವಿಕ ಭಾವವನ್ನು ಮೆರೆದ ಬಸವಣ್ಣನವರು ರಾಷ್ಟ್ರಜೀವನವಾದ ವೀರವೃತ್ತಿಯನ್ನು ಮರೆಯಲಿಲ್ಲ.

'ಎಲ್ಲರೂ ವೀರರು, ಎಲ್ಲರೂ ಧೀರರು. ಎಲ್ಲರೂ ಮಹಿಮರು. ಎಲ್ಲರೂ ಪ್ರಮಥರು. ಕಾಳಗದ ಮುಖದಲ್ಲಿ ಕಾಣಬಾರದು. ಓಡುವ ಮುಖದಲ್ಲಿ ಕಾಣಬಹುದು. ನಮ್ಮ ಕೂಡಲಸಂಗನ ಶರಣರು ಧೀರರು.' ಇದಕ್ಕೆ ಮಡಿವಳ ಮಾಚಯ್ಯ ಜಗದೇವರುಗಳು ಉದಾಹರಣೆ.

ಸಮಾಜದ ಇತಿಹಾಸದಲ್ಲಿ ಉದ್ಯೋಗಕ್ಕೆ ಒಂದು ಮುಖ್ಯಸ್ಥಾನವಿದೆ. ಬಸವಣ್ಣನವರು ಅದನ್ನೂ ಮರೆತಿಲ್ಲ. ಪ್ರತಿಯೊಬ್ಬನು ತನ್ನ ಉದ್ಯೋಗದಲ್ಲಿರಬೇಕು. ಆ ಉದ್ಯೋಗದ ಬಗ್ಗೆ ಆದರವಿರಬೇಕು. ಅದು ಹೀನವಿರಲಿ, ಉಚ್ಚವಿರಲಿ. ಅದು ರಾಷ್ಟ್ರಕ್ಕೆ ಜನಾಂಗಕ್ಕೆ ಬೇಕಾಗಿರುವುದರಿಂದ ಅದರ ಬೆಲೆಯು ಕಡಿಮೆಯಲ್ಲ. ಅಧಿಕವೆಂದೇ ಬಗೆಯಬೇಕು.

'ಕಾಯಕವೇ ಕೈಲಾಸ.'

ಬಸವಣ್ಣನವರು ಬಯಸಿದಂತೆ ಅವರ ಕಾಲದಲ್ಲಿ ಅವರಿಗೆ ಯಶ ದೊರೆಯಲಿಲ್ಲ. ಬಹುಮಟ್ಟಿಗೆ ಅವರ ನಿರಾಶೆಯೇ ಆಯಿತು. ಸಮಾಜದಲ್ಲಿ ಐಕ್ಯವುಂಟಾಗಬೇಕು, ಒಂದು ಜಾತಿಯಾಗಬೇಕು, ಅದರಿಂದ ಕನ್ನಡಿಗರ ರಾಜ್ಯವು ಆಚಂದ್ರಾರ್ಕವಾಗಿ ಸ್ಥಿರವಾಗಿ ಉಳಿಯಬೇಕೆಂಬ ಅವರ ಉದ್ದೇಶವು ಸಫಲವಾಗಲಿಲ್ಲ.

'ಕೋಣನ ಹೇರಿಂಗೆ ಬಸುಗುತ್ತ ಬಿಡುವಂತೆ ತಾವು ನಂಬರು ನಂಬುವವರನು ನಂಬಲೀಸರು. ತಾವು ಮಾಡುವವರನು ಮಾಡಲೀಯರು. ಮಾಡುವ ಭಕ್ತರ ಕಂಡು ಸೈರಿಸಲಾರದವರ ಕೂಗಿಡೆ ಕೂಗಿಡೆ ನರಕದಲಿಕ್ಕುವ ಕೂಡಲಸಂಗಮದೇವ.

ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸದಲ್ಲಿ ಇಂತಹ ನಿರಾಶೆಯು ಹೊಸದಲ್ಲ. ಇತಿಹಾಸವು ಪುನರಾವರ್ತನೆಗೊಳ್ಳುತ್ತಿದೆಯೆಂದು ಹೇಳುತ್ತಾರೆ. ಅದರಂತಾಗಿದೆ ಬಸವಣ್ಣನವರ ಸಂಗತಿ. ಯೇಸು ಕ್ರಿಸ್ತನು ನಿರಾಶೆಗೊಂಡ, ಮಹಮ್ಮದ ಪೈಗಂಬರನು ನಿರಾಶೆಯಿಂದ ಕಾಡು ಪಾಲಾಗಬೇಕಾಯಿತು. ಆ ಆ ಧರ್ಮಗಳು ಆ ಆ ಮಹಾತ್ಮರುಗಳ ತರುವಾಯ ಹಬ್ಬಿದವು. ಅಂತೆಯೇ ಬಸವಣ್ಣನವರ ತರುವಾಯ ಅವರ ತತ್ವಗಳು ಒಪ್ಪಿತವಾಗಿ ೧೬ ನೆಯ ಶತಮಾನದಲ್ಲಿ ಕರ್ನಾಟಕದ ಬಹು ದೊಡ್ಡ ಭಾಗವನ್ನು ವ್ಯಾಪಿಸಿದುವು. ಅವರ ಹರಿಜನ ತತ್ವಗಳನ್ನು ಮಹರ್ಷಿಗಳಾದ ವಿಠ್ಠಲ ರಾಮಜಿ ಸಿಂಧೆಯವರೂ ಮಹಾತ್ಮರೂ ಎತ್ತಿ ಹಿಡಿದಿದ್ದಾರೆ

ಬಾಹ್ಯಾಂತರ ಶುದ್ಧಿ, ಸತ್ಯ, ಪ್ರಾಮಾಣಿಕತನ, ಸಹಕಾರ, ತ್ಯಾಗ, ಮುಂತಾದ ಸದ್ಗುಣಗಳು ಅಡಿಗಲ್ಲಾಗಿ ಉಳ್ಳ ಒಂದೇ ಒಂದ ಜಾತಿಯನ್ನು ಇಟ್ಟುಕೊಂಡು ಅದರಿಂದ ಸಮಾಜೈಕ್ಯವನ್ನೂ, ಜನಾಂಗದ ಸುಖವನ್ನೂ, ಹಿತವನ್ನೂ ಬಯಸಿದ ಮಹಾನುಭಾವರೂ, ಭಕ್ತಭಂಡಾರಿಗಳೂ ಆದ ಬಸವಣ್ಣನವರಿಗೆ ನನ್ನ ಅನೇಕ ವಂದನೆಗಳು.

---

# ಕೆಳದಿ ರಾಮೇಶ್ವರ ದೇವಾಲಯ.

(ರಾ|| ಸಾ|| ಪಿ ಜಿ. ಹಳಕಟ್ಟಿ. ಬಿ. ಏ. ಎಲ್. ಎಲ್. ಬಿ)

ಕರ್ನಾಟಕದ ರಾಜರು ಧಾರ್ಮಿಕ ಸಂಸ್ಕೃತಿಯ ಪೋಷಕರು. ಅವರು ತಮ್ಮ ಬಿರುದಾವಳಿಗಳಲ್ಲಿ ಧರ್ಮಪ್ರತಿಪಾಲನ ದ್ಯೋತಕವಾದ ಶಬ್ದಗಳನ್ನು ಯಾವಾಗಲೂ ಕಾಣಬಹುದು. ಧರ್ಮ ಜಾಗ್ರತಿ, ಧರ್ಮ ಪೋಷಣೆ ಇವುಗಳು ತಾವು ಅವಶ್ಯಕವಾಗಿ ಮಾಡತಕ್ಕ ಕರ್ತವ್ಯಗಳೆಂದು ಅವರು ಭಾವಿಸಿದ್ದರು. ಈಗಿನ ರಾಜರುಗಳಂತೆ ಅವರು ಬರೀ ಸೀಮೆ ಗಳನ್ನು ಗೆದ್ದುಕೊಂಡು ಅವುಗಳ ಉಪಯೋಗವನ್ನು ತಮ್ಮ ವಿಲಾಸ ಭೋಗಗಳ ಸಲುವಾಗಿ ಮಾಡಿಕೊಳ್ಳಬೇಕೆಂದು ಅವರ ಅಭಿಪ್ರಾಯ ತಾಳಲಿಲ್ಲ. ಆದ್ದರಿಂದ ಎಷ್ಟೋ ಜನರು ತಮ್ಮ ವಾರ್ಧಿಕ್ಯಕಾಲದಲ್ಲಿ ತಮ್ಮ ರಾಜ್ಯಭಾರಕ್ಕೆ ಶರಣು ಹೊಡೆದು ಸನ್ಯಾಸ ದೀಕ್ಷೆಯನ್ನು ತಳೆದು ಕಾಲ ಕಳೆದದ್ದರ ಉದಾಹರಣೆಗಳು ಕರ್ನಾಟಕ ಇತಿಹಾಸದಲ್ಲಿ ಅನೇಕ ವಾಗಿ ಕಾಣಬಹುದು.

ಕರ್ನಾಟಕವಲ್ಲಿ ಹೋದ ಎರಡು ಸಾವಿರ ವರುಷಗಳಲ್ಲಿ ಅನೇಕ ರಾಜಮನೆತನಗಳು ಆಗಿಹೋಗಿವೆ. ಆ ಮನೆತನಗಳ ಮೂಲಪುರುಷರ ಚರಿತ್ರೆಗಳನ್ನು ನಾವು ಪರೀಕ್ಷಿಸಿದಲ್ಲಿ ಅವರು ಮೊದಲು ಸಾಧಾರಣ ಸ್ಥಿತಿ ಯಲ್ಲಿದ್ದು ಮುಂದೆ ಅವರು ಒಬ್ಬಾನೊಬ್ಬ ಧಾರ್ಮಿಕ ಮಹಾಪುರುಷನ ಆಶೀರ್ವಾದ ಬಲದಿಂದ ತಮ್ಮ ರಾಜ್ಯ ಸಂಪಾದನೆ ಮಾಡಿದ ಹಾಗೆ ತಿಳಿದು ಬರುತ್ತದೆ. ಈ ಸಂಗತಿಯು ಕದಂಬರು, ಹೊಯಿಸಳರು, ವಿಜಯ ನಗರದ ರಾಜರು ಮೊದಲಾದ ಅರಸರ ಉಗಮಗಳಲ್ಲಿ ಕಾಣಬರುತ್ತದೆ. ಧರ್ಮ ಪ್ರತಿಷ್ಠಾಪನೆಗಾಗಿಯೇ ರಾಜ್ಯಭಾರ ಮಾಡಬೇಕೆಂಬ ವಿಚಾರವು ಕರ್ನಾಟಕ ಎಲ್ಲ ರಾಜಮನೆತನಗಳಲ್ಲಿ ಬಲವಾಗಿ ರೂಢವಾಗಿರುತ್ತದೆ. ಇದರ ಗುರುತಿಗಾಗಿ ಅವರು ಒಂದು ಇಷ್ಟದೇವತೆಯನ್ನು ಕಲ್ಪಿಸಿ, ಅದನ್ನು ತಮ್ಮ ಕುಲದೇವತೆ ಎಂದು ಭಾವಿಸಿ ಅದಕ್ಕೋಸ್ಕರ ಭಕ್ತಿ ಭಾವದಿಂದ ನಡೆ ಯುತ್ತಿದ್ದರು. ಅರಸರು ಅದರ ಪೂಜಾ ಮೊದಲಾದ ಕಾರ್ಯಗಳ ಸಲು ವಾಗಿ ಮತ್ತು ಕಟ್ಟಡದ ಸೌಂದರ್ಯದ ಸಲುವಾಗಿ ಬಹಳ ಹಣ ವೆಚ್ಚ ಮಾಡುವರು. ಅದಕ್ಕೋಸ್ಕರ ಅವರು ಸುಂದರ ದೇವಾಲಯಗಳನ್ನು ರಚಿಸು ವರು. ಹೀಗೆ ಕರ್ನಾಟಕ ರಾಜಧಾನೀ ಪಟ್ಟಣಗಳು ಆಶ್ಚರ್ಯಕರವಾದ

ಕಲಾಕೌಶಲ್ಯಗಳಿಂದ ಮೆರೆಯುವ ಅನೇಕ ದೇವಾಲಯಗಳಿಂದ ಶೋಭಿತವಾಗಿರುತ್ತವೆ.

ಕೆಳದಿಯ ರಾಜರಾದರೂ ಇದಕ್ಕೆ ಅಪವಾದವಾಗಿರಲಿಲ್ಲ. ಅವರು ವೀರಶೈವ ಧರ್ಮ ಪ್ರತಿಪಾಲನೆ ಮಾಡುವವರಾಗಿದ್ದು ವೀರಶೈವ ವಾಙ್ಮಯ, ವೀರಶೈವ ಸಂಸ್ಕೃತಿ, ಇವುಗಳಿಗೋಸ್ಕರ ಬಹಳ ಹಣ ವೆಚ್ಚ ಮಾಡಿದ್ದಾರೆ. ಅವರಲ್ಲಿ ಅನೇಕರು ಸ್ವಂತಃ ಗ್ರಂಥಕಾರರೂ ಆಗಿರುವರು. ಅವರ ಇಷ್ಟದೇವತೆಯು ಕೆಳದಿಯ ರಾಮೇಶ್ವರನು. ಈ ದೇವಾಲಯಕ್ಕೋಸ್ಕರ ಅವರು ಕಾಲಕಾಲಕ್ಕೆ ಬೆಲೆಯುಳ್ಳ ಉಂಬಳಿಗಳನ್ನು ಹಾಕಿಕೊಟ್ಟು ಅದನ್ನು ವೈಭವ ಸ್ಥಿತಿಯಲ್ಲಿ ಇಟ್ಟಿದ್ದರು.

ಈ ದೇವಾಲಯದ ಮೂಲ ಲಿಂಗಮೂರ್ತಿಯು ಬಹು ಪುರಾತನ ಕಾಲದ್ದಂತೆ. ಇದು ಮೊದಲು ಭೂಮಿಯಲ್ಲಿ ಹೂಳಿ ಹೋಗಿತ್ತು. ಅದರ ಸಮೀಪದಲ್ಲಿ ಪಳ್ಳಿಯ ಬಯಲು ಎಂಬ ಚಿಕ್ಕಗ್ರಾಮವಿದ್ದು ಅಲ್ಲಿ ಬಸಪ್ಪನೆಂಬ ಕೃಷಿಕನು ವಾಸವಾಗಿದ್ದನು. ಅವನಿಗೆ ಚೌಡಪ್ಪ ಮತ್ತು ಭದ್ರಪ್ಪ ಎಂಬ ಇಬ್ಬರು ಮಕ್ಕಳಿದ್ದರು. ಇದರಲ್ಲಿ ಚೌಡಪ್ಪನೆಂಬವನು ಬಹು ಪರಾಕ್ರಮಿಶಾಲಿಯಾಗಿ ರಾಮೇಶ್ವರ ದೇವರ ಕೃಪೆಯಿಂದ ಕೆಳದಿಯ ರಾಜ್ಯ ಸ್ಥಾಪಕನಾದನು. ಅವನು ತನ್ನ ಗ್ರಾಮದಲ್ಲಿರುತ್ತಿರಲು ರಾಮೇಶ್ವರಸಿದ್ಧ ಸ್ಥಳದಲ್ಲಿ ಒಂದು ಗೋವು ದಿನಾಲು ಹಾಲನ್ನು ಕರೆದು ಹೋಗುತ್ತಿರುವದನ್ನು ತಿಳಿದು ಅದನ್ನು ಅಗಿಸಲಾಗಿ ಅಲ್ಲಿ ಒಂದು ಲಿಂಗವು ಗೋಚರವಾಯಿತು. ಅದರ ಮೇಲೆ ಚೌಡಪ್ಪನು ಒಂದು ತೃಣ ಕುಟಿಯನ್ನು ಕಟ್ಟಿಸಿದನು. ಕೆಲ ದಿನಗಳ ತರುವಾಯ, ಅದರ ಸನಿಹದಲ್ಲಿಯೇ ಒಂದು ಮಹತ್ತರವಾದ ಧನನಿಧಿಯೂ ಅವನಿಗೆ ದೊರಕಿತು. ಅದರ ಸಹಾಯದಿಂದ ಚೌಡಪ್ಪನು ಬಲಿಷ್ಠನಾಗಿ ತನ್ನ ಅಧಿಕಾರವನ್ನು ಸುತ್ತಲೂ ಬೆಳೆಯಿಸಿದನು. ಆಗ ವಿಜಯನಗರದಲ್ಲಿ ಕೃಷ್ಣರಾಜನು ರಾಜ್ಯವಾಳುತ್ತಿದ್ದನು. ಮುಂದೆ ಈ ಮಹಾರಾಜನು ತುರುಷ್ಕರ ಮತ್ತು ಇನ್ನಿತರ ಪಾಳೆಯಗಾರರೊಡನೆ ಮಾಡಿದ ಯುದ್ಧಗಳಲ್ಲಿ ಚೌಡಪ್ಪನು ವಿಶೇಷ ಸಹಾಯವಾದ್ದರಿಂದ ಕೃಷ್ಣರಾಜನು ಅವನಿಗೆ ಕೆಲವು ಸೀಮೆಯನ್ನು ಉಂಬಳಿಯಾಗಿ ಹಾಕಿಕೊಟ್ಟನು. ಮುಂದೆ ಚೌಡಪ್ಪನು ಕ್ರಿ. ಶ. ೧೫೦೦ ಮಾಘ ಶು॥ ೩ ನೇ ದಿವಸ ಸಿಂಹಾಸನಾರೋಹಣ ಮಾಡಿದನು. ಮತ್ತು ಕೆಳದಿಯಲ್ಲಿ ಒಂದು ಅರಮನೆಯನ್ನೂ ಕಟ್ಟಿಸಿದನು. ಈ ಎಲ್ಲ ಮಹತ್ವದ ಕಾರ್ಯ

ಗಳು ರಾಮೇಶ್ವರ ದೇವರ ಕೃಪೆಯಿಂದಲೇ ಎಂದು ಭಾವಿಸಿ ಚೌಡಪ್ಪನು ದೇವಾಲಯದ ಗರ್ಭ ಗೃಹವನ್ನು ಮೊದಲು ಕಟ್ಟಿಸಿದನು.

ಚೌಡಪ್ಪನ ತರುವಾಯ ಸದಾಶಿವರಾಯನು ಪಟ್ಟವೇರಿದನು. ಇವನಾದರೂ ಕೆಳದಿಯ ರಾಜರಲ್ಲಿ ಬಹು ಪರಾಕ್ರಮಶಾಲಿಯಾಗಿ ಅನೇಕ ಯುದ್ಧಗಳಲ್ಲಿ ವಿಜಯನಗರದ ಅರಸರುಗಳಿಗೆ ಸಹಾಯವಾದನು. ಅವನು ತನ್ನ ರಾಜ್ಯವನ್ನು ಸುತ್ತಲೂ ಬಹಳ ವಿಸ್ತರಿಸಿದನು. ಇವನು ರಾಮೇಶ್ವರ ದೇವಾಲಯದ ನಂದೀಮಂಟಪವನ್ನು ಬಹು ಮನೋಹರವಾಗಿ ಕಟ್ಟಿಸಿದನು. ಅದು ಬಹು ಸುಂದರವಾಗಿರುತ್ತದೆ. ಅಲ್ಲದೆ ರಾಮೇಶ್ವರ ಲಿಂಗದ ವಾಮ ಭಾಗದಲ್ಲಿ ಒಂದು ಪಾರ್ವತಿಯ ವಿಗ್ರಹವನ್ನೂ ಸ್ಥಾಪಿಸಿದನು.

ಮುಂದೆ ಕೆಲವು ರಾಜರಾದ ಮೇಲೆ ವೇಂಕಟಪ್ಪ ನಾಯಕನು ಪಟ್ಟವೇರಿದನು. ಅವನು ಅತ್ಯಂತ ಪ್ರತಾಪಶಾಲಿಯಾದ ಅರಸನಾಗಿದ್ದನು. ಅವನು ಪೋರ್ತುಗೀಜರನ್ನೂ ಇಂಗ್ಲೀಷರನ್ನೂ ಹಣ್ಣಿಗೆ ತಂದನು. ಅವನು ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ದೊಡ್ಡ ದಂಡಿನೊಡನೆ ಸಾಗಿ ಹೋಗಿ ಅಲ್ಲಿಯ ಪಾಳೆಗಾರರನ್ನೆಲ್ಲ ಸೋಲಿಸಿ ಇಡೀ ಪ್ರಾಂತವನ್ನು ತನ್ನ ಕೈವಶ ಮಾಡಿಕೊಂಡನು. ಈ ವಿಜಯವನ್ನು ಸಂಪಾದಿಸಿ ರಾಜಧಾನಿಗೆ ತಿರುಗಿ ಬಂದ ಬಳಿಕ ರಾಮೇಶ್ವರ ದೇವಾಲಯದ ರಂಗಮಂಟಪವನ್ನು ಮಾಡಿ ಈ ಕಟ್ಟಡವನ್ನು ಪೂರ್ಣಗೊಳಿಸಿದನು. ಹೀಗೆ ಈ ದೇವಾಲಯವು ಬಹು ಮಹತ್ವದ್ದಿದ್ದು ಇದು ಕೆಳದಿಯಲ್ಲಿ ನೋಡತಕ್ಕಂಥಾದ್ದಿರುತ್ತದೆ.

---

## ಇಕ್ಕೇರಿಯ ಅಘೋರೇಶ್ವರ ದೇವಾಲಯ.



ಈ ದೇವಾಲಯವಾದರೂ ಕೆಳದಿಯ ರಾಜರಿಂದ ಬಹು ಮನ್ನಣೆ ಹೊಂದಿತ್ತು. ಇದರ ಸ್ಥಾಪಕನು ದೊಡ್ಡ ಸಂಕಣ್ಣನಾಯಕನು. ಈ ರಾಜನು ಕೆಳದಿಯ ರಾಜರಲ್ಲಿ ಒಬ್ಬ ರಾಜ ಋಷಿ ಎಂದು ಹೇಳಬಹುದು. ಅವನು ಪಟ್ಟವೇರಿದ ಬಳಿಕ ಜಂಗಮವೇಷಧಾರಿಯಾಗಿ ಹಿಂದುಸ್ಥಾನವನ್ನೆಲ್ಲ ಸಂಚರಿಸಿದನು ಮತ್ತು ಅನೇಕ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿದನು



ಇಕ್ಕೇರಿಯ ಅಘೋರೇಶ್ವರ ದೇವಾಲಯ.

( ಪುಟ ೫೬೦ ನೋಡಿ. )

ಅವನು ಮೊದಲು ದಕ್ಷಿಣಕ್ಕೆ ತೆರಳಿ ಶಿವಗಂಗೆ, ಕಂಚಿ, ಚಿದಂಬರ, ಕುಂಭಕೋಣ ಮುಂತಾದ ಪಟ್ಟಣಗಳನ್ನು ನೋಡಿ ರಾಮೇಶ್ವರಕ್ಕೆ ಹೋದನು. ಆಮೇಲೆ ಉತ್ತರದೇಶಕ್ಕೆ ಹೊರಟು, ಪೂರ್ವದಲ್ಲಿ ಪ್ರಸಿದ್ಧ ರಾಜಧಾನೀ ಪಟ್ಟಣಗಳಾದ ವಿಜಾಪುರ ಮತ್ತು ಭಾಗಾನಗರಗಳನ್ನು ನೋಡಿ ದಿಲ್ಲಿಗೆ ಹೋದನು. ಅಲ್ಲಿ ಅಂಕುಶಖಾನನೆಂಬ ಒಬ್ಬ ಮಲ್ಲನನ್ನು ಸೋಲಿಸಿ ಮುಂದೆ ಅವನು ಬನಾರಸ ಪ್ರಯಾಗ, ಆಗ್ರಾ, ಪಟ್ಟಣಗಳನ್ನು ನೋಡಿ ಕಾಶ್ಮೀರದೇಶವನ್ನು ಸೇರಿದನು. ಮುಂದೆ ಹಿಮಾಚಲದೊಳಗಿಂದ ಹಾಯ್ದು ನೇಪಾಳಕ್ಕೂ ಹೋದಂತೆ ತಿಳಿಯುತ್ತದೆ. ಅವನು ಕೇದಾರವನ್ನು ಸಂದರ್ಶಿಸಿದನು. ಅಲ್ಲಿಂದ ಅವನು ಹರದ್ವಾರ, ಗಯಾ, ಕುರುಕ್ಷೇತ್ರಗಳನ್ನು ಕಂಡನು. ಅವನು ಸುತ್ತಿದ ನಾಡುಗಳಲ್ಲಿ ಬಹು ಕಡೆಗೆ ಮಠಗಳನ್ನು ಸ್ಥಾಪಿಸಿ, ಅಲ್ಲಿ ಜಂಗಮರನ್ನು ಅಧಿಕಾರಿಗಳಾಗಿ ನಿಯಮಿಸಿದನು. ಹೀಗೆ ಅವನು ಆಗ್ರಾ, ಪ್ರಯಾಗ, ಬನಾರಸ ಗಯಾ ಮತ್ತು ಕೇದಾರ ಈ ಸ್ಥಳಗಳಲ್ಲಿ ವೀರಶೈವ ಮಠಗಳನ್ನು ಸ್ಥಾಪಿಸಿದ್ದಾನೆ. ಅವುಗಳಲ್ಲಿ ಕೆಲವು ಈಗಲೂ ಅಸ್ತಿತ್ವದಲ್ಲಿ ಇವೆ. ಹೀಗೆ ಉತ್ತರ ಹಿಂದುಸ್ಥಾನದಲ್ಲಿ ಸಂಚರಿಸಿ ಪೈಠಣಗ್ರಾಮಕ್ಕೆ ಬಂದನು. ಅಲ್ಲಿರುವ ಅಘೋರೇಶ್ವರ ದೇವಾಲಯುವನ್ನು ಸಂದರ್ಶಿಸಲು ಅಲ್ಲಿರುವ ಮೂರ್ತಿಯ ಮೇಲೆ ಅವನಲ್ಲಿ ಅತ್ಯಂತ ಭಕ್ತಿ ಭಾವವು ತುಂಬಿ ಬರಲು ತನ್ನ ರಾಜ್ಯದಲ್ಲಿಯೂ ಅಘೋರೇಶ್ವರ ದೇವಾಲಯುವನ್ನು ಸ್ಥಾಪಿಸಬೇಕೆಂದು ಬಗೆದು ಆ ವಿಗ್ರಹದ ಚಿತ್ರವನ್ನು ಬರೆದುಕೊಂಡನು. ಆ ಮೇಲೆ ಕೆಳದಿಗೆ ಬಂದ ಬಳಿಕ ಆ ಚಿತ್ರದಂತೆಯೇ ಅಘೋರೇಶ್ವರ ಮೂರ್ತಿಯನ್ನು ಇಕ್ಕೇರಿಯಲ್ಲಿ ಸ್ಥಾಪಿಸಿ ಅದಕ್ಕೆ ಒಂದುಉತ್ತಮ ದೇವಸ್ಥಾನವನ್ನು ಕಟ್ಟಿಸಿದನು. ಈ ದೇವಸ್ಥಾನವನ್ನು ಮುಂದಿನರಾಜರೆಲ್ಲರೂ ಬಹಳವಾಗಿ ಮನ್ನಿಸಿ ಅದಕ್ಕೆ ವಿಶೇಶವಾಗಿ ಉಂಬಳಿಗಳನ್ನು ಹಾಕಿಕೊಡುತ್ತಾ ಬಂದರು. ವೆಂಕಟಪ್ಪ ನಾಯಕನು ತನ್ನ ವಿಜಯಯಾತ್ರೆಯಿಂದ ತಿರುಗಿ ಬಂದ ಬಳಿಕ ಅಘೋರೇಶ್ವರ ದೇವಾಲಕ್ಕೆ ಅನೇಕದಾನಗಳನ್ನು ಕೊಟ್ಟಿದ್ದು ತಿಳಿದುಬರುತ್ತದೆ.

ಕೆಳದಿಯ ರಾಜರು ಸಂಪೂರ್ಣ ವೀರಶೈವರಾಗಿದ್ದು ಧರ್ಮಕಾರ್ಯಗಳು ತಮ್ಮ ರಾಜ್ಯದಲ್ಲಿ ಸದಾ ನಡೆಯಬೇಕೆಂದು ದೊಡ್ಡ ಸಂಕಲ್ಪನಂತೆಯೇ ಬಹು ಕಡೆಗೆ ಮಠಗಳನ್ನು ಸ್ಥಾಪಿಸಿದರು. ಆಗ ಕೆಳದಿಯ

ರಾಜ್ಯದಲ್ಲಿ ಬಂದರಗಳೂ ದೊಡ್ಡ ದೊಡ್ಡ ವ್ಯಾಪಾರೀ ಪಟ್ಟಣಗಳೂ ಇದ್ದವು. ಮತ್ತು ಕರ್ನಾಟಕದ ವ್ಯಾಪಾರವೆಲ್ಲ ಕೆಳದಿಯ ರಾಜ್ಯದೊಳಗಿನ ಈ ಬಂದರಗಳೊಳಗಿಂದ ಹಾಯ್ದು ಯುರೋಪಖಂಡಕ್ಕೆ ಹೋಗುತ್ತಿತ್ತು. ಆದ್ದರಿಂದ ಅವರು ಪ್ರವಾಸಿಗರ ಸೌಕರ್ಯಕ್ಕಾಗಿ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಬಹು ಕಡೆಗೆ ಮಠಗಳನ್ನು ಸ್ಥಾಪಿಸಿದರು. ವೆಂಕಟಪ್ಪ ನಾಯಕನು ಮಂಗಳೂರ ಜಿಲ್ಲೆಯಲ್ಲಿ ಬಾರಕೂರ, ಬೆಣ್ಣೆವಳ್ಳಿ ಆರಗ, ಶಂಕರನಾರಾಯಣ, ಬೋಳೂರು, ಕೊಡೆಯಾಲ ಈ ಪಟ್ಟಣಗಳಲ್ಲಿ ಮಠಗಳನ್ನು ಸ್ಥಾಪಿಸಿದನು.

ಮೇಲ್ಕಂಡ ಸಂಗತಿಗಳ ಮೇಲಿಂದ ಕೆಳದಿಯ ರಾಜರು ವೀರಶೈವ ಸಂಸ್ಕೃತಿಯನ್ನು ಸಂರಕ್ಷಿಸಲು ಹ್ಯಾಗೆ ಪ್ರಯತ್ನಿಸುತ್ತಿದ್ದರೆಂಬುದು ಸ್ಪಷ್ಟವಾಗಿ ತಿಳಿಯಬಹುದು. ನಾಡಿನ ಯೋಗ್ಯತೆಯು ಅದರ ಸಂಸ್ಕೃತಿಯನ್ನು ರಕ್ಷಿಸುವದರ ಮೇಲೆ ಅವಲಂಬಿಸಿರುತ್ತದೆ. ಈ ಕಾರ್ಯದಲ್ಲಿ ಕರ್ನಾಟಕ ರಾಜರು ಯಾವಾಗಲೂ ತತ್ಪರರಾಗಿದ್ದದ್ದು ಕಂಡು ಬರುತ್ತದೆ.

---

# ಶಿವಾನುಭವ ಪತ್ರಿಕೆಯ ಪುನರ್ಘಟನೆ.

(ಸಂಪಾದಕರು)

ಇದು ಶಿವಾನುಭವ ಪತ್ರಿಕೆಯ ೧೦ ನೇ ವರ್ಷದ ಕಡೆಯ ಸಂಚಿಕೆ [illegible]ುತ್ತದೆ. ಮುಂದಿನ ಸಂಚಿಕೆಯಿಂದ ಇದರ ೧೧ ನೇ ವರ್ಷವು [illegible]ಭವಾಗುತ್ತದೆ. ಈ ದೀರ್ಘಕಾಲದಲ್ಲಿ ಈ ಪತ್ರಿಕೆಯು ತನ್ನ [illegible]ಯಿಂದ ಚ್ಯುತವಾಗದೆ ಸಕಾಲದಲ್ಲಿ ಸಂಚಿಕೆಗಳನ್ನು ಹೊರಡಿಸುತ್ತ ಸಮಾಜ ಸೇವೆ ಮಾಡಿದ್ದು ಎಲ್ಲ ವೀರಶೈವರಿಗೂ ತಿಳಿದದ್ದಾಗಿದೆ. ಇದರ ಮೂಲಕ [illegible] ಮಹತ್ವದ ಗ್ರಂಥಗಳು ಪ್ರಕಟವಾದವು. ಇವುಗಳು ಸಮಾಜದಲ್ಲಿ ಬಹ[illegible] ಮಹತ್ವದ ಪರಿಣಾಮಗಳನ್ನು ಮಾಡಿರುತ್ತವೆ. ಅಲ್ಲದೆ ಅನೇಕ ಸಂಶೋಧನಾತ್ಮಕ ಲೇಖಗಳೂ ಬಂದಿವೆ. ಅವು ವೀರಶೈವ ಸಂಸ್ಕೃತಿ ಮತ್ತು ಅದರ ಇತಿಹಾಸ ಈ ವಿಷಯಗಳನ್ನೇ ಮುಖ್ಯವಾಗಿ ಪ್ರಕಟಪಡಿಸುತ್ತ ಬಂದಿವೆ. ಈ ಎಲ್ಲ ಕಾರ್ಯಗಳನ್ನು ಕುರಿತು ನಾವು ಹೆಚ್ಚಾಗಿ ಇಲ್ಲಿ ವಿವರಿಸುವ ಅವಶ್ಯವಿಲ್ಲ.

ಈ ಸಂಚಿಕೆಯು ೧೦ ನೇ ವರ್ಷದ ಕಡೆಯದಾಗಿದ್ದು ಪತ್ರಿಕೆಯಲ್ಲಿ ಪುನರ್ಘಟನೆ ಮಾಡಬೇಕೆಂದೆಣಿಸಿ ನಾವು ಈ ಪ್ರಯತ್ನದಲ್ಲಿ ತೊಡಗಿದ್ದುದರಿಂದ ಈ ಸಂಚಿಕೆಯು ಹೊರಡಲು ತಡವಾಯಿತು. ಇದಕ್ಕೋಸ್ಕರ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ಈ ವರೆಗೆ ನಾವೊಬ್ಬರೇ ಈ ಕಾರ್ಯದ ಭಾರವನ್ನು ಹೊತ್ತು ಯಥಾಶಕ್ತಿ ಅದನ್ನು ನಿರ್ವಹಿಸುತ್ತ ಬಂದೆವು. ಆದರೆ ಈಚೆಗೆ ಉಂಟಾಗಿರುವ ವಿಶೇಷ ಚಳವಳಿಯ ಮೂಲಕ ಅನೇಕ ಮಹನೀಯರು ಈ ಕಾರ್ಯದಲ್ಲಿ ವಿಶೇಷ ಪ್ರಯತ್ನಿಸಲು ಮುಂದಾದ್ದರಿಂದ ಅವರನ್ನು ಶಿವಾನುಭವ ಸಹಾಯಕ ಸಂಪಾದಕ ಮಂಡಳಿಯಲ್ಲಿ ಸೇರಿಸಿಕೊಂಡು ಕಾರ್ಯ ಮಾಡಲು ನಾವು ಅತ್ಯಾನಂದಪಡುತ್ತೇವೆ. ಇದರಿಂದ ಸಂಶೋಧನೆಯ ಕಾರ್ಯಗಳು ಹೆಚ್ಚು ವ್ಯವಸ್ಥಿತವಾಗಿ ನಡೆಯಲು ಅನುಕೂಲವಾಗುವದಲ್ಲದೆ ಪತ್ರಿಕೆಗೆ ಒಂದು ವ್ಯಾಪಕ ಸ್ವರೂಪವೂ ಬರುವದು. ಮತ್ತು ಪತ್ರಿಕೆಯು ಸ್ಥಾಯಿಕವಾಗಲೂ ಶಕ್ಯವಾಗುವದು. ಈ ಉದ್ದೇಶಗಳನ್ನಿಟ್ಟುಕೊಂಡು ಈ ಸಹಾಯಕಮಂಡಲಿಯು ಏರ್ಪಡಿಸಲ್ಪಟ್ಟಿದೆ.

ಈ ಮಂಡಲಿಯಲ್ಲಿರುವ ಮಹನೀಯರ ಹೆಸರುಗಳನ್ನು ನೋಡಿದಲ್ಲಿ ಅವರೆಲ್ಲರೂ ವೀರಶೈವ ಧರ್ಮಸಂಶೋಧನ ಕಾರ್ಯದಲ್ಲಿ ಮತ್ತು ವಾಙ್ಮಯಪ್ರಚಾರ ಕಾರ್ಯದಲ್ಲಿ ವಿಶೇಷ ಪರಿಶ್ರಮ ಮಾಡಿದವರಿರುವರೆಂಬದು ವಾಚಕರಿಗೆ ಕೂಡಲೆ ಕಂಡು ಬರದೆ ಇರಲಾರದು. ಅವರ ಸಹಾಯದಿಂದ ಈ ಶಿವಾನುಭವವು ಇನ್ನೂ ಹೆಚ್ಚಿಗೆ ಘನತರಸ್ಥಿತಿಯನ್ನು ಹೊಂದಬಹುದೆಂದು ನಾವು ಆಶಿಸಿದ್ದೇವೆ.

ಮುಂದಿನ ಸಂಚಿಕೆಯು ಹೆಚ್ಚು ಅಂದವಾಗಿ ಪ್ರಕಟವಾಗುವಂತೆ ನಾವು ಪ್ರಯತ್ನಿಸುವೆವು. ಮತ್ತು ತೀವ್ರವಾಗಿಯೇ ಈ ಪತ್ರಿಕೆಯು ಒಂದು ಉಚ್ಚತರಗತಿಯ ಉಪಯುಕ್ತ ಪತ್ರಿಕೆಯಾಗುವದೆಂಬ ಭರವಸೆಯನ್ನು ನಾವು ತಾಳಿದ್ದೇವೆ. ಇದಲ್ಲದೆ, ಆದಷ್ಟು ತೀವ್ರವಾಗಿಯೇ ನಾವು ಇಂಗ್ಲೀಷ ಭಾಷೆಯಲ್ಲಿಯೂ ಕೂಡ ವೀರಶೈವ ಧರ್ಮದ ತತ್ವಗಳನ್ನು ಪ್ರಕಟಪಡಿಸುವ ಪತ್ರಿಕೆಯನ್ನು ಹೊರಡಿಸಿ ಹಿಂದೂ ಸಂಸ್ಕೃತಿಯನ್ನು ಹೆಚ್ಚಿಸುವ ಕಾರ್ಯದಲ್ಲಿ ವೀರಶೈವರು ಮಾಡಿದ ಮಹತ್ತರ ಸೇವೆಯನ್ನು ಜಗತ್ತಿನ ಮುಂದಿಡಲು ಅಪೇಕ್ಷೆಯನ್ನು ತಾಳಿದ್ದೇವೆ.

ಆದರೆ ಈ ಕಾರ್ಯಗಳೆಲ್ಲ ವಾಚಕರ ಆಶ್ರಯದ ಮೇಲೆ ಬಹಳ ಅವಲಂಬಿಸಿವೆ. ಅವರು ದಯಮಾಡಿ ಶಿವಾನುಭವವು ವೀರಶೈವ ಸಮಾಜದ ಯೋಗ್ಯತೆಯನ್ನು ಎತ್ತರಿಸಿದ ಪತ್ರಿಕೆ ಎಂದು ಭಾವಿಸಿ ಅದಕ್ಕೋಸ್ಕರ ಪ್ರೀತಿಯನ್ನು ವಹಿಸಿ ಇದನ್ನು ಪೋಷಿಸಬೇಕೆಂದು ನಾವು ಸವಿನಯಪೂರ್ವಕವಾಗಿ ವಾಚಕರಲ್ಲಿ ವಿಜ್ಞಾಪಿಸಿಕೊಳ್ಳುತ್ತೇವೆ. ಈ ಪತ್ರಿಕೆಯ ಸಾಂಪತ್ತಿಕ ಸ್ಥಿತಿಯು ಅತ್ಯಂತ ಅಸಮಾಧಾನಕರ ಸ್ಥಿತಿಯಲ್ಲಿ ಇದೆ ಎಂದು ತಮಗೆ ತಿಳಿಸಲು ನಾವು ವಿಷಾದಗೊಳ್ಳುತ್ತೇವೆ. ಇದರ ಮುಂದಿನ ೧ ನೇ ಸಂಚಿಕೆಯು ಸೆಪ್ಟಂಬರ ತಿಂಗಳಿನ ಮಧ್ಯದಲ್ಲಿ ಹೊರಡುವದು. ಅದು ಹಿಂದಿನ ಚಂದಾದಾರರಿಗೆ ವ್ಹಿ. ಪಿ ಯಿಂದ ಕಳಿಸಿಕೊಡಲ್ಪಡುವದು. ಅದನ್ನು ಅವರು ಸ್ವೀಕರಿಸುವದಲ್ಲದೆ, ಇದಕ್ಕೆ ಇನ್ನೂ ಹೆಚ್ಚಾಗಿ ವರ್ಗಣೀದಾರರಾಗಲು ಅವರು ಪ್ರಯತ್ನಿಸಬೇಕೆಂದು ನಮ್ಮ ಬಿನ್ನಹವದೆ. ಹಾಗೂ ನಮ್ಮ ಪರವಾಗಿ ಯಾರಾದರೂ ಪ್ರಚಾರಕರು ಬಂದರೆ ಅವರಿಗೆ ಸಹಾಯ ಮಾಡಲೂ ನಾವು ವಿಜ್ಞಾಪಿಸಿಕೊಳ್ಳುತ್ತೇವೆ.

## ಶಿವಾನುಭವ ಪತ್ರಿಕೆಯ ಧ್ಯೇಯಗಳು.

(೧) ವೀರಶೈವ ಧರ್ಮತತ್ವಗಳು, ಸಂಸ್ಕೃತಿ, ಸಾಹಿತ್ಯ, ಇತಿಹಾಸ, ಲಲಿತ ಕಲೆ ಇವುಗಳ ಬಗ್ಗೆ ಸಂಶೋಧಕ ಲೇಖನಗಳನ್ನು ಪ್ರಕಟಿಸುವದು.

(೨) ವೀರಶೈವ ಸಮಾಜದಲ್ಲಿರುವ ಯಾವ ಪಕ್ಷಕ್ಕೂ ಸೇರದೆ ಸ್ವತಂತ್ರ ವಿಚಾರದ ಅಭಿಪ್ರಾಯಗಳನ್ನು ಪ್ರಕಟಿಸುವದು.

(೩) ವೀರಶೈವ ಸಮಾಜದಲ್ಲಿ ಕಾರಣಾಂತರಗಳಿಂದ ಉಂಟಾಗಿರುವ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿ ಸಮಾಜವು ಏಕ ಮುಖವಾಗುವಂತೆ ಬಲವಾಗಿ ಪ್ರಯತ್ನಿಸುವುದು.

(೪) ವೀರಶೈವ ರಾಜರು ಕವಿಗಳು ಮಹಾಪುರುಷರು ಶಿವಶರಣರು ಶಿವಶರಣೆಯರು ಇವರ ಚರಿತ್ರೆಗಳನ್ನು ಪ್ರಕಟಿಸುವದು.

(೫) ವೀರಶೈವ ಮಠಗಳ ವೃತ್ತಾಂತಗಳನ್ನು ಸಂಶೋಧಿಸುವದು.

(೬) ಇದು ವರೆಗೂ ಅಚ್ಚಾಗದ ವೀರಶೈವ ಗ್ರಂಥಗಳನ್ನು ಪ್ರಕಟಿಸುವುದು.

(೭) ವೀರಶೈವ ಕೈಪಿಡಿ ಅಥವಾ ವಸ್ತುಕೋಶಕ್ಕೆ ವಿಷಯಗಳನ್ನು ಸಂಗ್ರಹ ಮಾಡುವುದು.

(೮) ಲಿಂಗವಂತ ಪಂಡಿತರು, ಕವಿಗಳು, ಲೇಖಕರು, ಚಿತ್ರಗಾರರು, ಸಂಶೋಧಕರು, ಕೀರ್ತನಕಾರರು ಗಮಕಿಗಳು, ಗಾಯಕರು ಮೊದಲಾದ ಕಲಾವಿದರಿಗೆ ಪ್ರೋತ್ಸಾಹ ಕೊಡುವುದು.

## ಶಿವಾನುಭವ ಸಹಾಯಕ ಸಂಪಾದಕ ಮಂಡಳಿಯ ಕಾರ್ಯಗಳು.

(೧) ಚಂದಾದಾರರ ಸಂಖ್ಯೆಯು ಸಾಕಷ್ಟು ಆದ ಕೂಡಲೇ ಶಿವಾನುಭವವು ತಿಂಗಳಿಗೆ ೬೦ ಪುಟಕ್ಕೆ ಕಡಿಮೆ ಇಲ್ಲದಷ್ಟು ಹೊರಡುವಂತೆ ಮಾಡತಕ್ಕದ್ದು.

(೨) ಆದಷ್ಟು ಬೇಗ ಇಂಗ್ಲೀಷಿನಲ್ಲಿ ಶಿವಾನುಭವವು ಹೊರಡುವಂತೆ ಮಾಡತಕ್ಕದ್ದು.

ಈ ಮಂಡಲಿಯಲ್ಲಿರುವ ಮಹನೀಯರ ಹೆಸರುಗಳನ್ನು ನೋಡಿ ದಲ್ಲಿ ಅವರೆಲ್ಲರೂ ವೀರಶೈವ ಧರ್ಮಸಂಶೋಧನ ಕಾರ್ಯದಲ್ಲಿ ಮತ್ತು ವಾಙ್ಮಯಪ್ರಚಾರ ಕಾರ್ಯದಲ್ಲಿ ವಿಶೇಷ ಪರಿಶ್ರಮ ಮಾಡಿದವರಿರುವ ರೆಂಬದು ವಾಚಕರಿಗೆ ಕೂಡಲೆ ಕಂಡು ಬರದೆ ಇರಲಾರದು. ಅವರ ಸಹಾಯದಿಂದ ಈ ಶಿವಾನುಭವವು ಇನ್ನೂ ಹೆಚ್ಚಿಗೆ ಘನತರಸ್ಥಿತಿಯನ್ನು ಹೊಂದಬಹುದೆಂದು ನಾವು ಆಶಿಸಿದ್ದೇವೆ.

ಮುಂದಿನ ಸಂಚಿಕೆಯು ಹೆಚ್ಚು ಅಂದವಾಗಿ ಪ್ರಕಟವಾಗುವಂತೆ ನಾವು ಪ್ರಯತ್ನಿಸುವೆವು. ಮತ್ತು ತೀವ್ರವಾಗಿಯೇ ಈ ಪತ್ರಿಕೆಯು ಒಂದು ಉಚ್ಚತರಗತಿಯ ಉಪಯುಕ್ತ ಪತ್ರಿಕೆಯಾಗುವದೆಂಬ ಭರವಸೆಯನ್ನು ನಾವು ತಾಳಿದ್ದೇವೆ. ಇದಲ್ಲದೆ, ಅದಷ್ಟು ಶೀವ್ರವಾಗಿಯೇ ನಾವು ಇಂಗ್ಲೀಷ ಭಾಷೆಯಲ್ಲಿಯೂ ಕೂಡ ವೀರಶೈವ ಧರ್ಮದ ತತ್ವಗಳನ್ನು ಪ್ರಕಟಪಡಿಸುವ ಪತ್ರಿಕೆಯನ್ನು ಹೊರಡಿಸಿ ಹಿಂದೂ ಸಂಸ್ಕೃತಿಯನ್ನು ಹೆಚ್ಚಿಸುವ ಕಾರ್ಯದಲ್ಲಿ ವೀರಶೈವರು ಮಾಡಿದ ಮಹತ್ತರ ಸೇವೆಯನ್ನು ಜಗತ್ತಿನ ಮುಂದಿಡಲು ಅಪೇಕ್ಷೆಯನ್ನು ತಾಳಿದ್ದೇವೆ.

ಆದರೆ ಈ ಕಾರ್ಯಗಳೆಲ್ಲ ವಾಚಕರ ಆಶ್ರಯದ ಮೇಲೆ ಬಹಳ ಅವಲಂಬಿಸಿವೆ. ಅವರು ದಯಮಾಡಿ ಶಿವಾನುಭವವು ವೀರಶೈವ ಸಮಾಜದ ಯೋಗ್ಯತೆಯನ್ನು ಎತ್ತರಿಸಿದ ಪತ್ರಿಕೆ ಎಂದು ಭಾವಿಸಿ ಅದಕ್ಕೋಸ್ಕರ ಪ್ರೀತಿಯನ್ನು ವಹಿಸಿ ಇದನ್ನು ಪೋಷಿಸಬೇಕೆಂದು ನಾವು ಸವಿನಯಪೂರ್ವಕವಾಗಿ ವಾಚಕರಲ್ಲಿ ವಿಜ್ಞಾಪಿಸಿಕೊಳ್ಳುತ್ತೇವೆ. ಈ ಪತ್ರಿಕೆಯ ಸಾಂಪತ್ತಿಕ ಸ್ಥಿತಿಯು ಅತ್ಯಂತ ಅಸಮಾಧಾನಕರ ಸ್ಥಿತಿಯಲ್ಲಿ ಇದೆ ಎಂದು ತಮಗೆ ತಿಳಿಸಲು ನಾವು ವಿಷಾದಗೊಳ್ಳುತ್ತೇವೆ. ಇದರ ಮುಂದಿನ ೧ ನೇ ಸಂಚಿಕೆಯು ಸೆಪ್ಟಂಬರ ತಿಂಗಳಿನ ಮಧ್ಯದಲ್ಲಿ ಹೊರಡುವದು. ಅದು ಹಿಂದಿನ ಚಂದಾದಾರರಿಗೆ ವ್ಹಿ. ಪಿ ಯಿಂದ ಕಳಿಸಿಕೊಡಲ್ಪಡುವದು. ಅದನ್ನು ಅವರು ಸ್ವೀಕರಿಸುವದಲ್ಲದೆ, ಇದಕ್ಕೆ ಇನ್ನೂ ಹೆಚ್ಚಾಗಿ ವರ್ಗಣೀದಾರರಾಗಲು ಅವರು ಪ್ರಯತ್ನಿಸಬೇಕೆಂದು ನಮ್ಮ ಬಿನ್ನಹವದೆ. ಹಾಗೂ ನಮ್ಮ ಪರವಾಗಿ ಯಾರಾದರೂ ಪ್ರಚಾರಕರು ಬಂದರೆ ಅವರಿಗೆ ಸಹಾಯ ಮಾಡಲೂ ನಾವು ವಿಜ್ಞಾಪಿಸಿಕೊಳ್ಳುತ್ತೇವೆ.

## ಶಿವಾನುಭವ ಪತ್ರಿಕೆಯ ಧ್ಯೇಯಗಳು.

(೧) ವೀರಶೈವ ಧರ್ಮತತ್ವಗಳು, ಸಂಸ್ಕೃತಿ, ಸಾಹಿತ್ಯ, ಇತಿಹಾಸ, ಲಲಿತ ಕಲೆ ಇವುಗಳ ಬಗ್ಗೆ ಸಂಶೋಧಕ ಲೇಖನಗಳನ್ನು ಪ್ರಕಟಿಸುವದು.

(೨) ವೀರಶೈವ ಸಮಾಜದಲ್ಲಿರುವ ಯಾವ ಪಕ್ಷಕ್ಕೂ ಸೇರದೆ ಸ್ವತಂತ್ರ ವಿಚಾರದ ಅಭಿಪ್ರಾಯಗಳನ್ನು ಪ್ರಕಟಿಸುವದು.

(೩) ವೀರಶೈವ ಸಮಾಜದಲ್ಲಿ ಕಾರಣಾಂತರಗಳಿಂದ ಉಂಟಾಗಿರುವ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿ ಸಮಾಜವು ಏಕ ಮುಖವಾಗುವಂತೆ ಬಲವಾಗಿ ಪ್ರಯತ್ನಿಸುವುದು.

(೪) ವೀರಶೈವ ರಾಜರು ಕವಿಗಳು ಮಹಾಪುರುಷರು ಶಿವಶರಣರು ಶಿವಶರಣೆಯರು ಇವರ ಚರಿತ್ರೆಗಳನ್ನು ಪ್ರಕಟಿಸುವದು.

(೫) ವೀರಶೈವ ಮಠಗಳ ವೃತ್ತಾಂತಗಳನ್ನು ಸಂಶೋಧಿಸುವದು.

(೬) ಇದು ವರೆಗೂ ಅಚ್ಚಾಗದ ವೀರಶೈವ ಗ್ರಂಥಗಳನ್ನು ಪ್ರಕಟಿಸುವುದು.

(೭) ವೀರಶೈವ ಕೈಪಿಡಿ ಅಥವಾ ವಸ್ತುಕೋಶಕ್ಕೆ ವಿಷಯಗಳನ್ನು ಸಂಗ್ರಹ ಮಾಡುವುದು.

(೮) ಲಿಂಗವಂತ ಪಂಡಿತರು, ಕವಿಗಳು, ಲೇಖಕರು, ಚಿತ್ರಗಾರರು, ಸಂಶೋಧಕರು, ಕೀರ್ತನಕಾರರು ಗಮಕಿಗಳು, ಗಾಯಕರು ಮೊದಲಾದ ಕಲಾವಿದರಿಗೆ ಪ್ರೋತ್ಸಾಹ ಕೊಡುವುದು.

## ಶಿವಾನುಭವ ಸಹಾಯಕ ಸಂಪಾದಕ ಮಂಡಳಿಯ ಕಾರ್ಯಗಳು.

(೧) ಚಂದಾದಾರರ ಸಂಖ್ಯೆಯು ಸಾಕಷ್ಟು ಆದ ಕೂಡಲೇ ಶಿವಾನುಭವವು ತಿಂಗಳಿಗೆ ೬೦ ಪುಟಕ್ಕೆ ಕಡಿಮೆ ಇಲ್ಲದಷ್ಟು ಹೊರಡುವಂತೆ ಮಾಡತಕ್ಕದ್ದು.

(೨) ಆದಷ್ಟು ಬೇಗ ಇಂಗ್ಲೀಷಿನಲ್ಲಿ ಶಿವಾನುಭವವು ಹೊರಡುವಂತೆ ಮಾಡತಕ್ಕದ್ದು.

(೩) ಯಾವ ಪಕ್ಷದ ಹಂಗಿಗೂ ಸೇರದೆ ಸ್ವತಂತ್ರ ವಿಚಾರದ ಲೇಖನಗಳನ್ನು ಪ್ರಕಟಿಸತಕ್ಕದ್ದು.

(೪) ಲೇಖನಗಳನ್ನು ಆದಷ್ಟು ಮಟ್ಟಿಗೆ ಸಚಿತ್ರವಾಗಿ ಪ್ರಕಟಿಸಲು ಪ್ರಯತ್ನಿಸತಕ್ಕದ್ದು.

(೫) ಶಿವಾನುಭವ ಸಹಾಯಕ ಸಂಪಾದಕರು ಅಖಿಲ ಭಾರತೀಯ ವೀರಶೈವ ಪುಸ್ತಕಾಲಯವನ್ನು ಸ್ಥಾಪಿಸತಕ್ಕದ್ದು.

(೬) ಪ್ರತಿಯೊಬ್ಬರೂ ತನುಮನಧನಗಳಿಂದ ಶಿವಾನುಭವದ ಏಳಿಗೆಗಾಗಿ ಹೆಣಗಾಡತಕ್ಕದ್ದು.

(೭) ಸಹಾಯಕ ಸಂಪಾದಕರು ಕಾಲಕಾಲಕ್ಕೆ ಒಂದು ಸ್ಥಳದಲ್ಲಿ ಕೂಡಿವಿಚಾರ ವಿನಿಮಯ ಮಾಡತಕ್ಕದ್ದು.

(೮) ಒಟ್ಟಿನಲ್ಲಿ ಎಲ್ಲರೂ ವೀರಶೈವ ಸಮಾಜದ ಕಲ್ಯಾಣದ ಕಡೆಗೇ ದೃಷ್ಟಿಯುಳ್ಳವರಾಗಿರತಕ್ಕದ್ದು.

## ಶಿವಾನುಭವ ಸಹಾಯಕ ಸಂಪಾದಕ ಮಂಡಲಿಯ ಸಭಾಸದರು.

೧ ಮಿ॥ ವೀರಭದ್ರಪ್ಪ ಬಸಪ್ಪ ಹಾಲಭಾವಿ ಬಿ. ಏ ಎಲ್. ಎಲ್. ಬಿ. ರಿಟಾಯರ್ಡ ಫಸ್ಟ್‌ಕ್ಲಾಸ ಸಬಜಡ್ಜ ಧಾರವಾಡ.

೨ ಡಾ॥ ಎಸ್. ಸಿ. ನಂದಿಮಠ ಎಮ್. ಏ. (ಪಿ ಎಚ್. ಡಿ.) ಪ್ರಿನ್ಸಿಪಾಲ ಲಿಂಗರಾಜ ಕಾಲೇಜ ಬೆಳಗಾವ.

೩ ಮಿ॥ ಎಮ್. ಎಸ್. ಬಸವಲಿಂಗಯ್ಯ ಎಮ್. ಏ. ಬಿ. ಎಲ್. ಕ್ಯುರೇಟರ ಓರಿಎಂಟಲ್ ಲೈಬ್ರರಿ ಮೈಸೂರು.

೪ ಪ್ರೊ. ಎಸ್. ಎಸ್. ಬಸವನಾಳ ಎಮ್. ಏ. ಪ್ರೊಫೇಸರ ಲಿಂಗರಾಜ ಕಾಲೇಜ ಬೆಳಗಾವ.

೫ ಮಿ॥ ಎಸ್. ಎಸ್. ಮಾಳವಾಡ ಎಮ್. ಏ. ಗೋವನಕೊಪ್ಪ ಜಿ॥ ವಿಜಾಪುರ.

**೬ ವಿ॥ ವ್ಹಿ. ಸಿ. ಯಂಗಟಿ** ಬಿ. ಏ. ಎಲ್. ಎಲ್. ಬಿ. ವಕೀಲ **ಹಾವೇರಿ**

**೭ ವಿ॥ ಕಲ್ಯಾಣಪ್ಪ ಬ್ಯಾಳಿ** ಬಿ. ಏ. ಬಿ. ಟಿ. ಅಸಿ॥ ಟೀಚರ ಶ್ರೀಸಿದ್ಧೇಶ್ವರ ಹಾಯಸ್ಕೂಲು ವಿಜಾಪುರ.

**೮ ಶಿ। ಮೂ। ಶಿವಮೂರ್ತಿ ಶಾಸ್ತ್ರಿಗಳು ಹುಲಕುಂಟಿಮಠ. ಕೀರ್ತನಕೇಸರಿ** ತುಮಕೂರು.

**೯ ವೇ॥ ಮೂ॥ ವೈ. ನಾಗೇಶಶಾಸ್ತ್ರಿಗಳು** ಸರ್ವದರ್ಶನ ತೀರ್ಥ ಮೈಸೂರ ಆಸ್ಥಾನ ವಿದ್ವಾನ ಬಳ್ಳಾರಿ.

೧೦ **ವಿ॥ ಟಿ. ಎನ್. ಚನ್ನಪ್ಪನವರು** ಸ್ಥಳೀಯ ಸಂಸ್ಥೆಗಳ ಪತ್ರಿಕೆಯ ಸಂಪಾದಕರು ಬೆಂಗಳೂರು.

೧೧ **ಪಂಡಿತ ನಾಗಭೂಷಣ ಶಾಸ್ತ್ರಿಗಳು** ಕಾವ್ಯತೀರ್ಥ ಸಂಸ್ಕೃತ ಪಾಠಶಾಲಾ ಅಧ್ಯಾಪಕರು ಗದಗ.

೧೨ **ಪಂಡಿತ ಗುರುಮೂರ್ತಿ ಶಾಸ್ತ್ರಿಗಳು**. ಕಾವ್ಯತೀರ್ಥ ಕಜ್ಜರಿ ಆಲೂರು ತಾ॥ ಹಾನಗಲ್ಲ.

---

ನವದುಕೂಲ ಪ್ರಕರದಿಂದೆ ಮಿಗೆ ಸಿಂಗರಿಸಿ
ಸಮಗದ್ದುಗೆಯನಿತ್ತು ಚಮರಸಿಗುರಿಯನಿತ್ತು
ವಿಮಳತರವೆನಿಪ ಧವಳಛತ್ರಮುಮನಿಗಿತ್ತು
ಹಿರಿಯ ಪ್ರಧಾನಿಕೆಯನೊಲ್ಮೆಯಿಂದಂ ಕುಡಲ್
ಪುರದೊಳಗೆ ಪೊಸತೆನಿಪುವರಮನೆಯನಿಂಬಿಡಲ್
ಅಲ್ಲಿ ಪೊಕ್ಕರ್ ಕೇಶಿರಾಜದಣ್ಣಾಯಕರ್
ಸಲ್ಲೀಲೆಯಿಂದೆ ಪರಿಸಲ್ಕೆ ಗಣನಾಯಕರ್
ಗುಡಿಗಟ್ಟಿ ತೋರಣಂಗಟ್ಟಿ ಪಟ್ಟಣದೊಳಗೆ
ಮೃಡಭಕ್ತರೆಲ್ಲರ್ ಹಿಗ್ಗುತಿರೆ ಮನದೊಳಗೆ
ಅರಸ ಪೆರ್ಮಾಡಿರಾಯಂ ಸಂತಸಂಬಟ್ಟು
ಧರಣೀತಳದ ಸಂಪದಂ ತನ್ನ ಕೈವಟ್ಟು
ಮಂತ್ರಕ್ಕೆ ನೆರೆ ಕೇಶಿರಾಜ ದಣ್ಣಾಯಕರ್
ತಂತ್ರಕ್ಕೆ ಮಿಗೆ ಕೇಶಿರಾಜ ದಣ್ಣಾಯಕರ್
ಮಾತಿಗೆಲ್ಲಂ ಕೇಶಿರಾಜದಣ್ಣಾಯಕರ್
ನೀತಿಗೆಲ್ಲಂ ಕೇಶಿರಾಜದಣ್ಣಾಕರ್
ತಾಮಾಗಿ ಪೆರ್ಮಾಡಿರಾಯ ನೊಲವಿಂದಿರಲ್
ಭೂಮಧೂಧರನಾಗಿ ನಿಶ್ಚಿಂತಮಿರುತಿರಲ್

ಸಂಪದಂಮಿಗೆ ಕೇಶಿರಾಜದಣ್ಣಾಯಕರ್
ಸೊಂಪೇರಿ ಶರಣರಂ ನೋಡಿ ದಣ್ಣಾಯಕರ್
ಚಂದನಂ ಕಸ್ತುರಿಯ ಪರಿಮಳಂ ಶರಣರ್ಗೆ
ಸಂದ ಕರ್ಪೂರವಗಿಲ ಪರಿಮಳಂ ಶರಣರ್ಗೆ
ನಟಿಯಿಸುವ ನರ್ತನದ ನಾದಮುಂ ಶರಣರ್ಗೆ
ಕಟಕ ಮಕುಟಾದಿ ಕೇಯೂರಮುಂ ಶರಣರ್ಗೆ
ನೆನಹು ಶರಣರ ಮೇಲೆ ನಿಟ್ಟೆ ಶರಣರ ಮೇಲೆ
ಮುನಿಸು ಶರಣರ ಮೇಲೆ ನೇಹ ಶರಣರ ಮೇಲೆ
ಶರಣರೊಡತಣ ಸುಖಂ ಶರಣರೊಡತಣ ಲೀಲೆ
ಗುರುತರ ಸ್ನೇಹದಾತುರತೆ ಶರಣರ ಮೇಲೆ
ಕುಡಿಗೊಂಡು ಕೊಬ್ಬುತಿರಲಿರಲೊಂದು ದೆವಸದೊಳ್
ಎಡೆಗೊಂಡು ಶಿವಗೋಷ್ಠಿಯುಬ್ಬುತಿರೆ ಛಂದದೊಳ್

ಪಾಡುವ ಪುರಾತನರ ಗೀತದೊಳ್ಕರಗುತಂ
ಕೂಡೆ ಜಂಗಮದ ಚರಣಕ್ಕೆರಗಿ ನೆರೆವುತಂ
ಶಿವನ ಪದ್ಯವನೋದಿ ಮಿಗೆ ಬೀಗಿ ಬಿರಿವುತಂ
ಭವನ ಶರಣಾವಳಿಯ ಸಂಗದೊಳ್ಕರಗುತಂ
ಪುಳಕಾವಳಿಗಳಡರಲಾಹಾ ಎನುತ್ತಲ್ಲಿ
ಬೆಳೆವ ಪರಮಾನಂದದೊಳಗೆ ಹೆಚ್ಚುತ್ತಲ್ಲಿ
ಪಸಿವು ತೃಷೆ ನಿದ್ರೆನುಡಿ ನೋಟಂಗಳಂ ಮರೆದು
ದೆಸೆವಾಯುಮಾಗಸಂ ಧರೆ ಎಂಬುದಂ ಮರೆದು
ಅರಸನೋಲಗರಾಜ ಕಾರ್ಯಂಗಳಂ ಮರೆದು
ನೆರೆಹೊರೆ ಕೆಳಂಬಲಂ ಹಿಂದುಮುಂದಂ ಮರೆದು
ಘಳಿಗೆ ಜಾವಂ ದಿವಂ ರಾತ್ರಿಗಳನುಂ ಮರೆದು
ಒಳಗು ಹೊರಗತ್ತಿತ್ತಲೆಂದೆಂಬುದಂ ಮರೆದು
ಶರಣರ ಸುಗೀತಗೋಷ್ಠಿಯೊಳೇನುವರಿಯದಿರೆ
ಉರವಣಿಪ ಸಂಗದಿಂದೇನುವಂ ನೆನೆಯದಿರೆ

ಆ ಸಮಯದೊಳ್ ಬಂದರರಸಾಳ್ಗಳಂತಲ್ಲಿ
ಭಾಸುರದ ಪೇರ್ವಾಡಿರಾಯಂ ಕಳುಪಲಲ್ಲಿ
ಬಂದು ದಣ್ಣಾಯಕರೆ ಬನ್ನಿರೇ ಕರೆದಪರು
ಸಂದಣಿಪ ರಾಜಕಾರ್ಯಕ್ಕರಸುತಿರ್ದಪರು
ಎನಲದಂ ಕೇಳದಾಸಂಗದಿಂದಿರುತಮಿರೆ
ತನುತೀವಿ ಪುಳುಕಿಸುತೆ ಶರಣರೊಡನೊಪ್ಪುತಿರೆ
ಮತ್ತೆ ಮತ್ತರಸಾಳ್ಗಳುರವಣಿಸುತಂ ಬಂದು
ಎತ್ತಿದಾಗ್ರಹದಿಂದ ಬರವೇಳುತಂ ನಿಂದು
ಇರಲಲ್ಲಿ ಶರಣರೊಡತಣ ಗೋಷ್ಠಿ ನೆರೆ ಕಿಡಲ್
ಉರವಣಿಪ ಸಂಗಸುಖಲತೆಯು ಕುಡಿ ನಡೆಗಿಡಲ್
ತಲೆಗೊಡಹಿ ಸಿಡಿಮಿಡಿಗೊಳುತ್ತೆ ಸುರ್ರನೆ ಸುಯ್ದು
ನೆಲೆಗೊಂಡ ಸುಖವಳಿಯೆ ಬೈದು ನೆಲನಂ ಹೊಯ್ದು
ಮುಗ್ಧವಿಯೋಗದಂತೊಳಗೊಳಗೆ ಬೇವುತಂ
ದಗ್ಧಾಂತರಂಗ ಒಡನೊಡನುರಿಯೆ ನೋವುತಂ
ಸಂಗಸುಖವಳಿದು ಹರಣಂಗಳೆವ ತೆರನಾಗೆ

ಅಂಗವಿಸಿ ನುಡಿದನಾ ಶರಣತತಿ ಬೆರಗಾಗೆ
ಸಿರಿಯು ಸಂಗಂ ಶರಣ ಸಂಗಕ್ಕೆ ಪಗೆಯಾಯ್ತು
ನರನೋಲಗದಪರಾಧವು ಮರುಳುಮಾಡಿತ್ತು
ಅಯ್ಯಯ್ಯ ಸೋಮನಾಥಯ್ಯ ಕರುಣಿಪುದೆನಗೆ
ಅಯ್ಯಲಾ ಶರಣ ಸದ್ಗೋಷ್ಠಿಯಂ ಕರುಣಿಪುದು
ದೇವ ಕಲ್ಯಾಣದಧಿಪೈವ ಶ್ರೀಪುರಾಂತಕಾ
ದೇವ ಮನ್ಮದದರ್ಪ ಮಥನದುರಿತಾಂತಕಾ
ಸಿರಿಹಾರಿ ಹೋಗೆ ನಿಮಗರ್ಚನೆಯ ಮಾಡುವೆಂ
ಶರಣತತಿ ಪುರಜನಂ ಮೆಚ್ಚಿ ಕೊಂಡಾಡುವೆಂ
ಎನುತಲ್ಲಿ ಪರಸಿಕೊಳುತಂ ಸುಯ್ದು ನಿಂದಿರ್ದ
ಮನದೊಳಗೆ ಕುಕ್ಕಳಂಗುದಿದು ಬಳಲುತಿರ್ದ
ಸೇವಕಾ ಪರಿಕರಾವಳಿಯು ಸಂದವನಾಗಿ
ಭಾವಿಸಲು ಸೋಮನಾಥ ಸ್ನೇಹಸಂಯೋಗಿ
ಬರುತಿರ್ದನರಮನೆಗೆ ದಣ್ಣಾಯ್ಕರುಂ ನಡೆದು

ಅರಸ ಪೇರ್ಮಾಡಿ ರಾಯಂ ಕೇಳ್ದುಮಿಗೆ ಮುಳಿದು
ಕೆಲಬಲದೊಳಿರ್ದ ವಿಪ್ರರ ವದನಮಂ ನೋಡಿ
ಒಲಿದು ವಿಪ್ರರ್ನಿಂದಿಸಲ್ ತೊಡಗಿದರ್ಕೂಡೆ
ದೇವ ಚಿತ್ತೈಸುವುದು ನಿಮ್ಮ ದಣ್ಣಾಯಕರು
ಭಾವಿಸುವಡೆಂದೆಂದುವುಂ ವಿಷ್ಣುನಿಂದಕರು
ಶರಭರೂಪಿಂ ವೀರಭದ್ರದೇವರು ಬಂದು
ನರಸಿಂಗ ಕೇಸರಿಯು ಕೊಂದು ಚರ್ಮವ ತೆಗೆದು
ತಂದಿತ್ತನೆಂಬ ಕಥನವನಾಡಲಾಗದೆನೆ
ನಿಂದು ಕಟಕಿಯನಾಡಿದರ್ನಿಮ್ಮ ಮುಂದಿದನೆ
ಆಗದಾಗದು ಮುಡಿಗೆ ಯೋಗ್ಯವಲ್ಲೆಂದೆನುತೆ
ಆಗ ಲಂಬಿಕೆಯು ಕೆರ್ಪಿಂಗೆ ಕೆರ್ಲಂಗೆ ಸರಿಯಲ್ಲೆನುತೆ
ಕಟಕಿಗಳನಾಡುತಿರ್ಪಂದಮಂ ಮರೆದಿರೆ
ದಿಟದಿಂದೆ ನಿಮ್ಮುಮಂ ಬಗೆಯನವಧರಿಸಿರೇ
ದೇವ ಗುರುಪಾದಮುದ್ರಿಕೆಯುಂಟು ಕರದೊಳಗೆ
ದೇವ ನಿಮಗೆಂದುವುಂ ಪೊಡಮಡಂ ಮನದೊಳಗೆ

ಆ ಉಂಗರಕ್ಕೆ ಪೊಡೆವಡುತಿರ್ಪನರಿಯಿರೇ
ದೇವ ನಿಮಗೆಂದು ಕೈಕೊಂಬುದಂನರಿಯಿರೇ
ನಿಮ್ಮನೋಲೈಸಿದರ್ ನಿಮಗೆ ಗರ್ವಿಸುತಿರ್ಪ
ಎಮ್ಮನಾರ್ಬಲ್ಲರೈ ಧರೆಗುತ್ಕಟದ ದರ್ಪ

ಎಂದು ನಿಂದಿಸುತಿರಲು ದಣ್ಣಾಯಕರ್ಬಂದ
ರಿಂದುಧರನತುಳಕೀರ್ತಿಯ ಮಾಳ್ಕೆಯಿಂ ನಿಂದ .
ರಲ್ಲಿ ನಿಂದಿರೆ ಕಂಡು ಕರೆದು ಗದ್ದುಗೆಗೊಟ್ಟು
ಮೆಲ್ಲನುಪಚಾರಮಂ ಮನದೊಳಗೆ ಮುಂದಿಟ್ಟು
ಮಾತುಮಾತಿಂ ಸರಸದಿಂದುಂಗುರಂದೆಗೆದು
ನೂತನವಿದೆಂದು ನೋಳ್ಪಂತೆ ಮನದೊಳ್ಮಳಿದು
ತನ್ನಂಗುಲಿಯೊಳುಂಗುರವನಿಕ್ಕಿ ಕೊಳುತಲ್ಲಿ
ಮನ್ನಿಸುತ್ತವರೊಡನೆ ಮಾತಾಡುತಂತಲ್ಲಿ
ಪೊಡೆಮಡಲ್ಮನ್ನಿಸುವೆನೆಂದು ಮನದೊಳಗೆನುತೆ
ಪೊಡೆಮಡದೊಡೀಗಳೇ ದಂಡಿಸುವೆನೆಂದೆನುತೆ
ಮನೆಗೆ ಬಿಜಯಂಗೈಯ್ಯಿರೇ ದಂಡನಾಥರೇ
ಎನಲೆದ್ದು ಪೊಡೆವಡದೆ ಗಳಗಳನೆ ಪೋಗುತಿರೆ
ಮುನಿದು ಕರೆಕರೆ ಎಂದು ಚಾರರಿಂ ಕರೆಯಿಸುತೆ
ಕೊನೆಮೀಸೆ ಕೆತ್ತೆಕಣ್ಕೆಂಪೇರೆ ಕೋಪಿಸುತೆ
ಕಂಡಿರೇ ಎನ್ನಿಂದಮೋ ಸಂಪದಂ ಬಡೆದು
ಅಂಡಲೆವ ದಾರಿದ್ರ್ಯವೆಲ್ಲವಂ ನೆರೆ ತೊಡೆದು
ಎನಗೆ ಪೊಡೆಮಡದುದಾಸೀನವಂ ಮಾಳ್ಪರೇ
ಮನವಾರೆ ಎಮ್ಮವಂ ಲಘುಮಾಡಿ ನೋಳ್ಪರೇ
ಸಿರಿ ಹೊರಗುಯೆಂದೆಂಬ ಬೇಸರೇನಿಂತಿಲ್ಲಿ
ಸಿರಿ ನಿಮಗೆ ಹೊರೆಯಾದಡೆಮಗೇಕೆ ತಾನಿಲ್ಲಿ
ದಿಟದಿಂದಲೊಲ್ಲಿರೇ ಸಂಪದವನೆಂದೆನಲು
ಕಟಕಟಾ ಎನ್ನಲ್ಲಿ ತಪ್ಪಿಲ್ಲವೆಂದೆನಲು

ಲಿಂಗಾಭಿಮಾನಿ ಲಿಂಗೈಕ ನಿಷ್ಠಂ ಕೇಳ್ದು
ಸಂಗ ಸುಖ ಸಾರಾಯ ಶರಣ ಚಿತ್ತಂ ಕೇಳ್ದು

ನರಪದಂ ಸುರಪದಂ ಲಕ್ಕಿಸದ ಕಲಿ ಕೇಳ್ದು
ಹರಿ ಬೊಮ್ಮ ಪದವಿಯುಂ ತೃಣವೆಂಬ ಕಲಿ ಕೇಳ್ದು
ಶಿವಭಕ್ತಿ ಸಿರಿಯುಳ್ಳ ಪುಣ್ಯಾಧಿಕಂ ಕೇಳ್ದು
ಶಿವನ ಸಾಮರ್ಥ್ಯನಿಧಿ ದಣ್ಣಾಯಕರ್ ಕೇಳ್ದು
ಕೇಳರಸ ನಿನ್ನ ಸಿರಿ ನಿನಗಿಕ್ಕೆ ನಿನಗಿಕ್ಕೆ
ಶೂಲಿಯಾಳುಗರ ಸಂಗಸಂಪದವದೆನಗಿಕ್ಕೆ
ಒಲ್ಲೆನೊಲ್ಲೆಂ ತೆಗೆ ಇದೇಕೆ ಬೇಡೆಂದೆನುತೆ
ಒಲ್ಲೆನೊಲ್ಲೆಂ ಭಕುತಿ ಸಿರಿಗೆ ಸರಿಯಲ್ಲೆನುತೆ
ಕಂಕಣಂ ಮುದ್ರಿಕೆಯನುಚ್ಚಿ ಬೀಸಾಡುತ್ತೆ
ಶಂಕಿಸದೆ ಕೇಯೂರವುಂ ತೆಗೆದು ಬಿಸುಡುತ್ತೆ
ಹಾರವುಂ ಕರ್ಣಪೂರವುನೊಲಿದು ಕಳೆಯುತ್ತೆ
ಹೀರಾವಳಿಯುಮನುತ್ತರಿಗೆಯುಂ ತೆಗೆಯುತ್ತೆ
ಹೊಳೆವ ನವ್ಯಾಭರಣವೆಲ್ಲವಂ ನೆರೆ ತೆಗೆದು
ಪಳಿಯ ಬೀರಣೆ ಕುಪ್ಪಸಂಗಳಂ ಮಿಗೆ ಕಳೆದು
ಹೊನ್ನ ಕರಡಿಗೆ ಸೆಜ್ಜೆ ನಿನ್ನವೆಂದವನಿತ್ತು
ಚಿನ್ನ ವಸ್ತ್ರಂಗಳಂ ನಿನ್ನ ಸೊಮ್ಮೆಂದಿತ್ತು
ಅಂಗಯ್ಯ ಸೆಜ್ಜೆಯೊಳು ಸೋಮನಾಥನನಿರಿಸಿ
ಮುಂಗಯ್ಯ ನಾಗವೇದಿಕೆಗೆ ಬಿಜಯಂಗೈಸಿ
ಆಸೆಗೆಡೆಗುಡದೆ ತನ್ನಯ ವಸ್ತ್ರಮಂ ಬಿಟ್ಟು
ಆಶಾಂಬರನ ಸುತಂ ಕೇಶಾಂಬರವನುಟ್ಟು
ಸೇವಕಾವೃತ್ತಿಯುಂ ಮನದ ಕಾಲಿಂದೊದೆದು
ದೇವ ಸೋಮಯ್ಯನಂ ಚಿತ್ತಹಸ್ತದಿ ಪಿಡಿದು
ಪೊರಮಟ್ಟನುನ್ನತೈಶ್ವರ್ಯ ನಿಧಿ ನಿಷ್ಠೆಯೊಳ್
ಪೊರಮಟ್ಟನಕ್ತಿಯಿಂ ನಿಸ್ಪೃಹದ ಬಟ್ಟೆಯೊಳ್
ಪೊರಮಟ್ಟನಲ್ಲಿ ವೈರಾಗ್ಯ ಸಂಪದವರಂ
ಪೊರಮಟ್ಟನವ್ವುವ್ವ ಭವತಿಮಿರ ಭಾಸ್ಕರಂ
ಇಂತು ಕೇಶಿರಾಜದಣ್ಣಾಯಕರ್ತೆರಳೆ
ಸಂತತಂ ನೃಪತಿ ಬೆರಗಾಗುತ್ತಮಿರೆ ತೆರಳೆ

**ಪ್ರಥಮಸ್ಥಲಂ ಸಮಾಪ್ತಂ.**

---

# ದ್ವಿತೀಯಸ್ಥಲ.



ವೃತ್ತ:— ಸಿರಿಯಂ ಲಕ್ಷ್ಮಿಸದಾಧಿಪತ್ಯವನದಂ ಕೈಕೊಳ್ಳದಾಶ್ಚರ್ಯದಿಂ ।
ವರವೈರಾಗ್ಯ ವಿಭೂಷಣಂ ಶರಣಸಂಗಾನಂದದೊಳ್ ಲೋಲನಾ ।
ದರದಿಂ ಶಂಕರನಂ ಶಶಾಂಕಧರನಂ ಸರ್ವಜ್ಞನಂ ಶಂಭುವಂ ।
ಕರದೊಳ್ಕೈವಿಮ್ರಿಸಿ ಕೇಶಿರಾಜಮಹಿಮಂ ಬಂದಂ ಮಹೋತ್ಸಾಹದಿಂ ॥

## ಗದ್ಯ.

ಇಂತು ಪೊರಮಟ್ಟು ವೀರಭಕ್ತಿಗೊಡಂಬಟ್ಟು ಏಕ ನಿಷ್ಠೆಯಂ ಮುಂದಿಟ್ಟು ಸಾಹಿತ್ಯಸಾರ್ವಭೌಮಂ ಸುಕೃತಕುಲಸೇವ್ಯಂ ಪುಳಕಾವಳಿಯು ಸರ್ವಾಂಗಂ ಸುಖಜಲಭರಿತವಿಲೋಚನಂ ತೃಣೀಕೃತಜಗಜ್ಜಾಲಂಕರತಳಸಿಂಹಾಸನಸುಖಾಸೀನಂ ಸೋಮನಾಥನುಮಾಗಿಂದುಧರನಾಜ್ಞೆಯಿಂ ಕೈಕೊಂಡೊಂದೇ ಮನದೊಳು ಬಿಜಯಂಗೈದರೆಂಬ ವೈರಾಗ್ಯವಾರ್ತೆಯಂ ನಿಜಮಂದಿರದೊಳಿರ್ದ ಪರಮಭಕ್ತೆ ಪತಿವ್ರತಾಗುಣಭೂಷಣೆಯಪ್ಪ ಗಂಗಾದೇವಿಯುಕೇಳ್ದು ಪೇರ್ಮಾಡಿರಾಯನ ಸೊಮ್ಮಪ್ಪ ಕಟಕಮಕುಟಕೇಯೂರಾದಿ ಸಮಸ್ತಾಭರಣಮಂ ಸಕಲವಸ್ತುವಂ ಭಂಡಾರಮಂ ಕಾಪಿನವರ್ಗೊಪ್ಪಿಸಿ ವೇತ್ರಮನುಟ್ಟು ಭಸಿತಮನಿಟ್ಟು ಕರಕಮಲಸ್ಥಿತಶಿವಲಿಂಗಸಂಪನ್ನೆಯಾಗಿ ನಿಳಯಮಂ ಪೊರಮಟ್ಟು ರತ್ನದೊಡನೆ ಕಾಂತಿ ಚಂದ್ರನೊಡನೆ ಬೆಳ್ದಿಂಗಳು ಏಕನಿಷ್ಠೆಯೊಡನೆ ಶಿವಭಕ್ತಿಬರ್ಪಂತೆ ಕೇಶಿರಾಜರೊಡನೆ ಗಂಗಾದೇವಿಯುರ್ಬರುತಿರೆ.

ತವರಾಜದ ಸವಿಯನುಂಡವಂ ಹಗಿಸವನೊಲ್ಲದಂತೆ ಕಲ್ಪತರುವಂ ಸಾರ್ದವಂ ಮುಳ್ಳುಮರನಂ ಬಗೆಯುವಂತೆ ಸುರಭಿದೊರೆಕೊಂಡವಂ ಪಯುವನೆಳಸದಂತೆ ಶಿವಭಕ್ತಿವೈರಾಗ್ಯವನೊಳಕೊಂಡ ದಣ್ಣಾಯಕರು ಸಂಸಾರಾಲ್ಪಸಂಕಲ್ಪ ಸುಖವನೊಲ್ಲದೆ ಕಲ್ಯಾಣಪುರಮಂ ಪೊರಮಟ್ಟು ಅಲ್ಲಿಗೊಂದು ಯೋಜನಾಂತರದೊಳೊಂದು ಕೃತಯುಗದ ಧರ್ಮಗೂಳಿಯಂ ತೆಗೆದಿರ್ಪಂತೆ ಪುಣ್ಯದೊರ್ಬುಳಿಗೊಂಡಂತೆ ಸಂಸಾರಮಂ ಸೋಂಕದ ಮೊಸಲ ಭಕ್ತಿ ಓಸರಿಸಿದಂತಿರ್ದ ಬಿದಿರಕಾಯಕದ ವಂಶವರ್ಧನನೆಂಬ

ಪಶ್ಚಾತ್ತಿನ ಶಿವಪುರದ ಮುಂದೆ ನಡೆತರ್ಪಾಗಳ್ ದಣ್ಣಾಯಕರ ನಿರ್ಲೇಪಾಗಮನಮಂ ಮಹಾಮಹೇಶ್ವರನಪ್ಪ ವಂಶವರ್ಧನಂ ಕಂಡಿದಿರೇಳ್ದು ಬಂದು ಪದತಳಕ್ಕೆರಗಿ ನಿಜಭಕ್ತಿಯಿಂ ಬಿಜಯಂಗೈಸಿತಂದು ಶಿವಭಕ್ತಿಯೊಗ್ಗಿನಂತಿರ್ದ ತನ್ನ ಗುಡಿಸಿಲ ಮುಂದಣ ಸಹಕಾರದ ಹೊಸ ಹಸಲೆಯ ಮೇಲೆ ಬಾಲವೇಣುವಿರಚಿತ ಮೃದುತರಾಸನಮನಿತ್ತು ಚರಣಮಂ ತೊಳೆದು ಪಾದೋದಕಮಂ ತಳೆದು ಕೇಶಾಂಬರಮಂ ಬಿಡಿಸಿ ಧವಳದುಕೂಲಮನುಡಿಸಿ ಗಂಗಾದೇವಿಯರನೊಳಯಿಂಕೆ ಬಿಜಯಂಗೈಸಿ ಪ್ರೇಮದಿಂ ಸೋಮನಾಥಂಗೆ ಬೋನಮಂ ಸವೆವುದೆಂದು ತಮ್ಮರಸಿಯರ್ಗೆ ಪೇಳುತ್ತೊಡನೊಡನೆ ಬಿಡಲಾರದೆ ಪಟ್ಟಣದಿಂ ಸಾಲ್ಗೊಂಡು ಬಂದ ಭಕ್ತಜನಮಂ ಕೆಲಬಲದೊಳಿರಿಸಿ ತಾಂ ಬಂದು ದಣ್ಣಾಯಕರ ಪದತಳದ ಕೆಳಗೆ ವಂಶವರ್ಧನಂ ಕುಳ್ಳಿರ್ದು ದೇವ ದೇವ ಸವಿಯುನಡಂಗಿಸಿ ಸಂಸಾರಮಂ ಪಿಂಗಿಸಿ ಭವಿಗಳಂ ಭಂಗಿಸಿ ಆಸೆಯನುಲ್ಲಂಘಿಸಿ ನಿರ್ಲೇಪವನೊಳಕೊಂಡು ನಿಸ್ಪೃಹತೆಯ ಕೆಳೆಗೊಂಡು ನಿಷ್ಪ್ರಪಂಚಮನೆಡೆಗೊಂಡು ಶಿವಸಾಮ್ರಾಜ್ಯಕ್ಕನುಕೂಲಮಪ್ಪ ಶ್ರೀಯನಿಂಬುಗೊಂಡು ಬಿಜಯಂಗೈದೆನ್ನಂ ಕೃತಾರ್ಥನಂ ಮಾಡಿದಿರೆಂದು ಬಿನ್ನೈಸಿದ ವಂಶವರ್ಧನನಂ ಕಾರುಣ್ಯಕಟಾಕ್ಷದಿಂ ನೋಡಿ

ಮಾತುಮಾತಿಗೆ ಪುರಾತನರ ಗೀತಮಂಕುರಿಸೆ ನಿರ್ಮಳಚಿತ್ತಂ ನಿಮಿರ್ದು ನಿಡುಸುಯ್ಯೆ ಬೆಳೆದು ಶಾಂತಿಪಲ್ಲವಿಸಿ ಸತ್ಯಂ ಪೂತು ಪರಿಣಾಮಂ ಫಲಿತಮಾಗಿ ಸಮಸುಖಸಂಗದೊಳ್ಗೆಲ್ಲಕ್ಕೆ ಹೋರದೆ ತರ್ಕಕ್ಕೆ ತಲೆಯೊತ್ತದೆ ವಾಸೆಗೆ ಘಾಸಿಯಾಗದೆ ಮತ್ಸರಕ್ಕೆ ಮಲೆಯದೆ ಗೀತಕ್ಕೊಮ್ಮೊಮ್ಮೆ ಪೊಡೆವಡುತೆ ಉಘೆಯಕ್ಕೊಮ್ಮೆ ಉಬ್ಬರ್ತ್ತೆ ಭೋಗಕ್ಕಾನಂದಾಶ್ರುವಂ ಸುರಿಸುತ್ತಿರೆ ಭಕ್ತಿಭರಂ ಮುಂದೈಸಿದ ಸಂಗದಿಂ ಮುಂದುಗೆಟ್ಟು ಮೇರೆಗೆಟ್ಟೋರಂತೆ ಹಾರೈಸಿ ಹಬ್ಬಿ ಬೆಳೆದು ಶಿವಮರುಳ್ಗೊಂಡು ಜೇನ ಸೊನೆಯೊಳ್ಮಿಂದಂತೆ ಇರುಳ್ ಪಗಲುಮನರಿಯದೆ ನಿದ್ರೆ ಪಸಿವಂ ಮರೆದು ತಮ್ಮಿಷ್ಟಲಿಂಗಕ್ಕಾನಂದರಸದ ಮಜ್ಜನಂ ಪುಳಕದ ಪೂಜೆ ನಿಜಶ್ವಾಸಮೆ ಪರಿಮಳ ಧೂಪಂ ಗೀತದಾರತಿ ಗೋಷ್ಠಿಯಾರೋಗಣೆಯಾಗಿ ಶಿವಭಕ್ತಿ ಸುಖಪ್ರಸಂಗ ಪ್ರಸಾದ ಸಂತುಷ್ಟರಾಗಿರ್ಪಲ್ಲಿ ಹರಭಕ್ತಿಯುಂ ಶಿವಜ್ಞಾನಾಂಗನೆ ಎಚ್ಚರಿಸಲ್ಬರ್ಪಂತೆ ಗಂಗಾದೇವಿಯರ್ಬಂದು ದೇವ ದೇವ ಸೋಮನಾಥಂ

ಗೇಳು ದಿನಂ ಶರಣಸಂಗ ಸುಖಮುಖಾರೋಗಣೆಯಾಗಿರ್ದುದರಿಂ ನಿಮಗೆ ಲ್ಲರರಿವಂತಾರೋಗಿಸಲ್ ಪ್ರಸಾದಮಂ ಕರುಣಿಸವೇಳ್ಕುಮೆಂದೆಚ್ಚರಿಸಿದ ಸಮಯಮೇ ಲಿಂಗಸಮಯಮಾಗೆ

ದಣ್ಣಾಯಕರಿಚ್ಚೈಸುತ್ತಾ ಹಾ! ಸಿರಿಯುಂ ಹಾರಿಸಿ ಭವಿಗಳಂ ಮುರಿಸಿ ಸತ್ಯಶರಣರಂ ತೋರಿಸಿ ಸಂಗಸುಖಲತೆಯಂ ಬೇರೂರಿಸಿ ಕರುಣಿಸಿದ ಕಂತುಮದಹರ ಸೌರಾಷ್ಟ್ರದೊಡೆಯ ಸೋಮೇಶ ತಂದೆ ಸೋಮನಾಥಾ ಸೊಡ್ಡಳ ಪ್ರಭುವೇ ಎಂದೆಂದು ಸವಿನುಡಿಗಳಿಂ ಬಣ್ಣಿಸಿ ಕರೆಕರೆದು ಕರ ಸ್ಥಲದ ಲಿಂಗಮನುರಸ್ಥಲದೊಳಪ್ಪಿ ಕಂಠದೊಳೊತ್ತಿ ಭಾಳದೊಳೊತ್ತಿ ಕಲ ಬಲದ ಮಾಹೇಶ್ವರರ ಮೊಗಮಂ ನೇಹದಿಂ ನೋಡಿ ತೂಗಾಡಿ ತುಳುಂಕದೆ ತಿಳಿದು ತೀವಿದಗ್ಗವಣಿಯ ತಂಪಂ ಮಜ್ಜನಕ್ಕೆರೆದು ನವಪುಷ್ಪದ ಪರಿ ಮಳಮಂ ಸೂಡಿ ಧೂಪದ ಕಂಪನಿತ್ತಾರತಿಯ ಬೆಳಗನೆತ್ತಿಯಮೃತಾ ನ್ನದ ಸವಿಯನೂಡಿ ಚಂದನದಿಂಪಂ ನೀಡಿ ವೀಳೆಯದ ಸೊಗಸಂ ಕೂಡಿ ಸತ್ಯಪ್ರಸಾದಮಂ ಸಾದರದಿಂ ಕೈಕೊಂಡು ಪ್ರಸಾದ ತಾಂಬೂಲ ಮುಖ ನಾಗಿ ಪರಕೆಯಂ ಕೈಗೂಡಿದ ತ್ರಿಪುರಾಂತಕ ದೇವರರ್ಚನೆಯುದ್ಯೋ ಗಮಂ ನೆನೆವಲ್ಲಿಂ ಮುನ್ನ ತನತನಗೆ ತಂದಾರಾಧಿಸಿದ ಪೊಂಗಳಿಗೆ ಮೇರೆ ಇಲ್ಲದಿರೆ ಸರ್ವವಸ್ತು ಸನ್ನಿಧಾನ ಸಂಪನ್ನನಾಗಿ ಮಾಹೇಶ್ವರ ಕೋಟಿಗೆ ಮನ್ನಣೆ ಸಹಿತಾರೋಗಣೆಯಿತ್ತು ವಂಶವರ್ಧನನ ಪುರಂ ಮೊದಲಾಗಿ ತ್ರಿಪುರಾಂತಕ ದೇವರ ರಂಗಮಂಟಪಂಬರವರ್ಚನೆಯ ಮಂಟಪಮಂ ನಿರ್ಮಿರ್ಚಿ ನಡುವೆಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಪುಲ್ಲಿಯ ತೊಂಗಲ್ಗಳಂ ಪಚ್ಚೆಯ ಪಂಕ್ತಿಯ ಮೇಘ ವರ್ಣದ ವೀಥಿಯ ಹಂಸಾವಳಿಯ ಚೌಕದ ಲತಾವಳಿಯ ವೀದಿಯ ವೀದಿಯ ವಿಳಸಚ್ಚಂದ್ರಿಕಾ ಮಂಟಪದೊಳ್ ಸಾಲ್ಗೊಂಡ ಗಣಕುಲಂ ಲಾವಂಚದ ಕೀಲ್ಗಟ್ಟಂ ನೆಮ್ಮಿ ನಿಂದ ಪಿಡಿದೆಳೆ ಯಡಕೆಯ ಸಸಿಗಳ ಹೊದರ ಹೊಂಬಾಳೆಯ ಬಹಳ ಸಹಕಾರಂಗಳ ಈಳೆಯ ಹಣ್ಣ ತಿಕ್ಕೆಯ ಬಾಳೆಯ ಹಣ್ಣಿನಿಕ್ಕೆಯ ಮಧೂ ಫಲದ ಮಂತ ಣದ ನಾರಿಕೇಳದ ನೆರವಿಯ ಸರ್ವ ಫಲ ವಸ್ತು ಸಂತಾನಮಂ ಮಂಗಳ ದ್ರವ್ಯ ಸಕೀರ್ಣಮಾದ ಮೇಲ್ಕಟ್ಟಿನ ತಳದೊಳಾವುಜದ ಸಂಭ ಮಂದ ಆ ಪೂಜೆಯ ಮದ್ದಳೆಯ ಮಸಕದ ಕರಡೆಯ ಕಡುಪಿನ ಕೌಸಾಳ ದುರವಣೆಯ ತಾಳದ ತವಕದ ಮೇಳವಣೆಯ ಗಿರುಗಟೆಯ ಗಾಢದ ಬೊಂಬುಳಿಯ ಭರವಸದ ಕೊಂಬಿನ ಕೋಳಾಹಳದ ನಿತ್ಯ ಕೇಳಿಕೆಯ

